ಸಂ. ೨೩.

# ಶಿವಾನುಭವ

೧೯೪೮.

# ಶಿವಾನುಭವ

ವರ್ಷ ೨೩ | ನವ್ಹೆಂಬರ ೧೯೪೮ | ಸಂಚಿಕೆ ೨

## ಜಾತಿಗಳು ಮತ್ತು ವರ್ಣಾಶ್ರಮಗಳು

( ಲೇಖಕಃ — ಶಿ. ಮೂ. ಬುದ್ದಯ್ಯಸ್ವಾಮಿ ಪುರಾಣಿಕ ಧಾರವಾಡ )

ಸರ್ ಹರ್ಬರ್ಟ ರಿಸ್ಲೆ ಎಂಬವರು ಕ್ರಿ. ಶ. ೧೯೦೧ ರಲ್ಲಿ ಬರೆದ ಜನಗಣನೆಯ ವೃತ್ತಾಂತದಲ್ಲಿ ವಂಶಶಾಸ್ತ್ರ ದೃಷ್ಟಿಯಿಂದ ಭರತಖಂಡ ದಲ್ಲಿ ತಮ್ಮ ತಿಳುವಳಿಕೆಯಂತೆ ಮುಖ್ಯವಾದ ಏಳು ವಂಶಗಳನ್ನು ಕಲ್ಪಿ ಸಿರುವರು. ಆ ವಂಶಗಳು ವಿಶಿಷ್ಟವಾದ ಹಾಗು ಮುಖ್ಯವಾದ ಹಲವು ಶಾರೀರಿಕ ಭೇದಗಳಿಂದ ಅನುಮಾನ ಮಾಡಿದಂಥವಿರುವವು. ಅವು ಕೆಳಗಿನಂತಿವೆ. (೧) ತುರ್ಕೊ-ಇರಾಣಿ, ವಾಸ್ತವ್ಯ ಸೀಮಾಪ್ರಾಂತ. (೨) ಹಿಂದಿ-ಆರ್ಯ, ವಾಸ್ತವ್ಯ ಪಂಜಾಬ, ರಾಜಸ್ತಾನ ಮತ್ತು ಕಾಶ್ಮೀರ (೩) ಶಕೆ-ದ್ರವಿಡ, ವಾಸ್ತವ್ಯ ಪಶ್ಚಿಮ ಹಿಂದುಸ್ತಾನ. (೪) ಆರ್ಯ ದ್ರವಿಡ, ವಾಸ್ತವ್ಯ ಯುಕ್ತಪ್ರಾಂತ ಮತ್ತು ಬಿಹಾರ. (೫) ಮಂಗೋಲಿ-ದ್ರವಿಡ, ವಾಸ್ತವ್ಯ ಬಂಗಾಲ ಮತ್ತು ಉತ್ಕಲ (೬) ಮಂಗೋಲ, ವಾಸ್ತವ್ಯ ಮಂಗೋಲ, ಬ್ರಹ್ಮದೇಶ ಮತ್ತು ಹಿಮಾಲಯ ಪ್ರದೇಶ. (೭) ದ್ರವಿಡ, ವಾಸ್ತವ್ಯ ಮದ್ರಾಸ, ಹೈದರಾಬಾದ, ಮಧ್ಯಪ್ರಾಂತ ಮತ್ತು ಛೋಟಾನಾಗಪುರ. ಕ್ರಿ. ಶ. ೧೯೧೧ ರಲ್ಲಿ ಜನಗಣನೆಯ ವೃತ್ತಾಂತದ ೧ ನೆಯ ಸಂಪುಟ ೩೭೨ ನೇ ಪುಟದಲ್ಲಿ ಈ ಜಾತಿಗಳ ನಿರ್ಮಾಣಕ್ಕೆ ಮುಖ್ಯವಾದ ಈ ಕೆಳಗಿನ ಏಳು ಕಾರಣಗಳು ಕಾರಣೀಭೂತವೆಂದು ವರ್ಣಿಸಿರುವರು. ಅವು ಹೀಗಿವೆಃ— (೧) ಹಿಂಡುಗಟ್ಟಿ ತಿರುಗುವದರಿಂದ ಉತ್ಪನ್ನವಾದ ಜಾತಿಗಳು, (೨) ಕಸಬುಗಳ ಮೇಲಿಂದ ನಿರ್ಮಾಣ

ವಾದಂಥವು. (೩) ಧರ್ಮ ಪಂಥಗಳಿಂದ ಉತ್ಪನ್ನವಾದಂಥವು (೪) ವಿಶಿಷ್ಟ ಸಂಸ್ಕಾರದಿಂದ ಉತ್ಪನ್ನವಾದಂಥವು. (೫) ಪ್ರಾದೇಶಿಕ ವಾಸ್ತವ್ಯ ದಿಂದ ನಿರ್ಮಾಣವಾದಂಥವುಗಳು. (೬) ಸ್ಥಲಾಂತರದಿಂದ ಉತ್ಪನ್ನ ವಾದಂಥವು. (೭) ರೂಢಿ ರೀತಿ ಭಿನ್ನವಾದ ಮೂಲಕ, ಉತ್ಪನ್ನವಾದಂ ಥವುಗಳು.

ಈ ಜಾತಿ ಸಂಸ್ಥೆಗಳನ್ನು ನಷ್ಟಗೊಳಿಸುವದು ಬಹಳೇ ದುಸ್ತರವದೆ. ಮತ್ತು ಅವು ಹೀಗೆ ಬಹುಕಾಲ ಉಳಿಯುತಕ್ಕವೆಂದು ಗ್ರಹಿಸಿ ಮಹಾ ರಾಷ್ಟ್ರದೊಳಗಣ ಒಬ್ಬ ಪ್ರಸಿದ್ಧ ವಿದ್ವಾನ್ ಪ್ರಾಧ್ಯಾಪಕರಾದ ಗಾಡಗೀಳ ಧನಂಜಯರಾಯರು ಕ್ರಿ. ಶ. ೧೯೪೪ ರ ಮಾರ್ಚ ತಿಂಗಳದ ಸಹ್ಯಾದ್ರಿ ಮಾಸಿಕದಲ್ಲಿ "ಬ್ರಾಹ್ಮಣ ಜಾತಿಯೊಳಗಿನ ವ್ಯಕ್ತಿಗಳ ಮುಂದಿನ ಧೋರಣ" ಎಂಬ ಶಿರೋಲೇಖದ ಕೆಳಗೆ ತಮ್ಮ ಉಚ್ಚತಮವಾದ ವಿಚಾರಗಳನ್ನು ಜಾಹೀರ ಮಾಡಿರುವರು. ಅವು ಬ್ರಾಹ್ಮಣ ಸಮಾಜಕ್ಕೆ ಮನನೀಯ ವಾಗಿವೆ. ಅವರ ಇಡೀ ಲೇಖನದ ಸಾರವೆಂದರೆ ಮಹಾತ್ಮಾ ಗಾಂಧಿಜಿ ಗಳ ಸತ್ಯ ಮತ್ತು ಅಹಿಂಸಾ ತತ್ವಗಳಿರುವವು. ಮತ್ತು ಬ್ರಾಹ್ಮಣೇತರ ಸಮಾಜದ ಎಲ್ಲ ವಿಧದಿಂದ ಪ್ರಗತಿಯಾಗಿ ಅದು ಮತ್ತು ಬ್ರಾಹ್ಮಣ ಸಮಾಜವು ಒಂದೇ ಸಾಮಾಜಿಕ ಮೆಟ್ಟಲ ಮೇಲೆ ಬಂದು ಅವುಗಳೊಳಗಿನ ವಿಷಮತೆ ಇಲ್ಲದಂತೆಯಾಗಲು ಬ್ರಾಹ್ಮಣರು ತಮ್ಮ ಪ್ರಗತಿಯ ಕೆಲವು ಅಂಶವನ್ನು ಸ್ಥಗಿತ (ಕುಂಠಿತ) ಮಾಡಲು ಉಪದೇಶಿಸಿರುವರು. ಏಕೆಂದರೆ ಜಾತಿ ಭೇದವನ್ನು ನಿರ್ಮೂಲವಾಡುವ ಮುಖ್ಯ ಹೊಣೆಯು ಜಾತಿ ನಿಷ್ಠ ಸಮಾಜದಿಂದ ಮಾನ-ಮರ್ಯಾದೆ ಯಾರಿಗೆ ವಿಶೇಷ ಇಲ್ಲಿಯ ವರೆಗೆ ದೊರೆಯುತ್ತಿರುವದೋ ಇಂಥವರ ಮೇಲೆ, ಅಂದರೆ ಬಾಹ್ಮಣರ ಮೇಲೆ ಬೀಳುವದು ಎಂದು ಸ್ಪಷ್ಟವಾಗಿ ಹೇಳಿರುವರು. ಈ ಉಪದೇಶವು ಬ್ರಾಹ್ಮಣ ಸಮಾಜಕ್ಕೆ ಎಂದೂ ಸರಿಬಾರದೆಂಬದು ಇತ್ತೀಚೆಗೆ ಸಿದ್ಧ ವಾಗಿದೆ. ಹೇಗೆಂದರೆ ಬ್ರಾಹ್ಮಣ ಸಮಾಜದೊಳಗಿನ ಒಬ್ಬ ಪ್ರಸಿದ್ಧ ವಿದ್ವಾನ ಮುಂದಾಳುಗಳಾದ ಶ್ರೀಮಾನ ಅಣ್ಣಾಸಾಹೇಬ ಭೋಪಟಕರ ಎಂಬವರು ಗಾಡಗೀಳ ಪ್ರಾಧ್ಯಾಪಕರ ಉಪದೇಶದ ವಿರುದ್ಧವಾದ ತಮ್ಮ ವಿಚಾರಗಳನ್ನು ಬೇರೆ ಕಡೆಯಲ್ಲಿ ಸಾರಿರುವರು. ಅದರಲ್ಲಿ "ಬ್ರಾಹ್ಮಣ ಸಮಾಜವು ಇನ್ನು ಮುಂದೆ ಹಳ್ಳಿಯೊಳಗಿನ ತಮ್ಮ ವಾಸ್ತವ್ಯವನ್ನು ನಿರಂತರವಾಗಿ ಬಿಟ್ಟು ಅವರು ತಮ್ಮ ಸಾಂಘಿಕ ಜೀವನಕ್ರಮವನ್ನು

ಶಹರಗಳಲ್ಲಿ ಪ್ರಾರಂಭ ಮಾಡಿದರೇನೇ ಅವರು ಮರ್ಯಾದೆಯಿಂದ ಉಳಿಯಲು ಮಾರ್ಗವಾಗುವುದು" ಎಂದು ಅಂದಿರುವರು. ಪಾರಸಿ ಸಮಾಜದ ಆದರ್ಶವನ್ನು ಎದುರು ಇಟ್ಟುಕೊಳ್ಳಬೇಕೆಂದು ಉಪದೇಶಿಸಿರುವರು.

ದಿವಾಣಬಹಾದ್ದೂರ ಬಿ. ಪಿ. ಜಗತಾಪ ಪುಣೆ ಇವರು, ಕೇಸರಿ ಪುನರ್ಮುದ್ರಿತ ದಿನಾಂಕ ೬-೪-೩೮ರಿಂದ ೯-೪-೪೮ ವರೆಗಿನ ಪತ್ರಗಳಲ್ಲಿ "ಜಾತೀಯತೆ ಮತ್ತು ಜಾತಿದ್ವೇಷ ನಿರ್ಮೂಲನ" ಈ ವಿಷಯದ ಮೇಲೆ ಒಂದು ಸುದೀರ್ಘವಾದ ಲೇಖವನ್ನು ಬರೆದು ಅದರಲ್ಲಿ " ಗಾಡಗೀಳ ಪ್ರಾಧ್ಯಾಪಕರ ಉಪದೇಶವು ಮಾನವೀ ಸ್ವಭಾವದ ವಿರುದ್ಧವಾಗಿರುವದು. ಒಂದು ವೇಳೆ ಕಾಯದೆಯಿಂದ ಹಾಗೆ ಮಾಡಲು ಒತ್ತಾಯ ಮಾಡಿದರೆ ಅದರಿಂದ ದೇಶದ ವಿಶೇಷ ಹಾನಿಯೇ ಆಗುವದು. ಏಕೆಂದರೆ ಸಂಸ್ಕೃತಿಯಿಂದ ಮತ್ತು ಶಿಕ್ಷಣದಿಂದ ಮುಂದುವರಿದ ಸಮಾಜದ ಗತಿಯನ್ನು ಕೆಲವು ಕಾಲದ ವರೆಗೆ ಕುಂಠಿತ ಮಾಡಿದ್ದಾದರೆ, ಒಟ್ಟಿನಲ್ಲಿ ಅದರ ಪರಿಣಾಮವು ದೇಶದ ಪ್ರಗತಿ ಪಥದ ಮೇಲೆ ಆಗದೆ ಇರದು. ನಮ್ಮ ತಿಳುವಳಿಕೆಯಂತೆ ಈ ಉಪದೇಶವು ಬಹಳೇ ಶ್ರೇಷ್ಠ ತರಗತಿಯದಿದ್ದರೂ ಅದು ಅವ್ಯವಹಾರವೆಂದೇ ತಿಳಿಯತಕ್ಕದ್ದು. ಮತ್ತು ಅದು ಬ್ರಾಹ್ಮಣ ಸಮಾಜಕ್ಕೆ ಒಗ್ಗಲಾರದು. ಬ್ರಾಹ್ಮಣರು ಈ ಅಸಿಧಾರಾ ವ್ರತವನ್ನು ಸ್ವೀಕರಿಸದಿದ್ದರೂ ಅದರಲ್ಲಿ ಧ್ವನಿತವಾದ ಸರ್ವ ಸಾಮಾನ್ಯ ಸೂಚನೆಗಳೆಂದರೆ ನ್ಯಾಯ, ಸಮಬುದ್ಧಿ ಮತ್ತು ಸಮತೆ ಮುಂತಾದವುಗಳನ್ನು ಬಳಕೆಯಲ್ಲಿ ತಂದು ಬ್ರಾಹ್ಮಣರಿಂದ ಬ್ರಾಹ್ಮಣೇತರರ ವಿರುದ್ಧವಾಗಿ ಅನ್ಯಾಯ, ಪಕ್ಷಪಾತ ಮತ್ತು ಅಮಾನುಷ್ಯತೆ ಮುಂತಾದವುಗಳು ಆಗದಂತೆ ದಕ್ಷತೆಯುಳ್ಳವರಾದರೆ ಬಹು ಮಟ್ಟಿಗೆ ಜಾತಿದ್ವೇಷವು ಕಡಿಮೆ ಆಗಬಹುದೆಂದು ನಮಗೆ ತೋರುತ್ತದೆ ಎಂದೂ ಮತ್ತು ಶ್ರೀಮಾನ್ ಬೋಪಟಕರರ ಉಪದೇಶದಂತೆ ಬ್ರಾಹ್ಮಣರು ತಮ್ಮ ಜಾತೀಯ ಸಂಘಟನೆಯನ್ನು ದೃಢಗೊಳಿಸಿ ಪ್ರಸಂಗಬಂದರೆ ಅವರು ಬ್ರಾಹ್ಮಣೇತರರ ಕೂಡ ಕಾದಬೇಕು ಎಂಬ ಭಾವವು ಹೊರಡುತ್ತದೆ. ಇದರಿಂದ ಜಾತೀಯ ಮತ್ಸರವು ನಷ್ಟವಾಗದೆ, ಅದು ದ್ವಿಗುಣಿತವಾಗುವದು. ಅಲ್ಲದೆ ಸದ್ಯಕ್ಕೆ ಪಾಲೆಸ್ಟಾಯಿನದಲ್ಲಿ ಜ್ಯು ಅರಬರಲ್ಲಿ ಉತ್ಪನ್ನವಾದಂಥ ಪರಿಸ್ಥಿತಿಯು ಮಹಾರಾಷ್ಟ್ರದಲ್ಲಿಯೂ ಉದ್ಭವಿಸುವದರ

ಲ್ಲಿಯೆ ಇದರ ಪರ್ಯವಸಾನವಾಗುವದು. ಇದರಿಂದ ಮಹಾರಾಷ್ಟ್ರದಲ್ಲಿ ಬ್ರಾಹ್ಮಣ ಮಹಾರಾಷ್ಟ್ರ, ಮತ್ತು ಬ್ರಾಹ್ಮಣೇತರ ಮಹಾರಾಷ್ಟ್ರವೆಂದು ಎರಡು ಪಂಗಡಗಳಾಗಿ ಹಿಂದು ಹಿಂದುಗಳೇ ಕಾದಾಡಿ ನಷ್ಟವಾಗಬಹುದು. ಈ ಬಗೆಯು ಕಲಹದ ಸಿದ್ಧತೆಯುನ್ನು ಇಡುವವರು ಮೊದಲು ತಮ್ಮ ಜಾತಿಯ ಸಂಖ್ಯಾ ಬಲವನ್ನು ಲಕ್ಷಕ್ಕೆ ತಂದು ಅದರ ಪರಿಣಾಮವು ಏನು ಆಗಬಹುದೆಂದು ಇದರ ವಿಚಾರವನ್ನು ಮೊದಲು ಮಾಡಬೇಕು" ಎಂದೂ ಉಭಯತರಿಗೂ ಎಚ್ಚರ ಕೊಟ್ಟಿರುವರು ಮತ್ತು "ಸಮಾಜದಲ್ಲಿ ಜಾತಿ ಸಂಸ್ಥೆಗಳನ್ನು ಜೀವಂತ ಇಟ್ಟು ಅದರಿಂದ ಸಮಾಜದಲ್ಲಿ ಉದ್ಭವಿಸುವ ದ್ವೇಷವನ್ನು ಇಲ್ಲದಂತೆ ಮಾಡಬೇಕಾದರೆ ಮದ್ಯದೊಳಗಿನ ಮಾದಕ ದ್ರವ್ಯವನ್ನು ಮತ್ತು ಸೋಮಲದೊಳಗಿನ ವಿಷವನ್ನು ಇಲ್ಲದಂತೆ ಮಾಡುವ ಪ್ರಯತ್ನದಂತೆ ಹಾಸ್ಯಾಸ್ಪದವೇ ಆಗುವದು" ಎಂದು ಸ್ಪಷ್ಟವಾಗಿ ಹೇಳಿರುವರು.

ದಿವಾನಬಹಾದೂರ ಜಗತಾಪಸಾಹೇಬರು ಮುಂದುವರಿಯುತ್ತ "ಹಿಂದುಸಮಾಜದಲ್ಲಿ ಜಾತಿದ್ವೇಷದ ಬೀಜವು ಬಹಳೇ ಪುರಾತನ ಕಾಲದಲ್ಲಿ ಬಿತ್ತಲ್ಪಟ್ಟಿದೆ. ಈ ಜಾತೀಯ ಭೇದದಿಂದ ನಮ್ಮಲ್ಲಿ ಹಿಂದಕ್ಕೆ ಎಂದೂ ಒಕ್ಕಟ್ಟು ಆಗಿಲ್ಲ ಎಂಬದಕ್ಕೆ ಇತಿಹಾಸವು ಸಾಕ್ಷಿ ಹೇಳುತ್ತದೆ. ಮತ್ತು ಅದು ಮುಂದೆ ಎಂದೂ ಆಗಲಾರದು ಎಂಬುವದು ಸೂರ್ಯಪ್ರಕಾಶದಂತೆ ಸ್ಪಷ್ಟವಾಗಿ ತೋರುತ್ತದೆ. ಜಾತಿಭೇದವು ನಷ್ಟವಾಗುವದು ಇಷ್ಟವದೆ. ಈ ಕಾರ್ಯವು ಬಹಳ ಕಠಿಣವಿದ್ದರೂ ಅಶಕ್ಯವಲ್ಲ. ನಿಸರ್ಗಜನ್ಯವಾದ ಜಾತಿಯು ಒಂದೇ ಇದ್ದು ಅದು ಮಾನವಜಾತಿ ಎನಿಸಿಕೊಳ್ಳುವದು. ಈ ಮಾರ್ಗದ ಅವಲಂಬನವನ್ನು ಶಕ್ಯವಿದ್ದಷ್ಟು ಎಲ್ಲ ಹಿಂದುಗಳು ತೀವ್ರವಾಗಿ ಮಾಡತಕ್ಕದ್ದು. ಮತ್ತು ಇದಕ್ಕೆ ಸದ್ಯದ ಸರಕಾರವು ಬೆಂಬಲಕೊಟ್ಟು ಪ್ರಚಾರ ಮಾಡಬೇಕು. ಮತ್ತು ಪ್ರಸಂಗ ಬಿದ್ದರೆ ಕಾಯಿದೆಯಿಂದಲೂ ವ್ಯವಸ್ಥೆ ಮಾಡಲೂ ಹಿಂದೆ ಮುಂದೆ ನೋಡಬಾರದು." ಎಂದು ಅನ್ನುವರು. "ಇದು ಸದ್ಯಕ್ಕೆ ಸಾಧ್ಯವಾಗದಿದ್ದರೆ ಪ್ರಾದೇಶಿಕ ಜಾತಿಸಂಸ್ಥೆಯು. ಪ್ರತೀಕವನ್ನು ಮುಂದೆ ಇಟ್ಟುಕೊಂಡು ನಡೆಯಬೇಕು. ಉದಾಹರಣಾರ್ಥವಾಗಿ ಮಹಾರಾಷ್ಟ್ರದೊಳಗಿನ ಎಲ್ಲ ಹಿಂದುಗಳು 'ಮರಾಠಾ' ಎಂದು ಕರೆದುಕೊಳ್ಳಬೇಕು."

ಮುಂತಾಗಿ ಜಾತಿಭೇದವನ್ನು ನಷ್ಟಗೊಳಿಸುವ ಉಪಾಯಗಳನ್ನು ಸೂಚಿಸಿರುವರು. ಈ ತಮ್ಮ ವಿಚಾರಗಳನ್ನು ಕ್ರಿ. ಶ. ೧೯೪೭ ಅಗಸ್ಟದಲ್ಲಿ ಮಹಾತ್ಮಾಜಿಗೆ ಅರಿಕೆ ಮಾಡಿಕೊಂಡರು. ಅದಕ್ಕೆ ಅವರು "ಕಲ್ಪನೆ ಸುಂದರ ಅದೆ. ಇಂಥ ಕಾರ್ಯಗಳ ಗಡಬಡಿಯಿಂದ ಆಗಲಾರವು. ಸಮರ್ಥ ಮನುಷ್ಯಬೇಕು." ಎಂದು ಉತ್ತರವಿತ್ತರು. ಇದರಂತೆ ಇದರ ನಕಲುಗಳನ್ನು ಪಂತಪ್ರಧಾನರಾದ ನಾಮದಾರ ಪಂಡಿತ ನೇಹರುರವರ ಕಡೆಗೆ ಕಳಿಸಲು ಇದಕ್ಕೆ ಅವರು "ಸುಂದರ ವಿಷಯಗಳ ವಿವರಣೆ; ಅವುಗಳ ವಿಷಯವಾಗಿ ಸೂಚನೆಗಳು ಒಪ್ಪುವಂಥವು ಅವೆ. ಆದರೆ ಚಲೋ ಮಾತುಗಳನ್ನು ಬಹುಜನ ಸಮಾಜದ ಮೇಲೆ ಹೇರುವದು ಹಗುರಲ್ಲ. ಅದರಗೋಸುಗ ಲೋಕಮತ ಉಂಟು ಮಾಡಬೇಕು. ಸರಕಾರದ ಹಾದೀನೋಡದೆ ಮೊದಲು ಲೋಕಮತ ಸಿದ್ಧಮಾಡಿ ದೇಶದೊಳಗಿನ ಬೇರೆ ಬೇರೆ ಕಾಯಿದೆ ಮಂಡಲದ ಸಭಾಸದರ ಮುಂದೆ ಮಂಡಿಸುವದು ವಿಹಿತವು" ಎಂದು ಉತ್ತರ ಕೊಟ್ಟಿರುವರು.

ಈ ರೀತಿಯಾಗಿ ಭರತಖಂಡದಲ್ಲಿ ಮೂಲೆಮೂಲೆಗಳಲ್ಲಿ ಜಾತಿಭೇದಗಳನ್ನು ನಿರ್ಮೂಲನ ಮಾಡಬೇಕೆಂಬ ಸುಂಟರಗಾಳಿಯು ಬಲು ಕಸುವಿನಿಂದ ಹಗಲಿರುಳು ಬೀಸಹತ್ತಿದೆ. ಈ ಭೇದ ನೀತಿಯಿಂದಲೇ ಇಂಗ್ಲಿಷರು ಭಾರತೀಯರನ್ನು ಇಲ್ಲಿಯ ವರೆಗೆ ಆಳಿದರು. ಇದರಿಂದ ಭರತಖಂಡವು ಹಿಂದುಸ್ತಾನ ಪಾಕಿಸ್ತಾನಗಳೆಂಬ ಎರಡು ತುಂಡುಗಳಿಗೆ ಎಡೆಯಾಯಿತು. ಇನ್ನು ಮುಂದೆ ಈ ವಿಷದ ಬಳ್ಳಿಯು ಭಾವೀ ಭಾರತೀಯರಲ್ಲಿ ಹಬ್ಬದಂತೆ ಎಚ್ಚರದಿಂದ ವರ್ತಿಸತಕ್ಕದ್ದು. ಈ ಮುಂತಾದ ವಿಷಯಗಳನ್ನೊಳಕೊಂಡ ಲೇಖನ ಭಾಷಣಗಳ ದ್ವಾರದಿಂದ ಪಂಡಿತಪಾಮರರು ಬಲುಮಟ್ಟಿಗೆ ಶ್ರಮಪಡುತ್ತಿರುವರು. ಮತ್ತು ಈಗಾಗಲೇ ಮಂದಿರ ಪ್ರವೇಶ, ಅಸ್ಪೃಶ್ಯತಾನಿವಾರಣೆ, ಸಹಭೋಜನ, ಮಿಶ್ರವಿವಾಹ, ಸಹಗೋತ್ರ ವಿವಾಹ, ಹಿಂದುಕಾಯಿದೆ ತಿದ್ದುಪಡೆ ಮುಂತಾದ ಹಲವು ಉಪಾಯಗಳು ಇದಕ್ಕೆ ರಾಮಬಾಣ ಔಷಧಗಳೆಂದು ಬಗೆದು ಅವುಗಳ ವಿಷಯಕ್ಕೆ ಕಾಯಿದೆಗಳ ಸುರಿಮಳೆ ನಡೆದಿದೆ. ಆದರೆ ಸೋಜಿಗದ ಮತ್ತು ದುಃಖದ ಸಂಗತಿಯೆಂದರೆ ಈ ಜಾತಿಗಳಿಗಿಂತಲೂ ನೂರ್ಮಡಿ ಮಿಗಿಲಾಗಿ ಕೆಡಕಿದ್ದ ವರ್ಣಾಶ್ರಮಗಳ ಹೆಸರನ್ನು ಸಹ, ಇಲ್ಲಿಯ ವರೆಗೆ ಯಾರೂ ಎಲ್ಲಿಯೂ ಎತ್ತಲೊಲ್ಲರು.

ಜಾತಿಗಳಿಗೆ ಹಿಂದುಧರ್ಮಗಳಿಗೆ ಸ್ಥಾನವಿಲ್ಲ. ಆದರೆ ಹಿಂದುಧರ್ಮ ದಲ್ಲಿ ವರ್ಣಾಶ್ರಮ ಧರ್ಮಕ್ಕೆ ಅಗ್ರಸ್ಥಾನವಿದೆ. ಮತ್ತು ವರ್ಣಾಶ್ರಮ ಗಳು ಚಿರಕಾಲ ಉಳಿಯುವೆಂಬ ದುಷ್ಟಹೇತುವಿನಿಂದ ಅವುಗಳಿಗೆ ಮಶಿ, ಅಸಿ, ಕೃಷಿ, ವಾಣಿಜ್ಯ ಮೊದಲಾದ ಕಸಬುಗಳ ಕಟ್ಟನ್ನು ಹಾಕಿ ಅವು ಗಳನ್ನು ನಾಲ್ಕು ಸುತ್ತಿನ ಕೋಟೆಯೊಳಗೆ ಭದ್ರವಾಗಿ ಇಟ್ಟಿರುವರು. ಕೃತ್ರಿಮ ಹಾಗು ಮಾನವ ನಿರ್ಮಿತ ವರ್ಣಾಶ್ರಮದ ಬೀಜವು ಉಪ ನಿಷತ್ ಕಾಲದಲ್ಲಿ ಬೇರೂರಿ ಮಹಾಭಾರತದ ಕಾಲಕ್ಕೆ ಶಾಖೋಪ ಶಾಖೆಗಳಿಂದ ಕೂಡಿದ ಮರವಾಗಿ ಅದರ ಕಹಿಫಲಗಳನ್ನು ಬಿಡಬಾ ರದೆ ಭೋಗಿಸಹತ್ತಿರುವರು. ಇದರ ಉಪಟಳವನ್ನು ತಾಳಲಾರದ ಹಲ ವರು ಪ್ರಯತ್ನಪಟ್ಟಿದ್ದಕ್ಕೆ ಈ ಸ್ವಾರ್ಥಿಗಳಿಂದ ಕೇಡಿಗೊಳಗಾದ ಅನೇಕ ಉದಾಹರಣೆಗಳು ಇತಿಹಾಸದಲ್ಲಿ ದೊರಕುವವು. ವಾಚಕರ ಅವಗಾ ಹನೆಗಾಗಿ ಕೆಲವನ್ನು ಇಲ್ಲಿ ಉದಹರಿಸುತ್ತೇವೆ.

(೧) ಉಚ್ಚ ವರ್ಣದವರು ಜಿಹ್ವಾಲೋಲುಪರಾಗಿ ಯಜ್ಞಗಳ ನಿಮಿತ್ತದಿಂದ ಮಿತಿಮೀರಿ ಮೂಕಪ್ರಾಣಿಗಳ ವಧೆಯನ್ನು ಮಾಡತೊ ಡಗಿದರು. ಮತ್ತು ಯಜ್ಞಗಳಲ್ಲಿ ವಧಿಸಲ್ಪಡುವ ಪಶುಗಳಿಗೆ ಮೋಕ್ಷ ವಾಗುವದೆಂದು ಅಜ್ಞಜನರ ಮೇಲೆ ಪರಿಣಾಮಮಾಡತೊಡಗಿದರು. ಈ ಕುಟಿಲತನಕ್ಕೆ ಬೇಸತ್ತು ಬೇಜಾರಾಗಿ ಅವರೊಳಗಿನ ಹಲವರು ಯಜ್ಞ ಗಳಲ್ಲಿ ವಧಿಸಲ್ಪಡುವ ಪಶುಗಳಿಗೆ ಮೋಕ್ಷವಾಗುತ್ತಿದ್ದರೆ ನಿಮ್ಮ ತಾಯಿ ತಂದೆ ಹೆಂಡರು ಮಕ್ಕಳು ಆಪ್ತರನ್ನು ಯಜ್ಞಕ್ಕೆ ಆಹುತಿ ಕೊಟ್ಟು ಅವರನ್ನು ಸ್ವರ್ಗಕ್ಕೆ ಕಳಿಸುವದು ವಿಹಿತವೆಂದು ಅಂತಃಕರಣಪೂರ್ವಕ ವಾಗಿ ಬುದ್ಧೀ ಹೇಳಿದ್ದಕ್ಕೆ ಅವರಿಗೆ ಪಾಖಂಡಿಗಳೆಂದು ಅಲ್ಲಗಳೆದು ಅಲ್ಪಸಂಖ್ಯಾಕರಾದ ಚಾರ್ವಾಕರನ್ನು ಸ್ವಾರ್ಥಿಗಳು ಬಹುಮತದಿಂದ ದೂರೀಕರಿಸಿದರು. ಆದರೆ ಮಾನವ ಜನರ ಬುದ್ಧಿಗೆ ಚಲನೆ ಕೊಟ್ಟ ವರಲ್ಲಿ ಈ ಚಾರ್ವಕರೇ ಮೊದಲಿಗರು. (೨) ಗೌತುಮಬುದ್ಧನು ಇವರ ಹಿಂಸೆಗೆ ಬೇಸತ್ತು 'ಅಹಿಂಸಾ ಪರಮೋಧರ್ಮಃ' ಎಂಬ ತತ್ವವನ್ನು ಎತ್ತಿಹಿಡಿದು ಜನರನ್ನು ಎಚ್ಚರಗೊಳಿಸಹತ್ತಿದನು. ಈ ಉಪದೇಶವು ಬಹುಮಟ್ಟಿಗೆ ಸ್ವಾರ್ಥಿಗಳಿಗೆ ನೋವು ಮಾಡಿತು. ಆದರೂ ಹೊತ್ತು ಬಂದಂತೆ ಕೊಡೆಹಿಡಿವರಾದ್ದರಿಂದ ಇವರೊಳಗಿನ ಕೆಲವರು ಬೌದ್ಧ

ಧರ್ಮವನ್ನು ಸ್ವೀಕರಿಸಿದರು. ಮುಂದೆ ಗೌತಮಬುದ್ಧನು ಕೇವಲ ಉಚ್ಚವರ್ಣದವರಿಗೆಂದು ಕಾದಿಟ್ಟ ಸನ್ಯಾಸವನ್ನು ಕ್ಷತ್ರಿಯನಾದ ತಾನು ಸ್ವೀಕರಿಸಿ ಅದನ್ನು ಉಚ್ಚವರ್ಣದವರಲ್ಲಿ ಶೂದ್ರರೆಂದು ಗಣಿಸಲ್ಪಡುವ ಸ್ತ್ರೀಯರಿಗೂ ಕೊಡತೊಡಗಿದ್ದರಿಂದ ಇವರ ವರ್ಣಾಶ್ರಮಕ್ಕೆ ಆತಂಕ ಉಂಟಾಯಿತು. ಆಗ್ಗೆ ಇವನ ಬಳಗಕ್ಕೆ ಸೇರಿದ ಪಂಚಮದಳದವರು ಬೌದ್ಧಮತದಲ್ಲಿ ಮಹಾಯಾನ ಮತ್ತು ಹೀನಯಾನ ಎಂಬ ಎರಡು ಪಂಗಡಗಳನ್ನು ಮಾಡಿ ಈ ಉಪಟಳದಿಂದ ಬೌದ್ಧ ಮತಾನುಯಾಯಿಗಳನ್ನು ಭಾರತದಿಂದ ಹೊರಗೆ ಓಡಿಸಿದರು. ಇತ್ತ ಬುದ್ಧನ ಆಂದೋಲನದಿಂದ ಎಚ್ಚತ್ತ ಆಶ್ರಮಾಭಿಮಾನಿಗಳು ಸನ್ಯಾಸವು ಉಚ್ಚವರ್ಣದವರ ಹೊರತು ಉಳಿದವರಿಗೆ ದುರ್ಗಮವಾಗುವಂತೆ ನಾರದ ಪರಿವ್ರಾಜಕೋಪನಿಷತ್ತಿನಂತಹ ಧಾರ್ಮಿಕ ಗ್ರಂಥಗಳನ್ನು ರಚಿಸಿ ವರ್ಣಗಳಂತೆ ಆಶ್ರಮಗಳಿಗೂ ನಿರ್ಬಂಧಗಳನ್ನು ಏರ್ಪಡಿಸಿದರು.

(೩) ಎಂಟನೆಯ ಶತಮಾನದಲ್ಲಿ ಜಗದ್ವಿಖ್ಯಾತನಾದ ಮಂಡನ ಮಿಶ್ರನನ್ನು ಗೆದ್ದು ಹಿಂದೂ ಧರ್ಮದ ಮೇಲೆ ಮಹದುಪಕಾರ ಮಾಡಿದ ಆದಿ ಶಂಕರಾಚಾರ್ಯನು "ಯಥಾ ವಿರತಿರ್ಜಾಯತೇ ತದೈವ ಸನ್ಯಾಸಃ" ಎಂದು ಸಾರಿ ವರ್ಣಾಶ್ರಮವನ್ನು ಮುರಿದು ಸನ್ಯಾಸಿಯಾದ್ದರಿಂದ ವರ್ಣಾಶ್ರಮದ ಅಭಿಮಾನಿಗಳು ಹೊಟ್ಟೆಯೊಳಗಿನ ಸಿಟ್ಟು ರಟ್ಟೆಯೊಳಗಿಲ್ಲದ್ದಕ್ಕೆ ಒಳಗೊಳಗೆ ಮರಮರನೆ ಮರಗುತ್ತಿದ್ದರು. ಅಷ್ಟರಲ್ಲಿ ಶಂಕರನ ತಾಯಿಯು ಜಡ್ಡಿನಿಂದ ಬಳಲುತ್ತಿರಲು, ಆತನು ಬಂದು ತಾಯಿಯ ಶುಶ್ರೂಷೆಯನ್ನು ಮಾಡುತ್ತಿರಲು ಆಕೆಯು ಮೃತಳಾದಳು. ಆಗ್ಗೆ ಸನ್ಯಾಸಿಯಾದವನು ಮರಳಿ ಪೂರ್ವಾಶ್ರಮದ ಮೇಲೆ ಮೋಹ ಇಟ್ಟನೆಂದು ಬಗೆದು ಯಾರೂ ಆಕೆಯ ದಹನ ಕ್ರಿಯೆಗೆ ಬರಲಿಲ್ಲ. ಆಗ್ಗೆ ಅವನು ಸತ್ತ ತಾಯಿಯನ್ನು ತುಂಡರಿಸಿ ಮನೆಯ ಹಿತ್ತಲಲ್ಲಿ ಹಾಕಿ ದಹನ ಮಾಡಿದನಂತೆ. ಅಂದಿನಿಂದ ಈ ಧಾರ್ಮಿಕ ವಿಧಾನವು ಶಂಕರನ ವಂಶದವರಾದ ನಂಬೂದ್ರಿ ಬ್ರಾಹ್ಮಣರಲ್ಲಿ ಈಗ್ಯೂ ಔಪಚಾರಿಕವಾಗಿ ಬಳಕೆಯಲ್ಲಿದೆಯಂತೆ. ಹೆಸರಿಗೆ ಮಾತ್ರ ಎಲೆಗತ್ತರಿಯ ವಿಧಾನ ಮಾಡುವರು. ಅಂದಿನಿಂದ ೧೨ನೇ ಶತಮಾನದ ವರೆಗೆ ಈ ಹೆದರಿಕೆಯಿಂದ ಯಾರೂ ಸನ್ಯಾಸಿಯಾಗುವ ಗೋಜಿಗೆ ಹೋಗಲಿಲ್ಲ.

(೪) ಯಾರೂ ತಮಗೆ ಅಡ್ಡಗಟ್ಟುವವರು ಇಲ್ಲೆಂದು ಬಗೆದು ನಿರ್ಭೀ

ತರಾಗಿ ವರ್ಣಾಶ್ರಮಿಗಳು ಮನಬಲ್ಲಂತೆ ವರ್ತಿಸಹತ್ತಿದರು. ಇವರ ಉಪದ್ರವಕ್ಕೆ ಕಂಗೆಟ್ಟು ಜನರು:- ಪಕಪಕನೆ ಬಾಯಿಬಿಡುತ್ತಿದ್ದರು. ಇಂಥ ಸಮಯಕ್ಕೆ ಜಗಕ್ಕೇ ಹಿತಕಾರಿಯಾದ ಜಗದಣ್ಣ ಬಸವಣ್ಣನು ಅವ ತಾರ ತಾಳಿದನು. ಬಸವಣ್ಣನು ವರ್ಣಾಶ್ರಮಿಗಳು ತಮ್ಮ ಸೂತ್ರ ಗೋತ್ರಾದಿ ಹೇಳುವ ಋಷಿಗಳು ಯಾರೆಂಬದನ್ನು ವಜ್ರಸೂಚಿ, ಯೋಗ ವಾಸಿಷ್ಠ ಮೊದಲಾದ ಸಂಸ್ಕೃತ ಗ್ರಂಥಗಳಲ್ಲಿ ಹೇಳಿದ ಹಾಗೆ ಜನಸಾ ಮಾನ್ಯರಿಗೆ ತಿಳಿಯುವಂತೆ ದೇಶಭಾಷೆಯಾದ ಕನ್ನಡದಲ್ಲಿ '' ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ, ಸಾಕ್ಷಾತ್ ಅಗಸ್ತ್ಯ ಕಬ್ಬಿಲಿಗ, ದುರ್ವಾಸ ಮುಚ್ಚಿಗ, ಕಶ್ಯಪ ಕಮ್ಮಾರ, ಕೌಂಡಿನ್ಯ ನೆಂಬ ಋಷಿ ಮೂರು ಲೋಕವರಿಯಲು ನಾವಿಂದ ಕಾಣಿ ಭೋ ಕೂಡಲ ಸಂಗಮದೇವಾ'' ಎಂದು ಮೊದಲಿಗೆ ಜಗಜಾಹೀರ ಮಾಡಿ ದರು. ಪರ್ಯಾಯದಿಂದ ಇದನ್ನೇ ಚನ್ನಬಸವಣ್ಣನು ತನ್ನ ವಚನ ದಲ್ಲಿ ''ವಶಿಷ್ಠ ಡೊಂಬಿತಿಯ ಮಗ, ನಾರದ ಅಗಸಗಿತ್ತಿಯ ಮಗ, ಭಾರದ್ವಾಜ ಮಾದಿಗ, ದಧೀಚಿ ಕಬ್ಬಿಲಿಗ, ರೋಮಜನೆಂಬ ಮಹಾ ಮುನಿ ಈರೇಳು ಭುವನವರಿಯಲು ಕಂಚುಗಾರ, ಕೂಡಲಚನ್ನಸಂಗಮ ದೇವ" ಎಂದು ಘೋಷಿಸಿದನು. ಬೇರೊಂದು ಠಾವಿನಲ್ಲಿ ಸಿದ್ಧರಾಮ ದೇವನು- ''ದುರ್ವಾಸ ಮುಚ್ಚಿಗ, ಊರ್ವಶಿ ಆಕೆಯು ದೇವಾಂಗನೆಯು, ಚಂಡಾಲ ಪರಾಶರ, ಕುಸುಮಗಂಧಿಯು ಆಕೆಯು ಕಬ್ಬಲಗಿತ್ತಿ, ಕಾಣಿಭೋ ಕಪಿಲಸಿದ್ಧ ಮಲ್ಲಿಕಾರ್ಜುನ" ಎಂದು ಹಾಡಿದನು. ಇನ್ನೊಬ್ಬ ಶಿವಶರ ಣನು "ಸಾಂಖ್ಯ ಶ್ವಪಚ, ಅಗಸ್ತ್ಯ ಕಬ್ಬಿಲ, ದುರ್ವಾಸ ಮುಚ್ಚಿಗ, ದಧೀಚಿ ಕೀಲಿಗ, ಕಶ್ಯಪ ಕಮ್ಮಾರ, ರೋಮಜ ಕಂಚುಗಾರ, ಕೌಂಡಿಲ್ಯ ನಾವಿಂದ, ಕಾಣಿಭೋ ಅರಿ ನಿಜಾತ್ಮರಾಮನ" ಎಂದು ಸಾರಿದನು. ಹೀಗೆ ಅನೇಕ ಶಿವಶರಣರು ದೇಶಮಧ್ಯದಲ್ಲೆಲ್ಲ ಕೂಗುವದರಿಂದ ಜನಸಾ ಮಾನ್ಯರು ಎಚ್ಚರಾಗಿ ವರ್ಣಾಶ್ರಮಗಳ ಮೇಲಿನ ಅವರ ವಿಶ್ವಾಸವು ಕಡಿಮೆಯಾಗಹತ್ತಿತು. ಬೇಕಾದವರು ಬೇಕಾದ ಉದ್ಯೋಗವನ್ನು ಮಾಡಿದರೂ ಮೋಕ್ಷಕ್ಕೆ ಪ್ರತಿಬಂಧವಿಲ್ಲೆಂಬುದು ಮನವರಿಕೆಯಾಯಿತು. ಇಂಥ ಸಮಯದಲ್ಲಿ ಬಸವಣ್ಣನು- ಸಪ್ತಧಾತು ಸಮಂ ಪಿಂಡಂ ! ಸಮ ಯೋನಿ ಸಮುದ್ಭವಂ ॥ ಆತ್ಮಜೀವ ಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ ॥ ಎಂಬ ಸಮತೆಯ ಬೀಜವನ್ನು ಮಾನವರ ಮನೋ

ಭೂಮಿಕೆಯಲ್ಲಿ ಹದವರಿತು ಬಿತ್ತಿದನು. ಇದು ಮೊಳೆತದ್ದನ್ನು ಕಂಡು ಆದಕ್ಕೆ ಜಾತಿ, ಜನನ, ಉಚ್ಚಿಷ್ಟ, ಪ್ರೇತ, ರಜಸ್ವಲವೆಂಬ ಪಂಚಸೂತಕಗಳನ್ನು ಕಳೆದ ಸ್ವಚ್ಛವಾದ ನೀರನ್ನು ಎರೆದನು. ಇದರಿಂದ ಎಲ್ಲರಲ್ಲಿಯು ಅಸ್ಪೃಶ್ಯತೆಯು ಇಲ್ಲದಂತಾಗಿ ಸರ್ವರು ಸಮಾನರೆಂಬ ಭಾವವು ಎಲ್ಲರಲ್ಲಿಯೂ ಬಲಿಯಿತು. ಆಗ್ಗೆ ಮುಮುಕ್ಷುಗಳ ಸ್ಥೂಲ, ಸೂಕ್ಷ್ಮ, ಕಾರಣ ಎಂಬ ತನುತ್ರಯಗಳೊಳಗಿನ ಆಣವ, ಮಾಯಾ, ಕಾರ್ಮಿಕವೆಂಬ ಮಲತ್ರಯಗಳನ್ನು ವೇಧಾ ಮನು ಕ್ರಿಯೆಗಳೆಂಬ ದೀಕ್ಷಾತ್ರಯದಿಂದ ದೀಕ್ಷಾ, ಶಿಕ್ಷಾ, ಮೋಕ್ಷವೆಂಬ ಗುರುತ್ರಯದಿಂದ ಕಳೆದು, ಅವರಿಗೆ ಇಷ್ಟ, ಪ್ರಾಣ, ಭಾವವೆಂಬ ಲಿಂಗತ್ರಯಗಳನ್ನು ಧಾರಣ ಮಾಡಿಸಿದನು. ಈ ಉದಾತ್ತ ವಿಚಾರವನ್ನು ಕಂಡು ಅಂತ್ಯಜರಿಂದ ಅಗ್ರಜರ ವರೆಗೆ ಅಸಂಖ್ಯ ಸ್ತ್ರೀ-ಪುರುಷರು ಲಿಂಗಧಾರಿಗಳಾಗಿ ಬಸವಣ್ಣನ ನಂದೀಧ್ವಜದ ಅಡಿಯಲ್ಲಿ ಬಂಧು ಸೇರಿದರು. ಇದರಿಂದ ನಿರುದ್ಯೋಗಿಗಳಾಗಿ ಪರಾನ್ನಪುಷ್ಟರಾಗಿ ಬೆಳೆಯುವ ಸ್ವಾರ್ಥೀಜನರ ಚಲ್ಲಾಟವು ನಿಂತುಹೋಯಿತು. ಆಗ್ಗೆ ಇವರೊಳಗಿನ ಮೂವತ್ತಾರು ಕೊಂಡೆಯರು ಬಸವಣ್ಣನ ವಿಷಯವಾಗಿ ಅಲ್ಲದ ಸಲ್ಲದ ದೂರುಗಳನ್ನು ಬಿಜ್ಜಳರಾಜನಿಗೆ ಹೇಳತೊಡಗಿದರು. ಇದೇ ಕಾಲಕ್ಕೆ ಕಲ್ಯಾಣ ಪಟ್ಟಣದಲ್ಲಿ ಲಿಂಗಧಾರಿಯಾದ ಸಮಗಾರ ಹರಳಯ್ಯನ ಮಗನಿಗೆ ಲಿಂಗಧಾರಿಯಾದ ಬ್ರಾಹ್ಮಣ ಮಧುವಯ್ಯನ ಮಗಳನ್ನು ಕೊಟ್ಟು ವೈಭವದಿಂದ ಮದುವೆ ಮಾಡಿದರು. ಇದರಿಂದ ವರ್ಣಾಶ್ರಮಿಗಳ ಅಭಿಮಾನಿಗಳಿಗೆ ಘಾಯದ ಮೇಲೆ ಬರೆ ಕೊಟ್ಟಂತಾಯಿತು. ಅವರು ಮತ್ತಿಷ್ಟು ರೇಗಿಗೆದ್ದು ಬಿಜ್ಜಳನಿಗೆ ಕೋಪಬರುವಂತೆ ಚಾಹಡಿಗಳನ್ನು ಹೇಳಿ, ಅವನಿಂದ ಹರಳಯ್ಯ ಮಧುವಯ್ಯಗಳ ಕಣ್ಣುಗಳನ್ನು ಕೀಳಿಸಿ ಹೂಟೆಯೆಳಸಿ ವಧೆ ಮಾಡಿಸಿದರು. ಇದರಿಂದ ಬಿಜ್ಜಳ ಮತ್ತು ಶಿವಶರಣರ ನಡುವೆ ಕೋಲಾಹಲವೆದ್ದು ಕಡೆಗೆ ಚಾಲುಕ್ಯ ಮತ್ತು ಕಲಚೂರ್ಯರ ರಾಜ್ಯ ಹಾಳಾಯಿತು ಮತ್ತು ಕಲ್ಯಾಣವು ಕಟುಕಗೇರಿಯಾಯಿತು. ಇದರಿಂದ ವರ್ಣಾಶ್ರಮಿಗಳು ಗೆದ್ದೆವೆಂದು ತಿಳಿದರೂ ಎಂದಿದ್ದರೂ ಅವರ ಸೋಲು ಕಟ್ಟಿಟ್ಟದ್ದೇ. ಏಕೆಂದರೆ ಬೌದ್ಧರಂತೆ ಲಿಂಗಾಯತರು ಹೊರಗೆ ಹೋಗದೆ ಇಲ್ಲೇ ಒತ್ತಟ್ಟಿಗೆ ಉಳಿದರು. ಲಿಂಗಾಯತರು ರಾಷ್ಟ್ರನಿರ್ಮಾಣಮಾಡುವ ಸಾಮರ್ಥ್ಯವುಳ್ಳವರಾಗಿದ್ದರಿಂದ ಅನ್ಯರು ಇವರಲ್ಲಿ ಎಷ್ಟು ಒಡಕು

ಹುಟ್ಟಿಸಿದರೂ ಅವರ ವ್ಯಾಪಕ ಧಾರ್ಮಿಕ ತತ್ವಗಳು ಈಗ್ಯೂ ಜಾಗ್ರತಾವಸ್ಥೆಯಲ್ಲಿರುವವು. ಸದ್ಯಕ್ಕೆ ಆ ತತ್ವಗಳು ಬೂದಿಮುಚ್ಚಿದ ಕೆಂಡದಂತಿರುವವು. ಇವರು ಪೂರ್ಣ ಎಚ್ಚರಾಗುವ ವರೆಗೆ ದೆಕ್ಕು ಇಲ್ಲದ ಮನೆಯಲ್ಲಿ ಇಲಿಗಳ ಚಲ್ಲಾಟವಿರುವಂತೆ ವರ್ಣಾಶ್ರಮಗಳ ಕುಟಿಲಕಾರಸ್ಥಾನಗಳು ನಡೆಯುಬಹುದು. ಆದರೆ ಈಗ ಇನ್ನುಮುಂದೆ ಎಚ್ಚತ್ತ ಜಗತ್ತಿನಲ್ಲಿ ಸಾಗಲಾರದು. (ಜ) ಇತ್ತೀಚೆಗೆ ಮಹಾತ್ಮಾ ಗಾಂಧೀಯವರು ಬಸವಣ್ಣನವರ ಅನೇಕ ತತ್ವಗಳೊಳಗಿನ ೩, ೪ ತತ್ವಗಳನ್ನು ಆಚರಣೆಯಲ್ಲಿ ತಂದು ಅದರಂತೆ ನಡೆದದ್ದಕ್ಕೆ ಭಾರತವು ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟರೂ ಚಾತುರ್ ವರ್ಣದವರಲ್ಲಿ ಶ್ರೇಷ್ಠವೆಂದೆನಿಸುವವರಿಂದಲೇ ಅವರ ವಧೆಯಾಯಿತು. ಹೀಗೆ ಅನಾದಿ ಕಾಲದಿಂದಲೂ ಈ ಹೊತ್ತಿನ ವರೆಗೆ ವರ್ಣಾಶ್ರಮಗಳ ಕಾಟವು ನಿರಂತರವೂ ನಡೆದಾಗ್ಯೂ ಇದನ್ನು ಯಾರೂ ಎತ್ತದೆ ಅದರ ನಾಶಕ್ಕೆ ಉಪಾಯಗಳನ್ನು ಸೂಚಿಸದೆ ಮುಗ್ಧರಾಗಿ ಕುಳಿತು ಲವಳಸರದ ಮೇಲೆ ಬಂಡಿ ಹಾಯಿಸುವಂತೆ ಜಾತಿಭೇದವನ್ನು ಮುರಿಯುತ್ತೇವೆಂದು ಎಲ್ಲರನ್ನು ಗಾಳಿಗುದ್ದಿ ಕೈಗಳನ್ನು ನೋಯಿಸಿಕೊಳ್ಳಲಿಕ್ಕೆ ಹಚ್ಚಿರುವರು. ಜಾತಿಗಳಿಗಿಂತಲೂ ವರ್ಣಾಶ್ರಮಗಳು ಎಷ್ಟು ಕೆಡಕೆಂಬುವದನ್ನು ತೋರಿಸುವದೇ ನಮ್ಮ ಈ ಲೇಖನದ ಮುಖ್ಯೋದ್ದೇಶವಾಗಿರುವದು.

ಜಾತಿಗಳು ದೇವನಿರ್ಮಿತ-ನೈಸರ್ಗಿಕವೆಂತಲೂ ಮತ್ತು ಮಾನವನಿರ್ಮಿತ ಕೃತ್ರಿಮಗಳೆಂತಲೂ ಎರಡು ತೆರನಾಗಿರುವವು. ನೈಸರ್ಗಿಕ ಜಾತಿಗಳಲ್ಲಿ ೨೧ ಲಕ್ಷ ಅಂಡಜವೆಂತಲೂ ೨೧ ಲಕ್ಷ ಪಿಂಡಜವೆಂತಲೂ ೨೧ ಲಕ್ಷ ಸ್ವೇದಜವೆಂತಲೂ ಮತ್ತು ೨೧ ಲಕ್ಷ ಉದ್ಭಿಜವೆಂತಲೂ ಹೀಗೆ ಒಟ್ಟು ೮೪ ಲಕ್ಷ ಜಾತಿಗಳನ್ನು ಭಾರತದ ಪೂರ್ವಿಕರು ಕಲ್ಪಿಸಿಕೊಂಡಿರುವರು. ಇವೆಲ್ಲವು ಬೇರೆ ಬೇರೆಯಾಗಿಯೇ ಇರುವವು. ಪಿಂಡಜಗಳಲ್ಲಿ ಮಾನವರೆಂತಲೂ ಮತ್ತು ಪಶುಗಳೆಂತಲೂ ಎರಡು ವಿಧವಾಗಿರುವವು. ಮಾನವರಲ್ಲಿ ಗಂಡಸರೆಂದೂ ಹೆಂಗಸರೆಂದೂ ಮತ್ತೆ ಎರಡು ಬಗೆಯಾಗಿರುವದು. ಪಾಪಾನುಗುಣದಿಂದ ಕ್ರಿಮಿಕೀಟಕಾದಿ ಯೋನಿದ್ವಾರದಿಂದ ಬಂದು ಕಡೆಗೆ ಮಾನವನಾಗಿ ಜನ್ಮವೆತ್ತುವನೆಂದು ನಿಜಗುಣಶಿವಯೋಗಿಯು ಹೇಳುವಂತೆ, ಉತ್ಕ್ರಾಂತಿ ತತ್ವಜ್ಞಾನಿಯಾದ ಹರ್ಬರ್ಟ ಸ್ಪೆನ್ಸರನು ಇದನ್ನೇ ಬೇರೆ ರೀತಿಯಾಗಿ ಹೇಳುವನು. ಒಟ್ಟಿನಲ್ಲಿ ಇವು ಕೃತ್ರಿಮ

ಜಾತಿಗಳಲ್ಲವೆಂಬುವದು ಒಡೆದು ತೋರುತ್ತದೆ. ಇವುಗಳಲ್ಲಿಯೂ ಮಾನವರು ಉಪಯೋಗ ಮತ್ತು ಬೆಲೆಗಳ ಮೇಲಿಂದ ಹೆಚ್ಚುಕಡಿಮೆ ಭಾವಿಸಿಕೊಂಡಿರುವರು. ಅದು ಹೀಗಿದೆ— ಉದ್ಭಿಜಗಳಲ್ಲಿಯು ಪತ್ರಿ ಪುಷ್ಪ ಗಿಡಗಳಿಗೆ ಧಾರ್ಮಿಕ ಪ್ರಶಸ್ತಿಯೂ ಹಣ್ಣಿನ ಮರಗಳಿಗೆ ಬೆಲೆಯು ಹೆಚ್ಚಳವೂ ಮತ್ತು ತೇಗು ಚಂದನಾದಿ ಮರಗಳಿಗೆ ಉಪಯೋಗದ ಪ್ರಾಶಸ್ತ್ಯವೂ ಮಾನವರಿಂದ ಕೊಡಲ್ಪಡುವದು. ಇದರಂತೆ ಅಂಡಜಗಳಲ್ಲಿಯು ಎಲ್ಲ ಹಾವುಗಳಿಗಿಂತಲೂ ನಾಗರಹಾವಿನಲ್ಲಿ ಹೆಚ್ಚಿಗೆ ವಿಷವಿದ್ದರೂ ಅದು ಶ್ರೇಷ್ಠವೆಂದು ಜನರು ಭಾವಿಸುವರು. ಪಿಂಡವನ್ನು ಮುಟ್ಟುವದರಿಂದ ಕೆಲವರು ಕಾಗೆಗೆ ಗೌರವವನ್ನಿತ್ತರೆ ಉಳಿದವರು ಅದು ಮನೆಹೊಕ್ಕರೆ ಮೂರು ತಿಂಗಳು ಮನೆಬಿಡಬೇಕೆಂದು ಅನ್ನುವರು. ಗರುಡ ನವಿಲುಗಳಿಗೆ ದೇವರ ವಾಹನವೆಂದು ಮನ್ನಣೆ ಕೊಡುವರು. ಮತ್ತು ಪಿಂಡಜಗಳಾದ ಪಶುಗಳಲ್ಲಿ ಆಕಳಕಿಂತಲೂ ಎಮ್ಮೆಗಳು ಹೆಚ್ಚಿಗೆ ಹಾಲು ಕರೆದರೂ ಎಮ್ಮೆಗಳಿಗಿಂತಲೂ ಆಕಳುಗಳಿಗೆ ಗೋಮಾತೆಯೆಂದು ಹೆಚ್ಚಿನ ಗೌರವ ಕೊಡುವರು. ಕೆಲವರು ಹಂದಿಗಳು ಬಲು ಕೀಳವೆಂದು ಬಗೆದರೆ ಮತ್ತೆ ಹಲವರು ಅವು ವಿಷ್ಣುವಿನ ಅವತಾರವೆಂದು ಭಾವಿಸುವರು. ಇದರಂತೆ ಎತ್ತು ಕೋಣಗಳ ಕತ್ತೆ ಕುದುರೆಗಳ ಮಂಗ ನಾಯಿಗಳ ಸ್ಥಿತಿ ಇರುವದು. ಇವು ಹೇಗೆ ನಿಜವಾದ ಭೇದಗಳು ಆಗದ್ದರಿಂದ ನಿರಂತರ ಉಳಿಯುವದಿಲ್ಲವೋ ಇದರಂತೆ ಮಾನವರಲ್ಲಿ ಕಲ್ಪಿಸಿಕೊಂಡ ಹೊಲೆಹದಿನೆಂಟು ಜಾತಿಗಳು ಉಳಿಯಲಾರವು. ನೇಕಾರರ ಹೆಣ್ಣು ನೆಯ್ಕಾರರಲ್ಲಿಯೇ ಕೊಡಕೊಳ್ಳುವದು ನಡೆಯಬೇಕಾದರೆ ಉದ್ಯೋಗದ ಉತ್ಕರ್ಷದ ವ್ಯವಸ್ಥೆಯಲ್ಲದೆ ಅದಕ್ಕೆ ಬೇರೆ ಮತ್ತಾವ ಬಲವತ್ತರವಾದ ಕಾರಣಗಳಿಲ್ಲ. ಈ ಜಾತಿಗಳು ಎಂದೂ ನಿರಂತರವಾಗಿ ಉಳಿಯುವದಿಲ್ಲ. ಇವು ಯಾವಾಗಲೂ ಬದಲಾಗುತ್ತಲೇ ಇರುವವು.

ಅದೃಶ್ಯವಾಗಿ ಶಾಂತರೀತಿಯಿಂದ ಈ ಜಾತಿಗಳ ಬದಲಾವಣೆಗಳು ಹೇಗೆ ಸಾಗಿರುತ್ತವೆಂಬುದನ್ನು ಕ್ರಿ. ಶ. ೧೯೧೧ರ ಜನಗಣನೆಯ ವೃತ್ತಾಂತ ಸಂಪುಟ ೧ ಪುಟ ೩೭೧ ರಲ್ಲಿ ಮೇಲ್ವಿಚಾರಕರು ಬಲು ಸ್ವಾರಸ್ಯವಾಗಿ ವರ್ಣಿಸಿರುವರು. ಅವರು ಅನ್ನುವದು ಹೀಗೆ— "ಒಂದುಕ್ಷಣ ಜಾತಿ ಸಂಸ್ಥೆಯ ಸ್ವರೂಪವು ಸ್ಥಿರ ಮತ್ತು ಅಚಲವೆಂದು ಭಾಸವಾಗುತ್ತದೆ. ಆದರೆ ಅದು ನಿಜವಲ್ಲ. ಸಾವಕಾಶವಾಗಿ ಕಣ್ಣಿಗೆ ಕಾಣದಹಾಗೆ ಅದರಲ್ಲಿ

ಒಂದೇ ಸವನೇ ಬದಲಾಗುತ್ತಿರುವದು. ಗಡಿಯಾರದೊಳಗಿನ ತಾಸು ತೋರಿಸುವ ಮುಳ್ಳು ಜನರಿಗೆ ಸ್ಥಿರವೆಂದು ಕಾಣುತ್ತಿದ್ದರೂ ಅದು ನಿಜವಾಗಿಯೂ ಒಂದೇ ಸವನೇ ನಡೆದಿರುತ್ತದೆ. ಇದರಂತೆ ಜಾತಿಗಳ ಚಲನವಲನಗಳೂ ನಿರಂತರವಾಗಿ ಸಾಗುತ್ತಿರುತ್ತವೆ. ಒಂದು ಜಾತಿಯ ಕೆಲವು ಜನರು ಬೇರೆ ಕಸಬು, ವಾಸಸ್ಥಾನ, ಸಾಮಾಜಿಕ ರೀತಿ, ಮತ್ತು ಧಾರ್ಮಿಕ ವಿಧಾನಗಳನ್ನು ಆಚರಿಸುತ್ತ ತಮ್ಮಲ್ಲೊಂದು ವೈಶಿಷ್ಟ್ಯವನ್ನು ನಿರ್ಮಾಣ ಮಾಡಿಕೊಂಡಾಗ್ಗೆ ಅವರು ಉಳಿದವರಕ್ಕಿಂತಲೂ ತಾವು ಭಿನ್ನವೆಂದು ತಿಳಿದುಕೊಳ್ಳುವರು. ಇದರಂತೆ ಉಳಿದವರು ಅವರನ್ನು ತಿಳಿಯುವರು. ಕಾಲಾನುಸಾರವಾಗಿ ಈ ಭೇದದ ಭಾವನೆಯು ಬೆಳೆಯುತ್ತಹೋಗಿ ಈ ವಿಭಾಗವು ಮತ್ತು ಇದರ ಉತ್ಪತ್ತಿಸ್ಥಾನವು ಶರೀರ ಸಂಬಂಧ ದೃಷ್ಟಿಯಿಂದ ಬೇರೆಯಾಗುತ್ತದೆ. ಕಡೆಗೆ ಇದೊಂದು ಒಳಭೇದದ ಜಾತಿ ಇಲ್ಲವೆ ಸ್ವತಂತ್ರ ಜಾತಿಯಾಗುವದು. ಇದರ ವಿರುದ್ಧವಾಗಿ ಒಂದು ಜಾತಿಯವರು ಮತ್ತೊಂದು ಜಾತಿಯವರ ಕಸಬನ್ನು ಮಾಡತೊಡಗಲು, ಆಗ್ಗೆ ಆ ವಿಭಾಗವು ಎರಡನೆಯ ಜಾತಿಯಲ್ಲಿ ವಿಲೀನವಾಗಬೇಕೆಂದು ಬಯಸುತ್ತದೆ. ಈ ವಿಭಾಗದವರು ಮೊದಲು ಕೆಲವು ವೇಳೆ ತಮ್ಮ ಮೊದಲಿನ ಜಾತಿಯ ಹೆಸರನ್ನು ಅದರ ಮುಂದೆ ಹೊಸ ಕಸಬದ ಹೆಸರನ್ನು ಜೋಡಿಸಿ ಹೇಳಿಕೊಳ್ಳುವರು. ಆಮೇಲೆ ಹೊರಗಿನವರು ಇವನು ಆ ಕಸಬಿನವರೊಳಗಿನ ಬೇರೆ ಪಂಗಡದವನೆಂದು ಭಾವಿಸುವರು. ಆಮೇಲೆ ಅವರಲ್ಲಿಯೂ ಅದೇ ಭಾವನೆಯು ಬಲಿಯುತ್ತದೆ. ಮುಂದೆ ಅವರಲ್ಲಿ ಅವರ ವಿಧಿವಿಧಾನಗಳು ದೇವತಾರಾಧನೆ ಮೊದಲಾದವುಗಳು ಪ್ರಾರಂಭವಾಗಿ ಅವರೂ ಅವರ ಜಾತಿಯವರೆಂದು ನಿಶ್ಚಿತವಾಗುತ್ತದೆ. ಈ ಬದಲಾವಣೆಗಳು ಸತತವಾಗಿ ನಡೆದೇ ಇರುತ್ತವೆ. ಹೊಸ ಹೊಸ ಅವಶ್ಯಕತೆಗೆ ಅನುಸಾರವಾಗಿ ಹೊಸ ಜಾತಿಗಳು ನಿರ್ಮಾಣವಾಗುತ್ತವೆ. ಮತ್ತು ಅವಶ್ಯಕತೆಯು ಇಲ್ಲದಂತೆಯಾಗಲು ಹಳೆ ಜಾತಿಗಳು ಲುಪ್ತವಾಗುತ್ತವೆ "

ಹೀಗೆ ಆಗಾಗ್ಗೆ ಬದಲಾಗುವಂಥ ಜಾತಿಗಳು ಭರತಖಂಡದಲ್ಲಿಯೇ ಇರುವವಲ್ಲದೆ ಭೂಮಂಡಲದೊಳಗಿನ ಯಾವ ಭಾಗದಲ್ಲಿಯೂ ಇಲ್ಲವೆಂದು ಹೇಳುವಲ್ಲಿ ಅವರು ಬಲು ಹೆಮ್ಮೆ ಪಡುವರು. ಆದರೆ ಇವು ಇಲ್ಲದಿದ್ದರೂ ಇವೇ ಮಾದರಿಯ ನಾಝಿಜಂ, ಫ್ಯಾಸಿಜಂ, ಕಮ್ಯು

ನಿಜಂ, ಸೋಶ್ಯಾಲಿಜಂ, ಕ್ಯಾಪಿಟಾಲಿಜಂ ಮುಂತಾದ ಇಜಂಗಳ ಸುರಿಮಳೆಯೇ ನಡೆದಿದ್ದು ಅವುಗಳ ಆಘಾತದಿಂದ ಜಗತ್ತಿನಲ್ಲಿ ಆಲ್ಲೋಲ ಕಲ್ಲೋಲ ನಡೆದಿದೆ. ಇದರ ಸೆರಗು ಸದ್ಯಕ್ಕೆ ಸ್ವಲ್ಪ ಮಟ್ಟಿಗಾದರೂ ಭಾರತಕ್ಕೆ ಬಡಿಯುಹತ್ತಿದೆ. ಇದನ್ನು ಹೇಗೆ ನಿವಾರಿಸಬೇಕೆಂಬುವರಲ್ಲಿ ಅನೇಕ ದೇಶಾಭಿಮಾನಿಗಳು ತೊಡಗಿರುವರು. ಬಿಸಿಲಗುದುರೆ ಬೆನ್ನು ಹತ್ತಿದಂತೆ ಇದು ಅಸಾಧ್ಯವು. ಈ ಗೊಡವೆಗೆ ಹೋಗದೆ ದೇಶ ಹಿತೈಕಕಾಂಕ್ಷಿಗಳಾದವರು ವರ್ಣಾಶ್ರಮದವರ ಚಲ್ಲಾಟಿಯನ್ನು ಮೊದಲು ಬಂದು ಮಾಡಬೇಕು. ಭಾರತದೊಳಗಿನ ಎಲ್ಲ ಚಲ್ಲಾಟಗಳಿಗೆ ವರ್ಣಾಶ್ರಮಗಳೇ ಮುಖ್ಯ ಕಾರಣವು. ಜಾತಿಭೇದಗಳಿಗೂ ಇವೇ ಬೀಜಭೂತವಾಗಿರುವವು. ವರ್ಣಾಶ್ರಮಗಳು ಹಿಂದು ಧರ್ಮದಲ್ಲಿ ಅಗ್ರಸ್ಥಾನವನ್ನು ಪಡೆದಿರುವಂತೆ ಮಾಡಿರುವರು. ಮೊದಲು ಅವುಗಳನ್ನು ಆ ಸ್ಥಾನದಿಂದ ಕಿತ್ತು ಹೊರಗೆ ದೂಡಬೇಕು. ಈ ಕೃತ್ರಿಮ ವರ್ಣಾಶ್ರಮಗಳ ಉತ್ಪತ್ತಿಯೂ ಈ ರೀತಿಯಾಗಿದೆ—

ಇವುಗಳ ಉಗಮವು ಮೇಲೆ ಹೇಳಿದಂತೆ ಉಪನಿಷದಗಳಲ್ಲಿ ಇರುವದು ನಿಜ. ಈ ವಿಷಯವಾಗಿ ಛಾಂದೋಗ್ಯೋಪನಿಷತ್ತಿನಲ್ಲಿ ಒಂದು ಕತೆ ಹೀಗೆ ಅದೆ:—"ಜಾಬಾಲಾ ಎಂಬ ಒಬ್ಬ ಹೆಣ್ಣುಮಗಳಿಗೆ ಸತ್ಯಕಾಮನೆಂಬ ಮಗ ಹುಟ್ಟಿದನು. ಆತನು ವಿದ್ಯಾಭ್ಯಾಸಗೋಸುಗ ಗೌತಮ ಋಷಿಗಳ ಬಳಿಯಲ್ಲಿ ಹೋಗಲು ಬಯಸಿ ತಾಯಿಯನ್ನು ಕೇಳಿದನು. "ಅವ್ವಾ ಋಷಿಗಳು ನೀನು ಯಾರು ಎಂದು ಕೇಳಿದರೆ ಏನು ಹೇಳಬೇಕು? ಅದಕ್ಕೆ ತಾಯಿಯು ಅಂದದ್ದು "ತಮ್ಮಾ ನಾನು ಪ್ರೌಢಳಾಗಿ ಕೌಮಾರ್ಯ ಅವಸ್ಥೆಯಲ್ಲಿ ತಂದೆಯ ಮನೆಯೊಳಗೆ ಅತಿಥಿ ಅಭ್ಯಾಗತರ ಆದರ ಸತ್ಕಾರ ಮಾಡುವಾಗ್ಗೆ ಗರ್ಭಿಣಿಯಾಗಿ ನಿನ್ನನ್ನು ಹಡೆದನು. ಯಾರಿಂದ ಗರ್ಭಧಾರಣವಾಯಿತು, ಅದು ನನಗೆ ಗೊತ್ತಿಲ್ಲ. ನನ್ನ ಹೆಸರು ಸತ್ಯಕಾಮನೆಂಬದು ಇಷ್ಟು ಮಾತ್ರ ನಿಜ. ಇದನ್ನೇ ಋಷಿಗಳಿಗೆ ಹೇಳೆಂದು ಮಗನಿಗೆ ಹೇಳಿ ಕಳಿಸಿದಳು. ಆಗ್ಗೆ ಮಗನು ಗೌತಮರ ಬಳಿಗೆ ಹೋಗಿ 'ಅವರು ನೀನು ಯಾರು' ಎಂದು ಕೇಳಿದ್ದಕ್ಕೆ ತಾಯಿ ಕಲಿಸಿದ್ದನ್ನೇ ಹೇಳಿದನು. ಇದನ್ನು ಕೇಳಿ ಋಷಿಗಳು ಈ ಚಿಕ್ಕ ಮಗುವು ಹೀಗೆ ಸತ್ಯ ಮಾತಾಡಬೇಕಾದರೆ ಇದು ಬ್ರಹ್ಮಬೀಜವೇ ಇರಬೇಕೆಂದು ಗ್ರಹಿಸಿ ಆತನಿಗೆ ಸಂಸ್ಕಾರ ಮಾಡಿ ಆಶ್ರಮದಲ್ಲಿ ಪ್ರವೇಶಕ್ಕೆ ಅನುವು ಮಾಡಿ

ಕೊಟ್ಟರು. ನೋಡಿದಿರಾ; ಬ್ರಹ್ಮಬೀಜವನ್ನು ನಿರ್ಧರಿಸುವ ಈ ಋಷಿಗಳ ಕೈಕೌಶಲವನ್ನು! ತಾಯಿಯ ಸತ್ಯತೆಗೆ ಆಕೆಯು ಶೂದ್ರಳಾಗಿಯೇ ಉಳಿದು ಮಗನಿಗೆ ಬ್ರಾಹ್ಮಣತ್ವದ ಫಲ ದೊರೆತದ್ದು! ಗವಾಯಿಗಳ ಕಿಂತಲೂ ಅವರ ಹಾಡುಗಳನ್ನು ಹಿಡಿದ ಪ್ಲೇಟುಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಟ್ಟಂತಾಯಿತು !! ಸತ್ಯದ ಸಲುವಾಗಿ ಸರ್ವಸ್ವವನ್ನೇ ಕಳಕೊಂಡ ಹರಿಶ್ಚಂದ್ರನು ಕ್ಷತ್ರಿಯನಾಗಿಯೇ ಉಳಿದನು. ಅವನು ಬ್ರಾಹ್ಮಣನಾಗಲಿಲ್ಲ. ಆದರೆ ಸತ್ಯಕಾಮನೆಂಬ ಅರ್ಭಕನು ಮಾತ್ರ ಬ್ರಾಹ್ಮಣನಾದನು. ಕುಮಾರಿಯ ವ್ಯಭಿಚಾರವು ಬೈಲಿಗೆ ಬಿದ್ದು ಅವಳು ಇಷ್ಟು ಕೀಳ ಮಟ್ಟಕ್ಕೆ ಬಂದರೂ ಚಿಂತೆ ಇಲ್ಲ. ಅವಳ ಸಂತತಿಯು ಬ್ರಾಹ್ಮಣನಾದುದಕ್ಕೆ ಎಲ್ಲರಿಗೂ ಬಲು ಸಂತೋಷವು!!! ಈ ಬೀಜವೇ ಮೊಳೆತು ಮರವಾಗಿ ವ್ಯಾಸ ಋಷಿಗಳ ಕಾಲಕ್ಕೆ ಫಲ ಕೊಡಹತ್ತಿತು. ವ್ಯಾಸರು ಕೃಷ್ಣೋಕ್ತಿಯಿಂದ ಅರ್ಜುನನಿಗೆ ಬೋಧೆ ಮಾಡಿದಂತೆ ಗೀತೆಯನ್ನು ಬರೆದರು. ಅದನ್ನು ಎಲ್ಲ ಭಾಷ್ಯಕಾರರು ಆಧಾರವಾಗಿಟ್ಟುಕೊಂಡು ತಮ್ಮ ತಮ್ಮ ತತ್ವಗಳಿಗೆ ಅನುಸಾರವಾಗಿ ಭಾಷ್ಯಗಳನ್ನು ಬರೆದರು. ಈ ಗೀತೆಯಲ್ಲಿ "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ" ಎಂದು ಹೇಳಿ ಗುಣಕರ್ಮಗಳ ವಿಭಾಗದ ಮೇಲಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರವೆಂದು ನಾಲ್ಕು ವರ್ಣಗಳನ್ನು ನಿರ್ಮಾಣ ಮಾಡಿದರು. ಎಷ್ಟು ಗುಣಗಳೆಂಬದನ್ನು ಹೇಳದೆ ಸತ್ವ ರಜ ತಮವೆಂಬ ಮೂರೇ ಗುಣಗಳನ್ನು ಹೇಳುವದರಿಂದ ಗುಣಗಳು ಮೂರಾದವು. ಮತ್ತು ವರ್ಣಗಳು ನಾಲ್ಕಾದವು. ಇವುಗಳ ಸಮನ್ವಯ ಹೇಗೆ ಮಾಡುವದು ಗೊತ್ತಾಗುವದಿಲ್ಲ. ಈ ಪರೀಕ್ಷೆಯನ್ನು ಒಮ್ಮೆ ಮಾಡಬೇಕೇ? ಬಾರಿಬಾರಿಗೆ ಮಾಡಬೇಕೇ ಅಥವಾ ಹುಟ್ಟಿದಾಗೊಮ್ಮೆ ಮಾಡಬೇಕೇ ಇದನ್ನು ಅದರಲ್ಲಿ ಎಲ್ಲಿಯೂ ಹೇಳಿಲ್ಲ. ಅದನ್ನು ಸ್ತ್ರೀಪುರುಷ ಇಬ್ಬರಿಗೂ ಮಾಡಬೇಕೇ ಇಲ್ಲವೆ ಪುರುಷರಿಗಷ್ಟೇ ಮಾಡಬೇಕೇ ಎಂಬದನ್ನು ಹೇಳಿಲ್ಲ. ಇಂಥ ಸಂದಿಗ್ಧವಾದ ಗುಣಗಳ ಜೊತೆಗೆ ವ್ಯಾಸರು ಕರ್ಮವನ್ನು ಜೋಡಿಸಿರುವರು. ಈ ಕರ್ಮದ ಅರ್ಥವನ್ನು ಇಲ್ಲಿ ಕಸಬು ಎಂದು ತಿಳಿಯಬೇಕೇ ಅಥವಾ ಸಂಸ್ಕಾರವೆಂದು ತಿಳಿಯಬೇಕೇ ಇದನ್ನು ನಿರ್ಧರಿಸುವದೂ ಶಕ್ಯವಲ್ಲ. ಮುಂದಿನವರು ಈ ಕರ್ಮಕ್ಕೆ ಸಂಸ್ಕಾರವೆಂದು ಗ್ರಹಿಸಿ "ಜನ್ಮನಾ ಜಾಯತೇ ಶೂದ್ರಃ। ಕರ್ಮಣಾ

ಕ್ರಿಯತೇ ದ್ವಿಜಃ ॥ ವೇದಾಭ್ಯಾಸಾತ್ ಭವೇದ್ವಿಪ್ರೋ। ಬ್ರಹ್ಮಂ ಜಾನಾತಿ ಬ್ರಾಹ್ಮಣಃ" ॥ ಎಂದು ಹೇಳಿ ಈ ಕರ್ಮವೆಂಬ ಸಂಸ್ಕಾರದಿಂದ ಗಂಡ ಸರನ್ನಷ್ಟೇ ಶ್ರೇಷ್ಠರನ್ನಾಗಿ ಮಾಡಿ ತಮ್ಮ ಹೆಂಗಸರನ್ನು ಶೂದ್ರರೆಂದು ಎಣಿಸಿದರು. ಹೀಗೆ ತಮ್ಮ ಅರ್ಧಾಂಗಿಯನ್ನೇ ಕೀಳೆಂದು ಬಗೆಯ್ಯುವವರು ಉಳಿದವರನ್ನು ಎಂದಾದರೂ ಮೇಲಕ್ಕೆ ಎತ್ತಬಹುದೇ? ಇದು ಆಕಾಶ ಕುಸುಮದಂತೆ ಅಸಂಭವನೀಯವು. ಇಷ್ಟಕ್ಕೆ ಸುಮ್ಮನಿರದೆ "ವರ್ಣಾನಾಂ ಬ್ರಾಹ್ಮಣೋ ಗುರುಃ" ಎಂದು ಹೇಳುತ್ತ ಉಳಿದ ಮೂರು ವರ್ಣದವರ ಮೇಲೆ ತಮ್ಮ ವರ್ಚಸ್ಸನ್ನು ಕೂಡ್ರಿಸಿದರು. ಅಲ್ಲದೆ ಅವರ್ರು ಎಂದೂ ಮೇಲಕ್ಕೆ ಏಳದಂತೆ ಮಾಡಿದರು. ವಿಶ್ವಾಮಿತ್ರನು ಅರವತ್ತು ಸಾವಿರ ವರುಷ ತಪಶ್ಚರ್ಯ ಮಾಡಿದರೂ ಅವನಿಗೆ ದುರ್ವಾಸರು ಬ್ರಾಹ್ಮನೆಂದು ಕರೆಯಲಿಲ್ಲ. ಮತ್ತು ನಮಸ್ಕಾರ ಮಾಡಲಿಲ್ಲವಂತೆ. ಇಂಥ ಭೇದಕ ಬುದ್ಧಿಯು ಇನ್ನು ಮುಂದೆ ಪ್ರಯೋಜನವಾಗಲಾರದು. ಜಾಣರಾಗಿ ವರ್ಣದವರಲ್ಲಿ ಶ್ರೇಷ್ಠರೆಂದು ತಿಳಿದುಕೊಳ್ಳುವವರು ಚನ್ನಾಗಿ ವಿಚಾರ ಮಾಡಿ ಸದ್ಯಕ್ಕೆ ಪ್ರಯೋಜನವಿಲ್ಲದ ವರ್ಣಾಶ್ರಮಗಳನ್ನು ನಾಶ ಮಾಡುವ ಉದ್ಯೋಗಕ್ಕೆ ತೊಡಗಬೇಕು.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಬರೆ ನಾಲ್ಕು ವರ್ಣದವರ ವಿಷಯವಾಗಿ ಹೇಳುವ ಶಾಸ್ತ್ರಕ್ಕೆ "ಹಿಂದು ಧರ್ಮಶಾಸ್ತ್ರ"ವೆಂದು ಹೇಳುವರು. ಇದರಿಂದ ಚಾತುರ್ವರ್ಣದವರೆಂದರೆ ಹಿಂದುಗಳೆಂದು ಬೋಧೆಯಾಗುವದು. ಇಂಥ ಹಿಂದುಗಳಿಂದ ಸ್ಥಾನಕ್ಕೆ ಹಿಂದುಸ್ಥಾನವೆಂದು ಹೇಳಬೇಕಾಗುವದು. ಆದರೆ ಪಾಕಿಸ್ತಾನದ ವಿರುದ್ಧವಾದ ಹಿಂದುಸ್ತಾನದಲ್ಲಿ ಸದ್ಯಕ್ಕೆ ಚಾತುರ ವರ್ಣದವರು, ಅತಿ ವರ್ಣಗಳು, ಜೈನರು, ಬೌದ್ಧರು, ಕ್ರಿಶ್ಚನರು, ಶೀಖರು ಮತ್ತು ಮಹಾಮ್ಮದೀಯರು ಮೊದಲಾದ ಹಲವು ಧರ್ಮದ ಜನರಿರುವರು. ಇವರೆಲ್ಲರಿಗೂ ಇವರ ಹೇಳಿಕೆಯಂತೆ ಹಿಂದುಗಳೆಂದೇ ತಿಳಿಯಬೇಕಾಗುವದು. ಇದು ತೀರ ಅನುಚಿತವು. ಮುಂದಾಳುಗಳೂ ಈ ಹೆಸರನ್ನು ಮೊದಲು ತಿದ್ದಬೇಕು. ಮಹಮದೀಯರ ಧರ್ಮವು ಕತ್ತಿಯ ಬಲದಿಂದ ನಿರ್ಮಿತವಾಗಿದೆಯೆಂದು ಹೇಳುವ ಚಾತುರವರ್ಣದವರು " ಹತೋ। ವಾ ಪ್ರಾಪ್ಸ್ಯಸೇ ಸ್ವರ್ಗಂ। ಜಿತ್ವಾ। ವಾ ಭೋಕ್ಷ್ಯಸೇ ಮಹಿಂ"॥ ಎಂದು ಬೋಧಿಸುವ ತಮ್ಮ ಗೀತೆಯ ವಾಕ್ಯದ ಗತಿ ಏನು? ವಿಚಾರಿಸಬೇಕು. ಕರ್ಮಯೋಗವನ್ನು ಹೇಳುವ

ಗೀತೆಯಲ್ಲಿ ಭಕ್ತಿಯೋಗವು ಸೇರ್ಪಡೆಯಾದದ್ದು ಬಹಳೇ ಯೋಗ್ಯವು. ಭಕ್ತಿಯಲ್ಲಿ ಎಲ್ಲ ಭಕ್ತರಿಗೆ ಮೋಕ್ಷ ಮಾರ್ಗವು ಮುಕ್ತದ್ವಾರವಾಗಿರುವದು ಸಹಜ. ಆದರೆ ಗೀತೆಯಲ್ಲಿ "ಮಾಂ ಹಿ। ಪಾರ್ಥ ವ್ಯಪಾಶ್ರಿತ್ಯ। ಏಪಿಸ್ಯುಃ ಪಾಪಯೋನಯಃ॥ ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ ತೇಽಪಿ ಯಾಂತಿ ಪರಾಂಗತಿಂ। ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾಃ ಭಕ್ತಾಃ ರಾಜಋಷಯಸ್ತಥಾ॥" ಎಂದು ಹೇಳುವದರಿಂದ ಪಾಪಯೋನಿ ಸಂಭೂತರು, ಸ್ತ್ರೀಯರು, ವೈಶ್ಯರು, ಶೂದ್ರರು ಮೊದಲಾದವರು ಪರಮ ಪದವಿಯನ್ನು ಹೊಂದುವರು. ಎಂದ ಮೇಲೆ ಬ್ರಾಹ್ಮಣರು, ಪುಣ್ಯವಂತ, ಭಕ್ತರು, ಮತ್ತು ರಾಜಋಷಿಗಳು ಮುಕ್ತರಾಗುವದರಲ್ಲಿ ಸಂದೇಹವೇನು ಎಂದು ಹೇಳಿ ಎಲ್ಲರಿಗಿಂತ ಬ್ರಾಹ್ಮಣ ಕ್ಷತ್ರಿಯರ ಶ್ರೇಷ್ಠತ್ವ ಹೇಳುವದರಿಂದ ಫಲವೇನು? ಇದು ಚಾತುರವರ್ಣದವರಲ್ಲಿಯು ಶ್ರೇಷ್ಠವೆಂದು ಕರೆದುಕೊಳ್ಳುವರ ಕೈವಾಡವು. ಇಂಥ ವಾಕ್ಯಗಳನ್ನು ಮೊದಲು ಕಿತ್ತು ಹಾಕಬೇಕು. ಇಂಥ ಅನೇಕ ವಾಕ್ಯಗಳನ್ನು ನಾವು ಕೊಡಬಹುದು. ಆದರೆ ಸ್ಥಲಾಭಾವದಿಂದ ಬಿಡಬೇಕಾಗಿದೆ. ಇನ್ನು ಮುಂದೆ ಇವರು ಇದೇ ಕಾಯಕವನ್ನು ನಡೆಯಿಸಿದ್ದಾದರೆ ಇವರನ್ನು ೩೩ ಕೋಟಿ ಭಾರತೀಯರ ಹಿತಕ್ಕಾಗಿ ಪಾಕಿಸ್ತಾನದವರಂತೆ ಬ್ರಹ್ಮಸ್ಥಾನವನ್ನು ಬೇರೆ ಮಾಡಿಡುವ ಪ್ರಸಂಗಬರಬಹುದು.

ಈ ಕೃತ್ರಿಮ ವರ್ಣಾಶ್ರಮಗಳನ್ನು ಕಿತ್ತೊಗೆಯಲಿಕ್ಕೆ ಯಾರು ಪ್ರಯತ್ನಿಸಬೇಕು ಮತ್ತು ಅದನ್ನು ಯಾವ ರೀತಿಯಿಂದ ಮಾಡಬೇಕು ಎಂಬೆರಡು ಮುಖ್ಯ ಪ್ರಶ್ನೆಗಳು ನಮ್ಮ ಮುಂದಿರುವವು. ಬುದ್ಧ, ಬಸವ, ಗಾಂಧಿ ಮೊದಲಾದ ಮಹಾತ್ಮರು ಕಾಲಕಾಲಕ್ಕೆ ಈ ಬಗ್ಗೆ ಪ್ರಯತ್ನ ಮಾಡಿರುವರು. ಆದರೂ ಇವರ ಪ್ರಯತ್ನಗಳು ಇನ್ನೂ ಸಂಪೂರ್ಣವಾಗಿ ಸಫಲವಾಗಿಲ್ಲ. ಇಂಥ ಇನ್ನೊಬ್ಬ ಮಹಾತ್ಮನು ಎಂದು ಹುಟ್ಟುವನೆಂದು ಹೇಳುವದು ಅಶಕ್ಯವು. ಮತ್ತು ಅಂಥವನು ಹುಟ್ಟುವ ವರೆಗೆ ದಾರೀ ನೋಡುವದು ಸಹ ಬಹಳ ಗಂಡಾಂತರದ್ದು. ಅಂದಮೇಲೆ ಈ ಬಗ್ಗೆ ಪ್ರಯತ್ನ ಮಾಡತಕ್ಕವರು ಯಾರೆಂದರೆ, ಯಾರಿಂದ ಅವು ಬೇರೂರುವಂತೆ ಮಾಡಲ್ಪಟ್ಟವೋ ಅವರು. ಅವರದೆಂದರೆ ಈ ನಾಲ್ಕು ವರ್ಣಗಳಲ್ಲಿ ಉಚ್ಚ ವರ್ಣದವರೆಂದೆನ್ನಿಸಿಕೊಳ್ಳುವವರು. ಇವರಾದರೂ ಯಾವ ರೀತಿಯಿಂದ ಇದನ್ನು ಮಾಡಬೇಕೆಂಬದನ್ನು ವಿಚಾರ ಮಾಡೋಣ.

ವರ್ಣಗಳು ಗುಣಕರ್ಮ ವಿಭೇದದಿಂದ ಉಂಟಾಗಿರುತ್ತವೆ. ಆಶ್ರಮಗಳು ಮನುಷ್ಯನ ಆಯುಷ್ಯದ ಭಾಗಗಳಿಂದ ಉಂಟಾಗಿರುತ್ತವೆ. ವರ್ಣಗಳಿಗಾಗಲಿ ಆಶ್ರಮಗಳಿಗಾಗಲಿ ಪುರುಷ-ಸ್ತ್ರೀಭೇದದ ಸಂಬಂಧವಿರಬಾರದು. ಆದರೆ ಈ ಸಂಬಂಧವು ವರ್ಣಗಳಲ್ಲಿ ಉಚ್ಚವೆಂದೆನಿಸುವ ವರ್ಣದಲ್ಲಿಯೇ ಕಂಡುಬರುತ್ತದೆ. ಈ ವರ್ಣದಲ್ಲಿ ಸ್ತ್ರೀಪುರುಷರಿಬ್ಬರೂ ಜನ್ಮದಿಂದ ಶೂದ್ರರಿದ್ದರೂ ಸಂಸ್ಕಾರ ವಿಶೇಷದಿಂದ ಪುರುಷನು ದ್ವಿಜನಾಗುತ್ತಾನೆ. ಸ್ತ್ರೀಯು ಕಡೆತನಕ ಶೂದ್ರಳಾಗಿಯೇ ಉಳಿಯುತ್ತಾಳೆ. ಸ್ತ್ರೀಯರೆಲ್ಲರೂ ಸಹ ಸಮಾನರಾಗಿ ಉಳಿಯುವದಿಲ್ಲ. ವಿವಾಹಿತ ಸ್ತ್ರೀ ಮತ್ತು ವಿಧವೆ ಇವರಲ್ಲಿಯೂ ಭೇದಭಾವವಿರುತ್ತದೆ. ಮಂಗಲಕಾರ್ಯಗಳಲ್ಲಿ ವಿಧವೆಗೆ ಪ್ರವೇಶವಿಲ್ಲ. ಆದರೆ ಇದರ ವಿರುದ್ಧವಾಗಿ ವಿವಾಹಿತ ಸ್ತ್ರೀಗೆ ದೇವಪೂಜೆಗೆ ಅಧಿಕಾರವಿಲ್ಲ. ಆಕೆ ಮಾಡಿದ ಅಡಿಗೆಯ ಪದಾರ್ಥವು ದೇವರ ನೈವೇದ್ಯಕ್ಕೆ ಬರುವದಿಲ್ಲ. ಆದರೆ ವಿಧವೆಯು ಮಾಡಿದ ಅಡಿಗೆಯು ನೈವೇದ್ಯಕ್ಕೆ ಬರುತ್ತದೆ. ಇದನ್ನು ವಿವಾಹಿತ ಸ್ತ್ರೀಯು ಊಟ ಮಾಡಬಹುದು. ಆದರೆ ವಿವಾಹಿತ ಸ್ತ್ರೀಯು ಮಾಡಿದಡಿಗೆಯು ವಿಧವೆಯ ಊಟಕ್ಕೆ ಬರುವದಿಲ್ಲ. ಜನನಕಾಲವು ಸೂತಕ ಕಾಲವೆಂದು ತಿಳಿದು ಆ ಕಾಲದಲ್ಲಿ ಮನೆಯ ಇತರ ಜನರು ಯಾರೂ ಬಾಣಂತಿಯನ್ನು ಮುಟ್ಟುವದಿಲ್ಲ. ಈ ರೀತಿ ಅನೇಕ ಭೇದಗಳುಂಟಾಗಿ ಸಮಾನಭಾವವು ಅಳಿದೇ ಹೋಗಿರುತ್ತದೆ.

ಈ ಸ್ಥಿತಿಯು ಸಮಾಜಕ್ಕೆ ಹಿತಕರವಲ್ಲೆಂದು ತಿಳಿದು ಇದನ್ನು ಕಳೆಯಲಿಕ್ಕೆ ಹೋದ ಶತಮಾನದ ಅಂತ್ಯದಲ್ಲಿ ಮಹಾರಾಷ್ಟ್ರದಲ್ಲಿ ಪ್ರಿ. ಆಗರಕರ, ಜಸ್ಟಿಸ್ ರಾನಡೆ, ಪ್ರೊ. ಧೊಂಡೋಪಂತ ಕರ್ವೆ ಮೊದಲಾದವರು ವಿಧವಾ ವಿವಾಹ, ವಿದ್ಯಾಪ್ರಸಾರ, ಉದ್ಯೋಗ ಶಿಕ್ಷಣ ಮುಂತಾದ ಉಪಾಯಗಳನ್ನು ಬಹು ಜೋರಿನಿಂದ ನಡೆಸಿದರು. ಇವು ಬಹುಮಟ್ಟಿಗೆ ಫಲಕಾರಿಯಾಗಿವೆ. ಇದೇ ತರದ ಪ್ರಯತ್ನಗಳನ್ನು ಈ ಸಮಾಜದ ಪ್ರಮುಖರು ಮುಂದರಿಸಿ ಅಂತ್ಯಜರನ್ನು ಮೊದಲ್ಗೊಂಡು ಇತರ ಎಲ್ಲ ಸಮಾಜದವರಿಗೆ ಸಹಾಯ ಸಹಕಾರಗಳನ್ನು ನೀಡುತ್ತ ಹೋದರೆ ಎಲ್ಲ ಸಮಾಜಗಳಲ್ಲಿಯ ವಿಷಮ ಸ್ಥಿತಿಯು ತುಸು ದಿವಸಗಳಲ್ಲಿ ಇಲ್ಲದಂತಾಗುವದೆಂದು ನಂಬುವದಕ್ಕೆ ಅಡ್ಡಿ ಕಾಣುವದಿಲ್ಲ. ಈ ಎಚ್ಚರಿಕೆಯಿಂದ ಇವರು ಮುಂದೆ ನಡೆಯತಕ್ಕದ್ದು. ಏನು ಮಾಡಿದರೆ ದೇಶವು ಶಾಂತವಾಗಬಹುದೆಂಬದನ್ನು ಮುಂದಾಳುಗಳೇ ವಿಚಾರಿಸತಕ್ಕದ್ದು.

---

# ಗುರುಗಳ ಸಾಮಾಜಿಕ ಕರ್ತವ್ಯ.

(ಲೇಖಕಃ- ಎನ್. ರಾಚೋಟೆಯ್ಯ ಮು. ಕಾನಕಾನಹಳ್ಳಿ)

---

ವೀರಶೈವರಲ್ಲಿ ಅಂಗ ಉದ್ಭವಿಸಲೊಡನೆ ಲಿಂಗಸಂಬಂಧವನ್ನು ಮಾಡುವುದು, ಶುಭಾಶುಭ ವಿವಾಹಾದಿ ಕಾರ್ಯಗಳನ್ನು ಸಮಾಜದಲ್ಲಿ ಮಾಡುತ್ತಿರುವುದು ಗುರುನಿನ ಕಾರ್ಯಗಳು. ಎಂದರೆ ಬಿತ್ತಿದ ಬೀಜವನ್ನು ಕಾಯ್ದು ಪೋಷಿಸುವಂಥ ಕೃಷಿಯಂತೆ ಕಟ್ಟಿದ ಲಿಂಗಕ್ಕೆ ಅಪೋಹ ಬಾರದಂತ ಸಮಾಜವನ್ನು ಎಚ್ಚರಿಸಿ ಕಾಯ್ದುಕೊಂಡಿರುವವನೇ ಗುರುವಲ್ಲದೆ ಸಾಮಾನ್ಯರಂತೆ ಡೊಂಬರಾಟದ ಶಿವದೀಕ್ಷೆಯ ಮಾಡುವೆವೆಂದು ಲಿಂಗಸಂಸ್ಕಾರಿಗಳಿಗೆ ಪುನಃ ಲಿಂಗಸಂಸ್ಕಾರ ಸಂಬಂಧಗಳನ್ನು ಮಾಡುವೆವೆಂದೊಡ ಅಲ್ಲಿಯೇ ಲಿಂಗವಿಲ್ಲದ ಬಾಲಕರನೇಕರು ಇರುತ್ತಿದ್ದರೂ ಕೇಳುವರಾರನೂ ಕಾಣೆ. ಇದು ಸೋಜಿಗದ ನುಡಿಯಲ್ಲ. ಲಿಂಗವಂತರಲ್ಲಿ ಎತ್ತಕಡೆ ನೋಡಿದರೂ ಲಿಂಗ, ವಿಭೂತಿಗಳಿಲ್ಲದ ಮನುಜರ ಗುಂಪು ಕಾಣುತ್ತಿಹುದು.

ಇದು ಕಾರಣ ಮನೆದೇವರ ಕುಲದೇವರ ನೆವದಿಂದ ಗುರುಜಂಗಮರ ಕರೆಯುವವರೇ ಹೊರತು ಗುರುವಿಗಾಗಿ, ಲಿಂಗಕ್ಕಾಗಿ, ಜಂಗಮಕ್ಕಾಗಿ ಎಂಬುವರಾರನೂ ಕಾಣೆ.

"ಅಡವಿಯಲಿರ್ದ ಗೋವು ಮನೆಯುಲಿರ್ದ ಕರುವಿಂಗೆ ಚಿಂತಿಸಿ ಬಂದು ಹಾಲನೀಡಿ ಮೋಹವ ಮಾಡುವುದಲ್ಲದೆ ಆ ಕರುವೆತ್ತ ಬಲ್ಲುದಯ್ಯ? ಹಾಗೆ ನಾವು ಕರ್ಮದೇಹವಿಡಿದು ಈ ಪರಿಭವದಲ್ಲಿ ತೊಳಲುತ್ತಿರಲು ನೀನು ದಯ ಹುಟ್ಟಿ ನಿನ್ನ ಮರವೆಯ ಸಂಸಾರ ಮಲ ತೊಲಗಿಸಬೇಕೆಂಬ ಚಿಂತೆ ನಿನಗಲ್ಲದೆ ನಾನೇನು ಬಲ್ಲೆನಯ್ಯ ಅಖಂಡೇಶ್ವರಾ."

ಎಂಬ ಶರಣರ ನುಡಿಯಂತೆ ವೇಷವ ಕೊಟ್ಟ ಹಿರಿಯರು ಭಾಷೆ ಹೀನರಾಗದೆ ಬರಿಯ ಭೂಷಣೆಗೆ ಮನಗೊಡವೆ ವೀರಶೈವರೆಂದು ಅಥವಾ ಲಿಂಗವಂತರೆಂದು ಹೇಳಿಕೊಳ್ಳುವ ಸಮಾಜದಲ್ಲಿ ಅಂಗಭವಿಗಳು ಇರದಂತೆ ಲಿಂಗ ಸಂಬಂಧವನ್ನು ಮಾಡುವುದು ಕರ್ತವ್ಯ.

ಹಿರಿಯರೇ, ಭಕ್ತಿಸ್ಥಲದಲ್ಲಿಯ ಆಚರಣೆಯನ್ನು ಗುರುಗಳು ಉಪದೇಶಿಸಲು ಸಿದ್ಧರಿಲ್ಲದೆ ಮನಬಂದಾಗ "ಶಿವದೀಕ್ಷಾವಿಧಿವಿಧಾನ"ಗಳನ್ನೋ

"ಬ್ರಹ್ಮೋಪದೇಶ"ವೆಂಬುದನ್ನೋ ಮಾಡುವ ಅದಾವ ನಾಮರೂಪಗಳೂ ಉಳಿಯಲಾರವು. ಮತ್ತೆ ನಿಮ್ಮ ಗುರುಪಟ್ಟಾಧಿಕಾರವು ಉಳಿದುಕೊಳ್ಳ ಲಾರವು. ಇಂಥದನ್ನು ಕುರಿತು ಶರಣರು ನುಡಿದಿರುವವನ್ನು ನೋಡಿರಿ.

೧. ಗರುಡ ನಿರ್ದು ಸರ್ಪದ ಭಯ ಹಿಂಗದಿದ್ದ ಮೇಲೆ ಗರುಡನ ಗೊಡವೆ ಏತಕಯ್ಯ........

೨. ಚಿತ್ರದ ಬೊಂಬೆ ರೂಪಾಗಿರ್ದೊಡೂ ಪ್ರಯೋಜನಕಾರಿಯಾ ದುದಲ್ಲ............

ಇಂತಿವುಗಳನು ಮೊದಲು ಗುರುಗಳು ನೋಡಬೇಕು. ಏಕೆಂದರೆ, ಅಷ್ಟಾವರಣಗಳಲ್ಲಿ ೧ನೇ ಸ್ಥಾನ ಗುರುವಿಗೆ ಇರುತ್ತಿರಲು ಗುರುವಿನಿಂ ಲಿಂಗ. ಲಿಂಗದಿಂ ಜಂಗಮ. ಮೊದಲನೇ ಸ್ಥಾನವೇ ಭದ್ರವಿಲ್ಲದ ಮೇಲೆ ಎರಡನೇ ಸ್ಥಾನವನ್ನು ಕೇಳುವವರಾರು? ಈಗಲಾದರೋ, ಅಷ್ಟಾವರಣ ಪಂಚಾಚಾರ ಷಟ್‌ಸ್ಥಲದ ಉಪದೇಶವೆಂಬುದನ್ನು ಬದಿಗಿಟ್ಟು "ಬ್ರಹ್ಮೋ ಪದೇಶ" ಶಿವದೀಕ್ಷಾನಾಮಗಳು ಪ್ರಬಲಸ್ಥಿತಿಯಿಂದ ಸುತ್ತಲು ಕೂಗಿ ಕೊಳ್ಳುತ್ತಿವೆ. ಇದು 'ಶಶಿ'ಯನ್ನು 'ಸಸಿ'ಯೆಂದು ಬೋಧಿಸಿದ ರೀತಿಯಾ ಗಿದೆ. ಇದ ನೋಡಲು ಮೂರು ಹಳ್ಳಿಗಳಿಗೂ, ಊರು ಊರುಗಳಿಗೂ ಧಾರ್ಮಿಕ ಪಾಠಶಾಲೆಗಳೆಂಬ ಮಠಗಳು ಇರುವವಷ್ಟೇ. ಅವುಗಳಲ್ಲಿಯ ಮೂರ್ತಿಗಳನ್ನು ಒಕ್ಕೆಡೆಗೆ ಶೇರಿಸಿ ಆಚಾರ ವಿಚಾರಗಳ ಪರಿಶೀಲನೆಗ ಳನ್ನು ಮಾಡುವುದಾದರೆ ಗೊತ್ತಾಗುತ್ತದೆ. ಇದಕ್ಕಾಗಿ ಒಂದು ಸಾರಿ ನಮ್ಮ ಊರಿಗೆ ಒಬ್ಬರು ಪಟ್ಟದ್ದೇವರು ದಯಮಾಡಿಸಿದ್ದರು. ಆಗ ಇಲ್ಲಿನ ಭಕ್ತರುಗಳು ಅಷ್ಟಾವರಣ, ಪಂಚಾಚಾರಗಳನ್ನು ಬೋಧಿಸಬೇಕೆಂದು ಬೇಡಿಕೊಳ್ಳುವಲ್ಲಿ, ಅದರ ಆಚರಣೆಯ ಕ್ರಮವೇನೆಂಬುದು ಅವರಿಗೇ ತಿಳಿಯದಿದ್ದದರಿಂದ ಇಲ್ಲಿನ ಭಕ್ತರು ಲಾಂಛನಕ್ಕೆ ಶರಣು ಮಾಡಿ ಕಳು ಹಿಸಿದಾಯ್ತು. ಬ್ರಹ್ಮೋಪದೇಶ ಹೊಂದಿದ ಅಧಿಕಾರಿಗಳ ಆಚಾರವಿಚಾ ರಗಳೇ ಹೀಗಾದ ಮೇಲೆ ಉಳಿದವರ ಗತಿಯೇನು?

ಇವುಗಳೆಲ್ಲವನ್ನೂ ವಿಚಾರಿಸಿದರೆ ನಮ್ಮ ಧರ್ಮ ಸಂಸ್ಥೆಗಳಿಗೆ ಜೀರ್ಣೋದ್ಧಾರಕ್ಕಾಗಿ ಭಕ್ತರು ಮಾಹೇಶ್ವರರು ನೇಮಿಸುವ ಗುರುಪಟ್ಟಾ ಧಿಕಾರವು ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲದ ಉಪದೇಶವು ಉಳಿದ ವಟುಗಳಿಗೆ ತ್ರಿವಿಧ ದೀಕ್ಷಾ ಕ್ರಮವನ್ನೂ ಕೈಗೊಂಡಿರುವೆನೆಂ ದೊಡೆ ಸಾಲದೆ?

ಬಸವಣ್ಣ, ಚನ್ನಬಸವಣ್ಣ, ಅಲ್ಲಮಪ್ರಭು, ರೇಣುಕಾದಿಗಳಿಗೆ ಬ್ರಹ್ಮೋಪದೇಶದ ಬೋಧಕರಾರು ? ಈಗ ಅಷ್ಟಾವರಣಗಳೆಲ್ಲವೂ ನಷ್ಟವಾಗಿ, ಪಂಚಾಚಾರಗಳು ಪಥನಿಸಿ, ಷಟ್‌ಸ್ಥಲಗಳೆಲ್ಲವೂ ಪಠಣೆಮಾತ್ರಕ್ಕೆ ನಿಂತಿರುವುದರಿಂದ ಆಚರಣೆಯ ಮಹಾಪುರುಷರು ಎಂದಿಗೆ ಅವತರಿಪರೋ ಅಂದು ಬಳೆಯ ವ್ಯಾಪಾರಿಗಳಲ್ಲಿ ಬಳೆಯು ಸಿಕ್ಕುವಂತೆಯೂ, ಸೂರ್ಯನಿರಲು ಕತ್ತಲೆಯು ಓಡುವಂತೆಯೂ ಅನಾಚಾರವು ಓಡುವುದಲ್ಲದೆ ಸ್ಥಾನಮಾನಗಳನ್ನು ಲೆಕ್ಕಿಸದೆ ಸಿಂಹವು ಘರ್ಜಿಸುವಂತೆ ಧಾರ್ಮಿಕ ಸಂಸ್ಥೆಗಳಲ್ಲಿ ಧಾರ್ಮಿಕ ಆಚಾರ ವಿಚಾರಗಳ ಕೂಗಿನ ಬೆಳಕು ಬೆಳಗುತ್ತಿಪ್ಪುದು ತಪ್ಪದು.

ಭಕ್ತಿಯಿಲ್ಲದೆ ಕೆಟ್ಟಿಹುದು ಗುರುತನ.
ಜ್ಞಾನವಿಲ್ಲದೆ ಕೆಟ್ಟಿಹುದು ಲಿಂಗತನ.
ವೈರಾಗ್ಯವಿಲ್ಲದೆ ಕೆಟ್ಟಿಹುದು ಜಂಗಮತನ.
ಭಕ್ತಿಯಿಲ್ಲದೆ ಗುರುತತ್ವ ಅಳವಡದು.
ಜ್ಞಾನವಿಲ್ಲದೆ ಲಿಂಗತತ್ವ ಅಳವಡದು.
ವೈರಾಗ್ಯವಿಲ್ಲದೆ ಜಂಗಮತತ್ವ ಅಳವಡದು.

ಧಾರ್ಮಿಕ ಮಹಾಪುರುಷರುಗಳಲ್ಲಿ ಭಕ್ತಿ ಜ್ಞಾನ ವೈರಾಗ್ಯಗಳು ತಲೆದೋರಿದಡೆ ಅಗ್ನಿಗೆ ಅಂಜುವ ಅರಳೆಯ ರಾಸಿಯಂತೆ ಸಮಾಜವು ಭಯದೊಡನೆ ಭಕ್ತಿ ಆಚಾರಣೆಗಳಲ್ಲಿ ತೊಡಗುವುದು.

ಭಕ್ತಿಯುಳ್ಳವರು ಗುರುವರ್ಗವೆಂದು ಪ್ರಕಟಮಾಡುತ್ತಿರಲಿಲ್ಲ. "ಷಡಕ್ಷರಿಜಯಂತಿಯ ಕಾರ್ಯನಿರ್ವಾಹಕ ಮಂಡಲಿ ದನಗೂರು, ಮಲವಳ್ಳಿ ತಾಲ್ಲೂಕ್" ರಿಂದ ಪ್ರಕಟ ಮಾಡಿ ತಂತಮ್ಮ ನಾಮಗಳನ್ನು ತೋರ್ಪಡಿಸಿದ್ದರೆ ಸಾಕಾಗುತ್ತಿರಲಿಲ್ಲವೇ ? ಗುರುವರ್ಗವೆಂದು ಪ್ರಕಟ ಮಾಡಲು ಭಕ್ತಮಂಡಲಿಯವರು ಅದಾವ ವರ್ಗ? ಅವರು ಗುರುಕರ ಜಾತರಲ್ಲವೇ ?

ರೇಣುಕಸಾಂಗತ್ಯಃ— ಹರನಾದೊಡಾಗಲಿ, ಗುರುವಾದೊಡಾಗಲಿ ನೆರೆಭಕ್ತಿಯಿಂದಲೇ ದೇವತ್ವ ದೊರೆಕೊಂಬುದು ಬರಿಯುವಾಗ ಭ್ರಮೆಯೊಳು ಎಸಗದು. ಎಂಬಂತೆ ಸಮಾಜೋದ್ಧಾರಕ್ಕಾಗಿಯೇ ನಿರ್ಮಿತವಾದ ಧಾರ್ಮಿಕ ಸಂಸ್ಥೆಗಳ ಅಧಿಕಾರಿಗಳನ್ನಾರಿಸಲು ವೀರಶೈವ ಧಾರ್ಮಿಕ ವಿಚಾರವೆಂದೊಡೆ

ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲದನುಭವದ ಆಚರಣೆಗಳಿರಬೇಡವೇ? ಅಂಥವರನ್ನೇ ಗುರುಜಂಗಮರೆಂದು ಸಂಸ್ಥೆಗಳಿಗೆ ನೇಮಿಸಬೇಕಾದುದು ಯುಕ್ತವಲ್ಲವೇ?

ಚನ್ನಬಸವ ಪೌರಾಣದ ದೀಕ್ಷಾ ಸಂಧಿ (ಪದ್ಯಃ-೩೫) ಹೇಳಿರುವುದು ಸತ್ಯವೋ, ಅಸತ್ಯವೋ?

ದೀ ಎಂಬ ಲಿಂಗಸಂಬಂಧದ ಕಾಲವಾವುದು

ಕ್ಷೇ ಎಂಬ ಜ್ಞಾನಾನುಭವದ ಕಾಲವಾವುದು.

ದೀಕ್ಷಾಗುರು, ಶೀಕ್ಷಾಗುರು, ಮೋಕ್ಷಾಗುರುವೆಂಬುವು ಹುಸಿಯೋ?

ಷಡಕ್ಷರೀ ಜಯಂತಿಯ ಕಾರ್ಯನಿರ್ವಾಹಕ ಮಂಡಲಿಯ ಗುರು ವರ್ಗದವರು ವೀರಶೈವ ಧಾರ್ಮಿಕ ಅಚ್ಛ ಸ್ವಚ್ಛ ಉಳ್ಳ ವಿಚಾರಗಳನ್ನು ಅರಿತು ಆಚರಿಸಿದ ಕಳೆಯು ಸಮಾಜದಲ್ಲಿ ಬೆಳಗಲೆಂಬುದೇ ನನ್ನ ಬಯಕೆ.

ಗುರುವಿನಾಚಾರ, ಲಿಂಗದಾಚಾರ, ಜಂಗಮದಾಚಾರ, ಪಾದೋದಕದಾಚಾರ, ಪ್ರಸಾದದಾಚಾರ, ಇಡೀ ಪಂಚಾಚಾರದ ವಿವರಣೆಯನ್ನು ಅನುಭವಿಗಳು ವಿವರಿಸಿರಿ. ಇದನ್ನು ವಿಚಾರದಿಂ ಆಚರಿಸದಿರ್ದೊಡೆ ಗುರುತ್ವವಿಲ್ಲ, ಲಿಂಗತ್ವವಿಲ್ಲ, ಜಂಗಮತತ್ವವಿಲ್ಲ. ಅಷ್ಟಾವರಣದ ಕೋಟೆಯೊಳು ಪೋಗದವರು ಆದಾವ ಶ್ರೇಷ್ಠತೆಯನ್ನು ಹೊಂದುವವರು ಪೇಳಿರಿ? ಗುರುವರ್ಗಕ್ಕೆ ಬೇರೆಯೇ? ಭಕ್ತಿವರ್ಗಕ್ಕೆ ಬೇರೆಯೇ?

ನೆನೆವುದರಿಂ ನಿರೀಕ್ಷಿಸುವುದತ್ಯಧಿಕಂ।
ನೆನಹಿಂ ನಿರೀಕ್ಷೆಯಿಂದನು ದಿವಸಂ ಸಮರ್ಚಿಸುವುದತ್ಯಧಿಕಂ
ನೆನಹಿಂ ನಿರೀಕ್ಷೆಯಿಂ ದನುದಿವಸಂ ಸಮರ್ಚಿಪುದರಿಂ
ಶಿವಲಿಂಗಮನಂಗದಲ್ಲಿ ಸುಮ್ಮನೆ ಧರಿಸಿರ್ಪುದತ್ಯಧಿಗಂ ಶಿವಾಧವಾ ॥

# ಅಕ್ಕನ ಬಾಳಿನ ಮಾಯೆ!

( ಲೇಖಕಃ— ಕರಿಬಸವ ಕುಮಾರ. )

'ದೇವರು ಇದ್ದಾನೆ' ಎಂದು ಒಪ್ಪಿದ ಜೀವಿಯ ಮನ ಉದ್ರೇಕ ಉನ್ಮಾದದಲ್ಲಿ ತೇಲಿ, ರಸವ ಸವಿದು ದೇವಧ್ಯಾನದ ಹೂವಾಗಿ ಪರಾಗವ ಪಡೆದು, ಅದರಲ್ಲಿಯೇ ದೇಹ, ಹೃದಯ, ಭಾವದುಂಬಿಗಳು ಕುಡಿಕುಡಿದು ಮತ್ತವಾಗಿ ಪುನೀತವಾಗುತ್ತವೆ.

"ದೇವರಿಲ್ಲ"ವೆಂಬ ನಾಸ್ತಿಕ ವಾದಕ್ಕೆ ಹೃದಯ ಆಸಕ್ತಿಯಾದಾಗ್ಗೆ ತತ್ವ-ಸತ್ವಗಳನ್ನೇ ತುಳಿದು ಪಂಥಗಳನ್ನು ಹಳಿದು, ಮತಗಳನ್ನು ಮೂಷಿಸಿ ಧರ್ಮವನ್ನು ದೂರೊಗೆದು ತನ್ನದೇ ಆದ ಹೆಡ್ಡತನದಲ್ಲಿ ನಡೆವಾಗ, ಬಾಳು ಬೆಳಕಾಗದೆ, ನಿತ್ಯ ಜೀವನದಲ್ಲಿ ಬರುವ ದುಷ್ಟ ದುಶ್ಚಟಗಳಿಗೆ ತುತ್ತಾಗಿ, ವಿಚಾರ ಶೂನ್ಯತೆ ಪಡೆದು, ಗಾಸಿಯಾಗಿಮಣ್ಣು ಬಾಯನು ಸೇರಿ ಹೋಗುವದು ಆ ಜೀವ!

ಆದ್ದರಿಂದ ಪಾಂಡಿತ್ಯ ದರುಶನದಲ್ಲಿ ದೇವಚಿತ್ರವಿದೆ. ಆಗ ಜೀವನದ ಹೆದ್ದಾರಿ ಸಾಧನೆಯ ಸೂತ್ರವನ್ನೇ ಹಿಡಿಯಬೇಕು. ಸಾಧನೆಯ ರಂಗ ವಿಶಾಲವಾಗಬೇಕು. ಜೀವನದಲ್ಲಿ ಬುದಬುದನೆ ಮೇಲೇಳುವ ಕಷ್ಟದ ನೊರೆಗಳನ್ನು .ತೇಲಿಸಿಕೊಂಡು ಹೋಗುವ ಹಿರಿತೊರೆ ಆಗಬೇಕು. ಆಗ ಹೃದಯ ತಟ್ಟಿ. ದುಡುಕುವ ಬಿರುಗಾಳಿಗಳಿಗೆ ಎದೆಗೊಡುವ ಅದ್ರಿ ಆಗಿರಬೇಕು.

ಶರಣಶರಣೆಯರು ನಿತ್ಯ ಸಾಧಕರು, ಕೆಚ್ಚೆದೆಯ ಹೃದಯಿಗಳು ಎಂದು ಅವರು ಕಂಡ ಭವ್ಯ ದೃಶ್ಯಗಳಲ್ಲಿಯು ವಚನ ಮಾಣಿಕಗಳಿಂದ ಕಂಡುಕೊಳ್ಳಬಹುದು. ಶರಣ-ಶರಣೆಯರು ಆಶೆಪಟ್ಟು ಅಲೆಯುವ ನರಿ-ನಾಯಿಗಳಂಥ ಕುಳ್ಳ ಮನದವರಲ್ಲ. ಶರಣೆಯರು ದಿವ್ಯ. ಜೀವಿಗಳು, ಕಟ್ಟಾಚಾರಿಗಳು. ಆದ್ದರಿಂದಲೇ; "ಅಯ್ಯಾ ನೀ ಕೇಳಿದರೆ ಕೇಳು; ಕೇಳದಿರ್ದಡೆ ಮಾಣು. ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯಾ." ಎಂಬ ಹೃದಯ ವಿಶಾಲತೆ ಇವೆ. ಇದರಲ್ಲಿ ವಿಶ್ವಾಸ, ನಂಬಿಗೆ ಅಂಕುರಗೊಂಡಿವೆ. ನಿತ್ಯ

ಕಾಯಕದಲ್ಲಿಯ ಸತ್ಯಸ್ತುತಿ ಕಳೆಗೊಂಡಿದೆ. ಈ ವಚನದಲ್ಲಿ ಅಕ್ಕನಬಾಳು ಇದಾಗಿದೆ.

ಬಾಳಿನಲ್ಲಿ ಬರುವ ಗೆಲುವಿಗೆ ಹಿಗ್ಗಿಲ್ಲ. ಕೆಡಕಿಗೆ ತಗ್ಗಿಲ್ಲ. ಆತನೇ ಎಲ್ಲವೂ ಎಂಬ ಪೂರ್ಣಾರ್ಪಣ ಸ್ಥಿರವಾಗಿ ನಿಂತಿದೆ. ಅಕ್ಕನ ಬಾಳಿನಲ್ಲಿ.

ಆ ಬಾಲಭಾವದ ಅಕ್ಕನ ಜೀವ, ಮಾಯೆಯ ಹಾಸ್ಯ, ರೌದ್ರ, ಬೀಭತ್ಸ ನೋಟಕ್ಕೆ ಜಲ್ಲೆನ್ನದೆ ಮುನ್ನುಗ್ಗಿದೆ. ಇರಿಯುವ ಅಲಗನ್ನೇ-ಅರಿದು ಅದರ ಏರಾಟ ಹೋರಾಟಕ್ಕೆ ಎದೆಗೊಟ್ಟು ಸಹಿಸಿ ಪಾರಾಗಿದೆ. ಆ ಅಕ್ಕನ ಕೆಚ್ಚೆದೆ ಮಾಯೆಯು ಚುಚ್ಚುವ ಮುಳ್ಳುಗಳನ್ನೆಣಿಸಿ, ಅವುಗಳ ಮೊನೆಯನ್ನೇ ಮುರಿದು "ಶರಣಸತಿ-ಲಿಂಗಪತಿ" ಎಂದು ಬಾಳಿದೆ.

"ಎನ್ನ ಮಾಯೆಯ ಮದವ ಮುರಿಯಯ್ಯಾ! ಎನ್ನ ಕಾಯದ ಕತ್ತಲೆ ಕಳೆಯಯ್ಯಾ !! ಎನ್ನ ಜೀವದ ಜಂಜಡ ಮಾಣಿಸಯ್ಯಾ. ಎನ್ನ ಚನ್ನಮಲ್ಲಿಕಾರ್ಜುನ ದೇವಯ್ಯಾ. ಎನ್ನ ಸುತ್ತಿದ ಪ್ರಪಂಚವ ಬಿಡಿಸು. ನಿಮ್ಮ ಧರ್ಮ." ಮದವೇ ಹೃದಯ ಮನೆಯನ್ನು ಹೊಕ್ಕು ಮನವನ್ನೇ ಮುತ್ತಿದಾಗ, ಅದರ ಹೇಸಿ ದುಷ್ಟ ಕೀಳು ಬಾಳಿಗೆ ಬೇಸತ್ತು, ಎನ್ನ ಸುತ್ತಿದ ಪ್ರಪಂಚವ ಬಿಡಿಸು" ಎಂದು ಮೊರೆಯಿಟ್ಟಿದೆ.

ಮಾಯೆ ಎಂಬುದು ದುರ್ಭಾವನೆ, ದುರ್ಮೋಹ, ಶರೀರದ ಮೇಲಣ ಮೋಹ, ಆಶೆ, ಕಳ್ಳ ಮನಸ್ಸಿನ ಚಂಚಲ ನಾಟ್ಯ. ಇವು ಚಿತ್ರವಿಚಿತ್ರವಾಗಿ ರಚಿತವಾದ ಬಲೆಯಲ್ಲಿ ಉರುಳಿಸಿ, ಥಳಿಸಿ, ಅಳಿಸಿ, ಭಾದೆಯ ತಾಳಲಾರದೆ ರೋದಿಸುವಂತೆ ಮಾಡುತ್ತದೆ. ಆದ್ದರಿಂದ ಅಕ್ಕ "ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ. ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ. ಮನಕ್ಕೆ ನೆನಹಾಗಿ ಕಾಡಿತ್ತು ಮಾಯೆ. ನೆನಹಿಂಗೆ ಅರಿವಾಗಿ ಕಾಡಿತ್ತು ಮಾಯೆ. ಜಗದ ಜಂಗುಳಿಗಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ. ಚನ್ನಮಲ್ಲಿಕಾರ್ಜುನ ನೀನೊಡ್ಡಿದ ಮಾಯೆಯನಾರೂ ಗೆಲಲಾರರು." ಎಂದು ತನ್ನ ಪ್ರಭುವಿನಲ್ಲಿ ಬೇಡಿಕೊಂಡು ತನ್ನ ಹೃದಯುವನ್ನು ಬಲಪಡಿಸಿಕೊಳ್ಳುತ್ತಾಳೆ.

ಅಕ್ಕ ಹೀಗನ್ನುವಲ್ಲಿ ಒಂದು ತೆರನಾದ ವೈಶಿಷ್ಟ್ಯವಿದೆ. ಮಾಯೆ ಯಾವದು ? ಮಾಯೆಯ ಹಾವ ಭಾವಗಳಾವವು ? ಅದರ ಸ್ಥಳವೆಲ್ಲಿ ?

ಎಂಬುದನ್ನು ಅರಿತು, ಅದನ್ನು ಸದೆಬಡೆಯಲು ಹೆಣಗುತ್ತಾಳೆ. ಜಗದ ಜಂಗುಳಿ ಬಾಳಿನ ಕೊಳಚೆಯಲ್ಲಿಯೇ ಕೊಳೆಯುತ್ತದೆ. ಅದಕ್ಕೆ ಅಕ್ಕ- "ಜಗದ ಜಂಗುಳಿಗಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ!" ಎಂದು ಹೇಳುತ್ತಾಳೆ.

ಜನಸಾಮಾನ್ಯಕ್ಕೆ ಮಾಯೆ ಕಾಡುತ್ತದೆ ಎಂದು ಜೋಯಿಸರು, ಅಯ್ಯನವರು ಒತ್ತಿ ಒತ್ತಿ ಹೇಳಿ, ತಾಮ್ರದ ತಗಡಿನಲ್ಲಿ ಕಾಗದ ಚೂರು ಸುರುವಿ ಬುರುಡೆ ಮಾಡಿ ಕೈಯಲ್ಲಿಯೋ ಕೊರಳಲ್ಲಿಯೋ ಕಟ್ಟಿ ಹಣ ಸೆಳೆದುಕೊಳ್ಳುತ್ತಾರೆ. ಅದು ಮಾಯೆಯಲ್ಲ. ಹಸಿದ ಹೊಟ್ಟೆಗಾಗಿ ಅನ್ನ ದೊರಕಿಸುವ ಚೋರ ವಿದ್ಯೆ. ಶರಣರ ಬಾಳಿನಲ್ಲಿ ಇಂಥ ಮಾಯೆ ಹಣಿಕಿ ಕೂಡಾ ಹಾಕುವದಿಲ್ಲ. ಆದರೆ ಅನುಭವದಿಂದ ತಿಳಿದು ಆಚಾರವಂತ ರಾಗದಿರುವ ಜನಸಾಮಾನ್ಯ ಮತ್ತು ಹೊಟ್ಟೆಗಾಗಿ ಎರಡು ರಟ್ಟಿನ ತುಣು ಕಿನಲ್ಲಿ ತ್ರಾಮ್ರದ ಚೂರನ್ನು ಹಾಕಿಕೊಂಡು ಅಲೆಯುವ ಅಯ್ಯ-ಜೋಯಿ ಸರು ಇವರು ಇವಕ್ಕೆ ಮರುಳಾಗಿ ಹೋಗಿದ್ದಾರೆ.

ಅಕ್ಕನು ಮಾಯೆಯ ಹಿರಿದಾದ ಮೆಟ್ಟಲನ್ನೇ ಬಯಲಿಗೆಳೆಯು ತ್ತಾಳೆ. "ಪುರುಷನ ಮುಂದೆ ಮಾಯೆ ಸ್ತ್ರೀ ಎಂಬ ಅಭಿಮಾನವಾಗಿ ಕಾಡಿತ್ತು! ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡಿತ್ತು ನೋಡಾ! ಲೋಕವೆಂಬ ಮಾಯೆಗೆ ಶರಣಚಾರಿತ್ರ ಮರು ಳಾಗಿ ತೋರುವದು ನೋಡಾ! ಚನ್ನಮಲ್ಲಿಕಾರ್ಜುನನೊಲಿದ ಶರಣಂಗೆ ಮಾಯೆ ಇಲ್ಲ. ಮರಹಿಲ್ಲ. ಅಭಿಮಾನವೂ ಇಲ್ಲ." ಪೂರ್ಣ ವಿಶ್ವವೇ ಇದೊಂದು ಮಾಯೆಯ ಹಸಿವಿಗೆ ತುತ್ತಾಗಿದೆ. ಈ ಮಾಯೆಯನ್ನು ಸೋಲಿಸಿ ಹೊರಬಂದ ಬಾಳೇ ಶರಣನ ಬಾಳು. ಆ ಶರಣನ ಬಾಳೇ. ಲೋಕವೆಂಬ ಮಾಯೆಗೆ ವಿಚಿತ್ರವಾಗಿ ತೋರುತ್ತದೆ. ಇದಕ್ಕೆ ಬೇಕು ಅಚಲವಾದ ಶ್ರದ್ಧೆ. ಸಂದಿ-ಗೊಂದಿಗಳಲ್ಲಿ ನುಗ್ಗಿ ಮುಂದೆ ಧುಮುಕಬೇಕು. ಆಗ ಅಂಥ ಶರಣತೆಗೆ ಮಾಯೆಯಿಲ್ಲ, ಅಭಿಮಾನವೂ ಇಲ್ಲ, ಎಂದು ಅಕ್ಕನ ಅಮೃತವಾಣಿ ಉಸುರಿದೆ.

"*He can only put the growing soul into the way of its own perfection.*" ಭಗವಾನ್ ಅರವಿಂದರು ಹೇಳಿ ದಂತೆ ಆತ್ಮಕ್ಕೆ ಚೇತನ ಬರುತ್ತದೆ. ಬಾಳಿಗೆ ಗೆಲುವಿನ ಹೊಂಬೆಳಕು ಚಿಮುಕುತ್ತದೆ.

ಆ ದಿವ್ಯತೆಯು ಬಾಳಿನಲ್ಲಿ ಸೂಕ್ಷ್ಮಸಿರೀಕ್ಷಣೆಯ ಸತ್ಯದಲ್ಲಿ ಅಕ್ಕನ ಹೃದಯ ಅಪಗುತ್ತದೆ. ಆಗ "ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ, ಕೀವದ ಹಡಿಕೆ. ಸುಡಲೀ ದೇಹವ. ಒಡಲವಿಡಿದು ಕೆಡದಿರು. ಚನ್ನಮಲ್ಲಿಕಾರ್ಜುನನರಿ ಮರುಳೇ." ಹೀಗೆ ಅಕ್ಕನಿಗೆ ಶರೀರವೇ ಒಂದು ಅಸಹ್ಯವಾದ ಹೊಲಸಿನ ಕೊಂಡವಾಗಿದೆ. ಆ ವಿರಾಗಿಣಿಗೆ ಶರೀರದ ಮೋಹ ಕಡಿದು ಹೋಗಿದೆ.

ಅಕ್ಕನು, ಮಾಯೆಯನ್ನು ಅರುವಿನ ಬಲೆಯಲ್ಲಿ ಕೆಡಹಿ ತನ್ನ ಜೀವನದ ಮಟ್ಟವನ್ನು ಮೇಲಕ್ಕೇರಿಸಿ ಶರಣ ಸಾಮ್ರಾಜ್ಯದಲ್ಲಿ ಮೆರೆದು ಹೋಗಿದ್ದಾಳೆ. ಅಕ್ಕನ ಬಾಳು ಸಾಧನೆಯ ತಿರುಳು, ರತ್ನಪ್ರಭೆಯ ಬೆಳಗು, ತುಂಬಿ ತಟಕುವ ಇನಿಜೇನು. ಅದನ್ನು ಸವಿದಲ್ಲಿ ಹೃದಯದ ವಾಸನಾ ಕ್ಷಯ ಸರಿದು ಹೋಗುತ್ತದೆ. ಆ ಸ್ಥಿತಿ-ಗತಿಗಳನ್ನು ಕಾಣುವ ಹೃದಯ ಬೇಕು. ಜೀವನವು ಸದ್ಭಾವನೆಯ ಸಂಗಮ ಕ್ಷೇತ್ರವಾಗಬೇಕು.

---

## ಶಿವಾನುಭವ ಸಂಘಗಳ ಸ್ಥಾಪನೆ.

(ಲೇಖಕಃ— ರಾ। ಬ। ಫ. ಗು. ಹಳಕಟ್ಟಿ, ವಿಜಾಪುರ. )

೨೦ ವರ್ಷಗಳ ಹಿಂದೆ ಶಿವಶರಣರಿಂದಾದ ವಚನಶಾಸ್ತ್ರದ ಮಹತ್ವವು ಎಷ್ಟಿದೆಂಬುದು ಶಿವಾನುಭವ ಪತ್ರಿಕೆಯ ಮೂಲಕ ಕರ್ನಾಟಕಸ್ತರ ಲಕ್ಷಕ್ಕೆ ತರಲ್ಪಟ್ಟಿತು. ಈ ಶಾಸ್ತ್ರದಲ್ಲಿ ಅಡಕವಾಗಿರುವ ತತ್ವಗಳು ಒಂದು ವ್ಯವಸ್ಥಿತ ಸ್ವರೂಪದಲ್ಲಿ ವಾಚಕರ ಲಕ್ಷಕ್ಕೆ ಅನೇಕ ಗ್ರಂಥಗಳ ದ್ವಾರಾ ತರಲ್ಪಡುತ್ತಾ ಇವೆ. ಈ ಗ್ರಂಥಗಳು ಶಿವಾನುಭವ ಗ್ರಂಥ ಮಾಲೆಯಲ್ಲಿ ಪ್ರಕಟವಾಗಿರುತ್ತವೆ. ಇವುಗಳನ್ನು ಆಧಾರವಾಗಿಟ್ಟುಕೊಂಡು ಅನೇಕ ಲೇಖಗಳು ವೃತ್ತ ಪತ್ರಿಕೆಗಳಲ್ಲಿಯೂ ಮಾಸಿಕಗಳಲ್ಲಿಯೂ ಪ್ರಸಿದ್ಧವಾಗುತ್ತ ಬಂದವು. ಆದರೆ ಇಷ್ಟರಿಂದಲೇ ಶಿವಾನುಭವ ಶಾಸ್ತ್ರದ ವಿಷಯವಾಗಿ ಮಾಡತಕ್ಕ ಸಂಶೋಧನೆಗಳು ಮತ್ತು ಅಭ್ಯಾಸಗಳು ಮುಗಿದಿರುತ್ತವೆಂದು ಅನೇಕರಿಗೆ ಭಾಸವಾದಂತೆ ನಮಗೆ ತೋರುತ್ತದೆ. ಆದರೆ ಈ ತಿಳವಳಿಕೆಯು ತಪ್ಪು ಇರುತ್ತ

ದೆಂದು ನಾವು ಹೇಳಬಯಸುತ್ತೇವೆ. ಈ ವರೆಗೆ ಶಿವಶರಣರ ವಾಙ್ಮಯಾತ್ಮಕ ಮತ್ತು ಸಾಮಾಜಿಕ ವಿಚಾರಗಳು ಮಾತ್ರ ಪ್ರಕಟವಾಗಿರುತ್ತವೆಯೇ ಹೊರತು ಅವರ ಮುಖ್ಯ ಶಾಸ್ತ್ರವು ಅಂದರೆ ಷಟ್‌ಸ್ಥಲ ಸಿದ್ಧಾಂತವು ಇನ್ನೂ ಸಂಶೋಧಿಸಲ್ಪಟ್ಟಿಲ್ಲ. ಇಷ್ಟೇ ಅಲ್ಲ, ಅದರಲ್ಲಿ ನಾವು ಸ್ವಲ್ಪಾದರೂ ಕೂಡ ಮುಂದುವರಿದಿಲ್ಲೆಂದು ಹೇಳುವದು ಅವಶ್ಯವಾಗಿದೆ.

ಈ ಶಿವಾನುಭವ ಶಾಸ್ತ್ರ ಅಥವಾ ಷಟ್‌ಸ್ಥಲ ಸಿದ್ಧಾಂತದ ಮರ್ಮಗಳನ್ನು ತಿಳಿದವರ ಸಂಖ್ಯೆಯು ಇನ್ನೂ ಅತ್ಯಲ್ಪವಾಗಿರುತ್ತದೆ. ಈಗಿನ ಕಾಲದಲ್ಲಿ ಈ ಜ್ಞಾನವು ಇಲ್ಲವೆಂತಲೇ ಹೇಳಿದಲ್ಲಿ ತಪ್ಪಾಗಲಾರದು. ಈ ಸಿದ್ಧಾಂತದ ಶಬ್ದಗಳ ಪರಿಚಯವು ಮಾತ್ರ ಅನೇಕರಿಗೆ ಇರಬಹುದು. ಆದರೆ ಈ ಶಬ್ದಗಳ ವ್ಯಾಖ್ಯೆಗಳೇನು, ಅವುಗಳು ಏನನ್ನು ನಿರೂಪಿಸುತ್ತವೆ, ಈ ವಿಷಯಗಳ ಪರಸ್ಪರ ಸಂಬಂಧವಾವುದು, ಈ ವಿಷಯಗಳ ತಿಳುವಳಿಕೆಯು ವೀರಶೈವ ಸಮಾಜದಲ್ಲಿ ಎಷ್ಟು ಮಾತ್ರವೂ ಇರುವದಿಲ್ಲ. ಈ ಶಾಸ್ತ್ರವು ಇನ್ನೂ ಸಂಶೋಧಿಸಲ್ಪಟ್ಟಿಲ್ಲ. ಈ ಸ್ಥಿತಿಯು ನಮಗೆ ತೋರಿಬಂದದ್ದರಿಂದ ಈ ಶಾಸ್ತ್ರದ ತತ್ವಗಳನ್ನು ನಿರೂಪಿಸುವ ಗ್ರಂಥಗಳ ಭಾಗಗಳನ್ನು ಆಯ್ದು ವಚನಶಾಸ್ತ್ರಸಾರ ಭಾಗ ೨ (ವೀರಶೈವ ಸಿದ್ಧಾಂತ) ಎಂಬ ಗ್ರಂಥದಲ್ಲಿ ಅವುಗಳನ್ನು ಕ್ರಮಗೊಳಿಸಿ ಪ್ರಸಿದ್ಧಿಸಿದೆವು. ಮುಂದೆ ಆಚಾರ ವಿಷಯಕ ಭಾಗಗಳನ್ನು ಆಯ್ದು ವಚನ ಶಾಸ್ತ್ರ ಸಾರ ಭಾಗ ೩ ಪೂರ್ವಾರ್ಧ ಮತ್ತು ಉತ್ತರಾರ್ಧ (ಇದು ಪ್ರಕಟವಾಗುತ್ತ ಇದೆ.) ಎಂಬ ಗ್ರಂಥಗಳ ದ್ವಾರಾ ಪ್ರಸಿದ್ಧಿಸುತ್ತ ಬಂದಿರುವೆವು. ಆದರೆ ಈ ಮುಂದಿನ ಭಾಗಗಳಲ್ಲಿರುವ ವಿಷಯಗಳು ನಮ್ಮ ವೀರಶೈವರಿಗೆ ಇನ್ನೂ ತೀರ ಅಪರಿಚಿತವಾಗಿರುತ್ತವೆ. ಇವು ಅವರಿಗೆ ಏನೂ ತಿಳಿಯುವದಿಲ್ಲಾದ್ದರಿಂದ ಅವುಗಳನ್ನು ಅವರು ಲಕ್ಷಿಸುವದೇ ಇಲ್ಲ! ಇದರಿಂದ ಕೇವಲ ವಾಙ್ಮಯಾತ್ಮಕ ಮತ್ತು ಸಾಮಾಜಿಕ ವಿಷಯಗಳು ಈ ವರೆಗೆ ಪ್ರಕಟವಾದರೂ ವೀರಶೈವವೆಂಬುದು ಎತ್ತರಲ್ಲಿ ಇದೆ ಎಂಬುದರ ಪರಿಚಯವು ಮಾತ್ರ ೨೦ ವರ್ಷಗಳಾದರೂ ಕೂಡ ಸಮಾಜದಲ್ಲಿ ಉಂಟಾಗಿರುವದಿಲ್ಲವೆಂದು ನಾವು ವಿಷಾದಪೂರ್ವಕವಾಗಿ ಹೇಳಬೇಕಾಗಿದೆ.

ಈ ಮುಂದಿನ ವಿಭಾಗಗಳಲ್ಲಿಯ ವಿಷಯಗಳ ನಿಜಾಂಶಗಳು ವಾಚಕರಿಗೆ ತಿಳಿಯಬೇಕೆಂದು ನಾವು "ಶಿವಾನುಭವ ಶಬ್ದಕೋಶ'

ಎಂಬ ಗ್ರಂಥವನ್ನು ಮೊದಲು ಹೊರಪಡಿಸಿದೆವು. ಈ ಗ್ರಂಥವು ಷಟ್‌ಸ್ಥಲ ಶಾಸ್ತ್ರದ ಸಾರವಿದ್ದು ಅದು ವಚನಶಾಸ್ತ್ರಸಾರ ಭಾಗ ೨ ಮತ್ತು ೩ ಈ ಗ್ರಂಥಗಳನ್ನು ಅವಲಂಬಿಸಿ ಬರೆದದ್ದಾಗಿದೆ. ಈ ಗ್ರಂಥವಲ್ಲದೆ ಸಂಗನಬಸವೇಶ್ವರವಚನ, ಶಿವಾನುಭವ ಸೃಷ್ಟಿಯ ವಚನಗಳು, ಮಹಾನುಭವ ಪ್ರಕಾಶಿಕೆ, ಶೂನ್ಯಸಂಪಾದನೆ, ಶಿವಾನುಭವಸೂತ್ರಸಾರ, ಅವಧೂತಗೀತೆ, ಸಿದ್ಧಲಿಂಗ ಏಕೋತ್ತರ ಶತಸ್ಥಲ ಈ ಮಹತ್ವದ ಷಟ್‌ಸ್ಥಲಾತ್ಮಕ ಗ್ರಂಥಗಳು ಪ್ರಕಟವಾಗಿವೆ. ಹೀಗೆ ಅವು ಪ್ರಕಟವಾದರೂ ವೀರಶೈವ ಧರ್ಮದ ತತ್ವಗಳು ಮಾತ್ರ ಇನ್ನೂ ಅಜ್ಞಾತಾವಸ್ಥೆಯಲ್ಲಿಯೇ ಉಳಿದಿರುತ್ತವೆ.

ಈ ಸ್ಥಿತಿಯನ್ನು ದೂರ ಮಾಡಬೇಕೆಂತಲೂ ಈ ಸಿದ್ಧಾಂತದ ಅಭ್ಯಾಸವು ಎಲ್ಲ ಕಡೆಗೂ ನಡೆಯಬೇಕೆಂತಲೂ ನಾವು ೫-೬ ವರ್ಷಗಳ ಹಿಂದೆ 'ಶಿವಾನುಭವ ಸಂಘ'ಗಳು ಅಥವಾ 'ಶಿವಾನುಭವ ಮಂಟಪಗಳು' ಇವುಗಳನ್ನು ಸ್ಥಾಪಿಸಬೇಕೆಂಬ ಸೂಚನೆಗಳನ್ನು ನಾವು ನಮ್ಮ ಪತ್ರಿಕೆಯ ದ್ವಾರಾ ಮಾಡಲಾಗಿ ಅನೇಕ ಕಡೆಗೆ ಅವು ಸ್ಥಾಪಿಸಲ್ಪಟ್ಟವು. ಅವುಗಳನ್ನು ಸಂಘಟಿಸಬೇಕೆಂದು ನಾವು ಮುಂದೆ ಪ್ರಯತ್ನಿಸುವಷ್ಟರಲ್ಲಿ ಈ ಕಾರ್ಯವನ್ನು ತಾವು ಮುಂದುವರಿಸುವೆವೆಂದು ಧಾರವಾಡದಲ್ಲಿಯ ಕೆಲ ಮಹನೀಯರು ಮುಂದೆ ಬಂದರು. ಆದುದರಿಂದ ನಾವು ಈ ಕಾರ್ಯವನ್ನು ಅಲ್ಲಿಯೇ ನಿಲ್ಲಿಸಬೇಕಾಯಿತು. ಆದರೆ ಈ ಮಹನೀಯರು ಈ ಶಾಸ್ತ್ರದ ಬೆಳವಣಿಗೆಗೋಸ್ಕರ ಯಾವ ಕಾರ್ಯಕ್ರಮವನ್ನು ಅನುಸರಿಸದೆ ವರ್ಷಕ್ಕೊಮ್ಮೆ ಎರಡು ವರ್ಷಕ್ಕೊಮ್ಮೆ ದೊಡ್ಡ ಪರಿಷತ್ತುಗಳನ್ನು ಮಾತ್ರ ನೆರಿಸಿ ಈ ವರೆಗೆ ಪ್ರಕಟಿಸಲ್ಪಟ್ಟ ಕೇವಲ ಬಾಹ್ಯ ವಿಷಯಗಳ ಬಗ್ಗೆ ಸಾಮಾನ್ಯ ವ್ಯಾಖ್ಯಾನಗಳನ್ನು ಏರ್ಪಡಿಸುತ್ತಲಿದ್ದಾರೆ. ಆದರೆ ವಚನಶಾಸ್ತ್ರವು ಬಹು ಗಂಭೀರವಾದ ವಿಷಯವು. , ಅದರ ತತ್ವಗಳು ಈ ರೀತಿಯ ಪ್ರಯತ್ನಗಳಿಂದ ಫಲಿಸಲಾರವೆಂದು ನಮಗೆ ತೋರುತ್ತದೆ. ಅವುಗಳ ವಿಷಯವಾಗಿ ನಿರಂತರ ಪರಿಶ್ರಮವೂ ಅಭ್ಯಾಸವೂ ಬೇಕು.

ಶಿವಾನುಭವ ಸಂಘಗಳನ್ನು ಸ್ಥಾಪಿಸುವಲ್ಲಿ ನಮ್ಮ ಉದ್ದೇಶವು ಶಿವಾನುಭವ ತತ್ವಗಳ ಅಭ್ಯಾಸವನ್ನು ಮಾಡಲು ಉದ್ದೇಶಪಟ್ಟವರನ್ನು ಕಂಡುಹಿಡಿಯುವದು ಮೊದಲಿನ ಕಾರ್ಯವಾಗಿತ್ತು. ಇವರಾರೆಂಬು

ದನ್ನು ತಿಳಿದ ಬಳಿಕ ಅವರಲ್ಲಿ ಪರಸ್ಪರತೆ ಮತ್ತು ಸಹಕಾರ ಇವುಗಳನ್ನು ಉಂಟುಮಾಡುವದು ಅದರ ಮುಂದಿನ ಕಾರ್ಯವಾಗಿತ್ತು. ಈ ಉದ್ದೇಶಗಳುಳ್ಳವರಾಗಿ ವೀರಶೈವ ಸಮಾಜದಲ್ಲೆಲ್ಲ ಶಿವಾನುಭವ ಸಂಘಗಳನ್ನು ಸ್ಥಾಪಿಸಬೇಕೆಂದು ನಾವು ಮೊದಲಿಗೆ ಸೂಚಿಸಿದೆವು. ಈ ಕಾರ್ಯವನ್ನು ಎಲ್ಲ ಕಡೆಗೂ ಶೀಘ್ರವಾಗಿ ಈಗ ಕೈಕೊಳ್ಳಬೇಕೆಂದು ನಾವು ಪುನಃ ಎಲ್ಲರಿಗೂ ಸೂಚಿಸುತ್ತೇವೆ.

ಈ ಕಾರ್ಯಕ್ಕೆ ಹಣ ಬೇಡ, ಮೆಂಬರರ ಚಂದಾ ಬೇಡ, ಆದರೆ ವಿಷಯ ತಿಳಿಯಬೇಕೆಂಬುವವರು ಬೇಕು. ಇವರೇ ಇವುಗಳ ಸಭಾಸದರೆಂದು ಭಾವಿಸಿ ಕಾರ್ಯ ಮಾಡುವದು ಯುಕ್ತವಾಗಿದೆ.

ಈ ಧ್ಯೇಯವನ್ನು ಇಟ್ಟುಕೊಂಡು ಶಿವಾನುಭವ ಸಂಸ್ಥೆಗಳು ನಾಡಿನಲ್ಲೆಲ್ಲ ಮೊದಲು ಪ್ರಸಾರವಾಗಬೇಕು. ಈ ಸಂಸ್ಥೆಗಳಲ್ಲಿ ಯಾವವು ಚನ್ನಾಗಿ ಕಾರ್ಯಮಾಡುತ್ತವೆಯೋ ಅವುಗಳಲ್ಲಿ ಒಂದು ಸಂಘಟನೆಯನ್ನುಂಟು ಮಾಡುವದು ಮುಂದಿನ ಕಾರ್ಯವು. ಇಂಥ ಸಂಘಟನೆಯುಂಟಾದ ಬಳಿಕ ಇದರ ಮೂಲಕ ಷಟ್‌ಸ್ಥಲ ಸಂಶೋಧನ ಕಾರ್ಯಗಳೂ, ಪ್ರಚಾರ ಕಾರ್ಯಗಳೂ ನಡಿಯಬೇಕು. ಈ ಮಾರ್ಗ ಒಂದೇ ಉಳಿದಿದ್ದು ಈ ಸಂಗತಿಯನ್ನು ವಾಚಕರು ಲಕ್ಷಿಸಿ ಇದರಲ್ಲಿ ಅವರು ತೊಡಗಬೇಕೆಂದು ನನ್ನ ವಿನಂತಿ ಇದೆ. ಅವರಿಗೋಸ್ಕರ ನಾವು ವಿಷಯಗಳ ಸೂಚೀ ಪತ್ರಿಕೆಯನ್ನು ಕೆಳಗೆ ವಿವರಿಸಿದ್ದೇವೆ.

## ವಿಷಯಗಳ ಸೂಚೀ ಪತ್ರಿಕೆ.

೧ ವೀರಶೈವವು ವಿಶ್ವಧರ್ಮವಾಗಲು ಯೋಗ್ಯವೋ ಹೇಗೆ?

೨ ವೀರಶೈವ ಧರ್ಮದ ವೈಶಿಷ್ಟ್ಯಗಳು

೩ ಪಂಚಾಚಾರಗಳ ಸ್ವರೂಪ ಮತ್ತು ಅವು ಸಮಾಜದ ಪ್ರಗತಿಗೆ ಹೇಗೆ ಸಾಧನಗಳು?

೪ ವೀರಶೈವ ಮತ್ತು ಸಮಾಜವಾದದ ತತ್ವಗಳು

೫ ವೀರಶೈವರಲ್ಲಿ ಅಹಿಂಸಾ ಧರ್ಮ—ದಸರಯ್ಯ ಮತ್ತು ಬಡಿಹೋರಿ ಬ್ರಹ್ಮಯ್ಯನ ಚರಿತ್ರೆಗಳು

೬ ದುರಾಚಾರಿಗಳನ್ನು ಸದಾಚಾರಿಗಳನ್ನಾಗಿ ಮಾಡುವ ಶಿವಶರಣರ ಕಾರ್ಯ ಪದ್ಧತಿಗಳು— ಹೆಂಡದ ಮಾರಯ್ಯನ ನಡೆ

## ಶಿವಾನುಭವ ಪತ್ರಿಕೆಗೆ ಸಹಾಯ ಧನ.

ಕೆಳಗೆ ಕಾಣಿಸಿದ ಮಹನೀಯರು ಶಿವಾನುಭವ ಪತ್ರಿಕೆಗೆ ಸಹಾಯ್ಯ ಧನವನ್ನು ಕಳಿಸಿ ಕೊಟ್ಟಿದ್ದು ಇದಕ್ಕೋಸ್ಕರ ನಾವು ಅವರಿಗೆ ಅತ್ಯಂತ ಋಣಿಯಾಗಿದ್ದೇವೆ. ಅವರು ಯಾರೆಂದರೆ:— ರೂ.

| | | | |
|---|---|---|---|
| (೧) | ಮ. ರಾ. ರಾ. ಶಿವಪ್ಪ ಬಸಪ್ಪ ಜಿಗಳೂರು, | ಮು. ಹುಬ್ಬಳ್ಳಿ | ೧೫ |
| (೨) | ,, ಎಸ್. ಎಫ್. ಹೂಗಾರ | ,, | ೨ |
| (೩) | ,, ಸಂಗಪ್ಪ ಶಿಗ್ಗಲಿ | ,, | ೧ |

ಸುದವೆತ್ತಿದಲ್ಲಿ ಕಾಮ್ಯಾಸಭರಿತನಾಗಿ ಕರಿಸಬೇಕು, ನೋಡಬೇಕು, ನುಡಿಸಬೇಕು ಎನುತಿಹನೆಂಬ ಅಗ್ನಿಯ ಮದಗುಣವು ನಷ್ಟವಾಗಿ ಹೋಗಿ ಪ್ರಸಾದಿಸ್ಥಲಪಸಂಗಂಗೊಂಡುದೀಗ ಇಷ್ಟರ ಸಾಧನದಿಂದ ಅಗ್ನಿಯ ಮದಗುಣ ಅಂಶಗುಣಂಗಳಳಿದು ಚಿದಗ್ನಿ ಸ್ವರೂಪಿನಿಂದ ಪ್ರಸಾದಿಗಂಗವಾಗಲು ಅಂತಪ್ಪ ಪರಾತ್ಪರವಾದ ಶಿವಪ್ರಸಾದಿಸ್ಥಲವನೊಡಲ ಮಾಡಿಕೊಂಡು ಆಚರಿಸುವಂತಹದು ತಾನೇ ನಿರಹಂಕಾರದ ನೆಲೆಯು. ಅಹಂಕಾರವಳಿದು ನಿರಹಂಕಾರವೆಂಬ ಕರಕಮಲಕ್ಕೆ ಪರಮಪ್ರಕಾಶ ಸ್ವರೂಪವಾದ ಶಿವಲಿಂಗವು ಬಂದು ನೆಲೆಗೊಂಬಂತಹ ನಿಲುಕಡೆಯು.

---

## ಅನಾಹತ ಚಕ್ರದಲ್ಲಿ ಜಂಗಮಲಿಂಗದ ಉದ್ಭವವು.

ಆದಿಶಕ್ತಿಯ ಮಥನದಿಂದ, ಆದಿಶಕ್ತಿಯು ಎರಡು ತೆರನಾಗಿರ್ಪುದು, ಅದು ಹೇಗೆಂದೊಡೆ, ಲೋಕದಾತ್ಮರುಗಳಿಗೆ ಜಾತಿವರ್ಣಾಶ್ರಮ ಕುಲಗೋತ್ರ ಸೂತ್ರ ನಾಮಾಚಾರಗಳನ್ನೇ ಆದಿಯ ಮಾಡಿಕೊಡುತಿಹಳು. ಇತ್ತ ಗುರು ಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವಂತಹ ಶಿವ ಶರಣರುಗಳಿಗೆ ಭಕ್ತಿಜ್ಞಾನ ವೈರಾಗ್ಯವೆಂಬ ತ್ರಿವಿಧವನ್ನೇ ಆದಿಯ ಮಾಡಿ ಕೊಡುತಿಹಳು. ಕುಲವೇ ಶಿವಕುಲವಾಗಿಯೂ ಗೋತ್ರವೇ ನಂದೀಶ್ವರನ ಗೋತ್ರವಾಗಿಯೂ ಸಕಲ ಸದ್ಭಕ್ತ ಶರಣಜನಂಗಳೇ ತಂದೆ ತಾಯಿ ಬಂಧು ಬಳಗಂಗಳಾಗಿಯೂ ಅಳವಡಿಸಿಕೊಂಡು ಆಚರಿಸುವಂತಹಾಚರಣೆಯನ್ನೇ ಆದಿಯ ಮಾಡಿಕೊಡುತಿಹಳು.

ಪ್ರಾಣಾದಿವಾಯುಗಳ ನಿವೃತ್ತಿ:— ಮತ್ತಂತುಮಲ್ಲದೆ ಪ್ರಾಣಾದಿ ವಾಯುಗಳೈದು ಆದಿಶಕ್ತಿಯ ಸ್ವರೂಪಿನಿಂದಿದ್ದಿತಾದ ಕಾರಣ ಆ ಆದಿಶಕ್ತಿಯ ಸ್ವರೂಪವಾದ ಪ್ರಾಣಾದಿವಾಯುಗಳೊಳಗೆ ಪ್ರಾಣವಾಯುವೇ ಸತ್ತು, ಅಪಾನವಾಯುವೇ ಚಿತ್ತು, ವ್ಯಾನವಾಯುವೇ ಆನಂದ, ಉದಾನ ವಾಯುವೇ ನಿತ್ಯ, ಸಮಾನವಾಯುವೇ ಪರಿಪೂರ್ಣವಾಗೀ ರೀತಿಯಲ್ಲಿ ಪಂಚ ಪ್ರಾಣವಾಯುಗಳೇ ಪಂಚಲಕ್ಷಣ ಸ್ವರೂಪಿನಿಂದ ನಿವೃತ್ತಿಯಾದುದೇ ಆದಿ ಶಕ್ತಿಯು.

ಉದಾನವಾಯುವಿನ ನಿವೃತ್ತಿ:— ಅಂತಪ್ಪ ಆದಿಶಕ್ತಿಯ ಮಥನದಿಂದ ಉದಾನವಾಯುವ ನಿಲಿಸಿ, ಉದಾನವಾಯುವೆಂಬುದು ತಾನು ಎಳೆಯ ಮಿಂಚಿನ ವರ್ಣ, ಕಂಠಸ್ಥಾನದಲ್ಲಿರ್ದು ಸೀನುವ, ಕೆಮ್ಮುವ, ಕನಸು ಕಾಣುವ, ಎಳಿಸುವ, ಚರ್ದನ ನಿರೋದನಂಗಳಂ ಮಾಡಿಸಿ .ಅನ್ನರಸಾಹಾರ ಸ್ಥಾಪನಂಗೈಸುತ್ತಿಹುದೆಂದು ಹೇಳಿಸಿಕೊಂಬುವುದೇ ಉದಾನವಾಯು. ಅಂತಪ್ಪ ವಾಯುವಿನ ಸ್ಥಾನ ಧರ್ಮ ಕರ್ಮ ವರ್ಣಂಗಳನ್ನು ವಕಾರ ಮಂತ್ರದಿಂದ ತಡೆದು,

ತೂರ್ಯಾವಸ್ಥೆಯ ನಿವೃತ್ತಿ:— ಅನಾಹತ ಚಕ್ರದ ಹೃದಯ ಸ್ಥಾನದಲ್ಲಿ ಒಂದಾನೊಂದು ಷಟ್‌ಕೋಣೆಯಾಕಾರದಿಂದೊಪ್ಪುವಂತಾದ್ದೇ ಅನಾಹತ ಚಕ್ರವು. ಅಂತಪ್ಪ ಚಕ್ರದ ಪೀತವರ್ಣದ ಆ ಚಕ್ರವೆಂಬುದು ತಾನೊಂದಾನೊಂದು ಹಳದಿ ವರ್ಣದ ಕಾಂತಿಯಿಂದಿರುತಿಹುದು, ಅಂತಪ್ಪ ವರ್ಣದ ದ್ವಾದಶ ದಳದ ಆ ಚಕ್ರದ ಸುತ್ತು ವಳಯದಲ್ಲಿ ಹನ್ನೆರಡೆ ಸಳುಗಳಿಂದೊಪ್ಪುತಿಹುದು. ಅಂತಪ್ಪ ಹನ್ನೆರಡೆಸಳುಗಳ ಕ ಖ ಗ ಘ ಙ, ಚ ಛ ಜ ಝ ಞ, ಟ ಠ ಎಂಬ ದ್ವಾದಶಾಕ್ಷರದ ಕಕಾರಾದಿ ಠಕಾರಾಂತ್ಯವಾದ ಹನ್ನೆರಡಕ್ಷರಂಗಳೇ ಆ ದಳಗಳಲ್ಲಿ ಜೀವನಾಕ್ಷರ ಸ್ವರೂಪಿನಿಂದ ನ್ಯಾಸವಾಗಿರುತಿಹವು. ಅಂತಪ್ಪ ಹನ್ನೆರಕ್ಷರದಧಿದೈವ ಈಶ್ವರ ಮೂರ್ತಿಯೇ ಇಷ್ಟದೊಡನೆ ಕೂಡಿಕೊಂಡಿರುವನು. ಆ ಚಕ್ರಕ್ಕೆ ಈಶ್ವರ ಮೂರ್ತಿಯೇ ಅಧಿನಾಯಕನಾಗಿರುವನು. ಅಂತಪ್ಪ ಈಶ್ವರನೆಂಬ ಅಧಿದೇವತೆಯು ತೂರ್ಯಾವಸ್ಥೆಯನ್ನು ಹಲವು ಮುಖವಾದ 'ದಿವ್ಯಾನಂದದ ಮೇಲಣಿಚ್ಛೆಯೇ ತೂರ್ಯಾವಸ್ಥೆಯು. ಆ ಅವಸ್ಥೆಯೇ ಚಕ್ರದಲ್ಲಿ ಸಂಬಂಧವಾಗಿರುತಿಹುದು. ಅಂತಪ್ಪಾವಸ್ಥೆಯನ್ನು ವಕಾರವೆಂಬ ಬೀಜಾಕ್ಷರದಿಂ ತಿಳಿದು ಇವೆಲ್ಲ ಲೋಕದಾತ್ಮರುಗಳಲ್ಲಿ ಪೂರ್ವವಾಸನೆಯೊಡನೆ ಕೂಡಿಕೊಂಡು, ಪ್ರಕೃತಿ ತತ್ವಗಳಾಗಿ ಸಕಲ ಜೀವರುಗಳನ್ನು ಜನ್ಮಾಂತರ ಗತಿಗಳೊಳಗೆ ತಂದು ಸಂಹರಿಸುವುದಕ್ಕೆ ಕಾರಣವಾಗಿರುತಿಹವು.

ಅನಾಹತ ಚಕ್ರವು ಮಂತ್ರಮಯವು:— ಇತ್ತ ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವಂತಹ ಶಿವಶರಣರುಗಳಿಗೆ ಅವೆಲ್ಲ ನಿವೃತ್ತಿಯಾಗಿ ಹೋಗಿ ವಕಾರ ಷಡಕ್ಷರ ಮಂತ್ರ ಸ್ವರೂಪವಾಗಿರುತಿಹವು. ಅದು ಹೇಗೆಂದೊಡೆ, ಆ ಚಕ್ರವೇ ವಕಾರ ಪ್ರಣಮ ಸ್ವರೂ

ಪವಾದಲ್ಲಿ ಅಲ್ಲಿ ತೋರುವಂತಹ ವರ್ಣವೇ ವಕಾರದೊಳಗಣ ನಕಾರ ಪ್ರಣವು ಸ್ವರೂಪು, ಅಲ್ಲಿ ತೋರುವಂತಹ ದಳಂಗಳೇ ವಕಾರ ಪ್ರಣವುದೊಳಗಣ ಮಕಾರ ಪ್ರಣವ ಸ್ವರೂಪು, ಆ ದಳಂಗಳಲ್ಲಿ ನ್ಯಾಸವಾಗಿರುವಂತಹ ಅಕ್ಷರಂಗಳೇ ವಕಾರ ಪ್ರಣವುದೊಳಗಣ ಶಿಕಾರ ಪ್ರಣವು ಸ್ವರೂಪು, ಅಲ್ಲಿ ನೆಲಸಿರುವಂತಹ ಅಧಿದೇವತೆಯೇ ವಕಾರ ಪ್ರಣವುದೊಳಗಣ ಯಕಾರ ಪ್ರಣವು ಸ್ವರೂಪು, ಅಲ್ಲಿ ಸಂಬಂಧವಾಗಿರುವಂತಹ ಆವಸ್ಥೆಯೇ ವಕಾರ ಪ್ರಣವುದೊಳಗಣ ಓಂಕಾರ ಪ್ರಣವು ಸ್ವರೂಪಿಯಾಗಿ,

ಅನಾಹತ ಚಕ್ರಸಂಬಂಧವಾದ ಷಡ್ವಿಧ ತತ್ವಗಳ ನಿವೃತ್ತಿಃ— ಈ ರೀತಿಯಲ್ಲಿ ಅನಾಹತ ಚಕ್ರ ಸಂಬಂಧವಾದ ಷಡ್ವಿಧ ತತ್ವಂಗಳೆಲ್ಲವೂ ನಿವೃತ್ತಿಯಾಗಿ ಹೋಗಿ ವಕಾರ ಷಡಕ್ಷರ ಮಂತ್ರ ಸ್ವರೂಪವಾಗಿರ್ಪವೆಂದೇ ಅರಿವುದು. ಈ ಪ್ರಕಾರದಿಂದ ಹೇಳಲ್ಪಟ್ಟಂತಹ ಷಡ್ವಿಧ ವಿಚಾರವಿಡಿದು ಈ ವಕಾರ ಷಡಕ್ಷರ ಮಂತ್ರ ಸ್ವರೂಪವಾದ ಷಡ್ವಿಧ ತತ್ವಂಗಳೆಲ್ಲವೂ ವಕಾರ ಮಂತ್ರಮೂರ್ತಿಯಾದ ಜಂಗಮಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯ ಭಾವವನ್ನು ತನ್ನ ಮನದೊಳಗೆ ಗ್ರಹಿಸಿ ಆ ವಿಚಾರದ ವೈಶಾಲ್ಯವು ತಾನೆಂತುಟಿಲೆ ಸ್ವಾಮಿ ಎಂದು ಬೆಸಗೊಂಡೊಡೆ,

ವಕಾರಮಂತ್ರಮೂರ್ತಿಯಾದ ಜಂಗಮಲಿಂಗಕ್ಕೆ ಆ ಚಕ್ರವೇ ಪ್ರಣವು ಪೀಠದ ಗದ್ದುಗೆಯಾಗಿ ಅಲ್ಲಿ ತೋರುವಂತಹ ವರ್ಣವೇ ನಂದದ ಕುಂದದ ಸ್ವಯಂಜ್ಯೋತಿ ಪ್ರಕಾಶವಾಗಿ ಅವಳವಟ್ಟುದೆರಡನೆಯ ವಿಚಾರವು.

ಅಲ್ಲಿ ತೋರುವಂತಹ ದಳಂಗಳೇ ಇಂಡೆ ದಂಡೆ ಕುಸುಮಾಲಂಕಾರಂಗಳಾಗಿ ಆ ದಳಗಳಲ್ಲಿ ನ್ಯಾಸವಾಗಿರುವಂತಕ್ಷರಂಗಳೇ ವಕಾರಮಂತ್ರ ಮೂರ್ತಿಯಾದ ಜಂಗಮಲಿಂಗವನ್ನು ನೆನಹುದಕ್ಕೆ ವಾಂ, ವಾಂ, ವಾಂ, ಎಂಬ ಮಂತ್ರಾಕ್ಷರಂಗಳಾಗಿ ಅಳವಟ್ಟುದೇ ನಾಲ್ಕನೆಯ ವಿಚಾರವು.

ಅಲ್ಲಿ ನೆಲಸಿರುವಂತಹ ಅಧಿದೇವತೆಯೇ ಪ್ರಾಣಲಿಂಗಿ ಎಂಬ ಪೂಜಾರಿಯಾಗಿ ಅಲ್ಲಿ ಸಂಬಂಧವಾಗಿರುವಂತಹ ಅವಸ್ಥೆಯೇ ಘನಲಿಂಗಾವಸ್ಥೆಯಾಗಿ ಅಳವಟ್ಟುದೇ ಆರನೆಯ ವಿಚಾರವು.

ಈ ರೀತಿಯಲ್ಲಿ ವಕಾರ ಷಡಕ್ಷರ ಮಂತ್ರಸ್ವರೂಪವಾದ ಷಡ್ವಿಧ ತತ್ವಂಗಳೆಲ್ಲವೂ ನಕಾರಮಂತ್ರಮೂರ್ತಿಯಾದ ಜಂಗಮಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯ ಭಾವನೆಯನ್ನು ತನ್ನ ಮನದೊಳಗೆ ಗ್ರಹಿಸಿ ಅನುಭಾವ ಭಕ್ತಿಯಿಂದ ಭಕ್ತನಾದೊಡೆ ಭಕ್ತಿಯ ದಾಸೋಹಂ ಯುಕ್ತವಾದೊಡೆ ಮುಕ್ತಿಯ ದಾಸೋಹವೈಕ್ಯವಾದೊಡೆ ಮಮಕಾರದ ದಾಸೋಹಮೆಂದು ಸರ್ವರಲ್ಲಿಯೂ ದಾಸೋಹವೇ ಇರಬೇಕು. ದಾಸೋಹವಿಲ್ಲದವರನ್ನು ಮೆಚ್ಚ ನಮ್ಮ ಕೂಡಲಸಂಗಮದೇವ ಎಂದು ಹೇಳುತಿಹುದಾದ ಕಾರಣ ಶಿವಶರಣರುಗಳಿಗೆ ಶಿವಾನುಭವವನ್ನು ಬೋಧಿಸುವಂತಾದ್ದು ಅನುಭಾವಭಕ್ತಿಯು. ಅಂತರಂಗ ಬಹಿರಂಗದಲ್ಲಿ ಇಷ್ಟ ಪ್ರಾಣ ಭಾವಲಿಂಗವ ಸಂಬಂಧವ ಮಾಡಿಕೊಂಡು ಜ್ಞಾನಕ್ರಿಯೆಗಳಲ್ಲಿ ಪಿಡಿದು ಆಚರಿಸುವಂತಾದ್ದು ಅನುಭಾವಭಕ್ತಿ, ಅಂತಪ್ಪ ಭಕ್ತಿಯಿಂದ ನಾಲ್ಕನೆಯ ತತ್ವದಾದಿಯನರಿದು ನಾಲ್ಕನೆಯ ತತ್ವವೇ ವಾಯುತತ್ವ, ಆ ವಾಯು ತತ್ವ ಜನನಕ್ಕೆ ಮೂಲಾಧಾರ ಸ್ಥಾನವಾದ ಪೂರ್ವದಿಕ್ಕಿನ ಆ ಸದಾಶಿವ ಮೂರ್ತಿಗೆ ಮುಂಭಾಗದಲ್ಲಿರ್ಪುದೇ ಪೂರ್ವದಿಕ್ಕು, ಅಂತಪ್ಪ ದಿಕ್ಕಿನಲ್ಲಿ ತೋರುವ ತತ್ಪುರುಷ ಮುಖವನರಿದು ಆ ಮೂರ್ತಿಸಾದಾಖ್ಯ ಸ್ವರೂಪವಾದ ತತ್ಪುರುಷ ಮುಖವು ತಾನೇ ಇಲ್ಲಿ ಶಿವಶರಣತ್ವಗಿಂದ್ರಿಯದಲ್ಲಿ ಯಜನ ಸ್ವರೂಪವಾದ ಚರಲಿಂಗ ಸ್ವರೂಪಿನಿಂದ ವಾಸವಾಗಿರ್ಪುದೆಂದೇ ತಿಳಿದು,

ವಾಯು ತತ್ವದ ನಿವೃತ್ತಿ:—ವಾಯುವಿನ ಚಲನೆಯನು, "ಧಾವನಂ ವಲ್ಗನಂ ಚೈವಾಕುಂಚನಂ ಚ ಪ್ರಸಾರಣಂ। ವಿಯೋಗಶ್ಚ ಇತಿ ಜ್ಞೇಯಂ ವಾಯೋಃ ಪಂಚಗುಣಾಃ ಸ್ಮೃತಾಃ॥ ಎಂಬ ಅಂಶಗುಣಂಗಳನ್ನು ಪರಿಪೂರ್ಣತ್ವದಿಂ ಕೆಡಿಸಿ ಮಲತ್ರಯ ವಿದೂರನಾಗಿ ಭಕ್ತಿಜ್ಞಾನ ವೈರಾಗ್ಯ ಸಂಪನ್ನನಾಗಿ ದೇಶ ಗ್ರಾಮ ನಿಲಯ ಬಂಧನಂಗಳಿಲ್ಲದೆ ಎಲ್ಲ ದೇಶ, ಎಲ್ಲ ಗ್ರಾಮ, ಎಲ್ಲ ಭಕ್ತರನ್ನು ಒಂದೇ ಸಮಾನಂಗಂಡು ತನ್ನ ತಟ್ಟಿದವರನ್ನೂ, ಮುಟ್ಟಿದವರನ್ನೂ, ಕಂಡವರನ್ನೂ, ಕೇಳಿದವರನ್ನೂ ಅರಿದು ಭಕ್ತಿಯ ಮಾಡಿದವರನ್ನೆಲ್ಲ ಕೃತಾರ್ಥರಂ ಮಾಡುತ್ತ ಜಗತ್ಪಾವನ ಮೂರ್ತಿಯಾಗಿ ಆಚರಿಸುವಂತಹ ಪರಿಪೂರ್ಣ ಜಂಗಮಸ್ಥಳದ ಆಚರಣೆಯನುಳ್ಳ ಶಿವಪ್ರಾಣಲಿಂಗಿಗೆ ವಾಯುವಿನ ಅಂಶಗುಣಂಗಳು ನಷ್ಟವಾಗಿರ್ಪವೆಂದರಿದು, ಗಮನನಾಸ್ತಿಯಾಗಿ ಪವನ ಮದವೆತ್ತಿದಲ್ಲಿ ಪ್ರಯಾಣಭರಿತನಾಗಿ ಹೋದೆಹೆ,

ಕೊಂಡಿಹೆ, ಕೊಟ್ಟಿಹೆನೆನುತಿಹನೆಂಬ ವಾಯುವಿನ ಮದಗುಣವು ನಷ್ಟ ವಾಗಿ ಹೋಗಿ ಪ್ರಾಣಲಿಂಗಿಸ್ಥಲವನಂಗಂಗೊಂಡುದೀಗ ಇಷ್ಟರ ಸಾಧನ ದಿಂದ ವಾಯುವಿನ ಮದಗುಣ ಅಂಶಗುಣಂಗಳಳಿದು ಚಿದ್ವಾಯು ಸ್ವರೂ ಪಿನಿಂದ ಪ್ರಾಣಲಿಂಗಿಗಂಗವಾಗಲು, ಅಂತಪ್ಪ ಪರಾತ್ಪರವಾದ ಶಿವಪ್ರಾಣ ಲಿಂಗಿಯ ಸ್ಥಲವನೊಡಲು ಮಾಡಿಕೊಂಡು ಆಚರಿಸುವಂತಾದ್ದು ತಾನೇ ಸುಮನದ ನೆಲೆ. ಕುಮನವಳಿದು ಸುಮನವೆಂಬ ಕರಕಮಲಕ್ಕೆ ಯಜನ ಸ್ವರೂಪವಾದ ಚರಲಿಂಗವು ಬಂದು ನೆಲೆಗೊಂಡ ನಿಲುಕಡೆಯು.

---

## ವಿಶುದ್ಧಿ ಚಕ್ರದಲ್ಲಿ ಪ್ರಸಾದಲಿಂಗದ ಉದ್ಭವವು.

ಪರಶಕ್ತಿಯ ಮಥನದಿಂದ, ಪರಶಕ್ತಿಯು ಎರಡು ತೆರನಾಗಿರ್ಪುದು, ಹೇಗೆಂದೊಡೆ ಲೋಕದಾತ್ಮರುಗಳಿಗೆ ಇಂದ್ರಿಯ ವಿಷಯ ಪ್ರಪಂಚವನೇ ಪರವಶ ಮಾಡಿಕೊಡುತಿಹಳು. ಇತ್ತ ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವಂಥ ಶಿವಶರಣರುಗಳಿಗೆ ಶರಣ ಸತಿಯಾಗಿ ಲಿಂಗವೇ ಪತಿಯಾಗಿ ಇಂದ್ರಿಯಗಳೇ ಲಿಂಗೇಂದ್ರಿಯಗಳಾಗಿ ವಿಷಯಗ ಳೆಲ್ಲ ಲಿಂಗಪ್ರಸಾದವಾಗಿ ಅಳವಡಿಸಿಕೊಂಡು ಆಚರಿಸುವಂತಹ ಆಚರ ಣೆಯನೇ ಪರವಶಮಾಡಿಕೊಡುತಿಹಳು.

ಮನಸಾದಿ ಕರಣಂಗಳ ನಿವೃತ್ತಿಃ— ಮತ್ತಂತುಮಲ್ಲದೆ ಮನಸಾದಿ ಕರಣಂಗಳೈದು ಪರಶಕ್ತಿಯ ಸ್ವರೂಪಿನಿಂದ ಇದ್ದಿತಾದ ಕಾರಣ ಆ ಪರ ಶಕ್ತಿಯ ಸ್ವರೂಪವಾದ ಮನಸಾದಿ ಕರಣಂಗಳೊಳಗೆ ಮನದಲ್ಲಿ ಶಿವಧ್ಯಾನ, ಬುದ್ಧಿಯಲ್ಲಿ ನಿರ್ವಂಚನ, ಚಿತ್ತದಲ್ಲಿ ಶಿವದಾಸೋಹ, ಅಹಂಕಾರದಲ್ಲಿ ನಿರ ಹಂಕಾರ, ಅಜ್ಞಾನವಳಿದು ಸುಜ್ಞಾನವಾಗಿ ಮಾನಸಾದಿ ಕರಣಂಗಳೈದು ನಿವೃತ್ತಿಯಾದುದೇ ಪರಶಕ್ತಿ.

ಸಮಾನವಾಯುವಿನ ನಿವೃತ್ತಿ:- ಅಂತಪ್ಪ ಪರಶಕ್ತಿಯ ಮಥನದಿಂದಲೇ ಸಮಾನವಾಯುವ ನಿಲಿಸಿ, ಸಮಾನವಾಯುವು ನೀಲವರ್ಣ, ನಾಭಿಸ್ಥಾನ ದಲ್ಲಿದ್ದು ಆಪಾದ ಮಸ್ತಕ ಪರ್ಯಂತರ ಸತ್ ಪ್ರಾಣಿಸಿಕೊಂಡು ಆತ್ಮನು ಕೊಂಡಂತಹ ಅನ್ನರಸಮಂ ಎಲ್ಲ ರೋಮನಾಳಂಗಳಿಗೆ ಹಂಚಿಹಾಕುತ್ತಿ

ಸುದು, ಎಂದು ಹೇಳಿಸಿಕೊಂಬುತಿಹುದೇ ಸಮಾನವಾಯುವು. ಅಂತಪ್ಪ ಸಮಾನವಾಯುವಿನ ಸ್ಥಾನ ಧರ್ಮ ಕರ್ಮ ವರ್ಣಂಗಳನಲ್ಲಿ ಯಕಾರ ಮಂತ್ರದಿಂದ ತಡೆದು,

ಅತೀತಾವಸ್ಥೆಯ ನಿವೃತ್ತಿಃ— ವಿಶುದ್ಧಿ ಚಕ್ರದ ಗಳಸ್ಥಾನದಲ್ಲಿ ಒಂದಾನೊಂದು ಮೃದಂಗದಾಕಾರದಿಂದ ಒಪ್ಪುವಂತಾದ್ದೇ ವಿಶುದ್ಧಿ ಚಕ್ರವು, ಅಂತಪ್ಪ ಚಕ್ರದ ಶ್ವೇತವರ್ಣದ, ಆ ಚಕ್ರವೆಂಬುದು ತಾನೊಂದಾನೊಂದು ಧವಳ ವರ್ಣದ ಕಾಂತಿಯಿಂದಿರುತಿಹುದು. ಅಂತೊಪ್ಪುವ ವರ್ಣದ ಷೋಡಶ ದಳದ ಆ ಚಕ್ರದ ಸುತ್ತುವಳಯದಲ್ಲಿ ಹದಿನಾರೆಸಳುಗಳಿಂದೊಪ್ಪುತಿಹುದು. ಅಂತಪ್ಪ ಹದಿನಾರೆಸಳುಗಳಲ್ಲಿ, ಅ ಆ-ಇ ಈ-ಉ ಊ-ಋ ೠ- ಌ ೡ- ಏ ಐ-ಓ ಔ-ಅಂ ಅಃ ಎಂಬ ಷೋಡಶಾಕ್ಷರದ ಅಕಾರಾದಿ ಅಃಕಾರಾಂತ್ಯಮಾದ ಹದಿನಾರಕ್ಷರಂಗಳೇ ಆ ದಳಂಗಳಲ್ಲಿ ಜೀವನಾಕ್ಷರ ಸ್ವರೂಪಿನಿಂದ ನ್ಯಾಸವಾಗಿರುತಿಹವು. ಅಂತಪ್ಪ ಹದಿನಾರಕ್ಷರದ ಅಧಿವೈಪ ಸದಾಶಿವನು, ಇಷ್ಟರೊಡನೆ ಕೂಡಿಕೊಂಡಿರುವಂತಹದ್ದೇ ಒಂದು ವಿಶುದ್ಧಿ ಚಕ್ರವು. ಆ ಚಕ್ರಕ್ಕೆ ಸದಾಶಿವಮೂರ್ತಿ ಅಧಿಷ್ಠಾಯಕನಾಗಿರುತಿಹನು. ಅಂತೊಪ್ಪುವ ಸದಾಶಿವನೆಂಬ ಅಧಿದೇವತೆಯ ಅತೀತಾವಸ್ಥೆಯನ್ನು ನಿಬ್ಬೆರಗಾಗಿ ನಿಂದ ಏನೂ ಇಲ್ಲವೆಂಬ ಕೋರಿಕೆಯೇ ಅತೀತಾವಸ್ಥೆಯು. ಆ ಅವಸ್ಥೆಯು ಆ ಚಕ್ರದಲ್ಲಿ ಸಂಬಂಧವಾಗಿರುತಿಹುದು. ಅಂತಪ್ಪಾವಸ್ಥೆಯನು ಯಕಾರವೆಂಬ ಬೀಜಾಕ್ಷರದಿಂ ತಿಳಿದು, ಇವೆಲ್ಲ ಲೋಕದಾತ್ಮರುಗಳಲ್ಲಿ ಪೂರ್ವ ವಾಸನೆಯೊಡನೆ ಕೂಡಿಕೊಂಡು ಪ್ರಕೃತಿ ತತ್ವಂಗಳಾಗಿ ಸಕಲ ಜೀವರುಗಳನ್ನು ಜನ್ಮಾಂತರ ಗತಿಗಳೊಳಗೆ ತಂದು ಸಂಹರಿಸುವುದಕ್ಕೆ ಕಾರಣವಾಗಿರುತಿಹವು.

ವಿಶುದ್ಧಿ ಚಕ್ರವು ಮಂತ್ರಮಯವಾದುದುಃ— ಇತ್ತ ಗುರುಕಾರುಣ್ಯವಂ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವಂತಹ ಶಿವಶರಣರುಗಳಿಗೆಲ್ಲ ನಿವೃತ್ತಿಯಾಗಿ ಹೋಗಿ ಯಕಾರ ಷಡಕ್ಷರಮಂತ್ರ ಸ್ವರೂಪವಾಗಿರುತಿಹವು- ಅದು ಹೇಗೆಂದೊಡೆ, ಆ ಚಕ್ರವೇ ಯಕಾರ ಪ್ರಣವ ಸ್ವರೂಪವಾದಲ್ಲಿ ಅಲ್ಲಿ ತೋರುವಂತಹ ವರ್ಣವೇ ಯಕಾರ ಪ್ರಣಮದೊಳಗಣ ನಕಾರ ಪ್ರಣಮುಸ್ವರೂಪು. ಅಲ್ಲಿರುವಂತಹ ದಳಗಳೇ ಯಕಾರ ಪ್ರಣಮದೊಳಗಣ ಮಕಾರ ಪ್ರಣಮು ಸ್ವರೂಪು. ಆ ದಳಂಗಳಲ್ಲಿ ವಾಸವಾಗಿರುವಂತ ಅಕ್ಷರಂಗಳೇ ಯಕಾರ ಪ್ರಣಮದೊಳಗಣ ಶಿಕಾರ ಪ್ರಣಮು ಸ್ವರೂಪು.

ಅಲ್ಲಿ ನೆಲಸಿರುವಂತಹ ಅಧಿದೇವತೆಯೇ ಯಕಾರ ಪ್ರಣವುದೊಳಗಣ ವಕಾರ ಪ್ರಣವು ಸ್ವರೂಪು. ಅಲ್ಲಿ ಸಂಬಂಧವಾಗಿರುವಂತಹ ಅವಸ್ಥೆಯೇ ಯಕಾರದೊಳಗಣ ಓಂಕಾರ ಪ್ರಣವು ಸ್ವರೂಪವಾಗಿ,

ವಿಶುದ್ಧಿ ಚಕ್ರ ಸಂಬಂಧವಾದ ಷಡ್ವಿಧ ತತ್ವಗಳ ನಿವೃತ್ತಿ:— ವಿಶುದ್ಧಿ ಚಕ್ರ ಸಂಬಂಧವಾದ ಷಡ್ವಿಧ ತತ್ವಂಗಳೆಲ್ಲವು ನಿವೃತ್ತಿಯಾಗಿ ಹೋಗಿ ಯಕಾರ ಷಡಕ್ಷರಮಂತ್ರ ಸ್ವರೂಪವಾಗಿರುತಿರ್ಪವೆಂಬೇ ತಿಳಿವುದು. ಈ ಪ್ರಕಾರದಿಂದ ಹೇಳಲ್ಪಟ್ಟಂತಹ ಈ ಷಡ್ವಿಧ ವಿಚಾರವಿಡಿದು ಈ ಯಕಾರ ಮಂತ್ರ ಸ್ವರೂಪವಾದ ಷಡ್ವಿಧ ತತ್ವಂಗಳೆಲ್ಲವೂ ಯಕಾರಮಂತ್ರಮೂರ್ತಿ ಯಾದ ಪ್ರಸಾದಲಿಂಗ ಮೂರ್ತಿಗಾ ಚಕ್ರವೇ ಪ್ರಣವು ಪೂಜೋಪಕರ ಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯ ಭಾವವನ್ನು ತನ್ನ ಮನದೊ ಳಗೆ ಗ್ರಹಿಸಿ ಆ ವಿಚಾರದ ವೈಶಾಲ್ಯವು ತಾನೆಂತುಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ,

ಯಕಾರಮಂತ್ರ ಮೂರ್ತಿಯಾದ ಪ್ರಸಾದಲಿಂಗ, ಆ ಚಕ್ರವೇ ಪ್ರಣವು ಪೀಠವ ಗದ್ದುಗೆಯಾಗಿ ಅಲ್ಲಿ ತೋರುವಂತಹ ವರ್ಣವೇ ನಂದದ ಕುಂದದ ಸ್ವಯಂಜ್ಯೋತಿ ಪ್ರಕಾಶವಾಗಿ ಅಳವಟ್ಟುದೆರಡನೆಯ ವಿಚಾರವು. ಅಲ್ಲಿ ತೋರುವಂತಹ ದಳಂಗಳೇ ಇಂಡೆ ದಂಡೆ ಕುಸುಮಾಲಂಕಾರಂಗಳಾಗಿ ಆ ದಳಂಗಳಲ್ಲಿ ನ್ಯಾಸವಾಗಿರುವಂತಹ ಅಕ್ಷರಂಗಳೇ ಯಕಾರಮಂತ್ರ ಮೂರ್ತಿಯಾದ ಪ್ರಸಾದಲಿಂಗವನ್ನು ನೆನೆವುದಕ್ಕೆ ಯಾಂ, ಯಾಂ, ಯಾಂ ಎಂಬ ಮಂತ್ರಾಕ್ಷರವಾಗಿ ಅಳವಟ್ಟುದೇ ನಾಲ್ಕನೆಯ ವಿಚಾರವು. ಅಲ್ಲಿ ನೆಲಸಿರುವಂತಹ ಅಧಿದೇವತೆಯೇ ಶರಣನೆಂಬ ಪೂಜಾರಿಯಾಗಿ, ಅಲ್ಲಿ ಸಂಬಂಧವಾಗಿರುವಂತಹ ಅವಸ್ಥೆಯೇ ಘನಲಿಂಗಾವಸ್ಥೆಯಾಗಿ, ಅಳವಟ್ಟುದೇ ಆರನೆಯ ವಿಚಾರವು.

ಈ ರೀತಿಯಲ್ಲಿ ಯಕಾರ ಷಡಕ್ಷರ ಮಂತ್ರ ಸ್ವರೂಪವಾದ ಷಡ್ವಿಧ ತತ್ವಂಗಳೆಲ್ಲವೂ ಯಕಾರ ಮಂತ್ರ ಮೂರ್ತಿಯಾದ ಪ್ರಸಾದಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹುದೆಂಬ ಕೃತನಿಶ್ಚಯ ಭಾವವನ್ನು ತನ್ನೊಳಗೆ ಗ್ರಹಿಸಿ ಆನಂದ ಭಕ್ತಿಯಿಂದ ಶರಣನೇ ಸತಿ ಲಿಂಗವೇ ಪತಿ ಎಂಬ ಭಾವದಿಂದ ಸಕಲಪದಾರ್ಥಗಳನ್ನು ಲಿಂಗಕ್ಕರ್ಪಿಸಿ ಆ ಲಿಂಗ

ಪ್ರಸಾದವನ್ನು ಪಡೆದನುಭವಿಸಿ ಪರಮಪರಿಣಾಮಿಯಾಗಿರುವಂತಾದ್ದೇ ಆನಂದ ಭಕ್ತಿಯು.

ಅಂತಪ್ಪ ಭಕ್ತಿಯಿಂದ ಐದನೆಯ ತತ್ವದಾದಿಯನರಿದು, ಐದನೆಯ ತತ್ವವೇ ಆಕಾಶ ತತ್ವ, ಆ ಆಕಾಶ ತತ್ವದ ಜನನಕ್ಕೆ ಮೂಲಾಧಾರ ಸ್ಥಾನವಾದ ಊರ್ಧ್ವ ದಿಕ್ಕಿನ ಸದಾಶಿವಮೂರ್ತಿಗೆ ಮೇಲುಭಾಗವಲ್ಲಿರ್ಪುದೇ ಊರ್ಧ್ವದಿಕ್ಕು, ಅಂತಪ್ಪ ದಿಕ್ಕಿನಲ್ಲಿ ತೋರುವಂತಹ ಈಶಾನ್ಯ ಮುಖವ ನರಿದು, ಶಿವಸಾದಾಖ್ಯ ಸ್ವರೂಪವಾದ ಈಶಾನ್ಯ ಮುಖವು ತಾನೇ ಇಲ್ಲಿ ಶಿವಶರಣನ ಶ್ರವಣೇಂದ್ರಿಯದಲ್ಲಿ ಈಳನ ಸ್ವರೂಪವಾದ ಪ್ರಸಾದಲಿಂಗ ಸ್ವರೂಪಿನಿಂದ ವಾಸವಾಗಿರ್ಪುದೆಂದು ತಿಳಿವುದು.

ಆಕಾಶ ತತ್ವದ ನಿವೃತ್ತಿ:—ಆಕಾಶತತ್ವದ ಭ್ರಮೆಯನು ರಾಗ ದ್ವೇಷ ಭಯ ಲಜ್ಜೆ ಮೋಹವೆಂಬ ಅಂಶ ಗುಣಗಳನ್ನು ಪರಿಣಾಮದಿಂ ತಿಳಿದು ಲಿಂಗಾಣತಿಯಿಂದ ಅಂಬಲಿಯೇ ಬರಲಿ, ಅಮೃತವೇ ಬರಲಿ, ಕಂಬಳಿಯೇ ಬರಲಿ, ಕಡು ಸಣ್ಣನಾದ ಘೋತರಂಗಳೇ ಬರಲಿ, ಲಿಂಗಕ್ಕೆ ಕೊಟ್ಟು ಆ ಲಿಂಗಪ್ರಸಾದವ ಸವಿದು ಆನಂದಿಸುವಂತಹದ್ದೇ ಶಿವಶರಣರುಗಳಿಗೆ ಆಕಾಶದ ಅಂಶಗುಣಂಗಳು ನಷ್ಟವಾಗಿರ್ಪವೆಂದರಿವುದು. ಕರ್ಮನಾಸ್ತಿಯಾಗಿ ಅಸಿ ಮಸಿ ಕೃಷಿ ವಾಣಿಜ್ಯ ಯಾಚನೆ, ಸೇವೆ, ಷಟ್ಕೃಷಿ, ವ್ಯಾಪಾರಂಗಳನ್ನು ಮಾಡುವಂತಹ ದುಷ್ಕೃತ್ಯವು ನಷ್ಟವಾಗಿ ಹೋಗಿ, ಅಂಬರಮದವೆತ್ತಿದಲ್ಲಿ ವಾಹನಭರಿತನಾಗಿ ಆನೆ ಬೇಕು, ಕುದುರೆ ಬೇಕು, ಛತ್ರಚಾಮರಂಗಳಂ ಬಯಸುತ್ತಿಹನೆಂಬ ಆಕಾಶದ ಮದಗುಣವು ನಷ್ಟವಾಗಿ ಹೋಗಲು, ಶರಣ ಸ್ಥಲವನಂಗಂಗೊಂಡುದೀಗ ಇಷ್ಟದ ಸಾಧನದಿಂದ ಆಕಾಶದ ಮದಗುಣ ಅಂಶಗುಣಂಗಳನಳಿದು ಚಿದಾಕಾಶ ಸ್ವರೂಪಿನಿಂದ ಶರಣಂಗಂಗವಾಗಲು ಅಂತಪ್ಪ ಪರಾತ್ಪರನಾದ ಶಿವಶರಣಸ್ಥಲವನೊಡಲು ಮಾಡಿಕೊಂಡು ಆಚರಿಸುವಂತಹದ್ದು ತಾನೇ ಸುಜ್ಞಾನದ ನೆಲೆ, ಅಜ್ಞಾನವಳಿದು ಸುಜ್ಞಾನವೆಂಬ ಕರಕಮಲಕ್ಕೆ ಈಳನ ಸ್ವರೂಪವಾದ ಪ್ರಸಾದಲಿಂಗವು ಬಂದು ನೆಲೆಗೊಂಬಂತಹ ನಿಲುಕಡೆಯು.



# ಶಿವಾನುಭವ


| ವರ್ಷ ೨೩ | ದಿಸೆಂಬರ ೧೯೪೮ | ಸಂಚಿಕೆ ೩ |
|---|---|---|


## ಶರಣರು ಉಭಯಕರ್ಮವಿರಹಿತರು.


(ಲೇಖಕರು:— ಶ್ರೀಯುತ ಮಠದ ಬಸಯ್ಯ- ಪುಣಬಗಟ್ಟಿ,
ತಾ॥ ಹರಪನಹಳ್ಳಿ. )




ಪುಣ್ಯ ಮತ್ತು ಪಾಪ ಈ ಉಭಯ ಕರ್ಮಗಳಲ್ಲಿ ಜೀವನು ಸಿಲುಕಿರುವುದರಿಂದಲೇ ಎಂಭತ್ತುನಾಲ್ಕು ಲಕ್ಷ ಜೀವರಾಶಿಗಳಲ್ಲಿ ಕೋಟ್ಯಾನುಕೋಟಿ ಜನ್ಮಗಳೆನ್ನೆತ್ತುತ್ತಾ ಜನನ ಮರಣಗಳೆಂಬ ಭವಚಕ್ರ ಅಂದರೆ ಘೋರ ಸಂಸಾರದಲ್ಲಿ ಸಿಲುಕಿ ತೊಳಲಿ ಬಳಲುತ್ತಿರುವನು. ನಮ್ಮ ನಿಜತಂದೆಗಳಾದ ಶಿವಶರಣರು ಪುಣ್ಯಪಾಪಗಳೆಂಬ ಘೋರ ಕರ್ಮಗಳಿಗೆ ಒಳಗಾಗದೆ ಉಪಾಯದಿಂದ ಮತ್ತು ದಿವ್ಯಜ್ಞಾನಾನುಭವದಿಂದ ಪರಮಾತ್ಮನಲ್ಲಿ ಸಾಮರಸ್ಯವನ್ನು ಹೊಂದಿದರು. ಹೊಂದಿದ್ದಲ್ಲದೆ ನಮ್ಮೆಲ್ಲರಿಗೂ ಆ ದಿವ್ಯಾನುಭವ ವಚನಾಮೃತವನ್ನು ಸ್ವಾರ್ಥಿಗಳಾಗದೆ ದಯಪಾಲಿಸಿ ಹೋಗಿರುವರು. ಯಾವ ವ್ಯಕ್ತಿಯೇ ಆಗಲಿ ಯಾವ ಜಾತಿಯವನೇ ಆಗಲಿ ಶರಣರ ವಚನಗಳನ್ನು ಆಳವಾಗಿ ಅಭ್ಯಾಸಿಸಿದ್ದೇ ಆದರೆ ಅಭ್ಯಾಸಿಸಿ ಅವುಗಳಂತೆ ನಡೆದದ್ದೇ ಆದರೆ ಕರ್ಮರಹಿತನಾಗುವುದರಲ್ಲಿ ಸಂದೇಹವಿಲ್ಲ. ಏಕೆಂದರೆ ಶರಣರ ವಚನಗಳು ಅಷ್ಟು ಮಹತ್ವವಾದವುಗಳು. ದೇವರದಾಸಿಮಯ್ಯನವರು ಅಪ್ಪಣೆ ಕೊಡಿಸಿರುವುದೇನಂದರೇ "ಕರಿಯನಿತ್ತೊಡೆ ಒಲ್ಲೆ. ಸಿರಿಯನಿತ್ತೊಡೆ ಒಲ್ಲೆ. ಹಿರಿದಪ್ಪ ರಾಜ್ಯವನಿತ್ತೊಡೆ ಒಲ್ಲೆ. ನಿಮ್ಮ ಶರಣರ ಸೂಳು ನುಡಿ ಒಂದರ ಘಳಿಗೆ

ಇತ್ತಡೆ, ನಿನ್ನನಿತ್ತೆ ಕಾಣಾ ರಾಮನಾಥಾ." ಈ ಪ್ರಕಾರವಾಗಿ ಶರಣರ ವಚನಗಳಿಗೆಯೇ ಪ್ರಾಮುಖ್ಯವನ್ನು ಕೊಟ್ಟಿರುವರು. ಅಹಹಾ ಎಂಥಾ ಮಹಾನುಭಾವರವರು! ಎಂಥಾ ಜ್ಞಾನಿಗಳವರು!! ಅವರಿಗೆ ರಾಜ್ಯ ಬೇಡ, ಆಸೆ ಬೇಡ, ಐಶ್ವರ್ಯ ಬೇಡ, ಪರಮಾತ್ಮನೂ ಕೂಡ ಅವರಿಗೆ ಬೇಕಿಲ್ಲ. ಪರಮಾತ್ಮನ ಸಾಮರಸ್ಯವನ್ನು ದೊರಕಿಸುವ ಮತ್ತು ಕರ್ಮ ರಹಿತರನ್ನಾಗಿ ಮಾಡುವ ಶರಣರ ವಚನ ಳೇ ಅವರಿಗೆ ಬೇಕಾದುದು. ಆದುದರಿಂದ ಕರ್ಮರಹಿತರಾಗಲಿಕ್ಕೆ ಮಾನವ ಸಮಾಜಕ್ಕೆ ಆವ ರೀತಿ ಅವರು ಸಂದೇಶವನ್ನು ಸಾರಿರುವರು ಮತ್ತು ಅಪ್ಪಣೆ ಕೊಡಿಸಿರುವರ, ಆ ಬಗೆಯು ವಚನಾಮೃತದ ಕಡೆಗೆ ಹೊರಳುವಾ.

ಕರ್ಮಗಳೆಂದರೆ ಪುಣ್ಯ ಮತ್ತು ಪಾಪ. ಪುಣ್ಯವೂ ಕರ್ಮವೇ, ಪಾಪವೂ ಕರ್ಮವೇ, ಇಷ್ಟಿನಲ್ಲಿ ಎರಡೂ ಕರ್ಮಗಳೇ. ಸಾಮಾನ್ಯವಾಗಿ ಒಬ್ಬ ತಿರುಕನೂ ಕೂಡ ಅಮ್ಮ ಒಂದು ತುತ್ತು ಅನ್ನ ಹಾಕಿರಿ ನಿಮಗೆ ಪುಣ್ಯಬರಲಿ ಎಂದು ಮನೆ ಮನೆಗೆ ಬಂದು ಪುಣ್ಯದ ಮಹತ್ವವನ್ನು ಸಾರುತ್ತಿರುವನು. ಪುರಾಣಗಳಲ್ಲಿಯೂ ಕೂಡ ಪುಣ್ಯದ ಮಹತ್ವವನ್ನು ವರ್ಣಿಸಿ ಪಾಪವನ್ನು ಮಾಡುವವರನ್ನು ಮಾತ್ರ ಭಯಪಡಿಸುತ್ತಿರುವುವು. ಆದರೆ ಶರಣರ ವಚನಗಳು ಎರಡೂ ಕೂಡದೆಂದು ಅಪ್ಪಣೆ ಕೊಡಿಸುವವು. ಇದಕ್ಕೆ ಪ್ರಭುದೇವರ ವಚನಾಧಾರ.

"ಅನ್ನವನಿಕ್ಕಿ ನಸ್ಸಿಯ ನುಡಿದು ಅರವಟಿಗೆಯನಿಕ್ಕಿ ಕೆರೆಯ ಕಟ್ಟಿಸಿದರೆ ಮರಣದಿಂದ ಮೇಲೆ ಸ್ವರ್ಗ ಉಂಟಲ್ಲದೆ ಶಿವನ ನಿಜವು ಸಾಧ್ಯವಾಗದು. ಗುಹೇಶ್ವರನರಿದ ಶರಣಂಗೆ ಆವ ಫಲವಿಲ್ಲ."

ಮೇಲಿನ ಅಮೃತ ವಾಣಿಯಿಂದ ಅನ್ನ ದಾನ ಗೋದಾನ ಹಿರಣ್ಯ ದಾನ ಕನ್ಯಾದಾನ ವಸ್ತ್ರದಾನ ಮೊದಲಾದ ಷೋಡಶ ದಾನಗಳನ್ನು ಮಾಡುವುದರಿಂದ ಸ್ವರ್ಗಸುಖವು ದೊರೆಯುವುದೇ ವಿನಹ ನಿತ್ಯ ಸುಖವು ದೊರೆಯಲಾರದೆಂಬುದೇ ಅವರ ಅಭಿಮತ. ಪುಣ್ಯವನ್ನು ಆರ್ಜಿಸಿದವರು ಮರಣ ಪಶ್ಚಾತ್ ಸ್ವರ್ಗಕ್ಕೆ ಹೋದಮೇಲೆ ಸ್ವರ್ಗದಲ್ಲಿಯೂ ತಾಪತ್ರಯಗಳು ಜೀವನನ್ನು ಬೆನ್ನಟ್ಟುವುವು. ಈ ವಿಚಾರವನ್ನು ರಾ॥ ಬ॥ ಹಳಕಟ್ಟಿಯವರು ವಚನಶಾಸ್ತ್ರಸಾರ ಭಾಗ ೨. ಇದರಲ್ಲಿ ನಿರೂಪಿಸಿರುವರು. ಸ್ವರ್ಗಕ್ಕೆ ಹೋದ ಮೇಲೆ ಮೂರು ತಾಪಗಳು.

ಅವಾವುವೆಂದರೆ, ಕ್ಷಯ, ಅತಿಶಯ, ಸಾಹಸಪತನ. ಕ್ಷಯವೆಂದರೆ ಪುಣ್ಯ ನಶಿಸುವುದು. ಅತಿಶಯವೆಂದರೆ ನನ್ನಂತೆ ಪುಣ್ಯವನ್ನಾರ್ಜಿಸಿ ಸ್ವರ್ಗ ಲೋಕಕ್ಕೆ ಬರುವ ಪುಣ್ಯಾತ್ಮರುಗಳುಂಟೇ ಎಂಬ ಅಹಂಕಾರ. ಸಾಹಸ ಪತನವೆಂದರೆ ಪುಣ್ಯ ತೀರಿದ ಮೇಲೆ ಸ್ವರ್ಗ ಲೋಕದಿಂದ ತಳ್ಳಿ ಬಿಡುವುದು. ಆದುದರಿಂದ ಪುಣ್ಯ ಮತ್ತು ಪುಣ್ಯದಿಂದ ಲಭಿಸುವ ಸ್ವರ್ಗಸುಖವು ಅನಿತ್ಯವಾದವುಗಳೆಂದೇ ಜ್ಞಾನಿಗಳ ಅಭಿಮತ. ಈ ವಿಚಾರವನ್ನು ವಿರಹಲಿಂಗರಂಗ ಕವಿಯು ಅನುಭವಾಮೃತದ ವೈರಾಗ್ಯ ಪ್ರಕರಣದಲ್ಲಿ ಉದಹರಿಸಿದ ಒಂದು ಪದ್ಯವು ಬಹಳ ಸ್ವಾರಸ್ಯವಾಗಿದೆ.

"ಅದಿದು ಮಾಡಿ ಷೋಡಶ ದಾನವನು ಮಾನ। ಬೇಡಿದಂದದ ಅನ್ನಪಾನವ । ನೀಡಿ ವಿಪ್ರರಿಗೊಲಿಯುತಿಷ್ಟಾಪೂರ್ತಿಗಳ ಮುಗಿಸಿ ॥ ಮೋಡಿಯಲ್ಲದ ಪುಣ್ಯಫಲ ಕೈ । ಗೂಡೆ ಪರಲೋಕದಲಿ ಭೋಗಿಸಿ । ಕೂಡೆ ಕೆಡೆವ ವಿಮಾನದಿಂದಲಿ ಬಾಡಿ ಬಸವಳಿದು."

ಮೇಲಿನ ಉದಾಹರಣೆಗಳಿಂದ ಪುಣ್ಯದಿಂದ ನಿತ್ಯಸುಖವು ದೊರೆಯುದೆಂದು ಸ್ಪಷ್ಟವಾಗುತ್ತದೆ. ಮೊಗ್ಗೆಯ ಮಾಯಿದೇವ ಪ್ರಭುಗಳು ಶತಕತ್ರಯದಲ್ಲಿ, ಪುಣ್ಯವೇ ಪಾಪದ ಮೂಲವೆಂದೂ, ಪುಣ್ಯವನ್ನು ಮಾಡದಿದ್ದರೆ ಪಾಪವು ತನ್ನಷ್ಟಕ್ಕೆ ತಾನೇ ನಾಶವಾಗುವುದೆಂದೂ, ಪುಣ್ಯವನ್ನಾರ್ಜಿಸಿ ಪಾಪವನ್ನು ಬೇರೆ ಉಪಾಯಗಳಿಂದ ನಾಶಪಡಿಸುವುದೆಂದರೆ ಅದು ಸಾಧ್ಯವಿಲ್ಲವೆಂದೂ ಸ್ಪಷ್ಟವಾಗಿ ನಿರೂಪಿಸಿರುವರು.

"ಮೊದಲೊಳ್ ಪುಣ್ಯಮನಂತರಂ ಬಳಿಕ ಪಾಪಂ ಪುಣ್ಯಮೋ ನೋಡೆ ಪಾಪದ ಮೂಲಂ ಪರಿಹಾರಮುಂಟೇ ಬರಿದೆ ಪಾಪಕ್ಕೆ ಬೇರೊಂದು ಮಾ। ಟದಿ ನಾ ಪುಣ್ಯಮನಾಹ ಮಾಡದಿಹುದೇ ತನ್ಮೂಲ ಪಾಪಕ್ಕೆ ಕೇ। ಳದು ತಾನೇ ಪರಿಹಾರವೈಸೆ ಪುಸಿ ಮತ್ತೆಲ್ಲಂ ಶಿವಾವಲ್ಲಭಾ ॥"

"ಇದು ಅಲ್ಲದೆ ಪ್ರಭುಲಿಂಗಲೀಲೆಯಲ್ಲಿ ಚಾಮರಸರು ನಿರೂಪಿಸಿರುವುದೇನಂದರೆ, ಕರ್ಮಿಗಳು ಕರ್ಮವನ್ನು ಎರಡು ವಿಭಾಗ ಮಾಡಿರುವರು. ಅದು ಪುಣ್ಯ ಮತ್ತು ಪಾಪ. ಈ ಉಭಯ ಕರ್ಮಗಳಲ್ಲಿ ಜೀವನು ಒಂದು ಕರ್ಮವನ್ನು ಮಾಡಿದ್ದುಂಟಾದರೆ ಹುಟ್ಟು ಸಾವುಗಳಿಗೆ ತಾನೇ ಬೀಜವನ್ನು ಹಾಕಿಕೊಂಡಂತೆ ಎಂದು. ಅವರು ಅಪ್ಪಣೆ ಕೊಡಿಸಿರುವುದೇನಂದರೆ,

"ಕರ್ಮವಾತ್ರನೆ ಪಾಪನೆನ್ನನೆ ಕರ್ಮಲಂಪಟರುಗಳು ಪಾಪದ। ಕರ್ಮ ಪುಣ್ಯದ ಕರ್ಮವೆಂಬಿಂತೆರಡ ಮಾಡಿದರೂ॥ ಕರ್ಮವಾತ್ರನೆ ಭವದ ಬೀಜದ। ಧರ್ಮವೆಂದಾ ವೀರಶೈವದ। ಕರ್ಮಿಗಳು ನಿಷ್ಕರ್ಮರೆನಿಪರು ಗಿರಿಜೆ ಕೇಳೆಂದಾ."

ಎಂಬುದರಿಂದ ಕರ್ಮವನ್ನು ಮಾಡಲೇಕೂಡದೆಂದೂ ಕರ್ಮ ವಿರಹಿತರಾಗಿ ಆಚರಣೆಯನ್ನು ತಮ್ಮ ನಡತೆಯಲ್ಲಿ ಉಪಯೋಗಿಸಿಕೊಳ್ಳಬೇಕೆಂತಲೂ ವಿದಿತವಾಗುತ್ತದೆ. ಕರ್ಮವೆ ದರೆ ಕೆಲಸ ಅಥವಾ ಉದ್ಯೋಗ. ಮಾನವನು ಕರ್ಮವನ್ನು ಮಾಡಬಾರದೆಂದು ಹೇಳಿ ಕೈಕಾಲು ಕಟ್ಟಿಕೊಂಡು ಕುಳಿತುಕೊಳ್ಳಬೇಕೆಂಬರ್ಥವಲ್ಲ. ಪ್ರತಿಯೊಬ್ಬನೂ ಅವುದಾದರೊಂದು ಉದ್ಯೋಗ ಮಾಡಲೇಬೇಕೆಂದು ಶಿವಶರಣರು ಸಾರಿಸಾರಿ ಹೇಳಿದ್ದಾರೆ. ಆದರೆ ಉದ್ಯೋಗಗಳಲ್ಲಿ ಫಲಾಸೆ ಇರಕೂಡದೆಂದು ಅವರ ಅಭಿಪ್ರಾಯ. ಪರಮಾತ್ಮನನ್ನು ಪೂಜಿಸುವುದೂ ಧ್ಯಾನಿಸುವುದೂ ಕೂಡ ಮೋಕ್ಷಸಾಧನೆಯ ಉದ್ಯೋಗ. ಫಲಾಸೆಯಿಂದ ಲಿಂಗಪೂಜೆಯನ್ನು ಮಾಡುವವರನ್ನು ದಾನಧರ್ಮಗಳನ್ನು ಮಾಡುವವರನ್ನು ಶರಣರು ಕಟುತರವಾಗಿ ಟೀಕಿಸಿರುವರು ಮತ್ತು ಹಾಸ್ಯ ಮಾಡಿರುವರು. ಫಲಾಪೇಕ್ಷೆಯಿಂದ ಲಿಂಗಪೂಜೆ ಮಾಡುವವರನ್ನು ಪ್ರಭುದೇವರು ಈ ರೀತಿಯಾಗಿ ಟೀಕಿಸಿರುವರು. ಅವರು ಅಪ್ಪಣೆ ಕೊಡಿಸಿರುವುದೇನಂದರೇ,

"ಮಜ್ಜನಕ್ಕೆರದು ಫಲವ ಬೇಡುವರು. ತಮಗೆಲ್ಲಿಯದೋ ಆ ಫಲವು, ಸೀತಾಳಕ್ಕಲ್ಲದೆ? ಪತ್ರೆ ಪುಷ್ಪದಿಂದ ಪೂಜಿಸಿ ಫಲವ ಬೇಡುವರು ತಮಗೆಲ್ಲಿಯದೋ ಆ ಫಲವು, ಗಿಡಗಳಿಗಲ್ಲದೆ? ಸುಯಿಧಾನವನರ್ಪಿಸಿ ಪ್ರಸಾದದ ಫಲವ ಬೇಡುವರು. ತಮಗೆಲ್ಲಿಯದೋ ಆ ಫಲವು, ಹದಿನೆಂಟು ಧಾನ್ಯಕ್ಕಲ್ಲದೆ? ಲಿಂಗದೊಡವೆಯ ಲಿಂಗಕ್ಕೆ ಕೊಟ್ಟು ಫಲಪದವ ಬೇಡುವ ಸರ್ವ ಅನ್ಯಾಯಿಗಳನೇನೆಂಬೆನಯ್ಯ ಗುಹೇಶ್ವರಾ?"

ಫಲಾಸೆಯಿಂದ ಅನ್ನ ದಾನಗಳನ್ನು ನಡಸುವವರಿಗೆ ಬಸವಣ್ಣನವರು ಈ ರೀತಿಯಾಗಿ ಜರಿದಿರುವರು.

"ಅದಿದು ಉಂಡುದು ಬಂದೀತೆಂಬ ಸಂದೇಹಿ ಮಾನವ ನೀ ಕೇಳಾ, ಉಂಡುದೇನಾಯಿತ್ತೆಂಬುದ ನಿನ್ನ ನೀ ತಿಳಿದು ನೋಡಾ.

ಉಂಡುದು ಆಗಲೇ ಅಪ್ಯಾಯನವಾಯಿತ್ತು. ಆ ಉಂಡುದನುಣಬಂದ ಹಂದಿಯು ಬಾಳುವೆಯ ನೋಡಿ ಅನು ಮರುಗುವೆನಯ್ಯಾ ಕೂಡಲ ಸಂಗಮದೇವಾ."

ಹೀಗೆ ಹಂದಿಯು ಮಾನವರು ಉಂಡನ್ನವನ್ನು ಹಾಳುಗೇರಿಯಲ್ಲಿ ಮಲವಿಸರ್ಜನೆ ಮಾಡಿದ ಕೂಡಲೇ ಹೇಗೆ ಆ ಮಲವನ್ನು ಭುಂಜಿಸುವುದೋ ಹಾಗೆ ಕರ್ಮಾಸಕ್ತರು ಪುಣ್ಯ ಪಾಪಗಳೆಂಬ ಕರ್ಮಗಳನ್ನು ಸ್ವರ್ಗ ನರಕಗಳಲ್ಲಿ ಅನುಭವಿಸಿ ಪುನಃ ಪುನಃ ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳಲ್ಲಿ ಸತ್ತು ಸತ್ತು ಸುತ್ತಿ ಸುತ್ತಿ ಹುಟ್ಟಿ ಹುಟ್ಟಿ ಬಳಲುತ್ತಿರುವವರೆಲ್ಲ ಹಂದಿಗೆ ಸಮಾನರೆಂದು ಘೋಷಿಸಿರುವರು. ಇನ್ನು ಬಸವಣ್ಣನವರಿಗೆ ನಿಷ್ಕಾಮ ಕರ್ಮ ವಿಚಾರವು ಗೊತ್ತಿದ್ದರೂ ಕೂಡ ಆ ವಿಚಾರವನ್ನು ಪ್ರಭುದೇವರಿಂದಲೇ ನುಡಿಸಬೇಕೆಂಬ ಉದ್ದೇಶದಿಂದ ಅನುಭವಮಂಟಪದಲ್ಲಿ ಬಿನ್ನವಿಸಿಕೊಂಡದ್ದೇನಂದರೆ, ತನುಮನಧನವ ಕೊಟ್ಟು ನಾನು ಶುದ್ಧನಾದೆ ಕಾಣಾ ಪ್ರಭುವೇ ಎಂದು. ಇದಕ್ಕೆ ಪ್ರಭುವಿನ ನಿರೂಪಣೆ.

"ಮೇರು ಪರ್ವತಗಳೆಲ್ಲವೂ ಪ್ರಮಥರೊಡವೆ. ರಜತ ಗಿರಿಗಳೆಲ್ಲವೂ ಪುರಾತನರೊಡವೆ. ಪೃಥ್ವಿ ಎಂಬುದು ಕರ್ತಾರನ ಕಮ್ಮಟ. ಅಚ್ಚಿನ ಮನೆ ಬಾಣಸದ ಮನೆ. ತನು ಮನ ಧನಂಗಳೆಲ್ಲವೂ ನಮ್ಮ ಗುಹೇಶ್ವರಲಿಂಗದ ಸೊಮ್ಮು ನೀನೇನು ಕೊಟ್ಟು ಭಕ್ತನಾದೆ ಹೇಳಾ ಬಸವಣ್ಣಾ ? "

ಇದೇ ವಿಚಾರವನ್ನೇ ಚಾಮರಸರು ಪ್ರಭುಲಿಂಗಲೀಲೆಯಲ್ಲಿ ಸ್ವಾರಸ್ಯವಾಗಿ ಬಿಚ್ಚಿರುವರು ಅದು,

"ತನುವ ಕೊಟ್ಟೆನು ಮನವ ಕೊಟ್ಟೆನು ಧನವ ಕೊಟ್ಟೆನು ಕೊಟ್ಟೆನೆಂಬೀ । ಬಿನುಗು ಬಿಂಕವನಾಡಲಾತನು ಮನಧನಂಗಳನೂ ॥ ನಿನಗೆ ಕೊಟ್ಟವರಾರು? ನೀನಾ । ರಿನಿತನರಿಯದೆ ಬರಿದೆ ನುಡಿವುದು । ನಿನಗುಚಿತವೆ ಬಸವದಂಡಾಧೀಶ ಕೇಳೆಂದ "

ಆದುದರಿಂದ ಶಿವಕಾರ್ಯವನ್ನು ಮಾಡಿದರೂ ಪರಮಾತ್ಮನ ಸೊಮ್ಮು ಎಂಬ ಭಾವನೆಯಿಂದ ನಿರಾಶಾಭರಿತನಾಗಿ ಆಚರಿಸಬೇಕು. ಸಮರಸಾಚರಣೆ ಇಲ್ಲದೆ ಕಾಮ್ಯಭಕ್ತಿಯು ಸಲ್ಲದು. ಇದಕ್ಕೆ ಪ್ರಭು ನಿರೂಪ.

"ಕ್ಷೀರಸಾಗರದೊಳಗಿರುವ ಹಂಸೆ ಹಾಲ ಬಯಸಲುಂಟೇ? ಪುಷ್ಪದೊಳಗಿರುವ ತುಂಬಿ ಪರಿಮಳವನರಸಲುಂಟೇ? ಕಡಲೊಳಗಿರುವ ಕಪ್ಪೆ ಜಲವ ಬಯಸಲುಂಟೇ? ಇದೆಂತಯ್ಯ? ತಾ ಲಿಂಗದೊಳಗಿದ್ದ ಬೇರೆ ಇತರ ಕಾಮ್ಯದೊಳಗಿರ್ಪ ಭ್ರಾಂತರನೇನೆಂಬೆ ಗುಹೇಶ್ವರಾ."

ಈ ರೀತಿ ಪೂರ್ಣಾನುಭವವನ್ನು ಹೊಂದಿದ ವೇಳೆ ಅನುಭವಿಯು ತಾನು ಮಾಡುವ ಕ್ರಿಯೆ, ಮತ್ತು ಮಾಡಿಸಿಕೊಂಬ ವಸ್ತು, ಇವುಗಳಲ್ಲಿ ಸಮರಸಾಚರಣೆ ಉಂಟಾಗುತ್ತದೆ. ಕರ್ಮ ಮಾಡಲಿಕ್ಕೆ ನೀನು ಅಧಿಕಾರಿ, ಫಲಕ್ಕೆ ಅಧಿಕಾರಿಯಲ್ಲ, ಎಂಬ ಭಗವದ್ಗೀತೋಕ್ತಿಗಿಂತಲೂ ಮುಂದೆ ಒಂದಡಿ ಇಡುತ್ತಾನೆ. ಆನ ಭವಿಯು (ಶರಣನು) ಅಗ್ಗೆ ನಿಷ್ಕಾಮ ಕರ್ಮಕ್ಕಿಂತಲೂ ಸಹಜ ಕರ್ಮವೇ ಶ್ರೇಷ್ಠವೆಂದು ಅವನು ಪರಿವರ್ತನೆ ಹೊಂದುತ್ತಾನೆ. ಇಂಥ ಸಹಜ ಮಾಟವುಳ್ಳ ಶರಣರು ಅಪ್ಪಣೆಕೊಡಿಸುವುದೇನಂದರೆ,

"ಮಾಡುವ ತನುವು ನೀವೇಯಾದಿರಾಗಿ ನೀಡುವ ದ್ರವ್ಯವು ನೀವೇಯಾದಿರಾಗಿ ಕೊಡುವ ಮನವು ನೀವೇಯಾದಿರಾಗಿ ಇದು ಕಾರಣ ಅಖಂಡೇಶ್ವರಾ ನಿಮ್ಮ ಫಲಪದವ ಬೇಡಲಿಲ್ಲ, ನೀವು ಒಲಿದು ಎನಗೆ ಕೊಡಲಿಲ್ಲ."

ಇಂತಪ್ಪ ಸಹಜ ಕರ್ಮಯನ್ನು ಪುಣ್ಯ ಪಾಪಗಳು ಅದೆಂತು ಮುಸುಕಬಲ್ಲವು? ಆ ಬಗ್ಗೆ ಶರಣರ ಉತ್ತರ,

"ಗಾರುಡಿಗನ ವಿಷವಡರಬಲ್ಲುದೇ? ಸೂರ್ಯನ ಮಂಜು ಮುತ್ತಬಲ್ಲುದೇ? ಗಾಳಿಯ ಮೊಟ್ಟೆ ಕಟ್ಟಬಹುದೇ? ಅಗ್ನಿಯ ಕೈಯಿಂದ ಆಕಾಶ ಬೇಯಬಲ್ಲುದೇ? ನಿಮ್ಮನರಿದ ನಿಜಯೋಗಿಗೆ ಕರ್ಮಪಾಕ ವೆಲ್ಲಿಯದು ರೇಕಣ್ಣಪ್ರಿಯ ನಾಗಿನಾಥಾ"

ಮತ್ತಂ ॥

"ಪರುಷ ಮುಟ್ಟಲು ಕಬ್ಬಿನ ಹೊನ್ನಾದಂತೆ ಪುಣ್ಯಪಾಪವಿಲ್ಲ, ಸ್ವರ್ಗನರಕವಿಲ್ಲ, ನಿಮ್ಮವರಿಗೆ. ಕೂಡಲಚನ್ನಸಂಗಾ ನಿಮ್ಮ ಶರಣರು ಉಭಯ ವಿರಹಿತರು."

# ಜೀವನ ಚರಿತ್ರೆ.

(ಲೇಖಕರು — ಶ್ರೀಮಾನ್ ಉಪಾಧ್ಯಾಯ ಮ. ಮಲ್ಲಪ್ಪ ಕನ್ನಡ ಜಾಣ, ಸಾಹಿತ್ಯ ಶಿರೋಮಣಿ, ಜನತಾ ಜ್ಞಾನ ಪ್ರಚಾರಕ, ಅಖಿಲ ಭಾರತ ವೀರಶೈವ ವಿದ್ಯಾಪೀಠದ ಸದಸ್ಯರ, ಜ್ಞಾನಮಂದಿರ ಹಲಗೂರು)

---

ಸಕಲ ಜನ್ಮದಲ್ಲಿಯೂ ಶ್ರೇಷ್ಠ ಜನ್ಮವು ಮಾನವ ಜನ್ಮವು. ಜಗತ್ತಿನಲ್ಲಿ ಇತರ ಪ್ರಾಣಿಗಳಿಗಿಂತ ಮಿಗಿಲಾದ ವಿವೇಕ ವಿವೇಚನೆಯು ಮಾನವನಿಗಿದೆ. ಕೀರ್ತಿ ದೇಹಿಯಾಗಿರಬೇಕೆಂಬುದೇ ಬಾಳಿನ ಗುರಿಯಾಗಿರಬೇಕು. ಈತನಿಗೆ ಸರ್ವೋತ್ತಮ ಆಸ್ತಿಯಾದ ಸದ್ಗುಣವು ಈತನಲ್ಲಿ ಮೂರ್ತಿವತ್ತಾಗಿ ನೆಲೆಸಿರಬೇಕು. ಇದಕ್ಕೆ ಶಾಸ್ತ್ರ ಪರಿಚಯವೂ, ವಿದ್ವಜ್ಜನ ಸಂಗವೂ, ದೇಶಾಟನೆಯೂ, ಅನುಭವವೂ ಅಗತ್ಯವು. ಮಾನವನಿಗೆ ಬೇಕಾದ ಗುಣ ಸಂಪೂರ್ಣತೆಯನ್ನು ಗ್ರಂಥವು ನೀಡುತ್ತದೆ. ಪ್ರತಿಯೊಂದು ಗ್ರಂಥದ ಗುರಿಯು ಮಾನವನಿಗೆ ಸದುಪದೇಶವನ್ನು ಕೊಡುವುದು. ಕತ್ತಲೆಯಲ್ಲಿ ತೊಂದರೆ ತೊಡಕಿನಿಂದ ಪಡುಪಾಡು ಪಡುತ್ತಾ ಇರುವಾತನಿಗೆ ಲಾಂದ್ರದ ಬೆಳಕನ್ನು ತೋರಿಸಿ ಕೈಹಿಡಿದು ನಡೆಯಿಸುವ ಪುಣ್ಯಾತ್ಮರ ಸಹಾಯ ಸಹಕಾರವನ್ನು ಜೀವನ ಚರಿತ್ರೆಗಳು ಕೊಡುವುವು. ಒಬ್ಬ ಮಾನವನ ಹುಟ್ಟಿನಿಂದ ಸಾವಿನವರೆಗೂ ನಡೆದ ಸಂಗತಿಯನ್ನು ತಿಳಿಸುವ ಚರಿತ್ರೆಗೆ ಜೀವನಚರಿತ್ರೆಯೆಂದು ಹೆಸರು. ಜಗತ್ತಿನಲ್ಲಿ ಜನಿಸುವವರೆಲ್ಲರೂ ಎರಡು ಕೈ, ಎರಡು ಕಾಲು, ಎರಡು ಕಣ್ಣು, ಎರಡು ಕಿವಿಗಳನ್ನು ಪಡೆದಿದ್ದರೂ ಸಾಮಾನ್ಯರಿಗಿಂತ ಹೆಚ್ಚಿಗೆ ಗುಣ ಲೇಪನದಿಂದ ಅವರ ಮೆರಗು ಮಿರುಗುವುದು. ಅವರಿಗೆ ಆಪತ್ತು ವಿಪತ್ತುಗಳು ಎಡರು ತೊಡರುಗಳು ಬಂದರೂ ಅಂಜದೆ ಧೈರ್ಯ, ಶಾಂತಿ, ಶಮೆಯಿಂದ ಕಾರ್ಯವನ್ನು ಮಾಡುವರು. ನಮಗೆ ಆದರ್ಶವಾಗಿರುವ ವಿಭೂತಿಗಳ ದೃಷ್ಟಾಂತವನ್ನಿಟ್ಟುಕೊಂಡು ನಡೆದರೆ ನಮ್ಮ ಬಾಳು ಸುಗಮವಾಗುವದು. ಒಂದು ನಾಡಿನ ಇಲ್ಲವೇ ಜನತೆಯ ಚರಿತ್ರೆಯೇ ದೇಶದ ಚರಿತ್ರೆಯು. ದೇಶ ಚರಿತ್ರೆಯು ಜನತೆಯ ಉನ್ನತಾವನತಿಯಾದಿಯನ್ನು ತಿಳಿಸಿದರೆ,

ಜೀವನ ಚರಿತ್ರೆಯು ಮಾನವನೊಬ್ಬನ ಸಮಗ್ರ ವಿಚಾರವನ್ನು ತಿಳಿಸುತ್ತದೆ. ದೇಶ ಪ್ರೇಮಿಗಳಾಗಿ ಕೆಲಸ ಮಾಡಿ ತಮ್ಮ ತಮ್ಮ ಜನತೆಯನ್ನು ಉದ್ಧಾರ ಮಾಡಿದ ಮಹಾ ವಿಭೂತಿಗಳ ಜೀವನ ಚರಿತ್ರೆಗಳೇ ಜಗತ್ತಿನ ಚರಿತ್ರೆಯು. ಜಗತ್ತಿನ ಇತಿಹಾಸದ ಸಿಂಹಾವಲೋಕನ ಮಾಡಿದರೆ ಮಹತ್ವದ ಸಾಹಸದ ಕ್ರಿಯೆಗಳನ್ನು ಮಾಡಿದ ಪುರುಷರ ಚರಿತ್ರವು ನಮ್ಮ ಕಣ್ಣಿನ ಮುಂದೆ ಹಾಯ್ದು ಹೋಗುತ್ತದೆ ನಾಡಿನ ಸ್ಥಿತಿಗತಿಯಲ್ಲಿ ಸುಧಾರಣೆಯನ್ನು ಮಾಡಿದವರು ಹಲವರು; ಸಾಮಾಜಿಕ ಕ್ಷೇತ್ರದಲ್ಲಿ ಕ್ರಾಂತಿಯನ್ನು ಉತ್ಪತ್ತಿ ಮಾಡಿದವರು ಕೆಲವರು; ಧಾರ್ಮಿಕ ರಂಗಸ್ಥಳದಲ್ಲಿ ಮಹದುನ್ನತ ಜಾಗವನ್ನು ಪಡೆದವರು ಮತ್ತೆ ಕೆಲವು ಮಂದಿ; ರಾಜಕೀಯ ರಂಗಕ್ಷೇತ್ರದಲ್ಲಿ ಹಲವಾರು ಸಾಹಸ ಕಾರ್ಯಗಳನ್ನು ಮಾಡಿದವರು ಇನ್ನು ಹಲವು ಮಂದಿ. ಈ ತೆರನ ಸಂಗತಿಗಳು ಜೀವನ ಚರಿತ್ರೆಗಳಲ್ಲಿ ವಿಪುಲವಾಗಿ ಸಿಕ್ಕುತ್ತವೆ. ಅವುಗಳನ್ನು ಪಠಿಸುವುದರಿಂದ ಅವರ ಹಾಗೆಯೇ ನಾವು ಮುಂಬರಿಯಬೇಕೆಂಬ ಆಶಾಂಕುರವು ನಿಂತು ಕ್ರಿಯಾ ಶೂರರಾಗಲು ಅವಕಾಶವಾಗುವುದು. ಮಹಾ ವಿಭೂತಿ ಳ ಆಚರಣೆಯು ನಮ್ಮ ಅನುಷ್ಠಾನಕ್ಕೆ ಬಲವರ್ಧಕ ಸುಧೆಯು. ಮಹಾ ಪುರುಷರ ಕ್ರಿಯಾ ಮಹತ್ತು ನಮ್ಮ ನಮ್ಮ ಕ್ರಿಯೆಗೆ ಕೈಗೋಲು. ಹಿರಿಯ ಮಹರ್ಷಿಯರ ಜೀವನವು ನಮ್ಮ ಬಾಳ ಪಯಣಕ್ಕೆ ದಿಕ್ಸೂಚಿಯು ಹಾಗೂ ಆಶ್ರಯದಾತವು. ಜಗತ್ತಿನ ಚರಿತ್ರೆಯ ಸಾರವನ್ನು ಅರಿತುಕೊಳ್ಳುವುದಕ್ಕೆ ಅವರ ಜೀವನ ಚರಿತ್ರೆಗಳನ್ನು ಅಧ್ಯಯನ ಮಾಡುವುದಕ್ಕಿಂತ ಶ್ರೇಷ್ಠ ಮಾರ್ಗವು ಇನ್ನಾವುದೂ ಇಲ್ಲವು.

ಮಹಾ ವಿಭೂತಿಗಳಿಗೆ ಕಾಲ ದೇಶಗಳ ಬೆಡಗು ಬಿನ್ನಾಣಗಳಿಲ್ಲವು. ಕುಲಗೋತ್ರಗಳ ಬಿಂಕ ಬಿರಿತವಿರುವುದಿಲ್ಲವು. ವೇಷ ಭೂಷಣಗಳ ಕಟ್ಟು ಕಾಯಿದೆಗಳಿರುವುದಿಲ್ಲವು. ಅವರು ಜಗತ್ಪ್ರೇಮಿಗಳು. ವಿಶ್ವ ವಿಶ್ವಾಸಿಗಳು. ಜಗತ್ತಿನ ಇತಿಹಾಸವನ್ನು ನೋಡಿದರೆ ಅಲ್ಲಿ ಹಲವು ವಿಭೂತಿಗಳ ಬಾಳಿನ ಪುಣ್ಯ ಸಂದರ್ಶನವು ಲಭಿಸುವುದು. "ಸತ್ಯವಂತರ ನೀನು ಸತ್ತರೆಂದನಬೇಡ! ಹೆತ್ತಮ್ಮ ಮಗನ ಕರೆವಂತೆ ನಿನ್ನನವರೆತ್ತಿಕೊಂಬರು ಸರ್ವಜ್ಞ!!" ಸದ್ಗುಣಗಳ, ಸರ್ವಜ್ಞರ ಕೀರ್ತಿ ಪತಾಕೆಯು ಪ್ರತಾಪವಿಂತಿಹುದು. ವಿಭೂತಿ ಚರಿತೆಯ ವಾಚನದಿಂದ ವಾಚ

ಸುಲಭಸಾಧ್ಯವಾಗುವುದು. ಮಹಾ ವಿಭೂತಿಗಳ ಜೀವನ ಚರಿತ್ರೆಗಳಿಲ್ಲದ ಸಾಹಿತ್ಯವು ಜಲವಿಲ್ಲದ ಕೊಳವು.

ಪ್ರಾಚೀನರ ನಡೆನುಡಿಯು ಜೀವನ ಚರಿತ್ರೆಯಲ್ಲಿ ಅಚ್ಚೊತ್ತಿದೆ. ಅದರಿಂದ ಲಭಿಸುವ ನವನೀತವು ನಮ್ಮ ಬಾಳನ್ನು ಮೆದು ಮಾಡುತ್ತದೆ. ಮನುಷ್ಯನ ದೇಹಕ್ಕೆ ಬಲವರ್ಧಕ ರಸಾಯನವು ನೀಡುವ ಸವಿಯನ್ನು ಮಹನೀಯರ ಇಲ್ಲವೇ ವಿಭೂತಿಗಳ ಹಿತನುಡಿಗಳು ಜನತೆಗೆ ನೀಡಿ ಅದನ್ನು ಪುಷ್ಟಿಗೊಳಿಸುವುದು. ಮಹಾತ್ಮರ ಜೀವನ ಚರಿತ್ರೆಗಳು ನಮ್ಮ ಬಾಳನ್ನು ಪುನೀತಗೊಳಿಸಿ ಪಾವನ ಮಾಡುತ್ತವೆ. ಫ್ಲೂಟರ್ಕನ ಚರಿತ್ರೆಯೇ ಅಲ್ಪಯಿರಿನ ವಿದ್ಯಾರ್ಜನೆಗೆ ಅನುಕೂಲವಾದದ್ದು. ಸ್ಯಾಮುಯಲ್ ಮಹಾಶಯನು ಪ್ರಗತಿಶೀಲನಾಗಿ ಬಾಳಲು ಬೆಂಜಾಮಿನ್ ಪ್ರಾಂಕ್ಲಿನ್ ಚರಿತ್ರೆಯು ಮೂಲಭೂತವಾಯಿತು. ಕಾಟನ್ ಮಾದರ್ ಎಂಬಾತನ ಗ್ರಂಥವೇ ಪ್ರಾಂಕ್ಲಿನ್‌ನು ಜಗತ್ತಿನಲ್ಲಿ ಉದ್ಯೋಗಶೀಲ ಮಹಾಶಯನೆಂದು ಹೆಸರುವಾಸಿಯಾಗಲು ಕಾರಣವಾಯಿತು. ಥಾಮಸ್ ಮಹನೀಯನು ಬರೆದ ಪುಸ್ತಕಗಳು ನನ್ನ ಕರಗತವಾದವು. ಆತನು ಡಿಕೊಸ್ಸೋ ಮಹನೀಯನನ್ನು ಸ್ತೋತ್ರಮಾಡಿ ಬರೆದ ಪುಸ್ತಕವನ್ನು ಪಠಿಸಿದೆನು. ಆದರಲ್ಲಿ ಸೂಚಿತವಾದ ಹಾದಿಯು ನನ್ನನ್ನು ಯೋಗ್ಯ ಮಾರ್ಗದಲ್ಲಿ ನುಗ್ಗುವಂತೆ ಮಾಡಿತು. ಅದು ನನ್ನ ಮೇಲ್ಮೆಗೂ, ಕೀರ್ತಿಗೂ ಕಾರಣವಾಯಿತು" ಎಂದು ಸ್ಯಾಮುಯಲ್‌ರಾಕುಲೀ ಎಂಬುವನು ನುಡಿದಿರುವನು. ಮಹಾ ವಿಭೂತಿಗಳ ಅಪರಮಿತ ಪ್ರಭಾವವು ಜನತೆಯ ನರನಾಡಿಯಲ್ಲಿ ನಲಿದಾಡಿ, ನಾಟ್ಯವಾಡಿ ಜನತೆಯನ್ನು ಜನಾರ್ದನನನ್ನಾಗಿ ಮಾಡುವುದರಲ್ಲಿ ಅಚ್ಚರಿಯೇನಿದೆ? ಖಾದಿಯ ಉದ್ಧಾರಕ್ಕಾಗಿ, ಅಹಿಂಸೆಯ ಸ್ಥಾಪನೆಗಾಗಿ ಹಿಂದಿಯನ್ನು ರಾಷ್ಟ್ರಭಾಷೆಯನ್ನಾಗಿ ಮಾಡವುದಕ್ಕಾಗಿ, ಪಾಶ್ಚಿಮಾತ್ಯ ನಾಗರೀಕತೆಯನ್ನು ನುಲಿದು ನುಗ್ಗೇಕಾಯಿಯನ್ನಾಗಿ ಮಾಡಿ ಭಾರತೀಯ ನಾಗರೀಕತೆಯನ್ನು ಧವಳಗಿರಿಗೇರಿಸುವುದಕ್ಕಾಗಿ ಹರಿಜನರ ಸುಧಾರಣೆಗಾಗಿ, ಜಗತ್ತಿನ ಸುಖಕ್ಕಾಗಿ ಇಡೀ ತಮ್ಮ ಭೋಗವನ್ನು ಮರೆತು ಜಗತ್ತಿನ ಮಂಗಳಕಾಗಿ ಟೊಂಕ ಕಟ್ಟಿ ನಿಂತಿದ್ದ ಅಭೂತಪೂರ್ವ ಮಹಾವ್ಯಕ್ತಿಯಾದ ಮಹಾತ್ಮಾ ಗಾಂಧಿಯವರ ಆತ್ಮಚರಿತ್ರೆಯು ಎಷ್ಟು ಜನರ ಮನವನ್ನು ಕದಡಿ

ಕೆಸರನ್ನು ಕಳೆದು ನಿರ್ಮಲ ಜಲದಿಂದ ಉಕ್ಕುವಂತೆ ಮಾಡಿಲ್ಲ? ಮಹಾ ವಿಭೂತಿಗಳು ಜನಿಸಿದ ನಾಡು ಪವಿತ್ರ ನಾಡು. ಮಹಾ ವಿಭೂತಿಗಳ ನಾಮಸ್ಮರಣೆಯೇ ಅಂತರಂಗ ಶುದ್ಧಿಯನ್ನು ಮಾಡುವ ಚೊಕ್ಕ ಸ್ನಾನವು. ಮಹಾಪುರುಷರ ಸಂಪರ್ಕ ಸಾಂಕಲ್ಯವನ್ನು ಪಡೆದಿರುವ ಜನರೇ ಸುಕೃತವಂತರು ಪಾವನತರ ಪುಣ್ಯಶಾಲಿಗಳು.

ಪ್ರಪಂಚದ ಇತಿಹಾಸದಲ್ಲಿ ಗುರುತ್ವದ ಕ್ರಿಯೆಗಳನ್ನು ಮಾಡಿದವರು ಹಲವರಿದ್ದಾರೆ. ಧಾರ್ಮಿಕ ಕ್ಷೇತ್ರದಲ್ಲಿ ಪಟ್ಟಗದ್ದುಗೆಯನ್ನು ಪಡೆದವರು ಪಲವು ಮಂದಿಯು. ಸಾಮಾಜಿಕ ರಂಗಭೂಮಿಯಲ್ಲಿ ಕ್ರಾಂತಿಯನ್ನುಂಟುಮಾಡಿ ಜನತೆಗೆ ಕಾಂತಿಯನ್ನು ಕೊಟ್ಟವರು ಹಲವರು. ರಾಜಕೀಯ ರಂಗದಲ್ಲಿ ಹಲವು ಸಾಹಸೀಯ ಕೆಲಸಗಳನ್ನು ಮಾಡಿ ದೇಶದ ಪರಿಸ್ಥಿತಿಯಲ್ಲಿ ಮಾರ್ಪಾಡನ್ನು ಮಾಡಿದ ಮಹಾ ವಿಭೂತಿಗಳು ಕೆಲವು ಜನ. ಈ ಮಂದಿಯಲ್ಲಿ ಉದಾತ್ತ ಉನ್ನತ ಧ್ಯೇಯವನ್ನಿಟ್ಟುಕೊಂಡು ಅದಕ್ಕಾಗಿ ಕೊನೆಯ ವರೆಗೂ ಎಷ್ಟೇ ಕಷ್ಟಗಳು ಬಂದರೂ ಅವುಗಳನ್ನು ಅಲಕ್ಷಿಸಿ ಸತತ ಶ್ರಮದಿಂದ ಕೈಹಾಕಿ ಸಿದ್ಧಿಯನ್ನು ಪಡೆಯುತ್ತಾರೆ. ಚಂಚಲತೆಯನ್ನು ನೀರು ಮಾಡಿ ನಿರ್ಧರತೆಯಿಂದ ಮುನ್ನುಗ್ಗುವರು. ಇವರ ನಿರ್ಮಾಪಕ ಶಕ್ತಿಯಿಂದ ಇವರ ಕ್ರಿಯಾ ಚಟುವಟಿಕೆಗಳು ಸತತವೂ ರಚನಾತ್ಮಕವಾಗಿರುತ್ತವೆ. ನಿರ್ಭೀತಿ, ಸಹನೆ, ಶಾಂತಿ, ನಿಧಾನ, ಪ್ರಶಾಂತತೆಯು ಯಾವಾಗಲೂ ಕಂಗೊಳಿಸುತ್ತಿರುತ್ತದೆ. ಸುಲಭ ಕೆಲಸಗಳನ್ನು ಕೇಳದೆ, ಸುಲಭಸಾಧ್ಯವಾಗದ ಕಾರ್ಯಗಳನ್ನು ಬಹು ಕಾತುರದಿಂದ ಕಾದು ಕೇಳಿ ಮಾಡಲು ನಿಲ್ಲುವರು. ಆರಂಭದಲ್ಲಿ ಪಡೆದ ಉತ್ಸಾಹವನ್ನು ಅಂತ್ಯದಲ್ಲಿಯೂ ಪಡೆಯುವರು. ಎದೆಗಾರಿಕೆತನವಾದ ವ್ಯವಹಾರದಲ್ಲಿನ ಕಾಠಿಣ್ಯವನ್ನು ಕರಗಿಸುವ ಕಹಳೆಯೇ ಇವರ ಜೀವವು. ಮನಶ್ಶಕ್ತಿ, ಧೈರ್ಯ, ಸ್ಥೈರ್ಯ, ಸತತ ಯತ್ನಾದಿಗಳಿಂದ ಪರಿಪಕ್ವತೆಯನ್ನು ಪಡೆದವರ ಚರಿತ್ರೆಯು ಪಾವನವಲ್ಲೆ!

# ಬಸವಣ್ಣನವರ ದರ್ಶನಕ್ಕೆ ಸುದರ್ಶನದ ಆವಶ್ಯಕತೆ.

(ಬರೆದವರುಃ- ಶ್ರೀ ಅನ್ನದಾನೀಶ್ವರ ವಿರಕ್ತಮಠ ಮು. ರಾಣೀನ್ನೂರು)

ಸುದರ್ಶನವೆಂದರೆ ನಿರ್ವಿಕಾರದ ಕಣ್ಣು. ಜ್ಞಾನನೇತ್ರ. ನಿರ್ವಿಕಾರದಿಂದ, ಜ್ಞಾನದಿಂದ ಬಸವಂಣನವರನ್ನು ನೋಡಿದರೆ ಅವರ ಆಧ್ಯಾತ್ಮಿಕ ವಿರಾಟ್ ಸ್ವರೂಪವು ಹೊಳೆಯುವದು. ಮಾನವ ಸಮಾಜ ಸೇವೆಗೆ ಆಧ್ಯಾತ್ಮಿಕ ಸ್ವರೂಪವನ್ನು ಕೊಟ್ಟು, ಜಾಗತಿಕ ವ್ಯವಹಾರಗಳಿಗೆ ನೈತಿಕ ಹಿನ್ನೆಲೆಯನ್ನು ಹಾಕಿಕೊಟ್ಟ ರಾಜಕಾರಣಕ್ಕೆ ಶಿವದೀಕ್ಷೆ ಕೊಟ್ಟ, ಆತ್ಮೋನ್ನತಿಗೆ ಸಾಮೂಹಿಕ ಲಿಂಗಯೋಗದ ಸಮರಸ ಮಾರ್ಗವನ್ನು ನಡೆದು ತೋರಿಸಿದ, ಮಹಾನುಭಾವರಾದ ಬಸವಂಣನವರ ಪೂರ್ಣ ದರ್ಶನವು ಸುದರ್ಶನವಿಲ್ಲದೆ ಗೋಚರನಾಗಲಾರದು. ಬಸವಂಣನವರ ವಚನಗಳ ಸಂದರ್ಭೋಚಿತವಾದ ಸಮಂಜಸ ಅರ್ಥವು ಸುದರ್ಶನಕ್ಕೆ ಮಾತ್ರ ವೇದ್ಯವಾಗುವದು. ಅನುಭವ ಮಂಟಪದಲ್ಲಿ ಶೂನ್ಯಸಂಪಾದನೆಯಲ್ಲಿ, ಪೂರ್ಣ ಸಮಾಜ ರಚನೆಯಲ್ಲಿ, ಸಮಾಜ ಸೇವೆಯಲ್ಲಿ, ರಾಜಕಾರಣದಲ್ಲಿ, ಅಹಿಂಸಾತ್ಮಕ ಸತ್ಯಾಗ್ರಹ ಹೋರಾಟದಲ್ಲಿ, ಪ್ರಭುರಾಜ್ಯ ಸ್ಥಾಪನೆಯ ವಿಶ್ವಪ್ರಯತ್ನದಲ್ಲಿ, ಬಸವಂಣನವರು ಆಡಿದ ಪಾತ್ರವನ್ನು ನೋಡಿದರೆ ಅವರ ಪೂರ್ಣ ದರ್ಶನವಾಗುವದು ಸಾಧ್ಯ. ಕಾರಣ ಸುದರ್ಶನವೇ ಬೇಕು. ಸುದರ್ಶನವಿಲ್ಲದಿದ್ದರೆ ನಾನು ತಿಳಿದದ್ದೇ ಬಸವಂಣನವರ ದರ್ಶನವೆಂದು ಹೇಳುವ ಅಪಾರ್ಥದಿಂದ ಅನ್ಯಾಯ ಅನರ್ಥಗಳುಂಟಾಗುವವು.

ದರ್ಶನವೆಂದರೆ ತತ್ವ ವಿಚಾರವೆಂದಿಟ್ಟುಕೊಳ್ಳೋಣ. ಹಾಗಾದರೆ ಬಸವಂಣನವರ ದರ್ಶನವಾವುದು? ಶಕ್ತಿ ವಿಶಿಷ್ಟಾದ್ವೈತ ಅಥವಾ ಲಿಂಗಾಂಗ ಸಾಮರಸ್ಯ. ಇದು ಬಸವಂಣನವರ ದರ್ಶನ. ಲಿಂಗಾಂಗ ಸಾಮರಸ್ಯ ಧ್ಯೇಯವನ್ನು ಮುಟ್ಟಲಿಕ್ಕೆ ಸಾಧನವಾವುದು? ಷಟ್ಸ್ಥಲಾಚರಣೆಯು ಸಾಧನ ಮಾರ್ಗ. ಧ್ಯೇಯವು ನಿರ್ದಿಷ್ಟವಾಗಿದೆ. ಸಾಧನ ಮಾರ್ಗವೂ ನಿರ್ದಿಷ್ಟವಾಗಿದೆ. ಷಟ್ಸ್ಥಲವಾವುದು? ಭಕ್ತ,

ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಇದೇ ಷಟ್‌ಸ್ಥಲ. ಭಕ್ತನಲ್ಲಿ ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಸ್ಥಲಗಳು ಓತಪ್ರೋತವಾಗಿವೆ. ವಿಂಗಡಿಸಲಿಕ್ಕೆ ಸಾಧ್ಯವಿಲ್ಲ. ಬಸವಂಣನವರ ದರ್ಶನದಲ್ಲಿ ಭಕ್ತಿ, ಜ್ಞಾನ, ಕ್ರಿಯೆಗಳು ಬೇರೆ ಬೇರೆ ಇರಲಿಕ್ಕೆ ಸಾಧ್ಯವೇ ಇಲ್ಲ. ಬಸವಂಣನವರ ದರ್ಶನದಲ್ಲಿ ಪ್ರದಿಪಾದಿಸಲ್ಪಟ್ಟ ಜ್ಞಾನವು ಸಾಧಕನನ್ನು ವಿಚಾರದ ಮರುಳು ಗಾಡಿನಲ್ಲಿ ಒಯ್ದು ದಾರಿಗಾಣದಂತೆ ಮಾಡುವದು ಸಾಧ್ಯವೇ ಇಲ್ಲ.

ಭಕ್ತಿಯು ಕುಳಸ್ಥಳ ಅಂದರೇನು? ಷಟ್‌ಸ್ಥಲವೆಂದರೆ ಭಕ್ತಿಯು ಕುಳಸ್ಥಳವೆಂದು ವಚನ ಸಾಹಿತ್ಯದಲ್ಲಿ ಅರ್ಥವಾಗುತ್ತದೆ. ಬಸವಂಣನ ಭಕ್ತಿ ಓಜೆಯೋಜೆ ಅಂದರೆ ಭಕ್ತಿಯ ರೀತಿಯು ವಿಶಿಷ್ಟವಾದದ್ದು. ಷಟ್ಸ್ಥಲಾತ್ಮಕವಾದ ಭಕ್ತಿಯೇ ಆ ವೈಶಿಷ್ಟ್ಯ. ಬೇರೆ ದರ್ಶನಗಳಲ್ಲಿ ಷಡ್ವಿಧ ಭಕ್ತಿಗೆ ಭಕ್ತಿಯೆಂದೂ ಅಂಥ ಭಕ್ತಿಯಿದ್ದರೆ ಭಕ್ತನೆಂದೂ ಹೇಳುತ್ತಾರೆ. ಆದರೆ ಬಸವಂಣನವರ ದರ್ಶನದಲ್ಲಿ ಷಟ್‌ಸ್ಥಲ ಭಕ್ತಿಯಿದ್ದವನೇ ಭಕ್ತನೆಂದು ಕರೆಯಿಸಿಕೊಳ್ಳುತ್ತಾನೆ. ಭಕ್ತ ಭಾಂಡಾರಿಯೆಂದರೆ ಷಟ್‌ಸ್ಥಲ ಬ್ರಹ್ಮತತ್ವವನ್ನು ಭಾವದಲ್ಲಿ ತುಂಬಿಕೊಂಡು ಬಾಹ್ಯ ಕ್ರಿಯೆಗಳಲ್ಲಿ ಸಮರಸಗೊಳಿಸುವಂಥವನೆಂದು ಅರ್ಥವಾಗುತ್ತದೆ.

ಬಸವಂಣನವರ ದರ್ಶನದಲ್ಲಿ ಗುರುವಿಗೆ ತನುವನ್ನು, ಲಿಂಗಕ್ಕೆ ಮನವನ್ನು, ಜಂಗಮಕ್ಕೆ ಧನವನ್ನು ಅರ್ಪಿಸಬೇಕೆಂದು ಹೇಳಿದೆ. ತನು, ಮನ, ಧನ ಅಥವಾ ಜೀವಾತ್ಮಗಳನ್ನು ಅರ್ಪಿಸಿದ ಮೇಲೆ ಏನು ಉಳಿಯಿತು? ಏನೂ ಇಲ್ಲ. ಅದಕ್ಕೇನೇ ಶೂನ್ಯಸ್ಥಲವೆನ್ನುತ್ತಾರೆ. ಸರ್ವಾರ್ಪಣವೆಂದರೂ ಇದೇ. ಲಿಂಗಾಂಗ ಸಾಮರಸ್ಯಜ್ಞಾನವುಳ್ಳವನೇ ಗುರುವು. ಆ ಜ್ಞಾನಾಮೃತವನ್ನು ಜಗತ್ತಿಗೆ ನೀಡುವವನೇ ಜಂಗಮ. ಗುರುವಿಗೆ ತನುವನ್ನು ಅರ್ಪಿಸಿದರೆ ಕಾಯಕ ಮಾಡಿ ಲಿಂಗಾಂಗ ಸಾಮರಸ್ಯ ಜ್ಞಾನವನ್ನು ಪಡೆ ಎಂದು ಹೇಳುತ್ತಾನೆ. ಲಿಂಗಕ್ಕೆ ಮನವನ್ನರ್ಪಿಸಿದರೆ ಲಿಂಗದ ಅರುಹಿನಿಂದ ಭೋಗ್ಯ ವಸ್ತುಗಳನ್ನು ಉಪಭೋಗಿಸು ಮತ್ತು ಎರಡನೆಯವರಿಗೆ ಉಪಭೋಗಿಸಲಿಕ್ಕೆ ಅವಕಾಶ ಕೊಡು ಎಂದು ಆದೇಶಿಸುತ್ತದೆ. ಕಾಯಕದಿಂದ ಬಂದ ಧನವನ್ನು ಜಂಗಮಕ್ಕೆ ಅರ್ಪಿಸಿದರೆ ಜಂಗಮನು ಮಾನವ ಸಮಾಜ

ಕರು ಭಾವನಾವಶರಾಗುವರು. ಮಹಾ ವಿಭೂತಿಗಳ ದೇಹವು ಇಂದು ಇಲ್ಲಿಲ್ಲದಿದ್ದರೂ ಅವರ ಕೀರ್ತಿ ದೇಹವು ಮಾತ್ರ ಅವರ ಮಹ ತ್ಕಾರ್ಯಗಳಿಂದ ಇನ್ನೂ ಹೊಂಬೆಳಗಾಗಿ ಹೊಳೆಯುತ್ತಲಿರುವುದು. ಉತ್ತಮ ಪುರುಷರ ಜೀವನ ಚರಿತ್ರಗಳೇ ನಮ್ಮ ಅಭ್ಯುದಯಕ್ಕೆ ಉಪ ಕರಣಗಳು. ಚರಿತ್ರೆಗಳು ತ್ರಿಕಾಲದಲ್ಲಿಯೂ ಹಿತವನ್ನು ನೀಡುವುವು. ಮಹನೀಯರ ನಡೆನುಡಿಗಳು ಇಂದು ನಮಗೆ ಪುಸ್ತಕರೂಪದಲ್ಲಿ ದೊರ ಕಿವೆ. ಮಾನವ ಯಂತ್ರಕ್ಕೆ ಜೀವನ ಚರಿತ್ರೆಯು ಶಕ್ತಿವರ್ಧಕ ತೈಲವು. ಮಾನವರ ಮತಿವರ್ಧನೆಗೆ ಇದು ಸಂವರ್ಧನೆಯ ಸಂಜೀವನವು. ಹಲವು ಮಹನೀಯರು ಸ್ವಾತಂತ್ರ್ಯ, ದೇಶಾಭಿಮಾನ, ಪ್ರಾಮಾಣಿಕ ತೆಗಳಿಗಾಗಿ ಕಾದಾಡಿ ಹಲವು ವಿಧದ ಕಷ್ಟನಷ್ಟಗಳಿಗೆ ಸಿಕ್ಕಿ ಬಂದ ದ್ದನ್ನು ಅನುಭವಿಸಿ ಆತ್ಮಸಮರ್ಪಣೆಯನ್ನು ಮಾಡಿರುವರು. ಮತ್ತೆ ಕೆಲವರು ನ್ಯಾಯನಿಷ್ಠೆಗಾಗಿ ಟೊಂಕ ಕಟ್ಟಿ ನಿಂತು ಕೆಲಸ ಮಾಡುತ್ತಿ ರುವ ವೇಳೆಯಲ್ಲಿ, ಅದರ ಬೆಲೆಯನ್ನು ತಿಳಿಯದೆ ನೀಚರು ತಮ ತಮಗೆ ಕೊಟ್ಟ ಬಗೆಬಗೆಯ ಹಿಂಸೆಗಳನ್ನು ಅನುಭವಿಸಿ ತಮ್ಮ ಬಾಳನ್ನೇ ಧಾರೆಯೆರೆದು ಕೀರ್ತಿಶೇಷರಾಗಿರುವರು. ಅವರ ಸಾಹಸ ಕಾರ್ಯ ಗಳು ಇಂದೂ ಜನಗಳ ಸ್ಮೃತಿಪಥದಲ್ಲಿ ಇದ್ದೇ ಇರುವುವು. ಉತ್ತಮ ಕೀರ್ತಿಯನ್ನು ಸಂಪಾದಿಸಿ ಸದ್ಗತಿಯನ್ನು ಹೊಂದಿದ ಹಿಂದಿನ ಮಹಾ ಪುರುಷರ ಸಚ್ಚರಿತ್ರೆಗಳೆಂಬ ತಾರೆಗಳ ದಿವ್ಯಪ್ರಕಾಶದ ರಾಶಿಯ ಸಹಾ ಯದಿಂದ ಇಂದು ನಾವು ನಮ್ಮ ಉನ್ನತಿಯನ್ನು ಕಾಣಬೇಕು.

ಜೀವನ ಚರಿತ್ರೆಯು ಜನಗಳ ಹೃದಯಾಕರ್ಷಣೆಗೆ, ಹುರಿದುಂ ಬಿಸುವಿಕೆಗೆ, ಉತ್ತಮ ಭಾದನೆಯ ನೆಲಸುವಿಕೆಗೆ ಅನುಕೂಲವು. ನಮ್ಮ ಹಾಗೆಯೇ ಬಾಳಿ ಬದುಕಿದ, ತಮ್ಮ ತಮ್ಮ ಶಕ್ತಿ ಸಾಹಸಗಳಿಂದ ನಿರಾ ಶೆಯನ್ನೂ, ಅಪಜಯವನ್ನೂ ಹೊಡೆದೋಡಿಸಿ, ಕಾರ್ಯಮಧ್ಯದಲ್ಲಿ ಬಂದ ಎಡರುತೊಡರುಗಳಿಗೆ ಹೆದರದೆ ಜಯಶೀಲರಾದ ದಿವ್ಯ ಪುರು ಷರನ್ನು ಕಾಣಬಹುದು. ಮಾನವನ ಧರ್ಮ ಸಮುಜ್ವಲವಾಗಿ ಸಂಪೂರ ಸುಂದರ ರೂಪದಲ್ಲಿ ಸಬಲವಾಗಿ ತನ್ನನ್ನು ಪ್ರಕಾಶಪಡಿಸಿಕೊಳ್ಳುವಲ್ಲಿ ಮಹದಾನಂದವು ಇರುತ್ತದೆ. ಅಲ್ಲಿ ನಮ್ಮ ಆತ್ಮೋದ್ಧಾರದ ಸಂವರ್ಧ ನೆಗೆ ಅವಕಾಶವಿದೆ. ಬದ್ಧವೂ, ಸಂಕುಚಿತವೂ ಆದ ನಮ್ಮ ಪ್ರಕೃತಿಯು

ಅವರಲ್ಲಿಯೇ ಮುಕ್ತವೂ ಪ್ರಸಾರಿಕವೂ ಆಗಿರುವುದನ್ನು ಕಾಣುತ್ತೇವೆ. ನಮ್ಮ ಸ್ವಭಾವವನ್ನೇ ಬಗೆಬಗೆಯ ಜನರಲ್ಲಿ ಬಗೆಬಗೆಯ ನಾಡಿನಲ್ಲಿ ಬಗೆಬಗೆಯ ಸಂಘಟನೆಗಳಲ್ಲಿ ಬಗೆಬಗೆಯ ಪರಿಮಾಣಗಳಲ್ಲಿ ಮತ್ತು ಬಗೆಬಗೆಯ ಆಕಾರಗಳಲ್ಲಿ ನೋಡಿ ರಸಗ್ರಹಣ ಮಾಡುತ್ತೇವೆ. ಅಲ್ಲಿ ಲಭಿಸುವ ಮಾನವನ ಪರಿಚಯವನ್ನು ನಮ್ಮ ಮನಸ್ಸಿಗೆ ಬೇಕಾದಂತೆ ಮಾರ್ಪಡಿಸಿ, ನಮ್ಮ ಇಚ್ಛಾ ಪೂರ್ತಿಯಾಗುವಂತೆ ಸಜ್ಜುಗೊಳಿಸಿ ಶಾಶ್ವತವಾಗಿ ನಿಲ್ಲುವಂತೆ ಯತ್ನ ಬೇಕು.

ನಾವು ನಮ್ಮ ಅನುಭವದ ದೃಷ್ಟಿಯಿಂದ ಆ ವಿಭೂತಿಯನ್ನು ವಿಮರ್ಶಿಸುತ್ತೇವೆ. ಆತನ ಸ್ಥಿತಿಗತಿಯಲ್ಲಿಯೇ ನಾವು ಲೀನವಾಗಿ ಆತನ ದೈನಂದಿನ ಅನುಭವವನ್ನು ನಾವು ಪಡೆಯುತ್ತೇವೆ. ಆತನಿಗೆ ಕಾಣ ಬಂದ ಸಂಗತಿಗೂ ಆಶಾಆಕಾಂಕ್ಷೆಗಳು, ಮಾನಸಿಕ ಭಾವನೆಗಳು ನಮಗೂ ಲಭಿಸುವುವು. ನಮ್ಮ ಹಾಗೆಯೇ ಮಳೆ, ಬೆಳೆ, ಬಿಸಿಲು, ಗಾಳಿ, ಸಿಡಿಗು, ಕಷ್ಟ, ದಾರಿದ್ರ್ಯ, ಬಡತನ, ಇತ್ಯಾದಿಗಳ ಪರಿಚಯ ಪರಿಶ್ರಮವನ್ನು ಆತನೂ ಅನುಭವಿಸಿದವನು ದೈನಂದಿನ ಕಾರ್ಯದಲ್ಲಿಯೇ ನಮ್ಮಂತೆಯೇ ನಿರತನಾಗಿದ್ದು ಮಹಾ ಕಾರ್ಯಗಳನ್ನು ಸಾಧಿಸಿದವನ ಚರಿತ್ರೆಯೇ ಜೀವನ ಚರಿತ್ರೆಯ ವಸ್ತು. ಮಹಾ ವಿಭೂತಿಯು ನಿಜವಾಗಿಯೂ ನಮ್ಮ ಎದುರಿಗೆ ಬಂದು ನಿಂತಿರುವಂತೆ ಕಾಣುವುದಲ್ಲದೆ, ಆತನ ಪ್ರತಿಯೊಂದು ಸಾಹಸ ಕಾರ್ಯವೂ ನಮ್ಮ ಕಣ್ಣಿಗೆ ಕಟ್ಟಿದಂತಿರುವುದು. ಆತನ ನಿರಂತರೋತ್ಸಾಹವೂ, ದೃಢಪ್ರತಿಜ್ಞೆಯೂ, ಕಾರ್ಯ ಸಾಧನೆ ಯಲ್ಲಿ ಸ್ಥಿರಬುದ್ಧಿಯೂ ಇದ್ದ ಪಕ್ಷದಲ್ಲಿಯೇ ನಾವೂ ಆತನಂತೆಯೇ ಸಾಹಸ ಕಾರ್ಯಗಳನ್ನು ಮಾಡಬಹುದೆಂಬ ಭಾವನೋದಯವು ಜನಿ ಸುವುದು. ಮಹಾ ಪುರುಷನ ಗುಣ ಮತ್ತು ಕಾರ್ಯ ವರ್ಣನೆಯು ನಮ್ಮನ್ನು ರೋಮಾಂಚನಗೊಳಿಸುತ್ತದೆ. ಪುರುಷಪುಂಗವರ ಚರಿತ್ರೆ ಯಿಂದ ಜನಸಾಮಾನ್ಯದಲ್ಲಿ ಮಹತ್ವಾಕಾಂಕ್ಷೆ, ಕಷ್ಟಸಹಿಷ್ಣುತೆ, ಉದ್ಯೋ ಗಶೀಲತೆ, ಇತ್ಯಾದಿ ಸದ್ಗುಣಗಳು ಮನೆಮಾಡುತ್ತವೆ. ಪುರುಷೋತ್ತ ಮರು ತಮ್ಮ ಬಾಳನ್ನೇ ಪರೋಪಕಾರದ ಸಲುವಾಗಿ ಸಮರ್ಪಿಸು ವರು. ಜಗತ್ತಿನಲ್ಲಿ ಜನತೆಯ ಒಳಜಗಳವು ಹೆಚ್ಚಿಸಿದಾಗ, ಸತ್ಯ, ಧರ್ಮ, ಕರ್ಮಗಳಿಗೆ ಏಟು ಬಿದ್ದಾಗ ಪುರುಷಪುಂಗವರು ಉದಯಿಸಿ ಜನತೆ ಯನ್ನೇ ಪುನೀತ ಪವಿತ್ರವನ್ನಾಗಿ ಮಾಡುವರು. ನಾಡಿನಲ್ಲಿ ಆಗ

ಹೋದ ಪ್ರಸಿದ್ಧ ವ್ಯಕ್ತಿಗಳ ಆದರ್ಶ ಜೀವನವನ್ನೂ, ವಿಶಿಷ್ಟವಾದ ಸದ್ಗುಣಗಳನ್ನೂ ಸ್ಮರಿಸಿ ಅವುಗಳ ಜ್ಞಾನವನ್ನು ಕಾಲಕಾಲಕ್ಕೆ ಮಾಡಿಕೊಟ್ಟರೆ ನಾಡು ನಾಕವಾಗುತ್ತೀತು.

ಸ್ವಾರ್ಥಪರತೆಯು ಅಣುಮಾತ್ರವೂ ಇಲ್ಲದೆ ತ್ಯಾಗರಾಜನಾಗಿಯೂ, ಕರುಣಾದ್ರ್ರಹೃದಯನಾಗಿಯೂ, ಸಚ್ಛೀಲನಾಗಿಯೂ, ವಿಶ್ವಪ್ರೇಮಿಯಾಗಿಯೂ ಇದ್ದು ದಿವ್ಯಪ್ರಭೆಯಿಂದ ಬೆಳಗಿದ ಜ್ಯೋತಿಯು ಬುದ್ಧ. ಅಹಿಂಸೆಯ ಪ್ರಚಾರದಲ್ಲಿ ದೇಹವನ್ನು ಸಮರ್ಪಿಸಿದ ಮಹಾ ವ್ಯಕ್ತಿ ಬುದ್ಧನ ಸದ್ಗುಣವು ಅತಿಯು. "ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಷು ಕದಾಚನ । ಮಾಕರ್ಮ ಫಲಹೇತುರ್ಭೂರ್ಮಾತೇ ಸಂಗೋಸ್ತ್ವಕರ್ಮಣಿ ॥" ಎಂಬ ತತ್ವವನ್ನು ಆಚರಣೆಗೆ ತಂದ ಕರ್ಮಯೋಗಿ ಮಹಮದನು ಧರ್ಮಾಭಿಮಾನದ ಮೂಲಕ ಪರಮಾರ್ಥದಲ್ಲಿ ತನ್ನ ಪ್ರತಿಭೆಯನ್ನು ಪ್ರಕಾಶಮಾಡಿ ವೀರಶೈವ ಮತವನ್ನು ಉದ್ಧಾರ ಮಾಡಿದ ಜಗಜ್ಯೋತಿ ಬಸವೇಶ್ವರರ ಭಕ್ತಿಯು ಬಹು ಹಿರಿದಾದದ್ದು. ನಮ್ಮ ನವೀನ ಜಗತ್ತಿನ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟು ಜೀವಿಸುವಷ್ಟು ಜೀವಾಳವು ಪ್ರಾಚೀನ ಹಿಂದೂ ಮತದಲ್ಲಿದೆ ಎಂಬುದನ್ನು ಜಗತ್ತಿಗೆ ಎತ್ತಿ ತೋರಿಸಿದ ವೇದಾಂತ ಕೇಸರಿ ಸ್ವಾಮಿ ವಿವೇಕಾನಂದರ ಸ್ವಧರ್ಮನಿಷ್ಠೆಯು ನುಡಿಗೆ ಎಟುಕದು. ತಮ್ಮ ಬಾಳಿನಲ್ಲಿ ಬೆಳಕನ್ನು ಕಂಡು, ಆತ್ಮಗೌರವಕ್ಕಾಗಿ ದುಡಿದು, ತಮ್ಮ ಸತ್ಯ ಸಿದ್ಧಾಂತವನ್ನು ತಮ್ಮ ಬಾಳಿನಲ್ಲಿಯೇ ತಾವೇ ಸ್ವತಃ ಸಾಧಿಸಿ ತಮಗೂ ಭಾರತಿಗೂ ಮನ್ನಣೆ ಮರ್ಯಾದೆಯನ್ನು ಸಂಪಾದಿಸಿದ ಪಾವನಮೂರ್ತಿ ಜಗದೀಶಚಂದ್ರ ಬೋಸರ ವಿಜ್ಞಾನ ಪ್ರೇಮವು ವರ್ಣನೆಗೆ ನಿಲುಕದು. ತಮ್ಮ ಸಮಾಜಕ್ಕೆ ತಮ್ಮ ತನು ಮನ ಧನವನ್ನರ್ಪಿಸಿ, ಧನಾನಿ ಜೀವಿತಂ ಚೈವ । ಪರಾರ್ಥೆ ಪ್ರಾಜ್ಞ ಉತ್ಸೃಜೇತ್ ॥ ತನ್ನಿಮಿತ್ತೇ ವರಂ ತ್ಯಾಗೋ । ವಿನಾಶೇ ನಿಯತ್ಯ ಸತಿ ॥ ಎಂಬ ನಿಜವಚನವನ್ನು ದಿಟಮಾಡಿ ಧನ್ಯರಾದ ಶಿರಸಂಗಿಯ ತ್ಯಾಗವೀರ ಲಿಂಗರಾಜರ ಉದಾರತೆಯು ಗೋಚರವಾಗಲಿ. ಜಗತ್ತಿನಲ್ಲಿ ಜನಿಸಿರುವ ಕ್ರಿಮಿಕೀಟಾದಿಗಳಿಂದ ಮಾನವನವರೆಗೂ ತಮ್ಮ ತಮ್ಮ ಔನ್ನತ್ಯವನ್ನು ಸಾಧಿಸಿಕೊಳ್ಳುವುದಕ್ಕೆ ಹೊರತು ಮತ್ತೆ ಬೇರೆಯಿಲ್ಲವು. ನಮ್ಮ ಇಹ ವ್ಯಾಪಾರವೇ ನಮ್ಮ ಭಾವೀ ಜನ್ಮ

ವ್ಯಾಪಾರ ಬಂಡವಾಳವಾಗಿರುತ್ತದೆ ಎಂಬ ಅಭಿಪ್ರಾಯದಿಂದ ಕೀರ್ತಿ ದೇಹಿಯಾದ ಜೋಸೆಫ್ ಅಡಿಸನ್ನನ ನಾಡ ಸೇವೆಯು ಸ್ತೋತ್ರಾರ್ಹವಾದುದು. ಭಗವಂತನ ದಯೆಯಿಲ್ಲದೆ ಮಾನವನ ಸಾಹಸ ಕಾರ್ಯವು ಫಲಿಸದೆಂದೂ, ಆತನಲ್ಲಿ ಭಕ್ತಿಯಿಂದ ವರ್ತಿಸಿ, ಪರೋಪಕಾರಕ್ಕಾಗಿ ದುಡಿದ ಪ್ರಜಾಪ್ರೇಮಿ ಎಬ್ರಾಮ್‌ಲಿಂಕನ್‌ನ ಬಾಳಿನ ಸೊಗಸು ವಿದಿತವಾಗಿದೆ. *Love is God* ಎಂದು ಸಾರಿ, ಪ್ರೇಮದಿಂದ ಸಕಲ ಕಾರ್ಯ ಸಿದ್ಧಿಯಾಗುವುದೆಂದು ಉಪದೇಶಿಸಿ ಪರಸಹಾಯಕ್ಕಾಗಿ ತನ್ನ ಜೀವವನ್ನೇ ಹೋಮಮಾಡಿದ ಯೇಸುಕ್ರಿಸ್ತನ ಕರುಣೆಯು ಜಗತ್ತಿಗೆ ತಿಳಿದಿದೆ. ಆತ್ಮಾರ್ಥಂ ಜೀವಲೋಕೇಸ್ಮಿನ್ । ಕೋ ನ ಜೀವತಿ ಮಾನವಃ । ಪರಂ ಪರೋಪಕಾರಾರ್ಥಂ । ಯೋ ಜೀವತಿ ಸ ಜೀವತಿ ॥ ಎಂಬ ನೀತಿಯನ್ನು ಸಾರ್ಥಕಪಡಿಸಿದ ಈಶ್ವರಚಂದ್ರ ವಿದ್ಯಾಸಾಗರರ ಬಾಳು ಅರಿವಾಗಲಿ.

ಯೆಹೂದಿಗಳ ಅತ್ಯಾಚಾರವನ್ನು ನೋಡಿ ಮನ ಮರುಗಿ ಅವರಿಗೆ ಸತ್ಯ ಮತ್ತು ಧರ್ಮದ ಹಾದಿಯನ್ನು ಕುರಿತು ಬೋಧಿಸಿ *Love is God* ಎಂಬುದನ್ನು ಕ್ರಿಯಾಪೂರ್ಣಕ್ಕಿರಿಸಿ, ವನಜಂತುಗಳ ಹಾಗೆ ಕಾದಾಡಬೇಡಿರಿ, ರಕ್ಕಸರ ರೀತಿಯಲ್ಲಿ ರಕ್ತಪಾನ ಮಾಡಬೇಡಿರಿ ಎಂದು ಉಪದೇಶಿಸಿ ಆತ್ಮಬಲಿದಾನದಿಂದ ಜಸವೆತ್ತ ಜಗಜ್ಯೋತಿಯಾದ ಯೇಸು ಕ್ರಿಸ್ತರ ಪವಿತ್ರ ಜೀವನದ ಓಜಸ್ಸು ತೇಜಸ್ಸು ತುಂಬಿತುಳುಕುವುದು. ಭೂಮಿಯಲ್ಲಿ ಜನ್ಮ ಧಾರಣ ಮಾಡಿ ಜನತೆಯ ಅಜ್ಞಾನವನ್ನು ದೂರ ಮಾಡಿ ಆತ್ಮೋದ್ಧಾರದ ಮೂಲಕ ಜಗದೋದ್ಧಾರ ಮಾಡಿದ ಬಗೆಯು ಅರಿವಾಗುವುದು. ಅಲೆಗ್ಸಾಂಡರ್, ನೆಪೋಲಿಯನ್, ಬಿಸ್ಮಾರ್ಕ, ಬರ್ಕ, ಶಂಕರ, ಬಸವ, ರಾಮಾನುಜ, ಬುದ್ಧ, ಅಶೋಕ, ಶಿವಾಜಿ, ಪ್ರತಾಪಸಿಂಹ, ಓಬವ್ವೆ, ಅಹಲ್ಯಾ, ಕಬೀರ, ಪುರಂದರ, ರಾಮಕೃಷ್ಣ, ತಿಲಕ, ಜಗದೀಶಚಂದ್ರ ಬೋಸ, ಟಾಗೋರಾದಿ ಅವರ ಜೀವನ ಚರಿತ್ರೆಯ ಪಠನದಿಂದ ಮಹತ್ಫಲವು ಲಭಿಸಿಯೇ ಲಭಿಸುವುದು. ಪುರುಷ ಪುಂಗರ ಜೀವನ ಚರಿತ್ರೆಯಿಂದ ಜನತೆಯು ಮಹತ್ವಾಕಾಂಕ್ಷೆ, ಕಷ್ಟ ಸಹಿಷ್ಣುತೆ ಮತ್ತು ಉದ್ಯೋಗ ಶೀಲತೆಯಾದಿ ಸದ್ಗುಣಗಳನ್ನೂ, ಬಾಳಿನ ಸುಗ್ಗಿಯ ಸುಖವನ್ನೂ ಪಡೆಯುವುದನ್ನೂ ಅರಿತುಕೊಳ್ಳಲು

ಸೇವೆಯನ್ನು ಮಾಡಲಿಕ್ಕೆ ಅದನ್ನು ವಿನಿಯೋಗಿಸುತ್ತಾನೆ. ಇದಕ್ಕೆ ತ್ರಿವಿಧ ದಾಸೋಹವೆನ್ನುತ್ತಾರೆ. ಭಕ್ತಿಗೆ ಸಮಾಜಸೇವೆಯ ದೀಕ್ಷೆಯನ್ನು ಕೊಟ್ಟಿರುವದೇ ಬಸವಣ್ಣನವರ ಭಕ್ತಿಯ ವೈಶಿಷ್ಟ್ಯವೆಂದು ಸಾಮಾನ್ಯ ವಾಗಿ ಹೇಳಬಹುದು. ಗುರು, ಜಂಗಮರು ಅಂತಿಮ ಶಾಂತಿಯನ್ನು ಒಂದು ತುತ್ತು ಮಾಡಿ ಸಾಧಕನ ಬಾಯಿಗೆ ಹಾಕುವರೆಂದೂ, ಸ್ವಂತ ಅನುಭವದಿಂದ ಕಂಡುಕೊಳ್ಳಬೇಕಾದುದು ಏನೂ ಇಲ್ಲವೆಂದೂ ಬಸ ವಣ್ಣನವರು ಎಲ್ಲಿಯೂ ಹೇಳಿಲ್ಲ. ಇಷ್ಟೇಅಲ್ಲ, ಅವರ ಜೀವನವೇ ಅನುಭವದ ದುಡಿತದಿಂದ, ಅಹಿಂಸಾತ್ಮಕ ಹೋರಾಟದಿಂದ ತುಂಬಿ ತುಳುಕುತ್ತಿದೆ. ಸಾಮಾಜಿಕ, ಆರ್ಥಿಕ ವಿಷಮತೆ, ಮೂಢ ರೂಢಿಗ ಗಳನ್ನು ಅನೈತಿಕ ದುರ್ಗುಣಗಳನ್ನು ಬಿಡದೆ ಲಿಂಗಾಂಗ ಸಾಮರಸ್ಯ ಶಕ್ಯವಿಲ್ಲವೆಂದೇ ಪದೇ ಪದೇ ತಮ್ಮ ವಚನಗಳಲ್ಲಿ ಎಚ್ಚರಿಸಿರುವರು. 'ಹಲವು ದೈವದೆಂಜಲ ತಿಂಬುವರನೇನೆಂಬೆ?" "ಕಡು ಹುಸಿಯನೆ ಹುಸಿದು ಒಡಲ ಹೊರೆವರ ಕಂಡು ಸಂಗಯ್ಯನೊಲ್ಲ." "ಅಳಿಮನದ ವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿಯೆಂತಹುದು?'' "ಲಿಂಗಲಾಂ ಛನ ಧಾರಿಯಾದಲ್ಲಿ ಫಲವೇನು?" "ನಡೆಯಲರಿಯದೆ ನುಡಿಯ ಲರಿಯದೆ ಲಿಂಗವ ಪೂಜಿಸಿ ಫಲವೇನು" "ಭಕ್ತರ ನೋವೇ ಅದೇ ಲಿಂಗದ ನೋವು." "ಮಾತಿನಂತೆ ಮನವಿಲ್ಲದೆ ಮಜ್ಜನ ಕ್ಕೆರೆದು ಫಲವೇನು?" "ನೂರನೋದಿ ನೂರ ಕೇಳದರೇನು?" ಸದಾ ಚಾರ ಸದ್ಭಕ್ತಿಇಲ್ಲದವರನೊಲ್ಲನಯ್ಯ ಲಿಂಗವು." "ಸತ್ಯವ ನುಡಿ ವುದೇ ದೇವಲೋಕ ಆಚಾರವೇ ಸ್ವರ್ಗ." "ಸ್ವಾಮಿಭೃತ್ಯ ಸಂಬಂ ಧಕ್ಕೆ ದಿಟವ ನುಡಿದು, ನುಡಿದಂತೆ ನಡೆವುದು." "ಕ್ರೂರ, ಕುಭಾಷೆ, ಕುಹಕ, ಬಿಡದನ್ನಕ್ಕ ನೀನೆತ್ತ ಶಿವನೆತ್ತ ಹೋಗತ್ತ ಮರುಳೇ." "ಅಘೋರ ತಪವ ಮಾಡಿದರೇನು? ಆತ್ಮ ಶುದ್ಧವಿಲ್ಲದವರನೆಂತು ನಂಬುವನಯ್ಯ ಕೂಡಲಸಂಗಮದೇವಾ?" "ಆಡಿದರೇನು? ಹಾಡಿ ದರೇನು? ಓದಿದರೇನು? ತ್ರಿವಿಧ ದಾಸೋಹವಿಲ್ಲದನ್ನಕ್ಕ?" "ಭಕ್ತಿ ಪಕ್ಷವಿಲ್ಲದಿದ್ದರೆ ಕಾಗಿ ಕೋಳಿಗಳಿಗಿಂತ ಕರಕಷ್ಟ ಕಾಣಾ!! "ಕಾಯ ಕವೆ ಕೈಲಾಸ." "ತನು, ಮನ, ಧನ, ಸಮರ್ಪಿಸದವರ ಕೂಡಲ ಸಂಗಯ್ಯನೆಂತೊಲಿವನಯ್ಯ?" "ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೇ ಸತ್ಪಾತ್ರಕ್ಕೆ ಸಲ್ಲದಯ್ಯಾ." "ಶ್ವಪಚನಾದರೇನು? ಲಿಂಗಭಕ್ತನೇ

ಕುಲಜನು.” “ವರ್ಣಾನಾಂ । ಕಿಂ । ಪ್ರಯೋಜನಂ?” “ಉಂಬಲ್ಲಿ ಉಡುವಲ್ಲಿ, ಕೊಂಬಲ್ಲಿ ಕೊಡುವಲ್ಲಿ ಕ್ರಿಯೆ, ಕುಲವನ್ನರಸುವವರು ಭಕ್ತನೆಂತೆಂಬೆನಯ್ಯಾ?” “ಕೊಲ್ಲುವವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ.” “ಕುಲವೇನೋ ಆವಂದಿರ ಕುಲವೇನೋ?” “ವೇದಶಾಸ್ತ್ರ ಓದಿದವರ ಮುಂದೆ ಆಳುಕಂಡೆಯಾ ಹೋತೇ?” “ಕಲಿಯ ಕೈಯ ಕೈಸುವಿನಂತಿರಬೆಕಯ್ಯಾ.” “ಲಿಂಗವಿಕಾರಿಗೆ ಅಂಗವಿಕಾರವಿಲ್ಲ. ಜಂಗಮವಿಕಾರಿಗೆ ಧನವಿಕಾರವಿಲ್ಲ. ಪ್ರಸಾದವಿಕಾರಿಗೆ ಮನವಿಕಾರವಿಲ್ಲ. ಇಂತೀ ತ್ರಿವಿಧ ಗಣವರಿದಾತನು ಅಚ್ಚ ಲಿಂಗೈಕ್ಯನು ಕೂಡಲಸಂಗಮದೇವಾ.” “ದ್ವೈತಾದ್ವೈತವನೋದಿ ಏನು ಮಾಡುವಿರಯ್ಯಾ? ಬರಿಯ ಮಾತಿನ ಮಾಲೆಯುವೇನಹುದು?” “ಕಾಯಕವೇ ಕೈಲಾಸ.” “ಮೃದುವಚನವೇ ಸಕಲ ಜಪತಪಂಗಳಯ್ಯ.” “ಭಕ್ತರಲ್ಲಿ ಕುಲವನಾರಿಸಬೇಡ. ಕಾಯಕ ಭೇದ ಮಾಡಬೇಡ.”

ಗುರು ದೊಡ್ಡವನೆಂದು ಹೊಗಳಿ ಸಾಧನೆಯನ್ನೇನಾದರೂ ಬಸವಣ್ಣನವರು ಬಿಟ್ಟಿರುವರೇ? ಗುರು, ಜಂಗಮರ ಮಹತ್ವವನ್ನು ಹೊಗಳಿದಾಕ್ಷಣಕ್ಕೆ ಸ್ವಾನುಭಾವದಿಂದ ದುಡಿದು ಅಂತಿಮ ಶಾಂತಿಯನ್ನು ಕಂಡುಕೊಳ್ಳಬಾರದೆಂದು ಬಸವಣ್ಣನವರು ಹೇಳಿದಂತಾಯಿತೇ? ಹೀಗೆ ಅಪಾರ್ಥ ಮಾಡುವದರಿಂದ ವಚನಗಳಿಗಿಂತ ಉಪನಿಷತ್ತು ಶ್ರೇಷ್ಠ ಎಂದು ಸಿದ್ಧ ಮಾಡಿದಂತಾಯಿತೇ? “ತನ್ನ ಲಿಂಗಕ್ಕೆ ಮಾಡುವ ನಿತ್ಯನೇಮವನು ತಾ ಮಾಡಬೇಕಲ್ಲದೇ ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ?” ಎಂದೇ ಬಸವಣ್ಣನವರು ಸ್ಪಷ್ಟವಾಗಿ ಹೇಳಿದ್ದನ್ನು ಕಣ್ಣು ತೆರೆದು ನೋಡಬೇಕು. ಸೇವೆ, ಸತ್ಕಾರ್ಯ, ಪೂಜೆ, ಧ್ಯಾನಗಳನ್ನು ನಾವೇ ಆಚರಿಸಿದರೇನೇ ಆತ್ಮೋನ್ನತಿಯಾಗುವದೆಂದೇ ಬಸವಣ್ಣನವರು ಹೇಳಿದ್ದಾರೆ.

ಗುರುವು ಹೇಗೇ ಇರಲಿ— ಅವನನ್ನು ಪರೀಕ್ಷಿಸಬಾರದೆಂಬುದು ಬಸವಣ್ಣನವರ ಮತವಲ್ಲ. ಪರಸ್ತ್ರೀ ಸಂಗ, ಪರಧನಾಪಹಾರ ಮೊದಲಾದ ದುರ್ಗುಣ ದುರಾಚಾರಗಳನ್ನು ಬಿಟ್ಟು ಆಚರಣೆಯನ್ನು ಪವಿತ್ರವಾಗಿಟ್ಟುಕೊಳ್ಳಿರೆಂದೇ ಗುರು-ಜಂಗಮರಿಗೆ ಹಿರಿಯರಿಗೆ ನಿರ್ದಾಕ್ಷಿಣ್ಯವಾಗಿ ಎಚ್ಚರಿಸಿರುವದನ್ನು ಕೆಳಗಿನ ವಚನದಲ್ಲಿ ಸ್ಪಷ್ಟವಾಗಿ ಕಾಣಬಹುದು:—

"ತೊರೆಯ ವಿಾವ ಸ್ವಾಮಿಗಳಿರಾ, ತೊರೆಯಿಂಭೋ ತೊರೆಯಿಂಭೋ, ಪರನಾರಿಯರ ಸಂಗವ ತೊರೆಯಿಂಭೋ. ಪರಧನದಾಸೆಯಾಮಿಷವ ತೊರೆಯಿಂಭೋ. ಇವರ ತೊರೆಯದೆ ಹೋಗಿ ತೊರೆಯಲ್ಲಿ ಮಿಂದರೆ ನಿಮ್ಮ ತೊರೆಯೆಲ್ಲ ಬರುಸೊರೆ ಹೋಹುದು ಕೂಡಲ ಸಂಗಮದೇವಾ "

ಪರಸ್ತ್ರೀಸಂಗ, ಪನಧನದಾಸೆಯನ್ನು ಬಿಡದೆ ಎಂಥ - ನೀರಿನಲ್ಲಿ ಸ್ನಾನ ಮಾಡಿದರೂ ಅದು ನಿಮಗೆ ಬರೇ ನೀರೇ ವಿನಃ ಪುಣ್ಯತೀರ್ಥ ವಾಗಲಾರದು. ಪುಣ್ಯತೀರ್ಥಗಳಿಗೆ ಹೋಗಿ ಸ್ನಾನ ಮಾಡುವ ಸ್ವಾಮಿಗಳೇ ಮೊದಲು ಮೇಲಿನ ದುರ್ಗುಣ ದುರಾಚಾರ ಬಿಡಿರಿ ಎಂದೇ ಈ ವಚನದ ಅರ್ಥ.

ಮದ್ಯಮಾಂಸ ಸೇವಿಸುತ್ತ ಪರಸ್ತ್ರೀಯರನ್ನು ಮೋಹಿಸುತ್ತ ಇರುವ ಪಾಪಿಗಳು ಹೆಚ್ಚಿನ ಕುಲದಲ್ಲಿ ಹುಟ್ಟರಲಿ ಅಥವಾ ಲಿಂಗವನ್ನೇ ಧರಿಸಿರಲಿ, ಇಷ್ಟೇಅಲ್ಲ, ಜಂಗಮರ ಮುಖದಿಂದ ಹುಟ್ಟಬಂದಿರಲಿ, ಅವರು ನರಕಿಗಳಾಗುವದು ತಪ್ಪಿದ್ದಲ್ಲ, ಎಂದು ಕೆಳಗಿನ ವಚನದಲ್ಲಿ ಕಟುವಾಗಿ ಟೀಕಿಸಿದ್ದಾರೆ. ಕಣ್ಣು ತೆರೆದು ನೋಡಿರಿ:—

"ಅಂಗದಿಚ್ಛೆಗೆ ಮದ್ಯಮಾಂಸವ ತಿಂಬರು. ಕಂಗಳಿಚ್ಛೆಗೆ ಪರವಧುವ ನೆರೆವರು. ಲಿಂಗಲಾಂಛನಧಾರಿಯಾದಲ್ಲಿ ಫಲವೇನು? ಲಿಂಗಪಥವ ತಪ್ಪಿ ನಡೆವರು. ಜಂಗಮಮುಖದಿಂದ ನಿಂದೆ ಬಂದರೆ ಕೊಡಮೊರಿಂಗೆ ಹೋಹದು ತಪ್ಪದು ಕೂಡಲಸಂಗಮದೇವಾ."

ಶಿವಚಿಹ್ನಗಳಿಗೆ ಶರಣು ಮಾಡೆನೆಂದೂ ಆ ಲಿಂಗಲಾಂಛನಕೆ ತಕ್ಕ ಸದಾಚಾರವಿಲ್ಲದಿದ್ದರೆ ದೇವಸಾಕ್ಷಿಯಾಗಿ ಅವರಿಗೆ ಛೀ ಹಾಕುವೆನೆಂದೂ ಸ್ವತಃ ಬಸವಣ್ಣನವರೇ ಭಕ್ತ-ಜಂಗಮ-ಗುರುಗಳಿಗೆ ಬುದ್ಧಿ ಹೇಳಿರುವದನ್ನು ಸುದರ್ಶನದಿಂದ ಕೆಳಗೆ ನೋಡಿರಿ.

"ಲಾಂಛನಕ್ಕೆ ಶರಣೆಂಬೆ. ಲಾಂಛನಕ್ಕೆ ತಕ್ಕ ಆಚರಣೆ ಇಲ್ಲದಿದ್ದರೆ ಕೂಡಲಸಂಗಮದೇವಾ ನೀ ಸಾಕ್ಷಿಯಾಗಿ ಛೀ ಎಂಬೆನು."

ಶಿಷ್ಯನು ಗುರುವಿನ ಗುಣಶೀಲಗಳನ್ನು ಪರೀಕ್ಷಿಸಬೇಕೆಂದು ಬಸವಣ್ಣನವರು ಹೇಳಿರುವದು ಸೂರ್ಯಪ್ರಕಾಶದಷ್ಟು ಸ್ಪಷ್ಟವಿದೆ. ಇನ್ನು

ಗುರುವು ಶಿಷ್ಯನ ಅರ್ಹತೆಯನ್ನು ಖಚಿತಮಾಡಿಕೊಳ್ಳಬೇಕೆಂಬುದಕ್ಕೆ ಬಸವಣ್ಣನವರ ವಚನಗಳನ್ನು ಕಣ್ಣು ತೆರೆದು ನೋಡಿರಿ:—

"ಕುಂಬಳದ ಕಾಯಿಗೆ ಕಬ್ಬುನದ ಕಟ್ಟು ಕೊಟ್ಟರೆ ಕೊಳೆವುದಲ್ಲದೆ ಬಲುಹಾಗಬಲ್ಲುದೇ ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿಯೆಂತಹುದು ಮುನ್ನಿನಂತಲ್ಲದೆ? ಕೂಡಲಸಂಗಯ್ಯ ಮನಕೀನನ ಮೊಸಲಗಾಯಿ ಗಿರಿಸಿದಂತೆ.''

ಕುಂಬಳಕಾಯಿಗೆ ಕಬ್ಬಿಣದ ಕಟ್ಟನ್ನು ಹಾಕಿದರೆ ಕೊಳೆಯುವದು. ಅದರಂತೆ ವಿಷಯಾಸಕ್ತನಿಗೆ ಲಿಂಗ ಧರಿಸಿದರೆ ಭಕ್ತನಾಗಲಾರನು. ನಾಲಿಗೆಯ ದಾಸನಿಗೆ ಮೊಸಲನ್ನು ಕಾಯಲಿಕ್ಕೆ ಇಡುವದೂ ವಿಷಯಿಗೆ ಲಿಂಗ ಧರಿಸವದೂ ಅಷ್ಟೇ ನಿರುಪಯೋಗಿಯಾಗಿವೆ ಎಂದೇ ಬಸವಣ್ಣನವರು ಸ್ಪಷ್ಟವಾಗಿ ಹೇಳಿದ್ದಾರೆ. ಬಸವಣ್ಣನವರ ದರ್ಶನದಲ್ಲಿ ಶಿಷ್ಯನಿಗೂ ಸ್ವಾತಂತ್ರ್ಯವಿದೆ. ಗುರುವಿಗೂ ಸ್ವಾತಂತ್ರ್ಯವಿದೆ. ಬಸವಣ್ಣನವರು ಶಿಷ್ಯನಿಗೆ ಸ್ವಾತಂತ್ರ್ಯ ಕೊಟ್ಟಿಲ್ಲ ಎಂಬುವ ಮಾತು ಬುಡಬುಡಕಿಯ ಮಾತೇ ಸರಿ.

"ಲೋಕದ ಮಾನವರಿಗೆ ಶಿವದೀಕ್ಷೆಯ ಕೊಟ್ಟರೆ ಕೆಟ್ಟವನೇಕೆ ಸದ್ಭಕ್ತನಹನು ಕೂಡಲಸಂಗಮದೇವಾ." ಎಂಬ ವಚನದಲ್ಲಿ ದುರ್ವಿಷಯಿಗೆ ಲಿಂಗ ಧರಿಸಬಾರದೆಂದೇ ಬಸವಣ್ಣನವರು ವಿಧಿಸಿದ್ದಾರೆ. ಎಂದ ಮೇಲೆ ಸಿಕ್ಕ ಸಿಕ್ಕ ಗುರುಜಂಗಮರಿಂದ ಬಂದದ್ದು ಲಿಂಗವಲ್ಲ. ಸಿಕ್ಕ ಸಿಕ್ಕ ಶಿಷ್ಯರಿಗೆ ಲಿಂಗ ಕಟ್ಟುವದು ಲಿಂಗವಂತ ಧರ್ಮವಲ್ಲ ಎಂಬ ಮಾತು ಬಸವಣ್ಣನವರ ಮಾತು.

ಶಿಷ್ಯನು ಗುರುವಿನ ಗುಣಶೀಲಗಳನ್ನು ಪರೀಕ್ಷಿಸಬಾರದೆಂಬುದಕ್ಕೆ ಕೆಳಗಿನ ವಚನವು ಉದಾಹರಣೆಯೇ? ಅಲ್ಲವೇ ಅಲ್ಲ. ವಿನಯದಿಂದ ಅದರ ಅರ್ಥ ತಿಳಿದುಕೊಳ್ಳಿರಿ.

"ಉತ್ತಮ, ಮಧ್ಯಮ, ಕನಿಷ್ಠವೆಂದು ಬಂದ ಜಂಗಮವನೆಂದೆನಾದರೆ ನೋವೆನಯ್ಯ, ನಾನು ಬೆಂದೆನಯ್ಯ. ಎನ್ನ ಕಿಚ್ಚು ಎನ್ನ ಸುಟ್ಟಿತ್ತು. ಸುಖೀ ಜಂಗಮ, ಸಾಮಾನ್ಯ ಜಂಗಮ ಉಂಟೇ ಕೂಡಲ ಸಂಗಮದೇವಾ?"

ಜಂಗಮತತ್ವ ಒಂದು. ಆ ತತ್ವ ಹಿಡಿದವರಲ್ಲಿ ಭೇದ ಮಾಡ ಬಾರದು. ಎಲ್ಲ ಜಂಗಮರನ್ನು ಸರಿಸಮಾನ ದೃಷ್ಟಿಯಿಂದ ಕಾಣ ಬೇಕು. ಬಡ ಜಂಗಮನು ಬಂದರೆ ಕಡಿಮೆಯೆಂದೂ, ಸಂಪತ್ತುಳ್ಳ ಸುಖೀ ಜಂಗಮ ಬಂದರೆ ಹೆಚ್ಚೆಂದೂ ತಿಳಿಯಬಾರದು. ಬಡತನ, ಶ್ರೀಮಂತತನ ನೋಡಿ ಮರ್ಯಾದೆ ಕೊಡಬಾರದು. ಜಂಗಮತತ್ವ ನೋಡಿ ಮರ್ಯಾದೆ ಕೊಡಬೇಕು. ಸಾಮಾನ್ಯವಾಗಿ ದುಡ್ಡು ನೋಡಿ ಕಿಮ್ಮತ್ತು ಕೊಡುವ ಪ್ರವೃತ್ತಿ ಹೆಚ್ಚು. ಅದು ಹೊಲ್ಲ. ಇದೇ ಮೇಲಿನ ವಚನದ ಅರ್ಥ. ಶಿಷ್ಯನು ಗುರುವಿನ ಗುಣಶೀಲಗಳನ್ನು ಪರೀಕ್ಷಿಸ ಬೇಕೆಂಬದಕ್ಕೆ ಈ ಹಿಂದೆ ಸಾಕಷ್ಟು ಪ್ರಮಾಣ ವಚನಗಳನ್ನು ಕೊಟ್ಟಿ ದ್ದೇವೆ. ಮೇಲಿನ ವಚನವು ಜಂಗಮರಲ್ಲಿ ಭೇದ ಮಾಡಬೇಡಿರೆಂದು ಹೇಳುತ್ತದೆ. ಜನ್ಮದಿಂದ, ಜಾತಿಯಿಂದ, ದುಡ್ಡಿನಿಂದ ಜಂಗಮವಲ್ಲ. ತತ್ವದಿಂದ ಜಂಗಮ.

ಲಿಂಗಾಂಗಿಯನ್ನು ಪ್ರತ್ಯಕ್ಷ ಪರಮೇಶ್ವರನೆಂದು ಭಾವಿಸಬೇಕು. ಇದು ನಿಜ. ಇದು ಬಸವಣ್ಣನವರ ಮತ. ಆದರೆ ಲಿಂಗಾಂಗಿಯೆಂದರೆ ಯಾರು? ದುರ್ಗುಣ–ದುರಾಚಾರ ಬಿಟ್ಟು ಸದ್ಭಕ್ತಿ ಸದಾಚಾರಗಳಿಂದ ಶೋಭಿಸುವ ಲಿಂಗಧಾರಿಗಳಿಗೆ ಲಿಂಗಾಂಗಿಯೆಂದು ಬಸವಣ್ಣನವರು ಕರೆದಿ ರುವರು. ಮದ್ಯ, ಮಾಂಸ, ಹಿಂಸೆಗಳನ್ನು ಬಸವಣ್ಣನವರು ಸಹಸ್ರ ಸಾರೆ ಖಂಡಿಸಿದ್ದಾರೆ. ಅವರಿಗೆ ಲಿಂಗ ಧರಿಸಬಾರದೆಂದು ವಿಧಿಸಿದ್ದಾನೆ. ಅನುಭವಮಂಟಪದಲ್ಲಿ ಅಂಥವರಿಗೆ ಸ್ಥಾನವೇ ಇರಲಿಲ್ಲ ಕೊರಳಲ್ಲಿ ದೇವರನ್ನು ಕಟ್ಟಿಕೊಳ್ಳುವದೆಂದರೇನು? ಲಿಂಗವಂತ ಸಂಸ್ಕೃತಿಯನ್ನು ಹೊಂದುವದು. ಲಿಂಗವಂತ ಸಂಸ್ಕೃತಿಯು ಮದ್ಯ, ಮಾಂಸ, ಹಿಂಸೆ ಗಳಿಗೆ ಪ್ರೋತ್ಸಾಹ ಕೊಡುವದೇ? ಹಾಗೆ ಹೇಳುವದು ಕುತ್ಸಿತತನವೇ ಸರಿ. ಬಸವಣ್ಣನವರ ಲಿಂಗವಂತ ಸಂಸ್ಕೃತಿಯಿಂದ ಕರ್ನಾಟಕವು ಇಂದಿಗೂ ಮಹಾರಾಷ್ಟ್ರಕ್ಕಿಂತ ಹೆಚ್ಚು ಸದಾಚಾರಶೀಲವುಳ್ಳದ್ದಿರುವ ದೆಂದು ಶ್ರೀಮಾನ್ ಆಲೂರ ವೆಂಕಟರಾಯರಂಥ ಹಿರಿಯ ಸಾಹಿತಿ ಗಳು ಬಸವ ಚರಿತ್ರೆಯಲ್ಲಿ ಬರೆದಿರುವದನ್ನು ಶ್ರೀ. ಅ. ನ. ಕೃಷ್ಣರಾಯರು ನೋಡಿರುವರೇ? ಸುಮ್ಮನೆ ಅಪಾರ್ಥ ಕಲ್ಪಿಸುವದರಲ್ಲಿ ಜಾಣತನ ವಿರುವದೇ?

"ಶ್ವಪಚನಾದರೇನು? ಲಿಂಗಭಕ್ತನೇ ಕುಲಜನು." ಇದು ಬಸವಣ್ಣನವರ ವಚನ. ಇದರ ಅರ್ಥವೇನು? ದುರಾಚಾರಿಯಾದ ಹೊಲೆಯನು ಲಿಂಗ ಧರಿಸಿದ ಕೂಡಲೆ ಶ್ರೇಷ್ಠ ಕುಲದವನಾಗುತ್ತಾನೆಂದು ಅಪಾರ್ಥ ಕಲ್ಪಿಸಲೇಕೆ? ಜನ್ಮದಿಂದ ಹೊಲೆಯನಾಗಿದ್ದರೇನಾಯಿತು? ಕೊಲ್ಲುವದನ್ನೂ ಮಾಂಸವನ್ನೂ ಬಿಟ್ಟರೆ ಮತ್ತು ಲಿಂಗವಂತ ಸಂಸ್ಕೃತಿಯನ್ನು ಅವಲಂಬಿಸಿದರೆ ಅವನು ಶ್ರೇಷ್ಠ ಕುಲದವನಾಗುತ್ತಾನೆ ಗುಣಕ್ಕೆ ಪ್ರಾಧಾನ್ಯತೆಯಿದೆಯೇ ವಿನಃ ಜನ್ಮಕ್ಕೆ ಜಾತಿಗೆ ಅಲ್ಲ. ಇದೇ ನಿಜವಾದ ಅರ್ಥ.

"ಎಡದ ಕೈಯಲಿ ಕತ್ತಿ, ಬಲದ ಕೈಯಲಿ ಮಾಂಸ, ಬಾಯಲ್ಲಿ ಸುರೆಯ ಗಡಿಗೆ, ಕೊರಳಲ್ಲಿ ದೇವರಿರಲು ಅವರ ಲಿಂಗವೆಂಬೆ." ಇದರ ಅರ್ಥವೇನು? ಎಡಗೈಯಲ್ಲಿ ಕತ್ತಿ, ಬಲಗೈಯಲ್ಲಿ ಮಾಂಸ, ಬಾಯಲ್ಲಿ ಮದ್ಯವುಳ್ಳ ಜನರು ಯಾರು? ನೀಚ ಸಂಸ್ಕೃತಿಯ ಜನರು. ಹಿಂಸೆ, ಮದ್ಯಮಾಂಸಗಳನ್ನು ಅವಲಂಬಿಸುವ ಜನರು ಬಸವಣ್ಣನವರ ಅಭಿಪ್ರಾಯದ ಪ್ರಕಾರ ಹೊಲೆಯರು." "ಕೊಲ್ಲುವನೇ ಮಾದಿಗ. ಹೊಲಸು ತಿಂಬುವನೇ ಹೊಲೆಯ." ಕೊರಳಲ್ಲಿ ದೇವರನ್ನು ಕಟ್ಟಿಕೊಳ್ಳುವರೆಂದರೇನು? ಲಿಂಗವಂತ ಸಂಸ್ಕೃತಿಯನ್ನು ಅನುಸರಿಸುವದು ಲಿಂಗಭಕ್ತನಾಗುವದು. ಲಿಂಗಾಂಗಿಯಾಗುವದು. ಲಿಂಗಭಕ್ತನು ಯಾರು? ಮದ್ಯ, ಮಾಂಸ, ಹಿಂಸೆ, ಕಳವು, ವ್ಯಭಿಚಾರ, ಹುಸಿ, ಕುಹಕ, ಕುಭಾಷೆಗಳನ್ನು ಬಿಟ್ಟವನು. ಎಂದಮೇಲೆ ಹಿಂಸೆ, ಮಾಂಸ, ಮದ್ಯಗಳನ್ನು ಬಿಟ್ಟು ಕೊರಳಲ್ಲಿ ಲಿಂಗ ಧರಿಸಿಕೊಂಡು ಶುದ್ಧಿಯಿಂದ ನಡೆದವರನ್ನು ಲಿಂಗ ಸ್ವರೂಪರೆಂದು ಏಕೆ ಭಾವಿಸಬಾರದು? ಏಕೆ ಪೂಜಿಸಬಾರದು? ಏಕೆ ಮನ್ನಿಸಬಾರದು? ಈ ಸ್ಫೂರ್ತಿಯು ಆ ವಚನದಲ್ಲಿದೆ "ಅಂಗದಿಚ್ಛೆಗೆ ಮದ್ಯ, ಮಾಂಸ, ತಿಂಬರು. ಲಿಂಗಲಾಂಛನಧಾರಿಯಾದಲ್ಲಿ ಫಲವೇನು?" "ಕೊಲ್ಲುವನೇ ಮಾದಿಗ. ಹೊಲಸು ತಿಂಬುವನೇ ಹೊಲೆಯ." ಇಂಥ ಅನೇಕ ವಚನಗಳಿವೆ. ಕತ್ತಿ, ಮಾಂಸ, ಸೆರೆಗಳನ್ನು ಬಸವಣ್ಣನವರು ಪ್ರೋತ್ಸಾಹಿಸಿಲ್ಲ. ಇಷ್ಟೆ ಅಲ್ಲ, ತೀವ್ರವಾಗಿ ಖಂಡಿಸಿದ್ದಾರೆ. ಪಾಪಿಗಳ ಮೇಲಿನ ಅವರ ಅಂತಃಕರಣ, ಲಿಂಗಾಂಗಸಾಮರಸ್ಯ ಸಂಸ್ಕೃತಿಯ ಮೇಲಿನ ಅವರ ಅಖಂಡ ಪ್ರೇಮ— ಈ ದಿವ್ಯ ಗುಣಗಳೇ ಮೇಲಿನ ವಚನದಲ್ಲಿ ರೂಪುಗೊಂಡಿ

ವೆಯೆಂದು ನಮ್ಮ ದೃಷ್ಟಿಗೆ ಹೊಳೆಯುತ್ತದೆ. ಇದೇ ಸುಸಂಗತವಾದ ಅರ್ಥ.

ಬಸವಣ್ಣನವರು ಯಾರಿಗೆ ಶರಣರೆಂದಿರುವರು? ನೋಡಿರಿ:— "ದೇವಲೋಕ ಮರ್ತ್ಯಲೋಕವೆಂಬ ಸೀಮೆಯುಳ್ಳನ್ನಕ್ಕ ಶರಣನಾಗಲರಿಯ." ದೇವಲೋಕವನ್ನು ಬಯಸುವವನು ಶರಣನಲ್ಲ. ಜೀವವಿರುವಾಗಲೇ ಮೋಕ್ಷ. ಸತ್ತಮೇಲೆ ಅಲ್ಲ. ಎಂಬ ತಿಳಿವಳಿಕೆಯುಳ್ಳವನೇ ಶರಣನು.

"ಶರಣರು ಮಹಾನುಭಾವರು. ಅಚ್ಚ ಲಿಂಗೈಕ್ಯರು. ಲಿಂಗಸುಖಿಗಳು. ಲಿಂಗಗೂಡಾಗಿಪ್ಪವರು" ಎಂದು ಬಸವಣ್ಣನವರು ಶರಣರ ಲಕ್ಷಣಗಳನ್ನು ಹೇಳಿರುವರು. ನಿರಾಶೆ, ನಿರ್ಭಯ, ಶಿವಚಿಂತೆ, ಶಿವಜ್ಞಾನಗಳುಳ್ಳವರು ಶರಣರೆಂದು ಬೇರೊಂದು ಕಡೆಗೆ ಹೇಳಿರುವರು. ಎಂದಮೇಲೆ ಇಂಥ ಶರಣರ ಗುಣಪರೀಕ್ಷೆ ಮಾಡುವದಕ್ಕೆ ಸಂಶಯದಿಂದ, ತರ್ಕದಿಂದ, ಏಕೆ ವೇಳೆಗಳೆಯಬೇಕು? ಅವರ ಸೇವೆ ಮಾಡುವದೇ ಲೇಸೆಂದು ಬಗೆದರು. ಇದು ಅಂಧ ಶ್ರದ್ಧೆಯೇ? "ಶರಣಸ್ಥಲ ಸಾಧ್ಯವಾಯಿತ್ತು ಪ್ರಭುದೇವಂಗೆ" ಎಂದು ಶೂನ್ಯಸಂಪಾದನೆಯಲ್ಲಿದೆ. ಎಂದಮೇಲೆ ಪ್ರಭುದೇವರ ಸೇವೆಯನ್ನು ಮಾಡಿದರೆ ಅವರ ಗುಣಗಳು ನಮ್ಮಲ್ಲಿ ಬರುತ್ತವೆಂಬುದು ಸಹಜ,

"ಲಾಂಛನಕ್ಕೆ ಶರಣೆಂಬೆ? ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ ಕೂಡಲಸಂಗಮದೇವಾ ನೀ ಸಾಕ್ಷಿಯಾಗಿ 'ಛೀ' ಎಂಬೆನು." ಶಿವಲಾಂಛನಗಳಿಗೆ ಮನ್ನಣೆ ಕೊಟ್ಟು ದುರ್ಗುಣಗಳನ್ನು ಜರಿಯಲಿಕ್ಕೆ ಬರುತ್ತದೆ. ಖಾದೀ ಧರಿಸಿದವನ ಲಾಂಛನಕ್ಕೆ ಮನ್ನಣೆ ಕೊಟ್ಟು ಅವನ ದುರ್ಗುಣಗಳನ್ನು ಮಹಾತ್ಮಾ ಗಾಂಧಿಯವರು ಖಂಡಿಸುತ್ತಿದ್ದಿಲ್ಲವೇ? ಲಾಂಛನಧಾರಿಗಳ ಬಾಹ್ಯ ದುರಾಚಾರಣೆಯನ್ನು ಖಂಡಿಸಲಿಕ್ಕೆ ಬರುವದು. ಅವರ ಡಾಂಭಿಕ ನಡೆನುಡಿಗಳನ್ನೂ ಖಂಡಿಸಲಿಕ್ಕೆ ಬರುವದು. ಅವರ ಅಂತರಂಗದ ಆಳವನ್ನು ತಿಳಿಯಲಿಕ್ಕೆ ಸುಲಭವಾದೀತೇ? ಇಲ್ಲಿ ಶ್ರದ್ಧೆಯೇ ವಿಜಯಿಯಾಗುವದು. ಈ ಶ್ರದ್ಧೆಯಲ್ಲಿ ಜ್ಞಾನವು ಮಾರ್ಗದರ್ಶನ ಮಾಡಲಿಕ್ಕೆ ಇದ್ದೇ ಇರುವದು. ಸತ್ಯಾಗ್ರಹ ಧರ್ಮದ ವಿರೋಧಿಗಳನ್ನು ಮಹಾತ್ಮಾ ಗಾಂಧಿಯವರು ಖಂಡಿಸಿದಂತೆ ಲಿಂಗಾಂಗ

ಸಾಮರಸ್ಯ ಸಂಸ್ಕೃತಿಯ ವೈರಿಗಳನ್ನು ಬಸವಣ್ಣನವರು ಖಂಡಿಸಿರುತ್ತಾರೆ. ಗಾಂಧಿಯವರ ಅನುಯಾಯಿಗಳು ತಪ್ಪು ದಾರಿ ಹಿಡಿದರೆ ಗಾಂಧಿಯವರ ತಪ್ಪಲ್ಲ. ತದ್ವತ್ ಬಸವಣ್ಣನವರ ಅನುಯಾಯಿಗಳು ತಪ್ಪು ದಾರಿ ಹಿಡಿದರೆ ಬಸವಣ್ಣನವರ ತಪ್ಪಲ್ಲ.

**ವಿಶೇಷ ಸೂಚನೆ.**

ಈ ಲೇಖವು ಪ್ರಜಾಮತ ದೀಪಾವಳಿ ಸಂಚಿಕೆ ೧೯೪೮ನೇ ವಿಶೇಷ ಸಂಚಿಕೆಯಲ್ಲಿ ೩೬ನೇ ಪುಟದಲ್ಲಿ ಅ. ನ. ಕೃಷ್ಣರಾಯರು ಬರೆದ "ಬಸವಣ್ಣನವರ ದರ್ಶನ" ಎಂಬ ಲೇಖನಕ್ಕೆ ಉತ್ತರರೂಪವಾಗಿರುವದು. ಅದನ್ನು ಓದಿ ವಾಚಕರು ಇದನ್ನು ಪರಾಮರ್ಶಿಸಬೇಕಾಗಿ ವಿನಂತಿ.

---

## ಅಕ್ಕನ ಬಳಗಗಳ ಬಗ್ಗೆ ಸೂಚನೆಗಳು.

(ಲೇಖಕಃ— ರಾ। ಬ॥ ಫ. ಗು. ಹಳಕಟ್ಟಿ,)

ಶರಣರು ತಿಳಿದು ನಡೆಯುವವರಾಗಿದ್ದಾರೆ. ಅದರೆ ಅವರು ಬರೀ ಆಲೋಚಿಸುತ್ತ ಚರ್ಚೆಮಾಡುತ್ತ ಕುಳ್ಳಿರುವವರಲ್ಲ. ಚರ್ಚಿಸಿದ್ದನ್ನು ಅವರು ನಡೆಯಲ್ಲಿ ತರುವವರಾಗಿದ್ದಾರೆ. ಅಂದರೆ ಅವರು ತಿಳಿದುದನ್ನು ಮನಸ್ಸಿನಲ್ಲಿ ಹಿಡಿದು ರೂಪಕ್ಕೆ ತರುವವರು. ಇದರಲ್ಲಿಯೇ ಅವರು ಆನಂದಪಡುವವರು. ಹೀಗೆ ಸದಾನಂದದಲ್ಲಿ ಇರುವದೇ ಶಿವಶರಣರ ಲಕ್ಷಣವಾಗಿದೆ.

ಶಿವಶರಣರು ನುಡಿದಿರುವ ಉಕ್ತಿಗಳು ಮಾನವನ ಉದ್ಧಾರಕ್ಕೋಸ್ಕರ ಇರುತ್ತವೆ. ಈ ದೃಷ್ಟಿಯನ್ನಿಟ್ಟುಕೊಂಡು ಅವರು ಅವುಗಳನ್ನು ಸಾರುತ್ತಬಂದಿದ್ದಾರೆ. ಆದುದರಿಂದ ಅವರು ಹೇಳಿದ ವೀರಶೈವವು ನಿಷ್ಕ್ರಿಯೆಯಾದ ಧರ್ಮವಲ್ಲ. ಉದಾಸೀನವೃತ್ತಿಯು ಅದರಲ್ಲಿಲ್ಲ. ಕ್ರಿಯಾಯುಕ್ತ ಧರ್ಮವು ಅದಾಗಿದೆ. ಆದ್ದರಿಂದ ಅವರ ಕ್ರಿಯೆಗಳು ಮಾನವನ ನಡೆನುಡಿ ಮನ ಆಚಾರ ವಿಚಾರಗಳಲ್ಲೆಲ್ಲ ತೋರಬೇಕು. ಇದೇ ಲಿಂಗವಂತನ ಇರವು. ಈ ರೀತಿಯನ್ನು ವಚನಶಾಸ್ತ್ರವು ಯಾವಾಗಲೂ ಹೇಳುತ್ತ ಬಂದಿದೆ.

ಸಮಾಜದ ಸುದೈವದಿಂದ ವಚನಶಾಸ್ತ್ರದ ರೀತಿಗಳು ಈಚೀಚೆಗೆ ಜನರ ಮನಸ್ಸಿನಲ್ಲಿ ಹೊಳೆಯಹತ್ತಿರುತ್ತವೆ. ಇದು ಶುಭಚಿನ್ಹವು. ಅವರ ಮಹಿಮೆಯನ್ನು ಲಿಂಗವಂತರು ಈಗ ಹೆಚ್ಚೆಚ್ಚಿಗೆ ಹೊಗಳ ಹತ್ತಿರುವದು ಸ್ವಾಭಾವಿಕ. ಆದರೆ ಒಂದು ಕಾಲದಲ್ಲಿ ಶಿವಶರಣರ ಮಾರ್ಗವನ್ನು ನಿಂದಿಸುವ ತಂಡವೊಂದು ನಮ್ಮ ಸಮಾಜದಲ್ಲಿ ಉದ್ಭವಿಸಿತ್ತು. ಆದರೆ ಶಿವಾನುಭವ ಪತ್ರಿಕೆಯ ಮೂಲಕ ವಚನಶಾಸ್ತ್ರವು ಪ್ರಕಾಶಹೊಂದುತ್ತ ಹೋದಹಾಗೆ ಈ ತಂಡದ ಹುಟ್ಟಡಗಿ ಹೋಗಿ ಅದರ ಸ್ಥಳದಲ್ಲಿ ಈಗ ಶಿವಶರಣರ ವಾಙ್ಮಯ, ಅವರ ವಿಚಾರ ಮತ್ತು ಅವರ ರೀತಿ ನಡೆಗಳನ್ನು ಶ್ಲಾಘಿಸುವ ಕಾಲವು ಬಂದೊದಗಿದೆ.

ಆದರೆ ಇನ್ನುಮೇಲೆ ಶ್ಲಾಘನೆಗಳಿಂದ ಸಮಾಜಸುಧಾರಣೆಯಾಗದು. ಈ ಶ್ಲಾಘನೆಗಳು ವರುಷಕ್ಕೊಂದೆರಡಾವರ್ತಿ ಅಂದರೆ ಬಸವ ಜಯಂತಿಯ ದಿನ, ಎಲ್ಲಾದರೂ ಜಾತ್ರೆಗಳಾಗುತ್ತಿದ್ದರೆ ಆ ಸಮಯ, ಅಥವಾ ನಾಡಹಬ್ಬದ ದಿನ ಈ ಕಾಲಗಳಲ್ಲಿ ಮಾತ್ರ ಕೇಳಬರುತ್ತಿವೆ. ಆಮೇಲೆ ಅವು ನಿಂತುಹೋಗಿ ಬಿಡುತ್ತವೆ!

ಇದು ಶಿವಶರಣರ ವಿಚಾರಗಳು ಇನ್ನೂ ಜನರಲ್ಲಿ ಮನದಟ್ಟಾಗದೆ ಇದ್ದುದರ ಪರಿಣಾಮವಾಗಿದೆ. ಆದರೆ ಅವುಗಳಿಗೋಸ್ಕರ ಪ್ರೀತಿ ಹೊಂದಿದವನು ಅವುಗಳನ್ನು ದಿನಾಲು ತನ್ನ ಮನಸ್ಸಿಗೆ ತಾರದೆ ಬಿಡನು. ಅವನು ನಿಂತಲ್ಲಿ, ನೋಡುವಲ್ಲಿ, ಕುಳಿತಲ್ಲಿ ಅವುಗಳ ವಿಚಾರಗಳನ್ನು ತನ್ನ ಮನಸ್ಸಿನಲ್ಲಿ ತಂದುಕೊಳ್ಳುತ್ತಾನೆ. ನಿಜವಾದ ಕ್ರೈಸ್ತ ಭಕ್ತರು ಹೇಗೆ ಬಾಯಬಲವನ್ನೂ ಇಸ್ಲಾಮ ಧರ್ಮೀಯರು ತಮ್ಮ ಕುರಾನ ಧರ್ಮಗ್ರಂಥವನ್ನೂ, ಸೀಖರು ತಮ್ಮ ಗ್ರಂಥಸಾಹೇಬವನ್ನು ಒಂದಿಲ್ಲೊಂದು ರೀತಿಯಿಂದ ದಿನಾಲು ಪಠನ ಮಾಡಿ ಅವುಗಳ ತತ್ವಗಳನ್ನು ಮನಸ್ಸಿಗೆ ತರುತ್ತಾರೋ ಹಾಗೆ ವೀರಶೈವರು ಶಿವಶರಣರ ನುಡಿಗಳನ್ನು ಆಗಾಗ್ಗೆ ನೆನೆಯುತ್ತಿರಬೇಕು. ಆಗ ಅವರಲ್ಲಿಯ ದುಷ್ಟ ವಾಸನೆಗಳು ತಾವಾಗಿಯೆ ಅಡಗಿಹೋಗುವವು. ಆಗ ಅವರ ಸುಖ ಜೀವನದ ಮಾರ್ಗಗಳು ಪ್ರಾರಂಭವಾಗುವವು.

ಆದರೆ ಈಗ ಅಧಿಕಾರ ಲಾಲಸೆಯ ದಿನಗಳಾಗಿವೆ. ದುಷ್ಟ ಪ್ರವೃತ್ತಿಗಳು ಜನರಲ್ಲಿ ಹೆಚ್ಚುತ್ತಲಿವೆ. ಇಂಥವರಿಗೆ ಶಿವಶರಣರ ಶ್ರೇಷ್ಠ

ವಾಕ್ಯಗಳು ಹೃದಯ ಭೇದಿಯಾಗಿ ಪರಿಣಮಿಸುತ್ತವೆ. ಇಂಥವರು ಇವುಗಳನ್ನು ಹೇಗೆ ಪ್ರೀತಿಸಬಹುದು?

ಸ್ವರಾಜ್ಯವು ನಮಗೆ ಪ್ರಾಪ್ತವಾಗಿ ಒಂದು ವರುಷವಾಯಿತು. ಇಷ್ಟರಲ್ಲಿಯೇ ಮೇಲ್ಮಟ್ಟದಲ್ಲಿರುವ ಮಹನೀಯರು ಸಮಾಜದಲ್ಲಿರುವ ನೀತಿವಿಹೀನವಾದ ಮಾರ್ಗಗಳಿಗೋಸ್ಕರ ಹೇಯಭಾವವನ್ನು ತಾಳಹತ್ತಿರುವರು. ಅವರು ನೀತಿ ಮಾರ್ಗಗಳನ್ನು ಪಾಲಿಸಬೇಕೆಂದು ಜನರಿಗೆ ಒತ್ತಿಹೇಳುವ ಕಾಲವು ಬಂದಿದೆ ಇವರು ನಾಡಿನಲ್ಲಿ ಸಾಂಸ್ಕೃತಿಕ ಉನ್ನತಿಯುಂ ಆಗಬೇಕೆಂದು ಪದೇ ಪದೇ ಹೇಳತೊಡಗಿದ್ದಾರೆ. ವೀರ ಶೈವರು ಇದನ್ನರಿತುಕೊಂಡು ಜಾಗ್ರತೆಹೊಂದಿ ಆಯಂತವಾಗಿ ತಮ್ಮಲ್ಲಿ ರುವ ವಚನ ವಾಙ್ಮಯದ ವಿಶಾಲ ತತ್ವಗಳನ್ನರಿತ ಕೊಂಡು ಅವುಗಳನ್ನು ಜನರಲ್ಲೆಲ್ಲ ಪ್ರಸಾರ ಮಾಡಬೇಕು. ನಾಡಿನ ಹಿತದ ದೃಷ್ಟಿಯಿಂದ ಇದು ಅವರ ಕರ್ತವ್ಯಕರ್ಮವಾಗಿದೆ.

ಹೀಗೆ ಪ್ರಸಾರ ಕಾರ್ಯ ಮಾಡುವ ಉದ್ದಿಶ್ಯವಾಗಿ ಶಿವಾನುಭವ ಪತ್ರಿಕೆಯು ಕೆಲವು ವರ್ಷಗಳ ಹಿಂದೆ ಬಸವಾದಿ ಪ್ರಮಥರ ಕಾಲದಲ್ಲಿದ್ದಂತೆ 'ಶಿವಾನುಭವಮಂಟಪ'ದಂಥ ಮಂಟಪಗಳನ್ನು ಎಲ್ಲೆಲ್ಲಿಯೂ ಉಂಟುಮಾಡಬೇಕೆಂದು ಬೋಧಿಸಿತು. ಆಗ ಅನೇಕ ಕಡೆಗೆ 'ಶಿವಾನುಭವ ಸಂಘ'ಗಳೂ 'ಅಕ್ಕನ ಬಳಗ'ಗಳೂ ಉಂಟಾದವು. ಆದರೆ ಅವುಗಳಿಗೆ ಯೋಗ್ಯ ನೇತೃಗಳು ದೊರೆಯದ್ದರಿಂದ ಅವು ಬೆಳವಣಿಗೆಯನ್ನು ಹೊಂದಲಿಲ್ಲ. ಶಿವಾನುಭವದ ಅಥವಾ ವಚನಶಾಸ್ತ್ರದ ತತ್ವಗಳ ನಿಜವಾದ ಅರಿವು ಸಮಾಜದಲ್ಲಿ ಇಲ್ಲದ್ದರ ಪರಿಣಾಮವು ಇದಾಗಿದೆ.

ಪುರುಷರು ನಡಿಸುವ 'ಶಿವಾನುಭವ ಸಂಘ' ಅಥವಾ 'ಶಿವಾನುಭವ ಮಂಟಪ'ಗಳಿಗಿಂತಲೂ ಸ್ತ್ರೀಯರು ನಡಿಸುವ 'ಅಕ್ಕನ ಬಳಗಗಳು' ಸಮಾಜಸುಧಾರಣೆಗೆ ಆಸ್ತಿವಾರದಂತಿವೆ. ಈ ಆಸ್ತಿವಾರವನ್ನು ನಾವು ಬಲಪಡಿಸಿದಲ್ಲಿ ಮಕ್ಕಳ ಸುಧಾರಣೆ ಮತ್ತು ಮಕ್ಕಳ ನೈತಿಕ ಉನ್ನತಿ ಇವುಗಳುಂಟಾಗಿ ಸ್ವಲ್ಪ ದಿವಸಗಳಲ್ಲಿಯೇ ಸಮಾಜೋನ್ನತಿಯ ಕಾರ್ಯಗಳು ಜರಗಹತ್ತುವವು.

ಅಕ್ಕನ ಬಳಗಗಳಿಗೆ ಮಾರ್ಗದರ್ಶಕರಿರದೆ ಹೋದದ್ದರಿಂದ ಅವುಗಳನ್ನು ಸ್ತ್ರೀಯರು ತಮಗೆ ಪರಿಚಿತವಾದ ರೀತಿಯಿಂದ ಅವುಗಳನ್ನು

ನಡಿಸುತ್ತ ಬಂದರು. ಅಂದರೆ ಅಕ್ಕನ ಚಿತ್ರವನ್ನಿಟ್ಟು ಪೂಜಿಸುವುದು, ಅದರ ಮುಂದೆ ಕಾಯಿ-ಕರ್ಪೂರಗಳನ್ನು ಬೆಳಗಿ, ಅಕ್ಕನನ್ನು ಭಜಿಸುವದು ಮುಂತಾದುವುಗಳು ನಡೆದವು. ಒಮ್ಮೊಮ್ಮೆ ವ್ಯಾಖ್ಯಾನಗಳೂ ನಡಿಯು ತ್ತಿದ್ದವು. ಹಾಡುಬಲ್ಲವರು ಹಾಡುತ್ತಿದ್ದರು- ಆದರೆ ಇಷ್ಟರಿಂದ ಸ್ತ್ರೀ ಸುಧಾರಣೆ ಹೇಗಾಗಬೇಕು ?

ನಮ್ಮ ದೇಶದ ಈಗಿನ ಪರಿಸ್ಥಿತಿಯಲ್ಲಿ ಹಿಂದೆಬಿದ್ದಿರುವ ಸ್ತ್ರೀಯು ರಿಗೆ ಪುರುಷರೇ ಮಾರ್ಗದರ್ಶಕರಾಗಬೇಕು. ಆದರೆ ಪುರುಷರು ತಮ್ಮ ಈ ಹೊಣೆಯನ್ನು ಲಕ್ಷಿಸುವದಿಲ್ಲ. ಕೆಲವೆಡೆಗಳಲ್ಲಿ ಪುರುಷರು ಸ್ತ್ರೀಯರ ಈ ಪ್ರಯತ್ನಗಳಿಗೋಸ್ಕರ ಉದಾಸೀನವುಳ್ಳವರಾಗಿರುತ್ತಾರೆ. ಕೆಲವರು ಇವುಗಳನ್ನು ಅವಹೇಲನೆ ಮಾಡುತ್ತಾರೆ. ಬೇರೆ ಕೆಲವರು ವಿರೋಧಭಾವವನ್ನು ಸಹ ತಾಳಿದ್ದೂ ಉಂಟು. ಆದರೂ ಕೂಡ ಅನೇಕ ಕಡೆಗೆ ಸ್ತ್ರೀಯರು ಪುರುಷರ ಈ ರೀತಿಯನ್ನು ಲಕ್ಷಿಸದೆ ಕಾರ್ಯ ಮಾಡುತ್ತಿರುವದು ಕಂಡುಬರುತ್ತದೆ. ಇದು ಶ್ಲಾಘನೀಯವು. ಇಷ್ಟೇ ಅಲ್ಲ, ಅವರಲ್ಲಿ ಕೆಲವರು ತಮ್ಮ ವ್ಯಾಸಂಗವನ್ನು ಬಹಳ ಮುಂದು ವರಿಸಿ ಶಿವಶರಣರ ವಿಚಾರಗಳನ್ನು ಚನ್ನಾಗಿ ಪ್ರತಿಪಾದಿಸುವಷ್ಟು ಯೋಗ್ಯ ತೆಯನ್ನು ಪಡೆದವರಾಗಿದ್ದಾರೆ ಇದು ಶಿವಾನುಭವಿಗಳಿಗೆ ಹೆಮ್ಮೆಯು ಮಾತಾಗಿದೆ.

ಇನ್ನು ಮುಂದೆ ಸ್ತ್ರೀಯರು ಕೈಕೊಂಡಿರುವ ಈ ಪ್ರಯತ್ನಗಳು ಮುಂದುವರಿಯಬೇಕೆಂದು ನಾವು ಕೆಳಗೆ ಕಾಣಿಸಿದ ಕೆಲವು ಸೂಚನೆ ಗಳನ್ನು ಮಾಡುತ್ತೇವೆ. ಅವುಗಳನ್ನು ವಚನಶಾಸ್ತ್ರ ಪ್ರಸಾರಕರು ಲಕ್ಷಿ ಸುವರೆಂದು ನಾವು ಆಶಿಸುತ್ತೇವೆ.

## (೧) ವಚನಗಳ ಪರಿಶೀಲನೆ.

ಈಚೆಗೆ ಅಕ್ಕನ ಬಳಗಗಳಲ್ಲಿರುವ ಬಹು ಜನ ಸ್ತ್ರೀಯರು ಓದು ಬರಹ ಮಾತ್ರವಲ್ಲದೆ ಮಾಧ್ಯಮಿಕ ಶಾಲೆಗಳಲ್ಲಿ ಶಿಕ್ಷಣ ಹೊಂದಿದವರೂ ಸಹ ಇರಬಹುದು. ಆದರೆ ಲಗ್ನವಾದ ಬಳಿಕ ಅವರಿಗೆ ಮನೆತನದ ಕಾರ್ಯಗಳಲ್ಲಿ ಓದುಬರಹದ ವ್ಯಾಸಂಗವು ತಪ್ಪಿಹೋದುದನ್ನು ನಾವು ಕಾಣುತ್ತೇವೆ. ಇದರಿಂದ ಅವರ ಆತ್ಮೋನ್ನತಿಯ ಪ್ರಯತ್ನಗಳು ನಿಂತು ಹೋಗಿಬಿಡುತ್ತವೆ. ಇದು ಅವರಿಗೆ ಮಾತ್ರವಲ್ಲ, ಕುಟುಂಬಕ್ಕೂ ನಾಡಿಗೂ

ಹಾನಿಕಾರಕವು. ಇಂಥ ಸ್ತ್ರೀಯರು ಅಕ್ಕನ ಬಳಗಗಳಲ್ಲಿ ಲಕ್ಷಹಾಕಿ ನಿಂತುಹೋದ ತಮ್ಮ ವಿದ್ಯಾವ್ಯಾಸಂಗವನ್ನು ಮುಂದುವರಿಸಲು ಶಕ್ಯವಿದೆ. ವೀರಶೈವರ ಸುದೈವದಿಂದ ಉಚ್ಚತರದ ಭಾಷೆ ಮತ್ತು ಪ್ರಗಲ್ಭ ವಿಚಾರಗಳುಳ್ಳ ವಚನವಾಙ್ಮಯವು ಅವರಲ್ಲಿದೆ. ಅವುಗಳ ಪರಿಶೀಲನೆಯಿಂದ ವೀರಶೈವ ಸ್ತ್ರೀಯರು ತಮ್ಮ ಸಂಸ್ಕೃತಿಯನ್ನು ಹೆಚ್ಚಿಸಿಕೊಳ್ಳುವ ಕಾರ್ಯವನ್ನು ಮಾಡುವದು ಮಾತ್ರವಲ್ಲ, ತಮ್ಮ ಇತರ ಭಗಿನಿಯರ ಲಕ್ಷವನ್ನೂ ಆದರ ಕಡೆಗೆ ಎಳೆಯಬಹುದಾಗಿದೆ. ಇದಲ್ಲದೆ ಈಚೀಚೆಗೆ ಕನ್ನಡ ಭಾಷೆಯಲ್ಲಿ ಅನೇಕ ಉತ್ತಮ ಗ್ರಂಥಗಳು ಹೊರಪಡುತ್ತ ಇವೆ. ಅವುಗಳನ್ನು ಸುಶಿಕ್ಷಿತ ಸ್ತ್ರೀಯರು ತಮ್ಮ ಅಕ್ಕನ ಬಳಗಗಳ ಮೂಲಕ ತರಿಸಿಕೊಂಡು ಬಳಗದ ಸಭೆಗಳು ನೆರೆದಾಗ್ಗೆ ಅವುಗಳನ್ನಾಗಲಿ ಅಥವಾ ಅವುಗಳ ಸಾರವನ್ನಾಗಲಿ ನೆರೆದ ಸ್ತ್ರೀಯರಿಗೆ ತಿಳಿಸಿ ಹೇಳಿ ಸ್ತ್ರೀಯರಲ್ಲಿ ಜ್ಞಾನಾಭಿವೃದ್ಧಿಗೋಸ್ಕರ ಅಭಿಲಾಷೆಯನ್ನು ಉಂಟುಮಾಡಬಹುದಾಗಿದೆ.

ಈ ಬಳಗಗಳ ಸಭೆಗಳಿಗೆ ಎಲ್ಲರೊಡನೆ ನಿರಕ್ಷರ ಸ್ತ್ರೀಯರೂ ಬರುತ್ತಿರಬಹುದು. ಇಂಥವರಿಗೆ ಸುಶಿಕ್ಷಿತರು ವಿದ್ಯೆಯ ಮಹತ್ವವನ್ನು ತಿಳಿಸಿಹೇಳಿ ಅವರೂ ಸಾಕ್ಷರರಾಗುವ ಬಗ್ಗೆ ಅವರಲ್ಲಿ ಒಲವನ್ನುಂಟುಮಾಡಬಹುದಾಗಿದೆ. ಇದರಿಂದ ಬಳಗಗಳಲ್ಲಿರುವ ಎಲ್ಲರೂ ಸ್ವಲ್ಪ ದಿವಸಗಳಲ್ಲಿ ಓದಬರಹ ಕಲಿತು ಸಾಕ್ಷರರಾಗಬಹುದು. ಸರಕಾರದವರು ಇಂಥ ಸಾಕ್ಷರತೆಯ ಪ್ರಯತ್ನಗಳಿಗೆ ಅತ್ಯಂತ ಪ್ರೋತ್ಸಾಹ ಕೊಡುತ್ತ ಇದ್ದಾರೆ. ಅವರು ಈ ಕಾರ್ಯದಲ್ಲಿ ತೊಡಗಿದವರಿಗೆ ಹಣದ ಸಹಾಯನ್ನೂ ಸಹ ಮಾಡುತ್ತಿರುವರು. ಅಲ್ಲಲ್ಲಿ ನಡೆದಿರುವ ಅಕ್ಕನ ಬಳಗಗಳು ಈ ಶ್ರೇಷ್ಠ ರಾಷ್ಟ್ರೀಯ ಕಾರ್ಯದಲ್ಲಿ ಈ ಕಾಲದಲ್ಲಿ ತೊಡಗುವದು ಶಕ್ಯವಿದೆ. ಈ ದಿಶೆಯಲ್ಲಿಯೂ ಈ ಬಳಗಗಳು ಅವಶ್ಯವಾಗಿ ತೊಡಗಬೇಕೆಂದು ನಮ್ಮ ಸೂಚನೆ ಇದೆ.

### (೨) ವೀರಶೈವ ಧರ್ಮತತ್ವಗಳ ಜ್ಞಾನ.

ಪ್ರತಿಯೊಬ್ಬ ವೀರಶೈವನು ತನ್ನ ಧರ್ಮತತ್ವಗಳ ಸಾಮಾನ್ಯ ಜ್ಞಾನಮಾಡಿಕೊಳ್ಳುವದು ಅವಶ್ಯವಿದೆ. ಈ ಜ್ಞಾನವು ಸ್ತ್ರೀಯರಿಗೂ ಅವಶ್ಯವಾದದ್ದು. ಇಲ್ಲದಿದ್ದರೆ ಅವರು ಅಂಧಶ್ರದ್ಧೆಯುಳ್ಳವರೂ ಧರ್ಮಮೂಢರೂ ಆಗುವರು. ವೀರಶೈವ ಧರ್ಮದಲ್ಲಿ ಧರ್ಮದ ತಳಹ

ದಿಯಾಗಿ ನೀತಿ, ಶೀಲ, ಸನ್ಮಾರ್ಗ ಇವುಗಳೇ ಇರುತ್ತವೆ. ವಚನಶಾಸ್ತ್ರದಲ್ಲಿ ಇವುಗಳ ವಿಚಾರಗಳೇ ತುಂಬಿಹೋಗಿರುತ್ತವೆ. ಸ್ತ್ರೀಯರು ಕೆಳಗೆ ಕಾಣಿಸಿದ ಗ್ರಂಥಗಳನ್ನು ಅಕ್ಕನ ಬಳಗದಲ್ಲಿ ಅವಶ್ಯವಾಗಿ ಓದಬೇಕೆಂದು ನಾವು ಸೂಚಿಸುತ್ತೇವೆ.

ಭಕ್ತಿಯ ವಚನಗಳು:— ಬಸವನ ವಚನಗಳಿಗೆ ಕನ್ನಡ ವಾಙ್ಮಯದಲ್ಲಿ ಅತ್ಯುಚ್ಚ ಸ್ಥಾನವಿದೆ. ಅವುಗಳಲ್ಲಿಯ ಭಕ್ತಿಯ ವಚನಗಳನ್ನು ಬೇರೆ ಆಯ್ದು, "ಭಕ್ತಿಯ ವಚನಗಳು" ಎಂಬ ಗ್ರಂಥವನ್ನು ನಾವು ಪ್ರಸಿದ್ಧಿಸಿದ್ದೇವೆ ಅದಕ್ಕೆ ನಾವು ಸುಲಭವಾದ ಟೀಕೆಯನ್ನು ಬರೆದಿದ್ದೇವೆ. ಈ ವಚನಗಳಲ್ಲಿ ದೇವರಿಗೋಸ್ಕರ ಮನುಷ್ಯನಲ್ಲಿರಬೇಕಾದ ಭಕ್ತಿ, ಮಮತೆಗಳು ಹೇಗಿರಬೇಕು, ದೇವರನ್ನು ಬೇಡಿಕೊಳ್ಳುವಲ್ಲಿ ಯಾವ ಭಾವನೆ ಇರಬೇಕು, ಇವೇ ಮೊದಲಾದ ವಿಷಯಗಳು ಬಹು ಸುಂದರವಾಗಿ ನಿರೂಪಿಸಲ್ಪಟ್ಟಿವೆ.

ಪರಮಾತ್ಮನ ವಚನಗಳು:— ಪರಮಾತ್ಮನ ಸ್ವರೂಪಿನ ವಿಷಯವಾಗಿ ಇರುವ ವಿಚಾರಗಳ ಮೇಲೆ ಧರ್ಮದ ಸ್ವರೂಪು ಅವಲಂಬಿಸಿರುತ್ತದೆ. ಉಪನಿಷತ್ಕಾರರು ದೇವರ ವಿಷಯವಾಗಿ ನಿರೂಪಿಸಿರುವ ವಿಚಾರಗಳನ್ನೇ ಶಿವಶರಣರು ತಮ್ಮ ಉಕ್ತಿಗಳಲ್ಲಿ ಹೇಳಿದ್ದಾರೆ. ದೇವರು ಸರ್ವವ್ಯಾಪಿಯೂ, ನಿರಾಕಾರನೂ ಎಂದು ಅವರ ಅಭಿಪ್ರಾಯಗಳಿವೆ. ದೇವರು ಒಬ್ಬನೇ ಇದ್ದು ಅನೇಕ ದೇವರನ್ನು ಭಜಿಸಕೂಡದೆಂದು ಅವರು ಬಹು ನಿಷ್ಠುರವಾಗಿ ಹೇಳಿದ್ದಾರೆ. ಅಲ್ಲದೆ ದೇವರಲ್ಲಿ ಸಾಮರಸ್ಯವನ್ನು ಹೊಂದುವ ರೀತಿಯನ್ನೂ ಕೂಡ ಹೇಳಿದ್ದಾರೆ. ಇವು ಬಹು ಉಚ್ಚ ತಾತ್ವಿಕ ವಿಚಾರಗಳಿದ್ದು ಬಸವೇಶ್ವರನು ಇವುಗಳನ್ನು ತನ್ನ ವಚನಗಳಲ್ಲಿ ಬಹು ಹೃದಯಂಗಮವಾಗಿ ವಿವರಿಸಿದ್ದಾನೆ. ಇಂಥ ಉಕ್ತಿಗಳನ್ನು ನಾವು ಆಯ್ದು 'ಪರಮಾತ್ಮನ ವಚನಗಳು' ಎಂಬ ಗ್ರಂಥದಲ್ಲಿ ಅವುಗಳನ್ನು ಟೀಕೆ ಸಹಿತ ಪ್ರಕಾಶಪಡಿಸಿದ್ದೇವೆ. ಅಕ್ಕನ ಬಳಗದವರು ಈ ಗ್ರಂಥದ ಉಪಯೋಗವನ್ನು ಮಾಡಿಕೊಳ್ಳಬಹುದು.

ಜಾತಿಭೇದದ ವಚನಗಳು:—ಶಿವಶರಣರು ಜಾತಿಭೇದವನ್ನು ನಿರಾಕರಿಸಿದ್ದಾರೆ. ಆದರೆ ವೀರಶೈವರು ನಿಜಸ್ಥಿತಿಯನ್ನು ತಿಳಿಯದೆ ಸಮಾಜದಲ್ಲಿ ಅನೇಕ ಪಂಗಡಗಳನ್ನು ಕಲ್ಪಿಸಿಕೊಂಡಿದ್ದಾರೆ. ಸ್ತ್ರೀಯರಲ್ಲಿ

ಇದು ಬಹು ಹೆಚ್ಚಾಗಿ ನೆಲೆಗೊಂಡಿದೆ. ಶಿವಶರಣರ ಸ್ಪಷ್ಟ ವಾಕ್ಯಗಳನ್ನು ಓದಿದಲ್ಲಿ ಈ ತಿಳುವಳಿಕೆಯು ಎಷ್ಟು ತಪ್ಪಾದದ್ದೆಂಬುದು ಗೋಚರವಾಗುವದು. ಈ ಉಕ್ತಿಗಳು ವಚನಶಾಸ್ತ್ರಸಾರ ಭಾಗ ೧, ಪೂರ್ವಾರ್ಧ ಪುಟ ೩೬೨ ರಿಂದ ೩೮೦ ರ ವರೆಗೆ ಇದ್ದು ಅವುಗಳನ್ನು ಅಕ್ಕನ ಬಳಗಗಳ ಕೂಟಗಳಲ್ಲಿ ತಿಳಿಸಿ ಹೇಳುವದು ಬಹು ಅಗತ್ಯವಿದೆ. ಇದರಿಂದ ಅವರ ಪೂರ್ವದ ತಪ್ಪು ಗ್ರಹಿಕೆಗಳು ಬದಲಾಗದೆ ಇರವು.

ದೇವರದಾಸಿಮಯ್ಯನ ವಚನಗಳು:— ಇವರಲ್ಲಿ ಅಚ್ಚುಕಟ್ಟಾದ ಬಿಗಿಯಾದ ನುಡಿಗಳಿವೆ. ಇವು ಬಹು ಗಂಭೀರವಾದವುಗಳು. ಇವುಗಳಿಗೆ ವಚನ ವಾಙ್ಮಯದಲ್ಲಿ ಉಚ್ಚ ಸ್ಥಾನವಿದೆ. ಈ ಗ್ರಂಥಕ್ಕೆ ಟೀಕೆ ಇದ್ದು, ಸ್ತ್ರೀಯರು ಪರಿಶೀಲನೆ ಮಾಡಲು ಅದು ಯೋಗ್ಯವಾಗಿದೆ.

ಹಾಗೆಯೇ ಕ್ರಮವಾಗಿ ಸಕಳೇಶಮಾದರಸ, ಗಣದಾಸಿವೀರಣ್ಣ, ಘನಲಿಂಗ, ಮಹಾದೇವಿಯಕ್ಕ ಇವರ ವಚನಗಳನ್ನೂ ಓದಬಹುದು.

ಈ ಗ್ರಂಥಗಳೆಲ್ಲವೂ ಚಿಕ್ಕವಾಗಿದ್ದರೂ ಅವುಗಳನ್ನು ವನಗೊಟ್ಟು ಓದಿದಲ್ಲಿ ಸ್ತ್ರೀಯರಿಗೆ ಅಚ್ಚಗನ್ನಡ ಶಬ್ದಗಳ ಜ್ಞಾನವು ಉಂಟಾಗಿ ವಚನ ಗ್ರಂಥಗಳನ್ನು ಓದಿ ಸುಲಭವಾಗಿ ಅವುಗಳನ್ನು ತಾವೇ ತಿಳಿದುಕೊಳ್ಳುವಷ್ಟು ಸಾಮರ್ಥ್ಯವನ್ನು ಅವರು ಹೊಂದುವರು. ಸ್ತ್ರೀಯರಲ್ಲಿ ಇಂಥ ಉದಾಹರಣೆಗಳಿರುವದು ಆಗಿಂದಾಗ್ಗೆ ಈಚೆಗೆ ತೋರಿಬಂದಿರುತ್ತದೆ. ಅವರಲ್ಲಿ ಕೆಲವರಂತೂ ಸುಸಂಸ್ಕೃತರಾಗಿ ಸಭೆಗಳಲ್ಲಿ ಚನ್ನಾಗಿ ಭಾಷಣ ಮಾಡುವಷ್ಟು ಯೋಗ್ಯತೆಯನ್ನು ಪಡೆದಿದ್ದಾರೆ. ಇದು ವಚನವಾಙ್ಮಯದ ಪರಿಶೀಲನೆಯ ಪರಿಣಾಮವಾಗಿದೆ.

## (೩) ಶಿವಶರಣರ, ರಾಜಮನೆತನಗಳ ಮತ್ತು ಸತ್ಪುರುಷರ ಚರಿತ್ರೆಗಳ ಪರಿಚಯವು.

ಶಿವಶರಣರ ಚರಿತ್ರೆಗಳು:— ಈಗಿನ ವಿದ್ಯಾವಂತರಿಗೆ ಪರನಾಡಿಗರ ಮತ್ತು ಪರದೇಶಗಳಲ್ಲಿರುವ ಧಾರ್ಮಿಕ ಮತ್ತು ರಾಜಕೀಯ ಪುರುಷರ ಚರಿತ್ರೆಗಳ ಪರಿಚಯವಿರುವಂತೆ ತಮ್ಮ ನಾಡಿನ ಮಹಾಪುರುಷರ ಚರಿತ್ರೆಗಳ ಪರಿಚಯವೇನೂ ಇರುವದಿಲ್ಲ. ಸುಧಾರಿಸಿದ

ಪರರಾಷ್ಟ್ರದವರು ತಮ್ಮ ನಾಡಿನ ಘನತೆಯನ್ನರಿತವರಾದದ್ದರಿಂದ ಅವರಲ್ಲಿ ಸ್ವದೇಶಪ್ರೇಮ ಮತ್ತು ಸಮಾಜಾಭಿಮಾನ ಇವುಗಳು ತುಂಬಿ ತುಳುಕುತ್ತವೆ. ಆದರೆ ವೀರಶೈವರಲ್ಲಿ ಸಮಾಜ ಸಂಸ್ಕರಣ ಮಾಡಿದ ಮಹಾನುಭಾವರು ನೂರಾರು ಜನರಾಗಿದ್ದರೂ ಅವರ ಚರಿತ್ರೆಗಳ ಪರಿಚಯವು ಅವರಿಗಿಲ್ಲ. ಇಂಥವರ ಚರಿತ್ರೆ ಗ್ರಂಥಗಳು ಆಬಾಲವೃದ್ಧರ ಕಯ್ಯಲ್ಲಿ ಯಾವಾಗಲೂ ಇರಬೇಕು. ವೀರಶೈವ ಪುರಾಣ ಗ್ರಂಥಗಳಲ್ಲಿ ಶಿವಶರಣರ ಚರಿತ್ರೆಗಳಿರುವದು ಕಂಡುಬರುತ್ತದೆ. ಆದರೆ ಅವುಗಳಲ್ಲಿ ಪವಾಡಗಳಿಗೆ ಮುಖ್ಯ ಸ್ಥಾನವಿದ್ದು ಆ ಶರಣರು ಮಾಡಿದ ವಾಙ್ಮಯ ಸೇವೆ ಮತ್ತು ಸಮಾಜ ಸುಧಾರಣೆಯ ಕಾರ್ಯಗಳ ವಿವರಗಳೇನೂ ಇರುವದಿಲ್ಲ. ಇದರಿಂದ ವಾಚಕರಲ್ಲಿ ಅಂಧಶ್ರದ್ಧೆಯುಂಟಾಗುತ್ತದೆ. ಇಂಥ ಶ್ರದ್ಧೆಯು ಸಮಾಜವನ್ನು ಕುಂಠಿತ ಮಾಡುತ್ತದೆ. ಅಲ್ಲದೆ ಇವುಗಳಲ್ಲನೇಕ ಚರಿತ್ರೆಗಳಲ್ಲಿ ಜನಸಾಮಾನ್ಯರಲ್ಲಿ ಮುಖ್ಯವಾಗಿ ಬಾಲಕರಲ್ಲಿ ಮತ್ತು ಸ್ತ್ರೀಯರಲ್ಲಿ ನೀತಿಗೆ ವಿರುದ್ಧವಾದ ಆಚರಣೆಗಳುಂಟಾಗುವ ತೆರದಲ್ಲಿ ಬದೆದವುಗಳಿರುತ್ತವೆ. ಅಕ್ಕನ ಬಳಗಗಳಲ್ಲಿ ಇಂಥವುಗಳನ್ನು ಪೂರ್ಣವಾಗಿ ಬಿಟ್ಟುಕೊಡುವದು ಲೇಸು.

ನಾವು ಈಚೆಗೆ ಶಿವಶರಣರ ಸುಮಾರು ಐದುನೂರು ಚರಿತೆಗಳನ್ನು ಮೊದಲು ಸಂಗ್ರಹಿಸಿ ಅವುಗಳ ತಥ್ಯಾಂಶಗಳನ್ನು ಇಟ್ಟುಕೊಂಡು ಶಿವಶರಣರ ಚರಿತ್ರೆಗಳು ಭಾಗ ೧ ಮತ್ತು ಭಾಗ ೨ ಇವುಗಳನ್ನು ಪ್ರಸಿದ್ಧಿಸಿದ್ದೇವೆ. ೧ನೇ ಭಾಗದಲ್ಲಿ ಮುಖ್ಯವಾಗಿ ಕಾಯಕ ಈ ವಿಷಯದ ವಿಚಾರಗಳಿದ್ದ ೫೧ ಸಣ್ಣ ಸಣ್ಣ ಕಥೆಗಳನ್ನು ಕೊಟ್ಟಿರುತ್ತೇವೆ. ಎರಡನೇ ಭಾಗದಲ್ಲಿ ೬೩ ಮಹತ್ವದ ಕಥೆಗಳಿರುತ್ತವೆ. ವೀರಶೈವರು ತಮಿಳು ದೇಶದ ೬೩ ಪುರಾತನರ ವಿಷಯವಾಗಿ ಭಕ್ತಿಯನ್ನು ತೋರಿಸುತ್ತಿದ್ದು ಕರ್ನಾಟಕದಲ್ಲಿ ಹಾಗೆಯೇ ಅತುಲವಾದ ಕಾರ್ಯಮಾಡಿ ಹೋಗಿರುವಂಥ ಪುಣ್ಯಪುರುಷರಿದ್ದಾರೆಂದು ತೋರಿಸಲು ನಾವು ೬೩ ಶಿವಶರಣರ ಚರಿತ್ರೆಗಳನ್ನು ಆಯ್ದು ಇದರಲ್ಲಿ ಕೊಟ್ಟಿದ್ದೇವೆ. ಈ ಚರಿತ್ರೆಗಳು ಹಿಂದುಸ್ತಾನ ದೇಶದಲ್ಲಿಯ ಯಾವ ನಾಡಿನಲ್ಲಿಯೂ ಆಗಿಹೋಗಿರುವ ಮಹಾಪುರುಷರ ಚರಿತ್ರೆಗಳಿಗಿಂತಲೂ ಕಡಿಮೆ ತರಗತಿಯವಲ್ಲವೆಂದು ನಾವು ಧಾರಾಳವಾಗಿ ಹೇಳಬಹುದು. ಈ ಚರಿತ್ರೆಗಳಲ್ಲಿ ಆಯಾ ಶರಣರು ಯಾವಲ್ಲಿ ಜೀವಿಸಿದ್ದರು, ಅವರು ಯಾವ ಕಾರ್ಯ ಮಾಡಿದರು,

ಯಾವ ಕಾಲಕ್ಕೆ ಅವರು ಇದ್ದರು, ಅವರು ಯಾವ ಸಾಹಿತ್ಯ ಕಾರ್ಯ ಮಾಡಿದರು, ಇವೇ ಮೊದಲಾದ ವಿಷಯಗಳನ್ನು ಇದ್ದಕ್ಕಿದ್ದ ಹಾಗೆಯೇ ನಿರೂಪಿಸಿದ್ದೇವೆ. ಅವುಗಳಲ್ಲಿ ಅಡಕವಾಗಿರುವ ತತ್ವಗಳು ಶುದ್ಧ ಸಾತ್ವಿಕ ವೀರಶೈವಾಚಾರವನ್ನು ಬೋಧಿಸುತ್ತವೆ. ಈ ಶಿವಶರಣರಲ್ಲಿ ಬಹು ಜನರು ಸ್ತ್ರೀಯರಿದ್ದಾರೆಂಬುದನ್ನು ನಾವು ಇಲ್ಲಿ ಉಲ್ಲೇಖಿಸದೆ ಇರಲಾರೆವು.

ವೀರಶೈವ ಅರಸುಮನೆತನಗಳ ಚರಿತ್ರೆಗಳು:— ಬಸವೇಶ್ವರನ ತರುವಾಯ ರಾಜಕೀಯ ರಂಗದಲ್ಲಿ ಅನೇಕ ವೀರಶೈವರು ಸೇರಿದ್ದರಿಂದ ಅವರಲ್ಲಿ ಅನೇಕರು ರಾಜ್ಯಸ್ಥಾಪಕರೂ ಶೂರ ಪುರುಷರೂ ಆಗಿಹೋಗಿದ್ದಾರೆ. ನಾವು ಅವರ ಚರಿತ್ರೆಗಳನ್ನು ಸಂಗ್ರಹಿಸಿ ಶಿವಾನುಭವ ಪತ್ರಿಕೆಯಲ್ಲಿ ಅಚ್ಚು ಹಾಕುತ್ತಲಿದ್ದೇವೆ. ಇದು ಇನ್ನೂ ಅಪೂರ್ಣವಿದೆ.

ಸಾಧುಸತ್ಪುರುಷರ ಚರಿತ್ರೆಗಳು:— ಹೋದ ೮೦೦ ವರ್ಷಗಳಲ್ಲಿ ಕರ್ನಾಟಕದಲ್ಲಿ ಅಸಂಖ್ಯ ಧಾರ್ಮಿಕ ಪುರುಷರು ಜನಿಸಿ ನಾಡಿನ ಧಾರ್ಮಿಕ ಮತ್ತು ಸಾಮಾಜಿಕ ಸ್ಥಿತಿಯನ್ನು ಅಭಿವೃದ್ಧಿಗೆ ತಂದಿದ್ದಾರೆ. ಅವರ ಅನೇಕ ಚರಿತ್ರೆಗಳನ್ನು ನಾವು ಕಾಲಕಾಲಕ್ಕೆ ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸುತ್ತ ಬಂದಿದ್ದೇವೆ. ಅವುಗಳನ್ನು ನಾವು ಬೇರೆಯಾಗಿ ಸಂಗ್ರಹಿಸಿ ಅಚ್ಚಿಗೆ ಸಿದ್ಧಪಡಿಸಿದ್ದೇವೆ. ಅವು ಎರಡು ಗ್ರಂಥಗಳಾಗಬಹುದು.

ಈ ಎಲ್ಲ ಗ್ರಂಥಗಳು ಬಾಲಕರಿಗೂ ಸ್ತ್ರೀಯರಿಗೂ ಬಹು ಬೋಧಪ್ರದವೂ ಪ್ರಚೋದಕವೂ ಆಗಿರುತ್ತವೆ. ಇವುಗಳನ್ನು ಅಕ್ಕನ ಬಳಗಗಳಲ್ಲಿ ಉಪಯೋಗಿಸಬಹುದು.

( ಸಶೇಷ. )

---

# ಆಜ್ಞಾಚಕ್ರದಲ್ಲಿ ಮಹಾಲಿಂಗದ ಉದ್ಭವವು.

ಚಿತ್‌ಶಕ್ತಿಯು ಮಥನದಿಂದ, ಚಿತ್‌ಶಕ್ತಿ ಎರಡು ತೆರನಾಗಿರುತಿಹಳು. ಅದು ಹೇಗೆಂದರೆ—ಲೋಕದಾತ್ಮರುಗಳಲ್ಲಿ ದೇಹೋಹಂವೆಂದು ಲಿವ ಮೂಲಾಹಂಕಾರವನುಂಟು ಮಾಡಿಕೊಡುತಿಹಳು. ಇತ್ತ ಗುರು ಕಾರುಣ್ಯವಂ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವಂತಹ ಶಿವಶರಣರುಗಳಿಗೆ ತನ್ನ ನಿಜವನರಿವಂತಹ ಮೂಲ ಜ್ಞಾನವನುಂಟು ಮಾಡಿಕೊಡುತಿಹಳು.

ಭಾವಾದಿಕರಣಂಗಳ ನಿವೃತ್ತಿಃ— ಮತ್ತಂತುವಲ್ಲದೆ ಮೇಲಣ ಭಾವಾದಿ ಕರಣಂಗಳೈದು ಚಿತ್‌ಶಕ್ತಿಯು ಸ್ವರೂಪಿನಿಂದಿದ್ದಿತಾದ ಕಾರಣ ಆ ಚಿತ್‌ಶಕ್ತಿಯು ಸ್ವರೂಪವಾದ ಮೇಲಣ ಭಾವಾದಿ ಕರಣಂಗಳೊಳಗೆ ಭಾವವೇ ಭಕ್ತಿ, ಚಿತ್ತವೇ ಹಸ್ತ, ಮನವೇ ಲಿಂಗ, ಹೃದಯುವೇ ಮುಖ, ಪರಿಣಾಮವೇ ಪದಾರ್ಥವಾಗಿ ಮೇಲಣ ಭಾವಾದಿ ಕರಣಂಗಳೈದು ನಿವೃತ್ತಿಯಾದುದೇ ಚಿತ್‌ಶಕ್ತಿಯು.

ಪಂಚವಾಯುಗಳ ನಿವೃತ್ತಿಃ— ಅಂತಪ್ಪ ಚಿತ್‌ಶಕ್ತಿಯು ಮಥನದಿಂದ ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯುವೆಂಬ ಪಂಚವಾಯುವ ನಿಲಿಸಿ ಐದು ಪ್ರಕಾರವಾದ ಮಾರುತಂಗಳ ಸ್ಥಾನ, ಧರ್ಮ, ಕರ್ಮ, ವರ್ಣಂಗಳನು ಓಂಕಾರ ಮಂತ್ರದಿಂದ ತಡೆದು,

ನಿರಾವಸ್ಥೆಯ ನಿವೃತ್ತಿಃ—ಆಜ್ಞಾಚಕ್ರದ ಭೃಕುಟಿಸ್ಥಾನದಲ್ಲಿ ಒಂದಾನೊಂದು ದರ್ಪಣಾಕಾರದಿಂದ ಬಿಟ್ಟಿತ್ತಾಗಿ ಒಪ್ಪುವಂತಹದ್ದೇ ಆಜ್ಞಾ ಚಕ್ರವು. ಅಂತಪ್ಪ ಚಕ್ರದ ಮಾಣಿಕ್ಯ ವರ್ಣದ, ಆ ಚಕ್ರವೆಂಬುದು ತಾನೊಂದಾನೊಂದು ಜ್ಯೋತಿ ವರ್ಣದ ಕಾಂತಿಯಿಂದಿರುತಿಹುದು, ಅಂತಪ್ಪ ವರ್ಣದ ದ್ವಿದಳದ ಆ ಚಕ್ರದ ಸುತ್ತುವಳಯದಲ್ಲಿ ಎರಡೆಸಳುಗಳಿಂದೊಪ್ಪುತಿಹುದು. ಅಂತಪ್ಪೆರಡು ಎಸಳುಗಳ ವಿವರ— ಹಂ ಕ್ಷಂ ಎಂಬ ದ್ವ್ಯಕ್ಷರದ ಹಕಾರಾದಿ ಕ್ಷಕಾರಾಂತ್ಯವಾದ ಉಭಯಾಕ್ಷರಂಗಳೇ ಆ ದಳಂಗಳಲ್ಲಿ ಜೀವನಾಕ್ಷರ ಸ್ವರೂಪಿನಿಂದ ನ್ಯಾಸವಾಗಿರುತಿಹವು. ಅಂತಪ್ಪ ಎರಡಕ್ಷರದ ಅಧಿದೈವ ಮಹಾ ಶ್ರೀಗುರುವಿನ ಇಷ್ಟರೊಡನೆ ಕೂಡಿರುವಂತಾದ್ದೇ ಆಜ್ಞಾಚಕ್ರ, ಆ ಚಕ್ರಕ್ಕೆ ಮಹಾಗುರು

ವೆಂದರೆ ಉಪಮಾತೀತನು. ಆ ಉಪಮಾತೀತನೇ ಅಧಿಷ್ಠಾಯಿಕನಾಗಿ ರುತಿಹನು. ಅಂತಪ್ಪ ಉಪಮಾತೀತನೆಂಬಧಿದೇವತೆಯು ನಿರಾವಸ್ಥೆಯನ್ನು ಪಂಚಾವಸ್ಥೆಗಳ ಮೇಲಣ ಕೋರಿಕೆ ಏನೂ ಇಲ್ಲದಿರುವುದೇ ನಿರಾವಸ್ಥೆ, ಆ ಅವಸ್ಥೆಯು ಆ ಚಕ್ರದಲ್ಲಿ ಸಂಬಂಧವಾಗಿರುತಿಹುದು. ಅಂತಪ್ಪ ಅವಸ್ಥೆಯನ್ನು ಓಂಕಾರವೆಂಬ ಬೀಜಾಕ್ಷರದಿಂ ತಿಳಿವು ಇವೆಲ್ಲ ಲೋಕದಾತ್ಮರುಗಳಿಗೆ ಪೂರ್ವವಾಸನೆಯೊಡನೆ ಕೂಡಿಕೊಂಡು ಪ್ರಕೃತಿ ತತ್ವಂಗಳಾಗಿ ಸಕಲ ಜೀವರುಗಳನ್ನು ಜನ್ಮಾಂತರ ಗತಿಗಳೊಳಗೆ ತಂದು ಸಂಹರಿಸುವದಕ್ಕೆ ಕಾರಣವಾಗಿರುತಿಹವು.

ಆಜ್ಞಾಚಕ್ರವು ಮಂತ್ರಮಯವಾದುದು:— ಇತ್ತ ಗುರುಕಾರುಣ್ಯವಂ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವಂತಹ ಶಿವಶರಣರುಗಳಿಗೆ ಅವು ಎಲ್ಲ ನಿವೃತ್ತಿಯಾಗಿ ಹೋಗಿ ಓಂಕಾರ ಷಡಕ್ಷರಮಂತ್ರ ಸ್ವರೂಪವಾಗಿರುತಿಹವು. ಅದು ಹೇಗೆಂದೊಡೆ ಆ ಚಕ್ರವೇ ಓಂಕಾರ ಸ್ವರೂಪವಾದಲ್ಲಿ ಅಲ್ಲಿ ತೋರುವ ವರ್ಣವೇ ಓಂಕಾರ ಪ್ರಣವ ದೊಳಗಣ ನಕಾರ ಪ್ರಣವುಸ್ವರೂಪು, ಅಲ್ಲಿ ತೋರುವಂತಹ ದಳಗಳೇ ಓಂಕಾರ ಪ್ರಣವುದೊಳಗಣ ಮಕಾರ ಪ್ರಣವುಸ್ವರೂಪು, ಆ ದಳಂಗಳಲ್ಲಿ ನ್ಯಾಸವಾಗಿರುವಂತಹ ಅಕ್ಷರಂಗಳೇ ಓಂಕಾರ ಪ್ರಣವುದೊಳಗಣ ಮಕಾರ ಪ್ರಣವು ಸ್ವರೂಪು, ಆ ದಳಂಗಳಲ್ಲಿ ವ್ಯಾಸವಾಗಿರುವಂತಹ ಅಕ್ಷರಂಗಳೇ ಓಂಕಾರ ಪ್ರಣವುದೊಳಗಣ ಶಿಕಾರ ಪ್ರಣವು ಸ್ವರೂಪು, ಅಲ್ಲಿ ನೆಲಸಿರುವಂತಹ ಅಧಿದೇವತೆಯೇ ಓಂಕಾರ ಪ್ರಣವ ದೊಳಗಣ ವಕಾರ ಪ್ರಣವು ಸ್ವರೂಪು, ಅಲ್ಲಿ ಸಂಬಂಧವಾಗಿರುವವಸ್ಥೆಯೇ ಓಂಕಾರ ಪ್ರಣವುದೊಳಗಣ ಯಕಾರ ಪ್ರಣವುಸ್ವರೂಪವಾಗಿ,

ಆಜ್ಞಾಚಕ್ರ ಸಂಬಂಧವಾದ ಷಡ್ವಿಧ ತತ್ವಗಳ ನಿವೃತ್ತಿ:— ಆಜ್ಞಾಚಕ್ರ ಸಂಬಂಧವಾದ ಷಡ್ವಿಧ ತತ್ವಂಗಳೆಲ್ಲವೂ ನಿವೃತ್ತಿಯಾಗಿ ಓಂಕಾರ ಷಡಕ್ಷರಮಂತ್ರ ಸ್ವರೂಪವಾಗಿರ್ಪವೆಂದರಿವುದು. ಓಂಕಾರವೆಂಬ ಬೀಜಾಕ್ಷರದಿಂ ತಿಳಿದು ಈಪ್ರಕಾರದಿಂದ ಹೇಳಲ್ಪಟ್ಟಂತಹ ಈ ಷಡ್ವಿಧ ವಿಚಾರ ವಿಡಿಮು ಈ ಓಂಕಾರ ಷಡಕ್ಷರಮಂತ್ರ ಸ್ವರೂಪವಾದ ಷಡ್ವಿಧ ತತ್ವಂಗಳೆಲ್ಲವೂ ಓಂಕಾರ ಮಂತ್ರಮೂರ್ತಿಯಾದ ಮಹಾಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯ ಭಾವವನ್ನು ತನ್ನ ಮನ

ನೊಳಗೆ ಗ್ರಹಿಸಿ ಆ ವಿಚಾರದ ನೈಶ್ಚಲ್ಯವು ತಾನೆಂತಾಯಿತೆ ಸ್ವಾಮಿ ಎಂದು ಬೆಸಗೊಂಡೊಡೆ,

ಓಂಕಾರ ಮಂತ್ರಮೂರ್ತಿಯಾದ ಮಹಾಲಿಂಗಕ್ಕೆ ಆ ಚಕ್ರವೇ ಪ್ರಣವಪೀಠದ ಗದ್ದುಗೆಯಾಗಿ ಅಲ್ಲಿ ತೋರುವಂತಹ ವರ್ಣವೇ ನಂದದ ಕಂದದ ಸ್ವಯಂ ಜ್ಯೋತಿ ಪ್ರಕಾಶವಾಗಿ ಅಳವಟ್ಟುದೆರಡನೆಯ ವಿಚಾರವು.

ಅಲ್ಲಿರುವಂತಹ ದಳಂಗಳೇ ಇಂಡೆ ದಂಡೆ ಕುಸುಮಾಲಂಕಾರಂಗಳಾಗಿ ಆ ದಳಂಗಳಲ್ಲಿ ನ್ಯಾಸವಾಗಿರುವಂತಹ ಅಕ್ಷರಂಗಳೇ ಓಂಕಾರ ಮಂತ್ರಮೂರ್ತಿಯಾದ ಮಹಾಲಿಂಗವನ್ನು ನೆನೆವುದಕ್ಕೆ ಓಂ, ಓಂ, ಓಂ ಎಂಬ ಮಂತ್ರಾಕ್ಷರಂಗಳಾಗಿ ಅಳವಟ್ಟುದೇ ನಾಲ್ಕನೆಯ ವಿಚಾರವು.

ಅಲ್ಲಿ ನೆಲಸಿರುವಂತಹ ಅಧಿದೇವತೆಯೇ ಐಕ್ಯನೆಂಬ ಪೂಜಾರಿಯಾಗಿ ಅಲ್ಲಿ ಸಂಬಂಧವಾಗಿರುವಂತಹ ಅವಸ್ಥೆಯೇ ಘನಲಿಂಗಾವಸ್ಥೆಯಾಗಳವಟ್ಟುದೇ ಆರನೆಯ ವಿಚಾರವು.

ಈ ರೀತಿಯಲ್ಲಿ ಓಂಕಾರ ಷಡಕ್ಷರ ಮಂತ್ರ ಸ್ವರೂಪವಾದ ಷಡ್ವಿಧ ತತ್ವಂಗಳೆಲ್ಲವೂ ಓಂಕಾರ ಮಂತ್ರ ಮೂರ್ತಿಯಾದ ಮಹಾಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯ ಭಾವವನ್ನು ತನ್ನ ಮನದೊಳಗೆ ಗ್ರಹಿಸಿ ಇಂತೀ ಷಡ್ವಿಧ ವಿಚಾರವಿಡಿದು ಸಮರಸಭಕ್ತಿಯಿಂದ ಶಿಖಿಕರ್ಪೂರ ಸಂಯೋಗವಾದ ಹಾಗೆ ಲಿಂಗದಲ್ಲಿ ತಾ ಮಾಡಿ ತನ್ನಲ್ಲಿ ಲಿಂಗವು ಕೂಡಿ ತಾನು ಲಿಂಗವೆಂಬ ಉಭಯ ಭಾವವಳಿದು ತಾನುತಾನಾಗಿರುವುದೇ ಸಮರಸ ಭಕ್ತಿ.

ಅಂತಪ್ಪ ಭಕ್ತಿಯಿಂದ ಆರನೆಯ ತತ್ವದಾದಿಯನರಿದು ಆ ಆರನೆಯ ತತ್ವವೇ ಆತ್ಮ ತತ್ವ. ಆ ಆತ್ಮತತ್ವದ ಜನನಕ್ಕೆ ಮೂಲಾಧಾರ ಸ್ಥಲವಾದ ಗಂಭೀರ ದಿಕ್ಕಿನ ಮುಖವನರಿದು ಸದಾಶಿವಮೂರ್ತಿಗೆಅಧೋ ಮುಖದಲ್ಲಿರ್ಪುದೇ ಗಂಭೀರ ದಿಕ್ಕು, ಅಂತಪ್ಪ ದಿಕ್ಕಿನಲ್ಲಿ ತೋರುವ ಮಹಾತತ್ವದ ಮುಖವನರಿದು ಮಹಾಸಾದಾಖ್ಯ ಸ್ವರೂಪವಾದ ಗೋಕ್ಷ್ಯ ಮುಖವು ತಾನೇ ಇಲ್ಲಿ ಶಿವಶರಣನ ಹೃದಯೇಂದ್ರಿಯದಲ್ಲಿ ಅರಿವು ಸ್ವರೂಪವಾದ ಮಹಾಲಿಂಗ ಸ್ವರೂಪಿನಿಂದ ವಾಸವಾಗಿರ್ಪವೆಂದೇ ತಿಳಿದು,

ಆತ್ಮತತ್ವದ ನಿವೃತ್ತಿ:— ಆತ್ಮನು ಆತ್ಮವುದವೆತ್ತಿದಲ್ಲಿ ಅಹಂಕಾರ ಭೂತನಾಗಿ ಎನ್ನಿಂದ ಬಲ್ಲಿದರಿಲ್ಲ, ಎನಗಿನ್ನಾರಿದಿರಿಲ್ಲವೆಂದು, ಅಹಂ ಭಾವದಿಂದ ಅಹಂಕರಿಸುತಿಹನೆಂಬ ಆತ್ಮನ ಅಹಂಮುತ್ತಾದಿ ಗುಣಂಗ ಳನ್ನು ಘನ ಪ್ರಕಾಶದಿಂ ತಿಳಿದು, ಅಖಂಡ ಜ್ಞಾನ ಪ್ರಕಾಶವನುಳ್ಳ ಶಿವೈಕ್ಯರುಗಳಿಗೆ ಆತ್ಮನ ಅಹಂಮುತ್ತಾದಿ ಗುಣಂಗಳು ನಷ್ಟವಾಗಿರ್ಪ ವೆಂದರಿದು ಘನ ಪ್ರಕಾಶದಿಂ ತಿಳಿದು ಮೋಕ್ಷಾರ್ಥ ನಾಸ್ತಿಯಾಗಿ ಆತ್ಮನು ಮಧ್ಯಸ್ಥಾನಕ್ಕೆ ಬಂದಲ್ಲಿ ಮುಕ್ತಿಯನು ಬಯಸುತ್ತಿಹನೆಂಬ ಮೋಕ್ಷದ ಮೇಲಣ ಅಪೇಕ್ಷೆಯು ನಷ್ಟವಾಗಿ ಹೋಗಿ ಐಕ್ಯಸ್ಥಲವನಂ ಗಂಗೊಂಡುದೀಗ ಸದ್ಭಾವದ ನೆಲೆ. ಇಷ್ಟರ ಸಾಧನದಿಂದ ಆತ್ಮನ ಮದಗುಣ ಅಂಶಗುಣಂಗಳಳಿದು ಚಿದಾತ್ಮ ಸ್ವರೂಪಿನಿಂದ ಐಕಂಗಂ ಗವಾಗಲು ಅಂತಪ್ಪ ಪರಾತ್ಮರವಾದ ಶಿವೈಕ್ಯ ಸ್ಥಲವನೊಡಲ ಮಾಡಿ ಕೊಂಡು ಆಚರಿಸುತಿರುವಂತಾದ್ದು ತಾನೇ ಸದ್ಭಾವದ ನೆಲೆ. ದುಭಾ೯ ವವಳಿದು ಸದ್ಭಾವವೆಂಬ ಕರಕಮಲಕ್ಕೆ ಅರಿವು ಸ್ವರೂಪವಾದ ಮಹಾ ಲಿಂಗವು ಬಂದು ನೆಲೆಗೊಂಬ ನಿಲುಕಡೆಯು.

---

## ಮಿಶ್ರಾರ್ಪಣದ ಸಾರ.

ಈಪ್ರಕಾರ ಷಡ್ವಿಧ ಶಕ್ತಿಯ ಮಥನದಿಂದ ಈ ಜ್ಞಾನಕರ್ಮೇಂ ದ್ರಿಯಂಗಳ ವಿಷಯ ಅಂತಃಕರಣ ವಾಯು ಮೇಲಣ ಭಾವಾದಿ ಕರ ಣಂಗಳೆಂಬ ಮೂವತ್ತಾರು ತತ್ವಂಗಳ ನಿವೃತ್ತಿಯಾದುದೇ ಷಡ್ವಿಧಶಕ್ತಿ.

ಅಂತಪ್ಪ ಶಕ್ತಿಯ ಮಥನದಿಂದ ದಶವಾಯುವ ನಿಲ್ಲಿಸಿ ಈ ವಾಯು ಗಳ ಸ್ಥಾನ ಧರ್ಮ ಕರ್ಮ ವರ್ಣಂಗಳನ್ನು ಷಡಕ್ಷರ ಮಂತ್ರದಿಂದ ತಡೆದು,

### ಪ್ರಕೃತಿ ತತ್ವಗಳು ಪ್ರಣವ ಸ್ವರೂಪವಾಗಿಹವು.

ಷಡ್ವಿಧಚಕ್ರ— ಆಧಾರ ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯವೆಂಬ ಆರು ಚಕ್ರಗಳನ್ನು, ಷಡ್ವಿಧ ವರ್ಣಂಗಳನ್ನು ಕೆಂಪು, ನೀಲ, ಕುಂಕುಮ, ಪೀತ, ಶ್ವೇತ, ಜ್ಯೋತಿರ್ವರ್ಣವೆಂಬ

ಆರು ವರ್ಣಂಗಳನ್ನು, ಷಡ್ವಿಧದಳ, ಚೌದಳ, ಷಡ್ದಳ, ದಶದಳ, ದ್ವಾದಶದಳ, ಷೋಡಶದಳ, ದ್ವಿದಳವೆಂಬ ಆರು ದಳಂಗಳನ್ನು, ಷಡ್ವಿಧಾಕ್ಷರ, ಚತುರಕ್ಷರ, ಷಡಕ್ಷರ, ದಶಾಕ್ಷರ, ಷೋಡಶಾಕ್ಷರ, ದ್ವ್ಯಕ್ಷರವೆಂಬ ಆರು ಅಕ್ಷರಗಳನ್ನು, ಷಡ್ವಿಧ ಅಧಿದೈವ—ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಉಪಮಾತೀತವೆಂಬ ಅಧಿಷ್ಠಾನ ಕರ್ತೃಗಳೆಂಬುವರನು, ಷಡ್ವಿಧಾವಸ್ಥೆಯನು—ಜಾಗ್ರತ್, ಸ್ವಪ್ನ, ಸುಷುಪ್ತಿ, ತೂರ್ಯ, ತೂರ್ಯಾತೀತ ನಿರಾವಸ್ಥೆ ಎಂಬ ಆರವಸ್ಥೆಗಳನು, ಷಡ್ವಿಧ ಬೀಜಾಕ್ಷರದಿಂ ತಿಳಿದು, ಇವೆಲ್ಲ ಲೋಕದಾತ್ಮರುಗಳಲ್ಲಿ ಪೂರ್ವವಾಸನೆಯೊಡನೆ ಕೂಡಿಕೊಂಡು ಪ್ರಕೃತಿ ತತ್ವಂಗಳಾಗಿ ಸಕಲ ಜೀವರುಗಳನ್ನು ಜನ್ಮಾಂತರ ಗತಿಗಳೊಳಗೆ ತಂದು ಸಂಹರಿಸುವುದಕ್ಕೆ ಕಾರಣವಾಗಿರುತಿಹವು. ಗುರುಕಾರುಣ್ಯವಂ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವಂತಹ ಶಿವಶರಣರುಗಳಿಗೆ ಅವೆಲ್ಲ ನಿವೃತ್ತಿಯಾಗಿ ಹೋಗಿ, ನಕಾರ ಷಡಕ್ಷರ, ಮಕಾರ ಷಡಕ್ಷರ, ಶಿಕಾರ ಷಡಕ್ಷರ, ವಕಾರ ಷಡಕ್ಷರ, ಯಕಾರ ಷಡಕ್ಷರ, ಓಂಕಾರ ಷಡಕ್ಷರವೆಂಬ ಮೂವತ್ತಾರು ಪ್ರಣಮ ಸ್ವರೂಪವಾಗಿಪ್ಪವೆಂದೇ ಅರಿವುದು.

## ಷಡ್ವಿಧ ಲಿಂಗಗಳ ಪೂಜೋಪಕರಣಗಳು.

ಈ ಪ್ರಕಾರದಿಂದ ಹೇಳಲ್ಪಟ್ಟಂತಹ ಈ ಛತ್ತೀಸ ವಿಚಾರದ ಅಂತರ್ಮುಖವಿಡಿದು ಈ ಮೂವತ್ತಾರು ಪ್ರಣಮ ಸ್ವರೂಪವಾದ ಮೂವತ್ತಾರು ತತ್ವಂಗಳೆಲ್ಲವೂ ಷಡಕ್ಷರ ಮಂತ್ರಮೂರ್ತಿಗಳಾದ ಷಡ್ವಿಧ ಲಿಂಗಂಗಳಿಗೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯ ಭಾವವನ್ನು ತನ್ನ ಮನದೊಳಗೆ ಗ್ರಹಿಸಿ ಆ ವಿಚಾರದ ವೈಶಾಲ್ಯವು ತಾನೆಂತುಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ,

ಷಡಕ್ಷರ ಮಂತ್ರಮೂರ್ತಿಗಳಾದ ಷಡ್ವಿಧ ಲಿಂಗಂಗಳಿಗೆ ಆಯಾಯ ಚಕ್ರಂಗಳೇ ಪ್ರಣಮ ಪೀಠದ ಗದ್ದುಗೆಯಾಗಿ ಆಯಾಯ ವರ್ಣಂಗಳೇ ಆಯಾಯ ಲಿಂಗಂಗಳಿಗೆ ನಂದದ ಕುಂದದ ಸ್ವಯಂ ಜ್ಯೋತಿ ಪ್ರಕಾಶವಾಗಿ ಅಳವಟ್ಟುದೇ ಹನ್ನೆರಡನೆಯ ವಿಚಾರವು.

ಆಯಾಯ ದಳಂಗಳೇ ಆಯಾಯ ಲಿಂಗಂಗಳಿಗೆ ಇಂಡೆ ದಂಡೆ ಕುಸುಮಾಲಂಕಾರಗಳಾಗಿ ಆಯಾಯ ದಳಂಗಳಲ್ಲಿ ನ್ಯಾಸವಾಗಿರುವಂತಹ ಅಕ್ಷ

ರಗಳೇ ಆಯಾಯ ಲಿಂಗಂಗಳನು ನೆನೆಹುದಕ್ಕೆ ಆಯಾಯ ಮಂತ್ರಾಕ್ಷರಂಗಳಾಗಿ ಅಳವಟ್ಟುದೇ ಇಪ್ಪತ್ತುನಾಲ್ಕನೆಯ ವಿಚಾರವು.

ಆಯಾಯ ಅಧಿದೇವತೆಗಳೇ ಷಟ್‌ಸ್ಥಲ ನಾಯಕರೆಂಬ ಪೂಜಾರಿಗಳಾಗಿ ಆಯಾಯ ಅವಸ್ಥೆಗಳೇ ಆಯಾಯ ಲಿಂಗಗಳ ನೆನೆಹುದಕ್ಕೆ ಘನಲಿಂಗಾವಸ್ಥೆಯಾಗಿ ಅಳವಟ್ಟುದೇ ಮೂವತ್ತಾರನೆಯ ವಿಚಾರವು.

ಈ ರೀತಿಯಲ್ಲಿ ಮೂವತ್ತಾರು ಪ್ರಣವ ಸ್ವರೂಪವಾದ ಮೂವತ್ತಾರು ತತ್ವಂಗಳೆಲ್ಲ ಷಡಕ್ಷರ ಮಂತ್ರಮೂರ್ತಿಯಾದ ಷಡ್ವಿಧ ಲಿಂಗಂಗಳಿಗೆ ಪೂಜೋಪಕರಣಂಗಳಾಗಿ ಅಳವಟ್ಟಹವೆಂಬ ಕೃತನಿಶ್ಚಯ ಭಾವವನ್ನು ತನ್ನ ಮನದೊಳಗೆ ಗ್ರಹಿಸಿ ಕಾಣಿಸಿದ ಈ ಭೇದವನ್ನು ತನ್ನನಾಶ್ರಯಿಸಿದ ಶಿವಶರಣ ಜನಂಗಳಿಗೆ ಕರತಲಾಮಲಕವಾಗಿ ತೋರಿಸಿದ ಸದ್ಗುರುದೇವಂಗೆ ನಮೋ ನಮೋ ಎನುತಿರ್ದೆನು.

ಷಡ್ವಿಧ ಭಕ್ತಿಯಿಂದ—ಶ್ರದ್ಧೆ, ನೈಷ್ಠೆ, ಸಾವಧಾನ, ಅನುಭಾವ, ಆನಂದ, ಸಮರಸವೆಂಬ ಆರು ಭಕ್ತಿಯಿಂದ, ಷಡ್ವಿಧ ತತ್ವದಾದಿಯ— ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಆತ್ಮವೆಂಬಾರು ತತ್ವಂಗಳ ಜನನಕ್ಕೆ ಮೂಲಾಧಾರ ಸ್ಥಾನವಾದ ದಿಕ್ಕುಗಳು— ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ, ಊರ್ಧ್ವ, ಪಾತಾಳಂಗಳೆಂಬಾರು ದಿಕ್ಕಿನಲ್ಲಿ ತೋರುವ ಷಡ್ವಿಧ ಮುಖವನರಿದು— ಕರ್ಮಸಾದಾಖ್ಯ, ಕರ್ತೃಸಾದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ, ಶಿವಸಾದಾಖ್ಯ, ಮಹಾಸಾದಾಖ್ಯವೆಂಬ ಷಟ್‌ಸಾದಾಖ್ಯ ಸ್ವರೂಪವಾದ ಷಡ್‌ವದನಂಗಳೇ ಇಲ್ಲಿ ಶಿವಶರಣನ ಷಡಿಂದ್ರಿಯಂಗಳೊಳಗೆ ಷಡ್ವಿಧ ಲಿಂಗ ಸ್ವರೂಪಿನಿಂದ ವಾಸವಾಗಿರ್ಪವೆಂದೇ ತಿಳಿದು,

ಪಂಚಭೂತಗಳು— ಪೃಥ್ವೀಭೂತ, ಅಪ್ಪುಭೂತ, ತೇಜೋಭೂತ, ವಾಯುಭೂತ, ಆಕಾಶಭೂತ, ಆತ್ಮಭೂತವೆಂಬಾರು ಭೂತಂಗಳ ಗುಣವನು, ಆರು ಅಂಶಗುಣಗಳು— ಕಠಿಣ, ಮೃದು, ಉಷ್ಣ, ಚಲನ, ಶೂನ್ಯ, ಅಹಮ್ಮು ತತ್ವಗಳೆಂಬ ಆರು ಅಂಶಗುಣಂಗಳನ್ನು, ಷಡ್ವಿಧ ಶೀಲವ್ರತದಿಂ ತಿಳಿದು, ಷಡ್ವಿಧಶೀಲವೆಂದೊಡೆ— ಅಕ್ರೋಧ, ಸತ್ಯವಚನ, ಕ್ಷಮೆ, ಭವಿಭಕ್ತಭೇದ, ಅನುಗ್ರಹ, ಸತ್ಪಾತ್ರದ್ರವ್ಯಾರ್ಪಣ ಎಂಬ ಆರು

ಶೀಲಂಗಳನೇ ಅಂಗದಲ್ಲಿ ಷಡ್ವಿಧ ವ್ರತದಿಂ ತಿಳಿದು— ಗೌರವಬುದ್ಧಿ, ಲಿಂಗಲೀಯ, ಜಂಗಮಾನುಭಾವ, ಏಕಾದಶಪ್ರಸಾದಪರಿಜ್ಞಾನ, ದಶವಿಧ ಪಾದೋದಕ, ನಿರ್ಣಯಭಕ್ತಿನಿರ್ವಹವೆಂಬ ಆರು ವ್ರತಂಗಳನೇ ಅಂತರಂಗ ದಲ್ಲಳವಡಿಸಿಕೊಂಡು, ಅವಿರಳ ಜ್ಞಾನಕ್ರಿಯೆವಿಡಿದು ಆಚರಿಸುವಂತಹ ಷಟ್‌ಸ್ಥಲ ಬ್ರಹ್ಮಿಗಳಿಗೆ ಷಡ್ಭೂತಂಗಳ ಅಂಶಗುಣಂಗಳು ನಷ್ಟವಾಗಿರ್ಪ ವೆಂದರಿದು,

ಪೃಥ್ವೀಮದ, ಅಪ್ಪುಮದ, ಅಗ್ನಿಮದ, ವಾಯುಮದ, ಆಕಾಶ ಮದ ಆತ್ಮಮದವೆಂಬಾರು ಭೂತಂಗಳ ಮದಗುಣಂಗಳು ನಷ್ಟವಾಗಿ ಹೋಗಿ ಷಡ್ವಿಧಾಂಗಸ್ಥಲವನುವಾಗಿ, ಇಷ್ಟರ ಸಾಧನದಿಂದ ಷಡ್ಭೂತಂಗಳ ಮದಗುಣ ಅಂಶಗುಣಂಗಳಳಿದು, ಷಟ್‌ಸ್ಥಲ ನಾಯಕರಿಗೆ ಅಂಗವಾಗಲು ಅಂತಪ್ಪ ಪರಾತ್ಪರವಾದ ಭಕ್ತ್ಯಾದ್ಯೈಕ್ಯಾಂತವಾದಾರು ಸ್ಥಲಂಗಳಾಚರ ಣೆಯೇ ತನಗಂಗವಾಗಿ,

ಷಡ್ವಿಧಹಸ್ತ - ಸುಚಿತ್ತಾದಿ ಸದ್ಭಾವಾಂತವಾದ ಆರು ಕರಕಮಲಂ ಗಳು ಸ್ವಸ್ಥವಾಗಿ ಸಂಚಲ ನಿಸ್ಸಂಚಲತ್ವವಿಲ್ಲವೆ ತನ್ನಲ್ಲಿ ಸ್ಥಿರಕರವಾಗಿ, ಆಚಾರಾದಿ ಮಹಾಲಿಂಗಾಂತ್ಯವಾದ ಆರು ಲಿಂಗಂಗಳು ಸಾಧ್ಯವಾಗಿ, ಷಡ್ವಿಧ ಹಸ್ತಂಗಳಲ್ಲಿ ಸಂಬಂಧವಾಗಿ,

ಈ ಪ್ರಕಾರದಿಂದ ನಿರೂಪಣವ ಪಾಲಿಸಿದ ಕಾಯಾರ್ಪಣವು, ದ್ವಿತೀ ಯದಲ್ಲಿ ನಿರೂಪಣದ ಪಾಲಿಸಿದ ಕರಣಾರ್ಪಣವು, ತೃತೀಯದಲ್ಲಿ ನಿರೂಪ ಣವ ಪಾಲಿಸಿದ ಭಾವಾರ್ಪಣವೆಂಬ ತ್ರಿವಿಧಾರ್ಪಣಗಳಲ್ಲಿ

## ಕಾಯಾರ್ಪಣ.

ಷಡ್ವಿಧ ಕಾಯ ಸಂಬಂಧವಾದ ರೂಪು, ಷಡ್ವಿಧ ಪದಾರ್ಥಂಗಳನ್ನು ಅರ್ಪಣ ಷಡ್ವಿಧ ಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಡು

## ಕರಣಾರ್ಪಣ.

ಇಷ್ಟಲಿಂಗದೊಡನೆ ಕೂಡಿ ಆಚಾರಾದಿ ಮಹಾಲಿಂಗಾಂತ್ಯವಾದ ಆರು ಲಿಂಗಂಗಳೇ ಮಿಶ್ರ ವಿಭಜಿಸಿ, ಇಂದ್ರಿಯಂಗಳಲ್ಲಿ ಬರುವ ವಿಷಯ

ಪದಾರ್ಥಗಳನ್ನು ಸಮರ್ಪಿಸಿಕೊಳಲೋಸುಗ ಮೂವತ್ತಾರು ಲಿಂಗಗಳಾಗಿ ಛತ್ತೀಸ ತತ್ವದ ಕುರುಹಿನಲ್ಲಿ ಪ್ರಾಣಲಿಂಗದೊಡನೆ ಕೂಡಿದ ಮೂವತ್ತಾರು ಲಿಂಗಗಳ ಮನೋ ಸಂಬಂಧವಾದ ಮೂವತ್ತಾರು ರುಚಿ ಪದಾರ್ಥಗಳನ್ನು ಸಮರ್ಪಿಸಿಕೊಂಡು, ಮೂವತ್ತಾರು ತೆರದ ಭಕ್ತಿ ಸಂಜ್ಞೆಯೊಳಗೆ ಅರಿವು ಮನೋ ಸಂಬಂಧವಾದ ಮೂವತ್ತಾರು ತೆರದ ರುಚಿ ಪದಾರ್ಥಗಳನ್ನು ಮೂವತ್ತಾರು ತೆರದ ಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಡ ಪ್ರಾಣಲಿಂಗನೊಡನೆ ಕೂಡಿದ,

## ಭಾವಾರ್ಪಣ.

ಮೂವತ್ತಾರು ಲಿಂಗಂಗಳೇ ವಿಭಜಿಸಿ ಷಡ್ವಿಧವಾಗಿ ಒಂದೊಂದಾರಾರಾಗಿ ವಿಶಾಲ್ಯತರವನೈದಿ ಇನ್ನೂರುಹದಿನಾರು ಲಿಂಗಂಗಳಾಗಿ ಭಾವಲಿಂಗದೊಡನೆ ಕೂಡಿದ ಇನ್ನೂರುಹದಿನಾರು ಲಿಂಗಗಳೇ ಅರ್ಪಣದಲ್ಲಿ ಆತ್ಮ ಸಂಬಂಧವಾದ ಇನ್ನೂರುಹದಿನಾರು ತೃಪ್ತಿ ಪದಾರ್ಥಗಳನ್ನು ಇನ್ನೂರುಹದಿನಾರು ತೆರದ ಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಡಾಗ ಪರಿಣಾಮ ಪ್ರಸಾದದೊಳಗೆಂಬುದೀಗ,

## ಶುದ್ಧಪ್ರಸಾದ, ಸಿದ್ಧಪ್ರಸಾದ, ಪ್ರಸಿದ್ಧಪ್ರಸಾದ.

ಕಾಯಾರ್ಪಿತವಾಗುಳಿದುದೇ ಶುದ್ಧಪ್ರಸಾದ, ಕರಣಾರ್ಪಿತವಾಗುಳಿದುದೇ ಸಿದ್ಧಪ್ರಸಾದ, ಭಾವಾರ್ಪಿತವಾಗುಳಿದುದೇ ಪ್ರಸಿದ್ಧಪ್ರಸಾದ. ಶುದ್ಧವೇ ಸಿದ್ಧದಲ್ಲಿ, ಸಿದ್ಧವೇ ಪ್ರಸಿದ್ಧದಲ್ಲಿ, ಪ್ರಸಿದ್ಧವೇ ಚಿತ್ಕಳಾ ಪ್ರಸಾದದಲ್ಲಿ ಓಲಾಡುತ್ತ ಆಳುತ್ತ ಏಳುತ್ತ ಸದಾ ಕ್ರೀಡಾಪರನಾಗಿ ವಿನೋದಿಸುತ್ತಿರುವ ಪರಿಣಾಮವೇ ಚಿತ್ಕಲಾ ಪ್ರಸಾದವೇ ಷಡ್ವಿಧ ಅಂಗಸ್ವರೂಪವಾಗಿ, ಪರಿಣಾಮವೇ ಚಿತ್ಕಳಾ ಪ್ರಸಾದವೇ ಷಡ್ವಿಧ ಲಿಂಗಸ್ವರೂಪವಾಗಿ, ಪರಿಣಾಮವೇ ಚಿತ್ಕಳಾ ಪ್ರಸಾದವೇ ಸಂಗವಾಗಿ, ಷಡ್ವಿಧ ಭಕ್ತಿಸ್ವರೂಪವಾಗಿ, ಪರಿಣಾಮವೇ ಚಿತ್ಕಳಾ ಪ್ರಸಾದವೇ ಸಮರಸವಾಗಿ, ಷಡ್ವಿಧ ಅಂಗಲಿಂಗ ಭಕ್ತಿಗಳ ಕೂಟಸ್ವರೂಪವಾಗಿ ಎಂಬುದೀಗ,

ಬಾಹ್ಯಾಭ್ಯಂತರಗಳಲ್ಲಿ ಭಿನ್ನವಿಲ್ಲದೆ ಭಕ್ತಾದ್ಯೈಕ್ಯಮಾದಾರು ಸ್ಥಲಗಳ ಬೆಳಗನು ಪ್ರಕಾಶಸ್ವರೂಪವಾದ ಷಡ್ವಿಧ ಲಿಂಗದಾಚರಣೆಯನ್ನು ಬೀರುತ್ತ

ತೋರುತ್ತ, ಅಂಗವಿದು, ಲಿಂಗವಿದು, ಶಕ್ತಿ ಇದು, ಭಕ್ತಿ ಇದು, ಹಸ್ತ ವಿದು, ಮುಖವಿದು, ಪದಾರ್ಥವಿದು, ಪ್ರಸಾದವಿದು ಎಂದು ಕೈದೋರಿ ಕೆಯ ಕಾಣಿಸುತ್ತಮಿರುತ್ತ, ಷಡ್ವಿಧ ಅಂಗಲಿಂಗ ಭಕ್ತಿಗಳ ಆಚರಣೆಯ ನೊಳಗೊಂಡು ಮಿಗೆಮಿಗೆಯಾಗುತ್ತ,

ಈ ಪ್ರಕಾರ ಷಡ್ವಿಧ ಸ್ಥಲಗಳ ಭಕ್ತಾದ್ಯೈಕ್ಯಾಂತವಾದ ಆರು ಸ್ಥಲದ ನಿರ್ದೇಶವನು ವಿಸ್ತಾರ ರೂಪವಾದ ಷಡ್ವಿಧ ಲಿಂಗದಾಚರಣೆಯನು ಗುರು ಲಿಂಗ ಜಂಗಮವೆಂದು, ಸದ್ರೂಪವಾದ ಗುರು, ಚಿದ್ರೂಪವಾದ ಲಿಂಗ, ಆನಂದಸ್ವರೂಪವಾದ ಚರಲಿಂಗವೆಂದು ಹೇಳಿಸಿಕೊಂಬ ಮೂರು ಸ್ಥಲದಲ್ಲಿ ಕಾಣಿಸಿ, ಭಕ್ತ ಮಹೇಶ ಆಚಾರಲಿಂಗ ಗುರುಲಿಂಗವೆಂಬ ಈ ನಾಲ್ಕು ಗುರುವಿನಲ್ಲಿ, ಪ್ರಸಾದಿ ಪ್ರಾಣಲಿಂಗಿ ಶಿವಲಿಂಗ ಜಂಗಮಲಿಂಗವೆಂಬೀ ನಾಲ್ಕು ಲಿಂಗದಲ್ಲಿ, ಶರಣ ಐಕ್ಯ ಪ್ರಸಾದಲಿಂಗ ಮಹಾಲಿಂಗವೆಂಬೀ ನಾಲ್ಕು ಜಂಗಮದಲ್ಲಿ, ಅಡಕವಾಗಿಪ್ಪವೆಂದೇ ತೋರಿಸಿದ ಸದ್ಗುರು ದೇವಂಗೆ ನಮೋ ನಮೋ ಎನುತಿರ್ದೆನು.

ನಾದ ಬಿಂದು ಕಳೆಯಂ ತಿಳಿದು ಚಿನ್ನಾದ ಸ್ವರೂಪವಾದ ಗುರು ದೇವನು ಚಿದ್ಬಿಂದು ಸ್ವರೂಪವಾದ ಲಿಂಗದೇವನು ಚಿತ್ಕಳಾ ಸ್ವರೂಪವಾದ ಜಂಗಮದೇವರೆಂದರಿದು, ಸ್ಥೂಲ ಶರೀರಾಭಿಮಾನಿಯಾದ ಜೀವಾತ್ಮನು ಸೂಕ್ಷ್ಮ ಶರೀರಾಭಿಮಾನಿಯಾದ ಅಂತರಾತ್ಮನು ಕಾರಣ ಶರೀರಾಭಿಮಾನಿ ಯಾದ ಪರಮಾತ್ಮನೆಂದೆನಿಸಿಕೊಂಬ ಆತ್ಮತ್ರಯದಲ್ಲಿ ಸತ್ಕ್ರಿಯಾ ಸ್ವರೂಪ ವಾದ ಇಷ್ಟಲಿಂಗವು, ಸುಜ್ಞಾನ ವಿಗ್ರಹ ಸ್ವರೂಪವಾದ ಪ್ರಾಣಲಿಂಗವು ಪರಿಣಾಮ ಸ್ವರೂಪವಾದ ಭಾವಲಿಂಗವೆನಿಸಿಕೊಂಬ ಲಿಂಗತ್ರಯಂಗಳಲ್ಲಿ ಸಂಬಂಧಿಸಿ ಸ್ವಾಯತವ ಮಾಡಿಕೊಂಡು ಜೀವಾತ್ಮನಲ್ಲಿ ಇಷ್ಟಲಿಂಗ, ಅಂತ ರಾತ್ಮನಲ್ಲಿ ಪ್ರಾಣಲಿಂಗ, ಪರಮಾತ್ಮನಲ್ಲಿ ಭಾವಲಿಂಗವನು ಸಂಬಂಧಿಸಿ ಸ್ವಾಯತವ ಮಾಡಿಕೊಂಡು,

ಪೃಥ್ವಿ ಅಪ್ಪುಗಳೆಂಬೆರಡು ತತ್ವಂಗಳಿಂದ ವ್ಯಕ್ತೀಕರವಾದುದೇ ಸ್ಥೂಲ ಶರೀರವು. ಅಗ್ನಿ ವಾಯುಗಳೆಂಬೆರಡು ತತ್ವಂಗಳಿಂದ ವ್ಯಕ್ತೀಕರವಾದುದೇ ಸೂಕ್ಷ್ಮಾಂಗವು. ಆಕಾಶ ಹಮ್ಮುಗಳೆರಡು ತತ್ವಂಗಳಿಂದ ವ್ಯಕ್ತೀಕರವಾ ದುದೇ ಕಾರಣ ಶರೀರವು.

ಈ ತನುತ್ರಯದಲ್ಲಿ ತನು ಮನ ಧನಂಗಳನ್ನು ಗುರು ಲಿಂಗ ಜಂಗಮಕ್ಕೆ ನಿರ್ವಂಚನೆಯಿಂದ ಸಮರ್ಪಣೆ ಮಾಡುವಂಥಾದ್ದೇ ತ್ಯಾಗಾಂಗವು. ಆ ಗುರು ಲಿಂಗ ಜಂಗಮದ ಮುಖದಿಂದ ಉಳುಮೆಯಾಗಿ ಬಂದ ಶುದ್ಧ, ಸಿದ್ಧ ಪ್ರಸಿದ್ಧ ಪ್ರಸಾದ ತ್ರಯಂಗಳ ಪಡೆದನುಭವಿಸಿ ಹೋಗುವಂಥಾದ್ದೇ ಭೋಗಾಂಗವು. ತನುವೇ ಗುರುವಿನಲ್ಲಿ ಮನವೇ ಲಿಂಗದಲ್ಲಿ ಧನವೇ ಜಂಗಮದಲ್ಲಿ ಏಕರಸವ ಮಾಡಿಕೊಂಡಿರುವಂಥಾದ್ದೇ ಯೋಗಾಂಗವು. ಈ ಮೂರು ಅಂಗಸ್ಥಲವು ಸ್ವಾಯತವಾಗಿ ಸ್ಥೂಲತನುವಿನಲ್ಲಿ ತ್ಯಾಗಾಂಗವು, ಸೂಕ್ಷ್ಮತನುವಿನಲ್ಲಿ ಭೋಗಾಂಗವು, ಕಾರಣತನುವಿನಲ್ಲಿ ಯೋಗಾಂಗವು,

ತ್ರಿವಿಧ ಲಿಂಗಸ್ಥಲಂಗಳು ಸಂಬಂಧವಾಗಿ ನಿಂದ ಷಡ್ವಿಧ ಲಿಂಗವೇ ತ್ರಿವಿಧಾಂಗದಲ್ಲಿ, ಷಡ್ವಿಧ ಲಿಂಗವೇ ತ್ರಿವಿಧ ಲಿಂಗದಲ್ಲಿ, ನೆಲೆಗೊಂಬ ನಿರ್ದೇಶದ ವಿಸ್ತಾರವಾದಾಚರಣೆಯ ವಿವರವೆಂತೆಂದೊಡೆ,

ಆಚಾರ ಲಿಂಗದಲ್ಲಿ ಶ್ರದ್ಧಾಭಕ್ತಿಯನುಳ್ಳ ಭಕ್ತನು ಗುರುಲಿಂಗದಲ್ಲಿ ನೈಷ್ಠಿಕಾ ಭಕ್ತಿಯನುಳ್ಳ ಮಾಹೇಶ್ವರನು ಎಂದೆನಿಸಿಕೊಂಬ ಉಭಯ ಸ್ಥಲವು ತನುಮನಧನವೆಂಬ ತ್ರಿವಿಧ ಪದಾರ್ಥವನ್ನು ಗುರುಲಿಂಗಜಂಗಮಕ್ಕೆ ಮಾಜುವ ಬುದ್ಧಿ ಇಲ್ಲದೆ ಸಮರ್ಪಣೆಯ ಮಾಡಿ ತನುವೇ ಗುರುವು, ಮನವೇ ಲಿಂಗ, ಧನವೇ ಜಂಗಮವಾಗಿ ಬೆಳಗುತಿಹುದಾದ ಕಾರಣ ತ್ಯಾಗಾಂಗ ಸ್ಥಲದ ಬೆಳಗಿನೊಳಗಡಗಿತ್ತು. ಈ ತ್ಯಾಗಾಂಗ ಸ್ಥಲದ ಬೆಳಗೇ ಸತ್ಕ್ರಿಯಾ ಪ್ರಕಾಶದೊಳಗೆ ಅಡಗಿತ್ತು.

ಶಿವಲಿಂಗದಲ್ಲಿ ಸಾವಧಾನ ಭಕ್ತಿಯನುಳ್ಳ ಪ್ರಸಾದಿಯು ಜಂಗಮ ಲಿಂಗದಲ್ಲನುಭಾವ ಭಕ್ತಿಯನುಳ್ಳ ಪ್ರಾಣಲಿಂಗಿ ಎನಿಸಿಕೊಂಬ ಉಭಯ ಸ್ಥಲವು ಲಿಂಗಾಂಗವಾಗಿ ಅಂಗವೇ ಲಿಂಗ, ಲಿಂಗವೇ ಅಂಗವಾಗಿ, ಸಮಸ್ತವಾದ ಕಳೆಯೊಳಗೆ ತ್ರಿವಿಧ, ಷಡ್ವಿಧ, ಮೂವತ್ತಾರು, ಇನ್ನೂರುಹದಿನಾರು ಲಿಂಗ ಚಿಲ್ಲಿಂಗವೇ ವೇಧಿಸಿಕೊಂಡು ಪ್ರಕಾಶಿಸುತ್ತಿಹುದಾಗಿ ಸಕಲ ಕರಣಂಗಳೂ ಲಿಂಗದ ಕಿರಣಂಗಳಾಗಿ ಬೆಳಗುತ್ತಿಹುದಾದ ಕಾರಣ ಭೋಗಾಂಗ ಸ್ಥಲದ ಬೆಳಗಿನೊಳಗಡಗಿತ್ತು. ಭೋಗಾಂಗ ಸ್ಥಲದ ಬೆಳಗೇ ಸುಜ್ಞಾನ ಪ್ರಕಾಶದೊಳಗೆ ಅಡಗಿತ್ತು.

ಪ್ರಸಾದ ಲಿಂಗದಲ್ಲಿ ಆನಂದ ಭಕ್ತಿಯನುಳ್ಳ ಶರಣನು ಮಹಾಲಿಂಗ ದಲ್ಲಿ ಸಮರಸಭಕ್ತಿಯನುಳ್ಳ ಐಕ್ಯನೆನಿಸಿಕೊಂಬ ಉಭಯ ಸ್ಥಲವು ಭಿನ್ನ ರುಚಿಯನರಿಯದೆ ಖಂಡಿತ ಜ್ಞಾನವನ್ನು ತಿಳಿಯದೆ ಅಭಿನ್ನ ಜ್ಞಾನದಿಂದ ಬೆಳಗುತ್ತಿಹುದಾದ ಕಾರಣ ಯೋಗಾಂಗ ಸ್ಥಲದ ಬೆಳಗಿನೊಳಗಡಗಿತ್ತು. ಯೋಗಾಂಗ ಸ್ಥಲವ ಬೆಳಗೇ ಮಹಾಜ್ಞಾನ ಪ್ರಕಾಶವೊಳಡಗಿತ್ತು. ಆ ಎರಡಂಗ ಸ್ಥಲವು ಲೀನವಾಗಿ ಹೋಯಿತ್ತು. ಈ ಪ್ರಕಾರದಿಂದ ಹೇಳ ಲ್ಪಟ್ಟಂತಹ ಇದು ತಾನೇ ತ್ರಿಯಂಗ ಸ್ಥಲದ ವಿವರವು. ಷಡ್ವಿಧ ಲಿಂಗವೇ ತ್ರಿವಿಧಾಂಗ ಸ್ಥಲದಲ್ಲಡಗಿದಂತಹ ವಿಚಾರವು.

ತದನಂತರದಲ್ಲಿ ತ್ರಿಲಿಂಗ ಸ್ಥಲದ ಭೇದವೆಂತೆಂದೊಡೆ, ಷಡ್ವಿಧ ಲಿಂಗವು ತ್ರಿವಿಧ ಲಿಂಗದಲ್ಲಿ ಅಡಗುವಂತಹ ವಿಚಾರವೆಂತೆಂದೊಡೆ,

ಭಕ್ತಂಗೆ ಹರಣ ಕಿರಣ ಚೈತನ್ಯ ಪ್ರಕಾಶವನುಳ್ಳ ಆಚಾರ ಲಿಂಗವು, ಮಹೇಶ್ವರಂಗೆ ಹರಣ ಕಿರಣ ಚೈತನ್ಯ ಪ್ರಕಾಶವನುಳ್ಳ ಗುರುಲಿಂಗವು, ಎಂಬೆರಡು ಲಿಂಗಸ್ಥಲವು ಸಾಕಾರವಾಗಿ ಪೀಠಕಟಿಗಳಿಂದ ವ್ಯಕ್ತೀಕರಿಸಿ ಇಷ್ಟಲಿಂಗವೆನಿಸಿಕೊಂಡು ಅನಿಷ್ಟ ಪಂಚಕ ಜನ್ಮ ಜರೆ ಮರಣ ಶೋಕ ಮೋಹವೆಂಬವನ್ನು ಪರಿಹರಿಸಿ ನಷ್ಟವ ಮಾಡಿತೋರಿತು.

ಪ್ರಸಾದಿಗೆ ಹರಣ ಕಿರಣ ಚೈತನ್ಯ ಪ್ರಕಾಶವನುಳ್ಳ ಶಿವಲಿಂಗವು, ಪ್ರಾಣಲಿಂಗಿಗೆ ಚಿತ್‌ಪ್ರಾಣವಾದ ಜಂಗಮ ಲಿಂಗವು ಎಂಬೆರಡು ಲಿಂಗ ಸ್ಥಲವು ಸಕಲ ನಿಃಕಲವಾಗಿ ಸಾಕಾರ ನಿರಾಕಾರವಾಗಿ ಪ್ರಾಣಲಿಂಗವೆನಿಸಿ ಕೊಂಡು ಒಳಹೊರಗೆ ಮತ್ಸ್ಯ ನುಂಗಿದ ಮಾಣಿಕ್ಯದಂತೆ ಸ್ಫಟಿಕದ ಘಟ ದೊಳಗಿತ್ತಿದ ಜ್ಯೋತಿಯಂತೆ ಬಾಹ್ಯಾಭ್ಯಂತರದಲ್ಲಿ ಪ್ರಕಾಶಿಸಿ ತೋರಿತು. ಪ್ರಾಣಲಿಂಗತ್ವ, ಲಿಂಗಪ್ರಾಣತ್ವ, ಪ್ರಸಾದ ಮುಕ್ತತ್ವವನೆ ಕಾಣಿಸಿತು. ವೃತ್ತ ಗೋಮುಖಗಳಿಂದ ವ್ಯಕ್ತೀಕರಿಸಿ ಪ್ರಾಣಲಿಂಗವೆನಿಸಿಕೊಂಡು ತೋ ರಿತು.

ಶರಣಂಗೆ ಚಿತ್‌ಪ್ರಾಣವಾದ ಪ್ರಸಾದಲಿಂಗವು ಐಕ್ಯಂಗೆ ಚಿತ್‌ಪ್ರಾ ಣವಾದ ಮಹಾಲಿಂಗವೆಂಬೆರಡು ಲಿಂಗಸ್ಥಲವು ಕೇವಲ ನಿರವಯವಾಕಾರ ವಾಗಿ ನಾಳಗೋಳಕ ಸ್ವರೂಪವಾಗಿ ಭಾವಲಿಂಗವೆನಿಸಿಕೊಂಡು ಸರ್ವಾಚಾರ ಸಂಪತ್ತಿನಾಚರಣೆಯನ್ನು ನಿರ್ವಹವ ಮಾಡಿಕೊಂಡು ನಿಃಪತಿಯ ಮಾಡಿ ತೋರಿತು.

ಈ ಪ್ರಕಾರ ಹೇಳಲ್ಪಟ್ಟ ತ್ರಿವಿಧ ಸ್ಥಳಂಗಳಾದ ಇಷ್ಟ ಪ್ರಾಣ ಭಾವ ಲಿಂಗಗಳನ್ನು ತ್ಯಾಗ ಭೋಗ ಯೋಗಾಂಗದ ಸಂಬಂಧವಾದ ನಿರ್ಣಯವ ಕ್ರಿಯಾಭಕ್ತಿ, ಜ್ಞಾನಭಕ್ತಿ, ಮಹಾಜ್ಞಾನಭಕ್ತಿ ಇವುಗಳ ನಿರಿಗೆಯೊಡನೆ ಕೂಡಿದಾತನಾಗಿ ತನುಹಸ್ತ, ಮನೋಹಸ್ತ, ಭಾವಹಸ್ತಂಗಳಿಂದ ಹಿಡಿದು ನೋಡುತ್ತ, ಸಗುಣ ನಿರ್ಗುಣ ಮನೋಲಯ ನಿರಂಜನ ಪೂಜಾ ಕ್ರಿಯಂಗಳ ಮಾಡಿ ಕ್ರಿಯಾದೃಷ್ಟಿ, ಜ್ಞಾನದೃಷ್ಟಿ ಮಹಾಜ್ಞಾನದೃಷ್ಟಿಯಿಂದ ನಿರೀಕ್ಷಿಸುತ್ತ ಈ ಮೂರು ಸ್ಥಲ ತ್ಯಾಗ ಭೋಗ ಯೋಗಾಂಗವೆಂಬ ತ್ರಿವಿಧ ಸ್ಥಲದ ಬೆಳಗನು ಪ್ರಕಾಶರೂಪವಾದ ತ್ರಿವಿಧ ಲಿಂಗದಾಚರಣೆಯನು ಭಕ್ತ ಜಂಗಮವೆಂಬ ದೇವಭಕ್ತರೆಂದು ಹೇಳುವ ಎರಡು ಸ್ಥಲಂಗಳೊಳಗೆ ಕಾಣಿಸಿ,

ಈ ತ್ರಿವಿಧಾಂಗಸ್ವರೂಪವಾದಾತನೇ ಒಬ್ಬ ಭಕ್ತನು, ತ್ರಿವಿಧ ಲಿಂಗ ಸ್ವರೂಪವಾದಾತನೊಬ್ಬನೇ ದೇವನೆಂಮ ತೋರಿಸಿ— ಶಿವಭಕ್ತಿಯಲ್ಲಿ ತಿಳಿದು ಶಿವಸ್ವರೂಪವಾದಾತನೇ ದೇವನು, ಭಕ್ತಿಸ್ವರೂಪವಾದಾತನೇ ಭಕ್ತನು, ಎಂದು ಅರಿದು ಕಾಯಾರ್ಪಣವಲ್ಲಿ ದೇಹ ಪ್ರಾಣಂಗಳೊಳಗೆ ಸಂಬಂಧಿಸಿ ಸ್ವಾಯತವ ಮಾಡಿಕೊಂಬಲ್ಲಿ,

ಆಚಾರಲಿಂಗದಲ್ಲಿ ಶ್ರದ್ಧಾಭಕ್ತಿಯನುಳ್ಳ ಭಕ್ತನು, ಗುರುಲಿಂಗದಲ್ಲಿ ನೈಷ್ಠಿಕಾ ಭಕ್ತಿಯನುಳ್ಳ ಮಾಹೇಶ್ವರನು, ಶಿವಲಿಂಗದಲ್ಲಿ ಸಾವಧಾನ ಭಕ್ತಿಯನುಳ್ಳ ಪ್ರಸಾದಿಯು, ಈ ಮೂರಂಗ ಸ್ಥಲವು ಭಕ್ತನಲ್ಲಿಯೇ ಸುಳಿದು ಭಕ್ತಿಸ್ಥಲದ ಆಚರಣೆ ಎಂಬುದು ತಾನು ಹೇಗೆ ಗುರುಭಕ್ತಿ, ಲಿಂಗಪೂಜೆ, ಜಂಗಮ ದಾಸೋಹ, ಪಾದೋದಕ ಪ್ರಸಾದ ಸೇವನೆ, ಮುಂತಾದ ಸತ್ಕ್ರಿಯಾಚಾರವಿಡಿದು ಆಚರಿಸಿ,

ಜಂಗಮದಲ್ಲಿ ಅನುಭಾವ ಭಕ್ತಿಯನುಳ್ಳ ಪ್ರಾಣಲಿಂಗಿಯು, ಪ್ರಸಾದ ಲಿಂಗದಲ್ಲಿ ಆನಂದಭಕ್ತಿಯನುಳ್ಳ ಶರಣನು, ಮಹಾಲಿಂಗದಲ್ಲಿ ಸಮರಸ ಭಕ್ತಿಯನುಳ್ಳ ಐಕ್ಯನು, ಎನಿಸಿಕೊಂಬ ಮೂರಂಗಸ್ಥಲವು ಜಂಗಮ ಲಿಂಗದಲ್ಲಿಯೇ ಸುಳಿದು,

ಜಂಗಮಸ್ಥಲದ ಆಚರಣೆ ಹೇಗೆಂದೊಡೆ, ಮಲತ್ರಯವಿದೂರನಾಗಿ ಭಕ್ತಿ ಜ್ಞಾನ ವೈರಾಗ್ಯ ಸಂಪನ್ನನಾಗಿ ದೇಶ ಗ್ರಾಮ ನಿಲಯ ಬಂಧನಂಗಳಿ

ಲ್ಲದೆ ಎಲ್ಲ ದೇಶ, ಎಲ್ಲ ಗ್ರಾಮ, ಎಲ್ಲ ಭಕ್ತರನ್ನು ಒಂದೇ ಸಮಾನಂಗಂಡು ತನ್ನ ತಟ್ಟಿದವರ, ಮುಟ್ಟಿದವರ, ಕಂಡವರ, ಕೇಳಿದವರ, ಅರಿದು ನೆನೆನೆನೆದು ಭಕ್ತಿಯ ಮಾಡಿದವರನ್ನೆಲ್ಲ ಕೃತಾರ್ಥರಂ ಮಾಡುತ್ತ, ಜಗತ್ ಪಾವನಮೂರ್ತಿಯಾಗಿ ಆಚರಿಸುತ್ತಿಹನು.

ಸಾಕಾರವಾದ ಮೂರು ಸ್ಥಲ—ಭಕ್ತ, ಮಹೇಶ, ಪ್ರಸಾದಿ ಎಂಬ ತ್ರಯಂಗ ಸ್ಥಲವು ಕ್ರಿಯಾಚರಣೆಯಲ್ಲಿಯೇ ಸವೆದು ಮಾರ್ಗಕ್ರಿಯಾಚರಣೆಯಿಂದಲೇ ತಮ್ಮಿಷ್ಟಲಿಂಗದೊಳಗೆ ನಿಃಪತಿಯಾಗಿ, ನಿರಾಕಾರ ನಿರವಯವಾದ ಮೂರು ಸ್ಥಲವು ಪ್ರಾಣಲಿಂಗಿ, ಶರಣ, ಐಕ್ಯರೆಂಬ ತ್ರಿಯಂಗ ಸ್ಥಲವು ಜ್ಞಾನಾಚರಣೆಯಲ್ಲಿ ಸವೆದು ಮೀರಿದ ಕ್ರಿಯಾಚರಣೆಯಿಂದಲೇ ತಾವು ಲಿಂಗದೊಳಗೆ ನಿಃಪತಿಯಾಗಿ ಮಾರ್ಗಕ್ರಿಯೆ ಮೀರಿದ ಕ್ರಿಯೆ ಎಂದೆನಿಸಿ,

ಮಾರ್ಗಕ್ರಿಯೆ ಎಂದರೆ ಭಕ್ತ, ಮಾಹೇಶ್ವರ, ಪ್ರಸಾದಿ, ಎಂಬ ತ್ರಿಯಾಂಗ ಸ್ಥಲವೇ ಮಾರ್ಗಕ್ರಿಯಾ ಸ್ವರೂಪು, ಮೀರಿದ ಕ್ರಿಯೆ ಎಂದರೆ ಪ್ರಾಣಲಿಂಗಿ, ಶರಣ, ಐಕ್ಯರೆಂಬ ತ್ರಯಾಂಗ ಸ್ಥಲವೇ ಮೀರಿದ ಕ್ರಿಯಾ ಸ್ವರೂಪವೆಂದು ಹೇಳಿಸಿಕೊಂಡು ಕುರುಹಿನ ಸ್ಥಲವ ಮಾರ್ಗ ಕ್ರಿಯಾಸ್ವರೂಪವಾದ ತ್ರಿವಿಧ ಸ್ಥಲವನು ರೂಪು ಮಾಡಿ, ಅರುಹಿನ ಸ್ಥಲವ ಮೀರಿದ ಕ್ರಿಯಾ ಸ್ವರೂಪವಾದ ತ್ರಿವಿಧ ಸ್ಥಲವನ್ನು ನಿರೂಪು ಮಾಡಿಕೊಂಡು, ಒಂದು ಲಿಂಗ ಸ್ವರೂಪ ಮಾಡಿ ರೂಪು ರುಚಿಯಂತೆ ಬೆಲ್ಲಕ್ಕೂ ಬೆಲ್ಲದೊಳಗಣ ಮಧುರಕ್ಕೂ ಭಿನ್ನವಿಲ್ಲದ ಹಾಗೆ ಉಭಯ ಸ್ಥಲದಲ್ಲಿ ಅಂಗ ಲಿಂಗವೆಂಬೆರಡು ಸ್ಥಲದೊಳಗೆ ನಿಂದು, ಭಕ್ತಿ ಮುಕ್ತಿ ನಿತ್ಯತ್ವಕ್ಕೆ ಇವೇ ಕಾರಣವೆಂದು ಸ್ಥಿರಕರವ ಮಾಡಿತ್ತು.

ತಮ್ಮ ಚಿದಂಶಿಕರಾದ ಸದ್ಭಕ್ತ ಶರಣಜನಂಗಳಿಗೆ ಕೈದೋರಿಕೆಯಾಗಿ ಕಾಣಿಸುತ್ತ ಉಭಯ ಸ್ಥಲವರಿದು ಅಂಗಲಿಂಗವೆಂಬೆರಡು ಸ್ಥಲದೊಳಗೆ ಅಳಿದೊಂದೊಂದು ಅಂಗ ಸ್ಥಲವು ಒಂದೊಂದು ಲಿಂಗಸ್ಥಲದಲ್ಲಿ ನಿಃಪತಿಯಾಗುಳಿದು ಲಿಂಗಸ್ಥಲವು ತಾನೊಂದೇ ಅವಶೇಷಿತವಾಗಿ, ಏಕಮೇವಾದ್ವಿತೀಯ ಸ್ವರೂಪವಾದ ಪರಬ್ರಹ್ಮವೆಂಬಲ್ಲಿ ಸಕಲ ತತ್ವಂಗಳಿಗೆ ಉಪರಿಯಾಗಿ ತೋರುವ ಪರವಸ್ತು ತಾನೊಂದು ಒಪ್ಪುತಿಹುದು ಎಂದು ಹೇಳುವದರೊಳಗಾಗಿ,

ತನ್ನ ಪಶ್ಚಿಮ ಪದದ ತನ್ನಂತರಂಗ ಸಂಬಂಧವಾದ ಸ್ವಕೀಯ-ವಾದ ಮೂಲ ಜ್ಞಾನದ ಪ್ರಭೆಯಲ್ಲಿ ಒಂದು ಅದ್ವಿತೀಯ ಸ್ವರೂಪವಾದ ಪರಬ್ರಹ್ಮವು ತಾನೊಂದು ಎರಡಾದುದಂ ಕಂಡು ತನ್ನ ಚಿತ್ ಶಕ್ತಿಯ ನೆನಹು ಮಾತ್ರದಿಂದ ವಿಭಜಿಸಿ ಅಂಗಲಿಂಗವೆಂಬ ಉಭಯ ಸ್ವರೂಪವನು ತಾಳಿದಂತಹ ಭೇದವನ್ನು ಕಂಡು ಶರಣನು ತನ್ನ ಮೂಲ ಜ್ಞಾನ ದೃಷ್ಟಿಯಿಂದಲೇ ತಿಳಿದು ಆ ಉಭಯಾಂಗ ಲಿಂಗದಾಚರಣೆಯು ತ್ರಿವಿಧಾಂಗ ಲಿಂಗ ಸ್ವರೂಪವನು ತಾಳಿದಂತಹ ಭೇದವನು ಕಂಡು ಆ ಮೂರು ತ್ರಿವಿಧಾಂಗಲಿಂಗದಾಚರಣೆಯೇ ಷಡಂಗ ಲಿಂಗ ಸ್ವರೂಪವನು ತಾಳಿದಂತಹ ಭೇದವನು ಕಂಡು ಆ ಷಡಂಗದ ಲಿಂಗದಾಚರಣೆಯು ಛತ್ತೀಸ ಅಂಗ ಲಿಂಗ ಸ್ವರೂಪವ ತಾಳಿದಂತಹ ಭೇದವನು ಕಂಡು ಆ ಮೂವತ್ತಾರು ಅಂಗ ಲಿಂಗದಾಚರಣೆಯು ಇನ್ನೂರು ಹದಿನಾರು ಅಂಗ ಲಿಂಗವನು ತಾಳಿದಂತಹ, ಭೇದವನು ಕಂಡು ಆ ಇನ್ನೂರು ಹದಿನಾರು ಅಂಗಲಿಂಗದಾಚರಣೆಯು ಮಿಶ್ರ ವಿಭಜನೆ ಎಂಬುದು ತಾನು ಪಿಂಡ ಬ್ರಹ್ಮಾಂಡವೆಂಬೆರಡರೊಳಗೆ ಪರಿಪೂರ್ಣವಾಗಿ ಪರಿಪೂರ್ಣಾಂಗ ಪರಿಪೂರ್ಣಲಿಂಗ ಸ್ವರೂಪವಾಗಿ ಪ್ರಕಾಶಿಸಿ ಕಾಣಿಸಿತೆಂಬ ಭೇದವನು ಶರಣನು ತಾನು ಮೂಲಜ್ಞಾನ ದೃಷ್ಟಿಯಿಂದಲೇ ತಿಳಿದು ಕಡೆಸೂಸಿ,

ಆ ಪರಿಪೂರ್ಣಾಂಗ ಆ ಪರಿಪೂರ್ಣ ಲಿಂಗದಾಚರಣೆಯು ಪಿಂಡ ಬ್ರಹ್ಮಾಂಡವೆಂಬೆರಡನೊಳಗೊಂಡು ಹೊರಸೂಸಿ ಹರಿವರಳ್ದು ಹೀಗೆಂದು ತಿಳಿವಂತಹ ಮೂಲ ಜ್ಞಾನಚಕ್ಷುವು ನಿಜವಿಕಸನವಾಗಿ ಬೆಳಗು ನಿಬ್ಬೆರಗಾಗಿ ಶರಣನ ಪರವಶವೇ ಲಿಂಗದ ಪರವಶವು ಲಿಂಗದ ಪರವಶವೇ ಶರಣನ ಪರವಶವಾಗಿ

ಈ ಪ್ರಕಾರದಿಂದ ಪಿಂಡ ಬ್ರಹ್ಮಾಂಡದೊಳಗೆ ಪ್ರಕಾಶಿಸಿ ಕಾಣಿಸುವ ಪರಿಪೂರ್ಣ ಪ್ರಭೆಯನು ಪರಿಪೂರ್ಣಾಂಗ ಪರಿಪೂರ್ಣಲಿಂಗದಾಚರಣೆಯು ಆ ಇನ್ನೂರು ಹದಿನಾರು ಅಂಗಲಿಂಗದೊಳಗಡಗಿತೆಂದು ತಿಳಿದು ಆ ಇನ್ನೂರು ಹದಿನಾರು ಅಂಗದ ಪ್ರಭೆಯನು ಪ್ರಕಾಶ ರೂಪವಾದ ಇನ್ನೂರು ಹದಿನಾರು ಲಿಂಗದಾಚರಣೆಯನು ಛತ್ತೀಸ ಅಂಗಲಿಂಗದೊಳಗಡಗಿತೆಂದು ತಿಳಿದು, ಆ ಛತ್ತೀಸಾಂಗಗಳ ಬೆಳಗನು ಪ್ರಕಾಶರೂಪವಾದ ಛತ್ತೀಸ ಲಿಂಗ

ದಾಚರಣೆಯನು ಷಡಂಗಲಿಂಗದೊಳಗಡಗಿತೆಂದು ತಿಳಿದು ಷಡಂಗಗಳ ಸ್ವಯ ವನು ಅರ್ಥರೂಪವಾದ ಷಡ್ವಿಧಲಿಂಗದಾಚರಣೆಯನು ತ್ರಿವಿಧಾಂಗಲಿಂಗ ದೊಳಡಗಿತೆಂದು ತಿಳಿದು ಆ ತ್ರಿವಿಧಾಂಗ ಲಿಂಗಗಳ ಮೂಲವನು ಮುಖ್ಯ ಸ್ವರೂಪವಾದ ತ್ರಿವಿಧಾಂಗ ಲಿಂಗದಾಚರಣೆಯನು ಅಂಗಲಿಂಗವೆಂಬೆರಡು ಸ್ಥಲದೊಳಗೆ ಅಡಗಿತೆಂದು ತಿಳಿದು ಆ ಅಂಗಲಿಂಗವೆಂಬೆರಡು ಸ್ಥಲದೊಳ ಗಣ ಉಪಮೆಯನು ವಾಚ್ಯರೂಪವಾದ ಅಂಗವನು ಉಪಮಾತೀತದಲ್ಲಿ ಅರಿದು ವಾಚ್ಯಾತೀತವಾದ ಲಿಂಗದೊಳಗಡಗಿತೆಂದು ತಿಳಿದು ಆ ಉಪಮೆ ಅನುಪಮೆ ಎಂಬ ವಾಚ್ಯ ಅನಿರ್ವಾಚ್ಯವೆಂದು ಹೇಳುವ ಆ ಜ್ಞಾನವು ಅರಿತು ನಿಃಪತಿಯಾಗಿ ಮರಹು ನಷ್ಟವಾಗಿ ಅಂತರಂಗದ ಜ್ಞಾನವು ನಿಃಪತಿ ಯಾದ ಕೂಡಲೆ ಬಹಿರಂಗದ ಕ್ರಿಯೆಯು ನಿಃಪತಿಯಾಯಿತ್ತು.

ಗುರುವಾಕ್ಯಕ್ಕೆ ಸದೃಶ್ಯವಾದ ಹರವಾಕ್ಯವನು ನಿರೂಪಿಸುತ್ತಿಹರು. ಅದು ಹೇಗೆಂದೊಡೆ "ವಾಚ್ಯಾತೀತಮನಾತೀತ ಭಾವಾತೀತ ಅಗೋ ಚರಂ ಸರ್ವಂ ಶೂನ್ಯಂ ನಿರಾಕಾರಂ ನಿತ್ಯತ್ವಂ ಪರಮಂ ಪರಂ ||" ವಾಕ್ಯದ ಸ್ತುತಿಯನ್ನು ಮೀರಿದಂತ, ಮನದ ನೆನಹವನು ಮೀರಿದಂತ, ಭಾವಿಸುವ ಬಗೆಯನು ಮೀರಿದಂತ, ಚಕ್ಷುರಾದೀಂದ್ರಿಯಂಗಳಿಗೆ ವಿಷಯ ವಲ್ಲದಂತ, ಸಮಸ್ತ ತೋರಿಕೆಯು ಇಲ್ಲದೆ ಸಾಕಾರ ರಹಿತವಾದಂತ, ಶಾಶ್ವತವಾದಂತೆ, ಉತ್ಕೃಷ್ಟವಾದಂತ, ಪರಬ್ರಹ್ಮವು ಹೀಗೆಂದು ಶ್ರುತಿ ವಾಕ್ಯ ಹೇಳುತಿಹುದಾದ ಕಾರಣ ಆದಿ ಪಾದಾವರಣವು ಇಲ್ಲದಂತ, ಮಧ್ಯ ಶರೀರಾವರಣವು ಇಲ್ಲದಂತ, ಮಸ್ತಕಾವರಣವು ಇಲ್ಲದಂತ, ಸಂಸಾರಾದಿ ರೋಗರಹಿತವಾದಂತ, ಸಮಸ್ತ ತೋರುವ ತೋರಿಕೆಯನು ಇಲ್ಲದ ನಿರವಯುವ ಲೀಲೆಯನೆ ವಹಿಸಿಕೊಂಡಿರುವಂತ, ಅನಿರ್ವಾಚ್ಯ ಮಹಾಶೂನ್ಯ ಸ್ಥಲವನೊಳಕೊಂಡು ಒಪ್ಪುತ್ತಿಹುದು ಪರಬ್ರಹ್ಮವೆಂದು ಹೇಳಲ್ಪಟ್ಟಿತು.

ಅಂತಪ್ಪ ಪರಬ್ರಹ್ಮವೇ ನಾನೆಂದು ಹೇಳುವ ನುಡಿಗೆ ವಾಗದ್ವೈತ ಪ್ರಸಂಗಕ್ಕೆ ತೆರಪುಗುಡದೆ ನಿರವಯ ಸ್ಥಲದಲ್ಲಿ ತಾನೆಂಬ ಭಾವವನ್ನು ಏಕರಸವ ಮಾಡಿಕೊಂಡಿಪ್ಪಾತನು ತಾನೆ ಆರೂ ಭೇದಿಸಬಾರದ ಪ್ರಾಣ ಲಿಂಗವನು ಅಭಿನ್ನ ಜ್ಞಾನದಿಂದಲೇ ಭೇದಿಸಿ ಕಂಡಾತನು ಅಸಾಧ್ಯ.

ಆದು ಸಾಧಿಸಬಾರದ ಇಷ್ಟಲಿಂಗವನು ಸಾಧಕನು ತನ್ನದೊಂದು ಅಭಿನ್ನ ಕ್ರಿಯೆಯಿಂದಲೆ ಸಾಧ್ಯವ ಮಾಡಿಕೊಂಡಾತನು ಚಿನ್ಮಯ ದಿಗ್ದೆಸೆಗಳನೊಳಕೊಂಡು ಪರಿಪೂರ್ಣವಾಗಿ ಬೆಳಗಲ್ಪಟ್ಟಾತನು ದಿವ್ಯ ಶಿವಯೋಗಿಯ ಶಿವಜ್ಞಾನ, ಶಿವಧ್ಯಾನ, ಶಿವಪೂಜೆ, ಶಿವವ್ರತ, ಶಿವಲಿಂಗ ಧಾರಣವೆಂಬ ಶಿವಯೋಗಪಂಚಕವನುಳ್ಳ ಪರಶಿವ ರಾಜಯೋಗೀಶ್ವರನಾದ ಮಹಾ ದೊಡ್ಡಿತಾದ ಶಿವನ ಎಂಬತ್ತುಮೂರು ಮೂರ್ತಿಗಳನೊಳಕೊಂಡು ತೋರುವ ಅನಾದಿ ಶರಣನಾದ ಸ್ವತಂತ್ರ ಕರ್ತೃವಾದಂಥ ಅಲ್ಲಮಪ್ರಭು ಸ್ವಾಮಿಗಳೆಂಬ ನಿರಂಜನ ಗಣಾಧೀಶನ ಬಸವೇಶ್ವರ ಸ್ವಾಮಿಗಳೆಂಬ ಮಹಾ ಜ್ಞಾನಸ್ವರೂಪವಾದ ಗುರುಮೂರ್ತಿಯ ಕರುಣದಿಂದೊದಗಿದ ಭಕ್ತಿ ಪ್ರಸಾದವನೆ ಬಹಿರಂಗದಲ್ಲಿ ಪ್ರಭು ಸ್ವಾಮಿಗಳ ಕರುಣದಿಂದ ಒದಗಿದ ವೈರಾಗ್ಯ ಪ್ರಸಾದವನೆ ಕರಣಂಗಳಲ್ಲಿ ಅಳವಡಿಸಿಕೊಂಡು ಭಕ್ತಿ ಜ್ಞಾನ ವೈರಾಗ್ಯ ವಿಡಿದಾಚರಿಸಿ ಆನು ಚನ್ನಬಸವೇಶ್ವರ ಸ್ವಾಮಿಯು ಜನನ ಮರಣಂಗಳೆಂಬ ಅನಿತ್ಯತ್ವವಳಿದು ನಿತ್ಯ ಸ್ವರೂಪನಾಗಿ ಬೆಳೆದೆನು.

ಅಯ್ಯಾ, ಭಕ್ತರ ದೇಹದೊಳಗೆ ಕೂಡಿದ ಕೂಟದಲ್ಲಿ ಸದಾಸನ್ನಿಹಿತನಾಗಿ ಒಪ್ಪುವ ಚನ್ನಕಾಯಕಾಂತಿ ಲಾವಣ್ಯವನುಳ್ಳಂಥ ಸಂಗಮ ಭಕ್ತರಂಗಮನ ಪ್ರಾಣಂಗಳಲ್ಲಿ ಹೆರೆ ಹಿಂಗದಿದ್ದಂತಹ ಸ್ವಯಂ ಪ್ರಕಾಶ ಸ್ವರೂಪನಾದಂತಹ ಚನ್ನಬಸವೇಶ್ವರ ಸ್ವಾಮಿಗಳೆಂಬ ಗುರುಮೂರ್ತಿಯು ನಿರೂಪಿಸಿದ ಮಿಶ್ರಾರ್ಪಣದ ಸಕೀಲವನು ಹೇಳುವಂತಹ ಉತ್ತರ ಪ್ರಕರಣವು ಸಮಾಪ್ತ.



# ಶಿ ವಾ ನು ಭ ವ

ಸಂಪುಟ ೨೩ ] [ ಸಂಚಿಕೆ ೫-೬



ಫೆಬ್ರುವರಿ-ಮಾರ್ಚ ೧೯೪೯

ವಿಜಾಪುರ.

# ವಿಷಯಗಳು.

# ಶಿವಾನುಭವ

ವರ್ಷ ೨೩ | ಫೆಬ್ರುವರಿ - ಮಾರ್ಚ ೧೯೪೯ | ಸಂಚಿಕೆ ೫-೬

## ಸಾಧನ ಜೀವಿ ಬಸವ ತಂದೆ!

(ಬರೆದವರು:— ಹರಿಬಸವ ಕುಮಾರ)

ಬಸವಪ್ರಭುವು ಉಪನಯನಕ್ಕೆ ಮಣ್ಣೆರಚಿ, ಪವಿತ್ರಕ್ಷೇತ್ರವಾದ "ಕೂಡಲಸಂಗಮ" ಕ್ಕೆ ಧಾವಿಸುವನು. ಅಲ್ಲಿಯ ಗುರುಕುಲ ಪೀಠದಲ್ಲಿ ಸೇರಿ ಭಕ್ತಿಭಾವನೆಯ ಸಿದ್ಧಿಯನ್ನು ಪಡೆಯುವನು. ಹೃದಯಕ್ಕೆ ಹೃದಯ, ಮನಕ್ಕೆ ಮನ, ಭಾವಕ್ಕೆ ಭಾವ, ದೇಹಕ್ಕೆ ದೇಹ, ಕೂಡಿ ಬೆರೆತು ಪಾವನತೆಯಲ್ಲಿ ತೇಲುವಂತೆ ಸಂಗಮನಾಥನಲ್ಲಿ ನೇಹವನ್ನು ಗಳಿಸುವನು. ಅದೇ ಬಾಳಿನಲ್ಲಿ ಹಿರಿದೆಂದು ನೆರೆನಂಬಿ ಆಚರಿಸುವನು. ಸಂಗಮನಾಥನಲ್ಲಿಟ್ಟ ಬಸವನ ಪ್ರೇಮಕ್ಕೆ ಎಣೆಯಿಲ್ಲ. ಭಕ್ತಿಗೆ ಪಾರವಿಲ್ಲ. ನೇಹಕ್ಕೆ ತುದಿ ಮೊದಲಿಲ್ಲ. ಕಡೆಗೆ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಹೋಗುವ ಸನ್ನಿವೇಶ ಬಂದಾಗ್ಗೆ ಬೆಚ್ಚಿ ಬೆರಗಾಗಿ ದೇವನೊಡನೆ ನಡೆಸುವ ಪ್ರೇಮದ ಮುನಿಸು ಹೆಚ್ಚಿನದು. "ನೀನೇಕೆ ಈ ನುಡಿಯೇಕೆ? ಹೊಂದಿದರಂ ಹೋಗೆಂಬರೇ? ಸಾರ್ದರಂ ಸೈರಿಸೆಂಬರೇ? ನಂಬಿದವರ ಗೋಣಂ ಕೊಯ್ವರೇ? ಶಿಶುವಂ ನಿರಿವರೇ? ಪಶುವಂ ಕೊಲುವರೇ? ಎನ್ನಂ ಬಿಡುವರೇ? ಕರುಣೆ ಕರುಣೆ; ಕರುಣಂ ಲೇಸಾಯ್ತು. ಅರ್ಚಿತಕ್ಕೆ ಫಲವಾಯ್ತು. ಇನ್ನೇನು ಇನ್ನೇನು? ಎಂದು ದುಃಖ ಪಡುವನು.

ಕಡೆಗೆ ಸಂಗಮದೇವನ ಅಪ್ಪಣೆಯ ಮೇರೆಗೆ ಇಚ್ಛೆಯಿಲ್ಲದ ಮನಸ್ಸಿನಂತೆ, ಬಲುಮೆಯ ಜೋರಿನಿಂದ ಕದಲುತ್ತಾ ಗೋವಿನ ನೊಲೆಹಾಲು

ಕುಡಿವ ಎಳೆಗರುವನ್ನು ರಕ್ಕಸಿ ದುರುದುರನೆ ನೋಡಿ, ಅದರ ಕೊರಳ ಕಣ್ಣಿಯ ಜಗ್ಗಿ, ಎಳೆದು ಕಂಬಕ್ಕೆ ಬಿಗಿವಂತೆ, ಇಹಬಾಳಿನ ರಕ್ಕಸಿ ಎಳೆಗರು ಬಸವನನ್ನು ಎಳೆಯುತ್ತಾಳೆ. ಸಂಗಮೇಶ್ವರ ರಮಿಸಿದರೂ ಆತನಿಗೆ ಹಿಗ್ಗಿಲ್ಲ. ಕಡ್ಡಿ ಕೊಟ್ಟು ಹೇಳಿದರೂ ಚಿಂತೆಯ ಮುಸುಕು ಕಳಚದು. "ಮನವಲ್ಲದ ಮನದೊಳಗ್ಗವಣಿ ಹೂಗಳಂ ಬೇಗಂ" ತಂದು, ಪೂಜೆ ಮಾಡುವ. ಮಗನ ಮೇಲಿನ ಮೋಹ ಕೆಡಕಿಗೆಳೆಯಲು ಬೇಡ. ನಿನ್ನ ಶಿಕ್ಷೆಯೇ ಎನಗೆ ಅಂತರಾಕ್ಷಿ ಎಂಬುದು ಆತನ ಬಯಕೆಯ ಬಾನುಲಿ. ಕಡೆಗೆ ಸಂಗಮ ದೇವನು ಆತನ ಮುನಿಸನ್ನು ರಮಿಸಿ; "ಎಲೆ ಮಗನೆ, ಎಲೆ ಕಂದ, ಎಲೆ ಬಸವ, ನಿನ್ನನಗಲಿ ನಾನಿರಲಾರೆ." ಎಂದು ಅಭಯ ವಚನವನ್ನು ಕೊಡು ವನು. ಅದೇ ಹರುಷದಲ್ಲಿ ಬಸವನು ಶುದ್ಧವಾದ ಭಾವದಿಂದ ಸಂಗಮ ದೇವನಿಗೆ ಸಮಸ್ಕರಿಸಿ ಹೋಗುವನು.

ಬಸವನು ವೇದಗಳನ್ನು ತಿರುವಿ ಹಾಕಿದ್ದನೆಂದು ನಂಬದೆ ಹೇಗೆ? ಉಪನಿಷತ್ತುಗಳನ್ನು ಕಂಡು ಉಂಡಿರಬಹುದು. ಭಾಷ್ಯ ಬರೆಯುವಷ್ಟು ಶಕ್ತ ನಾಗಿದ್ದಿರಬಹುದು. ಆದರೆ ಅದು ಆತನಿಗೆ ಬೇಕಿಲ್ಲ. ರುಚಿಸಲಿಲ್ಲ. ಪರಿಶುದ್ಧ ಮನ, ದೇವಸನ್ನಿಧಿ ಬೇಕು ಆತನಿಗೆ ಈ ದಾರಿಯಲ್ಲಿ ನುರಿತು ಅರಿತು ಹೆಜ್ಜೆ ಹಾಕಿದ ಹಿರಿಯರು ಬೇಕಿತ್ತು. ಶರಣ ಸಂತತಿ ಕಂಡ. ಅವರ ದಿವ್ಯ ಭವ್ಯ ಸ್ಫೂರ್ತಿಯುತವಾದ ವಚನಗಳ ಪರುಷರಾಶಿಯನ್ನು ನೋಡಿದ, ಕಂಡು ಹಿರಿಹಿರಿ ಹಿಗ್ಗಿದ. ತನ್ನ ಹೃದಯವನ್ನೇ ಮಾರುಗೊಟ್ಟ. "ಆದ್ಯರ ವಚನ ಪರುಷ ಎಂದು ಅದರ ಸವಿಯನ್ನು ಕುಡಿದು ಕುಡಿದು ಆಶ್ಚರ್ಯೋ ನ್ಮಾದದಲ್ಲಿ ತೇಲಿದ. ಅಬ್ಬಾ! ವಚನಮಾಣಿಕಗಳು "ಅಧರಕ್ಕೆ ಕಹಿ, ಉದರಕ್ಕೆ ಸಿಹಿ" ಎಂದು ಹಾಹಾರಿ, ಆ ಸಿಹಿ ನುಡಿಗಳ ಭವ್ಯ ದೃಶ್ಯಕ್ಕೆ ಬೆರಗಾದ. ಅಲ್ಲಿಯ ವರೆಗೆ ನಡಿಸಿಕೊಂಡು ಬಂದ ಬಾಳಿಗೆ; "ತವರಾಜದ ನೊರೆ ತೊರೆಯಂತೆ ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ ಉಪ್ಪು ನೀರುಂಬುವನ ವಿಧಿಯಂತೆ ಆಯಿತ್ತೆನ್ನ ಮತಿ" ಎಂದು ವ್ಯಥೆಪಟ್ಟು ವ್ಯಾಕುಲನಾದ.

ಶರಣರ ಆಂತರಿಕ ಸೌಂದರ್ಯದ ವ್ಯಾಪಾರಕ್ಕೆ ಆತನ ಆತ್ಮ ಶರಣು ಬಂದಿದೆ. ಅವರ ದಾಸಾನುದಾಸನೆಂದು ಒಳ್ನುಡಿದಿದೆ ಹೃದಯ. ಅವರ ಧೈರ್ಯ ಸಾಹಸಕ್ಕೆ ತಬ್ಬಿಬ್ಬಾಗಿದೆ ಮನ. "ಶರಣರನರಿಯದೆ ಉಳಿಡ ಭಂ

ಗಿತರ" ಎಂದು ಆತನ ಹೃದಯ ದೃಢವಾಗಿ ಒಲಿದು, ಒಳ್ಳೆಗೆಳ್ಳೆಗಳಲ್ಲಿ ನೆಳ್ಳೆಯ, ಹೊನಲನ್ನೇ ಹರಿಸಿದೆ.

ಹೀಗೆ ಒಪ್ಪಿ, ಒಪ್ಪಿ, ನುಡಿದು ನಡೆದು, ಆಶೆಯ ಭಾವದಿ ಹಾರಾಡಿದ, ಆತನ ಮನಸ್ಸಿಗೆ ತೃಪ್ತಿ ಎಟಕದಿರಲು ಕಕ್ಕಾನಿಕ್ಕಿಯಾಗಿ, "ಆದ್ಯರ ವಚನ ಪರುಷ ವೆಂದೆಂಬೆನು. ಆ ಪರುಷ ವೆನಗೆಂತು ದೊರೆಕೊಂಬುದೇ " ಎಂದು ಆತನ ಹೃದಯ ಹುಯಿಲಿಡುತ್ತದೆ. ಅದಕ್ಕೆ ಶಾಂತಿಯಿಲ್ಲ. ಭಾವನೆ ಎತ್ತರ ತತ್ತರವಾಗುತ್ತದೆ. ಮನಸ್ಸಿಗೆ ಹಿಡಿದ ಕಾರ್ಯ ನಿಲ್ಲುತ್ತದೆ. ಕಡೆಗೆ ಕಣ್ಣೀರಿಟ್ಟು ಹೃದಯವನ್ನೇ ಹಳಿಯುತ್ತ ತನ್ನನ್ನೆ ತಾನೇ ಹೀಯಾಳಿಸಲು ಪ್ರಾರಂಭಿಸುವನು. "ಹೊಲೆಯರ ಮದ್ದಳೆಯಂತೆ, ನುಡಿವ ಡಂಭಕ ನಾನಯ್ಯಾ." ಎಂದು ಅನ್ನುತ್ತಾ ಕಣ್ಣೀರ ಕೋಡಿಯಲ್ಲಿ, ಹೃದಯ ತಾಪದ ತೊರೆಯಲ್ಲಿ, ಮನವ ನೆದ್ದಿ ಶುದ್ಧತೆಗೆ ತಂದು ದಿವ್ಯ ಭಾವನೆಗೆ ಮುಟ್ಟಲು ಯತ್ನಿಸುತ್ತಾನೆ.

ಆತನಿಗೆ ಬೇಕಾದದ್ದು ಒಂದೇ ಒಂದು;  
ಬಾಳ ಬೆಳಕಿಗೊಂದು ಸೃಷ್ಟಿ.  
ಇರುವುದದುವೆ ಸತ್ಯಸೃಷ್ಟಿ.  
ಎನಗೆ ಬರಲಿ ಅದೇ ದೃಷ್ಟಿ ಎಂಬಂತೆ.

ಸತ್ಯಸತ್ಯವಾಗಿ ತಿಳಿಯುವುದು ಬಸವೇಶನ ವಿಶ್ವ ಪ್ರಯತ್ನದ ಅಮರ ಸಾಧನೆ. ಇದೇ ಆತನ ಹಂಬಲ. ಇದು ನಿಲುಕಬೇಕು ಆತನಿಗೆ. ಉಳಿದ ಆಡಂಬರದ ಒಸಪು ಒಯ್ಯಾರ ಆತನಿಗೆ ಸೇರದು. ಅದಕ್ಕಾಗಿಯೇ ಇಲ್ಲದ ಸಲ್ಲದ ಕಾರ್ಯದಲ್ಲಿ ಕೈಹಾಕುವ ಮನಸ್ಸಿನ ಉಯ್ಯಾಲೆಯಾಟಕ್ಕೆ ಆತನ ಆತ್ಮ ಸೇರದು. "ಹವಿಕ್ಕಿನ ಭಕ್ತಿ ಕರ್ಮಕ್ಕೆ ಮೊದಲು. ಮರ್ಮವನರಿಯದ ಮಾಟ ಸುಯಿಧಾನದ ಕೇಡು. ಬಂದ ಸಮಯೋಚಿತವನರಿಯದಿರ್ದಡೆ ನಿಂದಿರಲೊಲ್ಲ ಕೂಡಲಸಂಗಮದೇವ. " ಎಂದು ಪ್ರತಿಭಟಿಸುವನು; ಆ ಹರಕು-ಬರಕಿನ ಆಟಕ್ಕೆ ಮೂದಲಿಸುವನು.

ಆತನಿಗೆ ಮನಸ್ಸಿನ ಪವಿತ್ರತೆ ಬೇಕಾಗಿದೆ. ಹಗಲು ಅಹೋರಾತ್ರಿ ಅದಕ್ಕಾಗಿ ಕನಕರಿಸುವನು. ಬಾಳಿನಲ್ಲಿ ಒಂದರ ಹಿಂದೊಂದು ದುಂಬಾಲವಾಗಿ ಹಿಂಡುಗಟ್ಟಿ ಬಂದು ಮುತ್ತುವ ತಪ್ಪುಗಳನ್ನು ಆ ದೇವ ದೇವನ ಮುಂದೆ ಇಡುವನು. ಪಸುಳೆಯಂತೆ ನಿಲ್ಲುವನು. ಆದರೂ ಆ ತಪ್ಪುಗಳು ಸಹನವಾಗದೆ, ದುಃಖ ಒಟ್ಟರಿಸುತ್ತಿದೆ. ಹೃದಯ ತಲ್ಲಣಿಸಿ ತಳಮಳಗೊಳ್ಳುತ್ತದೆ. ಕಣ್ಣಿಗೆ ಕತ್ತಲೆಗವಿದಂತೆ ಆಗುತ್ತದೆ. ಮನಸ್ಸು ಮಂಕಾಗಿ

ಹೋಗುತ್ತದೆ. ಭಾವಕ್ಕೆ ಹೊಯ್ದಾಟ ಉಂಗುತ್ತದೆ. ಜೀವಕ್ಕೆ ಚೈತನ್ಯ ಚಿಗುರಿದಂತಾಗುತ್ತದೆ. ಮನಕ್ಕೆ ಮುಗ್ಧತೆ ಹಣಿಕಿ ಹಾಕುತ್ತದೆ. ಆಗ "ತಾಯಿ ನೀನು. ತಂದೆ ನೀನು. ಬಂಧು ನೀನು. ಬಳಗ ನೀನು. ನೀನಲ್ಲದೆ ಮತ್ತಾರಯ್ಯಾ ಕೂಡಲಸಂಗಮದೇವ. ನೀರಲ್ಲಿದ್ದು ಹಾಲಲ್ಲಿದ್ದು." ಎಂದು ತನ್ನ ಆತ್ಮವನ್ನೇ ಅರ್ಪಣ ಮಾಡುವನು.

ಬಯಕೆಲ್ಲ ಕುದಿಕುದಿದು ಬಿಸಿಯಾಗಿ ಸುಡುತಿಹುದು.

ಹಸಿದ ಹೊಂಗನಿಸಿಗೆ ರಸವಾಗಿ ಬಾ, ಎಂಬಂತೆ; ಆತನ ಬಯಕೆ ಬಾನುದ್ದ ಹಾಸಿದೆ ನಿನ್ನ ಕರುಣೆ ಅಪಾರ ನನ್ನ ನೆನಹು ಮುಳ್ಳಿನ ಮುಗುಳು ನಷ್ಟು ಎಂದು ತನ್ನ ಚಿತ್ತ ಚಾಂಚಲ್ಯಕ್ಕೆ ಬಾಗಿದ್ದಾನೆ. ಆತನ ಸಾನ್ನಿಧ್ಯಕ್ಕಾಗಿ ಕಣ್ಣೀರು ಮಿಡಿದಿದ್ದಾನೆ. ಕೂಸಿನಂತೆ ಕಿರುಚಿದ್ದಾನೆ. ಬೆನ್ನುಹತ್ತಿ "ಅಯ್ಯಾ ಅಯ್ಯಾ ಎಂದು ಕರೆವುತಲಿದ್ದೇನೆ. ಅಯ್ಯಾ ಅಯ್ಯಾ ಎಂದು ಒರಲುತಲಿದ್ದೇನೆ." ಎಂದು ಹಂಬಲಿಸಿ ಬಯಕೆಗಣ್ಣು ತೆರೆದು ಬೇಡಿಕೊಂಡಿದ್ದಾನೆ. ಆದನ್ನು ಮುರಿಬಡಿದು; ಎನಗಿಂತ ಕಿರಿಯರಿಲ್ಲ" ಎಂದು ಹಾಡಿದ್ದಾನೆ. ಒಮ್ಮೆಯೇ ! ಎರಡು ಸಾರೆಯೇ !! ನಿತ್ಯ ನಿತ್ಯವೂ ಆತನ ಸಾನ್ನಿಧ್ಯಕ್ಕಾಗಿ ತನ್ನ ಮನದಳಲನ್ನು ಶಬ್ದಗಳಲ್ಲಿ ಹೆಣೆದು, ವಚನದಲರನ್ನು ತನ್ನ ಪ್ರತಿಭೆಯ ಬೊಗಸೆಯಲ್ಲಿ ತುಂಬಿ ಆತನಿಗೆ ಒಂದೊಂದನ್ನೇ ಮುಡಿಸಿದ್ದಾನೆ. ವಚನಗಳ ದುದ್ದಕ್ಕೂ ಬಯಕೆಯ ತಂತಿಯನ್ನು ಮಿಡಿದು, ಮಿಡಿಸಿ ಆತ್ಮರಾಮದ ಬೇಟಿಗಾಗಿ ಭಾವಲೋಕದ ಬಾಗಿಲ ಹಿಡಿಯಲು ಕಳವಳ ಪಟ್ಟಿದ್ದಾನೆ. ಕಡೆಗೆ ತನ್ನ ಅರುವಿನ ಸಾಧನೆಯ ಕುಲುಮೆಯಲ್ಲಿ ತನ್ನರುವಿನ ಗುರುವನ್ನು ದೊರಕಿಸುತ್ತಾನೆ.

ಜ್ಞಾನದಿಂದ ನಿರಾಕಾರವಾಗುತ್ತದೆ. ಚೈತನ್ಯದಿಂದ ಜಗತ್ತಿನ ಬಾಹಿಕ ಆಗು ಹೋಗುಗಳು ಸರಿಹೋಗುತ್ತವೆ. ದುಡುಮೆಯ ಆಳದಲ್ಲಿ ನಿಜಸ್ವರೂಪದ ಸತ್ಯವಡಗಿದೆ. ಕಷ್ಟ ಕಾರ್ಪಣ್ಯಗಳ ಮುಳ್ಳು ಹೊಟೆ ಭಾವನಯ ಮೂಲ ರೂಹು ಭಕ್ತಿಯಾಗಿರುತ್ತದೆ. ಆ ಭಕ್ತಿಯನ್ನೇ ಕೊಟ್ಟು ನನ್ನನ್ನು ಕಾಪಾಡು, ಎಂದು ಬೇಡಿಕೊಳ್ಳುವನು.

ಕಷ್ಟ ಸಂಕಟಗಳನೊಡ್ಡಿ ಸಂಗಡಿಗನಾಗುವೆ ನೀನು. ಅವುಗಳ ಸಂಹಾರದಲ್ಲಿ ಚೈತನ್ಯಮಯನಾಗುವೆ. ಆ ಚೈತನ್ಯ ನಾನೆಂದು ಅಹಂಕಾರ ಪಟ್ಟಲ್ಲಿ ಭಾವನೆಯ ಹಸಿ ಬಿಸಿಯಲ್ಲಿ ನೂಕಿ ಗಾಸಿಗೊಳಿಸುವೆ; ವಿಶ್ವಮಾ

ತೆಯ ಅನುಗ್ರಹತೆಯಲ್ಲಿ; "ಜೀಯ" ಎಂದು ಮೊರೆಯಿಡುವೆ. ಆಗ ಹೊಸ ನೋಟ, ಹೊಸ ದೃಷ್ಟಿಯಲ್ಲಿ ಬಂದು ರಕ್ಷಿಸುವೆ. ನಾನು ಮಾತ್ರ ಮೊದಲಿನಂತೆ ಹಳಬನಾಗಿಯೇ ಇರುವೆ ಎಂದು ತನ್ನ ಅನುಭವವ ತಿದಿಯನ್ನು ಊದಿ ಊದಿ ಆತ್ಮವು ಪುಟಗೊಂಡು, ಪ್ರಜ್ವಲಿಸುವಂತೆ ಮಾಡುತ್ತಾನೆ.

ಸಂಸಾರ ದುಃಖಮಯ. ಹೇಯಸ್ಥಲ. ಕೊಳಕಿನ ಕೊಳ, ಎಂದು ಅನಿಸದೆ ಬಿಟ್ಟಿಲ್ಲ ಬಸವನಿಗೆ.

ಸಂಸಾರದ ಉರಿಪುಡಿಗಿಚ್ಚಿನಲ್ಲಿ ಹೃದಯ ಕಾದು, ಕಾದು ತಳಮಳಿಸಿ ಕಂದಿ ಕುಂದಿ, ಬಾಡಿ ಬೆಂದು ಬೆಂಡಾದಾಗ, "ಹುರುಳಿಲ್ಲ! ಹುರುಳಿಲ್ಲ!! ಕಾಯಯ್ಯಾ! ಕಾಯಯ್ಯಾ!! ಶಿವಧೋ! ಶಿವಧೋ!!" ಎಂದು ಗೋಗರೆಯುವನು.

ಕೆಸರಿನಲ್ಲಿರುವ ಕುಂಬಾರ ಹುಳದಂತೆ ಬಾಳಿನಲ್ಲಿದ್ದು ಇರದೇ ಇರುವದು. ಆತನ ಆಚಾರದ ದಿಟ್ಟ ಮಂತ್ರಿಯಾಗಿ ಬಾಳಿರುವನೆಂಬುದನ್ನು ಹೇಗೆ ತಾನೆ ಮರೆಯಬಹುದು? ಹೀಗನ್ನುವಲ್ಲಿ ಯಾವ ತೆರನಾದ ಸೌಂದರ್ಯ ಅಡಕವಾಗಿದೆ ಎಂಬುದನ್ನು ಅರಿತು ಆಚರಿಬೇಕು. ಹಾಗೆ ಅಂದನೆಂದ ಕೂಡಲೇ ಕ್ಷಣಿಕ ವೈರಾಗ್ಯ ತಾಳಿ, ಮರುಳಾಗಬಾರದು. ಆತನೂ ಬೈರಾಗಿಯಲ್ಲ. ಬಸವನು ಬಾಳಿನಲ್ಲಿಯ ಬೈರಾಗಿ.

ಮನಸ್ಸಿನ ಹರಿಯಾಟದ ಅನಂತತೆಯಲ್ಲಿ ಹೃದಯ ಕಲಿವಿಲಿಗೊಳ್ಳುತ್ತದೆ. ಶರಣತೆಯ ಸಾಮ್ರಾಜ್ಯದಲ್ಲಿ ಎಲ್ಲೆಲ್ಲಿಯೋ ಈ ಮನಸ್ಸಿನ ಹರಿಯಾಟದ ಕುಂಟು ನಾಟ್ಯ. ಇಷ್ಟು ಮೂದಲಿಸಿ ಹಳಿದು ತೆರಳಿದರೂ ಅದಕ್ಕೆ ನಾಚಿಕೆಯೇ ಇಲ್ಲ. ಒಯ್ಯಾನೆ ಒಯ್ಯಾರ ಒನಪುಗಳ ಸಿಂಗಾರದ ಶೃಂಗಾರದಲ್ಲಿ ಬಾಳಿನ ನಾಟ್ಯರಂಗವನ್ನೇ ತನ್ನ ಹಿಡಿತದಲ್ಲಿ ಜಗ್ಗಿ ಮರುಳುಗೊಳಿಸಿ ಕುಣಿಸಹತ್ತುತ್ತದೆ. ಅದರ ಹಬ್ಬದೂಟಕ್ಕೆ ಬೆಲೆಯಿಲ್ಲ. ನಮ್ಮ ಕಬ್ಬದೂಟಕ್ಕೆ ಲೆಕ್ಕವಿಲ್ಲ

"ನಾನೊಂದು ನೆನೆದಡೆ ತಾನೊಂಡು ನೆನೆವುದು. ನಾನಿತ್ತಲೆಳಿಸಿದಡೆ ತಾನತ್ತಲೆಳಿಯುವದು. ತಾ ಬೇರೆ ಎನ್ನನಳಲಿಸಿಕಾಡಿತ್ತು. ತಾ ಬೇರೆ ಎನ್ನ ಬಳಲಿಸಿಕಾಡಿತ್ತು. ಕೂಡಲಸಂಗನ ಕೂಡಿಹನೆಂದರೆ ತಾನೆನ್ನ ಮುಂದುಗೆಡಿಸಿತ್ತು ಮಾಯೆ" ಎಂದು ಕೊರಗುವನು. ಧ್ಯಾನಕ್ಕೆ ಬಯಸಿದರೆ ಮನಕ್ಕೆ

ನಗು. "ಸದಾಶಿವನ ಕುಂದದೆ ನೆನೆಯಲೀಯದೆ ಕೊಂದುದಯ್ಯ ಈ ಮಾಯೆ. " ಎಂದು ದೇವನಲ್ಲಿಯೇ ಮೊರೆಯಿಡುವನು.

ಆದರೂ ಬಸವನ ಪ್ರತಿಭಟನೆ ಅರುವಿನ ನಾಳಕ್ಕೆ ಹಿಡಿಸದ ಗುಟುಕಾಗಿದೆ. ಆತನ ನಿತ್ಯ ಸಾಧನೆ ಪ್ರತಿಯೊಬ್ಬರಿಗೂ ಬಾಳಕಾರ್ಗತ್ತಲೆಯಲ್ಲಿ ದೊರಕುವ ಹೊಂದೀವಿಗೆಯ ಬೆಳಕಾಗಿದೆ. "ನೀನಿರಿಸಿದ ಮನದಲ್ಲಿ ನಾನಂಜೆನಯ್ಯಾ ಮನವು ಮಹಾಘನಕ್ಕೆ ಶರಣಾಗತಿವೊಕ್ಕುದಾಗಿ. ನೀನಿರಿಸಿದ ಧನದಲ್ಲಿ ನಾನಂಜೆಯ್ಯಾ ಧನವು ಸತಿಸುತ ಮಾತಾಪಿತರಿಗೆ ಹೋಗದಾಗಿ " ಎಂದು ತಾ ಪಡೆದ ಪ್ರಾಬಲ್ಯವನ್ನು ಹೊರಹೊಮ್ಮಿಸುವನು.

ಇಲ್ಲಿ ಸಾಧನೆಯ ಸೌಂದರ್ಯ ಮಿಂಚಿದೆ. ಆತನ ಹೃದಯ ವಿಕಾಸದ ಅಪ್ರತಿಮ ಪ್ರಕಾಶ ಗೋಚರವಾಗುತ್ತದೆ. ಸ್ವಾವಲಂಬನದ ಪೂರ್ಣ ಮೂರ್ತಿಮಂತ ಸ್ವರೂಪು ಇಲ್ಲಿ ಸಾಕಷ್ಟು ಸಾಕ್ಷಾತ್ಕಾರವಾಗಿದೆ. ಬಯಸುವ ಸಾಧಕರಿಗೆ ಒಂದೇ ಮಾರ್ಗವನ್ನು ಬಯಲಿಗೆಳೆಯುತ್ತಾನೆ. "ಚಿತ್ತ ಮನ ಬುದ್ಧಿಯೊಂದಾದ ಮಚ್ಚು ಬಿಚ್ಚಿ ಬೇರಾಗದಿದ್ದರೆ ಮೆಚ್ಚುವ ಕೂಡಲಸಂಗಮದೇವ. " ಆಗಬೇಕಲ್ಲ! ಅದಕ್ಕಾಗಿ ಕಟು ನಿಷ್ಕಟವಾದ ಶ್ರದ್ಧೆ, ಸೂಕ್ಷ್ಮ ನಿರೀಕ್ಷಣೆಯಲ್ಲಿಯ ಸತ್ಯಸೌಂದರ್ಯ, ಆತ್ಮಾರ್ಪಣ, ನಿತ್ಯ ನಿತ್ಯಪವಿತ್ರಾನಂದದ ಬೆಳಕು ಬೇಕು.

ಮಿಟು ಮಿಟುಗಿಗೆ, ಬಸವಪ್ರಭುವಿಗೆ ಆತನ ಸಾನ್ನಿಧ್ಯಕಾಗಿ, ಆತ್ಮಸಾನಿಧ್ಯಕಾಗಿ ಶಾಂತಿಯಿಲ್ಲ. ಭಾವನೆಯ ವೇದನೆಗೆ ಬೇಕಾದ ಭಾಗ್ಯದ ಬೆಳಕು ಸಿಗಲೊಲ್ಲದು. ಒಮ್ಮೆ ಸಂಶಯಕ್ಕೊಳಗಾಗುವನು. ಮತ್ತೊಮ್ಮೆ "ನೆರೆನಂಬೋ ನೆರೆನಂಬೋ" ಎಂದು ತನ್ನ ಅಶರೀರ ವಾಣಿಯನ್ನು ಗುಡುಗಿಸುವನು. ಕಡೆಗೆ ದಿಕ್ಕಿಲ್ಲದ ಅನಾಥ ಪಶುವಂತೆ ಬಯಕೆಗಣ್ಣಿನಲ್ಲಿ ಆತ್ಮಚಿತ್ರವನ್ನು ಕಾಣುವನು. ಅದಕ್ಕೂ ಅನುಮಾನವೇ? "ಒಂದು ಮಾತೆನ್ನಬಹುದೇ ಶಬ್ದಸಾರಾಯವನು ? ಒಂದು ಮಾತೆನ್ನಬಹುದೇ ಶರಣಸಂಬಂಧವನು ? ಕೂಡಲಸಂಗಮದೇವರು ನಂಬಿಗೆ "ಓ ಎಂದುದನೊಂದು ಮಾತೆನ್ನಬಹುದೇ ? ಕಡೆಗೆ ಅನುಮಾನದ ವಿಚಾರಕ್ರಾಂತಿ ಸಡಿಲಾಗುತ್ತದೆ. ಭಾವನೆಯ ಬಿರುಕು ಭರವಸೆಯಲ್ಲಿ ಬೆಸೆದುಗೊಳ್ಳುತ್ತದೆ. ಆನಂದದಲ್ಲಿ ಹೃದಯ ಕುಣಿಯಹತ್ತುತ್ತದೆ. ಜೀವಕ್ಕೆ ಹಗುರಾಗುತ್ತದೆ. ಚಿಗಿತ ಎಳೆಬಾಳೆಯು ಚಿನ್ನೊಡೆದಂತೆ ಕಳಕಳಿಸಹತ್ತುತ್ತದೆ. ಕಡೆಗೆ; "ಹೊಲಬುಗೊಂಡರಸಲು

ಬೇಡ. ಬಲಿತು ತರಬೇಡ. ಒಲಿದೊಮ್ಮೆ ಶಿವಶರಣೆನ್ನಿರಯ್ಯಾ. ಒಂದು ಸೊಲ್ಲಿಂಗೆ ಮುಕ್ತಿ ಸಿದ್ಧಿ. ಕೂಡಲ ಸಂಗಮ ದೇವರ ಭಕ್ತಿಲಂಪಟನಾಗಿ" ಎಂದು ಆಳವಾದ ವಿಚಾರ ರಾಶಿಯಲ್ಲಿಯ ಅಣಿಮುತ್ತನ್ನು ಹುಡುಕಿ ತೋರಿಸುವನು.

ನಾವು ಅಂಥ ಇಂಥ ಎಂದು ಮತ್ತೆ ಮತ್ತೆ ಗೊಣಗುವ ವಿದ್ವಾಂಸರಿಗೆ ದೊರಕದು, ಭಕ್ತಿಯು ಸನ್ಮಾರ್ಗದ ಹೆದ್ದಾರಿ. ಅದಕ್ಕೆ ಬಾಲಭಾವ ಬೇಕು. ಆದ್ದರಿಂದ ಬಸವನು ತನ್ನ ಹಿರಿಹೆಮ್ಮೆಗೆ ಮಂಕು ಬೂದಿ ಹಚ್ಚುವದಕ್ಕಾಗಿ; ಗೀತಬಲ್ಲಾತ ಜಾಣನಲ್ಲ ಮಾತು ಬಲ್ಲಾತ ಜಾಣನಲ್ಲ. ಜಾಣನು ಜಾಣ. ಆತ ಜಾಣನು. ಲಿಂಗವ ನೆರೆನಂಬಿದಾತ ಜಾಣನು ಎಂದು ಅರುವಿನ ಕುಲುಮೆಯಲ್ಲಿ ಹೊರಗೆ ಬಂದ ಕಾದ ಕೆಂಡವನ್ನೇ ಹೊರಗೆಡಹುತ್ತಾನೆ ತನ್ನ ಹಿರಿ ಹೆಮ್ಮೆಯ ಮಂಕು ಬುದ್ಧಿ ಕಾಯ್ದು ಸೊಯ್ಯುಗುಟ್ಟಿ ಬೇಯಲೆಂದು.

ಭಕ್ತಿ ಕಾಯ್ದುಕೊಂಡು ನಿಲ್ಲುವ ಸೇವಕನಲ್ಲ. ಅದರ ಬೆನ್ನತ್ತಿ ಬೇಗಾವಲಾಗಿ ಮಾಡಿಕೊಳ್ಳಬೇಕು. ಮರೆತಲ್ಲಿ ದೂರ. ಅರಿತು ಹಿಂಬಾಲಿಸಿದಲ್ಲಿ ಪೂರಬರುತ್ತೆ. ಆದಕ್ಕಾಗಿ ಪೂರ್ಣ ನಂಬಿಕೆ ಬೇಕು. ಬಸವನು:-"ನರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ ಸಲಹುತ್ತ ಶಿವ! ಶಿವಾ!! ಎಂದೋದಿಸಯ್ಯಾ. ಭಕ್ತಿ ಎಂಬ ಪಂಜರದೊಳಗಿಕ್ಕಿ ಸಲಹು ಕೂಡಲ ಸಂಗಮದೇವಾ" ಎಂದು ಹಾಲ್ಪರಿದು ಬೇಡಿಕೊಳ್ಳುವನು; ವಿಚಾರದ ಬಿಸಿಸಾಕದಲ್ಲಿ ಹೃದಯ ಅರಳುತ್ತದೆ. ಭಾವದ ಬಿಸಿ ಬೆಂಬೂದಿಯಲ್ಲಿ ಮನದ ವಗರು ಕರಗಿ ಕಾವು ತಟ್ಟಿ ಮನವು ಪರಿಪಕ್ವವಾದ ರಸತುಂಬಿದ ತನಿವಣ್ಣಾಗುತ್ತದೆ. ಆ ಭಾವದ ಹೊಸನೋಟ ಹೃದಯದಲ್ಲಿ ನೆಲಿಸಬೇಕಾದರೆ ಪವಿತ್ರ ಜೀವಿಗಳ ಸಂಗ, ಮನದ ಸತ್ಯ, ವಿಮರ್ಶೆಯ ವಿಶಾಲತೆ, ಅದಕಾಗಿ ಹಗಲಿರಳು ಹಂಬಲ ಬೇಕೇ ಬೇಕು. ಅಂದಾಗ ಕಂಡೀತು ಸೌಂದರ್ಯದ ಸಿರಿ

ಸಾಧನೆಯ ಪರಿಪಕ್ವದ ತೊರೆಯ ದಂಡೆ ದಂಡೆಗಳಲ್ಲಿ ಹಾಯವಾಗಿ ನಡೆದು, ಕಳವಳದ ಮಡುವಿನಲ್ಲಿ ಈಸಿ, ಸೊಗಸಿನ ಸುಗ್ಗಿಯಲ್ಲಿ ನಲಿದು, ಪ್ರೇಮದ ಮಾಂದಳಿರ ಗೊಂಚಲಲ್ಲಿ ಕುಳಿತು, ಉಲಿದು, ಕೇಕೆ ಹಾಕಿ; ಬಾಳಿನ ಸಾಗರದ ಆಳದಲ್ಲಿ ಮುಳುಗಿ ಬೆಳಕದಾರಿಗೆ ತರುವ ಪರುಷ ಮಣಿಯನ್ನು ಹಿಡಿದ ಬಸವ. ಬಾಳಿನಲ್ಲಿ ಬರುವ ಎಡರು ತೊಡರುಗಳಿಗೆ ಅಂಜಲಿಲ್ಲ. ಅಳುಕಲಿಲ್ಲ. ಬೆಚ್ಚಲಿಲ್ಲ. ಬೆದರಲಿಲ್ಲ. ಆತನ ಹೃದಯ ಪರ್ವತಪ್ರಾಯವಾದುದು. ವಿಶಾಲವಾದುದು. ಅದಕ್ಕೆ ನೊಂದ ನೋವುಗಳು ತಟ್ಟು

ವದಿಲ್ಲ. ಹೊಗಳಿಕೆಯ ಹಾವುಗಳು ಮುಟ್ಟುವದಿಲ್ಲ ತೆಗಳಿಕೆಯ ತೀವ್ರ ತೋಯಿಸುವದಿಲ್ಲ ಅವನು ಆತನಲ್ಲಿ! ಆತನು ಅವನಲ್ಲಿ!! ಇದೇ ಸತ್ಯ ಶುದ್ಧ ಶರಣರ ಪರಿಪಾಕ.

ಹೀಗೆ ನಡಿಸಿದ ಅಮರಸಾಧನೆಯ ಬಸವನ ಬಾಳಿನ ಝರಿ ಸುರನದಿಗೆ ಮಿಲನವಾಗುತ್ತದೆ. ಅಲ್ಲಿಯ ಸೌಂದರ್ಯದೊಡನೆ ಕೂಡಿ ಕಲಿಬೆರಿಕೆಯಾಗುತ್ತದೆ. ಆಗ ಬಸವನಿಗೆ ಎಲ್ಲೆಲ್ಲಿಯೋ ಹೊಗಳಿಕೆಯ ಮಾಲೆಗಳು. ಆ ಮಾಲೆಗಳ ಮೊಟ್ಟೆಯನ್ನೇ ಹೊತ್ತು ಭಾರವಾಗಿ ಕುಸಿದು ಬೀಳುತ್ತಾನೆ. ಕಡೆಗೆ ತನ್ನ ಶರಣತೆಯ ದಿವ್ಯ ಭಾವನೆಯ ಮೊಗವನ್ನು ಎತ್ತಿ "ಹೊಗಳಿ ಹೊಗಳಿ ಎನ್ನವರು ಹೊನ್ನ ಶೂಲಕ್ಕೆ ಇಳಿಸಿದರಯ್ಯಾ! ಎನ್ನ ಹೊಗಳಿಕೆಗೆ ಅಡ್ಡ ಬಾರಾಧರ್ಮಿ" ಎಂಬ ತನ್ನ ಪ್ರತಿಭಟನೆಯ ಬಾರಕೋಲನ್ನೇ ಎತ್ತುವನು.

ಅಲ್ಲಿ-ಇಲ್ಲಿ ಬಂದ, ಬಂದ ಕಲ್ಲು ಮುಳ್ಳು ಹೆಂಟೆಯನ್ನು ಕಿತ್ತುತ್ತ ತನ್ನ ಜೀವನದ ತೊರೆಯನ್ನು ಸುಗಮವಾಗಿ ಹರಿಸುತ್ತಾನೆ. "ಕೂಡಲಸಂಗನ ಶರಣರಲ್ಲಿ ಲೇಸೆನಿಸಿಕೊಂಡು ಒಂದು ದಿನ ಬದುಕಿದರೆ ಸಾಲವೇ?" ಎಂದು ಬಾಳಿನ ಹಿಗ್ಗನ್ನು ಅಳೆಯುತ್ತಾನೆ.

"ವೇದನಾದಾತೀತ ತುರೀಯ ಪರಮಾನಂದ ಸಿರವಯ ಷಟ್ ತ್ರಿಂಶತ್ ಪ್ರಭಾ ಪಟಲದ ಪ್ರಭೆ ಬೆಳಗಿವೆ ನೋಡಿರೇ" ಎಂದು ಕರುಣೆಯಿಂದ ಆತನ ಮನ ತುಳುಕುತ್ತೆ. ಹೃದಯ ಪರಿಪಕ್ವವಾಗುತ್ತದೆ. ಒಡಗೂಡಿದ ಮೂರ್ತಿಯ ಭವ್ಯ ರೂಪವು ಕಣ್ಣ ಮುಂದೆ ಕಟ್ಟುತ್ತೆ. ಹೃದಯ ಕಂಪನ ಹೊಂದುತ್ತದೆ. ಕಣ್ಣ ಸಿಂಪೆಗಳಿಂದ ಕಣ್ಣ ಪನಿ ತಟಕುತ್ತದೆ. ಭಾವಾವೇಶ ಹರ್ಷೋದ್ಗಾರ ಎಡಬಿಡದೆ ಎದೆಗೊಡುತ್ತದೆ. ಕಡೆಗೆ ಶಾಂತಿಗೆ ಆಹ್ವಾನ. ಹರುಷದ ಸೋನೆ ಅನ್ಯತವಾಗಿ ಅದರ ಸವಿಯಲ್ಲಿ ಹೃದಯ ದುಂಬಿ, ಮನದುಂಬಿ, ಭಾವದ ತುಂಬಿ ಹಾರಾಡುತ್ತವ.

ಹೀಗೆ ಬಸವನು ಬಾಳಿನಲ್ಲಿ ನಿತ್ಯ ನಿತ್ಯ ಶಿವರಾತ್ರಿಯು ಕಂಡನು. ಕಂಡು ಸೊಬಗು ಸೌಂದರ್ಯವನ್ನು ಮನದಣಿ ಉಂಡು, ಅರಗಿಸಿ ಕರಗಿಸಿಕೊಂಡು ತಣಿದನು. ಭಕ್ತಿ ಭಾವದ ಕೋಶನಾದ ವಚನ ರಾಶಿಯನ್ನೇ ನಮಗೆ ಕೊಟ್ಟು ತಾನು ಆತ್ಮಾರಾಮನಲ್ಲಿ ಲೀನನಾಗಿ ದೇವನಲ್ಲಿ ಐಕ್ಯವಾದನು.

---

# ಅಂಬಿಗರ ಚೌಡಯ್ಯ. ×

ಲೇಖಕರು:— ಶ್ರೀ ಜಿ. ಎಸ್. ಶಿವರುದ್ರಪ್ಪನವರು, ಮೈಸೂರು



ಹನ್ನೆರಡನೇ ಶತಮಾನವನ್ನು ಅನೇಕ ದೃಷ್ಟಿಗಳಿಂದ ಒಂದು ಕ್ರಾಂತಿ ಯುಗವೆಂದು ಕರೆಯಬಹುದು. ಕಲ್ಯಾಣಕಾರಕವಾದ ಅಂದಿನ ಕ್ರಾಂತಿಯ ಅಂತರಾಳದಲ್ಲಿ ತಪೋಮಯವಾದ ಜ್ಯೋತಿರ್ ಲೋಕವೊಂದು ಗೋಚರ ವಾಗುತ್ತದೆ. ಅಲ್ಲಿ ಬೆಳಗಿ, ಮಹಾ ಬೆಳಗಿನಲ್ಲಿ ಐಕ್ಯವಾದ ಜೀವ ಜ್ಯೋತಿ ಗಳೆನಿತು! ಭಕ್ತಿ ಭಾಂಡಾರಿ ಬಸವಣ್ಣ, ವೈರಾಗ್ಯನಿಧಿ ಅಲ್ಲಮಪ್ರಭು, ಕರ್ಮಯೋಗಿ ಸಿದ್ಧರಾಮ, ಗುಪ್ತಜ್ಞಾನಿ ಚನ್ನಬಸವಣ್ಣ, ಅಧ್ಯಾತ್ಮ ರತ್ನ ಅಕ್ಕಮಹಾದೇವಿ; ಒಂದೊಂದು ಹೆಸರೂ ಒಂದೊಂದು ಕ್ರಾಂತಿಯ ಕಿಡಿ! ಈ ಜ್ಯೋತಿಗಳು ಎಲ್ಲರೆದೆ ಹಣತೆಗಳಿಗೂ ತಮ್ಮ ಜ್ಯೋತಿಯ ಕಿಡಿ ಯನ್ನು ದಾನಮಾಡಿ ಆ ಯುಗದಲ್ಲಿ ಒಂದು ದೀಪಾವಳಿ ಹಬ್ಬವನ್ನೇ ಮಾಡಿದುವೆನ್ನಬಹುದು. ಆ ಜ್ಯೋತಿರ್ ಲೋಕದಲ್ಲಿ--- ಮಿಂಚುಸೊಡರಿ ನಂತೆ ಪ್ರಜ್ವಲಿಸಿ ಬೆಳಗಿದವು ಕೆಲವು, ಗರ್ಭಗುಡಿಯ ನಂದಾದೀವಿಗೆ ಯಂತೆ ಪ್ರಶಾಂತವಾಗಿ ಬೆಳಗಿದವು ಕೆಲವು, ಕತ್ತಲೆಯಿಂದ ಬೆಳಕಿಗೆ ಮಾರ್ಗದರ್ಶಿಯಾದ ದಾರಿಯ ದೀವಿಗೆಯಂತೆ ಬೆಳಗಿದವು ಕೆಲವು, ನೀರವ ನಿರ್ಜನ ಕಾನನಾಂತರದಲ್ಲಿ ದಿವ್ಯ ಮುನಿಗಳ ಪರ್ಣಶಾಲೆಯಲ್ಲಿ ಬೆಳಗುವ ಕಿರುಹಣತೆಗಳಂತೆ ಗುಪ್ತವಾಗಿ ಉರಿದವು ಕೆಲವು, ಮಂಕವಾಗಿ ಉರಿದವು ಕೆಲವು, ಅವರಿವರನ್ನು ಸುಡಲೆಳಿಸಿದವು ಕೆಲವು.

'ಮಲಯಜದ ಮರಗಾಳಿ ಸೋಂಕಿನಲಿ ಉಳಿದ ಮರ ಪರಿಮಳಿಸು ವಂತೆ' ಆ ಮಹಾತ್ಮರ ಸಾನ್ನಿಧ್ಯದಲ್ಲಿ ಸಿದ್ಧಿ ಪಡೆದ ಸಾಮಾನ್ಯರೆನಿತುಮಂದಿ! ಆ ಮಹಾತ್ಮರ ಆತ್ಮ ಪರುಷಮಣಿಯಿಂದ ಪುನೀತರಾದ ಪುಣ್ಯವಂತರಿಗೆ ಲೆಕ್ಕವಿಲ್ಲ. ಆ ಪರುಷ ಸೋಂಕಿದರೂ ಹೊನ್ನಾಗುವ ಪುಣ್ಯವನ್ನು ಪಡೆ ಯದಿದ್ದ ಹಳೆ ಹೆಂಚುಗಳೆಷ್ಟೋ ಇವೆ. ಒಟ್ಟಿನಲ್ಲಿ ಅಂದಿನ ತಪಃ ಪ್ರಭಾವ ಎಲ್ಲರನ್ನೂ ತನ್ನ ಕಡೆಗೆ ಆಕರ್ಷಿಸಿ, ಆಶೀರ್ವದಿಸಿ— ಅನುಭವ

× ಶರಣಸಾಹಿತ್ಯ ಪತ್ರಿಕೆಯಲ್ಲಿ ಪ್ರಸಿದ್ಧವಾದುದನ್ನು ಇಲ್ಲಿ ಎತ್ತಿ ತೆಗೆದುಕೊಂಡಿದೆ.
—ಸಂಪಾದಕ,

ಮಂಟಪದ ಅನ್ಯತಕಿಗಳನ್ನು ೀರುವಂತಿತ್ತು. ಅಂದಿನ ಕೂಟದಲ್ಲಿ ನಿಜವಾದ ಅನುಭಾವಿಗಳೊಂದು ಕಡೆ, ಅರ್ಧಜ್ಞಾನಿಗಳೊಂದು ಕಡೆ, ಅಜ್ಞಾನಿಗಳೊಂದುಕಡೆ, ಇಷ್ಟಲಿಂಗಕ್ಕೆ ತೋರಿ ವ್ಯಪ್ಟಾನ್ನ ಹೊಡೆಯುವ ಕಪಟ ಜಂಗಮರೊಂದು ಕಡೆ, ವೀರಶೈವ ದೀಕ್ಷೆಯನ್ನು ಕೈಕೊಂಡರೂ ಹಳೆಯ ಮತದ ಆಚಾರಗಳನ್ನು ಬಿಡದ ವ್ಯಾಮೋಹದಿಂದ ಹೊಸದನ್ನು ಸಂಪೂರ್ಣವಾಗಿ ಆಚರಿಸದ, ಹಳೆಯುವನ್ನೂ ಬಿಡದ, ಹೊಸದು ಹಳದರ ನಡುವೆ ಓಲಾಡುವ ಅಳಿಮಾನಿಸರೊಂದು ಕಡೆ, ಹೀಗಾಗಿ, ಭಿನ್ನ ಮನೋಭಾವದ, ಭಿನ್ನ ಆಚಾರಗಳ, ಭಿನ್ನ ಸಂಸ್ಕೃತಿಯ, ಜನರಿಂದ ತುಂಬಿತ್ತು ಅಂದಿನ ಸಮಾಜ. ಅಂತಹ ಸಮಾಜವನ್ನು ಸುಧಾರಿಲು ಪ್ರಯತ್ನಿಸಿದ ಅಂದಿನ ವಚನಕಾರರ ವಚನಗಳಲ್ಲಿ, ವಚನಕಾರರ ಅನುಭವಕ್ಕೆ ತಕ್ಕಂತೆ, ಅವರವರು ಪಡೆದ ಸಂಸ್ಕಾರಕ್ಕೆ ತಕ್ಕಂತೆ, ಅವರ ಮಾತುಗಳು ಹೊರ ಹೊಮ್ಮಿರುವುದನ್ನು ಕಾಣುತ್ತೇವೆ.

'ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಲಿಂಗಮೆಚ್ಚಿ ಅಹುದೆನಬೇಕು, 'ಮೃದುವಚನವೇ ಸಕಲ ಜಪಂಗಳಯ್ಯ, ಮೃದುವಚನವೇ ಸಕಲ ತಪಂಗಳಯ್ಯ' 'ಅಯ್ಯಾ ಎಂದೊಡೆ ಸ್ವರ್ಗ, ಎಲವೋ ಎಂದೊಡೆ ನರಕ' ಎಂಬ ಮನೋಭಾವದವರು ಬಸವಣ್ಣನವರು, 'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬ ವಿನೀತ ಮನೋಭಾವದಿಂದ ತಮ್ಮ ಮೃದುಹೃದಯದ ಮಧುರವಾಣಿಯಿಂದ ಬೋಧಿಸಿದ ಬಸವಣ್ಣನವರು, ಎಂದೂ ಯಾರನ್ನೂ ಕಟುವಾಗಿ ಟೀಕಿಸಿ, ವಾದಿಸಿ ತಿದ್ದ ಲೆಳಸಿದವರಲ್ಲ. ಅವರ ವಿಷಯದಲ್ಲಿ ಅವರಿವರು ಮಾಡಿದ ಟೀಕೆಗಳನ್ನು ಕೇಳಿದಾಗ 'ನ್ಯಾಯ ನಿಷ್ಠುರ ದಯಾ ದಾಕ್ಷಿಣ್ಯ ಪರ ನಾನಲ್ಲ, ಲೋಕ ವಿರೋಧಿ ಶರಣ, ನಾನಾರಿಗೂ ಅಂಜುವವನಲ್ಲ' ಎಂದು ಮನಸ್ಸಿನಲ್ಲಿ ಅಂದುಕೊಂಡಿರಬಹುದು. ಅವರ ಮಾತು ಅರ್ಥಕ್ಕೂ ಸಿಹಿ; ಉನ್ನಕ್ಕೂ ಸಿಹಿ. ಅಲ್ಲಮಪ್ರಭುವಿನದು ಅನುಭಾವಿಯ ಅಧಿಕಾರವಾಣಿ. ಅವರಿವರನ್ನು ನಯವಾಗಿ ಖಂಡಿಸುವ ಸನ್ಮಾರ್ಗದರ್ಶಕ ಬೋಧವಾಣಿ. ಅಕ್ಕಮಹಾದೇವಿಯದು ಅಧ್ಯಾತ್ಮವಾಣಿ, ಕಾವ್ಯವಾಣಿ; ಆದರೆ ಆವರಿವರ ದುರಾಚಾರಗಳನ್ನು ಕಂಡಾಗ, ಸುಳ್ಳುಮರೆ ಮೋಸಗಳನ್ನು ಗಮನಿಸಿದಾಗ— ಕೇಸರಿಯಂತೆ ಕೆರಳಿ ಮೇಲೆ ಬಿದ್ದು ನಿರ್ದಾಕ್ಷಿಣ್ಯವಾಗಿ ಖಂಡಿಸಿ, ಅವ

ರನ್ನು ಮನಸ್ವೀ ಬೈದು, ಕಣ್ ಬಿಟ್ಟಂತೆ ಮಾತನಾಡಿ ವಾದಿಸಿ ಬೋಧಿಸಿದನು—'ಅಂಬಿಗರ ಚೌಡಯ್ಯ ನಿಜಶರಣನು'

ಅಂಬಿಗರ ಚೌಡಯ್ಯ ಅವನ ಹೆಸರು ಸೂಚಿಸುವಂತೆ 'ಅಂಬಿಗ' ವೃತ್ತಿಯವನು. ತನ್ನ ವೃತ್ತಿಯನ್ನು ತನ್ನ ವಚನದಲ್ಲಿ ಹೀಗೆ ಹೇಳಿಕೊಂಡಿದ್ದಾನೆ –

ತಡೆನೆಲೆಯಿಲ್ಲದ ಮಹಾನದಿಯಲ್ಲಿ ಒಡಲಿಲ್ಲದಂಬಿಗ ಬಂದಿದ್ದೇನೆ.
ಹಿಡಿವ ಬಿಡುವ ಮನದ ಬೆಳೆ ಗೊಟ್ಟೊಡೆ ಕಡೆಗಾಣಿಸಿ ಹಾಯಿಸುವೆ
ಮಹಾಹೊಳೆಯ. ನುಡಿಯಿಲ್ಲದ ನಿಸ್ಸೀಮ ಗ್ರಾಮವಪ್ಲರಿಸುವೆ
ನೆಂದಾತ ಅಂಬಿಗರ ಚೌಡಯ್ಯ. [ವ. ೧೨]

ಅಂಬಿಗನು ಜಗದೊಳಗೆ ಆತುವನು, ಸಂಸಾರ ಸಾಗರದೊಳಗೆ
ನೋಡಯ್ಯ, ಹುಟ್ಟು ಕಡಿವಂದವನರಿದಾತ ತೊಳಸು
ತ್ತಿದ್ದನು. ಚಂದಗೆಟ್ಟವರೆಲ್ಲ ಬಂದೇರಿ ದೋಣಿಯನು
ಶಿವನೊಂದೆ ತಾಪಿಗೆಯ್ದುಳುಹುವನೆಂದನಂಬಿಗರ ಚೌಡಯ್ಯ [ವ. ೨೨]

ಈ ವಚನಗಳಿಂದ ಗೊತ್ತಾಗುವುದು ಚೌಡಯ್ಯ ಶಿವಾನುಭಾವಿ ಎಂಬುದು. ಅವನು ಧೈರ್ಯವಾಗಿ ಹೇಳಿಕೊಳ್ಳುತ್ತಾನೆ. ತಾನು 'ಹುಟ್ಟು ಕಡಿವಂದವನು ಅರಿದಾತ'ನೆಂದು 'ಹಿಡಿವ ಬಿಡುವ ಮನದ ಬೆಳೆಗೊಟ್ಟೊಡೆ' ಈ ಸಂಸಾರ ಸಾಗರವನ್ನು ಕಡೆಹಾಯಿಸಬಲ್ಲೆನೆಂದು ಅವನ ಆಧ್ಯಾತ್ಮ ಸಾಧನೆಯ ಸ್ವರೂಪವನ್ನು, ಅವನ ಸುಧಾರಣೆಯ ವಿಧಾನವನ್ನು ಅವನ ವಚನಗಳಿಂದ ಸ್ಥೂಲವಾಗಿ ತಿಳಿಯಬಹುದು.

ವಚನಕಾರರ ಮೊದಲ ಉದ್ದೇಶ ತಮ್ಮ ಮತ ತತ್ವ ಪ್ರಚಾರ. ಆ ಕೆಲಸವನ್ನು ಅವರ ಆಧ್ಯಾತ್ಮ ವಚನಗಳು ಸಾಧಿಸುತ್ತವೆ. ಎರಡನೆಯದಾಗಿ ಈ ಮತದ ತಳಹದಿಯ ಮೇಲೆ ಸಮತಾವಾದದ— ಸಮಾನತಾ ಸಮಾಜವನ್ನು ನಿರ್ಮಿಸಬೇಕೆಂಬುದು. ಆ ಕೆಲಸವನ್ನು ಅವರ ನೈತಿಕ ವಚನಗಳು ಮಾಡುತ್ತವೆ. ಸ್ತ್ರೀ ಪುರುಷರ ಭೇದವಿಲ್ಲದ, ಮೇಲು ಕೀಳುಗಳ ಎಣಿಕೆಯಿಲ್ಲದ— ಶಾಂತಿಯುತವಾದ ಬಾಳನ್ನು ನಡೆಸಿ ಭೋಗ ತ್ಯಾಗಗಳೆರಡನ್ನೂ ಒಟ್ಟಿಗೆ ಸಾಧಿಸಲು ಸಹಕಾರವಾದ ಸಮಾಜವನ್ನು ನಿರ್ಮಿಸುವ ಉನ್ನತ ಧ್ಯೇಯದ ಅಂದಿನ ಸುಧಾರಕರು ಆಧ್ಯಾತ್ಮ ಸಾಧನೆಯ

ಕಡೆ ಎಷ್ಟು ಗಮನ ಕೊಟ್ಟರೋ, ಅಷ್ಟೇ ಗಮನವನ್ನು ಸಮಾಜ ರಚನೆಯ ಕಡೆಗೂ ಕೊಟ್ಟರು ಎನ್ನಬಹುದು.

ಅಂಬಿಗರ ಚೌಡಯ್ಯ ಕಂಡದ್ದು ಒಂದು ಬಗೆಯ ಜನರನ್ನಲ್ಲ; ಒಂದು ಆಚಾರದವರನ್ನಲ್ಲ— ಎಲ್ಲರೂ ಬರಿಯ ಲೌಕಿಕ ಚಿಂತೆಗಳಲ್ಲೇ ತೊಳಲುತ್ತಿದ್ದಾರೆ. ಅವರನ್ನು ಕಂಡು—

ಬಡತನಕ್ಕೆ ಉಂಬುವ ಚಿಂತೆ, ಉಣಲಾದರೆ ಉಡುವ ಚಿಂತೆ,
ಉಡಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡಿರ ಚಿಂತೆ, ಹೆಂಡಿ
ರಾದರೆ ಮಕ್ಕಳ ಚಿಂತೆ, ಮಕ್ಕಳಾದರೆ ಬದುಕಿನ ಚಿಂತೆ, ಬದು
ಕಾದರೆ ಕೇಡಿನ ಚಿಂತೆ, ಕೇಡಾದರೆ ಮರಣದ ಚಿಂತೆ. ಇಂತೀ
ಹಲವು ಚಿಂತೆಯಲ್ಲಿ ಇದ್ದವರನು ಕಂಡೆನು. ಶಿವನ ಚಿಂತೆ
ಯಲ್ಲಿ ಇದ್ದವರನೊಬ್ಬರನು ಕಾಣೆನೆಂದಾತ ನಮ್ಮ ಅಂಬಿಗರ
ಚೌಡಯ್ಯ ನಿಜಶರಣನು. [ವ. ೭೩]

ಎಲ್ಲೆಲ್ಲಿ ನೋಡಿದರೂ ಬರಿಯ ಚಿಂತೆಗಳ ಸಂತೆಯಲ್ಲಿ ಸುತ್ತುವವರೇ! ದಾರಿ ತೋರಿಸುವವರು ಹತ್ತಿರವಿದ್ದರೂ ಕುರುಡರಂತೆ ತೊಳಲುತ್ತಿದ್ದಾರೆ. ಆದುದರಿಂದ ಕನಿಕರದಿಂದ ಚೌಡಯ್ಯ ಸಾರುತ್ತಾನೆ—

ಗಾಳಿ ಬಿಟ್ಟಲ್ಲಿ ತೂರಿಕೊಳ್ಳಿರಯ್ಯಾ; ಗಾಳಿ ನಿಮ್ಮಧೀನವಲ್ಲವಯ್ಯ
ನಾಳೆ ತೂರಿಹೆನೆಂದರೆ ಇಲ್ಲವಯ್ಯ. ಶಿವಶರಣ ಎಂಬುದೊಂದು
ಗಾಳಿ ಬಿಟ್ಟಲ್ಲಿ ಬೇಗ ತೂರೆಂದ ಅಂಬಿಗರ ಚೌಡಯ್ಯ [ವ. ೭೫]

‘ ಶಿವಶರಣ ’ ಎಂಬ ಭಾವವು ಮನಸ್ಸಿಗೆ ಬಂದಾಗಲೇ ಸತ್ಕಾರ್ಯಗಳನ್ನು ಸಾಧಿಸಿ, ‘ ಚಂದಗೆಟ್ಟ ’ ನಿಮ್ಮನ್ನೆಲ್ಲ ಶಿವನಾವಿಗೆ ಒಯ್ಯಲು ನಾನಿದ್ದೇನೆ. ಆದುದರಿಂದ ‘ ಕಡೆನೆಲೆಯಿಲ್ಲದ ಮಹಾಹೊಳೆ ’ ಯಲ್ಲಿ ನಾನು ನಡೆಯಿಸುವ ಡೋಣಿಯನ್ನು ಬಂದೇರಿ.— ಈ ವೇಳೆ ತಪ್ಪಿದರೆ ನಾಳೆ ನೀವು ಇರುವಿರೋ ಇಲ್ಲವೋ—

ಗತಿಪಥದ ಜ್ಞಾನದಲಿದ್ದು ನೀಗಿರೋ ನಿಮ್ಮ ಭವಬಂಧನದ
ಸಾಗರವನು, ಪ್ರಾಣ ತ್ಯಾಗವು ಈಗಲೋ ಆಗಲೋ ಎಂದರಿಯ
ಬಾರದು, ರೋಗರುಜಿನಗಳಿಗೆ ಆಗರವು ನಿಮ್ಮ ಒಡಲು. ತನುಮನ
ಪ್ರಾಣವ ನೆಚ್ಚದಿರು. ನಾಗಭೂಷಣನ ಪಾದಪೂಜೆಯ ಮಾಡಿ ಶಿವ
ಯೋಗದಲ್ಲಿ ಲಿಂಗವನೊಡಗೂಡಿ ಸಾಗಿಹೋಗದವರ ಭವಗೇಡಿ
ಎಂದಾತ ನಮ್ಮ ಅಂಬಿಗರ ಚೌಡಯ್ಯ. [ವ. ೩೫]

ಆನಂದದಿಂದ ಸಿದ್ಧ ಗುರುವಿನಿಂದ ಲಿಂಗದೀಕ್ಷಿತರಾಗಿ ಲಿಂಗಧಾರಣ ಎಂಬುದು ಎರಡು ಗ್ರಾಮದ ನಡುವೆ ಕಟ್ಟಿದ ಸೀಮೆಯ ಕಲ್ಲಿನಂತೆ, ಅದನ್ನು ಧರಿಸುವುದರಿಂದ – ಭವಿತನದ ಸೀಮೆ ಕಳೆದು ಭಕ್ತನ ಲೋಕ ಪ್ರಾರಂಭವಾಗುತ್ತದೆ. ಉಪದೇಶ ಮಾಡುವ ಗುರು ಸಿದ್ಧಗುರುವಲ್ಲದಿದ್ದರೆ 'ಕುರುಡ ಕುರುಡನ ಹಿಡಿದು ನಡೆದ'ದಂತಾಗುತ್ತದೆ. 'ತೊರೆಯಲದ್ದಿ ಹೋಹನ ಈಸಲರಿಯದವ ತೆಗೆದಂತಾಗುತ್ತದೆ' ಭಕ್ತ ಧರಿಸುವ ಲಿಂಗ 'ಈರೇಳು ಭುವನಗಳನೊಳಕೊಂಡ ಮಹಾಲಿಂಗ'ದ ಕುರುಹು. ನಿಷ್ಠೆಯಿಂದ ಆ ಕುರುಹಿನ ಬೆಂಬಳಿವಿಡಿದು ಸಾಧನೆಯ ಮಾರ್ಗದಲ್ಲಿ ನಡೆದರೆ ಅರಿವಿನ ಅರಿವಾಗುತ್ತದೆ. ಈಶ್ವರ ಶಕ್ತಿ ಎಂಬುದು 'ಅಂಗದ ಹೊರಗಿಪ್ಪುದಲ್ಲ; ಅಂಗದ ಒಳಗಿಪ್ಪುದಲ್ಲ.' ಅದು ಎಲ್ಲ ಅಂಗಗಳನ್ನು ಒಳಕೊಂಡುದು. ಆ ಶಕ್ತಿ ಎಲ್ಲ ಅಂಗಗಳಲ್ಲಿಯೂ ತಾನೇ ತಾನಾಗಿ ವ್ಯವಹರಿಸುತ್ತದೆ. ಎಲ್ಲ ಪದಾರ್ಥಗಳಲ್ಲಿಯೂ ಇರುವ ಸಹಜಗುಣ ಲಿಂಗದ ಭಾವದಂತೆ ಇಂತಹ ಇಷ್ಟಲಿಂಗವನ್ನು ಕಿರಿದು ಮಾಡಿ ಬೆಟ್ಟದ ಲಿಂಗಕ್ಕೆ ಹೊಟ್ಟೆ ಅಡಿಯಾಗಿ ಬೀಳಬೇಡಿ. ಮಾಡುವ ಪೂಜೆಯನ್ನು ಅವರಿವರ ಮೆಚ್ಚುಗೆಗಾಗಿ ಮಾಡಬೇಡಿ. ಜನರು ಉಂಡರೆ ಭೂತನೆಂಬರು. ಉಣ್ಣದಿದ್ದರೆ ಚಕೋರಿ ಎಂಬರು. ಭೋಗಿಸಿದರೆ ಕಾಮಿ ಎಂಬರು. ಭೋಗಿಸದಿದ್ದೊಡೆ ನಪುಂಸಕನೆಂಬರು. ಜನಗಳ ನಾಲಿಗೆಗೆ ಲಗಾಮಿಲ್ಲ. ಅವರ ಸ್ವಭಾವವೇ ಅಂತಹುದು. ಅವನ್ನೆಲ್ಲಾ ಲೆಕ್ಕಿಸದೆ ಸಾಧನೆಯ ಮಾರ್ಗದಲ್ಲಿ ನಡೆ. 'ಮಾಡುವ ಭಕ್ತನಿಗೆ ಮನವೇ ಸಾಕ್ಷಿ. ಸಾಧನೆಯ ಹಾದಿಯಲ್ಲಿ ಕಷ್ಟಗಳು ಬರಬಹುದು. "ಕಷ್ಟಗಳು ತಮ್ಮಿಂದ ತಾವೇ ಬರಲರಿಯವು." ಅವೂ ದೈವಕೃಪೆ. ಸಂದೇಹಗಳು ಬಂದರೆ ಗುರುವಿದ್ದಾನೆ. [illegible] ಕಣ್ಣು ತೆರೆಯಿಸುವುದಕ್ಕೆ ತ್ರಿವಿಧ ದಾಸೋಹದಿಂದ ಗುರುಲಿಂಗ ಜಂಗಮಸೇವೆ ಮಾಡು. ಏಕೆಂದರೆ ಲಿಂಗದ ಮುಖ ಜಂಗಮ; ಅರ್ಚನೆಯು ಮಾಡುವಲ್ಲಿ ವೇಷವರತಿರಬೇಕು. ನಾಡೆಲ್ಲಾ ನೋಡಲೆಂದು ಮಾಡುವುದು ಬೇಡ. ಲಿಂಗ ಲಾಂಛನಧಾರಿಯಾದ ಮೇಲೆ ಏಕನಿಷ್ಠಾನಿರತನಾಗು. ಇಲ್ಲದಿದ್ದರೆ ಡಾಕಿನ ಮುದ್ರೆಯ ಪಶುವಿಗೂ ಭಕ್ತನಿಗೂ ಭೇದವೇನು? ಕಾಶೀ-ರಾಮೇಶ್ವರಾದಿ ತೀರ್ಥಗಳಿಗೆ ತೊಳಲದಿರು. ಪರಮಾತ್ಮ ನಿನ್ನಲ್ಲಿಯೇ ಇದ್ದಾನೆ ಅವನು 'ಕಾಷ್ಠದಲ್ಲಡಗಿ ಸುಡದಿಹ ಭೇದ' ಅಂಗವಿಲ್ಲದೆ ಲಿಂಗ ಪ್ರಕಾಶಿತವಾಗದು. ಅಂತಹ ಲಿಂಗದ ಗುಣ ನಿನ್ನಲ್ಲಿ ಪ್ರಕಾಶಿತವಾಗಬೇಕಾದರೆ ಮೊದಲು

ಕಾಯದ ಗುಣ ಕೀಳಬೇಕು. ' ಒಡೆಯುವೆ ತೆಂಗಾಯಿ ಮೊದ್ದವರುಂಟೆ ? ಆದುದರಿಂದ ಅಹಂಕಾರನ ಚಿಪ್ಪನ್ನು ಒಡೆಯಬೇಕು. ಅಹಂಕಾರ ತೊರೆ. ಆಸೆಯುಳ್ಳಾತ ... ರಸನದಲ್ಲಿಪ್ಪನು. ... ಆಸೆಯ ...ಯನರಿದಾತ ಕೈಲಾಸದಾಚೆಯಲ್ಲಿಪ್ಪನು. ' ' ಸಸಿಗೆ ನೀರನೆರೆದಡೆ ಹಸಿರಾದಂತೆ, ಬೇರಿನ ಬಾಯಿ ತುಂಬಿ ಸಸಿಯ ಒಡಲು ತುಂಬಿ, ಅನಿಸಕವ ತೆರನಂತೆ ' ಲಿಂಗದ ಗುಣ ಅಂಗದಲ್ಲಿ ಪ್ರಕಾಶಿತವಾಗುತ್ತದೆ. ಆಗ ಅವನು ' ಅರುಣನ ಕಿರಣ ದಲ್ಲಿ ಅರತ ಸಾರದಂತೆ ' ಇರುತ್ತಾನೆ. ... ... ಅವನ ಪಾಲಿಗೆ ' ಬಧಿರನ ಕಾವ್ಯದಂತೆ, ಕಾದಹಂಚಿನ ಮೇಲೆ ಬಿಟ್ಟ ನೀರಿನಂತೆ' ಇರುತ್ತವೆ. ಅವನು ತಾನು ಜ್ಞಾನಿ ಎಂದು ತಿಳಿದರೆ ಸಾಲದು. ಅಂತಿಮ ಸಿದ್ಧಿಗಾಗಿ ಸಾಧನೆ ಮಾಡಬೇಕು. ಆಗ ' ಹುಸಿ ಮುಸಕ ' ವನ್ನು ಕಳೆದು ಜ್ಞಾನವೆಂಬ ಬೆಳಕನ್ನು ಸಾಧಿಸಬಹುದು. ಈ ಸ್ಥಿತಿ ಅನುಭವವೇದ್ಯ. ಈ ಷಟ್‌ಸ್ಥಲ ಸಾಧನೆಯ ಮಾರ್ಗ ಚೌಡಯ್ಯನಿಗೆ ಅನುಭವ ಮಂಟಪ ದಲ್ಲಿ ಚೆನ್ನಬಸವಣ್ಣನವರಿಂದ ಉಪದೇಶಿಸಲ್ಪಟ್ಟ ತಂತ್ರ. ಇದು ಅಂಬಿಗರ ಚೌಡಯ್ಯನ ಆಧ್ಯಾತ್ಮ ಅನುಭವದ ಸಾರ.

ಚೌಡಯ್ಯ ಯಾವ ಮಾತನ್ನಾಡಿದರೂ ಅದು ಸಿಂಹಗರ್ಜನೆ. ಆವನು ಸ್ಪಷ್ಟವಾಗಿ ಮಾತನಾಡಿದುದು ಅಪೂರ್ವ. " ಕೇಳಿರಯ್ಯ ಮಾನವರೆ " " ಮಾನವ ಕೇಳಿಲೋ " " ಶೀಲವಂತ ಸಂಪನ್ನರಾದವರು ಕೇಳಿರೋ " "ನನಗೊಬ್ಬರೆಂಜಲು ಸೇರದೆಂದು ಶುಚಿತನದಲ್ಲಿ ಬದುಕುವೆನೆಂಬ ಒರಿಯ ಮಾತಿನ ಭುಂಜಕರು ನೀವು ಕೇಳಿರೋ " " ಜನನಮರಣ ಸೂತಕಂಗಳ ಕಳೆದು ಶುದ್ಧವಾದೆನೆಂಬ ಅಜ್ಞಾನಿ ಜಡಜೀವಿಗಳೆಲ್ಲ ನೀವು ಕೇಳಿರೋ " " ಪರುಪುರುಷಾರ್ಥವನರಿಯದೆ ಕೆಟ್ಟ ನರಕುರಿಗಳು ನೀವು ಕೇಳಿರೋ"— ಎಂದು ಮೊದಲಾಗಿ "... ... ರಕ್ಷೆಯು ತಕ್ಕೊಂಡು ಲಟಲಟನೆ ಹೊಡೆಯೆಂದ" "ಪಡಿಹಾರಿ ಉತ್ತಣ್ಣನ ಎಡಪಾದ ರಕ್ಷೆಯಿಂದ ಪಟಪಟನೆ ಹೊಡೆಯೆಂದ " "ಮೂಗಕೊಯ್ದು ಇಟ್ಟಂಗಿಯ ಕಲ್ಲಿಲೆ ಸಾಣೆಯ ಹಿಕ್ಕಿ ಹಿಟ್ಟನೆ ತಳಿದು ಮೇಲೆ ನಿಂಬೆಯಹುಳಿಯನೆ ಹಿಂಡಿ ಪಡುವಲ ಗಾಳಿಗೆ ಹಿಡಿ"—ಹೀಗೆ ಕೊನೆಯಾಗುತ್ತದೆ. ಇವನ ವಚನಗಳ ಶೈಲಿ ಹೇಳುವ ಉಪ್ರೇಕ್ಷೆಯಿಂದಲೋ, ಅವನ ಸಂಸ್ಕೃತಿಯ ಮಟ್ಟದಿಂದಲೋ ಚೌಡಯ್ಯ ಅಪಾಚ್ಯ ಶಬ್ದಕೋಶದ ಮುದ್ರೆಯನ್ನೊಡೆದು, ಜೈಗಾಳದ ವಾಳಿಸುರಿಸಿ,

ಕಟುಟೀಕೆಗಳ ಸಿಡಿಲು–ಗುಡುಗುಗಳನ್ನು ಸೃಷ್ಟಿಸುತ್ತಾನೆ. ಅವನ ವಚನಗಳನ್ನು ಓದುತ್ತಿದ್ದರೆ ಒಂದೆಡೆ ನಗು, ಮತ್ತೊಂದೆಡೆ ಜಿಗುಪ್ಸೆ ಉಂಟಾಗಬಹುದು. ಆದರೆ ಅವನು ಹೀಗೆ ಆಡಿರುವದಕ್ಕೆ ಕಾರಣವಿಲ್ಲದಿಲ್ಲ. ಅಂದಿನ ಸಮಾಜ ಹಾಗಿತ್ತು. ಅಂದಿನ ಜನ ಮೇಲುನುಡಿಗಳಿಗೆ ಸುಲಭವಾಗಿ ಕಿವಿಗೊಡುತ್ತಿರಲಿಲ್ಲವೆಂದು ತೋರುತ್ತದೆ. ಕಿವುಡರನ್ನೂ ಕಿವಿಗೊಡುವಂತೆ ಮಾಡಬೇಕಾಗಿದ್ದರೆ ಅಂಬಿಗರ ಚೌಡಯ್ಯನ ಬಲ್ಸರಿಯಂತಹ ನುಡಿಗಣೆಗಳೇ ಬೇಕಾಗಿದ್ದುವೆಂದು ತೋರುತ್ತದೆ.

ಅಂದಿನ ವೀರಶೈವ ಸಮಾಜದಲ್ಲಿ ಹಳದು ಹೊಸದರ ಕೂಟದಲ್ಲಿ, ಹಳೆಯುದನ್ನು ಬಿಡದ, ಹೊಸದನ್ನು ಸಂಪೂರ್ಣವಾಗಿ ತೊಡೆದ ಅಳಿದೀಕ್ಷಿತರಿದ್ದರೆಂಬುದು ಸಾಮಾನ್ಯವಾಗಿ ತಿಳಿದಿರುವ ಸಂಗತಿ. ಇಷ್ಟಲಿಂಗಧಾರಿಗಳಾದ ಮೇಲೆಯೂ ಹಳೆಯ ಮತದ ಕಾಳಿ–ಭೂತ–ಬೆಂತರಗಳನ್ನು ಬಲಿಪೂಜೆಗಳಿಂದ ಅರ್ಚಿಸುತ್ತ, ಇನ್ನೂ ಅನೇಕ ವಿಕಾರವಿಧಾನಗಳನ್ನು ಅನುಸರಿಸುತ್ತಿದ್ದವರನ್ನು ಕಂಡು ಚೌಡಯ್ಯನಿಗೆ ತುಂಬ ರೇಗಿರಬೇಕು. ಅವರನ್ನು ಕುರಿತು—

ಬೆಟ್ಟದ ಲಿಂಗವ ಹಿರಿದುಮಾಡಿ ತನ್ನ ಇಷ್ಟಲಿಂಗವ ಕಿರಿದು
ಮಾಡುವ ಮೂಳ ಹೊಲೆಯರಿರಾ, ಅಣುರೇಣುತೃಣಕಾಷ್ಠ
ಮೊದಲಾದ ಬ್ರಹ್ಮಾಂಡ ಪರಿಪೂರ್ಣವಾದ ಮಹಾಲಿಂಗವೇ ಅಂಗಕ್ಕೆ
ಗುರುವು ಎಂದು ಸಂಬಂಧಿಸಿ ಸರ್ವಸಕಲವ ತೋರಿದ ಬಳಿಕ ಇಂತಪ್ಪ
ಮೋಕ್ಷಕ್ಕೆ ಕಾರಣವಾದ ಲಿಂಗವನು ಅಡಿಮಾಡಿ ನಟ್ಟ ಕಲ್ಲಿಂಗೆ ಅಡ್ಡ
ಬೀಳುವ ಹೊಲೆಯರಿಗೆ ಲಿಂಗವ ಕಟ್ಟುವುದು ಕಿರಿದು. ಗೊಡ್ಡೆಮ್ಮೆಗೆ
ಲಿಂಗವಕಟ್ಟುವುದು ಕರಲೇಸು. ಇಂಥ ಮೂಳ ಹೊಲೆಯರು ಶಿವ
ಭಕ್ತರೆಂದು ನುಡಿವ ಭ್ರಷ್ಟರನು ಕತ್ತೆಯೇರಿಸಿ ಕೆರವಿನಟ್ಟೆಯಲಿ
ಹೊಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು[ವ. ೬೧]

ಹೀಗೆಂದು ಟೀಕಿಸುತ್ತಾನೆ. ನೇಮಸ್ತರನ್ನು ಕಂಡು—

ನೇಮಸ್ತನೆಂಬುವ ಸ್ತ್ರೀಕಾರ. ಶೀಲವಂತನೆಂಬುವ ಸಂದೇಹಿ.
ಭಾಷೆವಂತನೆಂಬುವ ಬ್ರಹ್ಮೇತಿಕಾರ ಇವರು ಮೂವರು ಕುಳ್ಳಿ
ರ್ದಲ್ಲಿ ಕುಳ್ಳಿರಲಾಗದು. ಇವರು ಹೋದ ಬಟ್ಟೆಯಲ್ಲಿ ಹೋಗಲಾ
ಗದು ಇವರು ಮೂವರಿಗೂ ಗುರುವಿಲ್ಲ, ಲಿಂಗ ವಿಲ್ಲೆಂದಾತ
ನಂಬಿಗರ ಚೌಡಯ್ಯ [ವ. ೮೪]

ವೆಂದು ಖಂಡಿಸುತ್ತಾನೆ. ‘ಜಿಹ್ವಾಲಂಪಟರಾಗಿ ಅನಾಚಾರದಲ್ಲಿ ಉದರವ ಹೊರೆದು ಬದುಕುವ’ ಭಕ್ತವೇಷಿಗಳನ್ನು, ಅವರ ಅರ್ಚನೆಯ ವಿಧಾನವನ್ನು ಕಂಡು

ಹೃದಯದಲಿದ್ದ ಪತ್ರ ಪುಷ್ಪಗಳಿಗೆ ಹೋಗುವ ಅಣ್ಣಗಳು
ನೀವು ಕೇಳಿರೋ! ನೀವು ಗಿಡದ ಪ್ರಾಣಿಗಳೋ? ದಾಯಾದಿ
ಗಳೋ? [ವ. ೧೬೮].
ಆರಕ್ಯಾರು ಬಿತ್ತಿದ್ದ ಗಿಡದ ಹೂವನೇ ಕೊಯ್ದು, ಊರಲ್ಲಿ
ಕಟ್ಟಿದ ನೀರನೆ ತಂದು, ನಾಡೆಲ್ಲ ನೋಡಲೆಂದು ಪೂಜಿ
ಸುವ ಪುಣ್ಯವು ಆ ಹೂವಿಗೋ? ಆ ನೀರಿಗೋ? ನಾಡೆಲ್ಲ
ನೋಡಲೆಂದು ಪೂಜಿಸಿದಾತಗೋ? ........ [ವ. ೫೧]

ಎಂದು ಪ್ರಶ್ನಿಸುತ್ತಾನೆ.

ಅಂದು ‘ತುತ್ತಿನಾಸೆಗೆ ಲಿಂಗವ ಕೊಟ್ಟು ಹೋಗುವ’ ‘ಗುರು’ ಗಳಿದ್ದರೆಂದು ತೋರುತ್ತದೆ. ಈ ಊರಿನಲ್ಲಿ ಕೆಟ್ಟವ ನೆನಿಸಿಕೊಂಡರೂ, ಮುಂದಿನ ಊರಿನಲ್ಲಿ ಒಳ್ಳೆಯ ಹೆಸರನ್ನು ಗಳಿಸುವ ಸಾಮರ್ಥ್ಯವುಳ್ಳ, ‘ಬಿದ್ದಬಿದ್ದು ಶಿಷ್ಯನ ಮಾಡಿಕೊಂಬ ದಡ್ಡಪ್ರಾಣಿಗಳು’ ‘ಅಯ್ಯಾ ನಾವು ವಿರಕ್ತರು, ಚರಮೂರ್ತಿಗಳು’ ಎಂದು ಹೇಳಿಕೊಂಡು ‘ಕಾಮನಾಟದಲ್ಲಿ ಸಿಲುಕಿ ಮಾತಿನಲ್ಲಿ ನೀತಿಯ ನೆರೆಯುತ್ತ’ ತಾವು ಶಿವಭಕ್ತರೆಂದು “ಉಚ್ಚಂಗೀ ದುರ್ಗಗೆ ಬಿಟ್ಟ ಪೋತರಾಜನಂತೆ ನಾರುಮಾರು ಜಡೆಗಳ ಬಿಟ್ಟು ಆಡಿನೊಳಗಿರುವ ಹೋತನಂತೆ ಮೊಳ ಮೊಳ ಗಡ್ಡಗಳ ಬಿಟ್ಟು” ‘ಸಂಸ್ಕೃತ’ (ಗೀರ್ವಾಣ) ಭಾಷೆಯ ಕಲಿತು ಮಂತ್ರ ತಂತ್ರಗಳಿಂದ ಜನರನ್ನು ಮರುಳು ಮಾಡಿ ‘ಕೋಟಿಟ್ಟೆಡೆ ಕೋಳಿ ಕೋರಡಿಟ್ಟೆಡೆ ಜೋಗಿ’ [ವ. ೯೩೮] ಹಣವನ್ನು ದುರ್ವಿನಿಯೋಗ ಮಾಡುವವರನ್ನು ಕಂಡು ಚೆನ್ನಾಗಿ ಬಯ್ಯುತ್ತಾನೆ. ಕೆಲವರು ದೊಡ್ಡ ದೊಡ್ಡ ಶೆಟ್ಟಿಗಳನ್ನು ಕಂಡು ಅಡ್ಡಗಟ್ಟಿ ಹೋಗಿ ‘ಶರಣಾರ್ಥಿ’ ಎಂದು ‘ತಮ್ಮ ಮಠಕ್ಕೆ ಬನ್ನಿ ಹಿರಿಯರೇ’ ಎನ್ನುವರಂತೆ! ನಿಜವಾದ ಶರಣ ತಾನಾಗಿ ಹೋಗಿ ‘ಶರಣಾರ್ಥಿ’ ಎಂದರೆ ಕೇಳಿದರೂ ಕೇಳದವರಂತೆ ಅಡ್ಡಮೋರೆಯನ್ನಿಕ್ಕಿಕೊಂಡು ಹೋಗುವರಂತೆ! ಇಂತಹವರನ್ನು ನಿರಂಜನ ಜಂಗಮಲಿಂಗ ದೇವರೆಂದು ಕರೆತಂದು ಪೂಜಿಸುವ ಭಕ್ತನಿಗೆ, ಪೂಜಿಸಿಕೊಂಡವನಿಗೆ ಇಬ್ಬರಿಗೂ ಚೌಡಯ್ಯ ಮಾಡಬೇಕೆನ್ನುವ ಶಿಕ್ಷೆ ಇದು— ಉಭಯತರ ಮೂಗ

ಸೀಳಿ ಮೆಣಸಿನ ಹಿಟ್ಟು ತುಪ್ಪವ ತುಂಬಿ ಪಡಿಹಾರಿಗಳ ಎಡವ ಪಾದುಕೆಯಿಂದ ಪಟಪಟನೆ ಹೊಡಿ [ವ. ೧೩೮]. ಎಂತಹ ಶಿಕ್ಷೆ! (ಎಲ್ಲಾದರೂ ಕಾರ್ಯರೂಪಕ್ಕೆ ತಂದರೆ ....... ? ದೇವರೇ ಕಾಪಾಡಬೇಕು ! )

ಒಂದು ಸಮಾಜದಲ್ಲಿ ಯಾವ ಬಗೆಯ ಜಾತಿಭೇದವನ್ನೂ ಎಣಿಸಬಾರದು. ಹಾಗೆ ಜಾತಿಭೇದವನ್ನೆಣಿಸುವವರು-ಅವರು ಯಾರಾದರೂ ಆಗಿರಲಿ ಅವರು ಶಿಕ್ಷಾರ್ಹರಂತೆ !

ಕುಲಹೀನ ಶಿಷ್ಯನಿಗೆ ಅನುಗ್ರಹವ ಮಾಡಿ ತಿರುಗಿ ಅವನ
ಮನೆಯಲ್ಲಿ ಉಣಬಾರದೆಂದು ಅಕ್ಕಿ ಕಣಕವ ಕೊಂಡು
ಹೋಗುವ ಗುರುವನು ಕಂಡರೆ ಕೆಡವಿಹಾಕಿ ಮೂಗನೇ
ಕೊಯ್ದು ಇಟ್ಟಂಗಿಯ ಕಲ್ಲಿಲೆ ಸಾಸಿವೆಯ ತಿಕ್ಕಿ ಹಿಟ್ಟನೆ
ತಳಿದು ಮೇಲೆ ನಿಂಬಿಯ ಹುಳಿಯನೆ ಹಿಂಡಿ ಪಡುವಲ
ಗಾಳಿಗೆ ಹಿಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ. [ವ. ೧೪೨]

ಇದು ಚೌಡಯ್ಯನ ನಾಲಿಗೆಯ ಹರಿತ! ನುಡಿದರೆ "ಏಟೊಂದು ತುಂಡೆರಡು" ಎಂಬ ರೀತಿಯದು. ಆದರೆ ಸ್ವಮತ ಪ್ರಚಾರೋತ್ಸಾಹದಲ್ಲಿ ಕೆಲವು ಕಡೆ ಚೌಡಯ್ಯ ಬಹಳ ಕೆಳಮಟ್ಟಕ್ಕೆ ಇಳಿಯುತ್ತಾನೆ. ಕೆಲವು ವೇಳೆ ತಾನು ಏನು ಹೇಳುತ್ತೇನೆಂಬುದರ ಅರಿವೇ ಅವನಿಗಿರುವುದಿಲ್ಲವೆಂದು ತೋರುತ್ತದೆ.

ನಾಲ್ಕು ವೇದವನೋದಿದವರ ಮನೆಯ ಬೋನವ ಶಿವ
ಭಕ್ತರ ಮನೆಯ ನಾಯಿ ಮೂಸಿ ನೋಡಲಾಗದು. ಸಾ
ಮವೇದಿ ಹೋಗುತಿರಲು ಶ್ವಪಚಯ್ಯಗಳು
ತವ ಪ್ರಸಾದುಕದಿಂದ ಪಾಕವ ಮುಚ್ಚಿದರು. [ವ. ೭]
ಕಲ್ಲದೇವರ ಪೂಜಿಸಿ ಕಲಿಯುಗದಿ ಕತ್ತೆಗಳಾಗಿ ಹುಟ್ಟಿದರು....[ವ.೮]

ಹೀಗೆ ಹೇಳುವಾಗ ಚೌಡಯ್ಯ ಕೇವಲ ಉದ್ರೇಕದಿಂದ ಹೇಳಿರುವನೋ, ಪ್ರಜ್ಞಾಪೂರ್ವಕವಾಗಿ ಹೇಳಿರುವನೋ-ಹೇಳುವದು ಕಷ್ಟ. ಇವೆಲ್ಲಕ್ಕೂ ಸಮಾಧಾನ ಹೇಳಿ ಮೆಚ್ಚಿಸುವುದು ಸಾಧ್ಯವಿಲ್ಲವಾದರೂ-ಅಂದಿನ ವಾತಾವರಣದ ಪ್ರವಾಹದಲ್ಲಿ ಸಿಕ್ಕಿದ ಮಹಾಪುರುಷರನೇಕರೂ ಸಹ ಸ್ವಮತ ಪ್ರತಿಷ್ಠೆಯ ಅವಸರದಲ್ಲಿ ಅನ್ಯಮತದೂಷಣೆಯನ್ನು ಮಾಡಿರುವರೆಂದ ಮೇಲೆ, ನಯವಿನಯವನ್ನರಿಯದ, ಸುಸಂಸ್ಕೃತನಲ್ಲದ "ಅಂಬಿಗರ

ಚೌಡಯ್ಯ" ಈ ರೀತಿ ಒರಟಾಗಿ ಮಾತನಾಡುವುದು ಅಷ್ಟೇನು ಟೀಕೆಗೆ ಅರ್ಹವಲ್ಲವೆಂದು ತೋರುತ್ತದೆ.

ಅಂಬಿಗರ ಚೌಡಯ್ಯನವರು ಸಂಪೂರ್ಣ ಸಿದ್ಧವಾಣಿಯಲ್ಲದಿದ್ದರೂ, ಅವನದು ಅನುಭಾವಿಯ ಅಧಿಕಾರವಾಣಿ. ಅವನ ವ್ಯಕ್ತಿತ್ವ ನಮಗೆ-ಬಸವಣ್ಣನವರ ಅಥವಾ ಅಕ್ಕನವರ ವಚನಗಳಿಂದ ಅವರವರ ವ್ಯಕ್ತಿತ್ವ ಸ್ಪಷ್ಟವಾಗಿ ಮೂಡುವಂತೆ-ಇವನ ವಚನಗಳಿಂದ ಸ್ಪಷ್ಟವಾಗಿ ಮೂಡುವುದಿಲ್ಲ. ಒಟ್ಟಿನಲ್ಲಿ ಅವನ ಭಾಷೆಯಿಂದ, ಅವನ ವಚನಗಳ ಶೈಲಿಯಿಂದ, ಅವನ ಆಲೋಚನೆಗಳ ಸ್ವರೂಪದಿಂದ-ಅವನೊಬ್ಬ ನಿಷ್ಠುರ ಪ್ರಕೃತಿಯ, ಕೆಚ್ಚೆದೆಯ ಒರಟು ವಚನಕಾರ. ಕೊಂಕುಮರೆ ದೋಷಗಳನ್ನು ಧೈರ್ಯವಾಗಿ ಖಂಡಿಸುವ ಸತ್ಯವಾದಿ ಎಂಬುದು ಸ್ಪಷ್ಟವಾಗುತ್ತದೆ. ಇವನು ಯಾರನ್ನಾದರೂ, ಅವರು ಎಂತಹವರೇ ಆಗಿರಲಿ, ಟೀಕಿಸದೆ ಬಿಡುವುದಿಲ್ಲ. ಇವನು ಅನುಭವ ಮಂಟಪದ ಮಹಾಪುರುಷರಿಗೆ ಒಂದು ಸರ್ಪ ಕಾವಲು! ಬಸವಣ್ಣ ಮೊದಲಾದ ಮಹಾಪುರುಷರಲ್ಲಿ ಕಿಂಚಿತ್ತಾದರೂ ದೋಷಗಳಿದ್ದಿದ್ದರೆ. ಚೌಡಯ್ಯ ನಿರ್ಭಯವಾಗಿ ಬಯಲಿಗೆಳೆದು ಬಿಡುತ್ತಿದ್ದ. ಇದರಿಂದ ಬಸವಣ್ಣ, ಪ್ರಭುದೇವರು ಮೊದಲಾದವರು ನಿಜವಾಗಿಯೂ ಮಹಾವ್ಯಕ್ತಿಗಳು ಎಂಬುದು ಸ್ಪಷ್ಟವಾಗುತ್ತದೆ. ಅಂಬಿಗರ ಚೌಡಯ್ಯನ ವಚನಗಳಿಂದ ನಮಗೆ ಚಿತ್ರಗತವಾಗುವ ಸಮಾಜದ ಚಿತ್ರ ಬೇರೆಯವರ ವಚನಗಳಿಂದ ಅಷ್ಟು ಸ್ಪಷ್ಟವಾಗಲಾರದೆನ್ನಿಸುತ್ತದೆ. ಇವನ ವಚನಗಳಲ್ಲಿ 'ಶಿವಶರಣ' ನ ಮೊರಶದ ಜೊತೆಗೆ ಸುಧಾರಕನ ಕಟು ಟೀಕೆಯೂ ಕೇಳಿಬರುತ್ತದೆ. ಇವನು ನಿಜವಾಗಿಯೂ 'ನ್ಯಾಯನಿಷ್ಠುರ ದಯಾ ದಾಕ್ಷಿಣ್ಯ ಪರನಲ್ಲ' ಅವನ ವಚನಗಳು 'ಅನರ್ಥಸಾಧನ' ವಾದ ಕೋಪದಿಂದ ಹೊರ ಹೊರಟವಲ್ಲ. ಸದರ್ಥ ಸಾಧಕವಾದ ಸತ್ಕೋಪದಿಂದ ಹೊಮ್ಮಿದುವುಗಳು. ಇವನ ಬಾಯಿಗೆ ಬಂದುದನ್ನು, ಅದು ತಪ್ಪೋ ಸರಿಯೋ ನಿರರ್ಗಳವಾಗಿ ಒದರಿಬಿಡುತ್ತಾನೆ. ಕನ್ನಡದಲ್ಲಿ, ಈ ಬಗೆಯ ಧಿಟ್ಟತನದಿಂದ ಟೀಕಿಸಿದವರು ಇಬ್ಬರುಮಾತ್ರ — ಒಬ್ಬ ಸಿಡಿಲು ನುಡಿಯ ಸರ್ವಜ್ಞ; ಇನ್ನೊಬ್ಬ ಅಂಬಿಗರ ಚೌಡಯ್ಯ. ನಿಜವಾಗಿಯೂ ಅಂಬಿಗರ ಚೌಡಯ್ಯ ವಚನಕಾರರಲ್ಲಿ ಒಬ್ಬ ಕ್ರಾಂತಿ ಪುರುಷ, ನಿಷ್ಠುರ ಮನುಜ.

---

# ಬಾಳಿನ ಬೆಳಕು.

ಬರೆದವರು— ಶ್ರೀಯುತ ಎಂ ದೊಡ್ಡಯ್ಯನವರು.
ಮು. ನಾಗರಹಾಳು ತಾಲೂಕ ಶಿರಗುಪ್ಪ ಜಿ ಬಳ್ಳಾರಿ.

ಈಶ್ವರನು ದೇಹಾದಿ ಪ್ರಪಂಚವನ್ನು ಸೃಷ್ಟಿಸಿದ್ದು ಜೀವಿಗಳ ಹಿತಕ್ಕೋಸ್ಕರವಲ್ಲದೆ ನಿರರ್ಥಕವಲ್ಲ. ಆದ್ದರಿಂದ ದೇಹಾದಿ ಪ್ರಪಂಚಗಳು ಮಿಥ್ಯಾ, ತುಚ್ಛಾ, ಬರೀ ತೋರ್ಕೆ, ಹೀಗೆ ಹೇಳುವುದು ಅದೊಂದು ವಿಧವಾದ ಬೋಧ ಸೌಕರ್ಯವೇ ಹೊರತು ನಿಜವಲ್ಲ. ಇದುವೇ ನಿಜವಾಗಿದ್ದರೆ, ತುಚ್ಛ, ಅನಿರ್ವಾಚ್ಯ, ಮಿಥ್ಯಾ, ಸಂಬಂಧವಾದ ಜಗತ್ತು, ದೇಹ, ಜೀವ, ಇವುಗಳನ್ನು ಸೃಷ್ಟಿಸಬೇಕಾಗಿದ್ದಾಗ್ಯೆ, ಅನಿಮಿತ್ತಬಂಧು, ಅವ್ಯಾಜ ಕರುಣಾಸಿಂಧು ಎನಿಪ ಈಶ್ವರನು ಹೀಗೆ ಮೋಸ ಮಾಡುತ್ತಿರುವನೇ? ಇಲ್ಲ. ಸತ್ಯಸ್ವರೂಪನಾದ ಶಿವನು ಪ್ರಸಾದಪ್ರಪಂಚ, ಪ್ರಸಾದಕಾಯ, ಪ್ರಸಾದ ಭೋಗಭಾಗ್ಯಗಳನ್ನು, ಜೀವಿಗಳ ಹಿತದೃಷ್ಟಿಯಿಂದಲೇ ನಿರ್ಮಿಸಿರುವನು.

ಅಂದ ಬಳಿಕ ದೇಹಾದಿಪ್ರಪಂಚವು ಜೀವನ ಅಧಿಷ್ಠಾನ (ಮೂಲ) ಸ್ವರೂಪವನ್ನು ಸಾಕ್ಷಾತ್ಕಾರಮಾಡಿಕೊಳ್ಳಲಿಕ್ಕೆ ಪ್ರಥಮ ಸೋಪಾನವೆಂದು ಶಿವಶರಣರ ಅಮರವಾಣಿ ಮತ್ತು ಪ್ರಕೃತಿಶಾಸ್ತ್ರದ ದೃಷ್ಟಿಯಿಂದ ಪರಿಕಿಸಿದರೂ ಕೂಡ ಮಿಥ್ಯೆ ಎಂಬ ಅಭಿಪ್ರಾಯವಾಗುವದಿಲ್ಲ. ಈ ವಿಷಯದಲ್ಲಿ ಭಗವದ್ಗೀತಾ ಶ್ಲೋಕಃ—"ಅವ್ಯಕ್ತಾದೀನಿ ಭೂತಾನಿ, ವ್ಯಕ್ತಮಧ್ಯಾನಿ ಭಾರತ ॥ ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿವೇದನಾ ॥" ಎಂದು ಗೀತೆಯಲ್ಲಿ ಹೇಳಲು ಕಾರಣವಿರುತ್ತಿರಲಿಲ್ಲ. ಮೂಲಸ್ವರೂಪದಲ್ಲಿ ಸಕಲಭೂತಗಳು ಕಾಣದೆ ಇರುತ್ತವೆ. ಪುನಃ ಮಧ್ಯದಲ್ಲಿ ಕಾಣಿಸಿಕೊಳ್ಳುತ್ತವೆ. ಅಂತ್ಯದಲ್ಲಿ ಅಡಗುತ್ತವೆ. ಅಂದಮೇಲೆ ಈ ವಿಷಯದಲ್ಲಿ ದುಃಖಿಸಲಿಕ್ಕೆ ಕಾರಣವೇ ಇಲ್ಲವೆಂದು ಅರ್ಜುನನನ್ನು ಕುರಿತು ಯೋಗೇಶ್ವರನಾದ ಶ್ರೀ ಕೃಷ್ಣನು ಹೇಳಿರುವನು. ಮತ್ತೊಂದು ದೃಷ್ಟಾಂತಃ— ಸಾಮಾನ್ಯವಾಗಿ ಜನರು ಜೋಳದ ಸಸಿಗಳನ್ನು ಕುರಿತು ನೋಡಿದಿರಾ, ಜೋಳ ಎಷ್ಟು ಚೆನ್ನಾಗಿದೆಂದು ಹೇಳುತ್ತಾರೆ! ಜೋಳದ ದಂಟನ್ನೇ ಜೋಳದ ದೃಷ್ಟಿಯಿಂದ ಜೋಳ ಎಂದು ಭಾವಿಸುವಂತೆ, ಮೊದಲು ಜೋಳದ ಬೀಜ ಮಧ್ಯದಲ್ಲಿ ದಂಟು, ಅಂತ್ಯದಲ್ಲಿ ಕೂಡ ಜೋಳ ಅಂದಾಗ ಬೀಜವೃಕ್ಷ

ನ್ಯಾಯದಂತೆ ಬೀಜದಲ್ಲಿ ವೃಕ್ಷವೂ, ವೃಕ್ಷದಲ್ಲಿ ಬೀಜವೂ, ಅವಿನಾ ಭಾವದಿಂದ ದೇಹಾದಿ ಪ್ರಪಂಚಗಳು ವ್ಯಕ್ತಾವ್ಯಕ್ತರೂಪದಿಂದ ಇವೆ ಎಂಬರ್ಥ ಸ್ವತಃ ಸಿದ್ಧವಾಗುತ್ತದೆ. ಹೀಗಿರುವಾಗ ಮಿಥ್ಯೆ ಎಂದು ಹೇಳಲಿಕ್ಕೆ ಅವಕಾಶವೇ ಇಲ್ಲ.

ಆದ್ದರಿಂದ ಶಿವಶರಣರು ಹೇಳುವದು ಸತ್ಯವೆಂದೇ ಅವರ ಸಿದ್ಧಾಂತ ದರ್ಶನ. ಇತರರು ಬರೀ ತೋರ್ಕೆ ಎಂದು ಹೇಳಿದ್ದು ಅದೊಂದು ವಿಧವಾದ ದರ್ಶನದ ದೃಷ್ಟಿ. ಹೇಗೆಂದರೆ, ಬೀಜ ನೋಡಿದಾಗ ವೃಕ್ಷ ಕಾಣಿಸುವದಿಲ್ಲವಷ್ಟೇ ? ಈ ಪ್ರತೀತಿಯಿಂದ ವೃಕ್ಷವೇ ಇಲ್ಲವೆಂದು ಅವರ ದೃಷ್ಟಿಕೋನವು. ಆದರೆ ಬೀಜವನ್ನು ಕುರಿತು ತುಸು ಮುಂದು ವಿಚಾರ ಮಾಡುತ್ತ ಹೋಗಿ ಅದರಲ್ಲಿ (ಬೀಜ ದಲ್ಲಿ ವೃಕ್ಷ ಉಂಟೆಂದು ಘರಿದರು ಶರಣರು. ಅಂದರೆ ಅವ್ಯಕ್ತ ಸ್ವರೂಪವಲ್ಲಿವೆ ಎಂಬರ್ಥ. ಕಾಣಿಸಿಕೊಳ್ಳದಿದ್ದಾಕ್ಷಣಕ್ಕೆ ಅಭಾವವೆಂಬರ್ಥವಲ್ಲ. ಭಾವಪದಾರ್ಥವೆಂದೇ ಅವರ ಅನುಭವ. ಈ ಸಿದ್ಧಾಂತ ಆಧುನಿಕ ಪ್ರಕೃತಿಶಾಸ್ತ್ರಕ್ಕೂ ಮಾನ್ಯವಿದೆ.

ಆದುದರಿಂದ ಈ ದೇಹಾದಿ ಪ್ರಪಂಚದ ಬಾಳು ಹಾಳು ಅಲ್ಲವೆಂದು ಶರಣರ ಸೊಳ್ನುಡಿಗಳು ವಿಪುಲವಾಗಿವೆ. ಅದರಮೇಲೆ ಜೀವನವೆಂದರೆ ನಿರರ್ಥಕವಲ್ಲ ಬಾಳು ಗೋಳು ಎಂದು ತಿಳಿಯುವದು ಸಾಮಾನ್ಯ ಜನರನ್ನು ಹಾಳು ಮಾಡುವದಲ್ಲದೆ ನಿಸ್ಸತ್ವರನ್ನಾಗಿ ಮಾಡಿ ಇಹಲೋಕದ ಜೀವನವನ್ನೇ ನೀರಸಮಾಡಿ ಹೇಡಿಗಳ ಗುಂಪನ್ನು ವೃದ್ಧಿಮಾಡಿದಂತಾಗುತ್ತದೆ.

"ಹಿಗ್ಗುವೆ ಯಾಕೋ ಈ ದೇಹಕ್ಕೆ" "ಮನುಜ ಶರೀರವಿದೇನು ಸುಖಾ" ಮುಂತಾದ ನುಡಿಗಳಿಂದ ಮನುಷ್ಯ ಜೀವನವನ್ನೇ ನೀರಸಗೊಳಿಸುವದು.

ಮತ್ತು "ಹೆಣ್ಣು ರಕ್ಕಸಿಯಲ್ಲದಿನ್ನುಂಟೆ" ಎಂಬ ಈ ನಿಷ್ಠುರದ ನುಡಿಗಳಿಂದ ಸ್ತ್ರೀ ಸಮಾಜವನ್ನು ಕೀಳತರವಾದುದೆಂದು ಪರಿಗಣಿಸಲಕ್ಕೆ ಬರುತ್ತದೆ.

ಆದರೆ ಮೇಲ್ಕಂಡ 'ಉಕ್ತಿಗಳನ್ನು ಶಿವಶರಣರು ಅಲ್ಲಗಳೆದಿರುವರು. ||ವಚನ|| "ಭೂಮಿ ಆಕಾಶ ಒಂದು ಜೀವನುದರ". ಶ್ರೀಮದಲ್ಲಮ ಪ್ರಭುದೇವರು ಹೇಳುವ ವಚನದಲ್ಲಿ "ಪಿಂಡಬ್ರಹ್ಮಾಂಡಯೋರೈಕ್ಯ" ಎಂಬ ಅರ್ಥವಿದೆ. ಮತ್ತು. "ತಾ ಮಾಡಿದ ಹೆಣ್ಣು ತಲೆಯನೇರಿತ್ತು ಹೆಣ್ಣು ಹೆಣ್ಣಲ್ಲ,

ಹೆಣ್ಣೆಂದರೆ ಕಪಿಲಸಿದ್ಧಮಲ್ಲಿಕಾರ್ಜುನ" ಎಂದು ಸಿದ್ಧರಾಮೇಶ್ವರ ದೇವರು ಹೇಳಿದ ವಚನವಿವೆ. "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ" ಇತ್ಯಾದಿ ಶಿವಶರಣರ ನುಡಿಗಳು ಹೇರಳವಾಗಿ ಸಿಕ್ಕುತ್ತಿವೆ.

ಆದ್ದರಿಂದ ಕಾಣುವ ಜಗದಾದಿಗಳ ಅಸ್ತಿತ್ವವನ್ನೇ ಅಲ್ಲಗಳೆಯಬಾರದೆಂದು ಸಿದ್ಧವಾಗುತ್ತಿದೆ. ಆದರೆ ಅಪರಿಮಿತವಾದ ಇಂದ್ರಿಯಭೋಗದಲ್ಲಿ ದೇವನನ್ನು ಅಲ್ಲಗಳೆಯುವ ಅತಿಭೋಗವಾದವೂ, ಜೀವನದಲ್ಲಿ ಸುಖವಿಲ್ಲವೆಂದು ಅದನ್ನು ಅಲ್ಲಗಳೆವ ಅತಿ ತ್ಯಾಗವಾದವೂ, ದೋಷದಿಂದ ಬೆರತವುಳೀ ಎಂದು ಶಿವಶರಣರಿಗೆ ತಿಳಿಯಿತು. ಜೀವನು ಇಂದ್ರಿಯಗಳ ಮುಖಾಂತರ ವ್ಯವಹರಿಸುವನು. ಆದ್ದರಿಂದ ಇಂದ್ರಿಯ ಭೋಗವನ್ನೇಕೆ ಅಲ್ಲಗಳೆಯುವದು ? ಹಿತವಾಗಿ ಮಿತವಾಗಿ ಇಂದ್ರಿಯ ಸುಖ ಬಳಸಲು ಬರುವುದಿಲ್ಲವೆಂದು ಅದಕ್ಕೆ ಅದದಾಳವನ್ನೇ ಹಚ್ಚುವದೇ ? ಜೀವನದ ಸೊಬಗನ್ನು ಸವಿಯಬೇಕು. ಅದರ ಸಾರ್ಥಕತೆಯಾಗಬೇಕು. ಎರಡೂ ಕೈಗೂಡಬೇಕು. ಈ ತೊಡಕಿನ ಸಮಸ್ಯೆ ಬಿಡಿಸಲು ಶಿವಶರಣರು ಸಮರ್ಥರಾದರು ಎಂದು ವೀರಶೈವ ದರ್ಶನಕಾರರು ಒಳ್ಳೇ ಮಾರ್ಮಿಕವಾಗಿ ಬರೆದಿದ್ದಾರೆ.

ಈ ಶಿವಶರಣರ ವಾದವು ಅತಿಭೋಗ, ಅತಿತ್ಯಾಗ, ಇವೆರಡೂ ಅಲ್ಲ. ತ್ಯಾಗ ಭೋಗಗಳ ಸಮನ್ವಯ ಯೋಗವು. ಇವರ ದರ್ಶನದ ಸಿದ್ಧಾಂತವಿದೆ. ಅಂದಬಳಿಕ ಜೀವನು ನಿರರ್ಥಕನಲ್ಲ, ಸಾರ್ಥಕವೆಂಬುದೇ ಈ ದರ್ಶನದ ತಿರುಳು. ಈ ಬಗೆಯ ವಚನ ಒಂದನ್ನು ಉದಾಹರಿಸುತ್ತೇನೆ.

ಪಂಚೇಂದ್ರಿಯ ಸಪ್ತಧಾತುವನತಿಗಳೆದಲ್ಲಿ ಫಲವೇನು ? ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ವಿಷಯವನತಿಗಳೆದಲ್ಲಿ ಫಲವೇನು ? ಇವೆಲ್ಲವ ಕೊಂದ ಪಾಪ ನಿಮ್ಮ ತಾಗುವದು ಗುಹೇಶ್ವರಾ" ಎಂಬ ಪ್ರಭುದೇವರ ವಚನವು ಹೇಳುವದೇನನ್ನು ? ಇಂದ್ರಿಯಗಳನ್ನು ಹಿತವಾಗಿ ಮಿತವಾಗಿ ಬಳಸಬೇಕು, ಬಾಳಿನ ಸಾರ್ಥಕತೆಯನ್ನು ಕಾಣಬೇಕು ಎಂಬುದನ್ನಲ್ಲವೇ ?

ಶಿವಶರಣರಿಗೆ ಪ್ರಪಂಚ, ಪಾರಮಾರ್ಥ ಎಂಬ ಭೇದವಿಲ್ಲ. ಪ್ರಪಂಚವೇ ಪಾರಮಾರ್ಥವಾಗಬೇಕು. ಇಹವೇ ಪರವಾಗಬೇಕು, ಮರ್ತ್ಯಲೋಕವೇ ಮಹಾಮನೆಯಾಗಬೇಕು. ಕರ್ಮಭೂಮಿಯು ಧರ್ಮಭೂಮಿ

ಯಾಗಬೇಕು, ಎಂಬುದೇ ಅವರ ಉಚ್ಚತಮವಾದ ಬಾಳಿನ ಗುಟ್ಟು. ಇದುವೇ ಸಮಸ್ತ ಮಾನವಕೋಟಿಗೆ ಈ ತತ್ವ ದಟ್ಟು. ಇದುವೇ ಸಾಧನದ ಗುರಿ.

ಮ. ಗಾಂಧೀಜಿಯವರ ಉಕ್ತಿಯು ಇದಕ್ಕೆ ಉದಾಹರಣೆಯಾಗಿದೆ. "ಉಣ್ಣಲು ಜೀವಿಸುತ್ತಿರುವೆವೋ? ಜೀವಿಸಲು ಉಣ್ಣುವೆವೋ?" ಎಂಬ ಪ್ರಶ್ನೆಯನ್ನು ಮುಂದರಿಸುತ್ತಾ, ಅಂದರೆ ಉಣ್ಣಲು ಕಾರಣವೇನು? ಜೀವಿಸಲಿಕ್ಕೆ. ಜೀವಿಸಲಿಕ್ಕೆ ಕಾರಣವೇನು? ಜೀವಾತ್ಮನ ಮೂಲಸ್ವರೂಪ ತಿಳಿಯಲಿಕ್ಕೆ, ತಿಳಿಯಲು ಪ್ರಯೋಜನವೇನು? ಲಿಂಗಾಂಗ ಸಾಮರಸ್ಯ ಸುಖವನ್ನು ಪಡೆಯಲಿಕ್ಕೆಂದು ಸ್ಪಷ್ಟವಾಗುತ್ತದೆ. ಅಲ್ಲದೆ ಉಣ್ಣಲಿಕ್ಕೆ ಜೀವಿಸುವದಲ್ಲ. ಹಾಗೆ ಜೀವಿಸುವದಾಗಿದ್ದರೆ ಪಶುಜೀವನವೆಂದೇ ತಾತ್ಪರ್ಯ. ಆದ್ದರಿಂದ ಬಾಳು ಸಾರ್ಥಕವಾಗಬೇಕಾಗಿದ್ದರೆ, ಸತ್ಯಶುದ್ಧ ಕಾಯಕ (ಉದ್ಯೋಗ ದಿಂದ ಗುರು, ಲಿಂಗ, ಜಂಗಮ ಗಳಿಗೆ, ತನು, ಮನ. ಧನ ಅರ್ಪಿಸಿ ದಾಸೋಹಂ ಭಾವನೆಯಿಂದ ಮಾಡಿದ ವ್ಯವಹಾರ ಕರ್ಮವೇ ಧರ್ಮವಾಗುತ್ತದೆ. ಭೋಗವೇ ಯೋಗವಾಗುತ್ತದೆಯೇ ಹೊರತು ಕೇವಲ ಸ್ವಾರ್ಥ ಪರವಾಗಿ ದೇಹೋಹಂ ಬುದ್ಧಿಯಿಂದ ವ್ಯವಹರಿಸಿದ ಉದ್ಯೋಗವೇ ನಿರುದ್ಯೋಗವೆನಿಸುತ್ತದೆ.

ಅಹಂಕಾರ ಮಮಕಾರಗಳೇ ಜನನ ಮರಣಾತ್ಮಕವಾದ ಸಂಸಾರ ದುಃಖ ಪರಂಪರೆಗೆ ಹೇತುವಾಗುತ್ತವೆ. ಇದೇ ವಿಷಯವನ್ನು ಕುರಿತು ಶ್ರೀಮನ್ನಿಜಗುಣ ಶಿವಯೋಗಿಗಳು "ಮಮಕಾರದಿಂದೆ ವ್ಯಕ್ತಿನ ಬಂಧ ಮುಂಟೇ," ಎಂದು ಹೇಳಿದುದು ಅಕ್ಷರಶಃ ನಿಜವಾಗಿ ತೋರುತ್ತದೆ. ಈ ಅಹಂಕಾರ ಮಮಕಾರ ನಿವೃತ್ತಿಯೇ ಮುಕ್ತಿ ಎಂದು ಅವರ ಅಭಿಪ್ರಾಯ.

ಆದರೆ ಶಿವಶರಣರು, ಕಾಯಾರ್ಪಣ, ಕರಣಾರ್ಪಣ. ಭಾವಾರ್ಪಣ ಎಂಬ ದಿವ್ಯಯೋಗದಿಂದ ಸರ್ವಾರ್ಪಣ ಮಾಡಿ ಶಿವ ಸುಖವನ್ನು ಸೂರೆ ಮಾಡಿದರು. "ಆರಂಬ ಮಾಡುವೆನಯ್ಯ ಬೆಹಹಾರ ಗುರುಪೂಜೆಗೆಂದು, ಆರಂಬ ಮಾಡುವೆನಯ್ಯಾ ಲಿಂಗಪೂಜೆಗೆಂದು, ಆರಂಬ ಮಾಡುವೆನಯ್ಯಾ ಜಂಗಮಾರ್ಚನೆಗೆಂದು." ವ್ಯವಹಾರದ ವಿಷಯದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಸ್ವಾರ್ಥಕ್ಕೋಸುಗ ಮಾಡುವದಿಲ್ಲವೆಂದು ಜಗದಣ್ಣ ಬಸವಣ್ಣನವರ ಅಮೃತವಾಣಿಯಿದೆ. ಈ ವ್ಯವಹಾರವನ್ನೆಲ್ಲ ಬಿಟ್ಟು ಕಾವಿಶಾಟಿಯನ್ನು ಹೊದ್ದು ಗಿರಿಗುಹಾಂತರದಲ್ಲಿದ್ದು ಜೀವನ್ಮುಕ್ತಿಯನ್ನು ಹೊಂದಬೇಕೆಂದು ಅವರ ಉಕ್ತಿಗಳಲ್ಲಿ ಇಲ್ಲವೇ ಇಲ್ಲ.

ಮತಾಂತರದಲ್ಲಿ ಈ ಸರ್ವಸಂಗ ಪರಿತ್ಯಾಗಾತ್ಮಕವಾದ ಧರ್ಮವಿರ ಬಹುದು. ಅದು ಇಲ್ಲಿ ಹೊಂದುಗೆಯಾಗಲು ಸ್ಥಾನವಿಲ್ಲ. ಮತ್ತು ಪ್ರಭು ಲಿಂಗಲೀಲೆಯಲ್ಲಿ "ಬೇಕು, ಬೇಡ, ಈ ಎರಡೂ ಭವದ ಬೀಜ ಎಂದೇ ಉಲ್ಲೇಖಿಸಲಿದೆ. ಅಂದರೆ ಬೇಕು ಎಂಬುದು ಆಶೆ. ಬೇಡವೆಂಬುದು ನಿರಾಶೆ, ಈ ಆಶೆ ನಿರಾಶೆಗಳೆರಡೂ ಭವಕ್ಕೆ ಕಾರಣವೆಂದು ಅವರ ತಿಳಿಗ ಪೊಳೆ ಯಿತು. ಬೇಕು ಎಂಬುದು ಗೃಹಸ್ಥರ ಸ್ವಭಾವ. ಬೇಡ ಎಂಬುದು ಸನ್ಯಾಸಿಗಳ ವೃತ್ತಿ. ಇವೆರಡೂ ದೋಷಪೂರಿತವಾದವುಗಳೇ ಹೊರತು ನಿರ್ದೋಷವಾದವುಗಳಲ್ಲ

ಬೇಕು ಎಂದರೆ ರಾಗ, ಬೇಡವೆಂದರೆ ದ್ವೇಷ. ಅಂದ ಮೇಲೆ ರಾಗ ದ್ವೇಷಗಳ ಅಭಾವವೇ ಈಶ್ವರಾನುಗ್ರಹವೆಂದು ಸಕಲ ಗುರುಶಾಸ್ತ್ರಾದಿಗಳ ಅಭಿಮತವಿದೆ ಇದೇ ವಿಷಯವನ್ನು ಕುರಿತು ಜಗದ್ಗೀತೆಯಲ್ಲಿ ನಿಷ್ಕಾಮ ಯೋಗದ ವ್ಯವಸ್ಥೆ ಮಾಡಲಾಗಿದೆ. ಇದಕ್ಕಿಂತಲೂ ಒಂದೆರಡು ಹೆಜ್ಜೆಗಳು ಶರಣರು ಮುಂದಿಟ್ಟಿರುವರು. ಅದು ಹೇಗೆ ? ನಿಷ್ಕಾಮ ಕರ್ಮದ ತಾತ್ಪ ರ್ಯದಲ್ಲಿ ಅಹಂ ಬುದ್ಧಿಯುಂಟೆಂಬುದಾಗಿ ಹೊಳೆಯುತ್ತದೆ. ಆತ್ಮಾರ್ಪಣ ಮಾಡಿದ ಶಿವಶರಣರ ಕರ್ಮದಲ್ಲಿ ಇದರ ಬೀಜವೇ ಇಲ್ಲದಂತಾಗಿದೆ. ಅದೇ ಕೆಂದರೆ, ನಾನು ಮಾಡುವನಲ್ಲನೆಂಬ ಭಾವನೆಯಿಂದ ಮೊದಲಾಗಿರುತ್ತದೆ. ಅಂದ ಬಳಿಕ ನಾನೆಂಬ ಬುದ್ಧಿ ಬೀಜವು ಉರಿದು ಹೋಗಿದೆ. ಎಂಬರ್ಥ- "ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ, ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ, ಮಾಡುವ ನೀಡುವ ನಿಜಗುಣವುಳ್ಳವರಲ್ಲ, ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವಾ " ಹೀಗೆಂದು ಬಸವಣ್ಣನವರ ಅಮರವಾಣಿಯಿದೆ ಇಂತಹ ಅನುಪಮವಾದ ಲಿಂಗಾಂಗ ಸಾಮರಸ್ಯಯೋಗದಿಂದ ಬಾಳುವೆ ಮಾಡುತ್ತಿರುವುದೇ ಹೊರತು ಪಶುತನದ ಪ್ರವೃತ್ತಿಯಲ್ಲ. ಪತಿತನದ ಪ್ರಕೃತಿಯೇ ಇದು. ಹೀಗೆ ಬಾಳ್ವೆ ಮಾಡಿದರೆ ಬಾಳು. ಇದನ್ನೇ ಕುರಿತು ಶ್ರೀ ಷಡಕ್ಷರ ಕವಿಗಳು ಶಿವಭಕ್ತಿಯಿಲ್ಲದ ಬಾಳು ಅದಿಲ್ಲದಿದ್ದರೆ ಹಾಳು ಅಥವಾ ಕತ್ತಲಿನ ಬಾಳು ಎಂದೆನಿಸುತ್ತದೆ.

ಬಾಳು ಎಂದರೆ ಜೀವನು, ಬೆಳಕು ಎಂದರೆ ದೇವನು. ದೇವ ಜೀವರೊಂದುಗೂಟವೇ ಸಾಮರಸ್ಯ ಅಥವಾ ಲಿಂಗಾಂಗ ಸಾಮರಸ್ಯ ದರ್ಶನದ ಒಳದಿರಳು. ಇದುವೇ ಬಾಳಿನ ಬೆಳಕು

---

# "ಮನುಷ್ಯತ್ವದ ವಿಕಾಸ"

(ಲೇಖಕ:— ಶ್ರೀ ಅನ್ನದಾನೀಶ್ವರ ವಿರಕ್ತಮಠ ಸಾ. ರಾಣೇಬಿನ್ನೂರ.)

"ತನುವಿನ ವಿಕಾರವ ಕತ್ತಲೆಯುಲ್ಲಿ ಸಿಲ್ಕಿ
ಮಣ್ಣುಮುಸಿಯಾಗಿ ಬಣ್ಣಗೆಟ್ಟೆನಯ್ಯಾ.
ಮನದ ವಿಕಾರದ ಪೂರವೆಯುಲ್ಲಿ ಸಿಲ್ಕಿ
ಕಂಗೆಟ್ಟು ಕಳವಳಿಸಿ ತೊಳಲಿ ಬಳಲಿವೆನಯ್ಯಾ.
ತನುಮನದ ವಿಕಾರವ ಮಾಣಿಸಿ
ನಿಮ್ಮ ಭಕ್ತಿಯ ವಿಕಾಸದಲ್ಲಿರಿಸಿ
ಸಲಹಯ್ಯ ಎನ್ನ ಅಖಂಡೇಶ್ವರಾ."

ಈ ವಚನದಲ್ಲಿ ಷಣ್ಮುಖ ಶರಣರು ಮಾನವತೆಯ ವಿಕಾಸನ ಮಾರ್ಗವನ್ನು ತೋರಿಸಿದ್ದಾರೆ. ಮಾನವನ ವಿಕಾಸವು ಏಕೆ ಆಗುವದಿಲ್ಲವೆಂಬ ಸಂಗತಿಯನ್ನು ಮೊದಲು ಸೂಚಿಸಿದ್ದಾರೆ ವಿಕಾಸಕ್ಕೆ ವಿರೋಧಿಯಾದ ಕಾರಣಗಳನ್ನು ನಿವಾರಿಸುವ ದಿವ್ಯೋಪಾಯವನ್ನು ಕೊನೆಗೆ ಸೂತ್ರರೂಪವಾಗಿ ತಿಳಿಸಿದ್ದಾರೆ.

ತನುವಿನ ವಿಕಾರವು ಮನುಷ್ಯನನ್ನು ಅಂಧಂತಮಸ್ಸಿನಲ್ಲಿ ಒಗೆಯುತ್ತದೆ. ಅಜ್ಞಾನದ ಮಡುವಿನಲ್ಲಿ ಮುಳುಗಿಸಿ ದುಃಖಕ್ಕೆ ಈಡು ಮಾಡುವದು. ತನುವಿನ ವಿಕಾರವು ಮನುಷ್ಯನ ಬಣ್ಣವನ್ನು ಕೆಡಿಸುತ್ತದೆ. ದೇಹವು— ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯಗಳು— ತೇಜೋಹೀನವಾಗುತ್ತವೆ. ದೇಹೇಂದ್ರಿಯಗಳು ಶಿಥಿಲವಾಗಿ ಕಾಯಕ ಮಾಡಲಿಕ್ಕೆ ಅಶಕ್ತವಾಗುತ್ತವೆ. ಜೀವನವು ಬೇಸರವಾಗಿ ಆಲಸ್ಯದಿಂದ ದಿನಗಳನ್ನು ತಳ್ಳುವಂತೆ ಮಾಡಿ ಮಾನವನನ್ನು ಆನಂದಕ್ಕೆ ಎರವು ಮಾಡುತ್ತದೆ. 'ಬಣ್ಣವುಳ್ಳ ಅರ್ಥಾತ್ ತೇಜಸ್ವಿಯಾದ, ಗಟ್ಟಿಯಾದ ಶರೀರವಿದ್ದರೆ ಕಾಯಕ ಮಾಡಿ ಉತ್ಸಾಹದಿಂದಲೂ ಆನಂದದಿಂದಲೂ ಜೀವನವನ್ನು ಸಾಗಿಸಲಿಕ್ಕೆ ಅನುವು ದೊರೆಯುತ್ತದೆ. ತನುವಿನ ವಿಕಾರವು ಭೌತಿಕ ಸುಖವನ್ನು ಸವಿಯುಲಿಕ್ಕೆ ಅಗತ್ಯವಾಗಿರುವ ಶಾರೀರಕ ಯೋಗ್ಯತೆಯನ್ನು ಹಾಳು ಮಾಡುತ್ತದೆ. ಆಲಸ್ಯ, ರೋಗ, ನಿರುದ್ಯೋಗಿತನ, ಅಶಕ್ತಿ, ಜಡತ್ವ, ಈ ಪ್ರಗತಿಯ ವೈರಿಗಳ ತವರುಮನೆಯು ತನುವಿಕಾರವು. ಮನವಿಕಾರವು ಮಾನವನ

ಅರುಹನ್ನು ಕಳೆಯುತ್ತದೆ. ಮರವೆಯನ್ನು ಹೆಚ್ಚಿಸುತ್ತದೆ. ಮನವಿಕಾರದಿಂದ ಕಣ್ಣು ಕೆಡುತ್ತವೆ. ಏಕೆಂದರೆ ನೇತ್ರದ ಸೂತ್ರದಲ್ಲಿ ಮನವು ಸುಳಿದಾಡುತ್ತಿರುವವು. ವಿಕಾರದ ಮನದಿಂದ ವಿಕಾರದ ಕಣ್ಣುಗಳು ರೂಪುಗೊಳ್ಳುತ್ತವೆ. ವಿಕಾರದ ಕಣ್ಣು ಅಥವಾ ದೃಷ್ಟಿಯುಳ್ಳ ಮಾನವನು ಕೃತ್ರಿಮ ನೀಚ ಕೃತಿಗಳಿಗೆ ಎಳಸುತ್ತಾನೆ. ಮನದ ವಿಕಾರದಿಂದ ಬುದ್ಧಿ, ಭಾವನೆಗಳು, ವಿಚಾರಗಳು, ವಿಕಾಸವಾಗುವದಿಲ್ಲ. ಇದು ಮಾನಸಶಾಸ್ತ್ರದ ಸಿದ್ಧಾಂತ.

ಅಂತಃಕರಣದ ಶಕ್ತಿಯು ಹೀನವಾದರೆ ಅಶಾಂತಿಯು ತಪ್ಪಿದ್ದಲ್ಲ. ಹೃದಯ ದಾರಿದ್ರ್ಯವು ಜಗತ್ತಿನ ಸುಖ ಶಾಂತಿಗಳನ್ನು ನಾಶಮಾಡುತ್ತದೆ. ಸಿರಿವಂತ ಹೃದಯವು ಶಾಂತಿ-ಸಮೃದ್ಧಿಗಳ ಉಗಮಸ್ಥಾನವು. ಕಳವಳಿಕೆ, ತೊಳಲಿಕೆ ಬಳಲಿಕೆಗಳು ಕಣ್ಣುಗೆಟ್ಟ ಗಾವಿಲರ, ಅಸಂಸ್ಕೃತರ, ಮನೋರೋಗಿಗಳ, ವೈಶಿಷ್ಟ್ಯಗಳು.

ಹಾಗಾದರೆ ಈ ತನುಮನ ವಿಕಾರಗಳನ್ನು ಕಳೆದುಕೊಳ್ಳುವ ಬಗೆ ಹೇಗೆ? ಅನುಭಾವದಿಂದ, ವಿಚಾರದಿಂದ, ವಿವೇಕದಿಂದ ಆಚಾರದಿಂದ ವಿಕಾರವನ್ನು ತೊಲಗಿಸಬಹುದು. ಇದು ಶರಣರ ಅಮರ ವಾಣಿ! "ಅಂಗಕ್ಕೆ ಆಚಾರವು ಚೆಲುವು! ಮನಕ್ಕೆ ಮಹಾನುಭಾವವೇ ಚೆಲುವು! ಆತ್ಮಕ್ಕೆ ಅರುಹೇ ಚೆಲುವು!" ಎಂಬ ಶರಣರ ಅನುಭವಾಮೃತವನ್ನು ನಮ್ಮ ಅಂತಃಕರಣದಲ್ಲಿ ತುಂಬಬೇಕು. ಅಂದರೆ ತುಂಬು ಜೀವನ, ಧ್ಯೇಯುವುಳ್ಳ ಜೀವನವು ಅಳವಡುವದು. ಇಂಥ ಉಚ್ಚ ಆದರ್ಶವು ಮನುಷ್ಯತ್ವದ ವಿಕಾಸಕ್ಕೆ ಅತ್ಯಗತ್ಯ!

ಶರೀರ ಸುಖ ಮತ್ತು ಮನಸ್ಸಿನ ಶಾಂತಿ — ಇವು ಪರಸ್ಪರಾವಲಂಬಿಗಳೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಶರೀರ ಸುಖವಾಗಿದ್ದರೆ ಶಾಂತಿಯು ಸುಲಭ ಸಾಧ್ಯ. ಶಾಂತಿಯು ಅಂತರಂಗದಲ್ಲಿದ್ದರೆ ಶರೀರ ಸುಖ ಪಡೆಯಲಿಕ್ಕೆ ಸುಲಭ ಸಾಧ್ಯ. ದೇಹ-ಮನಗಳಿಂದ ಯುಕ್ತನಾದವನೇ ಮನುಷ್ಯನೆಂದು ಪಾಶ್ಚಾತ್ಯರು ಹೇಳುತ್ತಾರೆ. ದೇಹ, ಮನ, ಆತ್ಮಗಳಿಂದ ಕೂಡಿದವನೇ ಮನುಷ್ಯನೆಂದು ಪೌರಸ್ತ್ಯರು ಅನ್ನುವರು. ದೇಹ, ಮನ, ಆತ್ಮಗಳ ವಿಕಾಸವೇ ಮನುಷ್ಯತ್ವದ ವಿಕಾಸ. ಇಂಥ ವಿಕಾಸವು ಪೂರ್ಣ ಭಕ್ತಿಯಿಂದ ಸಾಧ್ಯ!

**ಭಕ್ತಿಯು ವಿಕಾಸವೆಂದರೇನು ?**

ನಾಗರಿಕತೆಯಂತೆ ಭಕ್ತಿಯು ವಿಕಾಸವಾಗುತ್ತಾ ಬಂದಿದೆ. ಭಯದಲ್ಲಿ ಹುಟ್ಟಿ ಅಜ್ಞಾನದ ರೂಢಿಯಲ್ಲಿ ಪರಿಣಮಿಸಿತು ಅನಾಗರಿಕನ ಭಕ್ತಿ. ಚಿತ್ಕಲಾಚೈತನ್ಯದ ಶ್ರದ್ಧೆಯಲ್ಲಿ ಹುಟ್ಟಿ, ಜ್ಞಾನದಲ್ಲಿ ಬಳೆದು, ಸಮರಸಾನಂದದಲ್ಲಿ ಪರಿಣಮಿಸಿತು ಶರಣರ ಭಕ್ತಿ. ಶರಣನು ಸುಸಂಸ್ಕೃತನಾದ, ಚಿತ್ಕಲಾಚೈತನ್ಯದಲ್ಲಿ ಸಮರಸನಾದ ಮಹಾಜೀವಿಯು. ಇಂಥ ಮಹಾಜೀವಿಗಳೇ ಜನಜೀವನದ ಮಂದಿರವನ್ನು ಕಟ್ಟಿ, ಜನ ಜೀವನದ ಅಂತಃಪ್ರಭೆಯನ್ನು ಬೆಳಗಿಸಬಲ್ಲರು. ವೈಯ್ಯಕ್ತಿಕ ಜೀವನ ಮತ್ತು ಸಾಮಾಜಿಕ ಜೀವನಗಳ ಸಂಗಮದಲ್ಲಿ ಶರಣರ ಭಕ್ತಿಯು ವಿಕಾಸವಾಯಿತು. ಮಾನವತೆಯು ಅರಳಿತು. ದೇಹವೆಂಬ ದೇಗುಲದೊಳಗೆ ಭಾವ ಸಿಂಹಾಸನವ ಮಾಡಿ ಜೀವದೊಡೆಯನೊಡನೆ ಸಮರಸಹೊಂದಿ " ಜಗತ್ಕಲ್ಯಾಣ ಸಾಧಿಸುವದೇ ವಿಕಸಿತ ಭಕ್ತಿಯ ಅಥವಾ ಪೂರ್ಣ ಭಕ್ತಿಯ ಲಕ್ಷಣ.

ಶರಣರು ದೇಹ, ಮನ, ಆತ್ಮಗಳನ್ನು ತಿರಸ್ಕರಿಸುವದಿಲ್ಲ. "ಕಾಯದ ಸಂಗವ ವಿವರಿಸಬಲ್ಲಡೆ, ಕಾಯದ ಸಂಗವೇ ಲೇಸು ಕಂಡಯ್ಯ " "ಕೂಡಲಸಂಗನ ಪ್ರಸಾದ ಕಾಯ ! ಅದ ಕೆಡಿಸಬಾರದು. " "ನಿಮ್ಮ ನೆನೆವ ಮನವ ಕಿರಿದೆನ್ನಬಹುದೇ ? ಬಾರದಯ್ಯಾ !" "ಕೂಡಲಸಂಗಯ್ಯನಲ್ಲಿ ಕರ್ಮಫಲಗೂಡಿ, ಆತ್ಮನೈವೇದ್ಯವ ಮಾತಾಡುವಾತನೇ ಜಾಣ ನೋಡಾ ? ಕಾಯ, ಮನ, ಆತ್ಮಗಳು ಪರಮೇಶ್ವರನ ನೈವೇದ್ಯವು. ಇದೇ ಸರ್ವಾರ್ಪಣಯೋಗ; " ಅಂತರಂಗದಲ್ಲಿ ಸಮ್ಯಕ್ ಜ್ಞಾನ, ಬಹಿರಂಗದಲ್ಲಿ ಸತ್ಕ್ರಿಯಾಚರಣೆಯುಳ್ಳಾತನೇ ಶರಣ ನೋಡಾ. " "ನೂರು ವರುಷ ತುಂಬಿತ್ತೆಂಬ ಆನಂದಭಕ್ತರ ತೋರಿ ಬದುಕಿಸಯ್ಯ " ಕಾಯ, ಮನ, ಆತ್ಮಗಳನ್ನು ಚೆಂದ ಮಾಡಿಕೊಂಡು ಆನಂದದಿಂದ ನೂರು ವರ್ಷ ಇರಬೇಕು ! ಇದೇ ಶರಣರ ಹಾರೈಕೆ. ಕಾಯ, ಮನ, ಆತ್ಮಗಳು ಪರಮೇಶ್ವರನ ಪ್ರತಿಬಿಂಬಗಳಾದರೆ ಚೆಲುವು ಪಡೆಯುತ್ತವೆ. ಇಂಥ ಚೆಲುವು ಸಂಸ್ಕೃತಿಯ ಜೀವಾಳವು. " ಬೇಡಿದರೆ ನುಡಿ ಕಿರಿದು. " ಬಯಕೆಗೆ ತಕ್ಕ ಬದುಕು ನಿಡದಿರುವದೇ ಮನದ ಕಿರಿಯತನ. ಅರುಹು ಇಲ್ಲದಿಹುದೇ ಆತ್ಮನ ಕಿರಿತನ. ಕಾಯಕವಿಲ್ಲದೆ, ಆಲಸ್ಯದಿಂದ, ಪರಾವಲಂಬನೆಯಿಂದ ಇದ್ದರೆ ನಡೆ ಕಿರಿದು. ಈ ಕಿರಿಯತನವ ಕಳೆದು ಹಿರಿದು ಮಾಡುವದೇ ಬಕುತಿಯ ಹಿರಿಮೆ. ಜಗತ್ತಿಗೆ ಇಂದು ಇಂಥ ಹಿರಿಯ ಜೀವನ ಅಥವಾ ನವಜೀವನ ಬೇಕು !

---

(೨)

# ಸೌಂದರ್ಯ ರಹಸ್ಯ ಮತ್ತು ಸುಂದರ ಜೀವನ ಕ್ರಮ.

"ಅಂಗಕ್ಕೆ ಆಚಾರವೇ ಚೆಲುವು
ಮನಕ್ಕೆ ಮಹಾನುಭಾವವೇ ಚೆಲುವು
ಆತ್ಮಂಗೆ ಅರುಹು ಚೆಲುವು
ಅಖಂಡೇಶ್ವರನೆಂಬ ನಿಜವಿಂಬುಗೊಳ್ಳಲು
ಶರಣರ ಸಂಗವೇ ಚೆಲುವು."

ಈ ಅಮರ ವಚನದಲ್ಲಿ ಶರಣರು ಸೌಂದರ್ಯದ ರಹಸ್ಯವನ್ನೇ ಪ್ರಪಂಚದ ಕಲ್ಯಾಣಕ್ಕಾಗಿ ಬಯಲಿಗಿಟ್ಟಿದ್ದಾರೆ. ಚಿರಂತನ ಪರಮೈಶ್ವರ್ಯವು ವಿಶ್ವದಲ್ಲಿ ತುಂಬಿರುವದರಿಂದ ಈ ವಿಶ್ವವು ಸುಂದರವಾಗಿ ಕಣ್ಣಿಗೆ ಕಾಣಿಸುವದು. ಮನಸ್ಸಿಗೆ ಆನಂದವಾಗುವದು. ಸೃಷ್ಟಿ ಸೌಂದರ್ಯಕ್ಕೆ ಪರಮಾತ್ಮನ ಸತ್ವ ಅಥವಾ ಶಕ್ತಿಯೇ ಮೂಲ ಕಾರಣವು. ಸೌಂದರ್ಯವು ಶಿವಶಕ್ತಿಯ ಅಥವಾ ಕಲ್ಯಾಣ ಮೂರ್ತಿಯ ಶಕ್ತಿಯ ಅಭಿವ್ಯಕ್ತ ಸ್ವರೂಪವು. ಆದ್ದರಿಂದ ಸೌಂದರ್ಯವು ಸತ್ಯವೆಂತಲೂ ನಿತ್ಯಾನಂದದ ನಿವಾಸವೆಂತಲೂ ಹೇಳುತ್ತಾರೆ. ಅಂತರಾತ್ಮನು ದಿವ್ಯ ಚೇತನವು ಹೊರಹೊರಟಾಗ ದೇಹವು ಹೆಣವಾಗುವದು. ಹೆಣವು ಅಸಹ್ಯ ತೋರುವದು. ಅಂತರಂಗದ ಪರಮಾತ್ಮ ಶಕ್ತಿಯು ಬಹಿರಂಗದಲ್ಲಿ ದೇಹಕ್ಕೆ ಕಾಂತಿಯನ್ನೂ ಕಳೆಯನ್ನೂ ಕೊಡುತ್ತದೆ. ಸೌಂದರ್ಯದ ಉಗಮಸ್ಥಾನವು ಒಳಗಿದೆ. ಸೃಷ್ಟಿಯಲ್ಲೆಲ್ಲ ಸೌಂದರ್ಯರಸವು ತುಂಬಿದ್ದರೂ, ರಸಾನುಭವಶಕ್ತಿಯು ಮಾನವನ ಅರುಹಿನಲ್ಲಿರುವದು. ಇಂಥ ಅರುಹುಳ್ಳ ಮಾನವನಿಗೇನೇ ಶರಣನೆನ್ನುತ್ತಾರೆ. ಈ ಶರಣನ ಜೀವನವೇ ಸುಂದರ ಜೀವನವು. ಶರಣನು ಸಂಪ್ರದಾಯ-ಶರಣನಲ್ಲ. ಜೀವನದ ಎಲ್ಲ ರಂಗಗಳಿಗೆ ತನ್ನ ಪ್ರತಿಭೆಯ ಬೆಳಕನ್ನಿತ್ತು ಮಂಗಳ ರೂಪು ಕೊಟ್ಟು ಜೀವನವನ್ನು ಬೆಳಗಿಸುವವನೇ ಶರಣನು. ಶರಣನ ಭಾವದಲ್ಲಿ, ನೋಟದಲ್ಲಿ, ಕೃತಿಯಲ್ಲಿ, ಮಾತಿನಲ್ಲಿ ಶ್ರೇಷ್ಠವಾದ ಕಲೆಯೂ, ಶ್ರೇಷ್ಠವಾದ ಸಾಹಿತ್ಯವೂ, ಶ್ರೇಷ್ಠವಾದ ಸಂಸ್ಕೃತಿಯೂ, ಶ್ರೇಷ್ಠವಾದ ತತ್ವಜ್ಞಾನವೂ ತುಂಬಿ ಹೊರಸೂಸಿ ಅವರ ಸಾನ್ನಿಧ್ಯದಲ್ಲಿದ್ದವರ ಜೀವನ

ದಲ್ಲಿಯೂ ಮಧುವನ್ನು ತುಂಬುತ್ತವೆ. ಈ ಜೀವನ-ಮಧುವು ಅಖಂಡವಾದ ಈಶ್ವರನ ನಿಜವನ್ನರಿಯಲು ಅತ್ಯವಶ್ಯವಾಗಿ ಬೇಕು. ಆದ್ದರಿಂದ ಶರಣರ ಸಂಗವು ಅತೀವ ಮಹತ್ವವಾದದ್ದು. ವಿಶಿಷ್ಟ ವಸ್ತುವಿನಲ್ಲಿ ನಮ್ಮ ಚಿತ್ತವನ್ನು ಕೇಂದ್ರೀಕರಿಸುವ ಶಕ್ತಿಯು ಸೌಂದರ್ಯವಾಗಿದ್ದರೆ, ಅಂಥ ಸೌಂದರ್ಯವು ಮನುಷ್ಯನಿಗೆ ಚೈತನ್ಯ ಪ್ರದವಾಗಿರುವದು. ೨೦ನೇ ಶತಮಾನದ ನಮ್ಮ ಜಡವತ್-ಯಂತ್ರವತ್-ಇರುವ ಜೀವನದಲ್ಲಿ ಸೌಂದರ್ಯ ಶಕ್ತಿಯು ತುಂಬಬೇಕಾದರೆ ಶರಣರ ಸಾಮರಸ್ಯಜೀವನದ ಸುಗಂಧಸಾರವನ್ನು ಸುರಿಯಲಿಕ್ಕೆ ಸಿದ್ಧಸಿರಬೇಕು. ಭಿನ್ನ ಮನೋಭೂಮಿಕೆಗಳಲ್ಲಿ ಸಾಮರಸ್ಯವನ್ನು ಕಾಣದ ವಿನಃ ಜಾಗತಿಕ ಶಾಂತಿಯಿಲ್ಲ. ಲಿಂಗವೆಂದರೆ ಒಳನೋಟ. ಅಂಗವೆಂದರೆ ಹೊರನೋಟ. ಈ ಒಳಗಣ್ಣು ಹೊರಗಣ್ಣುಗಳ ಸಾಮರಸ್ಯದಲ್ಲಿಯೇ ದಿವ್ಯ ಜೀವನವು ಪ್ರಾರಂಭವಾಗಬಲ್ಲದು. ಐಕ್ಯದ ಮೂಲವು ಪರಮಾತ್ಮನು. ಆ ಪರಮಾತ್ಮಾವಿಷ್ಕಾರ ಪಾತ್ರವಾಗುವಂತೆ ನಮ್ಮ ತನು, ಮನ, ಬುದ್ಧಿ, ಆತ್ಮಗಳು ಪರಿವರ್ತನ ಹೊಂದಲಿಕ್ಕೆಬೇಕು. ಆಗ ವಿಶ್ವದ ವಿವಿಧತೆಯಲ್ಲಿ ಸಾಮರಸ್ಯವನ್ನು ನಾವು ಅನುಭವಿಸಬಲ್ಲೆವು.

ವ್ಯಕ್ತಿಯ ದೇಹ, ಬುದ್ಧಿ, ಮನ, ಆತ್ಮಗಳು ಶುದ್ಧವಾಗಿ, ಅಂದವಾಗಿ ಪೂರ್ಣ ಪಲ್ಲಟವಾದರೆ, ಇಂಥ ಪಲ್ಲಟಗೊಂಡ ವ್ಯಕ್ತಿಗಳಿಂದ ಕೂಡಿದ ಸಂಘಗಳು ಕಾರ್ಯ ಮಾಡಹತ್ತಿದರೆ ಆಗ ಸುಂದರವಾದ ಹೊಸ ಜಗತ್ತು ರೂಪುಗೊಂಡು ಶಾಂತಿಸಮೃದ್ಧಿಗಳು ನೆಲಿಸುವವು. ವ್ಯಕ್ತಿಯು ಶರಣರ ಸಂಘ ಅಥವಾ ಅನುಭವ ಮಂಟಪದಲ್ಲಿದ್ದು ಪ್ರಗತಿಹೊಂದಬೇಕೆನ್ನುವದು ಈ ಕಾರಣದಿಂದ. ಇದೇ ಕಾರಣದಿಂದ ನಮ್ಮ ಕನ್ನಡ ಕುಲದ ಹಿರಿಯಣ್ಣ ಬಸವಣ್ಣನ ಅನುಭವ ಮಂಟಪವು. ಅಧ್ಯಾತ್ಮದ ತಳಹದಿಯ ಮೇಲೆ ಉದಾತ್ತವಾದ ಸಂಸ್ಕೃತಿಯಿಂದೊಡಗೂಡಿದ ಸಾಮಾಜಿಕ ಸ್ವಾತಂತ್ರ್ಯ ಮಂದಿರವನ್ನು ಅಂದವಾಗಿ ಕಟ್ಟಿತು. ಆದಕಾರಣ ಶರಣರ ಸುಂದರ ಜೀವನ ಕ್ರಮವನ್ನು ಅರಿಯೋಣ.

ಆಚಾರವೆಂದರೆ ಕಾಯಕ. ಆತ್ಮಾವಲಂಬನದ ಪ್ರಾಮಾಣಿಕ ದುಡಿತ. ಶ್ರಮ ಗೌರವತ್ವದ ಪ್ರಕಾರ, ಸಮಾನತೆಯ ಭಾವನೆಯಿಂದ, ಸತತವಾಗಿ ಉದ್ಯೋಗ ಮಾಡಿದರೆ ನಮ್ಮ ದೇಹವು ಕಾಂತಿಯುಳ್ಳದ್ದೂ ಶಕ್ತಿಯುಳ್ಳದ್ದೂ ಆಗುವದು ಅನುಭವ ಸಿದ್ಧವಾದ ಮಾತು. ಆಲಸ್ಯವುಳ್ಳ ಜೀವನವು ನಮ್ಮ ದೇಹೇಂದ್ರಿಯಗಳ ಶಕ್ತಿಯನ್ನು ಕ್ಷೀಣಿಸುವದು. ಶಕ್ತಿ ಕ್ಷೀಣವಾದ ದೇಹವು

ಕಳೆಗೆಡುವದು. ಆಲಸ್ಯ ಜೀವನವು ಪಶು ಜೀವನಕ್ಕಿಂತ ಕೀಳು. ಕರ್ತೃತ್ವ ಶಕ್ತಿಯುಳ್ಳ ಜೀವನವೇ ಮನುಷ್ಯಜೀವನವು. "ತನುವ ಮುಸುಕಿದ ತಾಮಸವನ್ನೂ, ಕಂಗಳ ಮುಂದಣ ಕಾಮವನ್ನೂ ಕಳೆಯಬೇಕಾದರೆ" ಆಚಾರವೇ ಬೇಕು. ದೇಹೇಂದ್ರಿಯಗಳು ಮಂಗಳಮಯವಾಗಬೇಕಾದರೆ ಸದಾಚಾರ ಅವಶ್ಯ. ಸಾಹಸೀ ಜೀವನ ಅಗತ್ಯ. ಶರಣರು ಮಡಿ-ಮೈಲಿಗೆಯ ಪ್ರತ್ಯೇಕ ಭಾವನೆಯ ಕರ್ಮಠತನಕ್ಕೆ ಆಚಾರವೆನ್ನುವದಿಲ್ಲ. ಇಷ್ಟೇ ಅಲ್ಲ, ಅದಕ್ಕೆ ಅನಾಚಾರವೆಂದು ತಿರಸ್ಕರಿಸಿರುವರು. ಮೇಲೆ ಹೇಳಿದ ಆಚಾರವಿಲ್ಲದೇ ದೇಹವು. ಚೆಂದ ಕಾಣಿಸುವದು ಶಕ್ಯವಿಲ್ಲ. ದೇಹದ ಕಳೆ, ಕಾಂತಿ, ತೇಜಸ್ಸು, ಓಜಸ್ಸು— ಇವುಗಳಿಗೇನೇ ಸೌಂದರ್ಯವೆನ್ನುತ್ತಾರೆ. ಈ ಸೌಂದರ್ಯವು ಮನದ ಮಹಾನುಭಾವ, ಆತ್ಮನ ಅರುಹು, ಶರಣರ ಸಂಗಗಳಿಂದ ಪ್ರಾಪ್ತವಾಗುತ್ತದೆ. ಬಹಿರ್ಮುಖವಾದ ಮನದ ಪರಿಣಾಮವು ದೇಹದ ಮೇಲೆ ಆಗಿ ದೇಹವು ಚೆಂದ ಕಾಣುವದಿಲ್ಲ. ಆದಕಾರಣ ಅಂಗಕ್ಕೆ ಆಚಾರವೇ ಚೆಲುವು ಎಂದು ಹೇಳಿ ಅದೇ ಕಾಲಕ್ಕೆ ಮನಸ್ಸು ಮಹಾನುಭಾವರಿಂದ ಅರಳಿರಬೇಕೆಂದು ಸೂಚಿಸಿದ್ದಾರೆ.

ಮನವು ಅಂತರ್ಮುಖವಾದರೆ ಅವಿರಳಜ್ಞಾನವು ಪ್ರಾಪ್ತವಾಗುತ್ತದೆ. ಇಂಥ ಜ್ಞಾನ ಸಂಪನ್ನವಾದ ಮನವು ಉನ್ನತ ವಿಚಾರ, ಭಾವನೆ, ನಿರ್ಣಯ, ವಿಮರ್ಶೆ ಮತ್ತು ಕರ್ತೃತ್ವ ಶಕ್ತಿಗಳನ್ನು ತರುತ್ತದೆ. ಮಹತ್ತಾದ ಅನುಭಾವದಿಂದ ಸುಮನ, ಸದ್ಭಾವ, ಸುಜ್ಞಾನ, ನಿರಹಂಕಾರ, ಸುಚಿತ್ತ, ಸುಬುದ್ಧಿಗಳು ಸಿದ್ಧಿಯಾಗಿ ಪೂರ್ಣ ವಿಕಸಿತವಾದ ಅಂತಃಕರಣ ಶಕ್ತಿಯು ತನ್ನ ಪ್ರಭಾವ ಪ್ರತಿಭೆಗಳನ್ನು ಅಂಗಾಂಗಗಳಲ್ಲಿ ಎಲ್ಲ ಕಾರ್ಯಗಳಲ್ಲಿ ಸೂಸುತ್ತದೆ. ಆಗ ಶ್ರೇಷ್ಠ ಕಾರ್ಯಗಳು ಆಗುತ್ತವೆ. ಆದರೆ ಮಹಾನುಭಾವಿಯು ಕರ್ತವ್ಯದಕ್ಷನಿರುವನೆಂಬ ಮಾತನ್ನು ಮರೆಯಬಾರದು. ನಿಷ್ಕ್ರಿಯ ವೇದಾಂತವಾಗಲಿ ಕಾಮುಸೆಯುಳ್ಳ ನಿಷ್ಕರ್ಮವಾಗಲಿ ಮಹಾನುಭಾವಿಯಹತ್ತಿರ ಸುಳಿಯಲಾರವು. ಮಹಾನುಭಾವಿಯು ದೃಢನಿಶ್ಚಯದಿಂದ ಸುಂದರ ಜೀವನವನ್ನು ರೂಪಿಸುವನು. ಮನಸ್ಸಿನ ತೇಜಸ್ಸು, ಓಜಸ್ಸುಗಳು ಮಹಾನುಭಾವವನ್ನೇ ಅವಲಂಬಿಸಿವೆ.

ಶಾರೀರಕ ಮತ್ತು ಮಾನಸಿಕ ಶಕ್ತಿಗಳ ವಿಕಾಸದಿಂದ ಆತ್ಮನು ಅರುಹುಮಯನಾಗುವದು ಸುಲಭವಿದ್ದಂತೆಯೇ, ಆತ್ಮನ ಅರುಹಿನಿಂದ ತನು-ಮನಗಳ ವಿಕಾಸವಾಗುವದೂ ಸುಲಭವಿದೆ. ಜೀವಾತ್ಮನ ಪಶುವೃತ್ತಿಯು

ನಿವಾರಣೆಯಾಗಬೇಕಾದರೆ ಪಶುಪತಿಯ ಅರುಹಿನಿಂದಲೇ ಸಾಧ್ಯ! ಪಶುಪತಿ ಅರ್ಥಾತ್ ಪರಮಾತ್ಮನ ಅರುಹು ಜೀವರ ಎಲ್ಲರ ಜೀವನ ಪೂರ್ಣಿಮೆಯು! ಜೀವಾತ್ಮನು ತನು, ಮನ, ಪ್ರಾಣ, ಬುದ್ಧಿಗಳಂತೆ ಪರಮಾತ್ಮಾವಿಷ್ಕಾರ ಪಾತ್ರನಾಗಬೇಕು. ಪರಮನ ಅರುಹು ಜೀವಾತ್ಮನಿಗೆ ತೇಜಸ್ಸು-ಓಜಸ್ಸುಗಳನ್ನು ಧರಿಸುವದು. ಇದೇ ವಿಭೂತಿ! ಇಂಥ ವಿಭೂತಿಯು ಚೆಂದವು ಹೊರಗಿನ ಒಲೆಯಬೂದಿಯಲ್ಲ. "ಒಲೆಯಬೂದಿಯ ಬಳಿಯಲು ಬೇಡ. ಹೂಸಿಕೊಂಡಿಪ್ಪುದು ಹುಸಿ. ಮನದಲ್ಲಿ ಲೇಸಿಲ್ಲದನ್ನಕ್ಕ!!" ಎಂದು ಬಸವಣ್ಣನು ಹೇಳಿದ್ದು ಈ ಕಾರಣದಿಂದ.

ಪಾಶ್ಚಾತ್ಯರು ಇಂದು ತನುಮನಗಳ ವಿಕಾಸದಿಂದ ನಿಸರ್ಗದ ಮೇಲೆ ಸ್ವಲ್ಪ ಪ್ರಭುತ್ವವನ್ನು ಸ್ಥಾಪಿಸಿದ್ದಾರೆ. ಒಳಗಿನ ಪಶುವೃತ್ತಿ ಅಥವಾ ಜೀವನ ಅಲ್ಪತ್ವದ ಮೇಲೆ ವಿಜಯವನ್ನು ಅವರು ಸ್ಥಾಪಿಸಿದರೆ ನಿಸರ್ಗದ ಮೇಲೆಯೂ ಮಾನವರ ಹೃದಯಗಳ ಮೇಲೆಯೂ ಪೂರ್ಣ ಪ್ರಭುತ್ವವನ್ನು ಅವರು ಸ್ಥಾಪಿಸಲು ಸಮರ್ಥರಾಗುವರು. ವಿಜ್ಞಾನ-ತತ್ವಜ್ಞಾನಗಳ ಸಾಮರಸ್ಯವು ಆತ್ಮನ ಅರುಹಿನಿಂದಲೇ ಸಾಧ್ಯ. ಇಂಥ ಸಾಮರಸ್ಯವು ಭಿನ್ನ ಮನೋಭೂಮಿಕೆಗಳಲ್ಲಿ ಸಾಮರಸ್ಯದ ಪ್ರತೀಕವಾಗುವದು. ಆಗ ಸುಂದರ ಪೂರ್ಣ ಜೀವನವು ಸಾಧ್ಯವಾಗುವದು. ಜಗದಲ್ಲಿ ಶಾಂತಿ ಸಮೃದ್ಧಿಗಳು ನೆಲಿಸುವವು.

ಆದರೆ ವ್ಯಕ್ತಿಯು ಪ್ರತ್ಯೇಕ ಭಾವನೆಯಿಂದ ತನ್ನ ತನು, ಮನ, ಆತ್ಮಗಳನ್ನು ಚೆಂದ ಮಾಡಲಿಕ್ಕೆ ಹವಣಿಸಿದರೆ ಪೂರ್ಣ ಸುಂದರ ಜೀವನವು ಸಾಧ್ಯವಾಗಲಾರದು. ಅಂಥ ಪೂರ್ಣ ಸುಂದರ ಜೀವನವು ಚಿತ್ಕಲಾ ಚೈತನ್ಯದ ಪ್ರತಿಬಿಂಬವಾಗಿರುವ ಶರಣರ ಸಂಘದಲ್ಲಿ ಅಥವಾ ಅನುಭಾವ ಮಂಟಪದಲ್ಲಿ ಸಾಧ್ಯ! ಜೀವಾತ್ಮರು ಪೂರ್ಣ ಅರಳಿ ಚೆಂದವಾಗಿಯೂ ಸುಮಧುರವಾಗಿಯೂ ಶೋಭಿಸಬೇಕಾದರೆ ನಿರಹಂಕಾರಿಗಳಾದ ಶರಣರ ಸಂಗವೇ ಬೇಕು ಶರಣರ ಸಂಗದಿಂದ ಆತ್ಮರಿಗೆ ಅರುಹು ಬರುವದು. ಆತ್ಮನ ಅರುಹಿನಿಂದ ಮನಕ್ಕೆ ಮಹಾನುಭಾವ ಆನಂದವು ಸಿಗುವದು. ಮನದ ಮಹಾನುಭಾವದ ಶಕ್ತಿಯಿಂದ ಅಂಗಕ್ಕೆ ಸದಾಚಾರವು ಅಳವಡುವದು. ವ್ಯಷ್ಟಿ-ಸಮಷ್ಟಿಗಳ ಸಾಮರಸ್ಯದಲ್ಲಿ ಚೆಲುವು ಜೀವನ ಉದ್ಭವಿಸುವದು. ಇಂಥ ಚೆಲುವು ಸಂಸ್ಕೃತಿಯ ಜೀವಾಳವು. ಈ ಚೆಲುವಿನ ಸಂಸ್ಕೃತಿಯ ಬಲದಿಂದ ಆಸುರೀ ವೃತ್ತಿಯನ್ನು ನಾಶ ಮಾಡಿ ಜಗದಲ್ಲಿ ಶಾಂತಿಯನ್ನು ನೆಲೆಗೊಳಿಸುವಾ.

---

# ಬಸವಣ್ಣನವರ ರಾಜಕಾರಣ.

(೧)

೧೨ನೇ ಶತಮಾನದಲ್ಲಿ ಬಿಜ್ಜಳರಾಜನು ಕಲ್ಯಾಣ ಪಟ್ಟಣವನ್ನು ರಾಜಧಾನಿಯನ್ನು ಮಾಡಿಕೊಂಡು ಆಳುತ್ತಿದ್ದನು. ಬಸವಣ್ಣನವರ ಅಸಾಧಾರಣವಾದ ಬುದ್ಧಿ ಮತ್ತು ಅಮೋಘವಾದ ನೈತಿಕ ಜೀವನ, ಅದ್ವಿತೀಯವಾದ ಪರಿಶ್ರಮ, ಲೋಕೋತ್ತರವಾದ ಕ್ರಿಯಾಶಕ್ತಿ— ಈ ಮೊದಲಾದ ಸದ್ಗುಣಗಳನ್ನು ಕಂಡು ಬಿಜ್ಜಳನು ಅವರನ್ನು ಮುಖ್ಯ ಮಂತ್ರಿಗಳನ್ನಾಗಿ ನೇಮಿಸಿದ್ದನು. ಬಸವಣ್ಣನವರ ಬೌದ್ಧಿಕ ಮತ್ತು ನೈತಿಕ ಜೀವನ ಮಟ್ಟವು ಅತಿ ಉಚ್ಚವಾದದ್ದೂ ಸರಳವಾದದ್ದೂ ಆಗಿತ್ತೆಂಬ ಬಗ್ಗೆ ಸಂದೇಹವೇ ಇಲ್ಲ. ಮುಖ್ಯ ಮಂತ್ರಿಗಳಾಗಿದ್ದ ಬಸವಣ್ಣನವರು ಇತರ ಮಂತ್ರಿಗಳ ಕೂಡ ಸಹಕಾರ ಮನೋವೃತ್ತಿಯಿಂದ ನಡೆಯುತ್ತಿದ್ದರು ಅವರಿಗೆ ಅಧಿಕಾರದ ಗರ್ವ ಇದ್ದಿಲ್ಲ. ಬಹು ವಿನಯದಿಂದ ರಾಜಕಾರಣ ಸಾಗಿಸುತ್ತಿದ್ದರು.

ಬಸವಣ್ಣನವರು ದ್ರವ್ಯದ ಲೋಭದಿಂದ ಯಾವ ಕಾರ್ಯವನ್ನೂ ಮಾಡಲಿಲ್ಲ. "ಕೂಡಲಸಂಗಮದೇವರುಳ್ಳನ್ನಕ್ಕ ಬಿಜ್ಜಳನ ಭಾಂಡಾರ ಎನಗೇಕಯ್ಯಾ? " ಎಂದು ನಿಸ್ಪೃಹಬುದ್ಧಿಯಿಂದ ಚಾಡಿಖೋರರಿಗೆ ಉತ್ತರ ಕೊಟ್ಟಿರುವರು. ಬಸವಣ್ಣನವರು ಸಾಮಾನ್ಯ ಜನರಲ್ಲಿಯ ಗುಣಗಳನ್ನು ಕಂಡು ಹಿಡಿದು ಅವುಗಳನ್ನು ಸನ್ಮಾನಿಸುತ್ತಿದ್ದರು. ಒಂದು ದಿನ ದಾರಿಯಲ್ಲಿ ಸಮಗಾರ ಹರಳಯ್ಯನವರು ಶರಣು ಮಾಡಲು ಬಸವಣ್ಣನವರು ಪ್ರತಿಯಾಗಿ ವಿನಯದಿಂದ ಎರಡು ಸಾರೆ ಶರಣು ಮಾಡಿದರು. ಚಾಡಿಕೋರರು ಈ ಬಗ್ಗೆ ಸಹ ಚಾಡೀ ಹೇಳಿದರೂ ಬಸವಣ್ಣನವರು ಬಿಜ್ಜಳನ ಸಮ್ಮುಖದಲ್ಲಿ ಗುಣಕ್ಕೆ ಪ್ರಾಧಾನ್ಯತೆಯನ್ನು ಕೊಡಬೇಕೇ ವಿನಃ ಜಾತಿಗೆ ಕೊಡಬಾರದೆಂದು ತಿಳಿಸಿಹೇಳಿದರು. ಬಸವಣ್ಣನವರ ರಾಜಕಾರಣಕ್ಕೆ ನೈತಿಕಹಿನ್ನೆಲೆ ಇತ್ತು. ಈ ನೈತಿಕ ರಾಜಕಾರಣವು ಕೆಲ ಓಲಗದಲ್ಲಿರುವವರಿಗೆ ಒಗ್ಗುತ್ತಿದ್ದಿಲ್ಲವೆಂಬುದು ಇತಿಹಾಸದಿಂದ ತಿಳಿದು ಬರುತ್ತದೆ. ಉಳಿದ ಎಲ್ಲ ಮಂತ್ರಿಗಳಿಗಿಂತಲೂ ಬಸವಣ್ಣನವರು ಬುದ್ಧಿವಂತರಿದ್ದರು. ಬಿಜ್ಜಳನು ನಿರಕುಂಶನಾಗಲಿಕ್ಕೆ ಚಾಡಿಖೋರ ಮಂತ್ರಿಗಳೇ ಬಹುಮಟ್ಟಿಗೆ ಕಾರಣರಾದರು. ಚಾಡಿಖೋರರ ಮಧ್ಯದಲ್ಲಿ, ಕುಟಿಲ ಕಪಟ ರಾಜಕಾರಣದ ವಾತಾವರಣ

ದಲ್ಲಿ ಬಸವಣ್ಣನವರು ಮುಖ್ಯಮಂತ್ರಿಯ ಕೆಲಸ ಸಾಗಿಸಿದ್ದು ಸಾಮಾನ್ಯ ಸಂಗತಿಯಲ್ಲ. ಅಸಾಧಾರಣವಾದ ಭೌದ್ಧಿಕ, ನೈತಿಕ ಶಕ್ತಿಗಳಿಲ್ಲದವರಿಗೆ ಇದು ಸಾಧ್ಯವೇ ? ಲೋಕೋತ್ತರ ಕರ್ತೃತ್ವಶಕ್ತಿ, ಯೋಗ್ಯತೆ, ನಿಯಮಿತನಗಳಿಲ್ಲದವರಿಗೆ ಶಕ್ಯವೇ ? ಲಂಚಗುಳಿತನ, ದ್ರವ್ಯಲೋಭ, ಅಧಿಕಾರ ದರ್ಪಗಳುಳ್ಳವರ ತುತ್ತೇ ?

ಬಸವಣ್ಣನವರು ದಂಡನಾಯಕರಾಗಿಯೂ ಇದ್ದರು. ಬಸವಣ್ಣನವರ ದಂಡಿನಲ್ಲಿ ಶೌರ್ಯವಿತ್ತು. ಕೊಲೆ, ಸುಲಿಗೆ, ರಕ್ತಪಾತಗಳು ಬಸವಣ್ಣನವರ ಕಾಲದಲ್ಲಿ ಆಗಲಿಲ್ಲ. ಕಲ್ಯಾಣ ಧಾರ್ಮಿಕ ವಾತಾವರಣದಿಂದ ಶೋಭಿಸುತ್ತಿತ್ತು. ನ್ಯಾಯ, ಪ್ರಾಮಾಣಿತನ, ಅಂತಃಕರಣಗಳಿಂದ ಬಸವಣ್ಣನವರ ರಾಜಕಾರಣವು ನಡೆಯುತ್ತಿದ್ದದರಿಂದ ಸುಲಿಗೆ, ಕಪಟತನ, ಮೋಸಗಳಿಗೂ ಆಸ್ಪದ ಸಿಕ್ಕಲಿಲ್ಲ. ಒಟ್ಟಾರೆ ಆಡಳಿತೆಯು ಯಶಸ್ವಿಯಾಗಲಿಕ್ಕೆ ಅತ್ಯವಶ್ಯವಾದ ಗುಣಗಳು ಬಸವಣ್ಣನವರಲ್ಲಿದ್ದವೆಂಬುದು ನಿಷ್ಪಕ್ಷಪಾತಿಗಳಿಗೆ ಹೊಳೆಯದೇ ಇರದು.

ಕುಲಚುರಿ ರಾಜ್ಯವು ಇವರ ಕೈಯಲ್ಲಿ ಭದ್ರವಾಗಿತ್ತು. ಬೇರೆ ರಾಜ್ಯಗಳ ಕೂಡ ಬಸವಣ್ಣನವರ ಸಂಬಂಧವು ಸ್ನೇಯಮಯವಾಗಿತ್ತೆಂಬುದಕ್ಕೆ ಯಾವ ಯುದ್ಧವೂ ಇವರ ಕಾಲದಲ್ಲಿ ಆಗದಿರುವದೇ ಪ್ರಬಲ ದೃಷ್ಟಾಂತವಾಗಿರುವದು. ವರ್ಣದ್ವೇಷ, ಜಾತಿ ಜಾತಿಗಳ ತಿಕ್ಕಾಟಗಳ ಆ ಕಾಲದಲ್ಲಿ, ಅತ್ಯಂತ ಭೀಕರ ಅಸ್ಪೃಶ್ಯತೆಯಿದ್ದ ಆ ಕಾಲದಲ್ಲಿ, ಬಸವಣ್ಣನವರು ಜಾತಿಭೇದ ನಿರ್ಮೂಲಕ್ಕೆ ಯತ್ನಿಸಿ ಆ ಪ್ರಯತ್ನದಲ್ಲಿಯೇ ಪ್ರಾಣಾರ್ಪಣಮಾಡಿದ್ದನ್ನು ನೆನೆದರೆ ಅವರ ಗಂಡು ಎದೆಯ ಆದರ್ಶರಾಜಕಾರಣದ ಚಿತ್ರ ಮುಂದೆ ಬಂದು ನಾ ನಾ ಎಂಬುವ ಈಗಿನ ರಾಜಕಾರಣಗಳು ಸಹ ಬೊಟ್ಟು ಕಚ್ಚುವಂತಿದೆ.

ರಾಜಕೀಯ, ಆರ್ಥಿಕ ಸುವ್ಯವಸ್ಥೆಗಳನ್ನು ಭದ್ರವಾಗಿ ಸಾಗಿಸಿದ ಬಸವಣ್ಣನವರು ಸಾಮಾಜಿಕ ನ್ಯಾಯ ಸಮತೆಗಳ ಸ್ಥಾಪನೆಗೆ ಅತ್ಯಂತ ಹೋರಾಡಿದರು. ಪ್ರಗತಿಶೀಲರು ಇಚ್ಛೆಪಡುವ ಸಾಮಾಜಿಕ ಕ್ರಾಂತಿಯನ್ನು ಮಾಡಿದರು. ಈ ಕ್ರಾಂತಿಯು ನಿರಂಕುಶ ರಾಜನಿಗೂ, ವರ್ಣಾಶ್ರಮಿಗಳಾಗಿದ್ದ ಉಳಿದ ಮಂತ್ರಿಗಳಿಗೂ, ವರ್ಣದ್ವೇಷದಿಂದ ಕ್ಕೊಳಿತಿದ್ದ ಆಗಿನ ಸಮಾಜಕ್ಕೂ ಸೇರಲಿಲ್ಲ. ಆದ್ದರಿಂದ ಕಡೆಗೆ ಮುಖ್ಯ ಮಂತ್ರಿಯ ಶ್ರೇಷ್ಠ

ಅಧಿಕಾರವನ್ನು ಸಹ ಅವರು ತ್ಯಾಗ ಮಾಡಿ ತತ್ವಾಭಿಮಾನವೇ ಮನುಷ್ಯತ್ವವೆಂಬದನ್ನು ತೋರಿಸಿದರು.

ಇಂದಿನ ಜಗತ್ತಿನ ರಾಜಕಾರಣವನ್ನು ನೋಡಿದರೆ ಬಸವಣ್ಣನವರಂಥ ಬೌದ್ಧಿಕ, ನೈತಿಕ ಪ್ರತಿಭಾಶಾಲಿಗಳಾದ ಮುಖ್ಯ ಮಂತ್ರಿಗಳ ಅವಶ್ಯಕತೆಯು ಮನಸದಟ್ಟಾಗುವದು. ಪಂಡಿತ ಜವಾಹಿರಲಾಲರು ಹೇಳುವಂತೆ ಎರಡು ಮಹಾಯುದ್ಧಗಳಾದರೂ ಜಗತ್ತು ಬುದ್ಧಿಗಲಿಯಲಿಲ್ಲ. ಮೂರನೇ ಯುದ್ಧದ ಕಾರ್ಮೋಡಗಳು ಕಣ್ಣಿಗೆ ಕವಿಯುತ್ತಲಿವೆ. ಜಗತ್ತಿನಲ್ಲಿ ಅಂಧಕಾರದ ಛಾಯೆಯು ಬೀಳ ತೊಡಗಿದೆ. ಶ್ರೇಷ್ಠ ಮುತ್ಸದ್ದಿಗಳೂ ಸಹನೈತಿಕ ಹಿನ್ನಲೆಯಿಲ್ಲದ ಸಂಕುಚಿತ, ಕಪಟ ರಾಷ್ಟ್ರೀಯ ರಾಜನೀತಿಯ ಧೋರಣೆಯನ್ನು ತಾಳಿರುವದೇ ಇಂದಿನ ಜಗತ್ತಿನ ದುಃಸ್ಥಿತಿಗೆ ಮೂಲಕಾರಣವಾಗಿದೆ.

ಪ್ರಜಾಪ್ರಭುತ್ವ, ಸ್ವಾತಂತ್ರ್ಯ, ಸಮಾನತೆ, ನ್ಯಾಯ ಶಾಂತಿಗಳಸ್ಥಾಪನೆಗಾಗಿ ಮಹಾಯುದ್ಧದಲ್ಲಿ ಧುಮುಕಿದ್ದೇವೆನ್ನುವವರು. ಯುದ್ಧ ಮುಗಿದ ಮೇಲೆ ಆ ದಿಶೆಯಲ್ಲಿ ಏಕೆ ಪ್ರಯತ್ನಿಸಲೊಲ್ಲರು ? ಸಂಯುಕ್ತ ರಾಷ್ಟ್ರ ಸಂಘದಲ್ಲಿ ಧ್ಯೇಯವನ್ನು ಮರೆತು ಕ್ಷುಲ್ಲಕ ಚರ್ಚೆಗಳಲ್ಲಿ ಏಕೆ ಕಲಹರಣ ಮಾಡುತ್ತಿರುವರು ? ಸಂಯುಕ್ತರಾಷ್ಟ್ರ ಸಂಘದ ಸಾಧನ ಮಾರ್ಗವು ನಿಷ್ಕಲಂಕವಾಗಿರುವದೇ ? ಆಡಳಿತೆಗೆ ಅವಶ್ಯವಾಗಿ ಬೇಕಾದ ಶಾಂತಿ, ಆರ್ಥಿಕ ಭದ್ರತೆ, ವ್ಯಕ್ತಿ ಸ್ವಾತಂತ್ರ್ಯ, ಸಮಾನ ನಾಗರಿಕ ಹಕ್ಕು, ಸಾಮಾಜಿಕ ಸಮತೆ, ನ್ಯಾಯಗಳು ಜಗತ್ತಿನಲ್ಲಿವೆಯೇ ? ಬಸವಣ್ಣನವರ ನೈತಿಕ ರಾಜಕಾರಣವನ್ನು ನೋಡಿ ಜಗತ್ತಿನ ರಾಜಕಾರಣಿಗಳು ಬುದ್ಧಿಗಲಿಯುವಂತಿದೆ. ಬಸವಣ್ಣನವರ ನ್ಯಾಯ ಮತ್ತು ಶಾಂತ ರಾಜನೀತಿಯಿಂದ ನಡೆದರೆ ಜಗದಲ್ಲಿ ಶಾಂತಿ ಸ್ಥಾಪನೆಯಾಗಲಾರದೇ ? ಸಂಯುಕ್ತರಾಷ್ಟ್ರಸಂಘವು ಬಸವಣ್ಣನವರ ಅನುಭವ ಮಂಟಪದ ಚರ್ಚಾ ಪದ್ಧತಿಯನ್ನಾದರೂ ಅನುಕರಿಸಬಾರದೇ ?

---

(೪)

## ಬಸವಣ್ಣನವರು ಮತ್ತು ಸ್ತ್ರೀ ಸ್ವಾತಂತ್ರ್ಯ.

(೧) ಪೂರ್ವಸ್ಥಿತಿಃ— ಬಸವೇಶ್ವರನಿಗಿಂತ ಪೂರ್ವದಲ್ಲಿ ಸ್ತ್ರೀಯರು ಭಯಂಕರ ಗುಲಾಮಗಿರಿಯಲ್ಲಿದ್ದರು. ಸ್ತ್ರೀಯರ ಅವನತಿಯ ಬೇರುಗಳು ವೈದಿಕಧರ್ಮ ಗ್ರಂಥಗಳಲ್ಲಿಯೇ ಇವೆ. ವೈದಿಕ ಧರ್ಮವು ಸ್ತ್ರೀ ಸ್ವಾತಂತ್ರ್ಯದ ವೈರಿಯು, ಅಜ್ಞಾನ, ದಾಸ್ಯಮನೋವೃತ್ತಿ, ಅಂಧಾನುಕರಣ, ಜಾತಿ

ಬಂಧನಗಳಿಂದ ವೈದಿಕರು ಸ್ತ್ರೀಯರನ್ನು ಬಿಗಿದುಬಿಟ್ಟಿದ್ದರು. ವೇದಗಳನ್ನು ಓದಲಿಕ್ಕೆ ಸಹ ಸ್ತ್ರೀಯರಿಗೆ ಅಧಿಕಾರವಿದ್ದಿಲ್ಲ. ವೇದ ಓದುವ ಜ್ಞಾನವನ್ನು ಸ್ತ್ರೀಯರಿಗೆ ಕೊಡಲಿಲ್ಲ. ವೈದಿಕರ ವರ್ಣಾಶ್ರಮಗಳಂತೂ ಗಂಡಂದಿರು ತಮ್ಮ ಹೆಂಡಂದಿರನ್ನೇ ಕೀಳೆಂದು ಬಗೆಯಲಿಕ್ಕೆ ಹಚ್ಚಿದವು. ಹೆಂಡರನ್ನೇ ಕೀಳೆಂದು ತಿಳಿದ ವರ್ಣಾಶ್ರಮಿಗಳು ಉಳಿದ ಸ್ತ್ರೀ ಜನಾಂಗದ ಉದ್ಧಾರ ಮಾಡಬಲ್ಲರೇ! ಛಾಂದೋಗ್ಯೋಪನಿಷತ್ತಿನಲ್ಲಿ ಜಾಬಾಲಾ ಎಂಬ ಹೆಣ್ಣು ಮಗಳು ಸತ್ಯ ಮಾತಾಡಿದರೂ ಸಹ ಅವಳ ಶೂದ್ರತ್ವ ಹೋಗಲಿಲ್ಲ. ವರ್ಣಾಶ್ರಮಿಗಳು ಗುಣಕ್ಕೆ ಪ್ರಾಧಾನ್ಯತೆಯನ್ನು ಕೊಡುವದನ್ನು ಕಲಿತೇ ಇಲ್ಲ. ಅದು ಅವರ ಸ್ವಭಾವವೇ ಅಲ್ಲ. ಸನ್ಯಾಸಾಶ್ರಮಕ್ಕೆ ಇಲ್ಲದ ಮಹತ್ವ ಕೊಟ್ಟದ್ದರಿಂದ ಸ್ತ್ರೀಯರ ಧಿಃಕಾರಕ್ಕೆ ಮತ್ತಿಷ್ಟು ಪುಟ ಸಿಕ್ಕಿತು. ಗಂಡ ಸತ್ತ ವಿಧವೆಯರ ಗೋಳನ್ನಂತೂ ವರ್ಣಿಸಲಿಕ್ಕೆ ಬರುವದಿಲ್ಲ.

ವೈದಿಕ ಧರ್ಮದ ಈ ಭೇದ ಬುದ್ಧಿಯನ್ನು ಕಂಡು ಪಂಡಿತ ರಮಾನಂದಬಾಯಿಯಂಥ ಶ್ರೇಷ್ಠ ವಿದ್ವಾಂಸರು ವೈದಿಕ ಧರ್ಮವನ್ನೇ ಬಿಟ್ಟು ಹೋಗಬೇಕಾಯಿತು.

ಮನುಸ್ಮೃತಿಯಂತೂ ಸ್ತ್ರೀಯರ ಗುಲಾಮಗಿರಿಯನ್ನು ಸ್ವೀಕರಿಸಿ ಬಿಟ್ಟಿರುವದು. "ಸ್ತ್ರೀಯಳು ಸ್ವಾತಂತ್ರ್ಯಕ್ಕೆ ಯೋಗ್ಯಳಲ್ಲ" ಎಂದು ಮನುಸ್ಮೃತಿಯು ಹೇಳುತ್ತದೆ. ಮನುಸ್ಮೃತಿಯು ಸ್ತ್ರೀಯರ ದಬ್ಬಾಳಿಕೆಯ ಗ್ರಂಥವೆಂದು ಹೇಳುವದು ಯೋಗ್ಯವು.

ವೈಧಿಕ ಧರ್ಮದ ಪುರಾಣಗಳ ಮಾತಂತೂ ಅತ್ಯಂತ ಹೇಯವಾಗಿದೆ. ಪಾಪದಿಂದ ಸ್ತ್ರೀ ಜನ್ಮ ಬರುತ್ತದೆಂದೂ ಗಂಡ ಸತ್ತರೆ ಅವನ ಹೆಣ ಸುಡುವ ಬೆಂಕಿಯ ಮೇಲೆ ಹೆಂಡತಿಯು ಹಾರಿ ಸಾಯಬೇಕೆಂದೂ ಗಾರುಡ, ಪದ್ಮ ಪುರಾಣಗಳು ಹೇಳಿವೆ.

ರಾಮಾಯಣ, ಮಹಾಭಾರತಗಳಲ್ಲಿ ಸಹ ಸತಿ ಹೋಗುವ ಅನಿಷ್ಟ ಪದ್ಧತಿಯು ರೂಢಿಯಲ್ಲಿತ್ತು. ಒಟ್ಟಾರೆ ಸ್ತ್ರೀಯರು ಶಾರೀರಕ, ಬೌದ್ಧಿಕ ಧಾರ್ಮಿಕ, ಸಾಮಾಜಿಕ ಅಧಃ ಪತನದಲ್ಲಿಯೇ ಕೊಳೆಯುವಂತೆ ವೈದಿಕ ಧರ್ಮದ ವಿಧಿಯಿದೆ. ಅಂಥ ವರ್ಣಾಶ್ರಮದ ಸಾಮಾಜಿಕ ಕಟ್ಟು ಇದೆ. ಇದು ಬಸವಣ್ಣನವರ ಕಾಲದ ವರೆಗೆ ಹೀಗೆ ನಡೆದು ಬಂದಿತ್ತು.

ಸ್ತ್ರೀಯರ ಗುಲಾಮಗಿರಿಯು ಬಸವಣ್ಣನವರಿಂದ ಕತ್ತರಿಸಿ ಹೋಯಿತು. ಸ್ತ್ರೀಯರ ಅಸಹಾಯ ಮತ್ತು ಕನಿಕರ ಸ್ಥಿತಿಯನ್ನು ಕಂಡು

ಬಸವಣ್ಣನವರು ಮರುಗಿದರು. ಸ್ತ್ರೀಯರ ಬಗ್ಗೆ ಇದ್ದ ವೈದಿಕರ ಹೀನ ಮನೋವೃತ್ತಿಯಲ್ಲಿಯೇ ಕ್ರಾಂತಿಯನ್ನು ಮಾಡಿದರು ಬಸವಣ್ಣನವರು. ಸ್ತ್ರೀಯರ ಸ್ವಾತಂತ್ರ್ಯದ ವಿಷಯವು ಉತ್ತಮ ಮನೋವೃತ್ತಿಯನ್ನು ಅವಲಂಬಿಸಿಲ್ಲವೇ? ಮನಸ್ಸಿನ ಮೇಲಾದ ಪರಿಣಾಮ ಅಥವಾ ನೈತಿಕ ಶಿಕ್ಷಣವನ್ನೇ ಸ್ತ್ರೀ ಸ್ವಾತಂತ್ರ್ಯವು ಅವಲಂಬಿಸಿರುವದು. ಇಂಥ ನೈತಿಕ ಶಿಕ್ಷಣವನ್ನೇ ಬಸವಣ್ಣನವರು ಜನಾಂಗಕ್ಕೆ ನೀಡಿದರು. ಸ್ತ್ರೀಯರನ್ನು ಕಾಣುವ ದೃಷ್ಟಿ ಕೋನವನ್ನೇ ಬದಲಾಯಿಸಿದರು ಈ ಭಾವಪಲ್ಲಟವನ್ನು ಸ್ವಂತ ನಡೆಯಿಂದ ಮಾಡಿದರು ಬಸವಣ್ಣನವರು. ಗಂಡನು ತನ್ನ ಹೆಂಡತಿಯನ್ನು ಹೇಗೆ ಕಾಣಬೇಕೆಂಬುದನ್ನು ಬಸವಣ್ಣನವರ ಕೆಳಗಿನ ವಚನದಿಂದ ತಿಳಿದುಕೊಳ್ಳಿರಿ—"ಕೈ ಹಿಡಿದ ಸಜ್ಜನೆಯೆಂದು ನಂಬಿರ್ದೆನಯ್ಯ. ಒಡನಿರ್ದ ಸತಿ ಎಂದು ನೆಚ್ಚಿದ್ದೆನಯ್ಯ."

ಮನಃಪೂರ್ವಕವಾಗಿ ಗಂಡನ ಕೈಹಿಡಿವ ಒಳ್ಳೇ ಹೆಂಗಸೇ ಹೆಂಡತಿಯು. ಸುಖ-ದುಃಖಗಳಲ್ಲಿ ನಮ್ಮ ಒಡನೆ ಕಾರ್ಯದಲ್ಲಿ ಸಹಕರಿಸುವವಳೇ ಹೆಂಡತಿ ಎಂದೆ ಬಸವಣ್ಣನವರ ವಚನದ ಅರ್ಥ. ಹೆಂಡತಿಯೆಂದರೆ ಕೀಳೆಂದು ಬಸವಣ್ಣನವರು ತಿಳಿದಿದ್ದರೇ ?

"ಪರ ವಧುವನು ಮಹಾದೇವಿ ಎಂಬೆ !! ಇದು ಬಸವಣ್ಣನವರ ಮತ್ತೊಂದು ವಚನ. ಸ್ತ್ರೀಯರು ಮಾಯೆಯೆಂದಾಗಲೀ, ಪುರುಷನ ಭೋಗವಸ್ತುವೆಂದಾಗಲೀ ಬಸವಣ್ಣನವರು ಕನಸ್ಸಿನಲ್ಲಿ ಸಹ ತಿಳಿದಿದ್ದಿಲ್ಲ. ಸ್ತ್ರೀಯರು ದೇವರ ಸ್ವರೂಪ ಎಂದೇ ಬಸವಣ್ಣನವರು ಭಾವಿಸಿದ್ದರು. ಅನಾಚಾರ, ವ್ಯಭಿಚಾರಗಳನ್ನು ಮಾಡಲಿಕ್ಕೆ ಪುರುಷರಿಗೆ ಹೇಗೋ ಹಾಗೇ ಸ್ತ್ರೀಯರಿಗೂ ಬಸವಣ್ಣನವರು ಅಧಿಕಾರ ಕೊಟ್ಟಿಲ್ಲ. ಅನಾಚಾರಕ್ಕೆ ಆಸ್ಪದ ಕೊಡುವದೇ ಸ್ತ್ರೀ ಸ್ವಾತಂತ್ರ್ಯವೋ ? ಆತ್ಮಸಂಯಮನ, ಶಿಸ್ತು, ಸದಾಚಾರಗಳಿಂದ ಕೂಡಿದ್ದೇ ನಿಜವಾದ ಸ್ವಾತಂತ್ರ್ಯವೆಂದು ಮಹಾತ್ಮಾ ಗಾಂಧಿಯವರು ಸ್ಪಷ್ಟವಾಗಿ ಹೇಳಿದ್ದಾರೆ. " ಗಂಡ ಲಿಂಗಭಕ್ತ. ಹೆಂಡತಿ ಮಾರಿಮಸಣಿಯ ಭಕ್ತೆ. ಗಂಡ ಕೊಂಬುದು ಪ್ರಸಾದ. ಹೆಂಡತಿ ಕೊಂಬುದು ಸುರೆಮಾಂಸ. ಇದು ಹೆಂಡದ ಮಡಿಕೆಯ ಹೊರಗೆ ತೊಳೆದಂತೆ ಕೂಡಲಸಂಗಮದೇವಾ." ಬಸವಣ್ಣನವರ ಈ ವಚನದಲ್ಲಿ ಗಂಡ ಹೆಂಡರಿಬ್ಬರೂ ಸದಾಚಾರ ಸದ್ಭಕ್ತಿಗಳಿಂದ ನಡೆಯಬೇಕೆಂದೇ ಬೋಧೆಯಿದೆ.

ಆದರ್ಶ ದಾಂಪತ್ಯ ಧರ್ಮವನ್ನೇ ಬಸವಣ್ಣನವರು ಮೇಲಿನ ವಚನದಲ್ಲಿ ಬೋಧಿಸಿರುವರೆಂಬುದು ಸ್ಪಷ್ಟವಿದೆ. ತಾವು ಆದರ್ಶ ದಂಪತಿಗಳಾಗಿ

ನಡೆದು ಜಗತ್ತಿಗೆ ತೋರಿಸಿದ್ದಾರೆ. ವರ್ಣಗಳ ಕಟ್ಟನ್ನೂ ಜಾತಿಯ ಸಂಕೋಲೆಯನ್ನೂ ತುಂಡರಿಸಿ ಹಾಕಿದ್ದರಿಂದ ಸಮಾಜದಲ್ಲಿ ಸ್ತ್ರೀಯರಿಗೆ ಉನ್ನತ ಸ್ಥಾನ ಸಿಕ್ಕಿತು. ಸಾಮಾಜಿಕ ಸ್ವಾತಂತ್ರ್ಯ ಲಭಿಸಿತು. ಹೀಗೆ ಧಾರ್ಮಿಕ, ಸಾಮಾಜಿಕ ಸ್ವಾತಂತ್ರ್ಯವನ್ನು ಬಸವಣ್ಣನವರು ಸ್ತ್ರೀಯರಿಗೆ ಕೊಟ್ಟಿದ್ದರಿಂದಲೇ ಕಡಿಮೆ ಕುಲದವರೆಂದು, ಕಡಿಮೆ ಕಸಬಿನವರೆಂದು ಭಾವಿಸಲ್ಪಟ್ಟಿದ್ದ ನೂರಾರು ಹೆಣ್ಣುಮಕ್ಕಳು ಬಸವಣ್ಣನವರ ಅನುಭವ ಮಂಟಪದಲ್ಲಿ ವಿಭೂತಿಗಳಾಗಿ-ಶರಣೆಯರಾಗಿ-ಪ್ರಕಾಶಕ್ಕೆ ಬಂದರು. ಹಡಪದ ಲಿಂಗಮ್ಮ, ಸಮಗಾರ ಕಲ್ಯಾಣಮ್ಮ, ಕದಿರೆ ರೆಮ್ಮವ್ವೆ, ಅಕ್ಕಮಹಾದೇವಿ, ಸತ್ಯಕ್ಕ ಮೊದಲಾದ ಹೆಂಗಸರು ಜ್ಞಾನಿಗಳು ತಲೆದೂಗುವಂತಹ ವಚನಗಳನ್ನು ಕನ್ನಡದಲ್ಲಿ ಬರೆದಿರುವರು. ಅನುಭವ ಮಂಟಪವು ಒಂದು ಮಹಾವಿದ್ಯಾಲಯವೇ ಆಗಿತ್ತು. ಅದರಲ್ಲಿ ಸ್ತ್ರೀಯರ ಬೌದ್ಧಿಕ ಬೆಳವಣಿಗೆಯು ಅಸಾಧಾರಣವಾಗಿ ಮಾನಸಶಾಸ್ತ್ರಕ್ಕನುಸರಿಸಿ ಸಾಗಿತು. ಅಂದಿನ ಸ್ತ್ರೀಯರು ಬರೆದ ವಚನಗಳನ್ನು ಇಂದಿನ ಏಸೆ ಹೊತ್ತು ಕನ್ನಡ ಹಿರಿಯ ಸಾಹಿತಿಗಳಿಗೆ ಬರೆಯಲಿಕ್ಕೆ ಬರುವದೋ? ಬಸವಣ್ಣನವರ ಮುಂಚೆ ಕನ್ನಡ ಭಾಷೆಯಲ್ಲಿ ಇಷ್ಟು ಹೆಣ್ಣುಮಕ್ಕಳು ಇಂಥ ಜ್ಞಾನದ ವಚನಗಳನ್ನು ಹೇಳಿರುವರೇ? ಅನುಭವ ಮಂಟಪದಲ್ಲಿ ಸ್ತ್ರೀಯರ ಬೌದ್ಧಿಕ ಗುಲಾಮಗಿರಿಯೂ ದೂರಾಯಿತೆಂಬುದು ಮೇಲಿನ ಉದಾಹರಣೆಗಳಿಂದ ಸಿದ್ಧವಾಗುವದಿಲ್ಲವೇ?

ಬಸವಣ್ಣನವರು ಸಮಾಜವಲ್ಲಿ ಪರಸ್ಪರ ಶರೀರ ಸಂಬಂಧ-ಸಹಭೋಜನಗಳಿಗೆ ಉತ್ತೇಜನ ಕೊಟ್ಟರಷ್ಟೇ ಅಲ್ಲ; ತಾವು ಸ್ವತಃ ಹಾಗೆ ನಡೆದು ತೋರಿದರು. ಬ್ರಾಹ್ಮಣ ಮಂತ್ರಿ ಮಧುವಯ್ಯನ ಮಗಳನ್ನು ಸಮಗಾರ ಹರಳಯ್ಯನ ಮಗನಿಗೆ ಕೊಡಿಸಿ ಲಗ್ನ ಮಾಡಿಸಿ ಸಮಾಜದಲ್ಲಿ ದೊಡ್ಡ ಕ್ರಾಂತಿಯನ್ನು ಮಾಡಿದರು. ಸ್ತ್ರೀಯರು ಲಗ್ನ ಮಾಡಿಕೊಳ್ಳಲೇಬೇಕೆಂಬ ಕಟ್ಟನ್ನು ಬಸವಣ್ಣನವರು ಹಾಕಿಲ್ಲ. ನಿರಾಶ್ರಿತಳಾಗಿದ್ದ ಅಕ್ಕಮಹಾದೇವಿಗೆ ತಮ್ಮಲ್ಲಿ ಆಶ್ರಯ ಕೊಟ್ಟು ಆಕೆಯು ಪಾರಮಾರ್ಥಿಕ ಸಂಸಾರ ಸಾಗಿಸುವಂತೆ ಆಸ್ಪದ ಮಾಡಿಕೊಟ್ಟರು. "ನಾಮದಲ್ಲಿ ಹೆಂಗಸಾದರೇನು? ಭಾವದಲ್ಲಿ ಗಂಡು ರೂಪು. ಸೋಮಧರನ ಹಿಡಿ ತಪ್ಪೆನು ಬಸವಾ ನಿಮ್ಮ ಕೃಪೆಯಿಂದ. ಈ ಪ್ರಕಾರ ಅಕ್ಕಮಹಾದೇವಿಯು ನುಡಿದು ವೀರ ಧೀರಳಾಗಿ ಮಹಾ ಜ್ಞಾನಿಯಾಗಿ ಸರ್ವಸ್ವತಂತ್ರಳಾಗಿ ಪ್ರಕಾಶಿಸಿದಳು.

ಈಗಿನ ಸಮತಾವಾದಿಗಳ ಸಮಾನತ್ವ ತತ್ವವು ಆಗಿನ ಶರಣೆಯರ ಆಚರಣೆಯಲ್ಲಿ ಇದ್ದಿತು. ಶರಣೆಯರು ಕಾಯಕ ಮಾಡುತ್ತಿದ್ದರೂ ಹೆಚ್ಚು

ಧನ ಸಂಗ್ರಹಿಸಿಟ್ಟಿಲ್ಲ. ಇದ್ದ ದುಡ್ಡನ್ನು ಹಂಚಿಕೊಂಡು ಪತಿತರ ಉದ್ಧಾರ ಮಾಡಿದರು.

ಶರಣ ಸತಿ ಲಿಂಗ ಪತಿ ಎಂಬ ಭಾವವು ಸ್ತ್ರೀಯರ ಮಹತ್ವವನ್ನೇ ಸೂಚಿಸುವದು. ಸತಿಯ ಭಾವ ಬರದಿದ್ದರೆ ಶರಣನೇ ಅಲ್ಲ. ಅಂದರೆ ಸತಿಯ ಭಾವ ಉನ್ನತಿಯ ಗುರು ಎಂದಂತಾಯಿತು. ಬಸವಣ್ಣನು ತಾನು ಸ್ತ್ರೀಯರ ಉದ್ಧಾರಕನೆಂದು ಹೇಳಿಕೊಂಡಿಲ್ಲ. ಸಹೃದಯತೆಯಿಂದ, ವಿನಯದಿಂದ ಸ್ತ್ರೀಯರ ಉನ್ನತಿಯನ್ನು ಸಾಧಿಸಿರುವನು. ಉದ್ಯೋಗ ಸ್ವಾತಂತ್ರ್ಯ, ಲಗ್ನ ಸ್ವಾತಂತ್ರ್ಯ, ಸಂಚಾರ ಸ್ವಾತಂತ್ರ್ಯಗಳನ್ನು ಬಸವಣ್ಣನು ಸ್ತ್ರೀಯರಿಗೆ ಕೊಟ್ಟಿದ್ದನೆಂಬುದನ್ನು ಸಹಜವಾಗಿ ಶರಣರ ಶರಣೆಯರ ಚರಿತ್ರೆಗಳಿಂದ ತಿಳಿದುಕೊಳ್ಳಬಹುದು.

ಈ ಪ್ರಕಾರ ಧಾರ್ಮಿಕ, ಸಾಮಾಜಿಕ, ಬೌದ್ಧಿಕ, ಶಾರೀರಿಕ ಸ್ವಾತಂತ್ರ್ಯಗಳನ್ನು ಬಸವಣ್ಣನು ಸ್ತ್ರೀಯರಿಗೆ ಕೊಟ್ಟು ಸ್ತ್ರೀ ಜನಾಂಗದ ಉದ್ಧಾರ ಮಾಡಿರುವನು.

---

## ಶಾಲೆಗಳಲ್ಲಿ ಕಾಯಕಗಳು.

**ಲೇಖಕ – ಶ್ರೀ ಗುರುಸಿದ್ಧಯ್ಯನವರು ಹಿರೇಮಠ**

ಈಗಿನ ಶಿಕ್ಷಣವು ಕೇವಲ ನೌಕರಿಗಾಗಿಯೇ ಏರ್ಪಟ್ಟಿದೆ. ನೌಕರಿಯೇನೂ ಶಿಕ್ಷಣದ ಮುಖ್ಯ ಗುರಿಯಲ್ಲ. ವಿದ್ಯಾರ್ಥಿಗಳನ್ನು ಬುದ್ಧಿವಂತರನ್ನಾಗಿಯೂ ನೀತಿವಂತರನ್ನಾಗಿಯೂ ರಾಷ್ಟ್ರ ಭಕ್ತರನ್ನಾಗಿಯೂ ಸ್ವಯಂ ಪೋಷಕರನ್ನಾಗಿಯೂ ಮಾಡುವದೇ ಶಿಕ್ಷಣದ ಉದ್ದೇಶವಾಗಿದೆ. ಅದರಲ್ಲಂತೂ ವಿದ್ಯಾರ್ಥಿಗಳನ್ನು ನಿರುದ್ಯೋಗಿಗಳನ್ನು ಮಾಡದೆ ಸ್ವಯಂ ಪೋಷಕರಾಗುವಂತೆ ಮಾಡುವದು ಅತ್ಯಂತ ಮಹತ್ವದಾದುದು. ನಮ್ಮ ವಿದ್ಯಾರ್ಥಿಗಳ ಲಕ್ಷವನ್ನು ಉದ್ಯೋಗ ಕಲಾ-ಕೌಶಲ್ಯಗಳ ಕಡೆಗೆ ತಿರುಗಿಸದ್ದರಿಂದಲೇ ನಾವು ಇನ್ನೂ ವರೆಗೆ ವಿದೇಶಿ ಸಾಮಾನುಗಳನ್ನವಲಂಬಿಸಿ ಕೂಡ್ರುವ ಅನಿಷ್ಟ ಪ್ರಸಂಗ ಬಂದಿದೆ. ಬ್ರಿಟಿಷರು ಕೇವಲ ನೌಕರಿಗಾಗಿಯೇ ನಮ್ಮ ದೇಶದಲ್ಲಿ ಶಿಕ್ಷಣವನ್ನು ಪ್ರಾರಂಭಿಸಿದರು. ನಮ್ಮ ಜನತಾ ಸರಕಾರವು ಶಾಲೆಗಳಲ್ಲಿ ಉದ್ಯೋಗಗಳನ್ನು ಸೇರಿಸದೆ ಬ್ರಿಟಿಷರ ಅಂಧಾನುಕರಣ ಮಾಡಿದರೆ ಬ್ರಿಟಿಷ ಸರಕಾರಕ್ಕೂ ನಮ್ಮ ಸರಕಾರಕ್ಕೂ ಏನೂ ಅಭ್ಯಂತ

ರವೇ ಉಳಿಯಲಾರದು. ಪರರಾಷ್ಟ್ರಗಳಲ್ಲಿ ನೌಕರಿಯು ಹೀನವೆಂದು ತಿಳಿದು ವಿದ್ಯಾರ್ಥಿಗಳು ಉದ್ಯೋಗಶೀಲರಾಗಿ ದೇಶದ ಸುಖಸಂಪತ್ತನ್ನು ಹೆಚ್ಚಿಸುತ್ತಿರುವರು. ಪರದೇಶಗಳಲ್ಲಿ ನೌಕರಿಗಳಿಗಿಂತಲೂ ಉದ್ಯೋಗಗಳು ಮೇಲ್ತರದವಾಗಿವೆ. ಆದರೆ ನಮ್ಮ ದೇಶದಲ್ಲಿ ದುರ್ದೈವದಿಂದ ನೌಕರಿಗಳಿಗೆ ಹೆಚ್ಚು ಪ್ರಸಕ್ತಿಯುಂಟು. ನಮ್ಮ ವಿದ್ಯಾರ್ಥಿಗಳು ಪಾಶ್ಚಾತ್ಯರ ಬೂಟು ಹ್ಯಾಟುಗಳ ಅನುಕರಣ ಮಾಡುವರೇ ಹೊರತು ಅವರ ಉದ್ಯೋಗ ಶೀಲ ತೆಯನ್ನು ಅನುಕರಿಸುವದಿಲ್ಲ. ಆದ್ದರಿಂದ ನಮ್ಮ ದೇಶವು ದಾರಿದ್ರ್ಯದಿಂದ ತೊಳಲುತ್ತಾ ಇದೆ. ಆದುದರಿಂದ ಸರಕಾರದವರು ಪ್ರತಿಯೊಂದು ಹಾಯ ಸ್ಕೂಲಿನಲ್ಲಿ ಉಪಯುಕ್ತವಾದ ಕೆಲವು ಕೈಗಾರಿಕೆ ಕಲಾ-ಕೌಶಲ್ಯಗಳನ್ನು ಕಡ್ಡಾಯವಾಗಿ ಜೋಡಿಸುವದು ದೇಶದ ಹಿತದೃಷ್ಟಿಯಿಂದ ಮಹತ್ವದ್ದಾಗಿದೆ.

ಕೇವಲ ಸರಕಾರವೇ ಎಲ್ಲವನ್ನು ಮಾಡಬೇಕೆಂದು ನಂಬಿಕೊಂಡು ಉಳಿದ ಖಾಸಗಿ ಶಿಕ್ಷಣ ಸಂಸ್ಥೆಗಳು ತಟಸ್ಥವಾಗಿ ಕುಳಿತುಕೊಳ್ಳುವದು ಜಾಣತನದ ಲಕ್ಷಣವಲ್ಲ. ಖಾಸಗಿ ಸಂಸ್ಥೆಗಳ ಚಾಲಕರೂ, ಸದಸ್ಯರೂ, ಶಿಕ್ಷಕರೂ, ವಿದ್ಯಾರ್ಥಿಗಳೂ, ಸಹಾನುಭೂತಿಯುಳ್ಳವರೂ ಎಲ್ಲರೂ ಸೇರಿ ಶೇರ ರೂಪದಿಂದ ಹಣಕೂಡಿಸಿ ಕೋ-ಆಪರೇಟಿವ್ಹ ಸಂಘವನ್ನು ಸ್ಥಾಪಿಸಿ ಆ ಮೂಲಕ ಶಾಲೆಗಳಲ್ಲಿ ಉಪಯುಕ್ತವಾದ ಕೈಗಾರಿಗಳನ್ನು ಸುರುವು ಮಾಡಬೇಕು. ಆಯಾಯ ಕಸಬುಗಳನ್ನು ಉತ್ತಮ ತರಬೇತು ಹೊಂದಿದ ವಿದ್ಯಾರ್ಥಿಗಳನ್ನು ಹೆಚ್ಚಿನ ತರಗತಿಯ ಶಿಕ್ಷಣಕ್ಕಾಗಿ ಪರದೇಶಗಳಿಗೆ ಕಳಿಸಿ ಅವರನ್ನು ಅದೇ ಸಂಸ್ಥೆಯಲ್ಲಿ ಶಿಕ್ಷಕರನ್ನಾಗಿ ನೇಮಿಸಿಕೊಳ್ಳಬೇಕು. ಯಾವ ಯಾವ ವಿದ್ಯಾರ್ಥಿಯ ಒಲವು ಯಾವ ಯಾವ ಕಲಾಕೌಶಲ್ಯಗಳಲ್ಲಿದೆಯೆಂ ಬದನ್ನು ತಜ್ಞರು ಕಂಡು ಹಿಡಿದು ಅವನಿಗೆ ಆಯಾಯ ಕೈಗಾರಿಕೆಗಳನ್ನು ಕಲಿಸಿಕೊಡಬೇಕು. ಅವರ ಒಲವನ್ನು ತಿಳಿದುಕೊಳ್ಳುವದು ತಾಯಿ ತಂದೆ ಗಳಿಗೆ ಶಕ್ಯವಿಲ್ಲ. ತಜ್ಞರಾದ ಶಿಕ್ಷಕರು ಅದನ್ನರಿತು ವಿದ್ಯಾರ್ಥಿಗಳನ್ನು ಉದ್ಯೋಗಗಳಿಗೆ ಪ್ರೋತ್ಸಾಹಿಸಬೇಕು. ಕಲಿತವರೆಲ್ಲರೂ ಪದವೀಧರ ರಾಗುವದು ಶಕ್ಯವಿಲ್ಲ. ೧೦೦ಕ್ಕೆ ೧೦ ಜನರು ಪದವೀಧರರಾದರೆ ಉಳಿದ ೯೦ ಜನರು ಬಹುಶಃ ನಿರುದ್ಯೋಗಿಗಳೂ ಅಲ್ಪ ನೌಕರರೂ ಆಗಿರುವ ದುಂಟು. ಅಂಥವರಿಗೆ ಒಂದಿಲ್ಲೊಂದು ಕಲಾ ಕೌಶಲ್ಯದಲ್ಲಿ ಗತಿ ಇದ್ದೇ ಇರುತ್ತದೆ. ಅದನ್ನು ಕಂಡುಹಿಡಿದು ಅವರ ಜೀವನದಿಶೆಯನ್ನು ಅತ್ತ ಹೊರ ಳಿಸುವದು ಅತ್ಯಂತ ಮಹತ್ವದ ಕೆಲಸ. ಶಾಲೆಗಳಲ್ಲಿ ಉದ್ಯೋಗಗಳ

ನಡೆದರೆ ಆ ಸಂಸ್ಥೆಗಳು ಸ್ವಯಂಪೋಷಕವಾಗುವವು. ಅಲ್ಲದೆ ದೊಡ್ಡ ವ್ಯವಹಾರೀ ಕೇಂದ್ರಗಳು ಕೂಡ ಆಗಬಲ್ಲವು. ಭಿಕ್ಷೆ ಬೇಡಿ ದುಡ್ಡು ಕೂಡಿಸಿ ಸಂಸ್ಥೆಗಳನ್ನು ನಡೆಯಿಸುವದಕ್ಕಿಂತ ಉದ್ಯೋಗಗಳಿಂದ ದ್ರವ್ಯ ಗಳಿಸಿ ಸಂಸ್ಥೆಗಳನ್ನು ನಡೆಯಿಸುವದು ಹೆಚ್ಚು ಶ್ರೇಯಸ್ಕರವಾಗಿದೆ.

ನಾವು ಸದ್ಯಕ್ಕೆ ಹಾಯಸ್ಕೂಲುಗಳಲ್ಲಿ ಕಬ್ಬಿಣ ತಾಮ್ರದ ಕೆಲಸ, ಕಟ್ಟಿಗೆಯ ಕೆಲಸ, ಹೊಲಿಗೆಯ ಕೆಲಸ, ಟಂಕು ಕೂಡಿಸುವದು, ಕಲಾಯಿ ಮಾಡುವದು--- ಈ ಕಾರ್ಯಗಳನ್ನು ಪ್ರಾರಂಭಿಸಬಹುದು. ಇವು ಪ್ರತಿನಿತ್ಯದ ಪ್ರಪಂಚದಲ್ಲಿ ಅತ್ಯಂತ ಮಹತ್ವದ ಉದ್ಯೋಗಗಳಾಗಿವೆ. ಕಬ್ಬಿಣದಿಂದ ಟ್ರಂಕು, ಬಾದಲಿ, ಬುಟ್ಟಿ ಹಂಚು, ಸರಪಳಿ ಮುಂತಾದ ಅನೇಕ ಉಪಯುಕ್ತ ಸಾಮಾನುಗಳಾಗುತ್ತವೆ. ಅದರಂತೆ ತಾಮ್ರ ಹಿತ್ತಾಳಿಗಳಿಂದ ಹಂಡೆ ಕೊಡ ತಪ್ಪೇಲಿ ಗಂಗಾಳ ತಂಬಿಗೆ ಮುಂತಾದ ಸಾಮಾನುಗಳು ಸಿದ್ಧವಾಗುವವು. ಕಟ್ಟಿಗೆಯಿಂದ ಕುರ್ಚಿ, ಮೇಜು, ಬಾಕು, ಪೆಟ್ಟಿಗೆ, ಕಪಾಟು, ಸ್ಟೂಲು, ಡೆಸ್ಕು, ಮುಂತಾದವುಗಳು ತಯಾರಾಗುತ್ತವೆ. ಹೊಲಿಗೆಯಲ್ಲಿ ಸ್ತ್ರೀ ಪುರುಷರು ತೊಡುವ ಎಲ್ಲ ಪೋಷಾಕುಗಳನ್ನು ಸಿದ್ಧಪಡಿಸಬಹುದು. ಅದೇ ಮೇರೆಗೆ ಟಂಕು ಕೂಡಿಸುವ ಕಲಾಯಿ ಮಾಡುವ ಕೆಲಸಗಳಾದರೂ ಬಹು ಉಪಯುಕ್ತವಾಗಿವೆ. ಶೇರ ಹೋಲ್ಡರರೆಲ್ಲ ತಮ್ಮ ಮನೆಗೆ ಬೇಕಾಗುವ ಸಾಮಾನುಗಳನ್ನು ಶಾಲೆಯ ಉದ್ಯೋಗ ಮಂದಿರದಿಂದಲೇ ಕ್ರಯಕ್ಕೆ ತೆಗೆದುಕೊಳ್ಳಬೇಕು. ತಮ್ಮ ಸಾಮಾನುಗಳ ರಿಪೇರಿಯನ್ನು ಅಲ್ಲಿಯೇ ಮಾಡಿಸಬೇಕು. ಇದರಿಂದ ಶಾಲೆಯ ಉದ್ಯೋಗಗಳಿಗೆ ಹೆಚ್ಚು ಕಳೆ ಬರುತ್ತದೆ. ಉತ್ತಮ ತರಗತಿಯ ಸಾಮಾನುಗಳೂ ಸಿಗುತ್ತವೆ. ಅಲ್ಲದೆ ಶಾಲೆ ಸಮಾಜಗಳಲ್ಲಿ ಸಹಕಾರ ಬೆಳೆದು ಸಂಸ್ಥೆಗಳು ಊರ್ಜಿತ ಸ್ಥಿತಿಗೇರುವವು. ಇಂಥ ಸಂಸ್ಥೆಗಳಿಗೆ ಸರಕಾರವೂ ಹೆಚ್ಚು ಗ್ರ್ಯಾಂಟು ಕೊಡುವದು.

ಈ ಕಲಾ ಕೌಶಲ್ಯಗಳನ್ನು ಕಲಿಯಲಿಕ್ಕೆ ಹಾಯಸ್ಕೂಲಿನ ೫-೬ ಇಯತ್ತೆಯ ಪ್ರೌಢ ವಿದ್ಯಾರ್ಥಿಗಳಿಗೆ ಪ್ರೋತ್ಸಾಹನ ಕೊಡಬೇಕು ಯಾಕಂದರೆ ಆ ಕಾಲಕ್ಕೆ ಅವರಲ್ಲಿ ಉದ್ಯೋಗಾಭಿರುಚಿಯೂ ಕೆಲಸ ಮಾಡುವ ಪ್ರವೃತ್ತಿಯೂ ಹೆಚ್ಚಾಗಿರುತ್ತದೆ. ಮ್ಯಾಟ್ರಿಕ್ ಅಥವಾ ಅದರ ಸರಿಸಮಾನವಾದ ಪರೀಕ್ಷೆ ಪಾಸಾಗಿ ಕಾಲೇಜಿಗೆ ಹೋಗುವ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆ. ೧೦೦ಕ್ಕೆ ೩೦ ರಷ್ಟು ಕಾಲೇಜಿಗೆ ಹೋಗಬಹುದು. ಉಳಿದವರು ನಿರುದ್ಯೋಗಿಗಳಾಗಿರುವರು. ಅಂಥ ನಿರುದ್ಯೋಗಿಗಳಿಗೆ ಉಪಯುಕ್ತವಾದ ಒಂದು

ಉದ್ಯೋಗವನ್ನು ಕಲ್ಪಿಸಿಕೊಟ್ಟರೆ ಅವರು ತಮ್ಮ ಪ್ರಪಂಚವನ್ನು ಸುಸೂತ್ರವಾಗಿ ಸಾಗಿಸಿಕೊಂಡು ಹೋಗಲು ಸಮರ್ಥರಾಗುತ್ತಾರೆ. ಹೊರಗಿಂದ ಯಾರಾದರೂ ಶಾಲೆಯಲ್ಲಿಯ ಉದ್ಯೋಗ ದಂಧೆಗಳನ್ನು ಕಲಿಯಬೇಕೆಂದು ಅಪೇಕ್ಷಿಸಿದರೆ ಅವರ ಕಡೆಯಿಂದ ೫೦ ರೂ. ಡೆಪೋಜಿಟ್ ತೆಗೆದುಕೊಂಡು ಆ ದಂಧೆಗಳನ್ನು ಕಲಿಸಬಹುದು ವಿದ್ಯಾರ್ಥಿಗಳು ಉದ್ಯೋಗ ನಿಂತರಾದರೆ ಅವರ ವ್ಯಾಯಾಮವು ಒಳ್ಳೇ ಉಪಯುಕ್ತವಾಗುವದು. ವಿದ್ಯಾರ್ಥಿಗಳಿಗೆ ಶಾರೀರಕ ಶಿಕ್ಷಣ ಕೊಡುವದೆಂದರೆ ಆಟದ ಬೈಲಿನಲ್ಲಿ ಆಡಿಸುವದಕ್ಕಿಂತ ತಾಲೀಮುಖೋಲೆಯಲ್ಲಿ ಕಸರತ್ತು ಮಾಡಿಸುವದಕ್ಕಿಂತ ಒಂದು ಉಪಯುಕ್ತವಾದ ಉದ್ಯೋಗದಲ್ಲಿ ದುಡಿಸಿದರೆ ಆ ವ್ಯಾಯಾಮವು ಸಾರ್ಥಕವಾದಂತಾಗುವದು. ಮನಸ್ಸುಗೊಟ್ಟು ಕಾಯಕ ಮಾಡುವಾಗ ಅವರ ಮನಸ್ಸಿನ ಏಕಾಗ್ರತೆಯು ಬೆಳೆದು ಆನಂದವಾಗುವದು. ಅದರ ಉದ್ಯೋಗವಿಲ್ಲದ ಆಲಸಿಯ ಮನಸ್ಸು ಚಂಚಲವಾಗಿ ತೊಂದರೆಗೀಡಾಗುವದು. ಒಬ್ಬನು ಒಂದು ಉದ್ಯೋಗವನ್ನು ಕಲಿತುಕೊಂಡರೆ ಮುಂದೆ ತನ್ನ ಮಕ್ಕಳು ಮರಿಗಳಿಗೆ ವಂಶಪರಂಪರ್ಯವಾಗಿ ಆ ಕಾರ್ಯವನ್ನು ನಡೆಯಿಸಿಕೊಂಡು ಹೋಗಲು ಅನುವು ಮಾಡಿಕೊಟ್ಟಂತಾಗುವದು. “ಬಾಳಿನಲ್ಲಿ ಬದುಕು” ಎಂಬುದು ಶರಣರ ಜೀವನದ ಉಸಿರಾಗಿದೆ. ಕೇವಲ ಅಂಧ ಶ್ರದ್ಧೆಯಿಂದ ಶಿವಪೂಜೆ ಮಾಡುವದೇನೂ ಮಹತ್ವದ್ದಲ್ಲ. ಕಾಯಕವೇ ಕೈಲಾಸವೆಂದು ತಿಳಿದು ಅದನ್ನು ಮನಗೊಟ್ಟು ಮಾಡುವದರಲ್ಲಿಯೇ ನಿಜವಾದ ಶಿವಪೂಜೆಯು ಅಳವಟ್ಟಿರುತ್ತದೆ. ಅಂತೆಯೇ “ಕಾಯಕದಿಂದಲಿ ಕರ್ಮವೆ ಹರುಷ, ಕಾಯಕವಿಲ್ಲದ ಜೀವನ ವಿರಸ” ಎಂಬ ನಾಣ್ಣುಡಿಯುಂಟಾಗಿದೆ. ಹೀಗಿದ್ದ ಬಳಿಕ ಪ್ರತಿಯೊಂದು ಹಾಯಸ್ಕೂಲಿನಲ್ಲಿ ಈ ತರಹದ ಉದ್ಯೋಗ ದಂಧೆಗಳನ್ನು ಕಲಿಸುವದು ವಿಹಿತವಲ್ಲವೇ ?

ಶಾಲೆಗಳು ಮುಂಜಾನೆ ೧೧॥ ಘಂಟೆಯಿಂದ ಸಾಯಂಕಾಲ ೫॥ ಗಂಟೆಯವರೆಗೆ ನಡೆಯುವವು. ಆದರೆ ಮುಂಜಾನೆ ೭ ರಿಂದ ೧೧ ಗಂಟೆಯ ವರೆಗೆ ಶಾಲೆಯ ಕಟ್ಟಡವು ಹಾಗೇ ಖಾಲಿ ಬಿದ್ದಿರುವದು. ಸಾಯಂಕಾಲ ೬ ರಿಂದ ರಾತ್ರಿ ೯ ರವರೆಗಂತೂ ಖಾಲಿ ಇದ್ದೇ ಇರುತ್ತದೆ. ಹೀಗಿರಲು ಆ ಅವಧಿಯಲ್ಲಿ ಶಾಲೆಯೊಳಗೆ ಔದ್ಯೋಗಿಕ ಶಿಕ್ಷಣ ವಿಷಯಗಳು ನಡೆದರೆ ಅನಾಯಾಸವಾಗಿ ಲಕ್ಷಾಂತರ ರೂಪಾಯಿ ವೆಚ್ಚಮಾಡಿ ಕಟ್ಟಿಸಿದ ಇಮಾರತಿಯ ಸದುಪಯೋಗವನ್ನು ಮಾಡಿಕೊಂಡಂತಾಗುವದು.

---

## ಲಿಂಗಕ್ಕೆ ಗುರುಪ್ರಸಾದವು.

ಲಿಂಗವು ಗುರುವಿನ ಮನಸ್ಥಲದಲ್ಲಿ ಮತ್ತು ಭಕ್ತನು ಗುರುವಿನ ಕರಸ್ಥಲದಲ್ಲಿ ಪರಿಣಾಮಹೊಂದುತ್ತಾರೆ. ಹೀಗೆ ಭಕ್ತ ಮತ್ತು ಲಿಂಗ ಇವು ಗುರುವಿನ ಮೂಲಕ ಪ್ರಕಟವಾಗುತ್ತಿದ್ದು ಈ ಉಭಯಕ್ಕೆ ಗುರು ಪ್ರಸಾದವು ಪ್ರಾಣವಾಗಿದೆ. ಆದ್ದರಿಂದ ಗುರುಪ್ರಸಾದವು ಲಿಂಗ ಮತ್ತು ಭಕ್ತ ಈ ಉಭಯಕ್ಕೆ ಸಲ್ಲುವುದೆಂದು ಭಾವಿಸಿ ಅರ್ಪಿಸಿ ಸ್ವೀಕರಿಸುವುದು.

## ಗುರು, ಲಿಂಗಗಳಿಗೆ ಜಂಗಮ ಪ್ರಸಾದವು.

ಭಕ್ತನಿಗೆ ಲಿಂಗವು ಪ್ರಾಣವು, ಲಿಂಗಕ್ಕೆ ಗುರುವು ಪ್ರಾಣವು, ಗುರುವಿಗೆ ಜಂಗಮವು ಪ್ರಾಣವು. ಈ ರೀತಿಯಾಗಿರುವದರಿಂದ ಭಕ್ತ ಲಿಂಗ ಗುರು ಇವರಿಗೆ ಜಂಗಮ ಪ್ರಸಾದವು ಸಲ್ಲುವುದೆಂದು ಭಾವಿಸಿ ಪದಾರ್ಥಗಳ ಪೂರ್ವಾಶ್ರಯವನ್ನು ಕಳೆದು ಅರ್ಪಿಸಿ ಸ್ವೀಕರಿಸುವುದು.

## ಗುರು ಲಿಂಗ ಜಂಗಮಗಳಿಗೆ ಭಕ್ತನ ಪ್ರಸಾದ.

ಭಕ್ತನು ಅಂಗಸ್ವರೂಪನಾಗಿದ್ದು ಅವನಿಗೆ ಗುರು ಲಿಂಗ ಜಂಗಮ ಗಳು ಪ್ರಾಣಸ್ವರೂಪರು. ಅದರಿಂದ ಗುರು ಲಿಂಗ ಜಂಗಮಗಳಿಗೆ ಭಕ್ತನೇ ಆಧಾರವು. ಆದ್ದರಿಂದ ಭಕ್ತನಿಂದ ಬಂದ ಪ್ರಸಾದವು ಗುರುವಿಗೆ, ಗುರುವಿನಿಂದೊಗೆದ ಪ್ರಸಾದವು ಲಿಂಗಕ್ಕೆ, ಉಂಟಾಗುತ್ತವೆ ಜಂಗಮಕ್ಕೂ ಕೂಡ ಭಕ್ತನೇ ಅಂಗವಾಗಿರುವನು. ಆದ್ದರಿಂದ ಜಂಗಮಕ್ಕೆ ಭಕ್ತನ ಪ್ರಸಾದವಿದೆ. ಹೀಗೆ ಭಕ್ತ ಗುರು ಲಿಂಗ ಜಂಗಮ ಪ್ರಸಾದಗಳಲ್ಲೆಲ್ಲ ಅಭಿನ್ನತೆಯುಂಟಾಗಿರುತ್ತದೆ.

## ಲಿಂಗ, ಜಂಗಮ, ಪ್ರಸಾದ.

ಅರ್ಪಣದ ಕಾರ್ಯದಲ್ಲಿ ಮನವನ್ನರ್ಪಿಸಿ ಸಾಮರಸ್ಯದಿಂದ ವರ್ತಿಸಿದಲ್ಲಿ ಅದು ಲಿಂಗರೂಪವು. ಧನವನ್ನರ್ಪಿಸಿ ಸಾಮರಸ್ಯದಿಂದ ವರ್ತಿಸಿದರೆ ಅದು ಜಂಗಮರೂಪವು. ತನುವನ್ನರ್ಪಿಸಿ ಸಾಮರಸ್ಯದಿಂದ ವರ್ತಿಸಿದರೆ ಅದು ಪ್ರಸಾದರೂಪವು. ಹೀಗೆ ಈ ತ್ರಿವಿಧ ಸುಖವನ್ನು ಅರ್ಪಿಸಿದಲ್ಲಿ ಅದು ಬಯಲು. ಹೀಗೆ ಮನವನ್ನು ಲಿಂಗವು, ಧನವನ್ನು ಜಂಗಮವು, ತನುವನ್ನು ಪ್ರಸಾದವು ಒಳಕೊಂಡಿರುತ್ತವೆ

## ಗುರು ಲಿಂಗ ಜಂಗಮ ಪ್ರಸಾದಗಳು.

ಪರಮಾತ್ಮನು ಗುರು ರೂಪಾಗಿ ಕಾಯಸ್ಥಲಕ್ಕೆ ಲಿಂಗವಾಗಿ, ಮನಸ್ಥಲಕ್ಕೆ ಮಂತ್ರವಾಗಿ, ಪ್ರಾಣಸ್ಥಲಕ್ಕೆ ಜಂಗಮವಾಗಿ, ವ್ಯವಹರಿಸುತ್ತಾನೆ. ಅಂದರೆ ತನುವಿನಲ್ಲಿ ಗುರುವು, ಮನದಲ್ಲಿ ಲಿಂಗವು, ಪ್ರಾಣದಲ್ಲಿ ಜಂಗಮವು, ಅರಿವಿನಲ್ಲಿ ಪ್ರಸಾದವಾಗಿರುತ್ತಾನೆ.

## ಗುರು ಲಿಂಗ ಜಂಗಮ ಪ್ರಸಾದ ಪಾದೋದಕಗಳು.

ಪರಮಾತ್ಮನು ಗುರುವಾಗಿ ಉಪದೇಶಿಸುತ್ತಾನೆ. ಲಿಂಗವಾಗಿ ಮನದಲ್ಲಿ ಇಂಬುಗೊಳ್ಳುತ್ತಾನೆ ಜಂಗಮವಾಗಿ ಬಂದು ಮನಸ್ಸಿನ ಅಹಂಭಾವವನ್ನು ದೂರ ಮಾಡುತ್ತಾನೆ. ಪ್ರಸಾದವಾಗಿ ಸರ್ವಾಂಗವನ್ನೆಲ್ಲ ಅವಗ್ರಹಿಸುತ್ತಾನೆ. ಕಡೆಗೆ ಪಾದೋದಕವಾಗಿ ಮನುಷ್ಯನ ಒಳಹೊರಗೆಂಬುದನ್ನೆಲ್ಲ ಶುದ್ಧಗೊಳಿಸಿ ಅವನನ್ನು ಚಿತ್ ಸ್ವರೂಪನನ್ನಾಗಿ ಮಾಡುತ್ತಾನೆ

## ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಗಳು,

ಗುರುವಿನಲ್ಲಿ ಶುದ್ಧವು, ಲಿಂಗದಲ್ಲಿ ಸಿದ್ಧವು. ಜಂಗಮದಲ್ಲಿ ಪ್ರಸಿದ್ಧವು ಹೀಗೆ ಪ್ರಸಾದಗಳಿರುತ್ತವೆ. ಆದ್ದರಿಂದ ಕಾಯದ ಕಯ್ಯಲ್ಲಿ ಇಷ್ಟಲಿಂಗಕ್ಕೆ ಕೊಟ್ಟದು ಶುದ್ಧ ಪ್ರಸಾದವು. ಮನದ ಕಯ್ಯಲ್ಲಿ ಪ್ರಾಣಲಿಂಗಕ್ಕೆ ಕೊಟ್ಟದು ಸಿದ್ಧಪ್ರಸಾದವು ಪರಿಣಾಮವಾಗಿ ಬಂದ ಪದಾರ್ಥವನ್ನು ಭಾವದ ಕಯ್ಯಲ್ಲಿ ಹೃದಯ ಮುಖದಲ್ಲಿ ಭಾವಲಿಂಗಕ್ಕೆ ಕೊಟ್ಟದು ಪ್ರಸಿದ್ಧ ಪ್ರಸಾದವು. ಈ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಗಳನ್ನು ಏಕರೂಪ ಮಾಡಿದಲ್ಲಿ ಅದು ಮಹಾಘನಲಿಂಗವೆನಿಸಿಕೊಳ್ಳುವದು. ಆ ಮಹಾಲಿಂಗವು ತಾನಾದುದೇ ಏಕ ಪ್ರಸಾದವು. ಗುರುವಿನಿಂದ ಸರ್ವಾಂಗವೆಲ್ಲ ಶುದ್ಧ ಪ್ರಸಾದವಾಗುವದು. ಎಲ್ಲ ವಿಷಯಗಳನ್ನು ದುರ್ವರ್ತನೆಗಳನ್ನು ಲಿಂಗಮುಖದಿಂದ ಜಯಿಸಿದಲ್ಲಿ ಸರ್ವಾಂಗವೆಲ್ಲ ಸಿದ್ಧಪ್ರಸಾದವಾಗುವದು. ಸಮಸ್ತ ಕರಣಗಳ ದುರ್ವರ್ತನೆಗಳನ್ನು ಜಂಗಮ ಮುಖದಿಂದ ಜಯಿಸಿದಲ್ಲಿ ಸರ್ವಾಂಗವೆಲ್ಲ ಪ್ರಸಿದ್ಧ ಪ್ರಸಾದವಾಗುವದು. ಗುರು ಪ್ರಸಾದವು ಅಂಗವನ್ನು ಸೋಂಕಿದಲ್ಲಿ ಮನಸ್ಸು ಲಿಂಗವಾಗುವದು. ಜಂಗಮ ಪ್ರಸಾದವು ಅರಿವನ್ನು ಸೋಂಕಿದಲ್ಲಿ ಸರ್ವಾಂಗ ಗುರುವಾಗುವದು. ಲಿಂಗ ಪ್ರಸಾದವು ಮನವನ್ನು ಸೋಂಕಿದಲ್ಲಿ ಅದು ಅಖಂಡಿತ ಪ್ರಸನ್ನ ಪ್ರಸಾದವಾಗುವದು. ಕಾಯಾ

ರ್ಪಣವರ್ಪಿತವಾಗಿ ಉಳಿದುದು ಶುದ್ಧ ಪ್ರಸಾದವೆಂತಲೂ ಕರಣಾರ್ಪಿತವರ್ಪಿತವಾಗಿ ಉಳಿದುದು ಸಿದ್ಧ ಪ್ರಸಾದವೆಂತಲೂ ಭಾವಾರ್ಪಣವಾಗಿ ಉಳಿದುದು ಪ್ರಸಿದ್ಧ ಪ್ರಸಾದವೆಂತಲೂ ಬೇರೆ ವಿಧವಾಗಿಯೂ ಹೇಳಲ್ಪಡುವದುಂಟು.

## ಸ್ವಯುಪ್ರಸಾದಿ, ಜ್ಞಾನಪ್ರಸಾದಿ, ಮಹಾಪ್ರಸಾದಿ.

ಇವು ಪ್ರಸಾದಿ ಸ್ಥಲವನ್ನು ಹೊಂದಿದವನ ತರಗತಿಗಳಾಗಿವೆ. ಮೊದಲು ತ್ರಿವಿಧ ಪ್ರಸಾದವನ್ನು ಕೊಂದಿದಲ್ಲಿ ಸ್ವಯು ಪ್ರಸಾದಿಯು. ಸ್ವಯು ಪ್ರಸಾದಿಯು ತನ್ನವಾಯು ಅರಿವು ಉಂಟಾಗಲು ಅವನು ಜ್ಞಾನ ಪ್ರಸಾದಿಯು. ಜ್ಞಾನ ಪ್ರಸಾದಿಯು ತನ್ನವಾಯು ಮಹಾಪ್ರಸಾದ ಸ್ಥಿತಿಯು ಪ್ರಾಪ್ತವಾಗುತ್ತದೆ

## ಆದಿಪ್ರಸಾದಿ, ಸೇವ್ಯಪ್ರಸಾದಿ, ಅಂತ್ಯಪ್ರಸಾದಿ.

ಇಷ್ಟಲಿಂಗಕ್ಕೆ ಸೋಂಕಿ ಬಂದ ಪ್ರಸಾದವನ್ನು ಸ್ವೀಕರಿಸಲು ಅದು ಆದಿಪ್ರಸಾದಿಯು. ಆ ಇಷ್ಟಲಿಂಗವನ್ನು ಸೋಂಕಿ ಬಂದ ಪ್ರಸಾದವು ಪ್ರಾಣಲಿಂಗವನ್ನು ಸೋಂಕಿ, ಆಗ ಉಂಟಾದ ಪ್ರಸಾದವನ್ನು ಸ್ವೀಕರಿಸಲು ಅದು ಸೇವ್ಯ ಪ್ರಸಾದಿಯು. ಹೀಗೆ ಪ್ರಾಣಲಿಂಗವನ್ನು ಸೋಂಕಿ ಭಾವಲಿಂಗ ಮುಖಕ್ಕೆ ಬರಲು ಅಂಥದನ್ನು ಸೇವಿಸಲು ಅದು ಅಂತ್ಯ ಪ್ರಸಾದಿಯು.

## ಅಚ್ಚ ಪ್ರಸಾದಿ, ನಿಚ್ಚಪ್ರಸಾದಿ, ಸಮಯ ಪ್ರಸಾದಿ.

ಅಚ್ಚ ಪ್ರಸಾದಿಯು ಗುರುವು ಬೋಧಿಸಿದಂಥ ಆಚರಣೆಯ ಮಾರ್ಗವನ್ನು ತಿಳಿದು ವ್ರತಾಚರಣೆಗೆ ಏನೂ ತಪ್ಪುತಡೆಗಳಿಲ್ಲದ ಹಾಗೆ ಆಚರಿಸುತ್ತಾನೆ. ನಿಚ್ಚಪ್ರಸಾದಿಯಾದವನು ಕೂಡ ಗುರುವು ಹೇಳಿದ ಮೇಲುಪಜ್ಞೆಯಂತೆ ತನ್ನ ಆಚರಣೆಯನ್ನು ಪರಿಪಡಿಸಿಕೊಂಡು ನಡೆಯುತ್ತಾನೆ. ಅಂದರೆ ಜ್ಞಾನಿಗಳು ಯಾವ ಆಚರಣೆಯನ್ನು ಹೇಳಿಕೊಡುತ್ತಾರೋ ಅದರಂತೆ ಅವರೊಡನೆ ನಡೆದು ಮುಂದೆ ಅವರಿಲ್ಲದಿದ್ದರೂ ಕೂಡ ತಾನೇ ಅವರಂತೆ ಆಚರಿಸುತ್ತಾನೆ. ಸಮಯ ಪ್ರಸಾದಿಯು ಈ ಮೂವರಲ್ಲಿ ಎಲ್ಲಕ್ಕೂ ಅಶಕ್ತನು. ಅವನು ತತ್ಕಾಲಕ್ಕೆ ಬಂದ ಜಂಗಮನೊಡನೆ ಯಥಾಶಕ್ತಿ ಆಚರಿಸುತ್ತಾನೆ. ಆಚರಣೆಯ ಬಗ್ಗೆ ಅವನಿಗೆ ಕಟ್ಟುಗಳಿರುವದಿಲ್ಲ. ಒಂದು ವೇಳೆ ಜಂಗಮವು ಇಲ್ಲದಿದ್ದರೂ

ಆವನಿಗೆ ಕೊರತೆ ಇಲ್ಲ ಅಚ್ಚ ಪ್ರಸಾದಿಯು ವಿಧಿಪೂರ್ವಕವಾಗಿ ಜಂಗಮದ ನಿರೀಕ್ಷಣೆಯಲ್ಲಿಯೇ ಪಾದೋದಕವನ್ನು ತಪ್ಪದೆ ಸ್ವೀಕರಿಸುತ್ತಾನೆ. ಆದರೆ ನಿಚ್ಚ ಪ್ರಸಾದಿಯು ಜಂಗಮವು ಒಂದೊಪ್ಪತ್ತು ತಪ್ಪಿದರೂ ಹಿಂದಿನ ಸಂಬಂಧವನ್ನಿಟ್ಟುಕೊಂಡು ಆಚರಿಸುತ್ತಾನೆ. ತನ್ನ ಸಮಯೋಚಿತಕ್ಕೆ ಕ್ರಿಯಾ ಜಂಗಮವು ದೊರೆಯದಿದ್ದರೂ ಅವನು ತನ್ನ ಹಿಂದಿನ ಸಂಬಂಧದ ಮೂಲಕ ತನ್ನ ಕ್ರಿಯೆಗಳನ್ನು ಮುಗಿಸುತ್ತಾನೆ. ಅಂಥ ಕಾಲದಲ್ಲಿ ಅವನು ಷೋಡಶಕಲಾ ಸ್ವರೂಪವಾದ ತನ್ನ ಚಿದ್ಘನ ಮಹಾಲಿಂಗವನ್ನು ನಿರಂಜನ ಜಂಗಮದೋಪಾದಿಯಲ್ಲಿ ಭಾವಿಸಿ ನಿರ್ಗುಣಪೂಜೆ ಮಾಡಿ ಅಷ್ಟವಿಧ ಮಂತ್ರ ಸಕೀಲದಿಂದ ಅಷ್ಟವಿಧ ಲಿಂಗಧ್ಯಾನದಿಂದ ಅದಕ್ಕೆ ಸಮರ್ಪಿಸಿ ಪಾದೋದಕವನ್ನು ಸೇವಿಸುತ್ತಾನೆ. ಕ್ರಿಯಾ ಜಂಗಮ ಮೂರ್ತಿಗಳು ಅರ್ಚನೆಯ ಸಮಯದಲ್ಲಿ ಒಂದುವೇಳೆ ಬಂದರೆ ದಿವಾರಾತ್ರಿ ಎನ್ನದೆ ಅವರೊಡನೆ ಕ್ರಿಯಾಚರಣೆಯನ್ನಾಚರಿಸುವವನು ಅಚ್ಚಪ್ರಸಾದಿಯು. ಆದರೆ ಸಮಯೋಚಿತದಲ್ಲಿ ಹೀಗೆ ಕ್ರಿಯಾಜಂಗಮವು ದೊರೆಯದಿದ್ದರೆ ಆಗ ಅವನು ಮೇಲೆ ಹೇಳಿದಂತೆ ನಿಚ್ಚಪ್ರಸಾದಿಯೋಪಾದಿಯಲ್ಲಿ ಆಚರಿಸುತ್ತಾನೆ. ಆದರೆ ಅವನಿಗೆ ಆವ ಜಂಗಮವೂ ದೊರೆಯದೆ ಹೋದದ್ದಾದರೆ ತನ್ನ ಇಷ್ಟ ಮಹಾಲಿಂಗವೇ ಜ್ಞಾನ ಜಂಗಮ ಸ್ವರೂಪವೆಂದು ಭಾವಿಸಿ ಅದರ ಪರಿಣಾಮ ಪ್ರಸಾದದಲ್ಲಿ ಲೋಲುಪ್ತನಾಗುತ್ತಾನೆ. ಇವನು ಸಮಯ ಪ್ರಸಾದಿಯು.

ಆದರೆ ನಾವು ಲಕ್ಷಿಸತಕ್ಕದ್ದೇನಂದರೆ ಈ ಮೂವರು ಗುರುವಿನ ಮೂಲಕ ದೀಕ್ಷೆಯನ್ನು ಹೊಂದಿ ಅಂತರಂಗದಲ್ಲಿ ಬೆಳಗುವ ಪ್ರಾಣ ಲಿಂಗವನ್ನು ಇಷ್ಟಲಿಂಗದಲ್ಲಿ ಬಹಿಷ್ಕರಿಸಿಕೊಂಡವರಿರಬೇಕು. ಲಿಂಗಾಂಗಗಳು, ಷಟ್‌ಸ್ಥಾನಗಳು ಆವವೆಂಬುದರ ಜ್ಞಾನ, ಚಿದ್ವಿಭೂತಿ, ಚಿದ್ರುದ್ರಾಕ್ಷಿ, ಪಂಚಾಕ್ಷರ, ಷಡಕ್ಷರ ಇವುಗಳ ಅರುಹು, ಷಟ್‌ಸ್ಥಲ ಮಾರ್ಗ ಮತ್ತು ಷಡ್ವಿಧಶೀಲ ವ್ರತ ನೇಮಗಳ ತಿಳುವಳಿಕೆ, ಷೋಡಶ ಭಕ್ತಿಯ ಆಚರಣೆ, ಮೂವತ್ತೆರಡು ಕಲೆಗಳ ಜ್ಞಾನ, ಈ ಎಲ್ಲವುಗಳ ನಿರ್ಣಯವನ್ನು ತಿಳಿದುಕೊಂಡಿರಬೇಕು. ಈ ಜ್ಞಾನವುಳ್ಳವರು ಆಯಾ ಕಾಲಗಳಲ್ಲಿ ಹೇಗೆ ವರ್ತಿಸಬೇಕೆಂಬುದನ್ನು ವಚನಕಾರರು ಮೇಲೆ ವಿವರಿಸಿದ ಈ ಮೂರು ಭೇದಗಳ ಮೂಲಕ ವಿವರಿಸುತ್ತಾರೆ.

## ಭಿನ್ನ ಭೋಜನ, ಪ್ರಸಾದಭೋಜನ, ಸಹಭೋಜನ.

ಇವು ಸೇವನೆಯ ಕಾಲದಲ್ಲಿ ಲಿಂಗಕ್ಕರ್ಪಿಸಿ ಭುಂಜಿಸುವ ವಿಧಗಳಾಗಿರುತ್ತವೆ ಮುಂದಿಟ್ಟ ಸಕಲ ಪದಾರ್ಥಗಳನ್ನು ಏಕಕಾಲಕ್ಕೆ ಲಿಂಗಕ್ಕೆ ಕೊಟ್ಟು ಭುಂಜಿಸುವದು ಭಿನ್ನಭೋಜನವು. ಮುಂದಿಟ್ಟ ಸಕಲ ಪದಾರ್ಥಗಳನ್ನು ಒಂದೇ ವೇಳೆ ಲಿಂಗಕ್ಕೆ ಕೊಡದೆ ಎತ್ತಿದ ಭೋಜನವನ್ನೇ ಲಿಂಗಕ್ಕೆ ಕೊಟ್ಟು ಅದನ್ನು ಕೆಳಕ್ಕೆ ಇಳುಹದೆ ಕೊಳ್ಳುವದು ಪ್ರಸಾದ ಭೋಜನವು. ಮುಂದಿಟ್ಟ ಪದಾರ್ಥಗಳನ್ನೆಲ್ಲ ಲಿಂಗಕ್ಕೆ ಮೊದಲು ಕೊಟ್ಟು ಭೋಜ್ಯ ಭೋಜ್ಯಕ್ಕೆ ಕೊಟ್ಟುಕೊಂಬುದು ಸಹ ಭೋಜನವು ಇವು ವೀರಶೈವರಲ್ಲಿ ಊಟಮಾಡುವ ಪದ್ಧತಿಗಳಾಗಿರುತ್ತವೆ. ಆಯಾ ಕಾಲಗಳಲ್ಲಿ ಆಯಾ ವಿಧದ ಭಾವನೆಗಳು ಪರಮಾತ್ಮನಿಗೋಸ್ಕರ ಇರತಕ್ಕದ್ದು

## ಏಕಭಾಜನ (ತನುಭಾಜನ, ಮನಭಾಜನ, ಪ್ರಾಣಭಾಜನ.)

ಇಲ್ಲಿ ಇಂದ್ರಿಯಗಳಲ್ಲಿ ಲಿಂಗಾರ್ಪಿತ ಮಾಡಿ ಮನಬೆರಸಿ ಪರಿಣಾಮಿಸಬೇಕು. ಅತ್ಯಂತ ನೈತಿಕಾಚಾರವುಳ್ಳವನಿಗೆ ಈ ಏಕಭಾಜನ ಸ್ಥಿತಿಯು ಸಲ್ಲುವದು. ಅವನಲ್ಲಿ ಸರ್ವವೂ ಲಿಂಗವೆಂಬ ಭಾವವು ದೃಢವಾಗಿರಬೇಕು. ಅವನ ತನುವೇ ಲಿಂಗಕ್ಕೆ ಭಾಜನವಾಗಿಯೂ ಹಾಗೆಯೇ ಅವನ ತನುವಿಗೆ ಲಿಂಗವೇ ಭಾಜನವಾಗಿಯೂ ಇದ್ದುದು ತನುಭಾಜನವು. ಹಾಗೆಯೇ ಮನಭಾಜನ ಮತ್ತು ಪ್ರಾಣಭಾಜನಗಳಿರುತ್ತವೆ. ಅಂದರೆ ಲಿಂಗಕ್ಕೆ ಮನವೇ ಭಾಜನ ಮತ್ತು ಮನಕ್ಕೆ ಲಿಂಗವೇ ಭಾಜನವಾಗಿ ಮನವಳಿದು ಮನವೇ ಲಿಂಗವಾಗಿರಬೇಕು. ಹಾಗೆಯೇ ಪ್ರಾಣಕ್ಕೆ ಲಿಂಗವೇ ಭಾಜನವಾಗಿ ಲಿಂಗಕ್ಕೆ ಪ್ರಾಣವೇ ಭಾಜನವಾಗಿ ಪ್ರಾಣವೆಂಬ ಭಾಜನವಳಿದು ಪ್ರಾಣವು ಲಿಂಗವಾಗಿರಬೇಕು. ಇವು ಅನುಕ್ರಮವಾಗಿ ಮನಭಾಜನ ಮತ್ತು ಪ್ರಾಣಭಾಜನಗಳು. ಹೀಗೆ ತನುಭಾಜನ, ಮನಭಾಜನ, ಪ್ರಾಣಭಾಜನಗಳಿರುತ್ತವೆ. ಇವೆಲ್ಲವೂ ಏಕಭಾಜನದಲ್ಲಿ ಬರುತ್ತವೆ. ಹೀಗೆ ವರ್ತಿಸುವವರಿಗೆ ಮೇಲೆ ಹೇಳಿದ ಸಹಭೋಜನವು ಸಹಜವಾಗಿ ಪ್ರಾಪ್ತವಾಗುತ್ತದೆ. ಇದರಲ್ಲಿ ಭಕ್ತಜಂಗಮ ಹೀಗೆ ಭೇದವಿರುವದಿಲ್ಲ. ಯಾಕಂದರೆ ಭಕ್ತನು ತನ್ನ ಅರ್ಥ ಪ್ರಾಣಾಭಿಮಾನಗಳನ್ನು ಗುರುಲಿಂಗಜಂಗಮಕ್ಕೆ ಅರ್ಪಿಸಿದ್ದರಿಂದ

ಅವನು ಗುರುಲಿಂಗಜಂಗಮಕ್ಕೆ ಪ್ರಾಣವಾಗಿರುತ್ತಾನೆ. ಇಂಥವನಿಗೂ ಗುರುಲಿಂಗಜಂಗಮಕ್ಕೂ ಏಕಭಾಜನವಲ್ಲದೆ ಭಿನ್ನಭಾಜನವಿರಲಾರದು. ಆದ್ದರಿಂದಲೇ ಚನ್ನಯ್ಯ, ಕಣ್ಣಪ್ಪ ಇಂಥವರೊಡನೆ ಪರಮಾತ್ಮನು ಭುಂಜಿಸಿದನೆಂದು ವಚನಶಾಸ್ತ್ರದ ಅಭಿಪ್ರಾಯವದೆ. ಇದೇ ಶಿವಶರಣರ ನಡೆಯು. ಇಲ್ಲಿ ಜಾತಿಸೂತಕವಿರಲಾರದು. ಇಷ್ಟೇ ಅಲ್ಲ, ಹೀಗೆ ಏಕಭಾಜನವಿಲ್ಲದ ಹೊರತು ಅಂಗದ ಕಳೆಯಲ್ಲಿ ಲಿಂಗವನ್ನು ಧರಿಸಿಕೊಳ್ಳಲು ಬರಲಾರದು. ಯಾಕಂದರೆ ಭಿನ್ನಭಾವವಿದ್ದಲ್ಲಿ ಲಿಂಗವಿರಲಾರದು. ಆದ್ದರಿಂದ ಲಿಂಗದಲ್ಲಿ ಅವಿರಳನಾಗಿ ಅಂಗದ ಗುಣಗಳನ್ನು ಕಳೆದು ದ್ವಂದ್ವಾಚರಣೆಯನ್ನು ತೊಲಗಿಸಿ ವೀರಶೈವನು ವರ್ತಿಸತಕ್ಕದ್ದು.

## ಮಿಶ್ರಾರ್ಪಣವು.

ಷಡ್ವಿಧಾಂಗವನ್ನು ಷಡ್ವಿಧಲಿಂಗದಲ್ಲಿ ಒಡಗೂಡಿಸಿ ಷಡ್ವಿಧಲಿಂಗ ಸಂಬಂಧವನ್ನು ಮಾಡಿಕೊಂಡು ಷಡ್ವಿಧಭಕ್ತಿವಿಡಿದು ಆಚರಿಸಿ ಪರಮಾತ್ಮನೊಡನಿರುವ ಸ್ಥಿತಿಯನ್ನುಂಟು ಮಾಡಿಕೊಳ್ಳುವದೇ ಮಿಶ್ರಾರ್ಪಣದ ಮುಖ್ಯ ಉದ್ದೇಶವಿರುತ್ತದೆ. ಇದರಲ್ಲಿಯೂ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣಗಳೆಂದು ಭಾಗಗಳಿವೆ.

## ಕಾಯಾರ್ಪಣ.

ಭೋಜ್ಯವನ್ನು ಆಚಾರಲಿಂಗದಲ್ಲಿ ಪಾನ್ಯವನ್ನು ಗುರುಲಿಂಗದಲ್ಲಿ, ಭಕ್ಷ್ಯವನ್ನು (ಕಡಿದು ತಿನ್ನುವ ಪದಾರ್ಥ) ಶಿವಲಿಂಗದಲ್ಲಿ, ಚೋಹ್ಯವನ್ನು (ಸುರಿದು ತಿನ್ನುವ ಪದಾರ್ಥ) ಜಂಗಮಲಿಂಗದಲ್ಲಿ, ಲೇಹ್ಯವನ್ನು (ನೆಕ್ಕಿ ತಿನ್ನುವ ಪದಾರ್ಥ) ಪ್ರಸಾದಲಿಂಗದಲ್ಲಿ, ಇವೆಲ್ಲವುಗಳ ಅರಿವನ್ನು ಮಹಾಲಿಂಗದಲ್ಲಿ, ಸಮರ್ಪಣೆ ಮಾಡತಕ್ಕದ್ದು. ಇದು ಷಡ್ವಿಧ ಭಕ್ತಿ ಸಕೀಲಗಳಿಂದ ಆಗಬೇಕು. ಇದು ಕಾಯಾರ್ಪಣವು.

## ಕರಣಾರ್ಪಣ.

ಪ್ರಾಣಲಿಂಗವು ಘ್ರಾಣೇಂದ್ರಿಯದಲ್ಲಿ ಪಂಚಾಚಾರ ಸ್ವರೂಪವಾದ ಆಚಾರಲಿಂಗವಾಗಿ, ಜಿಹ್ವೆಯಲ್ಲಿ ಮಂತ್ರಮೂರ್ತಿಯಾದ ಗುರುಲಿಂಗವಾಗಿ, ನಯನದಲ್ಲಿ ಪ್ರಕಾಶ ಸ್ವರೂಪವಾದ ಶಿವಲಿಂಗವಾಗಿ, ತ್ವಕ್ಕಿನಲ್ಲಿ

ಯಾಜನ ( ಪೂಜಾ ) ಸ್ವರೂಪವಾದ ಚರಲಿಂಗವಾಗಿ, ಶ್ರೋತ್ರದಲ್ಲಿ ಈಳನ (ಪ್ರಾರ್ಥನೆ) ಸ್ವರೂಪವಾದ ಪ್ರಸಾದಲಿಂಗವಾಗಿ, ಹೃದಯೇಂದ್ರಿಯ ದೊಳಗೆ ಬೋಧಾ ಸ್ವರೂಪವಾದ ಮಹಾಲಿಂಗವಾಗಿ ಇರುತ್ತದೆ ಆದ್ದರಿಂದ ಸುಗಂಧ, ಸುರಸ, ಪರಮಪ್ರಕಾಶ, ಸುಸ್ಪರ್ಶನ, ಸುಶಬ್ದ, ಸುಪರಿಣಾಮ ಇವುಗಳನ್ನು ಅನುಕ್ರಮವಾಗಿ ಆಚಾರಲಿಂಗ, ಗುರು ಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾ ಲಿಂಗಗಳಿಗೆ ಅರ್ಪಿಸತಕ್ಕದ್ದು. ಮುಂದೆ ಈ ಪದಾರ್ಥಗಳಲ್ಲಿ ಅವವುಗಳ ಗುಣಗಳ ಪ್ರಕಾರ ಪುನಃ ಆರು ವರ್ಗಗಳನ್ನು ವಚನಕಾರರು ಮಾಡಿ ಆಯಾ ಲಿಂಗಗಳಿಗೆ ಅರ್ಪಿಸಬೇಕೆಂದು ಹೇಳುತ್ತಾರೆ. (ಅ) ಗಂಧದ ಲ್ಲಿಯು ಆರು ಭಾಗಗಳು ಅವವೆಂದರೆ:—ಪೃಥ್ವಿಯ ಗಂಧ, ಅಗರು ಮೊದಲಾದ ವೃಕ್ಷಗಳ ಗಂಧ, ಚಿಗುರು ಗಂಧ, ಪುಷ್ಪದ ಗಂಧ, ಹಣ್ಣು ಗಳ ಗಂಧ, ಮತ್ತು ಈ ಗಂಧಗಳನ್ನೆಲ್ಲವನ್ನು ಅರಿವ ಪರಿಣಾಮ, ಇವುಗಳನ್ನು ಅನುಕ್ರಮವಾಗಿ ಆಚಾರ ಲಿಂಗದೊಳಗಣ ಆಚಾರಲಿಂಗ, ಆಚಾರಲಿಂಗದೊಳಗಣ ಗುರುಲಿಂಗ, ಆಚಾರಲಿಂಗದೊಳಗಣ ಶಿವಲಿಂಗ, ಆಚಾರಲಿಂಗದೊಳಗಣ ಜಂಗಮಲಿಂಗ, ಆಚಾರಲಿಂಗದೊಳಗಣ ಪ್ರಸಾದ ಲಿಂಗ, ಆಚಾರಲಿಂಗದೊಳಗಣ ಮಹಾಲಿಂಗಗಳಿಗೆ ಅರ್ಪಿಸತಕ್ಕದ್ದು. (ಬ) ರುಚಿಯಲ್ಲಿ ಮಧುರ, ಒಗರು, ಖಾರ, ಆಮ್ಲ, ಕಹಿ, ಮತ್ತು ಅವೆಲ್ಲವುಗಳ ಪರಿಣಾಮ ಹೀಗೆ ಆರು ಭಾಗಗಳಿದ್ದು ಅವುಗಳನ್ನು ಅನುಕ್ರಮವಾಗಿ ಗುರುಲಿಂಗದೊಳಗಣ ಆಚಾರಲಿಂಗ-ಗುರುಲಿಂಗ-ಶಿವ ಲಿಂಗ-ಜಂಗಮಲಿಂಗ-ಪ್ರಸಾದಲಿಂಗ ಮಹಾಲಿಂಗಗಳಲ್ಲಿ ಅರ್ಪಿಸತಕ್ಕದ್ದು. (ಕ) ವರ್ಣಗಳಲ್ಲಿ ಪೀತ, ಶ್ವೇತ, ಕೆಂಪು, ಹಸರು, ಕೃಷ್ಣ ಮತ್ತು ಅವು ಗಳ ಪರಿಣಾಮ ಎಂತಲೂ (ಡ) ಸ್ಪರ್ಶನದಲ್ಲಿ ಕಠಿಣ, ಮೃದು, ಉಷ್ಣ, ಶೈತ್ಯ, ಮಿಶ್ರ ಸ್ಪರ್ಶನ ಮತ್ತು ಅವುಗಳ ಪರಿಣಾಮವೆಂತಲೂ (ಇ) ನಾದದಲ್ಲಿ ಕಂಚಿನ ವಾದ್ಯ, ತಂತಿಯ ವಾದ್ಯ ಭೇರಿ ಮೊದ ಲಾದ ಚರ್ಮದ ವಾದ್ಯ, ಊದುವ ವಾದ್ಯ, ಗೀತನಾದ ಮತ್ತು ಅವು ಗಳ ಪರಿಣಾಮವೆಂತಲೂ (ಫ) ತೃಪ್ತಿಯಲ್ಲಿ ಗಂಧ ತೃಪ್ತಿ, ರಸ ತೃಪ್ತಿ, ರೂಪತೃಪ್ತಿ, ಸ್ಪರ್ಶನ ತೃಪ್ತಿ, ಶಬ್ದತೃಪ್ತಿ, ಮಹದತೃಪ್ತಿ ಎಂತಲೂ ಭಾಗ ಗಳಿದ್ದು ಅವೆಲ್ಲವುಗಳನ್ನು ಅನುಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಇವುಗಳ

ಲ್ಲಿಯು ಆರಾರು ಲಿಂಗಗಳಿಗೆ ಅರ್ಪಣ ಮಾಡತಕ್ಕದ್ದು. ಹೀಗೆ ೩೬ ತೆರದ ಕರಣಾರ್ಪಣಗಳಿರುತ್ತವೆ. ಕಾಯಾರ್ಪಣದೊಳಗಿನ ಮಿಶ್ರವೇ ಕರಣಾರ್ಪಣವೆಂದು ಹೇಳಬಹುದು.

## ಭಾವಾರ್ಪಣ

ಇದರಲ್ಲಿ ಆತ್ಮತತ್ವಸಂಬಂಧವಾದ ೨೧೬ ತೆರದ ತೃಪ್ತಿಪದಾರ್ಥಗಳನ್ನು ೨೧೬ ಲಿಂಗಗಳಿಗೆ ೨೧೬ ತೆರದ ಭಕ್ತಿಸಕೀಲಗಳಿಂದ ಸಮರ್ಪಿತವಾಗುವವು. ಕರಣಾರ್ಪಣದಲ್ಲಿರುವ ಪ್ರತಿಯೊಂದು ಗುಂಪಿನಲ್ಲಿ ಮೇಲೆ ಹೇಳಿದಂತೆ ಆರು ಆರು ವಿಧಗಳಾಗಿ ೩೬ ಭಾಗಗಳಾಗುವವಷ್ಟೇ. ಈ ಪ್ರತಿಯೊಂದರಲ್ಲಿ ಭಾವಲಿಂಗ ಸಂಬಂಧದಲ್ಲಿ ಆರು ಕ್ರಿಯೆ ಗಳಿರುತ್ತವೆ. ಅವು ಇಂದ್ರಿಯಗಳಿಗೆ ತಟ್ಟುವದು, ತಟ್ಟಿದ್ದನ್ನು ತಿಳಿಯುವದು, ತಿಳಿದದ್ದನ್ನು ನಿಶ್ಚಯಿಸುವದು, ನಿಶ್ಚಯಿಸಿದ್ದನ್ನು ದೃಢೀಕರಿಸುವದು, ದೃಢೀಕರಿಸಿದ್ದನ್ನು ಅನುಭವಿಸುವದು, ಅನುಭವಿಸಿದ್ದನ್ನು ಆನಂದಿಸುವದು ಹೀಗೆ ಇರುತ್ತವೆ. ಅವು ಆತ್ಮಸಂಬಂಧವಾದವುಗಳು. ಅವುಗಳನ್ನು ಭಾವಲಿಂಗಕ್ಕೆ ಅರ್ಪಿಸಬೇಕು. ೩೬ ತೆರದ ಕರಣಾರ್ಪಣದ ಪ್ರತಿಯೊಂದರಲ್ಲಿ ಮೇಲೆ ಹೇಳಿದ ಆರು ಕ್ರಿಯೆಗಳು ಇದ್ದು ಈ ಕ್ರಿಯೆಗಳೆಲ್ಲವು ೩೬ ರ ಪ್ರತಿಯೊಂದರಲ್ಲಿ ಇರುವದರಿಂದ ಎಲ್ಲವೂ ಕೂಡಿ ೨೧೬ ತೆರದ ಅರ್ಪಣಗಳಾಗುವವು. ಇದೇ ಭಾವಾರ್ಪಣವು. ಉದಾ :- ಆಚಾರಲಿಂಗದೊಳಗಣ ಆಚಾರಲಿಂಗದೊಳಗಣ ಆಚಾರಲಿಂಗ, ಆಚಾರಲಿಂಗದೊಳಗಣ ಆಚಾರಲಿಂಗದೊಳಗಣ ಗುರುಲಿಂಗ, ಹೀಗೆ ಅನುಕ್ರಮವಾಗಿ ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿ ಆರು ವಿಭಾಗಗಳು, ಆಮೇಲೆ ಆಚಾರಲಿಂಗದೊಳಗಣ ಗುರುಲಿಂಗದೊಳಗಣ ಆಚಾರಲಿಂಗ ಮುಂತಾಗಿ ಆಚಾರಲಿಂಗದೊಳಗಣ ಗುರುಲಿಂಗದಲ್ಲಿಯು ಆರು ವಿಭಾಗಗಳು, ಹೀಗೆ ಪ್ರತಿಯೊಂದರಲ್ಲಿ ಆರಾರಂತೆ ೩೬ ವಿಭಾಗಗಳು ಇದ್ದು, ಈ ಆರು ಸ್ಥಲಗಳಲ್ಲಿ ೩೬ ರಂತೆ ಎಲ್ಲ ಕೂಡಿ ಒಟ್ಟು ೨೧೬ ವಿಭಾಗಗಳು ಆಗುವವು. ಇದು ಭಾವಾರ್ಪಣವು. ಇದರಲ್ಲಿ ಇಂದ್ರಿಯಗಳಿಗೆ ತಟ್ಟುವದು ಆಚಾರಲಿಂಗಕ್ಕೆ, ತಟ್ಟಿದ್ದನ್ನು ತಿಳಿಯುವದು ಗುರುಲಿಂಗಕ್ಕೆ, ತಿಳಿದದ್ದನ್ನು ನಿಶ್ಚಯಿಸುವದು ಶಿವಲಿಂಗಕ್ಕೆ, ನಿಶ್ಚಯಿಸಿದ್ದನ್ನು ದೃಢೀಕರಿಸುವದು ಜಂಗಮಲಿಂಗಕ್ಕೆ, ದೃಢೀಕರಿಸಿದ್ದನ್ನು ಅನುಭವಿಸು

## ಸೂಚನೆ.

ಶಿವಾನುಭವದ ಎಡಿಟರರಾದ ರಾ॥ ಬ॥ ಹಳಕಟ್ಟಿಯವರು ಹೋದ ತಿಂಗಳು ಟ್ರೈನಿನಲ್ಲಿ ಪ್ರವಾಸ ಮಾಡುತ್ತಿರುವಾಗ ಆಕಸ್ಮಾತ್ತಾಗಿ ಅವರು ಮೇಲಿನ 'ಬರ್ಥ'ದಿಂದ ಕೆಳಕ್ಕೆ ಬಿದ್ದು ಹಿಮ್ಮಡದ ಎಲುವುಗಳಿಗೆ ಧಕ್ಕೆಯಾದುದರಿಂದ ಅವರು ಸಿವ್ಹಿಲ್ ಸರ್ಜನರ ಚಿಕಿತ್ಸೆಯಲ್ಲಿ ಇರುತ್ತಾರೆ. ಆದುದರಿಂದ ಹೋದ ತಿಂಗಳಿನ ಶಿವಾನುಭವ ಸಂಚಿಕೆಯು ಹೊರಡದೆ ಈ ತಿಂಗಳಲ್ಲಿ ಸಂಯುಕ್ತ ಸಂಚಿಕೆಯನ್ನು ಹೊರಡಿಸಬೇಕಾಗಿ ಬಂದದ್ದರಿಂದ ನಾವು ವಾಚಕರ ಕ್ಷಮಾಪಣೆಯನ್ನು ಕೇಳಿಕೊಳ್ಳುತ್ತೇವೆ.

ಮ್ಯಾನೇಜರ– ಶಿವಾನುಭವ.

---

# ವಿಷಯಗಳು.







# ಶಿವಾನುಭವ

ವರ್ಷ ೨೩ | ಎಪ್ರೇಲ ೧೯೪೯ | ಸಂಚಿಕೆ ೭


## ವಿಶ್ವಶಾಂತಿ ಸ್ಥಾಪನೆಯು ಕಲ್ಯಾಣ ಮಾರ್ಗ.


( ಲೇಖಕರು— ಶ್ರೀ. ಅನ್ನದಾನೀಶ್ವರ ವಿರಕ್ತಮಠ. ಮುಂಡರಗಿ)


(೧)

ಇಂದು ಜಗತ್ತಿನಲ್ಲಿ ಶಾಂತಿ ಸ್ಥಾಪನೆಗಾಗಿ ಸರ್ವ ರಾಷ್ಟ್ರಗಳೂ ನೆಮ್ಮದಿಯಿಂದ ಬಾಳಬೇಕೆಂದು ಹಾರೈಸುತ್ತವೆ. ಆದರೆ ವಿಶ್ವಶಾಂತಿಯು ಕಲ್ಯಾಣ ಮಾರ್ಗವನ್ನು ಹಿಡಿದು ನಡೆಯಲಿಕ್ಕೆ ಸನ್ನದ್ಧವಾಗದಿರುವದು ಅತ್ಯಂತ ವಿಷಾದಕರವಾದ ವಿಷಯವಾಗಿದೆ. ವಿಶ್ವಶಾಂತಿಯ ಬಯಕೆಯಾದರೂ ಅಷ್ಟು ವಿಶಾಲವಾಗಿಯೂ ಪ್ರಬಲವಾಗಿಯೂ ಬೆಳೆದಂತೆ ಕಾಣುವದಿಲ್ಲ. ವಿಕಸಿತವಾದ ಮಹಾಬಯಕೆಯು ಒಂದು ಚೈತನ್ಯ ಪೂರ್ಣ ಶಕ್ತಿಯಾಗಿ ಅಭಿವೃದ್ಧಿಯಾದರೆ, ಅದನ್ನು ಯಾವ ವಿಧ್ವಂಸಕ ದುಷ್ಟ ಶಕ್ತಿಯೂ ತಡೆಗಟ್ಟಲಾರದು! ಇಷ್ಟೆ ಅಲ್ಲ, ಅದು ಅಡ್ಡ ಬಂದ ವಿನಾಶಕ ಪ್ರತಿಗಾಮೀ ಶಕ್ತಿಗಳನ್ನು ಕರಗಿಸಿ ಒಂದು ರಚನಾತ್ಮಕ ಪ್ರಗತಿಶಾಲಿ ಪ್ರಭಾವ ಪೂರ್ಣ ಶಕ್ತಿಯಾಗಿ ಜಗತ್ತನ್ನೇ ಸಹಜವಾದ ಆಕರ್ಷಣೆಯಿಂದ ಎಳೆದುಕೊಳ್ಳದೇ ಬಿಡದು.

ವಿಶ್ವಬಂಧುತ್ವದ ಮಾತು ಹೃದಯಾಂತರಾಳದಿಂದ ಹೊರಸೂಸಿದರೆ ಬೇರೊಂದು ಹೃದಯಕ್ಕೆ ತಾಕಿ ಮಂಗಳಮಯವಾದ ಕ್ರಿಯೆಗಳಲ್ಲಿ ಪರಿಣಾಮ ಹೊಂದದೆ ಇರಲಾರದು. ಅದು ಬರೀ ಬಾಯಿಂದ ಹೊರಟರೆ ಕ್ರಿಯಾಶೂನ್ಯವಾಗಿ ಪರಿಣಮಿಸುವದ.

ಧನಧಾನ್ಯ ಸಂಪತ್ಸಮೃದ್ಧಿಯಲ್ಲಿ ಲೋಲಾಡುತ್ತಿರುವ ಅಮೇರಿಕೆಯು ಇಂದು ವಿಶ್ವಶಾಂತಿಯ ಪಣ ತೊಟ್ಟರೆ – ಹೃದಯಪೂರ್ವಕವಾಗಿ ಪಣ ತೊಟ್ಟರೆ— ಆ ಪ್ರಕಾರ ಕಾರ್ಯರಂಗವನ್ನು ರಚಿಸಿ ಕಾಲಿಟ್ಟರೆ ಎಷ್ಟೋ ಸಹಾಯವಾದೀತು. ಹೀಗೆ ಮಾಡುವ ಮುನ್ನ ಅದು ತನ್ನ ಸಾಮ್ರಾಜ್ಯಶಾಹೀ, ಬಂಡವಳಶಾಹೀ ಧೋರಣೆಗೆ ಮೊದಲು ತಿಲಾಂಜಲಿ ಕೊಡಲಿಕ್ಕೆ ಬೇಕು. ಅಮೇರಿಕೆಯಲ್ಲಿಯ ನಿಗ್ರೋ ಜನರು, ಬಡವರು ಸಂತೋಷ ಸಮಾಧಾನದ ಬಾಳನ್ನು ಸಾಗಿಸುವಂತೆ ತನ್ನ ಆಂತರಿಕ ಧೋರಣೆಯಲ್ಲಿ ಪರಿವರ್ತನೆಮಾಡಿಕೊಳ್ಳಬೇಕಾಗುವದು. ತನ್ನ ವಿದೇಶ ಧೋರಣೆಯಲ್ಲಿ ಸಾಮ್ರಾಜ್ಯವಾದ ಮತ್ತು ವಸಾಹತುವಾದಗಳಿಗೆ ಮಣ್ಣು ಕೊಡಲಿಕ್ಕೆಬೇಕು. ಯುದ್ಧದಲ್ಲಿ ಸೋತ ರಾಷ್ಟ್ರಗಳು ಸೊಗದ ಬಾಳನ್ನು ಸಾಗಿಸುವಂತೆ ತನ್ನ ಕಾರ್ಯಕ್ರಮವನ್ನು ನಿಯೋಜಿಸಲಿಕ್ಕೆ ಬೇಕು. ರಾಷ್ಟ್ರ ಸ್ವಾತಂತ್ರ್ಯದ ಧ್ಯೇಯವು ಬರೀ ರಾಷ್ಟ್ರೀಯ ಸಂತೃಪ್ತಿಯಲ್ಲ. ಆದರೆ ವಿಶ್ವಸಂತೃಪ್ತಿಯೇ ಅದರ ಗುರಿ ಎಂಬುದನ್ನು ಅಮೇರಿಕೆಯು ಅರಿತು ಆಚರಿಸಬೇಕಾಗುವದು.

ರಶಿಯಾ ದೇಶವು ತನ್ನ ಸಾಮ್ಯವಾದವು ಪೂರ್ಣ ನಿರ್ದೋಷವಾದುದೆಂದು ತಿಳಿಯದೆ ತಪ್ಪು ತಿದ್ದಿಕೊಳ್ಳುವ ಮನೋರಂಗವನ್ನು ರಚಿಸಿಕೊಳ್ಳಲಿಕ್ಕೆಬೇಕು. ಸರ್ವಾಧಿಕಾರದ ಜುಲುಮೆಯಿಂದ ವ್ಯಕ್ತಿ ಸ್ವಾತಂತ್ರ್ಯವನ್ನು ಹತ್ತಿಕ್ಕಿ ವ್ಯಕ್ತಿತ್ವದ ವಿಕಾಸಕ್ಕೆ ಪ್ರತಿಬಂಧವಾಗಕೂಡದು. ನೈತಿಕ ನೆಲೆಗಟ್ಟಿಲ್ಲದ ಆರ್ಥಿಕ ಸಮಾಜ ರಚನೆಯು ದೈವೀ ಶಕ್ತಿಯಾದ ಆತ್ಮಶಾಂತಿಯನ್ನು ಕೊಡಲರಿಯದು. ಆತ್ಮಶಾಂತಿಯಿಲ್ಲದೆ ಅಂತರಂಗ ಅಂತಃಕರಣದ ನಿಜ ಸಂಸ್ಕೃತಿಯು ಹೇಗೆ ಜಗದಲ್ಲಿ ತೇಲಬಹುದು ? ಜಗತ್ತನ್ನು ತೇಲಿಸಬಹುದು ?

ಪಶ್ಚಿಮ ಯುರೋಪದ ಒಕ್ಕೂಟ ಮತ್ತು ಪೂರ್ವ ಯುರೋಪದ ಒಕ್ಕೂಟ—ಈ ದ್ವೈತ ಸಿದ್ಧಾಂತಗಳ ಹಿನ್ನೆಲೆಯಲ್ಲಿ ವಿಶ್ವಶಾಂತಿಗೆ ಮೂಲವಾದ ಶಕ್ತಿ ವಿಶಿಷ್ಟವಾದ ಅದ್ವೈತ ಭಾವನೆಯು ಹೇಗೆ ಸ್ಫುರಿಸಬಲ್ಲುದೆಂಬುದೇ ಇಂದಿನ ಪಾಶ್ಚಾತ್ಯ ಜಗತ್ತಿನ ಸಮಸ್ಯೆಯಾಗಿದೆ.

ಒಂದನೇ ಒಕ್ಕೂಟದ ಬಂಡವಳಶಾಹಿಯ ಆರ್ಥಿಕ ವಿಷಮತೆ, ಮತ್ತು ಎರಡನೇ ಒಕ್ಕೂಟದ ಸರ್ವಾಧಿಕಾರದ ವ್ಯಕ್ತಿ ಸ್ವಾತಂತ್ರ್ಯದ

ಹಿಂಸೆ— ಈ ದೋಷದ್ವಯಗಳು ಹೋಗದ ಹೊರತು ವಿಶ್ವಶಾಂತಿ ಶಕ್ಯವೇ? ಇದೇ ಸರ್ವರಾಷ್ಟ್ರಗಳ ಮುಂದಿರುವ ಪ್ರಶ್ನೆ. ವ್ಯಕ್ತಿ ಸ್ವಾತಂತ್ರ್ಯ ಮತ್ತು ಸಮಾಜ ಕಲ್ಯಾಣಗಳೆರಡನ್ನೂ ಕೂಡಿಸಿದ ಶಕ್ತಿ ವಿಶಿಷ್ಟವಾದ ಅದ್ವೈತ ಭಾವನೆಯೇ ವಿಶ್ವಶಾಂತಿಗೆ ಮೂಲಕಾರಣ, ಉಗಮಸ್ಥಾನ, ಎಂಬುದೇ ಪೂರ್ವ ರಾಷ್ಟ್ರಗಳ ಬೆಳಕಿನ ಸಂದೇಶವಾಗಿದೆ

ವರ್ಣದ್ವೇಷವು ವಿಶ್ವಶಾಂತಿ ಸ್ಥಾಪನೆಗೆ ಅತ್ಯಂತ ಪ್ರಬಲವಾದ ವೈರಿಯು. ದಕ್ಷಿಣ ಆಫ್ರಿಕೆಯಲ್ಲಿ ಬಿಳಿಯರು ಕರಿಯರಿಗೆ ಅನ್ಯಾಯವಾಗಿ ದ್ವೇಷದಿಂದ ಹಿಂಸೆ ಕೊಡುತ್ತಿದ್ದಾರೆ. ಬಿಳಿಯರು ಕೂಡ್ರುವ ರೇಲ್ವೆ ಡಬ್ಬಿಯಲ್ಲಿ ಕರಿಯರು ಕೂಡ್ರಬಾರದಂತೆ! ಇದೆಂತಹ ಅಹಂಮನ್ಯತೆ! ಕರಿಯರು ಬಿಳಿಯರೆಂದೂ ಬಿಳಿಯರು ತಾವೇ ಮೇಲೆಂದೂ ಭಾವಿಸಿದ್ದಾರೆ. ಈ ಕೀಳು-ಮೇಲು ಕಲ್ಪನೆಯು ಕೀಳು ಮನಸ್ಸಿನ ಮುಖ್ಯ ಲಕ್ಷಣವು. ಮನಸ್ಸಿನ ಬೆಳವಣಿಗೆಯ ಕಡೆಗೆ ಬಿಳಿಯರು ಲಕ್ಷಗೊಟ್ಟಂತೆ ಕಾಣುವದಿಲ್ಲ. ದೇಹ ಪರಿಪುಷ್ಟಿಯಲ್ಲಿಯೇ ಕಾಲಕಳೆಯಲಿಕ್ಕೆ ಮನುಷ್ಯರು ತೊಡಗಿದರೆ ಮನೋವೈಶಾಲ್ಯದ ಕಲ್ಪನೆಯಿಲ್ಲದೆ ಎಂಥ ಘಾತುಕ ಭೇದ ಬುದ್ಧಿಗೆ ಬಂದು ತಲುಪುವರೆಂಬುದಕ್ಕೆ ಇದು ಒಂದು ನಿದರ್ಶನ. ಸ್ವಾವಲಂಬನೆಯಿಂದ ದುಡಿದು ಶಾಂತಿಯಿಂದ ಆ ದುಡಿತದ ಫಲವನ್ನು ಉಣ್ಣಲಿಕ್ಕೆ ಸಮಯ ಸಂದರ್ಭಗಳನ್ನು ಸಹ ಬಿಳಿಯರು ಅಲ್ಲಿಯ ಕರಿಯರಿಗೆ ಕೊಡಲಾರದವರಾಗಿದ್ದಾರೆ. “ಕರಿಯರು ಹೊಲಮನೆಗಳನ್ನು ಗಳಿಸುವಂತಿಲ್ಲ. ಈಗಿದ್ದ ಆಸ್ತಿಪಾಸ್ತಿಗಳನ್ನು ಮಾರಿ ಪ್ರತಿಫಲ ಪಡೆಯಬೇಕು. ಹಿಂದುಸ್ತಾನ ಪಾಕಿಸ್ತಾನಗಳಿಂದ ಸಹ ಅಪ್ಪಣೆ ಪಡೆದುಕೊಳ್ಳದೆ ಯಾರೂ ದಕ್ಷಿಣ ಆಫ್ರಿಕೆಗೆ ಹೋಗುವಂತಿಲ್ಲ.” ಇತ್ಯಾದಿಯಾಗಿ ಕಾಯಿದೆಗಳನ್ನು ಮಾಡಿಕೊಂಡು ಬಿಳಿಯರು ನಾಗರಿಕ ಹಕ್ಕು ಸ್ವಾತಂತ್ರ್ಯಗಳನ್ನು ಅಲ್ಲಗಳೆಯಲಿಕ್ಕೆ ಪ್ರಾರಂಭಿಸಿರುವರು. ಮಹಾತ್ಮಾ ಗಾಂಧಿಯವರ ಸತ್ಯಾಗ್ರಹದ ಪರಿಣಾಮವು ದಕ್ಷಿಣಾಫ್ರಿಕೆಯಲ್ಲಿ ಉಳಿದಂತೆ ಕಂಡು ಬರುವದಿಲ್ಲ. ಸಂಯುಕ್ತ ರಾಷ್ಟ್ರ ಸಂಘದ ತಾವು ಪಟ್ಟಿದ ಉದಾತ್ತವಾದ ಉದ್ದೇಶವು ಅಹಂಮನ್ಯರಿಗೆ ಸರಿಬರುವಂತೆ ಕಾಣುವದಿಲ್ಲ. ನೀತಿಯ ಅರಿವಿಲ್ಲದೆ ಮಾನವತೆಯ ಕಲ್ಪನೆಯಿಲ್ಲದೆ ಕೇವಲ ವರ್ಣದ್ವೇಷವನ್ನು ಹಬ್ಬಿಸುತ್ತ ಹೊರಟಿರುವದನ್ನು ನೋಡಿದರೆ ಶಾಂತಿಗಾಗಿ ಯತ್ನಿಸುತ್ತಿರುವವರಿಗೆ ಖೇದವಾಗದೆ ಇರದು. ದಕ್ಷಿಣ

ಆಫ್ರಿಕೆಯು ತನ್ನ ರಾಷ್ಟ್ರದ ಆಚೆಗೆ ತನ್ನ ದೃಷ್ಟಿಯನ್ನು ಹರಡಿ ಶಾಂತಿಯ ಕಲ್ಯಾಣ ಮಾರ್ಗದಲ್ಲಿ ಅಡಿಯಿಡಲಿ !

ವರ್ಣದ್ವೇಷವು ಡಾಂಭಿಕ ಧರ್ಮದ ದೀಕ್ಷೆಯನ್ನು ಪಡೆದರೆ ತೀರಿತು. ದಬ್ಬಾಳಿಕೆ-ಸುಲಿಗೆ-ಅನ್ಯಾಯಗಳು ದಕ್ಷಿಣಾಫ್ರಿಕೆಗಿಂತ ಉಗ್ರವಾಗಿ ಶಾಶ್ವತವಾಗಿ ಸಾಗಲಿಕ್ಕೆ ಅವಕಾಶ ಸಿಗುತ್ತದೆ. ಈ ಮಾತಿಗೆ ಹಿಂದುಸ್ತಾನದ ಸ್ಪೃಶ್ಯಾಸ್ಪೃಶ್ಯ ವರ್ಣದ್ವೇಷವು ಒಂದು ಉದಾಹರಣೆಯಾಗಿದೆ. ಇಲ್ಲಿಯ ವರ್ಣದ್ವೇಷದ ಸಮಾಜ ವ್ಯವಸ್ಥೆಯ ಪರಿಣಾಮವಾಗಿ ೭ ಕೋಟಿ ಮಾನವರು ಅಸ್ಪೃಶ್ಯರಾಗಿ ಉಳಿದಿರುವರು. ತಾವು ಮಾನವರೆಂಬ ಕಲ್ಪನೆ ಇಲ್ಲದಷ್ಟು ಅಧೋಗತಿಗೆ ಒಯ್ದದೆ. ವೈದಿಕ ಧರ್ಮದ ವರ್ಣಾಶ್ರಮ ವ್ಯವಸ್ಥೆಯು ಆ ನಮ್ಮ ಬಂಧುಗಳನ್ನು! ಆರ್ಥಿಕ ಸಾಮಾಜಿಕ ವಿಷಮತೆಗಳಿಂದ ರಾಜಕೀಯ ಸ್ವಾತಂತ್ರ್ಯದ ಫಲವು ಸಹ ಅವರಿಗೆ ಸಿಗದಂತಾಗಿದೆ. ಧರ್ಮದ ಹೆಸರಿನಿಂದ ಅನಂತ ಹಿಂಸೆ ಯಾತನೆಗಳನ್ನು ಅವರು ಅನುಭೋಗಿಸಿ ಸಂಸ್ಕೃತಿಯಲ್ಲಿ ಸಹ ತೀರ ಕೆಳಗೆ ಬಿದ್ದಿರುವರು. ಕಾರಣ ವರ್ಣದ್ವೇಷವು ಯಾವದೇ ರೂಪದಲ್ಲಿರಲಿ, ಅದನ್ನು ನಿರ್ಮೂಲ ಮಾಡದೇ ವಿಶ್ವಶಾಂತಿ ಸ್ಥಾಪನೆಯು ಸರಾಗವಾಗಿ ಸಾಗಲಾರದು.

ರಾಜಕೀಯ ಕ್ಷೇತ್ರದಲ್ಲಾಗಲಿ ಧಾರ್ಮಿಕ ಕ್ಷೇತ್ರದಲ್ಲಾಗಲಿ ವರ್ಣದ್ವೇಷವು ಪ್ರಗತಿಗೆ ವೈರಿಯಾಗುವದರಲ್ಲಿ ಸಂದೇಹವೇ ಇಲ್ಲ. ಪ್ರಗತಿ, ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವ ಮುಂತಾದ ತತ್ವಗಳು ಜಗತ್ತಿನಲ್ಲಿ ಹರಡಬೇಕಾದರೆ ವರ್ಣದ್ವೇಷವು ಮಾಯವಾಗುವಂತೆ ಯತ್ನಿಸಲಿಕ್ಕೆ ಬೇಕು. ಈ ದಿಸೆಯಲ್ಲಿ ಹಿಂದುಸ್ತಾನವೂ ಪ್ರಯತ್ನಿಸಬೇಕು. ದಕ್ಷಿಣ ಆಫ್ರಿಕೆಯೂ ಯತ್ನಿಸಬೇಕು. ಅಮೇರಿಕೆಯ ಅಧ್ಯಕ್ಷ ಟ್ರುಮನ್ನರು ಹೊಸ ವರ್ಷದ ಸಂದೇಶದಲ್ಲಿ ಹೇಳಿದಂತೆ ಅಮೇರಿಕೆಯಲ್ಲಿಯ ನಿಗ್ರೋ ಜನರ ವಿರೋಧವಾಗಿರುವ ವರ್ಣ ಕಲ್ಪನೆಯನ್ನು ಸಮೂಲ ನಾಶ ಮಾಡಲಿಕ್ಕೆ ಯತ್ನಿಸಿದರೆ ವಿಶ್ವಶಾಂತಿಗೆ ಎಷ್ಟೋ ಸಹಾಯವಾಗುವದು. ವರ್ಣದ್ವೇಷವು ನಾಶವಾಗಿ ವಿಶ್ವಶಾಂತಿ ಸ್ಥಾಪನೆಯ ಕಲ್ಯಾಣ ಮಾರ್ಗದಲ್ಲಿ ರಾಷ್ಟ್ರಗಳು ಅಡಿ ಇಡಲಿ !

ಹೀಗೆ ಸಾಮ್ರಾಜ್ಯಶಾಹೀ ಧೋರಣವು ಸ್ವಾತಂತ್ರ್ಯ, ಶಾಂತಿ, ಪ್ರಗತಿಗಳ ಕಡುವೈರಿಯು. ಒಂದು ದೇಶವು ಮತ್ತೊಂದು ದೇಶದ ಮೇಲೆ ಆಳುವಷ್ಟು ಸದ್ಗುಣ ಪೂರ್ಣವಿರಲಾರದು. ಸದ್ಗುಣ ಪೂರ್ಣವಿದ್ದ ದೇಶವು ಅನ್ಯದೇಶದ ಮೇಲೆ ಆಳಲಿಕ್ಕೆ ಮನಸ್ಸು ಮಾಡಲಾರದು. ಎಲ್ಲ ರಾಷ್ಟ್ರಗಳೂ ಸಮಾನವೆಂದು ಗುಣವಂತ ರಾಷ್ಟ್ರವು ತಿಳಿಯುತ್ತದೆ. ಒಂದು ದೇಶವು ಬೇರೊಂದು ದೇಶದಿಂದ ಆಳಲ್ಪಡುವಷ್ಟು ಹೀನವಾದದ್ದಿರುವದಿಲ್ಲ. ಕಡಿಮೆ ಯೋಗ್ಯತೆಯುಳ್ಳ ರಾಷ್ಟ್ರದಲ್ಲಿ ಸಹ ಅನುಕರಿಸತಕ್ಕ ಗುಣವು ಒಂದಾದರೂ ಇರುತ್ತದೆ. ಗುಲಾಮತನದ ದಾಸ್ಯಗಳನ್ನು ಸ್ಥಿರೀಕರಿಸಲಿಕ್ಕೆ ಯಾವ ರಾಷ್ಟ್ರಕ್ಕೂ ಅಧಿಕಾರವಿಲ್ಲ. ಸ್ವಾತಂತ್ರ್ಯ, ಪ್ರಗತಿ, ಶಾಂತಿಗಳನ್ನು ಅಭಿವೃದ್ಧಿಗೊಳಿಸಲಿಕ್ಕೆ ಎಲ್ಲ ರಾಷ್ಟ್ರಗಳಿಗೂ ಅಧಿಕಾರವಿದೆ. ಈ ಮೇಲಿನ ತಿಳಿವಳಿಕೆಯು ವಿಶ್ವಶಾಂತಿ ಸ್ಥಾಪನೆಗೆ ಅತ್ಯಂತ ಅವಶ್ಯವಾಗಿ ರಾಷ್ಟ್ರಗಳಲ್ಲಿರಬೇಕು.

ಹಾಲಂಡ ದೇಶದ ಡಚ್ಚರು ಈ ಯೋಗ್ಯ ತಿಳಿವಳಿಕೆಯನ್ನು ಮರೆತು ಬಿಟ್ಟದ್ದಾರೆ. ಬಡ ಇಂಡೋನೇಶಿಯಾ ದೇಶದ ಮೇಲೆ ದಾಳಿ ಮಾಡಿದೆ ಹಾಲಂಡವು. ಇಂಡೋನೇಶಿಯಾದ ರಬ್ಬರ ಎಣ್ಣೆ ಮುಂತಾದ ಸಾಮಾನುಗಳನ್ನು ಅಮೇರಿಕೆಗೆ ಮಾರಿ ಅಧಿಕವಾಗಿ ಡಾಲರುಗಳನ್ನು ಪಡೆದು ಹಾಲಂಡವನ್ನು ಅಭಿವೃದ್ಧಿಗೊಳಿಸಬೇಕೆಂಬ ರಾಷ್ಟ್ರೀಯ ತಿಳಿವಳಿಕೆಯಿಂದ ಹಾಲಂಡದ ಡಚ್ಚರಿಗೆ ಆಕ್ರಮಣದ ಪ್ರೇರಣೆ ಸಿಕ್ಕಿರಬಹುದು. ಆದರೆ ರಾಷ್ಟ್ರೀಯ ಧ್ಯೇಯಕ್ಕಿಂತ ವಿಶ್ವಶಾಂತಿ ಭದ್ರತೆಗಳ ಧ್ಯೇಯವು ಶ್ರೇಷ್ಠವಾದದ್ದು. ಆಕ್ರಮಣದಿಂದಲೇ ರಾಷ್ಟ್ರಾಭಿವೃದ್ಧಿಯಾಗುವದೆಂದರೆ ಅಬಲರನ್ನು ಸಬಲರು ಬೇಕಾದಂತೆ ದಬ್ಬಾಳಿಕೆ ಮಾಡಿ ಸುಲಿದು ಜಗತ್ತಿನ ನಾಗರಿಕತೆಯು ಜಂಗಲಿನ ಕಾಡು ಸ್ಥಿತಿಗೆ ಇಳಿಯುವದರಲ್ಲಿ ಸಂದೇಹವಿಲ್ಲದಂತೆ ಪ್ರತಿಗಾಮಿಗಳಾಗಲಿಕ್ಕೆ ಅನುವು ಸಿಗುವದು, ಎಂದ ಮೇಲೆ ಪ್ರಗತಿ ಸಂಸ್ಕೃತಿಗಳ ಮಾತೇಕೆ? ಅಮೇರಿಕೆಯ ಮಾರ್ಶಾಲ್ ಯೋಜನೆಯಿಂದ ತನ್ನ ಅಭಿವೃದ್ಧಿ ಮಾಡಿಕೊಳ್ಳಲಿ.

ಯುರೋಪದ ಪಶ್ಚಿಮ ಒಕ್ಕೂಟದಲ್ಲಿ ಹಾಲಂಡ ದೇಶವಿದೆ. ಈಗ ಹಾಲಂಡವು ದಬ್ಬಾಳಿಕೆಯ ವಿದೇಶ ಧೋರಣವನ್ನು ಅವಲಂಬಿ

ಸಿರುವದರಿಂದ ಅಮೇರಿಕೆಯು ತನ್ನ ಧನ ಸಹಾಯವನ್ನು ಏಕೆ ನಿಲ್ಲಿಸಬಾರದು? ಆಕ್ರಮಣ ಕಾರಕರಿಗೆ ಧನಸಹಾಯವೆಂದರೆ ಆಕ್ರಮಣ ವೃತ್ತಿಗೆ ಪ್ರೋತ್ಸಾಹ ಕೊಟ್ಟಂತಲ್ಲವೇ? ಸಂಯುಕ್ತ ರಾಷ್ಟ್ರ ಸಂಘದ ಭದ್ರತಾಮಂಡಲದ ಸದಿಚ್ಛಾ ಸಮಿತಿಯ ವರದಿಯನ್ನು ನೋಡಿದರೆ ಹಾಲಂಡವು ಎಷ್ಟು ಸ್ವೇಚ್ಛಾಚಾರಕ್ಕೆ ಇಳಿದಿದೆಯೆಂಬುದು ಸಿದ್ಧವಾಗುತ್ತದೆ. ಸ್ವಾತಂತ್ರ್ಯವೆಂದರೆ ಸ್ವೇಚ್ಛಾಚಾರವೇ? ಸ್ವಾತಂತ್ರ್ಯವೆಂದರೆ ಆಕ್ರಮಣ ವೃತ್ತಿಯೇ? ಇದು ಹಿಟ್ಲರನ, ಮುಸೋಲಿನಿಯ ಸ್ವಾತಂತ್ರ್ಯದ ಅರ್ಥವಿರಬಹುದು. ೧೯೪೦ನೇ ಇಸ್ವಿಯಲ್ಲಿ ಜರ್ಮನಿಯ ಹಿಟ್ಲರನು ಹಾಲಂಡದ ಮೇಲೆ ದಾಳಿ ಮಾಡಿದಾಗ ಹಾಲಂಡಕ್ಕೆ ಹೇಗೆ ಅನಿಸಿತ್ತು? ಅದೇ ದುಃಖದ ಸಂತಾಪದ ಭಾವನೆಯು ಈಗ ಇಂಡೋನೇಶಿಯಾಕ್ಕೆ ಬಂದರೆ ಅದರಿಂದ ಕಲ್ಯಾಣವಾಗಬಹುದೇ? ಭದ್ರತಾಮಂಡಲದ ಆಜ್ಞೆಯನ್ನು ಉಲ್ಲಂಘಿಸಬಾರದೆಂದು ಬ್ರಿಟಿಷರೂ, ಅಮೇರಿಕನ್ನರೂ, ಫ್ರಾನ್ಸದವರೂ, ಹಾಲಂಡಕ್ಕೆ ಚನ್ನಾಗಿ ಬುದ್ಧಿ ಹೇಳಬೇಕು. ಬುದ್ಧಿಮಾತಿಗೆ ಕಿವಿಗೊಡದಿದ್ದರೆ ಪಶ್ಚಿಮ ಯುರೋಪದ ಒಕ್ಕೂಟದಿಂದ ಹಾಲಂಡವನ್ನು ಹೊರಗೆ ಹಾಕಲಿಕ್ಕೆಬೇಕು. ಇಲ್ಲದಿದ್ದರೆ ಅಪ್ರತ್ಯಕ್ಷ ಪ್ರೋತ್ಸಾಹ ಕೊಡುತ್ತಿರುವರೆಂಬ ದೋಷಕ್ಕೆ ಗುರಿಯಾಗಬೇಕಾದೀತು!

ಪರಿಸ್ಥಿತಿಯು ಹೀಗಿದ್ದಾಗ ಏಶಿಯಾಖಂಡದ ೧೬ ರಾಷ್ಟ್ರಗಳು ಪರಿಷತ್ತು ಕರೆದು ವಿಶ್ವಶಾಂತಿಗೆ ಪೋಷಕವಾದ ಸ್ವಾತಂತ್ರ್ಯ-ಸಂಸ್ಕೃತಿಗಳ ರಕ್ಷಣೆಯನ್ನು ಮಾಡಲಿಕ್ಕೆ ಬೇಕಾಗಿರುವದು. ಇದಕ್ಕೇನೇ ಸಬಲ ಧರ್ಮ ಅಥವಾ ಮಾನವ ಧರ್ಮವೆಂದು ಹೇಳುತ್ತಾರೆ. ಪಾಶ್ಚಾತ್ಯ ರಾಷ್ಟ್ರಗಳು ಏಶಿಯಾಖಂಡದ ಪೂರ್ವ ರಾಷ್ಟ್ರಗಳನ್ನು ಸಮಾನಪಾಗಿ ತಿಳಿಯುವಂತೆ ಯತ್ನಿಸಬೇಕು. ಈ ಪರಿಷತ್ತು ಸಂಯುಕ್ತ ರಾಷ್ಟ್ರ ಸಂಘಕ್ಕೆ ಪೋಷಕವಾಗಿರಲಿಕ್ಕೆಬೇಕು. ಇದು ಹಾಗೆ ಇದೆ.

ರಾಷ್ಟ್ರೀಯ ಸ್ವಾತಂತ್ರ್ಯ, ಅಂತರ ರಾಷ್ಟ್ರೀಯ ಸೌಹಾರ್ದಭಾವ, ಮತ್ತು ಪ್ರಜಾಪ್ರಭುತ್ವ ಇವು ಜಯಶೀಲರಾದರೇನೇ ವಿಶ್ವದಲ್ಲಿ ಶಾಂತಿ ಸ್ಥಾಪನೆಯಾಗಬಲ್ಲದು. ಎಲ್ಲ ರಾಷ್ಟ್ರಗಳೂ ಈ ದೃಷ್ಟಿಯನ್ನಿಟ್ಟುಕೊಂಡು ನಡೆಯಲಿಕ್ಕೆಬೇಕು. ಈ ತತ್ವಗಳಿಗೆ ವಿರೋಧವಾಗಿದ್ದ ನಾಝಿಜಂ ಮತ್ತು ಫ್ಯಾಸಿಜಂ ಹೇಗೆ ಜಗತ್ತನ್ನು ಯುದ್ಧದಲ್ಲಿ ತೊಡಗಿಸಿ, ಜಗತ್ತಿನ

ಆರ್ಥಿಕ ಮುಗ್ಗಟ್ಟಿಗೂ ಅಶಾಂತಿಗೂ ಕಾರಣವಾದವೆಂಬ ಮಾತು ಎಲ್ಲರಿಗೂ ಗೊತ್ತಿದೆ. ಇಟಲಿ ಮತ್ತು ಜರ್ಮನಿಯನ್ನು ಸರ್ವಾಧಿಕಾರ ಮನೋವೃತ್ತಿ ಈಗ ಬಿಟ್ಟು ಹೋಗಿದೆ. ಆದರೆ ಸ್ಪೇನದಲ್ಲಿ ಸೈನ್ಯದ ಮದ ಮತ್ತು ಕ್ರಿಸ್ತ ಮತಾಧಿಪತಿಗಳ ನಿಷ್ಕ್ರಿಯ ಸೈದ್ಧಾಂತಿಕ ಬೋಧೆ— ಈ ಎರಡೂ ಕೂಡಿ ಸರ್ವಾಧಿಕಾರದ ಹೆಚ್ಚಳಕ್ಕೆ ಪುಷ್ಟಿಕೊಟ್ಟಿವೆ. ಅಲ್ಲಿಯ ಬಂಡವಲಗಾರರಿಗೆ ಮಾತ್ರ ಸುಖವಿದೆ. ಅಲ್ಲಿಯ ಉದ್ದಿಮೆ, ವ್ಯಾಪಾರ ಜನ ಜೀವನ ಮಟ್ಟಗಳೆಲ್ಲ ಕೆಳಗಿಳಿದಿವೆ. ಅಲ್ಲಿಯ ಸೋಶ್ಯಾಲಿಸ್ಟ ಮತ್ತು ಕಮ್ಯುನಿಸ್ಟರಲ್ಲಿ ಒಕ್ಕಟ್ಟಿಲ್ಲ. ಪ್ರಸಂಗ ಬಂದರೆ ಒಂದು ಕ್ರಾಂತಿಯುಂಟಾಗಿ ಜಾಗತಿಕ ಶಾಂತಿಗೆ ಗಂಡಾಂತರ ಬರಬಹುದು.

ಸರ್ವಾಧಿಕಾರದಿಂದ ಜಾಗತಿಕ ಶಾಂತಿಗೆ ಗಂಡಾಂತರವಿರುವಂತೆಯೇ ವಸಾಹತುವಾದದಿಂದಲೂ ಜಾಗತಿಕ ಶಾಂತಿಗೆ ಗಂಡಾಂತರವಿದೆ. ಫ್ರಾನ್ಸ ಮತ್ತು ಪೋರ್ತುಗಾಲ ದೇಶಗಳು ತಮ್ಮ ವಸಾಹತುವಾದದ ಕಪಿಮುಷ್ಟಿಯನ್ನು ಈಗ ಬಿಡಲಿಕ್ಕೆಬೇಕು. ಬದಲಾದ ಜಗತ್ತಿನ ಪರಿಸ್ಥಿತಿಗೆ ಹೊಂದಿಕೊಂಡು ಅವು ಮುನ್ನಡೆಯಲಿಕ್ಕೆಬೇಕು. ಮಧ್ಯಯುಗದ ಪ್ರತಿಗಾಮಿ ಧೋರಣೆಯು ಜಗತ್ತಿನ ಪ್ರಗತಿಗೂ ಶಾಂತಿಗೂ ಸರಿಹೋಗುವದಿಲ್ಲ. ಹಿಂದುಸ್ತಾನದಲ್ಲಿ ಪಾಂಡಿಚೇರಿ ಮತ್ತು ಗೋವಾಗಳನ್ನು ಸ್ವತಂತ್ರ ಹಿಂದುಸ್ತಾನ ಸರಕಾರಕ್ಕೆ ಬಿಟ್ಟು ಕೊಡಲಿಕ್ಕೆಬೇಕು. "ನಾವು ಗೆದ್ದಿದ್ದೇವೆ, ನಾವೇ ಈಗಲೂ ಆಳಬೇಕು" ಎಂಬ ಗರ್ವವನ್ನೂ ಲೋಭವನ್ನೂ ಬಿಡದಿದ್ದರೆ ಅಲ್ಲಿಯ ಜನಶಕ್ತಿಯು ಪ್ರಬಲವಾಗಿ ವಿಜಯಶಾಲಿಯಾಗದೆ ಬಿಡಲಾರದು. ಆ ಜನಶಕ್ತಿಗೆ ಸ್ವತಂತ್ರ ಭಾರತದ ಸಮಗ್ರ ಸಹಕಾರವೂ ಬೆಂಬಲವೂ ಇದೆಯೆಂಬುದನ್ನು ಫ್ರಾನ್ಸ ಮತ್ತು ಪೋರ್ತುಗಾಲ ದೇಶಗಳು ಚೆನ್ನಾಗಿ ತಿಳಿಯಬೇಕು.

ಚೀನದೇಶದ ಆಂತರಿಕ ಕಲಹವು ಯುದ್ಧದಲ್ಲಿ ಪರಿಣಮಿಸಿ ಇಂದು ಘನಘೋರ ಭ್ರಾತೃಹತ್ಯೆಯು ಅಲ್ಲಿ ಸಾಗಿರುವದು. ಅಲ್ಲಿಯ ಹಣದುಬ್ಬರ, ಆರ್ಥಿಕ ದುಃಸ್ಥಿತಿ, ಅತಿ ಪ್ರಸರಣ, ದಾರಿದ್ರ್ಯಗಳು ಕಮ್ಯುನಿಜಂ ಪ್ರವೇಶವಾಗಲಿಕ್ಕೆ ಅವಕಾಶ ಕೊಟ್ಟಿವೆ ಹಿಂಸೆಯ ತಳಹದಿಯ ಮೇಲೆ ನಿಂತ ಕಮ್ಯುನಿಜಂ ತತ್ವವು ಜಗತ್ತಿನಲ್ಲಿ ಶಾಂತಿಯನ್ನು ಉಂಟು ಮಾಡಲಾರದು. ಆದರೆ ದಾರಿದ್ರ್ಯ ನಿವಾರಣೆಯ ಯತ್ನ ಜೋರಾಗಿ

ನಡೆಯುದಿದ್ದರೆ ಕಮ್ಯೂನಿಜಂಗೆ ಜನ ಶರಣಾಗುವದು ತಪ್ಪಿದ್ದಲ್ಲ. ಇಂದು ಬರ್ಮಾ, ಮಲಯ, ಗ್ರೀಸಗಳಲ್ಲಿಯೂ ಕಮ್ಯುನಿಜಂ ತನ್ನ ನಗ್ನ ನೃತ್ಯವನ್ನು ನಡೆಸಿರುವದು. ಕಾರಣ ಏಶಿಯಾಖಂಡದ ಪಂಪತ್ರು ಈ ದಿಶೆಯಲ್ಲಿಯೂ ವಿಚಾರ ಮಾಡಲಿಕ್ಕೆ ಬೇಕು.

ಒಂದು ಹಳ್ಳದಲ್ಲಿ ಕಲ್ಲನ್ನು ಎಸೆದರೆ ನೀರಿನ ತೆರೆಗಳು ದಂಡೆಗೆ ಬಂದು ಮುಟ್ಟುವಂತೆ ಜಗತ್ತಿನಲ್ಲಿ ಎಲ್ಲಿ ದುಃಖ ಉಂಟಾದರೂ, ಯುದ್ಧ ಪ್ರಾರಂಭವಾದರೂ, ಆ ದುಃಖ ಯುದ್ಧಗಳ ಅಲೆಗಳು ಜಗತ್ತಿನ ಎಲ್ಲ ದಂಡೆಗೂ ಮುಟ್ಟಲಿಕ್ಕೇಬೇಕು. ಈ ದೃಷ್ಟಿಯಿಂದ ಪಾಲಿಸ್ತಾನ, ಇಜಿಪ್ತ, ಚೀನ, ಗ್ರೀಸ, ಇಂಡೋನೇಶಿಯಾ, ಮುಂತಾದ ದೇಶಗಳಲ್ಲಿಯ ಯುದ್ಧಗಳು ಸಂಪೂರ್ಣ ನಿಂತು ಶಾಂತ ವಾತಾವರಣ ಉಂಟಾಗುವಂತೆ ಜಗತ್ತಿನ ಎಲ್ಲ ವರ್ಚಸ್ಸುಳ್ಳ ರಾಷ್ಟ್ರಗಳೂ ಮನಸಾ ದುಡಿಯಲಿಕ್ಕೆ ಬೇಕು. ವಿಶ್ವ ಶಾಂತಿ ಸ್ಥಾಪನೆಯು ಕಲ್ಯಾಣ ಮಾರ್ಗದಲ್ಲಿ ಎಲ್ಲ ರಾಷ್ಟ್ರಗಳೂ ಅಡಿಯಿಡದೆ ಹೊರ್ತು ಶಾಂತಿಗೆ ಉಳಿಗಾಲವಿಲ್ಲ.

---

(೨)

## ಜಾತ್ಯಾತೀತ ರಾಷ್ಟ್ರ ಮತ್ತು ಧಾರ್ಮಿಕ ಸ್ವಾತಂತ್ರ್ಯ.

ನಮ್ಮ ಘಟನಾ ಸಮಿತಿಯು ಹಿಂದುಸ್ತಾನವು ಜಾತ್ಯಾತೀತ ರಾಷ್ಟ್ರವೆಂದು ಸಾರಿರುವದು. ಇದು ಅತ್ಯಂತ ಮಹತ್ವದ ಸಂಗತಿಯು. ಸಾವಿರಾರು ಜಾತಿಗಳಿಂದ ಪ್ರತ್ಯೇಕ ಮನೋಭಾವನೆಯಿಂದ ಕೂಡಿದ ಹಿಂದುಸ್ತಾನವು ಒಂದು ಆದರ್ಶ ಬಲಾಢ್ಯ ರಾಷ್ಟ್ರವಾಗಿ ಬಾಳಬೇಕಾದರೆ ಪ್ರಬಲವಾದ ಸಂಘಟನೆ ಬೇಕು. ಅಂಥ ಸಂಘಟನೆಯು ಏಕ ರಾಷ್ಟ್ರೀಯ ಭಾವನೆಯಿಂದ, ಅಂಥ ಕ್ರಿಯೆಗಳಿಂದ ಬರಬಲ್ಲುದು. ಇದನ್ನು ಮನಗಂಡು, ಮತ್ತು ಹಿಂದಿನ ಇತಿಹಾಸದಿಂದ ಗೊತ್ತಾಗುವ ಜಾತೀಯ ಕಲಹಗಳ ಪರಿತಾಪದ ಬೇನೆಯಿಂದ ಬೆಂದು ಇಂಥ ನಿರ್ಣಯಕ್ಕೆ ರಾಷ್ಟ್ರವು ಬರಲೇಬೇಕಾಗಿತ್ತು. ಕೊನೆಗೊಮ್ಮೆ ಅಂಥ

ಜನಿಕ ಆರೋಗ್ಯ ನೀತಿ ಮತ್ತು ಸಂರಕ್ಷಿತತೆಗಳಿಗೆ ಬಾಧಕವಾಗದಂತೆ ಧರ್ಮವನ್ನು ಅನುಷ್ಠಾನಕ್ಕೆ ತರಬೇಕಾಗುವದು. ಇದನ್ನು ಮಾತ್ರ ಲಕ್ಷದಲ್ಲಿಟ್ಟುಕೊಳ್ಳತಕ್ಕದ್ದು. ಯಾವ ಧರ್ಮವು ಹೆಚ್ಚು ರಾಷ್ಟ್ರೀಯವಾಗಿರುವದೋ ಅದೇ ಇನ್ನು ಜನರಿಂದ ಮನ್ನಣೆ ಹೊಂದುವದು.

ಶುಷ್ಕವಾದ ಜಾತಿಯ ಕಟ್ಟುಗಳಿಗೆ— ಅರ್ಥವಿಲ್ಲದ ವಿಧಿ ನಿಷೇಧಗಳಿಗೆ— ಧರ್ಮವೆಂದು ಯಾರೂ ತಿಳಿಯಬಾರದು. ಧರ್ಮದ ಹೆಸರಿನಿಂದ ಬಹಿಷ್ಕಾರ ಹಾಕುವ ಹಳೇ ಮೂಢ ರೂಢಿಗೆ ಇನ್ನು ಮೇಲೆ ಗೋರಿ ಕಟ್ಟಿಟ್ಟಂತೆಯೇ ಆಯಿತು. ಮೂಢ ಭಕ್ತಿಯನ್ನೂ ಅಂಧಶ್ರದ್ಧೆಯನ್ನೂ ಪ್ರಚಾರಮಾಡಿ ದೊಡ್ಡಸ್ತನ ನಡೆಯುತ್ತಿದ್ದ ಧರ್ಮಗುರುಗಳಿಗೆ ಇನ್ನು ಮನ್ನಣೆಯಿಲ್ಲ. ಧರ್ಮವು ಅಚಲವಾದ ಶ್ರದ್ಧೆ, ಪೂರ್ಣಜ್ಞಾನ, ಅಂತಃಕರಣದ ಬಾಂಧವ, ಸಮಾನತೆಗಳ ತಳಹದಿಯ ಮೇಲೆ ಇನ್ನು ನಿಲ್ಲಲೇಬೇಕೆಂಬ ಅಂಶವನ್ನು ಸರಕಾರವೇ ಸೂಚಿಸಿದಂತಾಯಿತು. ಬುದ್ಧ, ಬಸವ, ಗಾಂಧಿಯವರು ಕೈಕೊಂಡ ಧರ್ಮವೇ ಇನ್ನು ಮಾನವರಿಂದ ಪರಿಶೋಧಿಸಲ್ಪಡುವ ಕಾಲ ಬಂದಿತು. ಆದ್ದರಿಂದ ಧಾರ್ಮಿಕ ಸ್ವಾತಂತ್ರ್ಯದ ಈ ಶುಭಕಾಲದಲ್ಲಿ ನಿಜ ಧರ್ಮಗಳು ಬಾಳುತ್ತವೆ. ಕೃತಕ, ಕೃತ್ರಿಮ ಜಾತೀಯ ಭಾವನೆಯ ಧರ್ಮಗಳು ಕೊಳೆಯುತ್ತವೆ. ಭಾರತೀಯರು ವರ್ಣಗಳು, ಜಾತಿಗಳು, ಕುಲಗಳು, ಗೋತ್ರಗಳು ಎಂಬ ಮೌಢ್ಯವನ್ನು ತೊರೆಯಲೇಬೇಕು.

ಈಗ ಧಾರ್ಮಿಕ ಸ್ವಾತಂತ್ರ್ಯದ ಅರ್ಥವನ್ನು ತಿಳಿಯಬೇಕು. ಬೇಕಾದ ನಾಗರಿಕನು ಬೇಕಾದ ಧರ್ಮವನ್ನು ಸ್ವೀಕರಿಸಬಹುದು. ವಿಚಾರಕ್ಕೆ ನಿಲ್ಲುವ, ವಿಶಾಲ ತತ್ವಗಳಿಂದ ಕೂಡಿದ ಪ್ರಗತಿಪರ ಧರ್ಮವನ್ನೇ ವಿಚಾರಶೀಲರು ಸ್ವೀಕರಿಸುತ್ತಾರೆ. ಇಂದಿನ ಸಮಸ್ಯೆಗಳನ್ನು ಬಿಡಿಸಲಿಕ್ಕೆ ಬಾರದ ಗೊಡ್ಡ ಧರ್ಮವನ್ನು ಮೂಢರು ಮಾತ್ರ ಸ್ವೀಕರಿಸುವರು.

ತನ್ನ ಸ್ವತಂತ್ರ ವಿಚಾರಕ್ಕೆ ಯುಕ್ತ ಕಂಡ ಧರ್ಮದ ಪ್ರಚಾರವನ್ನು ಸಹ ಮಾಡಲಿಕ್ಕೆ ಸರಕಾರದ ಅಡ್ಡಿಯಿಲ್ಲ. ಬ್ರಿಟಿಷ ಸರಕಾರವು ಹೋಗಿರುವದರಿಂದ ಕ್ರಿಸ್ತೀ ಪಾದ್ರಿಗಳ ಉಪಟಳವು ಇನ್ನು ನಡೆಯಲಾರದು. ಅವರೂ ಸಹ ವಿಚಾರಕೊಪ್ಪುವ ರೀತಿಯಲ್ಲಿ ಪ್ರಚಾರ ಮಾಡಲಿಕ್ಕೆ

ಅಡ್ಡಿಯಿಲ್ಲ. ಆದರೆ ರಾಷ್ಟ್ರದ ಸಂಸ್ಕೃತಿ, ಪರಂಪರೆ, ನಾಗರಿಕತೆಗಳ ಹಿರಿಮೆಗೆ ಭಾದೆ ಬರದಂತೆ ಪ್ರಚಾರ ಮಾಡುವ ಜವಾಬುದಾರಿಯು ಎಲ್ಲರ ಮೇಲಿದೆಯೆಂಬುದನ್ನು ಎಲ್ಲರೂ ನೆನಪಿನಲ್ಲಿಟ್ಟರೆ, ಕ್ಷೇಮ.

ಸ್ವತಂತ್ರ ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವ ತತ್ವಗಳಿಗನುಸರಿಸಿ ಧರ್ಮಪ್ರಚಾರ ಮಾಡಿದರೆ ರಾಷ್ಟ್ರದ ಏಳಿಗೆಗೆ ಸಹಾಯ ಮಾಡಿದಂತೆಯೇ ಸರಿ. ತದ್ವಿರುದ್ಧವಾಗಿ ನಡೆದರೆ ರಾಷ್ಟ್ರಕೆ ಘಾತ ಮಾಡಿದಂತಾಗುವದು. ಧರ್ಮಪ್ರಚಾರದಲ್ಲಿ ಬಲಾತ್ಕಾರ ಜುಲುಮೆ, ಹಿಂಸೆ ದರ್ಪಗಳಿಗೆ ಸ್ಥಾನವಿಲ್ಲೆಂಬುದನ್ನು ಮುಸಲ್ಮಾನರ ಜ್ಞಾಪಕದಲ್ಲಿ ಇಟ್ಟುಕೊಳ್ಳಬೇಕು. ವರ್ಣಾಶ್ರಮದ ಪ್ರತ್ಯೇಕ ಮನೋಭಾವನೆಯು ವೈದಿಕ ಅಥವಾ ಹಿಂದೂ ಧರ್ಮವೇ ರಾಷ್ಟ್ರಧರ್ಮವೆಂದು ಅನ್ಯರ ಮೇಲೆ ಹೇರುವ ಹೇಯ ಕೃತಿಯನ್ನು ಇನ್ನು ಯಾರೂ ಸಹಿಸಲಾರರು. ಇದನ್ನು ಹಿಂದುಗಳು ಮರೆಯದಿರಲಿ. ಶಿಕ್ಷಣ ಕ್ಷೇತ್ರದಲ್ಲಿ ಸರಕಾರದ ಶಿಕ್ಷಣ ಸಂಸ್ಥೆಗಳಲ್ಲಿ– ಧರ್ಮ- ಬೋಧೆಗೆ ಸ್ಥಾನವಿಲ್ಲ. ಇತರ ಶಿಕ್ಷಣ ಸಂಸ್ಥೆಗಳಲ್ಲಿ ಸಹ ಧರ್ಮವನ್ನು ವಿದ್ಯಾರ್ಥಿಗಳ ಮೇಲೆ ಹೇರಲಿಕ್ಕೆ ಬರಲಾರದು. ನೀತಿ ತತ್ವಗಳನ್ನು ಹೇಳಲಿಕ್ಕೆ ಯಾರಿಗೂ ಅಡ್ಡಿಯಿಲ್ಲ. ಧರ್ಮ ಸಂಸ್ಥೆಗಳನ್ನು ಸ್ಥಾಪಿಸಬಹುದು. ಅವುಗಳ ವ್ಯವಸ್ಥೆಯನ್ನು ಮಾಡಲಿಕ್ಕೆ ಸ್ವಾತಂತ್ರ್ಯವಿದೆ. ಆದರೆ ಧಾರ್ಮಿಕ ಸ್ವಾತಂತ್ರ್ಯವೆಂದರೆ ಮನಬಲ್ಲಂತೆ, ಶಿಸ್ತು, ಸಂಯಮ, ಶಾಂತಿಗಳಿಲ್ಲದೆ ನಡೆಯುವದಲ್ಲವೆಂಬುದನ್ನು ಅರಿತುಕೊಂಡು ವ್ಯಾಪಕ ಧರ್ಮದತ್ತ ಜಗತ್ತು ಸಾಗಲಿ.

---

(೩)

# ವೀರಶೈವ ಧರ್ಮದ ನಿಜಸ್ವರೂಪ !

(ವಿಮರ್ಶಾತ್ಮಕ ಪ್ರಶ್ನೋತ್ತರ)

(೧) ಪ್ರಶ್ನೆ:— ವೀರಶೈವ ಧರ್ಮವನ್ನು ಸ್ಥಾಪಿಸಿದವರಾರು ?

ಉತ್ತರ:—ಶೈವ ಧರ್ಮವು ವೀರಶೈವ ಧರ್ಮಕಿಂತ ಮುಂಚಿನದು. ಶೈವದಿಂದ ಉತ್ಕ್ರಾಂತಿ ಹೊಂದಿ ವೀರಶೈವವಾಗಿದೆ. ವೀರಶೈವವು ವಿಕಾಸ ಹೊಂದಿ ಲಿಂಗಾಂಗಿ ಧರ್ಮವಾಗಿರುವದು. ಲಿಂಗಾಂಗಿಧರ್ಮವು ಪೂರ್ಣತೆಗೆ ಮುಟ್ಟಿದ್ದು ೧೧ ನೇ ಶತಮಾನದಲ್ಲಿ, ಅದರೆ ಮುಖ್ಯವಾಗಿ ಕಲ್ಯಾಣದ ಶರಣರ ಕಾಲದಲ್ಲಿ. ವೀರಶೈವ ಧರ್ಮ ಸ್ಥಾಪಕರು ಯಾರೆಂಬುದು ಐತಿಹಾಸಿಕವಾಗಿ ಇನ್ನೂ ತಿಳಿದು ಬಂದಿಲ್ಲ. ವೀರಶೈವ ಧರ್ಮವು ವಿಕಾಸಕ್ಕೆ ಎಡೆಗೊಟ್ಟಿರುವದೇ ಅದರ ಮಹತ್ವಕ್ಕೆ ಕಾರಣವೆಂದು ಹೇಳಬಹುದು. ವಿಕಾಸಕ್ಕೆ ಎಡೆಗೊಡದ ಧರ್ಮವು ಧರ್ಮವೇ ಅಲ್ಲ.

(೨) ಪ್ರಶ್ನೆ:— ವೀರಶೈವ ಧರ್ಮದ ಪ್ರಮಾಣ ಗ್ರಂಥಗಳಾವವು ?

ಉತ್ತರ: –ವಿಕಸಿತ ವೀರಶೈವ ಧರ್ಮ ಅಥವಾ ಲಿಂಗಾಂಗೀ ಧರ್ಮಕ್ಕೆ ಶರಣರ ವಚನಗಳ ರಾಶಿಯೇ ಪ್ರಮಾಣ ಗ್ರಂಥ. ಆ ವಚನಗಳಿಗೆ ಸಮ್ಮತವಿರುವ ವೇದಾಗಮ ಪುರಾಣೇತಿಹಾಸಗಳ ಅಂಶಗಳೆಲ್ಲವೂ ಪ್ರಮಾಣಗಳಾಗಬಲ್ಲವು. ಎಲ್ಲ ವೇದ, ಎಲ್ಲ ಆಗಮ, ಎಲ್ಲ ಪುರಾಣಗಳು ವಿಕಸಿತ ವೀರಶೈವ ಧರ್ಮದ ಪ್ರಮಾಣ ಗ್ರಂಥಗಳಲ್ಲ. ಎಲ್ಲದರಲ್ಲಿಯ ಉತ್ತಮ ಅಂಶವನ್ನು ಹೀರಿಕೊಂಡು ಬೆಳೆಯುವ ಪ್ರವೃತ್ತಿಯಿತ್ತು ವೀರಶೈವ ಧರ್ಮಕ್ಕೆ! ೧೨ನೇ ಶತಮಾನದಲ್ಲಿ ಅನೇಕ ಸ್ತ್ರೀ ಪುರುಷ ಮಹಾತ್ಮರು ಒಂದೆಡೆ ಸೇರಿ ವೀರಶೈವ ಧರ್ಮವನ್ನು ಪೂರ್ಣತೆಗೆ ಒಯ್ದರು. ಲಿಂಗಾಂಗಿ ಧರ್ಮವು ವಿಶ್ವಧರ್ಮದ ಸ್ವರೂಪ ತಾಳಿದ್ದು ಇದೇ ಕಾಲದಲ್ಲಿ!

(೩) ಪ್ರಶ್ನೆ:— ವರ್ಣಾಶ್ರಮ ಕುಲಜಾತಿಗಳ ಬಗ್ಗೆ ವೀರಶೈವ ಧರ್ಮದ ಅಭಿಪ್ರಾಯವೇನು ?

ಉತ್ತರ:— ಪ್ರಗತಿಯ ವೈರಿಗಳಾಗಿರುವ ವರ್ಣಾಶ್ರಮ ಕುಲ ಜಾತಿಗಳನ್ನು ತೀವ್ರವಾಗಿ ಖಂಡಿಸಿ ಜಾತ್ಯಾತೀತ ಸಮಾಜವನ್ನು ರಚಿಸಿ ಮಾನವ ಸಮೂಹಕ್ಕೆ ಕಲ್ಯಾಣ ಮಾಡಿದ್ದರಿಂದಲೇ ವಿಕಸಿತ ವೀರಶೈವ ಧರ್ಮಕ್ಕೆ ಶ್ರೇಷ್ಠತೆ ಬಂದಿರುವದು.

(೪) ಪ್ರಶ್ನೆ:– ಭಕ್ತ ಮಹೇಶ್ವರರು ಎಂಬ ಭೇದವನ್ನು ವೀರಶೈವ ಧರ್ಮವು ಮನ್ನಿಸುತ್ತದೆಯೋ ?

ಉತ್ತರ:– ಎಂದಿಗೂ ವಿಕಸಿತ ವೀರಶೈವ ಧರ್ಮವು ಹಾಗೆ ಭೇದ ಮಾಡಲಾರದು. ಭಕ್ತನು ಷಟ್‌ಸ್ಥಲಾನುಸಾರ ಮಹೇಶ್ವರನಾಗಿ ಕೊನೆಗೆ ಸಾಕ್ಷಾತ್ ಶಿವನಾಗುತ್ತಾನೆಂದೇ ಅದು ಬೋಧಿಸುತ್ತದೆ.

(೫) ಪ್ರಶ್ನೆ – ಸಂಸ್ಕೃತ ವಿದ್ಯೆಯು ನಾಶವಾದರೆ ಧರ್ಮ ರಹಸ್ಯವು ನಾಶವಾಗುತ್ತದೆಂದು ವೀರಶೈವ ಧರ್ಮವು ಹೇಳುತ್ತಿದೆಯೋ ?

ಉತ್ತರ:— ಧರ್ಮ ರಹಸ್ಯವು ಸಂಸ್ಕೃತ ವಿದ್ಯೆಯಲ್ಲಿ ಮಾತ್ರ ಇಲ್ಲ. ಕನ್ನಡ ಭಾಷೆಯಲ್ಲಿಯೂ ಇದೆ. ಪರಮಾತ್ಮನು ಭಾಷೆಯ ಪಕ್ಷಪಾತಿಯಲ್ಲ. ವಿಕಸಿತ ಧರ್ಮ ರಹಸ್ಯವು ಶರಣರ ಕನ್ನಡ ವಚನಗಳಲ್ಲಿ ಥಳಥಳ ಹೊಳೆಯುತ್ತದೆ ಇದೇ ವಿಕಸಿತ ವೀರಶೈವ ಧರ್ಮದ ಅಭಿಪ್ರಾಯವು.

(೬) ಪ್ರಶ್ನೆ:—ಅಸ್ಪೃಶ್ಯತಾ ನಿವಾರಣೆಯನ್ನು ಮಹಾತ್ಮಾ ಗಾಂಧಿಯವರು ಮಾಡಿದಂತೆ ಶರಣರು ಮಾಡಿರುವರೇ ?

ಉತ್ತರ:—ಶರಣರು ಅಸ್ಪೃಶ್ಯತಾ ನಿರ್ಮೂಲ ಮಾಡಿರುವರು ವಚನಗಳ ಅಮರವಾಣಿಯಿಂದ ಇದು ವೇದ್ಯವಾಗುವದು. ವಚನ ಧರ್ಮ ರಹಸ್ಯ ತಿಳಿಯದ ಅಜ್ಞಾನಿಯು ಅಥವಾ ದುರಾಗ್ರಹಿಯು ಶರಣರನ್ನು ನಿಂದಿಸುವನು. ಮಹಾತ್ಮಾ ಗಾಂಧಿಯವರ ಜೀವನದ ತಳಹದಿಯು ಶರಣರ ಅಮರ ವಾಣಿಯಲ್ಲಿ ಸ್ಪಷ್ಟವಾಗಿರುವದು.

---

# ಸಾಮಾಜಿಕ ಶಿಕ್ಷಣದ ಯೋಜನೆ.

(ಲೇಖಕರು— ಶ್ರೀಯುತ ಕಲ್ಯಾಣಪ್ಪ ಬ್ಯಾಳಿ. ಬಿ. ಎ. ಬಿ. ಟಿ. ವಿಜಾಪುರ)

---

ಶಾಲೆ ಕಾಲೇಜಗಳು ಕೇವಲ ಪಠ್ಯಪುಸ್ತಕಗಳನ್ನು ಕಲಿಸಿ ವಿದ್ಯಾರ್ಥಿಗಳನ್ನು ಪರೀಕ್ಷೆಗೆ ಅಣಿ ಮಾಡುವ ಸಂಸ್ಥೆಗಳಷ್ಟೇ ಆಗಬಾರದು. ಕಲಿತವರದೊಂದು ವರ್ಗವೇ ಬೇರೆ, ಕಲಿಯುವರದೊಂದು ವರ್ಗವೇ ಬೇರೆ, ಹೀಗೆ ವಿಭಾಗಗಳು ತಾರತಮ್ಯರೂಪದಿಂದಿರಕೂಡದು. ಕಲಿತವರು ಕಲಿಯದವರಿಗಿಂತ ಹೆಚ್ಚೆಂದು ಸಮಾಜದಲ್ಲಿ ದರ್ಪದಿಂದ ಮೆರೆಯುವದು ಬೇಡ. ಕಲಿಯದವರು ತಾವು ಕೀಳೆಂದು ಭಾವಿಸಿ ಕಲಿತವರ ಮುಂದೆ ತಲೆ ತಗ್ಗಿಸಿ ನಡೆಯುವ ಅನಿಷ್ಟ ಪ್ರಸಂಗವೂ ಬೇಡ. ಕಲಿತವರೂ ಕಲಿಯದವರೂ ಕೂಡಿಕೊಂಡು ಸಹಕಾರದಿಂದ ಬಂಧುಗಳಂತೆ ಸಮಾಜ ಸೇವಾ ಕಾರ್ಯ ಮಾಡುವದು ಸಾಮಾಜಿಕ ಶಿಕ್ಷಣದ ಮುಖ್ಯ ಉದ್ದೇಶವಾಗಿದೆ. ಅದಕ್ಕಾಗಿ ಕಾಯಕಷ್ಟವುಳ್ಳ ಯಾವದೇ ಹೋರೆಯು ಕೀಳಲ್ಲವೆಂಬದನ್ನು ನಾವು ವಿದ್ಯಾರ್ಥಿಗಳ ಮನಸ್ಸಿನ ಮೇಲೆ ಬಿಂಬಿಸಬೇಕು. ಶಿಕ್ಷಕರಲ್ಲಿಯೂ ಕೂಡ ಆ ಭಾವನೆಯು ಸಂಪೂರ್ಣವಾಗಿ ಬೇರೂರಬೇಕು. ಬರೇ ಮನಸ್ಸಿನಲ್ಲಿ ಕಾಯ ಕಷ್ಟದ ಹೋರೆಯ ಬಗ್ಗೆ ಸಹಾನುಭೂತಿಯಿದ್ದರೆ ತೀರಲಿಲ್ಲ ಅದನ್ನು ಕಾರ್ಯ ರೂಪದಲ್ಲಿಯೂ ತರಬೇಕಾಗುತ್ತದೆ

ಶಾಲೆ ಕಾಲೇಜಗಳ ವಿದ್ಯಾರ್ಥಿಗಳು ತಮ್ಮ ವಿದ್ಯಾಲಯಗಳ ಕೋಣೆಗಳನ್ನು ಸ್ವಚ್ಛವಾಗಿ ಉಡಗಬಹುದು ಆಟದ ಬೈಲನ್ನು ಹಸನವಾಗಿಡಬಹುದು. ಗೋಡೆಗಳಿಗೆ ಸುಣ್ಣ ಹಚ್ಚಬಹುದು. ಕಪಾಟು ಡೆಸ್ಕುಗಳಿಗೆ ಹತ್ತಿದ ಧೂಳವನ್ನು ಜಾಡಿಸಬಹುದು. ಶಾಲೆಯ ತೋಟದ ಗಿಡಗಳಿಗೆ ನೀರು ಹಾಕಬಹುದು. ಕಳೆತೆಗೆಯಬಹುದು. ಹೂವಿನ ಗಿಡಗಳನ್ನು ಹಚ್ಚಬಹುದು, ಬಾಗಿಲ ಕಿಡಿಕಿಗಳಿಗೆ ಬಣ್ಣ ಎಣ್ಣೆಗಳನ್ನು ತೊಡೆಯಬಹುದು. ಆಟದ ಬೈಲಿನಲ್ಲಿ ಬಿದ್ದ ಹರಳು ಕಲ್ಲುಗಳನ್ನು ಆರಿಸಿ ತೆಗೆಯಬಹುದು ಶಾಲೆಯ ತೋಟದ ಬೇಲಿಯನ್ನು ಸ್ಥಿರಪಡಿಸಬಹುದು. ಶಾಲೆಯ ಕೋಣೆಗಳನ್ನು ಅಂದಚಂದವಾದ ಚಿತ್ರಗಳಿಂದ ಸಿಂಗರಿಸಿ

ಬಹುದು. ಶಾಲೆಯು ಲಾಯಬ್ರರಿ ಪುಸ್ತಕಗಳನ್ನು ಆಯಾಯ ವಿಭಾಗ ಗಳ ಮೇರೆಗೆ ನಂಬರು ಹಾಕಿ ಶಿಸ್ತಿಸಿಂದಿಡಬಹುದು ಶಾಲೆಯಲ್ಲಿ ನಕಾಶ-ಚಿತ್ರ-ರಟ್ಟಿನ ಸಾಮಾನು ಮಣ್ಣಿನ ಸಾಮಾನುಗಳನ್ನು ಸಿದ್ಧ ಗೊಳಿಸಿ ಒಂದು ಪ್ರದರ್ಶನವನ್ನು ಏರ್ಪಡಿಸಬಹುದು. ಶಾಲೆಯಲ್ಲಿ ಭಾವಿ ತೋಡಿಸುವದಿದ್ದರೆ ಕಟ್ಟಡ ಕಟ್ಟಿಸುವದಿದ್ದರೆ, ಕುರ್ಚಿ ಮೇಜು ಗಳನ್ನು ತಯಾರಿಸುವದಿದ್ದರೆ ಅದಕ್ಕೆ ಸಹಾಯ ಮಾಡಬಹುದು. ಶಾಲೆ ಯು ಸಲುವಾಗಿ ಪಾಯಖಾನೆ ಮೂತ್ರಿಗಳನ್ನು ರಚನೆ ಮಾಡಬಹುದು. ಇಂಥ ಕೆಲಸ ಮಾಡಿದರೆ ಬಾಲಕರು ಪಾಲಕರು ಮೊದಮೊದಲು ಇದ ಕ್ಕಾಗಿಯೇ ನಮ್ಮ ಮಕ್ಕಳನ್ನು ಸಾಲೆಗೆ ಕಳಿಸಗೊಡಬೇಕೇ ಹೇಗೆಂದು ವಾದಿಸಬಹುದು ಆದರೆ ಕಾಯ ಕಷ್ಟದ ಉಪಯುಕ್ತತೆ, ನಿಯಮಿತತನ ಆದರ ಪವಿತ್ರತೆಗಳು ಅವರಿಗೆ ಮನವರಿಕೆಯಾದಂತೆ ಅವರೂ ಕೂಡ ತಮ್ಮ ಬಾಲಕರೊಂದಿಗೆ ಶಾಲೆಗೆ ಬಂದು ಇಂಥ ಕೆಲಸಗಳನ್ನು ಮಾಡಲು ಆನಂದ ಪಡಬಹುದು

ಮುಂಬಯಿ ಸರಕಾರದ ಶಿಕ್ಷಣ ಸಲಹೆಗಾರರಾದ ಶ್ರೀ. ಕೆ. ಜಿ. ಸಯ್ಯದ್ದೀನರು ಕಾಶ್ಮೀರ ಜಮ್ಮು ಸಂಸ್ಥಾನಗಳಲ್ಲಿ ೧೯೩೯ ರಿಂದ ೧೯೪೫ ರ ವರೆಗೆ ಮೇಲಿನಂತೆ ಪ್ರಯೋಗ ಮಾಡಿ ಅದು ಯಶಸ್ವಿಯಾಯಿತೆಂದು ತಿಳಿಯಪಡಿಸಿದ್ದಾರೆ. ಅವರು ತಮ್ಮ ಅಭಿಪ್ರಾಯದ ಒಂದು ಕೈ ಪುಸ್ತಕ ವನ್ನ ಪ್ರಸಿದ್ಧಿಸಿದ್ದು ಅದರಲ್ಲಿ ಅವರು ಸಮಾಜ ಶಿಕ್ಷಣವನ್ನು ವಿವರಿ ಸುವಲ್ಲಿ ಅವರು ಮೇಲಿನ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಇಂಥ ಕೈ ಕೆಲಸಗಳಷ್ಟೇ ಸಮಾಜ ಶಿಕ್ಷಣವೆಂದೆನ್ನುವದು ಸರಿಯಾಗಿರುವದಿಲ್ಲ. ಇದು ಹೆಚ್ಚಿಗೆ ವ್ಯಾಪಕವಾದದೆಂಬುದ ಈ ಶಬ್ದವೇ ಹೇಳಿ ಕೊಡು ತ್ತದೆ. ಅದನ್ನು ಶಾಲೆ ಕಾಲೇಜುಗಳಲ್ಲಿರುವ ಶಿಕ್ಷಕರೂ ಪ್ರಾಧ್ಯಾಪಕರೂ ಗಮನಿಸುವದು ಅವಶ್ಯವಿದೆಂದು ನಮಗೆ ತೋರುತ್ತದೆ.

ವಿದ್ಯಾರ್ಥಿಗಳಿಗೆ ಶಾಲೆ ಕಾಲೇಜಗಳಲ್ಲಷ್ಟೇ ಕಾಯ ಕಷ್ಟ ಮಾಡು ವದರ ಮಹತ್ವವನ್ನು ಕಲಿಸಿಕೊಟ್ಟರೆ ತೀರದು. ಅವರು ತಮ್ಮ ಸುತ್ತ ಲಿನ ಕೂಲಿಕಾರರ ಮತ್ತು ಬಡಬಗ್ಗರೊಡನೆ ಬೆರೆತು, ಅವರೊಡನೆ ಶಾರೀರಿಕ ಶ್ರಮ ಮಾಡಲು ಮುಂದುವರಿಯಬೇಕು. ಇದರಿಂದ ಕಲಿ

ತವರು ಕಡಿಮೆಯೆಂಬ ಭಾವವು ಉಡುಗಿ ಎಲ್ಲರೂ ಒಂದೇ ಎಂಬ ಭಾವವು ಅಳವಡುವದು.

ನಾವು ಶಿಕ್ಷಣದಿಂದ ಸಾಧಿಸತಕ್ಕ ಈ ಗುರಿಯಾದರೂ ಸಾಮಾನ್ಯವಾದುದಲ್ಲ. ಆದುದರಿಂದ ಶಿಕ್ಷಕರೂ ವಿದ್ಯಾರ್ಥಿಗಳೂ ಕೂಡಿ ಬಡಬಗ್ಗರೊಡನೆ ಬೆರೆತು ಹೊಲ ತೋಟ-ಕಟ್ಟಡ-ಬಾವಿ ಅಗೆಯೋಣ ಮುಂತಾದ ಕಾಯಕಷ್ಟದ ಹೊರೆಗಳನ್ನು ಮಾಡಲು ಹಿಂಜರಿಯಬಾರದು. ಒಕ್ಕಲಿಗರು ತಿಪ್ಪೆಯ ಕುಣಿಗಳನ್ನು ಅಣಿಮಾಡಿಕೊಡಬಹುದು. ರಸ್ತೆಗಳಲ್ಲಿರುವ ತಗ್ಗುದಿನ್ನೆಗಳನ್ನು ಸಮ ಮಾಡಿ ನೆಟ್ಟಗೆ ಮಾಡಿ ಕೊಡಬಹುದು. ಅಶಿಕ್ಷಿತರಾದ ಪ್ರೌಢರಿಗೆ ಅಕ್ಷರ ಜ್ಞಾನ ಮಾಡಿಕೊಡಬಹುದು. ಊರಲ್ಲಿ ವಾಚನಾಲಯಗಳನ್ನು ಸ್ಥಾಪಿಸಿ ಸಾಮಾನ್ಯರಿಗೆ ಜಗತ್ತಿನ ಸಂಗತಿಗಳೆಲ್ಲ ತಿಳಿಯುವಂತೆ ವ್ಯವಸ್ಥೆ ಮಾಡಬಹುದು ಅವರಿಗೆ ಮನೋರಂಜನವಾಗುವಂತೆ ಯಾಂತ್ರಿಕ ದೀಪ-ಫಿಲ್ಮ ನಾಟಕ-ಕೀರ್ತನ-ಪ್ರವಚನ-ಲಾವಣಿ ಮುಂತಾದ ಕಾರ್ಯಕ್ರಮಗಳನ್ನೇರ್ಪಡಿಸಿ ಅವರೊಡನೆ ಸಹಕಾರ ಬೆಳೆಸಬಹುದು. ಈ ಮೇರೆಗೆ ಹಳ್ಳಿಗರೊಡನೆ ಬೆರೆತು ಅವರ ಜೀವನ ಹಾಗೂ ನಮ್ಮ ಜೀವನವನ್ನು ಸಮರಸಗೊಳಿಸಲು ಅದೆಷ್ಟೋ ಆಸ್ಪದವಿರುತ್ತದೆ.

ಈ ತರಹದ ಸಮಾಜ ಶಿಕ್ಷಣಕ್ಕಾಗಿ ಸರಕಾರದವರೂ ಸಾರ್ವಜನಿಕರೂ ಕೂಡಿ ಪ್ರತಿಯೊಂದು ಜಿಲ್ಹೆಯಲ್ಲಿ ಒಂದು ಸಮಾಜ ಶಿಕ್ಷಣ ಸಂಸ್ಥೆಯೊಂದನ್ನು ಸ್ಥಾಪಿಸಿ ಆ ಮೂಲಕ ಈ ತರಹದ ಚಟುವಟಿಕೆಗಳನ್ನು ಹೆಚ್ಚಿಸಬೇಕು. ಅದಕ್ಕಾಗಿ ಸ್ಥಾನಿಕ ಶಾಲೆ ಕಾಲೇಜಗಳ ಶಿಕ್ಷಕರು ವಿದ್ಯಾರ್ಥಿಗಳು ಮನಃಪೂರ್ವಕ ಸಹಾಯ ಮಾಡಬೇಕು. ಈ ಸಂಸ್ಥೆಯು ಯಶಸ್ವಿಯಾದರೆ ಮುಂದೆ ತಾಲೂಕಿಗೊಂದು ಶಾಖೆಯನ್ನೂ ಪ್ರಾರಂಭಿಸಬಹುದು.

ಮೊದಲು ಸಮಾಜ ಶಿಕ್ಷಣ ಪ್ರಸಾರಕ್ಕಾಗಿ ಒಂದು ಯೋಜನೆಯು ಅವಶ್ಯವಾದದ್ದು. ಅದರ ಮುಖ್ಯ ಉದ್ದೇಶವಾದರೂ ಜನತೆಯ ಕಾಯಕ, ಬೌದ್ಧಿಕ, ಸಾಂಸ್ಕೃತಿಕ ಬೆಳವಣಿಗೆ ಮಾಡುವಂತಹದಾಗಿರಬೇಕು. ಈ ದೃಷ್ಟಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಪ್ರತಿಯೊಂದು ಜಿಲ್ಹೆಗೆ ೫ ಜನ ಸುಶಿಕ್ಷಿತರ ಒಂದು ಸಾಮಾಜಿಕ ಶಿಕ್ಷಣ ಕಮಿಟಿಯೊಂದನ್ನು ಸ್ಥಾಪಿ

ಸಬಹುದು. ಇಲ್ಲವೆ ಅಂಥ ಉದ್ದೇಶಗಳುಳ್ಳ ಸಂಸ್ಥೆಗಳಿದ್ದರೆ ಸರಕಾರವೂ ಸಮಾಜವೂ ಅಂಥವುಗಳನ್ನು ಎತ್ತಿ ಹಿಡಿಯಬೇಕು ಆ ಕಮಿಟಿಯವರು ಇಲ್ಲವೆ ಸಂಸ್ಥೆಯವರು ಆ ಉದ್ದೇಶಗಳಿಗನುಸರಿಸಿ ಕಾರ್ಯಗಳನ್ನು ಗೊತ್ತುಪಡಿಸಬೇಕು, ಫಂಡು ಕೂಡಿಸಬೇಕು, ಸರಕಾರದಿಂದ ಸಂಪೂರ್ಣವಾದ ಗ್ರ್ಯಾಂಟು ಪಡೆಯಲು ಪ್ರಯತ್ನಿಸಬೇಕು.

ಈ ಸಂಸ್ಥೆಯ ಉದ್ದೇಶದ ಮೇರೆಗೆ ಸಮಾಜದ ಕಾಯಿಕ ಬೌದ್ಧಿಕ ಸಾಂಸ್ಕೃತಿಕ ಬೆಳವಣಿಗೆಗಾಗಿ ಕೆಲವು ಕಾರ್ಯಕ್ರಮಗಳನ್ನು ನಿರ್ದಿಷ್ಟಗೊಳಿಸಬೇಕಾಗುತ್ತದೆ. ಆ ಕಾರ್ಯಕ್ರಮಗಳಾವವೆಂದರೆ:— (೧) ನಾಟಕಗಳು (೨) ಸಂಭಾಷಣೆಗಳು (೩) ವ್ಯಾಖ್ಯಾನಗಳು (೪) ಮ್ಯಾಜಿಕ್ ಲ್ಯಾಂಟರ್ನ ಪಾಠಗಳು (೫) ಚಲನ ಚಿತ್ರಗಳು (೬) ಕೀರ್ತನ ಪುರಾಣ ಪ್ರವಚನಗಳು (೭) ಚಿತ್ರಗಳು ಮತ್ತು ಲೇಖನ ಪಟಗಳು (೮) ನಾಟ್ಯಗಳು (೯) ಪದಗಳು (೧೦) ಫಾರ್ಸುಗಳು (೧೧) ಕಾವ್ಯಗಾನ (೧೨) ಲಾವಣಿ ಪದಗಳು ಇತ್ಯಾದಿ.

ಈ ಕಾರ್ಯಕ್ರಮಗಳನ್ನು ಜಿಲ್ಹೆಯಲ್ಲೆಲ್ಲ ಪ್ರಚಾರದಲ್ಲಿ ತರಬೇಕಾದರೆ ಕೆಲವು ಸ್ಥಾನಮಾನಗಳೂ ಸಲಕರಣೆಗಳೂ ಬೇಕಾಗುತ್ತವೆ. ಉದಾ:— (೧) ಕಚೇರಿ (೨) ಮ್ಯಾಜಿಕ್‌ಲಾಂಟರ್ನ (೩) ತಬಲಾ ಪೇಟಿಗಳು (೪) ಸಾದಾ ಪಡದೆಗಳು. (೫) ಟ್ರ್ಯಾವ್ಹಲಿಂಗ ಫೋರ್ಡ (೬) ಮುದ್ರಣ ಯಂತ್ರ (೭) ಚಿತ್ರ ತೆಗೆಯುವ ಹಾಗೂ ಬಣ್ಣ ಕೊಡುವ ಸಾಮಾನುಗಳು ಇತ್ಯಾದಿ.

ಈ ಕಾರ್ಯಗಳನ್ನು ನೆರವೇರಿಸಲಿಕ್ಕೆ ಕೆಳಗೆ ಕಾಣಿಸಿದ ಪ್ರಕಾರ ಕೆಲವು ಜನ ಕೆಲಸಗಾರರು ಬೇಕಾಗುತ್ತಾರೆ. ಅವರವರಿಗೆ ಯೋಗ್ಯತೆಯ ಪ್ರಕಾರ ಸಂಸ್ಥೆಯವರು ಪಗಾರದ ಸ್ಕೇಲನ್ನು ಗೊತ್ತುಮಾಡಿ ಜಾಹಿರಾತು ಕೊಟ್ಟು ಯೋಗ್ಯರಾದವರನ್ನು ನೇಮಿಸಿಕೊಳ್ಳಬೇಕು.

೧. ಜಿಲ್ಹಾ ಸಾಮಾಜಿಕ ಶಿಕ್ಷಣದ ಆರ್ಗನಾಯಿಜರ (ಪ್ರಮುಖ)
೨. ಒಬ್ಬ ಕಾರಕೂನ
೩. ಒಬ್ಬ ಗಾಯನ ಶಿಕ್ಷಕ
೪. ಒಬ್ಬ ಚಿತ್ರಕಲಾ ಬಣ್ಣ ಕೊಡುವ ತಜ್ಞ.
೫. ಒಬ್ಬ ತಬಲಾಗಾರ
೬. ಒಬ್ಬ ಡ್ರಾಯವ್ಹರ
೭. ಒಬ್ಬ ಸಿಪಾಯಿ

ಈ ಕೆಲಸಕ್ಕೆ ಬೇಕಾಗುವ ಸ್ವಯಂ ಸೇವಕರನ್ನೂ ಪಾತ್ರವಹಿಸು ವವರನ್ನೂ ಆಯಾಯ ಶಿಕ್ಷಣ ಸಂಸ್ಥೆಯವರು ಒದಗಿಸಿಕೊಡಬೇಕು.

ಮನೋರಂಜನೆ ಹಾಗೂ ಸ್ವಂತ ಸೇವೆಯ ಮುಖಾಂತರವಾಗಿ ಈ ಕೆಲಸಗಾರರು ಕೆಳಗೆ ಕಾಣಿಸಿದ ಉಪಯುಕ್ತ ಕಾರ್ಯಗಳನ್ನು ಪ್ರಸಾರ ಮಾಡಬೇಕು. (೧) ಅಸ್ಪೃಶ್ಯತಾ ನಿವಾರಣೆ (೨) ಮದ್ಯಪಾನ ನಿಷೇಧ (೩) ಜಾತ್ಯಂಧತೆಯ ನಿಷೇಧ ೪) ಕೆಟ್ಟ ಚಟ ಚಾಳಿಗಳ ನಿಷೇಧ (೫) ಸಮಾಜದಲ್ಲಿ ನೆಲೆಗೊಂಡ ದುಷ್ಟ ಪದ್ಧತಿಗಳ ನಿಷೇಧ (೬) ಅಜ್ಞಾನ ಮೂಢಭಾವನೆ ಡಾಂಭಿಕತನಗಳ ನಿಷೇಧ (೭) ನಮ್ಮ ನಾಡಿನ ಸಂಸ್ಕೃತಿ ಯನ್ನು ವಚನ ಸಾಹಿತ್ಯ ಕೈವಲ್ಯಪದಗಳು ಲೇಖನ-ಸಂಶೋಧನ-ದಾಸರ ಪದ ಮುಂತಾದವುಗಳ ಆಧಾರದಿಂದ ಪ್ರಚಾರಗೊಳಿಸುವದು. (೮) ಒಳಪಂಗಡಗಳಲ್ಲಿ ಮಿಶ್ರವಿವಾಹ (೯) ಮಿಶ್ರ ಭೋಜನ. (೧೦) ಕಾಳಾಬಜಾರ ಲಂಚಗೂಳಿತನ ಗ್ರಾಮ ವ್ಯಾಜ್ಯಗಳ ನಿಷೇಧ (೧೧) ಸ್ವದೇಶೀ ಕಾರ್ಯಗಳ ಪುನರುಜ್ಜೀವನ (೧೨) ಒಕ್ಕಲತನ ತೋಟಪಟ್ಟಿ ಗಳಲ್ಲಿ ಸುಧಾರಣೆ (೧೩) ಬಾವಿ, ರಸ್ತೆ, ಒಡ್ಡು, ಇವುಗಳ ಸ್ವಚ್ಛತೆಗಳು.

ಈ ಕಾರ್ಯಗಳನ್ನು ನಿರ್ವಹಿಸಲು ಪ್ರತಿವರ್ಷ ಕನಿಷ್ಠ ಪಕ್ಷಕ್ಕೆ ೧೦-೧೨ ಸಾವಿರ ರೂಪಾಯಿಗಳಾದರೂ ಬೇಕು. ಪ್ರತಿಯೊಂದು ಹಳ್ಳಿಗೂ ವಿವಿಧ ಕಾರ್ಯಕ್ರಮಗಳನ್ನಿಟ್ಟು ಹಳ್ಳಿಯವರಿಂದ ಬರುವ ಧನ ಸಹಾಯ, ಸರಕಾರೀ ಗ್ರ್ಯಾಂಟು ಈ ತರದ ಸಾಹಿತ್ಯ ಪುಸ್ತಕಗಳ ಮಾರಾಟ ಮೊದಲಾದವುಗಳಿಂದ ಫಂಡು ಸಂಗ್ರಹಿಸಿ ಈ ಸಂಸ್ಥೆಯನ್ನು ನಡೆ ಯಿಸಲು ಶಕ್ಯವಿದೆ. ಆದರೆ ಪ್ರಾರಂಭದಲ್ಲಿ ಅವಶ್ಯಬೀಳುವ ಸಲಕರಣೆ ಆಫೀಸು ಮುಂತಾದವುಗಳ ವೆಚ್ಚವನ್ನು ಸರಕಾರವು ನೋಡಿಕೊಳ್ಳುವದು ವಿಹಿತ. ಮುಂದೆ ಖರ್ಚು ಉತ್ಪನ್ನಗಳ ಮೇಲಿಂದ ಸರಕಾರವು ಯೋಗ್ಯ ಗ್ರ್ಯಾಂಟನ್ನು ಕೊಡುವದು ಯೋಗ್ಯವು. ಅಂದರೆ ಇಂಥ ಉಪಯುಕ್ತ ಸಂಸ್ಥೆಗಳು ಚಿರಸ್ಥಾಯಿಯಾಗಿ ಬಾಳುವವು. ಇಂಥ ಸಮಾಜದ ಶಿಕ್ಷಣದ ಯೋಜನೆಯನ್ನು ಬೇಕಾದ ಒಂದು ಜಿಲ್ಹೆಯಲ್ಲಿ ಮೊದಲು ಪ್ರಾಯೋಗಿಕ ರೂಪದಿಂದ ೧ ವರ್ಷ ನೋಡಿ ಅವು ಒಳ್ಳೆಯ ಶಕ್ಯವಾಗಿ ಕಾರ್ಯ ಮಾಡುತ್ತದೆಂದು ಕಂಡು ಬಂದಲ್ಲಿ ಸರಕಾರವೂ ಸಾರ್ವಜನಿಕರೂ ಬೇರೆ ಬೇರೆ ಜಿಲ್ಹೆಗಳಲ್ಲಿ ಇಂಥ ಸಂಸ್ಥೆಗಳನ್ನು ಸ್ಥಾಪಿಸಿ ಸಮಾಜ ಶಿಕ್ಷಣ ವನ್ನು ಪ್ರಸಾರ ಮಾಡಬೇಕು.

---

# ಮಾತೃಭಕ್ತಿ.

(ಲೇಃ- ಶ್ರೀ. ಮಲ್ಲಪ್ಪ ಜನತಾಜ್ಞಾನ ಪ್ರಚಾರಕ, ಹಲಗೂರು)

---

ಶುಭವನ್ನು ಬಯಸುವವರು ಸಕಲ ಸ್ತ್ರೀಯರನ್ನೂ ಮನ್ನಣೆ ಮಾಡಲಿ. ಎಲ್ಲಿ ಸ್ತ್ರೀಯರು ಗೌರವಿಸಲ್ಪಡುವರೋ ಅಲ್ಲಿ ಅಮರರು ಸಂತೃಪ್ತಿಯಿಂದಿರುವರು. ಹೆಂಗಸರಿಗೆ ಎಲ್ಲಿ ಗೌರವವಿಲ್ಲವೋ ಅಲ್ಲಿನ ಪೂಜೆ ಪುನಸ್ಕಾರಗಳು ಫಲವನ್ನು ಕೊಡುವದಿಲ್ಲ ಎಂದು ಮನುವು ಹೇಳಿದ್ದಾನೆ. ಇದರಿಂದ ಸ್ತ್ರೀಯರ ಸ್ಥಾನಮಾನವು ಎಷ್ಟಿದೆಂಬುದು ಅರಿವಾಗುವುದು. ಸ್ತ್ರೀಯು ಸಮಾಜದ ಅರ್ಧ ಶರೀರವು. ಆದಿಶಕ್ತಿಯು ತನುಮನವು ಭಕ್ತಳವಾಗಿದೆ. ಈ ಶಕ್ತಿಯು ಜಗಜ್ಜನನಿಯು. ಈ ಜನನಿಯ ಪೋಷಣೆಯಿಂದ ಜಗತ್ತಿನ ಚರಾಚರಗಳು ಜೀವಿಸುತ್ತಿವೆ. ಜನನಿ ಅರ್ಥಾತ್ ತಾಯಿಯ ಆಶಿಷವೇ ನಮ್ಮ ಕಾರ್ಯ ಜಯಕ್ಕೆ ಮೂಲವು. ನಮ್ಮ ನಮ್ಮ ತಾಯಂದಿರು ನಮಗೆ ಹೆಚ್ಚು. ಈಕೆಯು ಮಕ್ಕಳಿಗಾಗಿ ಪಡಬಾರದ ಕಷ್ಟಗಳನ್ನು ಅನುಭವಿಸುತ್ತಾಳೆ. ಈಕೆಯ ಸುಖವು ಕೊಡುವಷ್ಟು ತಂಪು ಸೊಂಪನ್ನು ಮತ್ತಿನ್ನಾವುದೂ ಕೊಡುವದಿಲ್ಲ. ನೊಂದ ಬೆಂದ ಎದೆಗೆ ತಂಪಾದ ಪಾನೀಯವು ತಾಯಿಯ ಹಿತಮಿತ ವಚನ ಮತ್ತು ಉಪಚಾರವು. ಸಮಾಜಕ್ಕೆ ಬೇಕಾದ ಸೇವಕರನ್ನೂ, ಒಡೆಯರನ್ನೂ ಸಿದ್ಧಪಡಿಸುವ ಮಹಾವ್ಯಕ್ತಿಯು ತಾಯಿಯು. ಅವಳ ಸಹನಾಬಲದಿಂದ ನಮ್ಮ ನಮ್ಮ ಕಾಯದ ಸಂಪೂರ್ಣ ಬೆಳವಣಿಗೆಯು ಸ್ಫುಟಗೊಳ್ಳುವದು. ಅಮರೀಯ ವ್ಯಕ್ತಿಯನ್ನಾಗಿ, ದೇವೀ ಸಂಪದ್ ಪುರುಷನನ್ನಾಗಿ ಮಾಡುವಳು ತಾಯಿಯು. ಬಾಳಿನ ದುಗುಡದುಮ್ಮಾನಗಳು ಆಕೆಯ ಸ್ಪರ್ಶ ಮಾತ್ರದಿಂದ ಚದರಿ ಓಡಿ ಹೋಗುವುದು. ಬಾಳಿನ ಸುಖ ಸಂತೋಷಗಳು ಆಕೆಯ ಮಂದಹಾಸ ಬಿರಿತದಿಂದ ಹಿರಿದಾಗಿ ಅರಳುವುದು. ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ. ತಾಯಿಯ ವಾಕ್ಯವೇ ವೇದ ವಾಕ್ಯವು; ತಾಯಿಯ ಸೇವೆಯೇ ದೇವಿಯ ಸೇವೆಯು ಎಂಬ ಗಾದೆಗಳನ್ನು ನೋಡಿದರೆ ತಾಯಿಯ ಮಹತ್ತು ಗೋಚರವಾಗದೇದು. ಈಕೆಯಲ್ಲಿ ಮಾನವ ಬಾಳಿನ ಆದರ್ಶ

ಮಾತ್ರ ಸಂಸ್ಕಾರಗಳು ದೃಢಮೂಲವಾಗಿರುತ್ತವೆ. ಜಗತ್ತಿನ ರಂಗ ಭೂಮಿಯಲ್ಲಿ ಮೆರೆಯುತ್ತಿರುವ ಪ್ರತಿಯೊಬ್ಬನೂ ತನ್ನ ತಾಯಿ ತೊಡೆಯ ಮಗುವಾಗಿರುತ್ತಾನೆ. ಅತಏವ ನಾಡಿಗೆ ಒಡೆಯನಾದರೂ, ಪ್ರಜೆಗಳಿಗೆ ಅರಸನಾದರೂ ತಾಯಿಗೆ ಮಾತ್ರ ಮಗುವು ಎಂಬ ನಾಣ್ಣುಡಿಯು ಜನಿಸಿದೆ. ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ ಎಂದು ಮಾತೃಭೂಮಿಯಲ್ಲಿ ಮಾತೆಯ ಭಾವವನ್ನು ಮೂಡಿಸಿ ಅದನ್ನು ನಾಕಕ್ಕಿಂತಲೂ ಮಿಗಿಲಾಗಿರಿಸಿರುವುದರ ಶ್ರೇಷ್ಠತೆಯೇ ಸಾಕು. ಅಬೋಧ ಶಿಶುವಿನ ಸೌಕುಮಾರ್ಯ ಆತ್ಮವನ್ನು ಸಹೃದಯತೆಯಿಂದ ಸಂವರ್ಧಿಸಿ ವಿಶಾಲ ದೃಷ್ಟಿಯಲ್ಲಿ ಸ್ವಾವಲಂಬನ ಜೀವನ ಸೂತ್ರಗಳನ್ನು ವಹಿಸಲು ಶಕ್ತನನ್ನಾಗಿ ಮಾಡುವ ಮಾತೆಯ ಪ್ರತಿಬಿಂಬವು ಮಗುವಿನ ಮನೋಮುಕುರದಲ್ಲಿ ಉದಯಿಸದೇ ಇದ್ದೀತೇ ? ಸಹನೆಯಿಂದ ಆ ಮಗುವಿನ ವ್ಯಕ್ತಿತ್ವವನ್ನು ರೂಪುಗೊಳಿಸಿ ಆವರ್ಶದ ರಕ್ಷಾಮಣಿಯನ್ನಿಟ್ಟು ಆಯುಷ್ಯದ ಕೋರಾಟಕ್ಕಾಗಿ ಬಾಹ್ಯ ಜಗತ್ತಿಗೆ ಕಳುಹಿಸಿ ಉದ್ಯೋಗಕೆ ಉಜ್ಜುಗಿಸುವ ಮಹಾವ್ಯಕ್ತಿ ಮಾತೆಯು.

ಹೊಂಗೆಯ ಮರದ ನೆರಳು ತಾಯಿಯ ಮಡಿಲು ಎಂಬ ಗಾದೆಯು ತಾಯಿಯ ಸೌಭಾಗ್ಯದ ಸೊಂಪಿನ ಸೊಬಗನ್ನು ತೋರಿಸುವುದು. ರಾಜ್ಯವನ್ನಾಳುವ ತಂದೆಯಿಲ್ಲದಿದ್ದರೂ ಕೊಟ್ಟಣ ಕುಟ್ಟುವ ತಾಯಿ ಇರಬೇಕು ಎಂಬ ಅಂಶವು ತಾಯಿಯ ಪ್ರಭೆಯನ್ನು ಪ್ರಸರಿಸುವುದು. ತನಗೆ ಎಂತಹ ಕಷ್ಟನಷ್ಟಗಳು ಒದಗಿದರೂ, ತೊಡದು ತೊಡಕಗಳು ಆವರಿಸಿಕೊಂಡು ಬಂದರೂ ತಾನು ಮಾತ್ರ ತನ್ನ ಮಕ್ಕಳಿಗೆ ತನ್ನ ಕೈಯುಲ್ಲಾಗುವದಕ್ಕಿಂತಲೂ ಮಿಗಿಲಾಗಿ ಸುಖವನ್ನು ನೀಡಲು ಬಯಸುವಳು. ಅನ್ನವಿಟ್ಟು, ಬಟ್ಟೆದೊಡಿಸಿ, ನೈತೊಳೆದು ಶೂಚಿರ್ಭೂತವಾಗಿರಿಸಿ ದಪ್ಪದಪ್ಪನಾಗಿ ಬೆಳೆಸಿದ ತಾಯಿಗೆ ಸಕಲ ಜೀವಿಗಳೂ ಋಣಿಗಳೇ ಸರಿಯು. ಭಗವಂತನಿಂದ ಅನುಗ್ರಹಿಸಲ್ಪಟ್ಟಿರುವ ಪ್ರಥಮೋಪಕಾರವನ್ನು ಕೃತಜ್ಞತೆಯ ಮೂಲಕ ಸಾರ್ಥಕಗೊಳಿಸಿ ಪುನೀತರಾಗಬೇಕಾದರೆ ನಾವು ತಾಯಿ ಭಕ್ತಿ ಕಡೆಗೆ ಗಮನವೀಯಬೇಕು. ಪಾರಮಾರ್ಥಿಕ ವಿದ್ಯೆಯನ್ನು ಕಲಿಸುವ ಗುರು ಲೌಕಿಕ ವಿದ್ಯೆಯನ್ನು ಕಲಿಸುವ ಗುರುವಿಗಿಂತ ಹತ್ತರಷ್ಟು ಪೂಜ್ಯನು. ತಂದೆಯು ಗುರುವಿಂತ

ನೂರರಷ್ಟು ಪೂಜ್ಯನು. ತಾಯಿ ತಂದೆಗಿಂತಲೂ ಸಾವಿರ ಪಾಲು ಪೂಜ್ಯಳು ಎಂದು ಮನು ಮಹಾರಾಜನು ಹೇಳಿದ್ದಾನೆ. ತಾಯಿಯ ಸೇವೆ ಮತ್ತು ಉಪಕಾರದಿಂದ ಆಕೆಯ ಪ್ರಭಾವವು ಸರ್ವರಿಗೂ ವಿದಿತವಾಗುವುದು ಮಕ್ಕಳು ತಮ್ಮ ತಾಯಂದಿರಿಗೆ ಎಷ್ಟೋ ವಿಧದ ತೊಂದರೆಗಳನ್ನೂ, ಅಸಹಕರವಾದ ಅನುಷ್ಠಾನಗಳನ್ನು ಮಾಡಿದರೂ ಆ ತಾಯಂದಿರು ಮಾತ್ರ ಹೇಸಿಗೆ ಪಡವೆ, ಬೇಸರಪಡದೆ ಅವರನ್ನು ದಯೆಯಿಂದ ಕಂಡು ಅವರ ಹಿತವನ್ನು ಬಯಸುವರು. ನಾವು ಹಲವಾರು ಬಗೆಯ ಪಾಪ ಕೃತ್ಯಗಳನ್ನು ಮಾಡಿದರೂ ಜನ್ಮಭೂಮಿಯು ಅದಕ್ಕೆ ಕೋಪಿಸಿಗೊಳ್ಳದೆ ಶಾಂತ ಭಾವದಿಂದ, ಸಹನೆಯಿಂದ ಸಹಿಸಿಕೊಂಡು ತನ್ನ ಪುತ್ರ-ಪುತ್ರಿಯರ ಅಭ್ಯುದಯಾಭಿಲಾಷಿಣಿಯಾಗಿ ಇರುವಳು. ಒಟ್ಟಿನಲ್ಲಿ ನಮ್ಮ ಸಕಲ ಅಪರಾಧಗಳನ್ನು ಕ್ಷಮಿಸಿ ನಮಗೆ ಸುಖವನ್ನು ನೀಡುವ ಪದಾರ್ಥಗಳು ನಮ್ಮ ಹೆತ್ತ ತಾಯಿ ಮತ್ತು ನಮ್ಮ ಜನ್ಮಭೂಮಿಶ್ಚಸ್ವರ್ಗಾದಪಿ ಗರೀಯಸೀ ಎಂಬ ಸಿದ್ಧಾಂತ ನೀತಿಯು ಉದ್ಭವವಾಗಿರುವುದು.

ತಾಯಿಯನ್ನು ದೇವತೆಯಂತೆ ಭಾವಿಸು ಎಂದು ಉಪನಿಷತ್ತು ಉಪದೇಶಿಸುವುದು. ತಾಯಿಯನ್ನು ದೇವತೆಗಳನ್ನು ನೋಡುವ ಹಾಗೆ ಪೂಜ್ಯತೆಯಿಂದ ನೋಡಬೇಕು ಎಂಬುದೇ ಗೂಢಾರ್ಥವು. ಸಹಜವಾಗಿ ಪೂಜ್ಯತೆಯು ಉದ್ಭವಿಸುವುದು ತಾಯಿಗಾಗಿಯೇ ಆಗಬೇಕು. ಮಾತೆಯು ಸ್ತ್ರೀ ವ್ಯಕ್ತಿಯು ಮತ್ತು ಜನ್ಮದಾತಳು. ತಾಯಿಯ ವಾತ್ಸಲ್ಯ ಗುಣವು ಸಹಜವಾಗಿ ಬಂದ ಅಂಶವಾಗಿರುತ್ತದೆ. ತಾಯಿಯು ಕೀರ್ತಿ, ಲಾಭ, ಅರ್ಚನೆ, ಆರಾಧನಾದಿ ಪ್ರತ್ಯುಪಕಾರಾಪೇಕ್ಷೆಯೂ, ಆತ್ಮವಂಚನೆಯೂ ಇಲ್ಲದೆ ತನ್ನ ಸಂಪೂರ್ಣ ಮನಸ್ಸಿನಿಂದ ತನ್ನ ಮಕ್ಕಳನ್ನು ಪ್ರೀತಿಸುತ್ತ ಬರುವಳು. ಮಕ್ಕಳು ಎಷ್ಟೇ ಅವಿವೇಕಿಗಳಾಗಿದ್ದರೂ, ಅವಿಧೇಯರಾಗಿದ್ದರೂ, ಕೆಟ್ಟವರಾಗಿದ್ದರೂ, ಅವರು ತನಗೆ ಎಷ್ಟೇ ಹಿಂಸೆಯನ್ನು ಕೊಟ್ಟಿದ್ದರೂ ಆಕೆಯ ಪ್ರೀತಿಯು ಮಾತ್ರ ಒಂದೇ ಸಮನಾಗಿರುವುದು. ಈ ವಿಷಯದಲ್ಲಿ ಎಲ್ಲ ದೇವರಿಗಿಂತಲೂ ಶ್ರೇಷ್ಠಳಾಗಿರುವಳು. ತಾಯಿಯಲ್ಲಿ ಪವಿತ್ರ ಭಾವವೂ, ಪ್ರೇಮ ಭಾವವೂ ಸಹಜತೆಯಿಂದ ಮತ್ತು ಶಾಶ್ವತ ಜೀವಿತದಿಂದ ಜನಿಸಬಲ್ಲವು. ತನ್ನ ಮಗನ

ಒರಟುತನಕ್ಕೆ ಕೋಮಲತೆಯನ್ನೂ, ಕೋಪಕ್ಕೆ ಸಹನೆಯನ್ನೂ, ಉಗ್ರತೆಗೆ ಶಾಂತಿಯನ್ನೂ, ಅವಸರಕ್ಕೆ ನಿಧಾನವನ್ನೂ ತೋರಿಸಿ ಅದನ್ನು ನೀಡಿದ ಮಹಾದಾತೆಯು ಹೆತ್ತು ಹೊತ್ತು ಕುತ್ತ ಪರಿಹರಿಸಿದ ತಾಯಿಯು.

ಪೂರ್ವದಲ್ಲಿ ತಾಯಿ ಭಕ್ತಿಯ ನಿಜತ್ವವನ್ನು ತಿಳಿದಿದ್ದ ಹಲವಾರು ಮಹನೀಯರನ್ನು ನೋಡೋಣ. ವೇದಾಂತಗಳ ಜನಕನಾದ ಕಪಿಲ ಮಹರ್ಷಿಯನ್ನು ವಿದ್ಯೆಯೆಂಬ ಒರೆಗಲ್ಲಿಗೆ ಹಚ್ಚಿ ತೀಕ್ಷ್ಣವನ್ನಾಗಿ ಮಾಡಿದ ಮಹಾ ತಾಯಿ ದೇವಹೂತಿಯು. ಆರ್ಯಾವರ್ತದಲ್ಲಿ ಮೂರು ಸಾವಿರ ವರ್ಷಗಳ ಹಿಂದೆ ದೇವಹೂತಿಯು ತನ್ನ ಮಗನಾದ ಕಪಿಲನಿಗೆ ಹಾಕಿ ಕೊಟ್ಟಿದ್ದ ಶಾಶ್ವತ ತಳಹದಿಯ ಮೇಲೆ ಜಗತ್ತಿನ ವೇದಾಂತವು ಇಂದು ಕಟ್ಟಲ್ಪಟ್ಟಿದೆ. ಬಲರಾಮ ಕೃಷ್ಣರಿಗೆ ಭೂಪ್ರದಕ್ಷಣೆಯ ಪಂಥವು ಬಂದಿತು. ಬಲರಾಮನು ಜಗತ್ತಿನ ನದೀನದಗಳನ್ನೂ, ಸಮುದ್ರ ಸರೋವರಗಳನ್ನೂ, ಪಟ್ಟಣ ಪಳ್ಳಿಗಳನ್ನೂ ಸಂಚರಿಸಿಕೊಂಡು ಹಲವಾರು ವರ್ಷಗಳ ಮೇಲೆ ಬಂದನು. ಕೃಷ್ಣನು ಮಾತ್ರ ತನ್ನ ತಾಯಿಯ ಸುತ್ತಲೂ ಪ್ರದಕ್ಷಣೆ ಬಂದು ತೆಪ್ಪನೆ ಮನೆಯಲ್ಲಿದ್ದನು. ಅಣ್ಣನು ಬಂದ ಮೇಲೆ ತಾನು ಗೆದ್ದೆನೆಂದು ಹೇಳಿದನು. ಕೊನೆಗೆ ಉಭಯತರಿಗೂ ಚರ್ಚೆ ನಡೆದು ಮಹರ್ಷಿಗಳಲ್ಲಿಗೆ ಬರಲು, ಅಲ್ಲಿ "ಸಾವಿರ ಬಾರಿ ಭೂಪ್ರದಕ್ಷಣೆಗಿಂತ ಒಂದು ಬಾರಿ ತಾಯಿಯನ್ನು ಭಕ್ತಿಯಿಂದ ಪ್ರದಕ್ಷಣೆ ಬಂದು ನಮಸ್ಕರಿಸುವುದು ಕೋಟ್ಯಾಂಶ ಫಲಾಧಿಕವು" ಎಂದು ತೀರ್ಮಾನವಾಯಿತು. ಭೀಷ್ಮಾಚಾರ್ಯರು ತಮ್ಮ ತಾಯಿಗೆ ಮಾತು ಕೊಟ್ಟಂತೆ ಆಜೀವ ಪರ್ಯಂತ ಬ್ರಹ್ಮಚಾರಿಯಾಗಿದ್ದುದರಿಂದಲೇ ಆತನ ನಾಮವು ಚಿರಸ್ಮರಣೀಯವಾಗಿದೆ. ಕರ್ಣನು ತನ್ನ ತಾಯಿಗೆ ಮಾತು ಕೊಟ್ಟಿದ್ದಂತೆಯೇ ತನ್ನ ಶತ್ರು ನಿಗ್ರಹಕ್ಕಾಗಿ ಬಲುಸಹಾಯವಾಗಿದ್ದ ಸರ್ಪಾಸ್ತ್ರವನ್ನು ಹಿಂದೆ ದೂಡಿ ಆತ್ಮ ಬಲಿದಾನ ಮಾಡಿದ ದಾನಶೂರ ಕರ್ಣನೆಂದು ಕೀರ್ತಿವಂತನಾದನು. ಪಾಂಡವರು ಎಂತಹ ಸಂದಿಗ್ಧ ಸಮಯದಲ್ಲಿಯೂ ತಾಯಿಯ ಮಾತನ್ನು ಮೀರುತ್ತಿರಲಿಲ್ಲ. ಶ್ರೀ. ರಾಮಚಂದ್ರನು ಮಾತೃವಚನ ಪರಿಪಾಲನೆಗಾಗಿ ಚಕ್ರವರ್ತಿ ಪದವಿಯನ್ನು ಬಿಟ್ಟು ಅರಣ್ಯದಲ್ಲಿ ಅಲೆಲು ಬಳಲಿಕೆಯಿಂದ ಸುತ್ತಿ ಸುಳಿದಾಡಿ ತೊಡರು ತೊಡಕುಗಳಿಗೆ ಸಿಕ್ಕಿ ಧ್ಯೇಯ ಸಾಧನೆ ಮಾಡಿ, ಯಶೋದೇಹಿಯಾದನು.

ಪುರಾಣ ವ್ಯಕ್ತಿಗಳ ಮಾತಾಯಿತು. ಇನ್ನು ಚಾರಿತ್ರಿಕ ವ್ಯಕ್ತಿಗಳನ್ನು ನೋಡೋಣ. ಮತಬೋಧಕರೂ, ಸುಧಾರಕರೂ ಆದ ಮಹಾತ್ಮ ಶಂಕರಾಚಾರ್ಯರಿಗೆ ಜನ್ಮವಿತ್ತ ಪೂಜ್ಯ ಮಹಿಳೆಯು ವಿಶಿಷ್ಟೆಯು. ಶಂಕರಾಚಾರ್ಯರಿಗೆ ಬಾಲ್ಯದಲ್ಲಿಯೇ ತಂದೆಯ ವಿಯೋಗ. ಹದಿನಾರು ವರ್ಷಕ್ಕೆ ಹದಿನಾರು ಕೃತಿಗಳ ಮೇಲೆ ಉದಾತ್ತ ವ್ಯಾಖ್ಯಾನವನ್ನು ಬರೆದ ಪ್ರೌಢವಂತ ಶಂಕರಾಚಾರ್ಯರಿಗೆ ವಿದ್ಯಾದಾನ ಮಾಡುವಳು ವಿಶಿಷ್ಟೆಯು. ಹಿಂದೂ ಮತೋದ್ಧಾರಕನಾದ ಶಿವಾಜಿಯ ಕಾರ್ಯ ಜಯ ಕರ್ಮ ಪ್ರತಾಪವು ತಾಯಿಯ ಶಿಕ್ಷಣದ ತಳಹದಿಯ ಮೇಲೆ ನೆಲಸಿತು. ಭಾರತಮಾತೆಯ ಸುಪುತ್ರರಾದ ಲೋಕಮಾನ್ಯ ತಿಲಕ್, ಲಾಲಾ ಲಜಪತರಾಯ ಇವರ ಕೀರ್ತಿ ಕಿರೀಟದ ಹೊಂಬೆಳಗಿಗೆ ಅವರ ತಾಯಿಂದಿರ ಚಿತ್ರ ಗೆಲಸವು ಬಹು ಚಾಕಚಕ್ಯತೆಯಿಂದ ಹಿಡಿದಿತ್ತು. ಇವರ ಅನಾದೃಶ್ಯವಾದ ಮಾತೃಭಕ್ತಿಯೂ, ತದಂಗವಾದ ದೇಶಭಕ್ತಿಯೂ ಸರ್ವರಿಗೂ ವ್ಯಕ್ತವಾಗುವುದು. ಕೀರ್ತಿಶೇಷರಾದ ಶ್ರೀ. ನಾಲ್ವಡಿ ಕೃಷ್ಣ ರಾಜರ ಮಾತೃಭಕ್ತಿಯು ಜಗದ್ವಿಖ್ಯಾತವಾಗಿದೆ. ಮಹಾತ್ಮ ಗಾಂಧಿ, ಸುಭಾಷಚಂದ್ರ ಬೋಸ್, ಪಂಡಿತ ನೆಹರು ಇವರ ಜೀವನ ಚರಿತ್ರೆಗಳನ್ನು ಓದಿದರೆ ಇವರ ತಾಯಿ ಭಕ್ತಿಯು ಸರ್ವರಿಗೂ ವ್ಯಕ್ತವಾಗದೆ ಇರದು. ಅಮೇರಿಕ ಸಂಯುಕ್ತ ಸಂಸ್ಥಾನದ ಅಧ್ಯಕ್ಷನಾಗಿದ್ದ ಜೇಮ್ಸ್ ಏಬ್ರಾಮ್‌ಗಾರ ಫೀಲ್ಡನ್ ತಾಯಿ ಭಕ್ತಿಯು ಎಂತಹುದೆಂಬುದನ್ನು ಹೇಳತೀರದು. ಬಡ ಗುಡಿಸಿಲಿನಲ್ಲಿ ಕೊಟ್ಟ ಶಿಕ್ಷಣವು ಈತನ ಅಧ್ಯಕ್ಷ ಪದವಿಗೆ ಮೂಲವು. ಇಂದು ಈತನ ಅಮರ ಕೀರ್ತಿಯು ಅಳಿಯದೆ ಉಳಿದು ಹೊಳೆಯುತ್ತಿದೆ. ಫ್ರಾನ್ಸಿನ ಚಕ್ರವರ್ತಿ ನೆಪೋಲಿಯನ್ ಬೋನ ಪಾರ್ಟನ ಮಾತೃಭಕ್ತಿಯು ಆತನ ಜೀವಿತ ಚರಿತ್ರೆಯು ಮುಂದೆ ಸಾಗಿ ಸಲು ಜೀವರಸವು. ಆತನಿಗೆ ತನ್ನ ತಾಯಿಯ ಶಿಕ್ಷಣ ಪ್ರಭಾವವು ಚೆನ್ನಾಗಿತ್ತು. ಗ್ರೀಕ ಚಕ್ರವರ್ತಿಯಾದ ಅಲೆಕ್ಸಾಂಡರನು ತನ್ನ ತಾಯಿಯ ಉಪಕಾರವನ್ನು ನೆನಪಿನಲ್ಲಿಟ್ಟುಕೊಂಡು ಆಕೆಯ ಮಾತನ್ನು ಮೀರದೆ, ಅದರಂತೆಯೇ ನಡೆಯುತ್ತಿದ್ದನು. ಮಹಾಶೂರನೂ, ಅಜೇಯನೂ ಆಗಿದ್ದ ಸಾರ್ವಭೌಮನು ನಿರಂಕುಶ ಪ್ರಭುತ್ವದಿಂದ ಇಡೀ ಜಗತ್ತನ್ನೇ ತನ್ನ ರಾಜ್ಯವನ್ನಾಗಿ ಮಾಡಿಕೊಳ್ಳಬೇಕೆಂದು ಉದ್ದೇಶಿಸಿದ್ದ ಸಿಕಂದರನು ತನ್ನ ತಾಯಿಗೆ ಹೆದರಿ ವಿಧೇಯನಾಗಿದ್ದನು. ಜಗತ್ತೇ ಚಕ್ರವರ್ತಿಗೆ

ಕಾನ್‌ಸ್ಟೆಂಟೈನ್, ಚಕ್ರವರ್ತಿಯು ತಾಯಿಗೆ ಅಡಿಯಾಳಾಗಿದ್ದನೆಂಬುದು ಘನತೆಯೇ ಹೊರತು ಹೇಡಿತನವಲ್ಲವು. ಏಳನೇ ಎಡ್ವರ್ಡರ ತಾಯಿ ಭಕ್ತಿಯು ಜಗತ್ತಿಗೆ ಅಸಾದೃಶ್ಯ ಆದರ್ಶವಾಗಿದೆ ಅವರು ತಮ್ಮ ಪಾಲಿಗೆ ಬಂದ ಆಯುಷ್ಯವನ್ನು ಮಾತೃ ಸೇವೆಯಲ್ಲಿಯೇ ಕಳೆದರು. ಸೇಂಟ್ ಆಗಸ್ಟೈನ್ ಪಾಪರಹಿತನಾಗಿ ಇರುವಂತೆ ಮಾಡಿದ್ದು ಆತನ ತಾಯಿಯ ಪ್ರೀತಿ, ಹರ್ಷ, ಸಹನೆ, ಶಾಂತಿ, ಕ್ರಿಯಾಸಕ್ತಿ ಸೌಖ್ಯಾದಿಗಳನ್ನು ಉಣಿಸಿದ್ದರಿಂದಲೇ ಜಗದ್ವಿಖ್ಯಾತಕವಿಯಾಗಿ ಮೆರೆದನು. ನನ್ನ ತಾಯಿಯ ಮುತ್ತೊಂದು ನನ್ನನ್ನು ಓರ್ವ ರಂಗು ಕಲೆಗಾರ— Painter- ನನ್ನಾಗಿ ಮಾಡಿತು ಎಂದು ಬೆಂಜಾಮಿನ್ ವೆಸ್ಟನು ಹೇಳಿರುವದನ್ನು ನೋಡಿದರೆ ತಾಯಿಯ ಮಾಧುರ್ಯವು ಅರಿವಾಗುವುದು.

ಒಂಬತ್ತು ತಿಂಗಳ ಕಾಲ ಹಗಲಿರಳೂ ತನ್ನ ಗರ್ಭದಲ್ಲಿ ಭಾರವನ್ನು ಹೊತ್ತುಕೊಂಡು ಸಹಿಸಲು ಅಸಾಧ್ಯವಾದ ಪ್ರಸವವೇದನೆಯನ್ನು ಸಹಿಸಿಕೊಂಡು ಅಣುವನ್ನು ತನುವನ್ನಾಗಿ ಮಾಡಿದ ಮಹಾತಾಯಿಯ ಪೂಜ್ಯ ಪಟ್ಟದ ಗದ್ದುಗೆಯ ತಡಿಯಲ್ಲಿ ಕುಳಿತು ಸೇವೆ ಮಾಡಿ ಪುನೀತರಾಗುವದು ಮಾನವನ ಕರ್ತವ್ಯವಲ್ಲವೇ? ಗರ್ಭಶಿಶುವು ಭೂಪತನವಾಗುವುದರೊಳಗಾಗಿ ಸ್ತನ್ಯವನ್ನು ಸಿದ್ಧಪಡಿಸಿ ತನ ಅಪಾರವಾದ ದಯಾಪೂರಿತಮಹಿಮೆಯನ್ನು ವ್ಯಕ್ತಪಡಿಸಿರುವ ಭಗವಂತನು ತಾಯಿಯಲ್ಲಿ ಎಂತಹ ಉತ್ಕೃಷ್ಟತೆಯನ್ನು ಸ್ಥಾಪಿಸಿರುವನು. ಕರುಣಾಮಯನಾದ ಭಗವಂತನು ತನ್ನ ಮಹಿಮಾಪ್ರಕಾರಕ್ಕೆ ಉತ್ಕೃಷ್ಟವನ್ನೇ ನಿರೀಕ್ಷಿಸುವನು ಎಂಬುದಕ್ಕೆ ತಾಯಿಗಿಂತ ಬೇರೆ ಸಾಕ್ಷಿ ಬೇಕಾಗಿಲ್ಲವು. ತಾಯಿಯ ಘನತೆ ವೇದದಲ್ಲ, ಪುರಾಣದಲ್ಲಿ, ಇತಿಹಾಸದಲ್ಲಿ, ಗೀತೆಯಲ್ಲಿ ಬಹು ಶ್ರುತವಾಗಿದೆ; ತಾಯಿಯ ಶ್ರಮ ಇತಿಹಾಸಗಳಲ್ಲಿ ವರ್ಣಿತವಾಗಿದೆ. ನಮ್ಮ ನಮ್ಮ ಸಮಾಜ, ನಮ್ಮ ನಮ್ಮ ಮನೆಗಳಲ್ಲಿ ತಾಯಿಯ ಶ್ರಮವನ್ನು ಕೇಳುತ್ತಲಿದೆವೆ, ನೋಡುತ್ತಲಿದೇವೆ. ಅದರ ಪ್ರತಿಫಲ ಭಕ್ತಿಯ ಪ್ರದರ್ಶನ ನಮ್ಮಿಂದ ಆಕೆಯ ಪಾದದ ತಡಿಯಲ್ಲಿ ತ್ರಿಕರಣ ಪೂರ್ವಕವಾಗಿ ಆಗಲೇಬೇಕು. ಅತ ಏವ ತಾಯಿ ಭಕ್ತಿಯು ಪ್ರತಿಯೊಬ್ಬರ ಮನೋಮಂದಿರದಲ್ಲಿ ಒಡಮೂಡಿ, ದಿವ್ಯವಾಗಿ ಪ್ರಕಾಶಿಸಿ ಕಾರ್ಯಕ್ಕೆ ಅನುವಾಗಲಿ.

---

# ವೇದಾಂತವೂ ವೀರಶೈವ ಸಿದ್ಧಾಂತವೂ.

(ಲೇಖಕರು— ವೇ॥ ರುದ್ರಮುನಿ ಶರ್ಮಾ ವೀರಭಿಕ್ಷಾವೃತ್ತಿಮಠ ಹುಬ್ಬಳ್ಳಿ)

---

ನಮ್ಮ ಭರತಖಂಡದಲ್ಲಿ ಅನೇಕ ಪ್ರಕಾರಗಳಾದ ಧರ್ಮಗಳಿರುತ್ತವೆ. ಅವುಗಳಲ್ಲಿ ವೀರಶೈವ ಧರ್ಮವೂ ಒಂದಾಗಿದೆ. ಲೋಕದಲ್ಲಿ ಮನುಷ್ಯನು ತನ್ನ ಆತ್ಮೋನ್ನತಿಗಾಗಿ ಯಾವುದಾದರೊಂದು ಧರ್ಮಕ್ಕೆ ಅಂಟಿಕೊಳ್ಳಲೇಬೇಕಾಗುತ್ತದೆ. ಯಾಕಂದರೆ, ಎಲ್ಲ ಧರ್ಮಗಳೂ ಆತ್ಮೋನ್ನತಿಯ ಹಿರಿದಾದ ಮೆಟ್ಟಲುಗಳನ್ನು ಮುಟ್ಟಿಸಲು ಸಾಧನೀಭೂತಗಳಾಗಿರುತ್ತವೆ. ಆದರೆ, ಈ ಸಮಯದಲ್ಲಿ ವಿಚಾರಿಸಲು. ಬಾಹ್ಯದಲ್ಲಿ ಎಲ್ಲ ಧರ್ಮಗಳೂ ಮಾನವರಿಗೆ ಪರಸ್ಪರವಾಗಿ ವಿರೋಧಿಗಳಾಗಿ ತೋರಹತ್ತಿವೆ. ಒಂದು ಧರ್ಮದವನು ಮತ್ತೊಂದು ಧರ್ಮ ಸೇರುವದಿಲ್ಲ. ಮತ್ತೊಂದು ಧರ್ಮವನ್ನು ಇನ್ನೊಂದು ಧರ್ಮವು ಸೇರುವದಿಲ್ಲ. ಧರ್ಮವೆಂದರೆ ಮಾತ್ಸರ್ಯದ ತವರ್ಮನೆಯಂತೆ ಆಗಿದೆ. ಇದೆಂಥ ವಿಷಾದವು ! ಒಂದು ಗ್ರಾಮಕ್ಕೆ ಹೋಗಲು ಅನೇಕ ಮಾರ್ಗಗಳುಂಟೆಂಬ ವಾಕ್ಯವನರಿಯದ್ದರಿಂದ ಈ ಪರಿಸ್ಥಿತಿಯಾಗಿ ಹೋಗಿದೆ.

ಈಗ ವೇದಾಂತಿಗಳು. ವೀರಶೈವರನ್ನು ಸೇರುವದಿಲ್ಲ. ವೀರಶೈವರು ವೇದಾಂತಿಗಳನ್ನು ಸೇರುವದಿಲ್ಲ. ಈ ಎರಡೂ ಮತಗಳ ತತ್ವಗಳನ್ನಾದರೂ ವಿಚಾರಿಸುವಾ.

ವೇದಾಂತದಲ್ಲಿ 'ಅಥಾತೋ ಬ್ರಹ್ಮಜಿಜ್ಞಾಸಾ' ಇಲ್ಲಿ ಅಥ ಶಬ್ದಕ್ಕೆ ಕೆಲವರು ಉಪನಯನ ಸಂಸ್ಕಾರಗಳಾದನಂತರ ಬ್ರಹ್ಮಜಿಜ್ಞಾಸವನ್ನು ಮಾಡತಕ್ಕದ್ದೆಂದು ಅರ್ಥ ಮಾಡುತ್ತಾರೆ. ವೇದಾಂತಿಗಳು ಮಾತ್ರ ಹಾಗೆ ಮಾಡುವದಿಲ್ಲ. 'ಅಥಾತೋ ಧರ್ಮಜಿಜ್ಞಾಸಾ' ಎಂಬಲ್ಲಿ ಮಾತ್ರ ಅಥ ಶಬ್ದಕ್ಕೆ ಉಪನಯನ ಸಂಸ್ಕಾರಗಳಾದನಂತರ ಧರ್ಮ ಜಿಜ್ಞಾಸವನ್ನು ಮಾಡತಕ್ಕದ್ದೆಂದು ಅರ್ಥ ಮಾಡಲು ಬರುತ್ತದೆ, ಇದು ಅಥಾತೋ ಬ್ರಹ್ಮಜಿಜ್ಞಾಸಾ ಎಂಬಲ್ಲಿ ಬರುವದಿಲ್ಲ. ಯಾಕಂದರೆ, ನಿರಾಕಾರ ನಿರ್ಗುಣ ಸ್ವರೂಪದಲ್ಲಿ ಉಪನಯನ ಸಂಸ್ಕಾರಗಳನ್ನು ಹೇಗೆ ಹೇಳಲಿಕ್ಕೆ ಬರುತ್ತದೆಯೋ ಹಾಗೆ ಸಂಸ್ಕಾರಗಳಿಂದ ಅತೀತನಾದ

ಪರಮಾತ್ಮನು ಸಂಸ್ಕಾರಕ್ಕೆ ಹೇಗೆ ಒಳಪಡುವನು ? ಆದರೆ ನಿರ್ವಿಕಾರ ವಸ್ತುವಿನನ್ನು ಗುರುತಿರಲು ಇಲ್ಲಿ ಅಥ ಶಬ್ದಕ್ಕೆ ಅಧಿಕಾರಿಯಾದ ನಂತರ ಬ್ರಹ್ಮಜಿಜ್ಞಾಸವನ್ನು ಮಾಡತಕ್ಕದ್ದೆಂದು ವೇದಾಂತಿಗಳ ಅಭಿಪ್ರಾಯವು.

ಅಧಿಕಾರಿಯೆಂದರೆ – ಇಹಲೋಕದಲ್ಲಿರುವ ಸ್ರಕ್ಚಂದನ ವನಿತಾದಿ ವಿಷಯ ಭೋಗಗಳನ್ನು ತೃಣೀಕರಿಸಿ ಸ್ವರ್ಗಲೋಕದಲ್ಲಿರುವ ಭೋಗಗಳನ್ನು ಅಪೇಕ್ಷಿಸದೆ ನಿತ್ಯ ನೈಮಿತ್ತಿಕ ಪ್ರಾಯಶ್ಚಿತ್ತಾದಿ ಕರ್ಮಗಳಲ್ಲಿ ನಿರತನಾಗಿ ಶಮ ದಮಾದಿ ಷಟ್‌ಸಂಪದ್ಯುಕ್ತನಾಗಿಯೂ ಶ್ರೋತ್ರಿಯ ಬ್ರಹ್ಮನಿಷ್ಠ ಗುರುಗಳನ್ನು ಹೊಂದಿ ಬ್ರಹ್ಮ ಜಿಜ್ಞಾಸವನ್ನು ಮಾಡಲು ಉದ್ಯುಕ್ತನಾಗುವವನೇ ಅಧಿಕಾರಿಯು. 'ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂಗುರು ಮುಪವಿಶೇತ್' ಎಂಬ ಶ್ರುತಿ ಪ್ರಮಾಣದಂತೆ ನಡೆದುಕೊಳ್ಳತಕ್ಕದ್ದು. ಹೀಗಿರುವಾಗ ಜಗತ್ತಿನಲ್ಲಿ ಕೆಲವು ವೇದಾಂತಿಗಳು 'ಅಹಂ ಬ್ರಹ್ಮಾಸ್ಮಿ, ಅಯಮಾತ್ಮಾ ಬ್ರಹ್ಮ' ಮುಂತಾದ ಮಾತುಗಳನ್ನು ಕೇಳಿಕೊಂಡು, ನಾನು ಬ್ರಹ್ಮನು, ನಾನು ಲೋಕದಲ್ಲಿ ಏನು ಮಾಡಿದರೇನು, ನನಗೆ ಯಾವ ಕರ್ಮದ ಸಂಬಂಧವಿಲ್ಲ, ಎಂಬು ಮುಂತಾದವುಗಳನ್ನು ಕೊಚ್ಚುತ್ತ ಮದ್ಯಪಾನ ಪರಸ್ತ್ರೀಗಮನ ಪರದ್ರವ್ಯಾಪಹರಣ ಇನ್ನೂ ಅನೇಕ ಕೃತಿಗಳನ್ನು ಮಾಡುತ್ತಾರೆ. ಇಂಥ ವೇದಾಂತಗಳನ್ನು ಯಾರೂ ನಂಬಕೂಡದು.

ಸಾಂಖ್ಯ, ಯೋಗ, ನ್ಯಾಯ, ಮೀಮಾಂಸ ಮುಂತಾದ ಮತಗಳಲ್ಲಿಯೂ 'ಯೋಗಶ್ಚಿತ್ತವೃತ್ತಿ ನಿರೋಧಃ' ಎಂದು ನಮ್ಮ ಮನವನ್ನು ಬಿಗಿಹಿಡಿಯುವ ವಿಷಯವಾಗಿ ಅನೇಕ ಪ್ರಕಾರ ಹೇಳುತ್ತಿರಲು, ಇಂಥ ದುರುಳ ವೇದಾಂತಿಗಳು ಜ್ಞಾನೇಂದ್ರಿಯಗಳು ಮಾಡುವ ಕರ್ತವ್ಯವನ್ನು ಜ್ಞಾನೇಂದ್ರಿಯಗಳು ಮಾಡುತ್ತವೆ, ಅಂದರೆ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಇವುಗಳಲ್ಲಿ ಕಣ್ಣು ರೂಪವನ್ನೇ ನೋಡಿ ಸಂತೋಷಪಡುತ್ತದೆ, ಕಿವಿ ಅನೇಕ ಶಬ್ದಗಳನ್ನು ಕೇಳಿ ಸಂತೋಷಪಡುತ್ತದೆ, ಚರ್ಮೇಂದ್ರಿಯವು ಸ್ಪರ್ಶಸುಖವನ್ನೇ ಅನುಭವಿಸುವದು, ಇವುಗಳಂತೆ ಕರ್ಮೇಂದ್ರಿಯಗಳಾದರೂ ಮಾಡುತ್ತವೆ. ಈ ಪ್ರಕಾರ ಹೇಳುತ್ತಾ ದುರ್ವಿಷಯಗಳಲ್ಲಿ ಲೋಲಾಡುತ್ತಾರಲ್ಲಾ ! ಇದೆಂಥ ತತ್ತ್ವೋಪ

ದೇಶವು !! ಆದರೆ ನಿಜವಾದ ವೇದಾಂತವನ್ನರಿತವರು ಮಾತ್ರ ಹೀಗೆ ಹೇಳುವದಿಲ್ಲ. ವೇದದಲ್ಲಿಯೂ ಕೂಡ ಈ ಎಲ್ಲ ದುಷ್ಕೃತಿಗಳನ್ನನುಲಕ್ಷಿಸಿ 'ಮರಣಂ ಬಿಂದು ಪಾತೇನ ಜೀವನಂ ಬಿಂದು ಧಾರಣಾತ್' ಎಂದು ನಮ್ಮಲ್ಲಿರುವ ವೀರ್ಯವನ್ನು ಧಾರಣ ಮಾಡುವದರಿಂದ ಅದೇ ನಿಜವಾದ ಜೀವನವೆಂತಲೂ ಅದನ್ನು ನಾಶ ಮಾಡಿಕೊಳ್ಳುವದೇ ಮರಣವೆಂತಲೂ ಹೀಗೆ ಉಪದೇಶ ಮಾಡುತ್ತಿರಲು ವೀರ್ಯವನ್ನೇ ನಾಶಮಾಡಿಕೊಂಡು ಅನೇಕ ಕಷ್ಟನಷ್ಟಗಳನ್ನನುಭವಿಸುವದು, ಇದು ಯಾವ ನೀತಿಯು? ಇದು ಯಾವ ಧರ್ಮವು? ಅಧರ್ಮವೇ ಸರಿ.

ಈ ಇಂದ್ರಿಯಗಳನ್ನು ಸ್ಥಿರ ಮಾಡಬೇಕಾದರೆ ಜ್ಞಾನೇಂದ್ರಿಯ ಕರ್ಮೇಂದ್ರಿಯ ಮನ ಇವುಗಳ ನಿಗ್ರಹವು ಪ್ರಥಮದಲ್ಲಿ ಬೇಕು. ಇವು ತಮ್ಮ ಕರ್ತವ್ಯಗಳನ್ನು ತಾವೇ ಮಾಡುತ್ತವೆಂದು ದುರುಳ ವೇದಾಂತಿಗಳ ಉಪದೇಶದಂತೆ ಸುಮ್ಮನೆ ಕುಳಿತರೆ ಆಗದು.

ಆದರೆ ಅಧಿಕಾರಿಯಾಗಲು ಇಚ್ಛಿಸುವವನು ಚಕ್ಷುರಾದಿಂದ್ರಿಯಗಳನ್ನು ಜಯಿಸಲು ಪ್ರಯತ್ನಿಸತಕ್ಕದ್ದು. ಆದಕ್ಕಾಗಿ ವೇದಾಂತ ಶಿರೋಮಣಿ ಶ್ರೀಮನ್ನಿಜಗುಣ ಶಿವಯೋಗಿಗಳು ತಮ್ಮ ಗ್ರಂಥದಲ್ಲಿ "ಕರಣ ವಿಜಯದಿಂದ ಕಲಿತನವುಂಟೇ" ಎಂದು ಹೇಳಿದ್ದಾರೆ.

ವೇದಾಂತ ಮತದಲ್ಲಿ 'ಯೋ ಬ್ರಹ್ಮವಿದ್ಯಾಂ ಜಾನಾತಿ ಸ ಬ್ರಹ್ಮವಿತ್' ಯಾವನು ಬ್ರಹ್ಮಸ್ವರೂಪವನ್ನು ತಿಳಿದುಕೊಳ್ಳುವನೋ ಅವನೇ ಬ್ರಹ್ಮಜ್ಞನು, ಅವನೇ ವೇದಾಂತಿಯೆಂದು ನಿರ್ಣಯವನ್ನು ಕೊಟ್ಟಂತೆ ವೀರಶೈವ ಧರ್ಮದಲ್ಲಿಯೂ ಕೂಡ ಹೇಳಿದ್ದಾರೆ.

ವೀ ಶಬ್ದೇನೋಚ್ಯತೆ ವಿದ್ಯಾ ಶಿವಜೀವೈಕ್ಯ ಬೋಧಿನೀ ।
ತಸ್ಯಾಂ ವಿದ್ಯಾಂ ಯೋರಮಂತೆ ತೇ ವೀರಶೈವತಿ ಸ್ಮೃತಾಃ ॥

ವೀರಶೈವ ಇದರರ್ಥವೇನಂದರೆ— ವೀ ಶಬ್ದದಿಂದ ಶಿವ ಮತ್ತು ಜೀವ ಇವರೀರ್ವರ ಐಕ್ಯವೆಂದು ಹೇಳಲ್ಪಡುತ್ತಿದೆ. ಅಂಥ ಶಿವ ಜೀವರ ಐಕ್ಯತಾ ವಿದ್ಯೆಯಲ್ಲಿ ಯಾರು ರಮಿಸುವರೋ ಅವರೇ ವೀರಶೈವರೆಂದು ಹೇಳಿದ್ದಾರೆ. ಇಲ್ಲಿ ವೇದಾಂತ ಮತಕ್ಕೂ ವೀರಶೈವ ಮತಕ್ಕೂ ಏನೊಂದು ವ್ಯತ್ಯಾಸವಿಲ್ಲವೆಂದು ತೋರುತ್ತದೆ. ಆದರೆ ಈ ಆಗಮವಾಕ್ಯವನು

ವಿಚಾರಿಸಿದರೆ ವೀರಶೈವ ಮತದಲ್ಲಿಯೂ ಕೂಡ ಅಂಗ ಲಿಂಗ ಸಾಮರಸ್ಯ, ಶಿವಜೀವರ ಐಕ್ಯತೆ, ಇವೆರಡರ ಅರ್ಥವು ಒಂದೇ ಎಂದು ಭಾಸವಾಗುತ್ತದೆ. ಅಂಗ ಇದರರ್ಥವು ಜೀವ, ಲಿಂಗ. ಅಂದರೆ ಶಿವ. ಈ ಪ್ರಕಾರ ಎರಡೂ ಮತಗಳು ಒಂದೇ ಎಂದು ಹೇಳಲು ವ್ಯತ್ಯಾಸವಾಗುವದಿಲ್ಲ. ವೀರಶೈವ ಮತದಲ್ಲಿ ಅಂಗ ಲಿಂಗ ಸಾಮರಸ್ಯ ಜ್ಞಾನವನ್ನು ತಿಳಿದುಕೊಳ್ಳಲು, ಇಷ್ಟ, ಪ್ರಾಣ, ಭಾವ. ಲಿಂಗಗಳೆಂದು ಮೂರು ವಿಧವನ್ನು ಕಲ್ಪಿಸಿದ್ದಾರೆ. ವೇದಾಂತ ಮತದಲ್ಲೂ ವಿಷಯಾವಚ್ಛಿನ್ನ ಚೈತನ್ಯ, ಅಂತಃಕರಣವೃತ್ಯವಚ್ಛಿನ್ನ ಚೈತನ್ಯ, ಅಂತಃಕರಣಾವಚ್ಛಿನ್ನ ಚೈತನ್ಯವೆಂದು ಕಲ್ಪಿಸಿದ್ದಾರೆ. ಇದರ ಭಾವವು ಕೆಳಗೆ ಹೇಳಲ್ಪಟ್ಟಿದೆ.

ಹೊರಗಿನ ವಸ್ತು ಜ್ಞಾನವಾಗಬೇಕಾದರೆ ಅಂತಃಕರಣದಲ್ಲಿರುವ ಚೈತನ್ಯವು ಅಂದರೆ ಪ್ರಮಾತೃಚೈತನ್ಯವು ವೃತ್ತಿ ಮುಖವಾಗಿ ಇಂದ್ರಿಯ ದ್ವಾರಾ ಹೊರಡುವ ಕಾಲಕ್ಕೆ ಪ್ರಮಾಣಚೈತನ್ಯವೆಂದೆನಿಸಿಕೊಂಡು ಹೊರಗಿನ ವಸ್ತುವಿನಲ್ಲಿ ಪ್ರವೇಶವಾದಾಗ ವಿಷಯಾವಚ್ಛಿನ್ನ ಚೈತನ್ಯವೆಂದು ಅಥವಾ ಪ್ರಮೇಯ ಚೈತನ್ಯವೆಂದು ಎನಿಸಿಕೊಳ್ಳುತ್ತದೆ. ಆದರೆ ಇಲ್ಲಿ ಮಾತ್ರ ಚೈತನ್ಯವು ಎಲ್ಲ ವಸ್ತುಗಳಲ್ಲೂ ಇದ್ದಂತಾಯಿತು. ಅದಕ್ಕಾಗಿ 'ಸರ್ವಂ ಖಲ್ವಿದಂ ಬ್ರಹ್ಮ' ವೆಂದು ಹೇಳುತ್ತಾರೆ.

ಇದರಂತೆ ವೀರಶೈವ ಮತದಲ್ಲೂ ಇಷ್ಟಲಿಂಗದ ಜ್ಞಾನವು ನಮಗಾಗಬೇಕಾದರೆ, ಮೇಲೆ ಹೇಳಿದಂತೆ ಭಾವಲಿಂಗದ ಪ್ರಕಾಶದಿಂದ ಪ್ರಾಣಲಿಂಗ, ಪ್ರಾಣಲಿಂಗದಿಂದ ಇಷ್ಟಲಿಂಗ ಆದರೆ, ಭಾವಾತೀತ ವಸ್ತುವಿನನ್ನು ಪ್ರಾಪ್ತಿ ಮಾಡಿಕೊಳ್ಳಬೇಕಾದರೆ, ಪ್ರಥಮದಲ್ಲಿ ಇಷ್ಟಲಿಂಗದ ಸಾಧನವು ಬೇಕೇಬೇಕು. ಇಂಥ ಭಾವವನ್ನು ಸ್ಥಿರಪಡಿಸಿಕೊಳ್ಳುವದಕ್ಕಾಗಿ ಕಾಣುವ ಎಲ್ಲ ವಸ್ತುಗಳಿಗೆ ಶಿವಮಯವೆಂದು ನಮ್ಮ ಶಿವಶರಣರು ಹೇಳಿದ್ದಾರೆ.

"ಜಗವೆಂದೊಡಂ ತಾನೆ ಜಗದೀಶನುಂ ತಾನೆ । ಜಗದಾತ್ಮರೆಲ್ಲರುಂ । ತಾನೆ ನಿಜವೆಂದು ಬಗೆವಾತನುತ್ತಮನು ನೋಡಾ॥" ಇದಕ್ಕೆ ಒಂದು ದೃಷ್ಟಾಂತ. ಒಂದು ಕೆರೆಯೊಳಗಿನ ನೀರು ಕಾಲುವೆ ರೂಪದಿಂದ ಹರಿದು ಅದೇ ನೀರು ಮಡುವಿನಲ್ಲಿ ಹೋಗಿ ಮಡುವಿನಾಕಾರವಾಗುತ್ತದೆ. ಒಂದೇ ಕೆರೆಯೊಳಗಿನ ನೀರು ಉಪಾಧಿ ವಶದಿಂದ ಅನೇಕ

ಆಕಾರವಾದಂತೆ ಒಂದೇ ಸೂರ್ಯನ ಪ್ರತಿಬಿಂಬವು ಕೆರೆಯೊಳಗೆ ಇರುವದರಿಂದ ಕೆರೆಯೊಳಗಿನ ಪ್ರತಿಬಿಂಬವೆಂತಲೂ ಕಾಲುವೆಯಲ್ಲಿರುವದರಿಂದ ಕಾಲುವೆಯಲ್ಲಿಯ ಪ್ರತಿಬಿಂಬವೆಂತಲೂ ಒಂದು ತಣ್ಣ ತಂಬಿಗೆಯಲ್ಲಿರುವದರಿಂದ ತಂಬಿಗೆಯೊಳಗಿನ ಪ್ರತಿಬಿಂಬವೆಂತಲೂ ಅನ್ನಿಸಿಕೊಳ್ಳುತ್ತದೆ. ಆದರೆ ಅನೇಕ ವಸ್ತುಗಳಲ್ಲಿ ಅನೇಕ ಪ್ರತಿಬಿಂಬಗಳು ತೋರಿದರೂ ಕೂಡ ಸೂರ್ಯನು ಮಾತ್ರ ಒಬ್ಬನೇ. ಅದರಂತೆ ಘಟಾಕಾಶ, ಮಠಾಕಾಶ, ಜಲಾಕಾಶ, ಮೇಘಾಕಾಶವೆಂದು ತೋರಿದರೂ, ಅಖಂಡ ಆಕಾಶವು ಮಾತ್ರ ಒಂದೇ. ಉಪಾಧಿವಶದಿಂದ ಭಿನ್ನ ಭಿನ್ನವಾಗಿ ಹೇಗೆ ಇವೆಲ್ಲವುಗಳು ತೋರುತ್ತವೋ, ಹಾಗೆ ಅಖಂಡ ಚಿದ್ಘನ ಪರಮಾತ್ಮನು ಇಷ್ಟ, ಪ್ರಾಣ, ಭಾವ. ವೆಂದು ಅನೇಕ ಪ್ರಕಾರ ಉಪಾಧಿವಶದಿಂದ ತೋರುತ್ತಾನೆ. ಆದರೆ ಭಾವಾತೀತವಾದ ಅಖಂಡ ಲಿಂಗದಲ್ಲಿ ಯಾವ ಉಪಾಧಿಗಳೂ ಇರಲಿಕ್ಕೆ ಅವಕಾಶವಿಲ್ಲ. ಇಂಥ ಲಿಂಗ ಜ್ಞಾನವನ್ನು ಸಾಧಿಸಬೇಕಾದರೆ ಪ್ರಥಮದಲ್ಲಿ ಇಷ್ಟ ಲಿಂಗವನ್ನು ನಾವು ಪೂಜಿಸಬೇಕಾಗುವದು.

ಅಜ್ಞಾನ ವಿಶಿಷ್ಟನಾದ ಜೀವನು ಭವಸಾಗರದಿಂದ ದಾಟಲು ಸದ್ಗುರುವು ಪ್ರಥಮದಲ್ಲಿ ಇಷ್ಟಲಿಂಗವನ್ನು ದಯಪಾಲಿಸುತ್ತಾನೆ. ಈ ಇಷ್ಟ ಲಿಂಗವನ್ನು ತಪ್ಪದೇ ಉಪಾಸನೆ ಮಾಡುವದರಿಂದ ನೇತ್ರದಲ್ಲಿರುವ ಕಪ್ಪು ಕಲೆಯು, ಲಿಂಗದ ಕಪ್ಪು ಕಲೆಯು, ಎರಡೂ ಒಂದಾಗಿ ಸೋಹಂ ಭಾವಯುಕ್ತವಾದ ಪ್ರಾಣಲಿಂಗಕ್ಕೆ ಹೋಗುತ್ತದೆ. ಪ್ರಾಣಲಿಂಗದ ಉಪಾಸನೆಯನ್ನು ಮಾಡುತ್ತಾ ಮಾಡುತ್ತಾ ಅದೇ ಲಿಂಗವು ಭಾವದಲ್ಲಿ ಸ್ಥಿರವಾಗಿ ಮುಂದೆ ಆ ಭಾವವೂ ಕೂಡ ಅಡಗಿ ಏನೊಂದೂ ತೋರದ ಅಜ್ಞಾನವಲ್ಲದ ಸಚ್ಚಿದಾನಂದಾದ್ವಯ ಪರಿಪೂರ್ಣ ಸ್ವಯಂ ಪ್ರಕಾಶವಾದ ಲಿಂಗವೇ ತಾನಾಗುತ್ತಾನೆ. ಆ ಮೇಲೆ ಆತನಿಗೆ ಲೌಕಿಕದೊಳಗಿನ ಯಾವ ಕರ್ಮದ ಬಾಧೆಯೂ ದೊರಕೊಳ್ಳದು. ಅದಕ್ಕಾಗಿ ಮಹಾಕವಿ ನಿಜಗುಣ ಶಿವಯೋಗಿಗಳು ಅರುಹೆಂಬ ಮಗನು ದಯದೊಳು ಮರುಹೆಂಬ ತಾಯಿಯಳಿಯಲು, ಸೂತಕದ್ವಯ ಸಂಬಂಧದೊಳ್ ಯೋಗಿಗಳಾವ ವಿಧಿಯುಂಟು॥ ಎಂದು ಹೇಳಿದ್ದಾರೆ. ಇಂಥ ಸ್ಥಿತಿಯು ಪ್ರಾಪ್ತವಾದ ಮೇಲೆ ಕರ್ಮಗಳನ್ನು ನಿರಾಕರಿಸುತ್ತಿರಲು

ಏನೊಂದು ಸಾಧನೆಗಳಿಲ್ಲದೆ ನಾವು ಏನು ಮಾಡಿದರೂ ಯಾವದೂ ಸಂಬಂಧವಿಲ್ಲವೆಂದು ಅನ್ನುವ ದುಂಳ ವೇದಾಂತಿಗಳ ಮಾತು ಎತ್ತಣ ಮಾತು ?

ಆದರೆ ಇಂಥ ಲಿಂಗ ಸ್ವರೂಪವನ್ನು ತಿಳಿಯಲು [illegible] ಹೇಳಿದಂತೆ ಈ ಮತದಲ್ಲೂ ಕೂಡ ಅಧಿಕಾರಿಯಾಗಲೇ ಬೇಕಾಗುತ್ತದೆ. ಅದಕ್ಕಾಗಿ ಶ್ರೀ ಬಸವಣ್ಣನವರು ಲಿಂಗಾನುಸಂಧಾನದ ಸ್ಥಿತಿಗೆ ಯೋಗ್ಯರಾಗುವದಕ್ಕಾಗಿ ಮೊದಲು ಅಧಿಕಾರಿಯಾಗಲು ಉಪದೇಶಿಸಿದ್ದಾರೆ.

" ಕಳಬೇಡ, ಕೊಲಬೇಡ, ಹುಸಿ ನುಡಿಯಲು ಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ, ಇದೇ ಅಂತರಂಗ ಶುದ್ಧಿ. ಇದೇ ಬಹಿರಂಗ ಶುದ್ಧಿ. ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ."

ಕಾರಣ ನಾವು ಪ್ರಥಮದಲ್ಲಿ ಜ್ಞಾನೇಂದ್ರಿಯ ಕರ್ಮೇಂದ್ರಿಯ ಮನ ಇವುಗಳ ನಿಗ್ರಹವನ್ನು ಅವಶ್ಯ ಮಾಡಲೇಬೇಕು. ಅಂದರೆ ಮನಸ್ಸು ಶುದ್ಧ ಉಳಿಯುತ್ತದೆ ಆಮೇಲೆ ಲಿಂಗಜ್ಞಾನವಾಗಲಿ ಅಥವಾ ಉಪಾಸನೆಯಾಗಲಿ ನಿಸ್ಸಂದೇಹವಾಗಿ ತಾನೇ ಸಾಧ್ಯವಾಗುವದು. ಕಾರಣ. ಇಂದ್ರಿಯಗಳನ್ನು ವಿಷಯಗಳಲ್ಲಿ ಬಿಡಬಾರದು. ಅದಕ್ಕಾಗಿ ನಮ್ಮ ಶಿವಶರಣರು ಇಂದ್ರಿಯ ನಿಗ್ರಹದ ಬಗ್ಗೆ ಒಂದು ವಚನದಲ್ಲಿ ಹೀಗೆ ಹೇಳಿದ್ದಾರೆ.

"ಮನವೆಂಬ ಮರ್ಕಟನು ಶರೀರವೆಂಬ ವೃಕ್ಷವನೇರಿ ಇಂದ್ರಿಯಗಳೆಂಬ ಶಾಖೆ ಶಾಖೆಗೆ ಹಾರಿ ವಿಷಯಗಳೆಂಬ ಫಲಂಗಳನು ಭೋಗಿಸುತ್ತ ಭವದತ್ತ ಸಾಗಿತ್ತು ನೋಡಾ ಈ ಮನವೆಂಬ ಮರ್ಕಟನನ್ನು ನಿಮ್ಮ ನೆನಹೆಂಬ ಪಾಶದಲಿ ಕಟ್ಟಿ ಎನ್ನ ಕರುಣೆಯ ಕಂದನೆಂದು ಸಲುಹಯ್ಯ ಅಖಂಡೇಶ್ವರ "

ಕಾರಣ ಇಂದ್ರಿಯಗಳನ್ನು, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಈ ವಿಷಯಗಳಲ್ಲಿ ತೊಡಗಿಸದೆ, ಮನವು ಕಣ್ಣಿನಿಂದ ಹೊರಟು ರೂಪವನ್ನು ನೋಡಲು ಹೋದರೆ ಶಿವನ ಧ್ಯಾನರೂಪೀ ಹಗ್ಗದಿಂದ ಜಗ್ಗಿತಿತ್ತಿ, ಇಷ್ಟಲಿಂಗದಲ್ಲಿ ತೊಡಗಿಸಬೇಕು. ಹೀಗೆ ಮಾಡುವದರಿಂದ

ಚಿತ್ತವೃತಿಯು ಶಾಂತ ಉಳಿಯುತ್ತದೆ. ಇದರ ಬಗ್ಗೆ ಅಸ್ತ್ರಿಕ ಶಿರೋಮಣಿ ಸ್ವಾಮಿ ವಿವೇಕಾನಂದರು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಸಂಚರಿಸುತ್ತಿರುವಾಗ ಒಮ್ಮೆ ಚಿತ್ತವೃತ್ತಿಯ ಶಾಂತತೆಯು ವಿಷಯುವಾಗಿ ಅವನಿಗೆ ಉಪದೇಶಿಸಿದ್ದಾರೆ. ಅದು ಹೇಗೆಂದರೆ—

ಸ್ವಲ್ಪ ಗೋಲಾಕಾರವಾದ ಕಪ್ಪು ಕಲೆಯನ್ನು ನಮ್ಮ ಇದಿರು ಇಟ್ಟುಕೊಂಡು ಅದನ್ನೇ ಕೆಲವು ನಿಮಿಷಗಳವರೆಗೆ ದಿಟ್ಟಿಸಿ ನೋಡುತ್ತಾ ಕುಳಿತರೆ ನೇತ್ರದೊಳಗಿನ ಕಪ್ಪು ಕಲೆಯು ಇದಿರಿನ ಕಪ್ಪು ಕಲೆಯು ಎರಡೂ ತದಾಕಾರ ಸ್ವರೂಪವನ್ನು ಹೊಂದಿ ನಿಜ ಶಾಂತಿಯು ನೆಲೆಗೊಳ್ಳುತ್ತದೆಂದು ಹೇಳಿದ್ದಾರೆ.

ವೇದಾಂತದಲ್ಲೂ ಕೂಡ ಮೇಲೆ ಹೇಳಿದ ಉದಾಹರಣೆಯನ್ನೂ ನಾಸಾಗ್ರದೃಷ್ಟಿ, ಮುದ್ರಾ ಯೋಗ ಮುಂತಾದ ಸಾಧನಗಳನ್ನು ಪ್ರತಿಪಾದಿಸಿದ್ದಾರೆ ಕಾರಣ ಇಂದ್ರಿಯಗಳನ್ನು ಸದ್ವಿಷಯಗಳಲ್ಲಿಯೇ ತೊಡಗಿಸಬೇಕಲ್ಲದೆ, ದುರ್ವಿಷಯಗಳಲ್ಲಿ ತೊಡಗಿಸಬಾರದು.

ಹೀಗೆ ಮಾಡುವದರಿಂದ ನಿಜಶಾಂತಿಯು ಪ್ರಾಪ್ತವಾಗುವಲ್ಲಿ ಏನೂ ಸಂದೇಹವಿಲ್ಲ. ಇಂಥ ಶಾಂತಿಯಿಂದಲೇ ನಮಗೂ ಸುಖ, ಜಗತ್ತಿಗೂ ಸುಖ. ಇದಕ್ಕೆ ಮಹಾತ್ಮಾ ಗಾಂಧೀಜಿಯವರ ಉದಾಹರಣೆಯೊಂದು ಸಾಕು. ಅವರಿಗೆ ಈ ಜೀವನದಲ್ಲಿ ಎಷ್ಟೆ ವಿಷಯಗಳು ಸಂಭವಿಸಿದರೂ ತಮ್ಮ ಶಾಂತಿವ್ರತವನ್ನ ಅವರು ಎಂದೂ ಬಿಡಲಿಲ್ಲ. ಅವರ ನಿಜವಾದ ಶಾಂತಿಯೇ ಈಗ ಲೋಕದಲ್ಲಿ ಫಲಕಾರಿಯಾಗಿ ಪರಿಣಮಿಸಹತ್ತಿದೆಂದು ಬೇರೆ ಹೇಳಬೇಕಾಗಿಲ್ಲ.

ನಿಜವಾದ ಶಾಂತಿಗಾಗಿ ಮೊದಲು ಇಂದ್ರಿಯ ನಿಗ್ರಹವು ಎಲ್ಲರಿಗೂ ಬೇಕೇ ಬೇಕು. ಇಂದ್ರಿಯ ನಿಗ್ರಹದಿಂದಲೇ ಇಹಪರಲೋಕಗಳಲ್ಲಿಯೂ ಕೀರ್ತಿಗೆ ಪಾತ್ರನಾಗುತ್ತಾನೆ. ಆದರೆ ಪ್ರಥಮದಲ್ಲಿ ಇಂದ್ರಿಯ ನಿಗ್ರಹೋಪಾಯಗಳನ್ನು ಸಾಧಿಸಿ ಆತ್ಮೋನ್ನತಿಯ ಶಿಖರವನ್ನು ಮುಟ್ಟಲು ಪ್ರಯತ್ನಿಸತಕ್ಕದ್ದು.

---

# ಶಿವಾನುಭವಕ್ಕೆ ಸಹಾಯ.

ಚಿಕ್ಕೋಡಿ ತಾಲೂಕು ಸದಲಗಿಯಲ್ಲಿಯ ಮಹಾವಿಭೂತಿ ಶಿವಶರಣ ಮಲ್ಲಪ್ಪಣ್ಣ ಹಾಲಪ್ಪನವರು ಇವರು ಶಿವಶರಣರ ನಡೆಯಲ್ಲಿ ವಿಶ್ವಾಸವುಳ್ಳವರಾಗಿ ಅದರಂತೆಯೇ ಆಚರಿಸುತ್ತ ನೇಮನಿಷ್ಠರಾಗಿ ಬಂದವರಿಗೆ ಆಚಾರದ ಅರಿವನ್ನು ಬೋಧಿಸುತ್ತ ಕಾಲ ಕಳೆಯುತ್ತಿದ್ದರು. ಇವರು ತಮ್ಮ ವಯಸ್ಸಿನ ೮೦ ವರ್ಷಕ್ಕೆ ತಾ॥ ೯-೩-೪೯ ನೇ ದಿನ ಲಿಂಗದೊಳಗಾದರು. ಇವರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೀಯಲಿ. ಇವರ ಸ್ಮರಣಾರ್ಥ ಶಿವಾನುಭವ ಪತ್ರಿಕೆಗೆ ಐದು ರೂಪಾಯಿಗಳು ಬಂದಿದ್ದು ಅವುಗಳನ್ನು ನಾವು ಆತ್ಯಾದರಪೂರ್ವಕವಾಗಿ ಸ್ವೀಕರಿಸುತ್ತೇವೆ.

ಕೆಳಗಿನ ಮಹನೀಯರು ಶಿವಾನುಭವ ಪತ್ರಿಕೆಗೆ ಸಹಾಯ ಮಾಡಿದ್ದು ಅವರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

೫—೦—೦ ಶ್ರೀ. ಮಠದ ಬಸವಯ್ಯನವರು ಪುಣಬಗಟ್ಟಿ

೪—೨—೦ ಬೀತೂರ ಗ್ರಾಮದಲ್ಲಿ ಬಸವನಹಾಳು ಮಹಾದೇವಪ್ಪನವರ ಮನೆಯಲ್ಲಿ ಶಿವಾನುಭವ ಗೋಷ್ಠಿ ನಡೆದ ಕಾಲಕ್ಕೆ ಅರ್ಪಿಸಿದ್ದು.

— ಸಂಪಾದಕ

ಪದು ಪ್ರಸಾದಲಿಂಗಕ್ಕೆ, ಅನುಭವಿಸಿದ್ದನ್ನು ಆನಂದಿಸುವದು ಮಹಾ ಲಿಂಗಕ್ಕೆ ಸಂಬಂಧಪಡುತ್ತವೆ. ಹೀಗೆ ಮಿಶ್ರಾರ್ಪಣದ ರೀತಿಯನ್ನು ಶಿವ ಶರಣರು ಬೋಧಿಸಿ ನಡೆದಿರುತ್ತಾರೆ.

## ಇಷ್ಟಲಿಂಗದಲ್ಲಿ ಅರ್ಪಣದ ಸಂಬಂಧವು

ಅಷ್ಟಾವರಣದ ಆಚರಣೆಯಲ್ಲಿ ಇಷ್ಟಲಿಂಗದ ಸಂಬಂಧವನ್ನಿಡದೆ ಆವ ಆವರಣದ ಆಚರಣೆಯನ್ನೂ ಆಚರಿಸಲಿಕ್ಕೆ ಬರಲಾರದು. ಅದರ ಮೂಲಕ ವಾಗಿಯೇ ಗುರುಲಿಂಗಜಂಗಮವನ್ನು ಅರಿಯಬೇಕು. ಹೀಗೆ ಅರಿತು ಪ್ರಸಾದಮೂಲಕವಾಗಿಯೇ ಭಕ್ತನು ಯಾವಾಗಲೂ ಆಚರಿಸುತ್ತಿರಬೇಕು. ಇದು ಮಿಶ್ರಾರ್ಪಣದಲ್ಲಿ ವರ್ಣಿಸಲ್ಪಟ್ಟಿವೆ. ಹಾಗೆಯೇ ನಿತ್ಯದ ಲಿಂಗ ಪೂಜೆಯ ಆಚರಣೆಯಲ್ಲಿಯೂ ಕೂಡ ಈ ತತ್ವಗಳನ್ನಿಟ್ಟುಕೊಳ್ಳಬೇಕು. ಈ ಅರ್ಪಣದ ಮುಖ್ಯ ಆಚರಣೆಯು ಇಷ್ಟಲಿಂಗದ ಆವ ಆವ ಭಾಗ ಗಳಿಗೆ ಸಂಬಂಧಿಸಿದೆಂಬುದನ್ನು ಅರಿತುಕೊಳ್ಳಬೇಕು. ಈ ಸಂಬಂಧ ವನ್ನು ಮಂತ್ರಮೂಲಕ ಮಾಡಿಕೊಳ್ಳತಕ್ಕದ್ದು. ಈ ವಿವರ ಹೇಗೇ ವರೆ — (೧) ಆಚಾರಲಿಂಗಕ್ಕೆ ಭೋಜ್ಯ, ಬೋನವೆಂಬ ಪದಾರ್ಥ, ಗಂಧವೆಂಬ ದ್ರವ್ಯ, ಕಠಿಣತೆ, ಪೃಥ್ವಿ ತತ್ವವಿದ್ದು ಓಂ ಹ್ರಾಂ ಮಂತ್ರದಿಂದ ಇಷ್ಟಲಿಂಗದ ಸಂಬಂಧ ಮಾಡತಕ್ಕದ್ದು. (೨) ಗುರು ಲಿಂಗಕ್ಕೆ ಪಾನ್ಯ, ಉದಕ ಪದಾರ್ಥ, ಮೃದುತ್ವ ದ್ರವ್ಯ, ಅಪ್ಪು ತತ್ವ ವಿದ್ದು, ಓಂ ಹ್ರೀಂ ಮಂತ್ರದಿಂದ ಇಷ್ಟಲಿಂಗದ ಕಟಿಯಲ್ಲಿ ಸಂಬಂಧಿಸ ತಕ್ಕದ್ದು. ೩) ಶಿವಲಿಂಗಕ್ಕೆ ಭಕ್ಷ್ಯ, ರೂಪ ಪದಾರ್ಥ, ಉಷ್ಣತೆ ದ್ರವ್ಯ, ಅಗ್ನಿ ತತ್ವವಿದ್ದು, ಓಂ ಹ್ರೂಂ ಮಂತ್ರದಿಂದ ಇಷ್ಟಲಿಂಗದ ವೃತ್ತಕ್ಕೆ ಸಂಬಂಧಿಸಕ್ಕದ್ದು. (೪) ಜಂಗಮಲಿಂಗಕ್ಕೆ ಚೋಹ್ಯ, ಸ್ಪರ್ಶನ ಪದಾರ್ಥ, ಮಿಶ್ರದ್ರವ್ಯ, ವಾಯುತತ್ವವಿದ್ದು ಓಂ, ಹ್ರೈಂ ಮಂತ್ರದಿಂದ ಇಷ್ಟ ಲಿಂಗದ ಗೋಮುಖಕ್ಕೆ ಸಂಬಂಧಿಸತಕ್ಕದ್ದು. (೫) ಪ್ರಸಾದಲಿಂಗಕೆ ಲೇಹ್ಯ, ಶಬ್ದ ಪದಾರ್ಥ, ಮಿಶ್ರಸ್ಪರ್ಶನ, ಆಕಾಶತತ್ವವಿದ್ದು, ಓಂ, ಹ್ರೌಂ ಮಂತ್ರದಿಂದ ಇಷ್ಟಲಿಂಗದ ನಾಳಕ್ಕೆ ಸಂಬಂಧಿಸತಕ್ಕದ್ದು. (೬) ಮಹಾ ಲಿಂಗಕ್ಕೆ ಇರವಿಲ್ಲದ ಅರಿವು, ಭೋಜ್ಯಾದಿ ಐದು ಪದಾರ್ಥವೆಂದರಿವು, ಓಂ, ಹ್ರಃ ಮಂತ್ರದಿಂದ ಇಷ್ಟಲಿಂಗದ ಗೋಳಕಕ್ಕೆ ಸಂಬಂಧಿಸತಕ್ಕದ್ದು.

## ಏಕಾದಶ ಪ್ರಸಾದಗಳು

ಏಕಾದಶ ಪ್ರಸಾದಗಳಲ್ಲಿ ವೀರಶೈವನ ಪ್ರಗತಿಗೆ ಸಂಬಂಧಿಸಿದ ಎಲ್ಲ ಆಚರಣೆಗಳು ಅಡಕವಾಗಿರುತ್ತವೆ. ಆಚರಣೆಯು ಬೇರೆ ಬೇರೆ ದೃಷ್ಟಿಯಿಂದ ಅವುಗಳ ವರ್ಣನೆಯನ್ನು ವಚನಕಾರರು ಅನೇಕ ಬಗೆಯಾಗಿ ಮಾಡುತ್ತಾರೆ. ಆದರೆ ಅವೆಲ್ಲವೂ ಮೂಲದಲ್ಲಿ ಒಂದೇ ಅರ್ಥವುಳ್ಳವಾಗಿರುತ್ತವೆ. ಆದರೂ ಅವುಗಳಲ್ಲಿ ಆಂತರಂಗಿಕ ಮತ್ತು ಬಾಹ್ಯ ಎಂದು ಎರಡು ವಿಭೇದಗಳನ್ನು ನಾವು ಮಾಡಬಹುದು. ಕೆಲವು ವಚನಗಳಲ್ಲಿ ಇವುಗಳಿಗೆಯೇ ಅನುಕ್ರಮವಾಗಿ ಮಾಹೇಶ್ವರನ ಏಕಾದಶ ಪ್ರಸಾದಗಳು, ಮತ್ತು ಭಕ್ತನ ಏಕಾದಶ ಪ್ರಸಾದಗಳು ಎಂದು ಹೇಳುವದುಂಟು. ಮೊದಲಿನವು ಹೆಚ್ಚಿಗೆ ತಾತ್ವಿಕವಾಗಿರುತ್ತವೆ. ಈ ಶಬ್ದಗಳಿಗೆ ಅನುಕ್ರಮವಾಗಿ ಮೀರಿದ ಸ್ಥಲಕ್ಕೆ ಸಂಬಂಧಿಸಿದವು, ಮತ್ತು ಮಾರ್ಗಕ್ರಿಯೆಗೆ ಸಂಬಂಧಿಸಿದವು ಎಂತಲೂ ಹೇಳಬಹುದು. ಮೊದಲನೆಯದರಲ್ಲಿ (ಅ) ವಿಧ, (ಬ) ವಿಧ, (ಕ) ವಿಧ, (ಡ) ವಿಧ ಎಂದು ನಾಲ್ಕು ವಿಧಗಳನ್ನು ಮಾಡುತ್ತೇವೆ ೨ನೇ ವರ್ಗದಲ್ಲಿ ನಾವು ಒಂದೇ ವರ್ಗವನ್ನು ಮಾಡುತ್ತೇವೆ. ಈ ಎರಡಲ್ಲದೆ ಮೂರನೆಯ ವರ್ಗವೂ ಒಂದಿರುತ್ತದೆ. ಅದು ಸಂಪೂರ್ಣ ತಾತ್ವಿಕವು. ನಾವು ಸಂಕ್ಷೇಪವಾಗಿ ಇವುಗಳ ವ್ಯಾಖ್ಯೆಗಳನ್ನು ಆಯಾ ವಚನಕಾರರ ಅಭಿಪ್ರಾಯಗಳ ಪ್ರಕಾರ ವಿವರಿಸುತ್ತೇವೆ.

೧ನೇ ವರ್ಗವು:— ಇದು ತಾತ್ವಿಕವಾದರೂ ಇದನ್ನು ಮೂರು ದೃಷ್ಟಿಯಿಂದ ಹೇಳಬಹುದು. ಅವುಗಳನ್ನು ಮೇಲೆ ಹೇಳದಂತೆ (ಅ) ವಿಧ, (ಬ) ವಿಧ, (ಕ) ವಿಧ, (ಡ) ವಿಧ ಎಂದು ಕರೆಯುತ್ತೇವೆ. ಅವು ಯಾವವೆಂದರೆ,

(ಅ) ವಿಧ (೧) ಶುದ್ಧಪ್ರಸಾದ ಮಂತ್ರಧ್ಯಾನದಿಂದ ಪದಾರ್ಥಪೂರ್ವಾಶ್ರಯವಳಿದುದೇ ಶುದ್ಧಪ್ರಸಾದವು. (೨) ಸಿದ್ಧಪ್ರಸಾದ:- ಶುದ್ಧಪ್ರಸಾದವನ್ನು ಲಿಂಗಕ್ಕೆ ನೈವೇದ್ಯ ಮಾಡಲು ಆಗ ಪ್ರಸಾದದ ಕಳೆ ಲಿಂಗದಲ್ಲಿ ನೆಲೆಗೊಳ್ಳುತ್ತದೆ. ಇದು ಸಿದ್ಧಪ್ರಸಾದವು. (೩) ಪ್ರಸಿದ್ಧ ಪ್ರಸಾದವು:— ಸಿದ್ಧಪ್ರಸಾದವನ್ನು ಜಿಹ್ವೆಯಲ್ಲಿ ಸ್ವೀಕರಿಸುವದು. ಇದು ಜಂಗಮ ಮುಖವಾದುದೆಂದು ಭಾವಿಸಿ ಹಾಗೆ ಸ್ವೀಕರಿಸಿದಲ್ಲಿ ಪ್ರಸಿದ್ಧಪ್ರಸಾದವು. (೪) ಆಪ್ಯಾಯನ ಪ್ರಸಾದ- ಮೇಲೆ ಹೇಳಿದ ಮೂರು ಪ್ರಸಾದಗಳು ಲಿಂಗ

ಮುಖಿವಾದವುಗಳೆಂಬ ದೃಢಭಾವವು ನೆಲೆಗೊಳ್ಳಲು ಅದು ಅಪ್ಯಾಯನ ಪ್ರಸಾದವು. ೫) ಸಮಯಪ್ರಸಾದಃ — ಈ ಪ್ರಸಾದದ ಸೇವನಾ ಕಾಲದಲ್ಲಿ ಇತರ ಪದಾರ್ಥಗಳಿಗೆ ಲಕ್ಷವಿಡದೆ ಅವು ಅನರ್ಪಿತವೆಂದು ತಿಳಿಯುವದು ಸಮಯಪ್ರಸಾದವು. (೬) ಪಂಚೇಂದ್ರಿಯ ವಿರಹಿತಪ್ರಸಾದಃ— ಈಪ್ರಸಾದ ಸೇವನೆಯಲ್ಲಿ ಪಂಚೇಂದ್ರಿಯಗಳು ಮುಟ್ಟದ ಮುನ್ನವೇ ಅವುಗಳನ್ನು ಸೇವಿಸುವದು ಇರುತ್ತದೆ. (೭ ಅಂತಃಕರಣ ಚತುಷ್ಟಯ ವಿರಹಿತಪ್ರಸಾದಃ- ಅಂಗದ ಕರಣಗಳಿಗೆ ದೂರನಾಗಿ ಪ್ರಸಾದ ಸೇವಿಸುವದು. (೮) ಪ್ರಸಾದಿಯ ಪ್ರಸಾದ:— ಪ್ರಸಾದಿಯ ಪ್ರಸಾದವನ್ನು ಜಂಗಮಕ್ಕೆ ಕೊಟ್ಟು ಸಮರಸಭೋಗ ಮಾಡುವದು. (೯) ಸದ್ಭಾವಪ್ರಸಾದ:- ಪ್ರಸಾದವನ್ನು ಸದ್ಭಾವದಿಂದ ಸೇವಿಸುವದೇ ಸದ್ಭಾವಪ್ರಸಾದವು. (೧೦) ಸಮತಾ ಪ್ರಸಾದಃ— ಹಸಿವು ಅಡಗಿ ಶಾಂತಿಸ್ಥೈರಣೆಯಿಂದಾಗುವದೇ ಸಮತಾ ಪ್ರಸಾದವು. (೧೧) ಜ್ಞಾನ ಪ್ರಸಾದಃ — ಸಮತಾಪ್ರಸಾದದಲ್ಲಿ ತೃಪ್ತಿಯನ್ನು ಹೊಂದಿ ಕ್ರಿಯಾ ಖಂಡಿತ ಮಾಡುವಲ್ಲಿ ಅಖಂಡ ಪರಿಪೂರ್ಣ ಪ್ರಸಾದಿಯಾಗಿರುವದು ಜ್ಞಾನಪ್ರಸಾದವು.

ಬ ವಿಧ- (೧) ಶುದ್ಧ ಪ್ರಸಾದ- ದೀಕ್ಷೆಯಿಂದ ತನುವನ್ನು ಶುದ್ಧ ಪಡಿಸಿದಲ್ಲಿ ಅದು ಶುದ್ಧ ಪ್ರಸಾದವು. (೨) ಸಿದ್ಧ ಪ್ರಸಾದವು. ಇಷ್ಟಲಿಂಗ ಧಾರಣಮಾಡಿಕೊಂಡು ಮಂತ್ರಸ್ವರೂಪವನ್ನು ನೆನೆಯುತ್ತಿರಲು ನೆನೆವ ಮನಸ್ಸಿನಲ್ಲಿ ಮಂತ್ರವು ಸಿದ್ಧಿಸಲು ಆ ಮನವೇ ಸಿದ್ಧ ಪ್ರಸಾದವು. (೩) ಪ್ರಸಿದ್ಧ ಪ್ರಸಾದವು:- ತನುವು ಶುದ್ಧ ಪ್ರಸಾದ ಮತ್ತು ಮನವು ಸಿದ್ಧ ಪ್ರಸಾದವಾಯಿತ್ತೆಂಬ ಭಾವನೆಯೇ ಪ್ರಸಿದ್ಧ ಪ್ರಸಾದವು. (೪) ಆಪ್ಯಾಯನ ಪ್ರಸಾದ:- ಈ ಮೂರಕ್ಕೆ ಮೂಲವಾದುದು ಆತ್ಮ. ಅದರಲ್ಲಿ ಪ್ರಸಾದವು ವೇಧಿಸಲು ಅದು ಆಪ್ಯಾಯನ. ಪ್ರಸಾದವು. (೫) ಸಮಯಪ್ರಸಾದಃ— ಈ ವಿಧವು ಇತರ ಸಮಾಜದವರಿಗೆ ಸಮನಿಸಲಾರದು, ಆದರೆ ಶರಣನಿಗೆ ಮಾತ್ರ ಸಮನಿಸುತ್ತದೆಂಬ ತಿಳುವಳಿಕೆಯು ಸಮಯಪ್ರಸಾದವು. (೬) ಪಂಚೇಂದ್ರಿಯವಿರಹಿತ ಪ್ರಸಾದ:— ಪಂಚೇಂದ್ರಿಯಗಳಲ್ಲಿ ಪಂಚಪ್ರಸಾದವನ್ನು ಸಂಬಂಧಿಸಿಕೊಂಡು ಪಂಚವಿಷಯ ರಹಿತನಾಗಿರುವದು ಪಂಚೇಂದ್ರಿಯವಿರಹಿತ ಪ್ರಸಾದವು. (೭) ಅಂತಃಕರಣ ಚತುಷ್ಟಯವಿರಹಿತ ಪ್ರಸಾದವು: - ಇದು ಅಂಗಕರಣಗಳು ಲಿಂಗಕರಣಗಳಾಗಿರುವದು ಇದೆ. (೮) ಪ್ರಸಾದಿಯ ಪ್ರಸಾದಃ ಸರ್ವಾಂಗವು ಲಿಂಗಮಯವಾಗಿ ಲಿಂಗ

ಭೋಗೋಪಭೋಗಿಯಾಗಿರುವದು ಪ್ರಸಾದಿಯ ಪ್ರಸಾದ. (೯) ಸದ್ಭಾವ ಪ್ರಸಾದಃ— ಭಾವದಲ್ಲಿ ಸದ್ಭಾವವುಳ್ಳವನಾಗುವದು ಸದ್ಭಾವಪ್ರಸಾದ. (೧೦) ಸಮತಾ ಪ್ರಸಾದ— ಸದ್ಭಾವಿಯಾಗಿ ಪರರ ನಿಂದೆಗಳನ್ನು ಸ್ವೀಕರಿಸುತ್ತ ಸರ್ವರಲ್ಲಿ ಸಮತಾಭಾವಿಯಾಗಿರುವದು ಸಮತಾಪ್ರಸಾದವು. (೧೧) ಜ್ಞಾನ ಪ್ರಸಾದ— ಸಮತಾಭಾವವೇ ಅಂಗವಾದ ಶರಣನು ಗಾಳಿ ಇಲ್ಲದ ದೀಪ ದಂತೆ ಸಹಜಸುಜ್ಞಾನದಲ್ಲಿರುವದೇ ಜ್ಞಾನಪ್ರಸಾದವು.

(ಕ) ವಿಧವುಃ– (೧) ಗುರುಪ್ರಸಾದ– ಗುರುಮುಖದಿಂದ ಬಂದುದು ಗುರುಪ್ರಸಾದವು. ಇದು ಶುದ್ಧ ಪ್ರಸಾದವೆಂತಲೂ ಹೇಳಬಹುದು. (೨) ಲಿಂಗಪ್ರಸಾದ– ಗುರುಪ್ರಸಾದವನ್ನು ಲಿಂಗಕ್ಕೆ ಅರ್ಪಿಸುವದು ಲಿಂಗಪ್ರಸಾದವು. ಇದು ಸಿದ್ಧ ಪ್ರಸಾದವೆಂತಲೂ ಹೇಳಬಹುದು. (೩) ಜಂಗಮ ಪ್ರಸಾದಃ– ಭೋಜನಕ್ಕೆ ಸಿದ್ಧಪಡಿಸಿ ಲಿಂಗಕ್ಕೆ ಕೊಟ್ಟು ಸಲಿಸುವದೇ ಜಂಗಮಪ್ರಸಾದವು. ಇದು ಪ್ರಸಿದ್ಧಪ್ರಸಾದವೆಂತಲೂ ಹೇಳಬಹುದು. (೪) ಆಪ್ಯಾಯನಪ್ರಸಾದಃ– ಲಿಂಗಾರ್ಪಿತದ ಅಪೇಕ್ಷೆಯಿಂದ ಸಲಿಸುವದೇ ಆಪ್ಯಾಯನಪ್ರಸಾದ. (೫) ಸಮಯಪ್ರಸಾದಃ– ಗುರುಲಿಂಗ ಜಂಗಮ ವನ್ನು ಕುರಿತು ತೆಗೆದುಕೊಂಬುವದು ಸಮಯ ಪ್ರಸಾದವು. (೬ ಪಂಚೇಂದ್ರಿಯವಿರಹಿತ ಪ್ರಸಾದಃ– ಪಂಚೇಂದ್ರಿಯಗಳಲ್ಲಿ ಪಂಚವಿಷಯ ಪದಾರ್ಥಗಳನ್ನು ಪಂಚವಿಧಲಿಂಗಕ್ಕೆ ಸಮರ್ಪಣೆಮಾಡುವದು ಪಂಚೇಂದ್ರಿಯ ವಿರಹಿತಪ್ರಸಾದವು. (೭) ಅಂತಃಕರಣವಿರಹಿತ ಚತುಷ್ಟಯ ಪ್ರಸಾದಃ- ಅಹಂಕಾರದಲ್ಲಿ ಶಿವಚಿಂತನೆಯುಳ್ಳಾತನಾಗಿ ಸಲಿಸುವದು ಅಂತಃಕರಣ ವಿರಹಿತಪ್ರಸಾದವು. (೮) ಪ್ರಸಾದಿಯ ಪ್ರಸಾದ:- ಗುರುಲಿಂಗಜಂಗಮದ ಪ್ರಸಾದವನ್ನು ಅಪೇಕ್ಷಿಸಿ ಕೊಂಬುವದೇ ಪ್ರಸಾದಿಯ ಪ್ರಸಾದವು. (೯) ಸದ್ಭಾವಪ್ರಸಾದ — ತ್ರಿವಿಧಾಂಗದಲ್ಲಿ ತ್ರಿವಿಧಲಿಂಗವನ್ನು ಸಂಬಂಧಿಸಿ ಆ ಲಿಂಗವೇ ತಾನೆಂದರಿದು ಆ ತ್ರಿವಿಧ ಲಿಂಗಕ್ಕೆ ಕೊಡುವದು ಸದ್ಭಾವ ಪ್ರಸಾದವು. (೧೦) ಸಮತಾಪ್ರಸಾದ— ಬಹಿರಂಗ ಪ್ರಪಂಚವನ್ನು ನಷ್ಟ ಮಾಡಿ ಅರುಹುವಿಡಿದು ಸಲಿಸುವದು ಸಮತಾಪ್ರಸಾದವು. (೧೧) ಜ್ಞಾನ ಪ್ರಸಾದ— ಗುರುವಿನ ಪ್ರಸನ್ನತ್ವವೇ ಜ್ಞಾನ ಪ್ರಸಾದವು.

ಇದರಲ್ಲಿ (ಅ) ವಿಧವು ಬಾಹ್ಯ ಶರೀರಕ್ಕೆ ಸಂಬಂಧಪಡುತ್ತದೆ. (ಬ) ವಿಧ ಮತ್ತು (ಕ) ವಿಧಗಳು ಪ್ರಾಣ ಮತ್ತು ಜ್ಞಾನಕ್ಕೆ ಹೆಚ್ಚಿಗೆ ಸಂಬಂಧಪಡುತ್ತವೆ. ಮುಖ್ಯವಾಗಿ ಶುದ್ಧ ಸಿದ್ಧ ಪ್ರಸಿದ್ಧ ಪದಾರ್ಥಗಳ

ಮೂಲಕ ಗುರುಲಿಂಗ ಜಂಗಮವನ್ನು ಮೊದಲು ಅರಿಯಬೇಕು. ಹೀಗೆ ಅರಿತು ಮುಂದೆ ಹೇಗೆ ಆಚರಿಸಬೇಕೆಂದು ಅವುಗಳ ಮುಂದಿನ ೮ ಪ್ರಸಾದಗಳಲ್ಲಿ ಹೇಳಲ್ಪಟ್ಟಿರುತ್ತದೆ. (ಅ) ವಿದವು ಬಾಹ್ಯ ಆಚರಣೆಗೆ ಸಂಬಂಧವಾದುದು. (ಬ) ಮತ್ತು (ಕ) ವಿಧಗಳು ತಾತ್ವಿಕವಾಗಿರುತ್ತವೆ. ಅವುಗಳು ಬೇರೆ ವಿಧಗಳಾಗಿ ವ್ಯಾಖ್ಯೆಗಳಲ್ಲಿ ಕಂಡರೂ ಅವೆಲ್ಲವೂ ಒಂದೇ ಇರುತ್ತವೆ. ಈಗ ಅವುಗಳಲ್ಲಿ ಮಂತ್ರಗಳನ್ನ ಸಂಬಂಧಿಸಬೇಕು, ಅಂದರೆ ಅವುಗಳ ವರ್ತನೆಯು ಶಕ್ಯವು. ಅದು (ಡ) ವಿಧದಲ್ಲಿ ಹೇಳಲ್ಪಟ್ಟಿದೆ.

(ಡ ವಿದವು:- (೧) ಶುದ್ಧಪ್ರಸಾದ ಇದು ಬಕಾರ ಮಂತ್ರವು. ಇದು ಇಷ್ಟಲಿಂಗರೂಪವಾಗಿ ತ್ಯಾಗಾಂಗದಲ್ಲಿ ಸಂಬಂಧಪಡುತ್ತದೆ. (೨) ಸಿದ್ಧ ಪ್ರಸಾದ. ಇದು ನಕಾರಮಂತ್ರವು. ಸಿದ್ಧಪ್ರಸಾದವು. ಅದು ಪ್ರಾಣ ಲಿಂಗವಾಗಿ ಭೋಗಾಂಗದಲ್ಲಿ ಸಂಬಂಧವಾಗಿರುತ್ತದೆ. (೩) ಪ್ರಸಿದ್ಧಪ್ರಸಾದ- ಸಕಾರ ಮಂತ್ರವು ಪ್ರಸಿದ್ಧ ಪ್ರಸಾದವು. ಅದು ಭಾವಲಿಂಗವಾಗಿ ಯೋಗಾಂಗದಲ್ಲಿ ಸಂಬಂಧವು. (೪) ಅಪ್ಯಾಯನ ಪ್ರಸಾದ— ಅದು ನಕಾರ ಮಂತ್ರವು. ಆಚಾರಲಿಂಗವಾಗಿ ಭಕ್ತ್ಯಾಂಗವಾಗಿರುತ್ತದೆ. (೫) ಸಮಯ ಪ್ರಸಾದ- ಮಕಾರವೇ ಸಮಯಪ್ರಸಾದವು. ಅದು ಗುರುಲಿಂಗವಾಗಿ ಮಹೇಶ್ವರನಿಗೆ ಸಂಬಂಧವು. (೬) ಪಂಚೇಂದ್ರಿಯ ವಿರಹಿತ ಪ್ರಸಾದ- ಅದು ಶಿಕಾರವು. ಶಿವಲಿಂಗವಾಗಿ ಪ್ರಸಾದಿಯ ಅಂಗದಲ್ಲಿ ಸಂಬಂಧವು. [೭] ಅಂತಃಕರಣವಿರಹಿತ ಪ್ರಸಾದ- ಅದು ವಕಾರವು. ಅದು ಜಂಗಮಲಿಂಗವಾಗಿ ಪ್ರಾಣಲಿಂಗಿಯ ಅಂಗದಲ್ಲಿ ಸಂಬಂಧವು. [೮] ಪ್ರಸಾದಿಯ ಪ್ರಸಾದವು.- ಇದು ಯಕಾರವು. ಅದು ಪ್ರಸಾದಲಿಂಗವಾಗಿ ಶರಣನ ಅಂಗದಲ್ಲಿ ಸಂಬಂಧವು. [೯] ಸದ್ಭಾವಪ್ರಸಾದ- ಇದು ಓಂಕಾರವು. ಮಹಾಲಿಂಗವಾಗಿ ಐಕ್ಯನ ಅಂಗದಲ್ಲಿ ಸಂಬಂಧವು. [೧೦] ಸಮತಾಪ್ರಸಾದ- ಇದು ಅಕಾರವು. ನಿಃಕಲಲಿಂಗವಾಗಿ ಸ್ಥೂಲಾಂಗದಲ್ಲಿ ಸಂಬಂಧವು. [೧೧] ಜ್ಞಾನಪ್ರಸಾದವು.- ಇದು ಉಕಾರ.ವು ಶೂನ್ಯಲಿಂಗವಾಗಿ ಸೂಕ್ಷ್ಮಾಂಗದಲ್ಲಿ ಸಂಬಂಧವು.

ಹೀಗೆ ಏಕಾದಶ ಪ್ರಸಾದಗಳನ್ನು ಆಚರಿಸಿದಲ್ಲಿ ಮುಂದೆ ಮಕಾರವೇ ಚಿತ್ಕಲಾ ಪ್ರಸಾದವಾಗುತ್ತದೆ. ಅದೇ ನಿರಂಜನಲಿಂಗವು. ಅದು ಕಾರಣಾಂಗದಲ್ಲಿ ಸಂಬಂಧವು. ಪ್ರಸಾದವೆಂದರೆ ಕೇವಲ ಭೋಜನಮಾತ್ರವಲ್ಲ. ಶರಣರು ಇದರಲ್ಲಿ ಬಹು ದೀರ್ಘ ವಿಚಾರಗಳನ್ನಿಟ್ಟುಕೊಂಡಿದ್ದಾರೆ.

೨ನೆ ವರ್ಗವು- ಇದು ಮೇಲೆ ಹೇಳಿದಂತೆ ಕೇವಲ ಕ್ರಿಯಾರೂಪವಾಗಿದೆ. ಮಾರ್ಗಕ್ರಿಯೆಗೆ ಸಂಬಂಧಪಟ್ಟಿವೆ. ಅದು ಹೇಗೆಂದರೆ –

[ಅ] ವಿಧಃ [೧] ಗುರುಪ್ರಸಾದ- ಮಂತ್ರವಿಧಾನದಿಂದ ಹಸ್ತಸ್ಪರ್ಶ ಮಾಡುವದು ಗುರುಪ್ರಸಾದವು. (೨ ಲಿಂಗಪ್ರಸಾದ- ಲಿಂಗಕ್ಕೆ ಮೂರು ವೇಳೆ ಅರ್ಪಿತಮಾಡುವದು ಲಿಂಗಪ್ರಸಾದವು. [೩] ಜಂಗಮಪ್ರಸಾದ- ಲಿಂಗಪ್ರಸಾದವನ್ನು ಜಿಹ್ವೆಗೆ ಮುಟ್ಟಿಸುವದು ಜಂಗಮಪ್ರಸಾದವು. [೪] ಪ್ರಸಾದಿಯ ಪ್ರಸಾದ- ಜಂಗಮಪ್ರಸಾದವನ್ನು ಹಸ್ತಕ್ಕೆ ತರುವದು ಪ್ರಸಾದಿಯ ಪ್ರಸಾದವು. [೫] ಸಮಯಪ್ರಸಾದ- ಪ್ರಸಾದವನ್ನು ನೀಡುವದೇ ಸಮಯಪ್ರಸಾದವು. [೬] ಭೋಜ್ಯಪ್ರಸಾದ-- ಇಂಥ ಪ್ರಸಾದವನ್ನು ಸಮರಸಭಾವದಿಂದ ಸೇವನೆಗೆ ತರುವದು ಭೋಜ್ಯ ಪ್ರಸಾದವು. [೭] ಆಪ್ಯಾಯನ ಪ್ರಸಾದ- ಇಂಥ ಪ್ರಸಾದವನ್ನು ಜಿಹ್ವೆಗೆ ಮುಟ್ಟಿಸುವದು ಆಪ್ಯಾಯನಪ್ರಸಾದವು [೮] ಭಕ್ಷ್ಯಪ್ರಸಾದ- ಮೇಲ್ಕಂಡ ಪ್ರಸಾದವನ್ನು ದಂತದಿಂದ ಜಗಿಯುವದು ಭಕ್ಷ್ಯಪ್ರಸಾದವು. [೯] ಚೊಹ್ಯಪ್ರಸಾದ- ಭಕ್ಷ್ಯಪ್ರಸಾದವನ್ನು ಚಪ್ಪರಿಸುವದು ಚೋಹ್ಯಪ್ರಸಾದವು. [೧೦] ಲೇಹ್ಯಪ್ರಸಾದ- ಮುಂದೆ ಅದನ್ನು ಬಟ್ಟಲಖಂಡಿತ ಮಾಡುವದು ಲೇಹ್ಯ ಪ್ರಸಾದವು. [೧೧] ತೃಪ್ತಿ ಪ್ರಸಾದ- ಮುಂದೆ ಈ ಬಟ್ಟಲಖಂಡಿತ ಮಾಡಿದ್ದನ್ನು ಜಿಹ್ವೆಯಲ್ಲಿ ಖಂಡಿತಮಾಡುವದು ತೃಪ್ತಿಪ್ರಸಾದವು. ಈ ಪ್ರಸಾದಗಳು ಆಹಾರ ಪದಾರ್ಥಗಳನ್ನು ಅರ್ಪಿಸಿ ಭೋಜನಮಾಡುವ ರೀತಿಗಳನ್ನು ಹೇಳುತ್ತವೆ.

ಈ ಬಗೆಯ ಅರ್ಪಣಭಾವದಿಂದ ಮನುಷ್ಯನು ಪರಿಪೂರ್ಣನಾಗಿ ಶೂನ್ಯಸ್ಥಿತಿಯನ್ನು ಹೊಂದುತ್ತಾನೆ. ಇದರ ವಿವರಣೆಯು ಈ ಕೆಳಗೆ ಹೇಳಲ್ಪಟ್ಟಿದೆ. ಇದು ೩ನೆಯ ವರ್ಗವೆಂದು ಭಾವಿಸಿ ಬೇರೆಯಾಗಿ ವಿಂಗಡಿಸಿದ್ದೇವೆ. ಅದು ಹೇಗೆಂದರೆ-

೩ನೇ ವರ್ಗ:- [೧] ಪ್ರಥಮದಲ್ಲಿ- ಮಹಾದೇವನಿಗೆ ಮನವರ್ಪಿತವು. [೨] ದ್ವಿತೀಯದಲ್ಲಿ- ಮಹೇಶ್ವರನಿಗೆ ದೃಢಭಾವವು ಅರ್ಪಿತವು. [೩] ತೃತೀಯದಲ್ಲಿ- ಶಂಕರನಿಗೆ ಸಮಾಧಾನವು ಅರ್ಪಿತವು. [೪] ಚತುರ್ಥದಲ್ಲಿ- ನಿರ್ವಿಷಯದ ಅರ್ಪಣವಿದೆ. [೫] ಪಂಚಮದಲ್ಲಿ- ನಿರಿಂದ್ರಿಯದ ಅರ್ಪಿತವಿದೆ. ಷಷ್ಠಮದಲ್ಲಿ-ರೂಪವು ನಷ್ಟವಾಗುವದು ಅದು ನಿರೂಪಾರ್ಪಿ

ತವು. [೭] ಸಪ್ತಮದಲ್ಲಿ- ಆತ್ಮಾರ್ಪಿತವಾಗುವದು. [೮] ಅಷ್ಟಮದಲ್ಲಿ- ಪ್ರಸಾದದ ಅರ್ಪಿತವು. [೯] ನವಮದಲ್ಲಿ- ನಿಃಶ್ಯೂನ್ಯಾರ್ಪಿತವು. [೧೦] ದಶಮದಲ್ಲಿ- ತನ್ನ ಮರೆದು ಮಹದರ್ಪಿತವು. [೧೧] ಏಕಾದಶದಲ್ಲಿ- ಮಹಾಘನವು ತನ್ನನೇ ನುಂಗಿತ್ತು.

ಈ ಪ್ರಕಾರ ಪಾದೋದಕ ಪ್ರಸಾದಗಳ ವಿವರಣೆಗಳಿರುತ್ತವೆ. ಈ ವಿಚಾರಗಳು ಶಿವಶರಣರ ಉಕ್ತಿಗಳಲ್ಲಿ ಮಾತ್ರ ದೊರೆಯುತ್ತವೆ. ಅವು ಬಹು ಗೂಢವೂ ಉದಾತ್ತವಾದವುಗಳೂ ಇರುತ್ತವೆ. ಹಿಂದೂ ಧರ್ಮದ ಬೇರೆ ಯಾವ ಮತಗಳಲ್ಲಿಯೂ ಇಂಥ ವಿಚಾರಗಳು ದೊರೆಯಲಾರವು. ವಚನಾರ್ಥಗಳನ್ನು ಬಹು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸಿದ್ದೇವೆ. ಪ್ರಸಾದದ ಪರಿಣಾಮಗಳು ಮುಂದೆ ವಿವರಿಸಲ್ಪಟ್ಟಿವೆ.

## ಪ್ರಸಾದದ ಪರಿಣಾಮಗಳು

ಶುದ್ಧಪ್ರಸಾದವು ತನುವಿಗೆ ಸಂಬಂಧವು. ಆದ್ದರಿಂದ ಅದರಿಂದ ತನು ವಿಕಾರಗಳಳಿಯುವವು. ಸಿದ್ಧ ಪ್ರಸಾದವು ಮನಸ್ಸಿಗೆ ಸಂಬಂಧವು. ಆದ್ದರಿಂದ ಮನಸ್ಸಿನ ವಿಕಾರಗಳು ದೂರಾಗುವವು. ಪ್ರಸಿದ್ಧ ಪ್ರಸಾದವು ಕಾರಣ ದೇಹಕ್ಕೆ ಸಂಬಂಧವು ಆದ್ದರಿಂದ ಭಾವದ ಭ್ರಮೆಯು ಕೆಡುವದು. ಮುಂದೆ ಆಪ್ಯಾಯನ ಪ್ರಸಾದದಿಂದ ದುರಾಸೆಗಳು ಅಡಗುವವು. ಸಮಯ ಪ್ರಸಾದದಿಂದ ವಿಷಯಗಳು ಲಿಂಗ ವಿಷಯಗಳಾಗುವವು. ಪಂಚೇಂದ್ರಿಯ ವಿರಹಿತ ಪ್ರಸಾದದಿಂದ ಮನುಷ್ಯನ ಇಂದ್ರಿಯಗಳು ಲಿಂಗೇಂದ್ರಿಯಗಳಾಗುವವು. ಮುಂದೆ ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದದಿಂದ ಕರಣಗಳು, ಸಮತಾಪ್ರಸಾದದಿಂದ ಅಂತರಂಗದ ಒಲವುಗಳು, ಸದ್ಭಾವ ಪ್ರಸಾದದಿಂದ ಭಾವವು, ಜ್ಞಾನ ಪ್ರಸಾದದಿಂದ ಜ್ಞಾನವು, ಶುದ್ಧವಾಗುವವು. ಹೀಗೆ ಪ್ರಸಾದಿಗಳು ಸರ್ವಸಂಗ ಪರಿತ್ಯಾಗರಾಗಿ ಬಯಲಲ್ಲಿ ಬಯಲಾಗುವರು. ಇತರ ಮತಾನುಯಾಯಿಗಳು ಯಜ್ಞ ಯಾಗಾದಿ ಕರ್ಮಗಳು, ಯೋಗಾಭ್ಯಾಸ, ತಪಸ್ಸು ಮೊದಲಾದ ಕಷ್ಟವಾದ ಆಚರಣೆಗಳನ್ನು ಆಚರಿಸುವದುಂಟು. ಆದರೆ ವೀರಶೈವರು ಅಷ್ಟಾವರಣ ನಿರತರಾಗಿ ಮಂತ್ರಮೂಲಕ ಪಾದೋದಕ ಪ್ರಸಾದ ಗ್ರಾಹಕರಾಗಿ ನಿಜಸಮಾಧಿ ಅಥವಾ ಬಯಲನ್ನು ಅಥವಾ ನಿರವಯಸ್ಥಿತಿಯನ್ನು ಪಡೆಯುವರು.

## ಪಾದೋದಕ ಪ್ರಸಾದಗಳ ಪರಸ್ಪರ ಸಂಬಂಧ

ಮೊದಲು ಪಾದೋದಕವು, ಆ ಮೇಲೆ ಪ್ರಸಾದ, ಈ ಪ್ರಕಾರ ಅಷ್ಟಾವರಣಗಳಲ್ಲಿ ಕ್ರಮವಿರುತ್ತದೆ. ಮೊದಲು ಪ್ರಸಾದವು ಆ ಮೇಲೆ ಪಾದೋದಕವೆಂದು ಭಾವಿಸುವದು ತಪ್ಪು ಇರುತ್ತದೆ. ಪ್ರಸಾದವು ಪಾದೋದಕಕ್ಕಿಂತಲೂ ಸೂಕ್ಷ್ಮವಾದುದು ಮತ್ತು ವ್ಯಾಪಕ ಭಾವವುಳ್ಳದ್ದು. ಪಾದೋದಕವು ಮನುಷ್ಯನ ಬಹಿರಂಗ ಮತ್ತು ಅಂತರಂಗಗಳನ್ನು ಶುದ್ಧ ಗೊಳಿಸುತ್ತದೆ. ಆದರೆ ಪ್ರಸಾದವು ಮನುಷ್ಯನ ಯಾವತ್ತು ಬಾಹ್ಯ ಮತ್ತು ಅಂತರಂಗ ಕ್ರಿಯೆಗಳ ಮೇಲೆ ಪರಿಣಾಮ ಮಾಡುತ್ತಿದೆ. ಅವನ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳು, ಅವನ ಇಂದ್ರಿಯಗಳು, ಕರಣಗಳು, ಭಾವ, ಜ್ಞಾನಗಳು ಇವುಗಳ ಮೇಲೆಲ್ಲ ಆದು ತನ್ನ ಪರಿಣಾಮವನ್ನು ಮಾಡುತ್ತಿದೆ.

## ಷಡ್ವಿಧಲಿಂಗಗಳಿಗೆ ಪಾದೋದಕ ಪ್ರಸಾದಗಳ ಸಂಬಂಧ

ಸಂಬಂಧಗಳು ಹೇಗೆಂದರೆ:— (ಅ) ಪಾದೋದಕ ಸಂಬಂಧ –

(೧) ಸ್ಪರ್ಶನೋದಕ ಅವಧಾನೋದಕಗಳು ಅನುಕ್ರಮವಾಗಿ ಆಚಾರ ಲಿಂಗ ಗುರುಲಿಂಗಗಳಿಗೆ ಸಂಬಂಧವು. ಇವು ಗುರುಪಾದೋದಕವಾಗಿ ಇಷ್ಟಲಿಂಗಾರ್ಪಿತವಾಗುತ್ತವೆ. ಇದು ಅನಾದಿ ಗುರು ಸ್ವರೂಪವು.

(೨)ಆಪ್ಯಾಯನೋದಕ, ಹಸ್ತೋದಕಗಳು ಅನುಕ್ರಮವಾಗಿ ಶಿವಲಿಂಗ ಜಂಗಮಲಿಂಗಗಳಿಗೆ ಸಂಬಂಧವು. ಇವು ಲಿಂಗ ಪಾದೋದಕವಾಗಿ ಪ್ರಾಣ ಲಿಂಗಾರ್ಪಿತವಾಗುತ್ತವೆ. ಇದು ಅನಾದಿ ಲಿಂಗ ಸ್ವರೂಪವು.

(೩) ಪರಿಣಾಮೋದಕ ನಿರ್ನಾಮೋದಕಗಳು ಅನುಕ್ರಮವಾಗಿ ಪ್ರಸಾದಲಿಂಗ ಮಹಾಲಿಂಗಗಳಿಗೆ ಸಂಬಂಧವು. ಇವು ಜಂಗಮ ಪಾದೋದಕವಾಗಿ ಭಾವಲಿಂಗಾರ್ಪಿತವಾಗುತ್ತವೆ. ಇದು ಅನಾದಿ ಜಂಗಮ ಸ್ವರೂಪವು. ಕಡೆಗೆ ಉಳಿಯುವ ಸತ್ಯೋದಕವು ನಿಃಕಲವು ಪರತತ್ವಕ್ಕೆ ಸಮರ್ಪಣೆಯಾಗುತ್ತಿದೆ. ಇದು ಅನಾದಿ ಶರಣ ಪ್ರಸನ್ನ ಮೂರ್ತಿಯು.

(ಬ) ಪ್ರಸಾದ ಸಂಬಂಧಃ— (೧) ಆಪ್ಯಾಯನ ಪ್ರಸಾದ ಮತ್ತು ಸಮಯ ಪ್ರಸಾದಗಳು ಗುರು ಪ್ರಸಾದವೆನಿಸಿಕೊಂಡು ಆಚಾರ ಲಿಂಗ ಗುರುಲಿಂಗಗಳಿಗೆ ಸಂಬಂಧವು - ಇವು ಸುಚಿತ್ತ ಹಸ್ತ, ಸುಬುದ್ಧಿ ಹಸ್ತ, ನಿರುಪಾಧಿ ಹಸ್ತ, ಇವುಗಳ ಮೂಲಕ ಇಷ್ಟಲಿಂಗದಲ್ಲಿ ಸಂಬಂಧಿಸುತ್ತವೆ.

ಇದು ಅನಾದಿ ಭಕ್ತ ಸ್ವರೂಪವು. (೨) ಪಂಚೇಂದ್ರಿಯ ವಿರಹಿತ ಪ್ರಸಾದ, ಕರಣಚತುಷ್ಟಯ ವಿರಹಿತ ಪ್ರಸಾದಗಳು ಲಿಂಗಪ್ರಸಾದವೆನಿಸಿಕೊಂಡು ಶಿವಲಿಂಗ, ಜಂಗಮಲಿಂಗಗಳಿಗೆ ಸಂಬಂಧವು. ಇವು ನಿರಹಂಕಾರ ಹಸ್ತ, ಸುಮನ ಹಸ್ತ, ನಿರಾಲಂಬ ಹಸ್ತಗಳ ಮೂಲಕ ಪ್ರಾಣಲಿಂಗದಲ್ಲಿ ಸಂಬಂಧಿಸುತ್ತವೆ. ಇದು ಅನಾದಿ ಶೂನ್ಯ ಲಿಂಗ ಸ್ವರೂಪವು. (೩) ಸಮತಾ ಪ್ರಸಾದ, ಪ್ರಸಾದಿಯ ಪ್ರಸಾದಗಳು ಜಂಗಮ ಪ್ರಸಾದವೆನಿಸಿಕೊಂಡು ಪ್ರಸಾದಲಿಂಗ ಮಹಾಲಿಂಗಗಳಿಗೆ ಸಂಬಂಧವು. ಇವು ಸುಜ್ಞಾನ ಹಸ್ತ, ಸದ್ಭಾವ ಹಸ್ತ, ನಿಃಪ್ರಪಂಚ ಹಸ್ತ, ಇವುಗಳ ಮೂಲಕ ಭಾವಲಿಂಗದಲ್ಲಿ ಸಂಬಂಧಿಸುತ್ತವೆ. ಇದು ಅನಾದಿ ನಿರಂಜನ ಜಂಗಮ ಸ್ವರೂಪ (೪) ಆ ಮೇಲೆ ಸದ್ಭಾವಪ್ರಸಾದ ಮತ್ತು ಜ್ಞಾನ ಪ್ರಸಾದಗಳು ಪರತತ್ವ ಜ್ಯೋತಿರ್ಮಯ ಲಿಂಗದೇವನಿಗೆ ನಿಜಾನಂದ ಹಸ್ತದಿಂದ ಸಮರ್ಪಿತವಾಗಲು ಅದೇ ಅನಾದಿ ಪರಿಪೂರ್ಣನಿಜವಸ್ತುವೆಂದು ಹೇಳಲ್ಪಡುತ್ತಿದೆ. ಈ ವಿವರಣೆಯಲ್ಲಿ ಗುರು ಪ್ರಸಾದ, ಲಿಂಗ ಪ್ರಸಾದ, ಜಂಗಮ ಪ್ರಸಾದಗಳೂ, ಗುರು ಪಾದೋದಕ, ಲಿಂಗ ಪಾದೋದಕ, ಜಂಗಮ ಪಾದೋದಕಗಳೂ, ಇವುಗಳನ್ನು ವಚನಕಾರರು ವಿವರಿಸಿಲ್ಲ. ಯಾಕಂದರೆ ಉಳಿದ ಪಾದೋದಕ ಪ್ರಸಾದಗಳ ಆಚರಣೆಯ ಮೂಲಕ ಈ ಎರಡೂ ತ್ರಿವಿಧಗಳು ಆಚರಿಸುವವನಲ್ಲಿ ತಾವಾಗಿಯೇ ಒಡಮೂಡ ಹತ್ತುತ್ತವೆಂದು ಭಾವಿಸಿರಬೇಕೆಂದು ತೋರುತ್ತದೆ.

## ಇಷ್ಟಲಿಂಗಕ್ಕೆ ಪಾದೋದಕ ಪ್ರಸಾದಗಳ ಸಂಬಂಧ

ಈ ಸಂಬಂಧವು ಏಕೋತ್ತರ ಶತಸ್ಥಲದ ಮೂಲಕ ಇರುತ್ತದೆ. ಈ ಸ್ಥಲಗಳಲ್ಲಿ ೫೭ ಲಿಂಗಸ್ಥಲಗಳಿವೆ. ಅವುಗಳಲ್ಲಿ ಮೊದಲಿನ ೫೪ ಸ್ಥಲಗಳು ಆಚಾರಾದಿ ಆರು ಲಿಂಗಗಳಿಗೆ ಸಂಬಂಧಿಸುತ್ತವೆ. ಆ ಮೇಲೆ ಕಡೆಗೆ ಭಾವಾಭಾವನಷ್ಟಸ್ಥಲ, ಸ್ವಯಚರಪರವರಿಯದಸ್ಥಲ ಮತ್ತು ಜ್ಞಾನಶೂನ್ಯಸ್ಥಲ ಇವು ಉಳಿಯುತ್ತವೆ. ಇವು ಅನುಕ್ರಮವಾಗಿ ಜ್ಞಾನಗುರು, ಜ್ಞಾನಲಿಂಗ, ಜ್ಞಾನಜಂಗಮಗಳೆಂದು ತಿಳಿಯಲ್ಪಡುತ್ತವೆ. ಇವುಗಳ ಮೂಲಕ ಇಷ್ಟಲಿಂಗದ ಮೂರು ಭಾಗಗಳಲ್ಲಿ ಪಾದೋದಕ ಪ್ರಸಾದಗಳ ಸಂಬಂಧವು ಉಂಟಾಗುತ್ತದೆ. ಆದ್ದರಿಂದ ಈ ಪಾದೋದಕ ಪ್ರಸಾದಗಳಲ್ಲಿ ೩ ವಿಧಗಳು ಕಲ್ಪಿಸಲ್ಪಟ್ಟಿವೆ.

(ಅ) ಭಾವಾಭಾವನಷ್ಟಸ್ಥಲವು. ಇದು ಗುರುಸ್ವರೂಪವು. ಅದು ಕ್ರಿಯಾಗುರು ಲಿಂಗಜಂಗಮ ಸ್ವರೂಪದ ಇಷ್ಟಮಹಾಲಿಂಗದ ಅಧೋ ಪೀಠಿಕೆಗೆ ಸಂಬಂಧಪಡುತ್ತದೆ. ಅಲ್ಲಿ ಸ್ಪರ್ಶನೋದಕ ಮತ್ತು ಅವಧಾನೋದಕಗಳಿವೆ. ಅವು ಗುರುಪಾದೋದಕವೆನಿಸಿಕೊಳ್ಳುತ್ತವೆ. ಹಾಗೆಯೇ ಅಲ್ಲಿ ಆಪ್ಯಾಯನ ಪ್ರಸಾದ ಮತ್ತು ಸಮಯ ಪ್ರಸಾದಗಳಿರುತ್ತವೆ. ಅವು ಗುರುಪ್ರಸಾದವೆನಿಸಿಕೊಳ್ಳುತ್ತವೆ. ಹೀಗೆ ಪಾದೋದಕಪ್ರಸಾದಗಳು ಅಳವಡಲು ಈ ರೀತಿ ಆಚರಿಸುವವರು ಆದಿಪ್ರಸಾದಿ ಮತ್ತು ನಿಚ್ಚಪ್ರಸಾದಿಗಳೆಂದು ಹೇಳಲ್ಪಡುತ್ತಾರೆ.

(ಬ) ಸ್ವಯಚರಪರವರಿಯದ ಸ್ಥಲವು. ಇದು ಲಿಂಗಸ್ವರೂಪವು. ಜ್ಞಾನ ಗುರುಲಿಂಗಜಂಗಮ ಸ್ವರೂಪದ ಇಷ್ಟಮಹಾಲಿಂಗದ ಗೋಳಕದಲ್ಲಿ ಅದು ಸಂಬಂಧಪಟ್ಟಿರುತ್ತದೆ. ಅಲ್ಲಿ ಅಪ್ಯಾಯನೋದಕ ಮತ್ತು ಹಸ್ತೋದಕಗಳು ಇರುತ್ತವೆ. ಅವುಗಳೇ ಲಿಂಗಪಾದೋದಕಗಳು. ಹಾಗೆಯೇ ಅಲ್ಲಿ ಪಂಚೇಂದ್ರಿಯ ವಿರಹಿತ ಪ್ರಸಾದ ಮತ್ತು ಕರಣಚತುಷ್ಟಯವಿರಹಿತ ಪ್ರಸಾದಗಳು ನೆಲಸಿರುತ್ತವೆ. ಅವು ಲಿಂಗಪ್ರಸಾದಗಳು. ಅವು ಇಷ್ಟಲಿಂಗದ ಗೋಳಕದಲ್ಲಿ ಅಳವಡಲು, ಅಂತ್ಯಪ್ರಸಾದಿ ಮತ್ತು ಸಮಯ ಪ್ರಸಾದಿಗಳೆಂದು ಹೀಗೆ ಆಚರಿಸುವವರು ಹೇಳಲ್ಪಡುತ್ತಾರೆ.

(ಕ) ಜ್ಞಾನಶೂನ್ಯಸ್ಥಲ. ಇದು ಮೂಲ ಜಂಗಮಸ್ವರೂಪವಾಗಿದೆ. ಅದು ಮಹಾಜ್ಞಾನ ಗುರುಲಿಂಗಜಂಗಮ ಸ್ವರೂಪವಾದ ಇಷ್ಟ ಮಹಾಲಿಂಗದ ಜಲರೇಖೆಯನುಳ್ಳ ಪಾನಿಬಟ್ಟಲಕ್ಕೆ ಸಂಬಂಧಪಡುತ್ತಿದೆ. ಅಲ್ಲಿ ಪರಿಣಾಮೋದಕ ನಿರ್ನಾಮೋದಕ ಮತ್ತು ಸತ್ಯೋದಕಗಳು ನೆಲಸಿರುತ್ತಿವೆ. ಅವುಗಳೇ ಜಂಗಮಪಾದೋದಕಗಳು. ಹಾಗೆಯೇ ಅಲ್ಲಿ ಸಮತಾ ಪ್ರಸಾದ, ಪ್ರಸಾದಿಯ ಪ್ರಸಾದ, ಸದ್ಭಾವ ಪ್ರಸಾದ, ಮತ್ತು ಜ್ಞಾನ ಪ್ರಸಾದಗಳು ಸಂಬಂಧಪಡುತ್ತವೆ. ಅವೇ ಜಂಗಮಪ್ರಸಾದಗಳು. ಹೀಗೆ ಆಚರಿಸುವವರು ಸೇವ್ಯಪ್ರಸಾದಿ ಮತ್ತು ಅಚ್ಚಪ್ರಸಾದಿಗಳೆಂದು ಹೇಳಲ್ಪಡುತ್ತಾರೆ.

ಹೀಗೆ ಸ್ವೀಕರಿಸಿದ ಪಾದೋದಕವೇ ನೇತ್ರದಲ್ಲಿ ಕರುಣಜಲ, ವಾಕ್ಕಿನಲ್ಲಿ ವಿನಯಜಲ, ಅಂತರಂಗದಲ್ಲಿ ಸಮತಾಜಲವಾಗಿರುತ್ತದೆ. ಈ ತ್ರಿವಿಧೋದಕವು ತಿಳಿದುಪ್ಪವು ಹೆರೆದುಪ್ಪವಾದಂತೆ ಇಷ್ಟ ಮಹಾಲಿಂಗಕ್ಕೆ ತ್ಯಾಗಾಂ

ಗವಾದ ಶುದ್ಧಪ್ರಸಾದವಾಗುವದು. ಪ್ರಾಣಲಿಂಗಕ್ಕೆ ಭೋಗಾಂಗವಾದ ಸಿದ್ಧಪ್ರಸಾದವಾಗುವದು. ಮತ್ತು ಭಾವಲಿಂಗಕ್ಕೆ ಯೋಗಾಂಗವಾದ ಪ್ರಸಿದ್ಧ ಪ್ರಸಾದವಾಗುವದು.

ಈ ತ್ರಿವಿಧಪ್ರಸಾದ ಪಾದೋದಕಗಳು ಶರಣನಿಗೆ ಶುದ್ಧಪ್ರಸಾದವಾಗಿ ಅವನ ಜಿಹ್ವೆಯಲ್ಲಿ ಅಚ್ಚಪ್ರಸಾದವಾಗುತ್ತವೆ ಸಿದ್ಧಪ್ರಸಾದವಾಗಿ ಅವನ ಪಾವದಲ್ಲಿ ಸಮಯಪ್ರಸಾದವಾಗುತ್ತವೆ. ಇವೆಲ್ಲವು ಶ್ರೀಪ್ರಭುದೇವರ ವಿಚಾರಗಳು.

## ಚಕ್ರಗಳಿಗೆ ಪಾದೋದಕ ಪ್ರಸಾದಗಳ ಸಂಬಂಧವು.

ಪಾದೋದಕ ಪ್ರಸಾದಗಳು ಭಕ್ತನ ಚಕ್ರಗಳ ಮೇಲೆಯೂ ಪರಿಣಾಮ ಮಾಡುತ್ತವೆ. ಅವುಗಳಲ್ಲಿ ಬೇರೆ ಬೇರೆ ಮಂತ್ರಸ್ವರೂಪವುಳ್ಳ ಲಿಂಗಗಳು ನೆಲಸಿದ್ದು, ಆಯಾ ಪಾದೋದಕ ಪ್ರಸಾದ ಸೇವನೆಯ ಮೂಲಕ ಆ ಲಿಂಗಗಳಲ್ಲಿ ಮತ್ತು ಆ ಲಿಂಗಗಳಿದ್ದ ಚಕ್ರಗಳಲ್ಲಿ ಚೈತನ್ಯವು ಉಂಟಾಗುತ್ತದೆ. ಇದು ಭಕ್ತನ ಪ್ರಗತಿಗೆ ಕಾರಣವಾಗುತ್ತದೆ. ಈ ಪ್ರಗತಿಯು ಭಕ್ತನ ಕಾಯ, ಮನ, ಭಾವಗಳಲ್ಲಿ ಹಾಗೆಯೇ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೆ ಈ ಚಕ್ರಗಳು, ಮುಂದೆ ಈ ಚಕ್ರಗಳ ತರುವಾಯ ಇರುವ ಬ್ರಹ್ಮಚಕ್ರ ಮತ್ತು ಶಿಖಾಚಕ್ರ, ಇವುಗಳಲ್ಲೆಲ್ಲ ಜಾಗ್ರತೆಯು ಉತ್ಪನ್ನವಾಗಲು ಎಲ್ಲಕ್ಕೂ ಕಡೆಯದಾದ ಪಶ್ಚಿಮಚಕ್ರದಲ್ಲಿಯೂ ಲಿಂಗದ ಕಳೆಯು ಪೂರ್ಣತೆಯನ್ನು ಹೊಂದಲು ಅದೇ ಲಿಂಗಾಂಗ ಸಾಮರಸ್ಯವು. ಈ ಪೂರ್ಣತೆಯು ಗುರುಲಿಂಗ ಜಂಗಮದ ತಿಳುವಳಿಕೆಯನ್ನುಂಟುಮಾಡಿಕೊಂಡು ಆಚರಿಸಿದ ಪಾದೋದಕ ಪ್ರಸಾದಗಳ ಮೂಲಕವೇ ಉಂಟಾಗುತ್ತದೆ. ಈ ವಿವರವು ಹೇಗೆಂದರೆ:-

(೧) ಕಾಯದ ಮಧ್ಯದಲ್ಲಿ ಇಷ್ಟಲಿಂಗ ಮಹಾಮಂತ್ರ, ಚಿದ್ವಿಭೂತಿ, ಚಿದ್‌ರು ದ್ರಾಕ್ಷಿಗಳು ನೆಲಸಿದ್ದು, ಇಲ್ಲಿ ದೀಕ್ಷಾಪಾದೋದಕ ಮತ್ತು ಶುದ್ಧಪ್ರಸಾದಗಳಿರುತ್ತವೆ. (೨) ಮನದ ಮಧ್ಯದಲ್ಲಿ ಪ್ರಾಣಲಿಂಗ ಸಪ್ತಕೋಟಿ ಮಹಾಮಂತ್ರವಿದ್ದು, ಇಲ್ಲಿ ಶಿಕ್ಷಾಪಾದೋದಕ ಮತ್ತು ಸಿದ್ಧಪ್ರಸಾದಗಳು ಸಂಬಂಧಪಡುತ್ತವೆ. ಇವುಗಳ ಮೂಲಕವೇ ಮನಸ್ಸು ಪೂರ್ಣತೆಯನ್ನು ಹೊಂದುತ್ತದೆ. (೩) ಭಾವದ ಮಧ್ಯದಲ್ಲಿ ಭಾವ ಲಿಂಗ

ಅಗಣಿತ ಮಂತ್ರವಿದ್ದು ಇಲ್ಲಿ ಜ್ಞಾನಪಾದೋದಕ ಮತ್ತು ಪ್ರಸಿದ್ಧಪ್ರಸಾದಗಳು ಸಂಬಂಧಪಡುತ್ತವೆ. ಇವುಗಳ ಮೂಲಕವೇ ಭಾವವು ಪೂರ್ಣತೆಯನ್ನು ಹೊಂದುತ್ತದೆ.

ಆದರೆ ಈ ಪ್ರಗತಿಯೊಡನೆ ಎಲ್ಲ ಚಕ್ರಗಳಲ್ಲಿ ಜಾಗ್ರತಿಯು ಉಂಟಾದಲ್ಲಿ ಅವೆಲ್ಲವುಗಳಲ್ಲಿ ಪರಸ್ಪರತೆಯುಂಟಾಗಿ ಎಲ್ಲವೂ ಸ್ಥಿರಪಡುತ್ತ ಹೋಗುತ್ತವೆ. ಈ ಜಾಗ್ರತಿಯು ಆಯಾ ಮಂತ್ರಧ್ಯಾನಪೂರ್ವಕವಾಗಿ ಆಯಾ ಲಿಂಗಗಳಲ್ಲಿ ಮತ್ತು ಚಕ್ರಗಳಲ್ಲಿ ಉಂಟಾಗತಕ್ಕದ್ದು. ಈ ಕಾರ್ಯವು ಆಯಾ ಪಾದೋದಕ ಪ್ರಸಾದಗಳ ಮೂಲಕ ಜರಗುವದು. ಅದು ಹೇಗೆಂದರೆ-

(೪) ಪಂಚಾಚಾರ ಮೂರ್ತಿಯಾದ ಆಚಾರಲಿಂಗ ಮಂತ್ರವು ಆಧಾರ ಚಕ್ರಕ್ಕೆ ಸಂಬಂಧಿಸಿದ್ದು ಅಲ್ಲಿ ಸ್ಪರ್ಶನೋದಕ ಮತ್ತು ಆಪ್ಯಾಯನ ಪ್ರಸಾದಗಳು ಪರಿಣಾಮ ಮಾಡುತ್ತವೆ. (೫) ಮಂತ್ರಮೂರ್ತಿಯಾದ ಗುರುಲಿಂಗ ಮಂತ್ರವು ಸ್ವಾಧಿಷ್ಠಾನ ಚಕ್ರಕ್ಕೆ ಸಂಬಂಧವಾಗಿದ್ದು ಅಲ್ಲಿ ಅವಧಾನೋದಕ ಮತ್ತು ಸಮಯಪ್ರಸಾದಗಳು ಪರಿಣಾಮಮಾಡುತ್ತವೆ. (೬) ನಿರೀಕ್ಷಣ ಮೂರ್ತಿಯಾದ ಶಿವಲಿಂಗಮಂತ್ರವು ಮಣಿಪೂರಕ ಚಕ್ರಕ್ಕೆ ಸಂಬಂಧವಾಗಿದ್ದು ಅಲ್ಲಿ ಆಪ್ಯಾಯನೋದಕ ಮತ್ತು ಪ್ರಸಾದಿಯ ಪ್ರಸಾದಗಳು ಪರಿಣಾಮಮಾಡುತ್ತವೆ. (೭) ಯಜನ ಸ್ವರೂಪವಾದ ಜಂಗಮಲಿಂಗಮಂತ್ರವು ಅನಾಹತ ಚಕ್ರಕ್ಕೆ ಸಂಬಂಧವಾಗಿದ್ದು ಅಲ್ಲಿ ಹಸ್ತೋದಕ ಮತ್ತು ಪಂಚೇಂದ್ರಿಯವಿರಹಿತ ಪ್ರಸಾದಗಳು ಪರಿಣಾಮ ಮಾಡುತ್ತವೆ. (೮) ಈಳನ ಸ್ವರೂಪವಾದ ಪ್ರಸಾದಲಿಂಗಮಂತ್ರವು ವಿಶುದ್ಧಿ ಚಕ್ರಕ್ಕೆ ಸಂಬಂಧವಾಗಿದ್ದು ಅಲ್ಲಿ ಪರಿಣಾಮೋದಕ ಮತ್ತು ಕರಣ ಚತುಷ್ಟಯವಿರಹಿತ ಪ್ರಸಾದಗಳು ಪರಿಣಾಮಮಾಡುತ್ತವೆ. (೯) ವೇಧಾಸ್ವರೂಪವಾದ ಮಹಾಲಿಂಗಮಂತ್ರವು ಆಜ್ಞಾಚಕ್ರಕ್ಕೆ ಸಂಬಂಧವಾಗಿದ್ದು ಅಲ್ಲಿ ನಿರ್ನಾಮೋದಕ ಮತ್ತು ಸಮತಾ ಪ್ರಸಾದಗಳು ಪರಿಣಾಮಮಾಡುತ್ತವೆ.

ಮೇಲೆ ಹೇಳಿದವುಗಳು ಕೆಳಗಿನ ಆರುಚಕ್ರಗಳು. ಇವುಗಳ ಮುಂದೆ ಬ್ರಹ್ಮಚಕ್ರ, ಶಿಖಾಚಕ್ರ ಮತ್ತು ಕಡೆಗೆ ಪಶ್ಚಿಮ ಚಕ್ರಗಳು ಇವೆ. ಅಲ್ಲಿಯೂ ಕೂಡ ಮಂತ್ರಗಳೂ ಪಾದೋದಕ ಪ್ರಸಾದಗಳೂ ಸಂಬಂಧಪಡುತ್ತವೆ. ಅದು ಹೇಗೆಂದರೆ—

(೧೦) ಬ್ರಹ್ಮಚಕ್ರಕ್ಕೆ ನಿರಾಲಂಬಮೂರ್ತಿ ನಿಃಕಲಲಿಂಗ ಮಂತ್ರವು ಸಂಬಂಧಪಡುತ್ತಿದ್ದು ಅಲ್ಲಿ ಸತ್ಯೋದಕ ಮತ್ತು ಸದ್ಭಾವಪ್ರಸಾದಗಳು ಪರಿಣಾಮಮಾಡುತ್ತವೆ. (೧೧) ಶಿಖಾಚಕ್ರಕ್ಕೆ ಪರಿಪೂರ್ಣಾನಂದ ನಿಃಪ್ರಪಂಚ ಮೂರ್ತಿಶೂನ್ಯ ನಿರಂಜನ ಲಿಂಗಮಂತ್ರವಿದ್ದು ಅಲ್ಲಿ ಕರುಣಜಲ, ವಿನಯಜಲ, ಸಮತಾಜಲಗಳು ಹಾಗೂ ಚಿತ್ಕಲಾಪ್ರಸಾದ, ನಿಜಪ್ರಸಾದ, ಚಿದ್ರೂಪಪ್ರಸಾದಗಳು ಸಂಬಂಧಪಡುತ್ತವೆ. (೧೨) ಇವುಗಳೇ ಪಶ್ಚಿಮ ಚಕ್ರದಲ್ಲಿಯೂ ಸಂಬಂಧಪಡುತ್ತವೆ.

ಈ ವಿಧದ ಆಚರಣೆಯಿಂದ ಭಕ್ತನ ಸರ್ವಾಂಗವೆಲ್ಲ ಪಾದೋದಕ ಪ್ರಸಾದಮಯ, ಲಿಂಗಮಯ, ಮಂತ್ರಮಯವಾಗುತ್ತದೆಂದು ತಿಳಿಯುವದು.

## ಪ್ರಸಾದಿಕರು.

ಆವುದೋ ಒಂದು ಕಾರಣದಿಂದ ಸಂಸಾರದಲ್ಲಿ ಹೇಯಬುದ್ಧಿಯು ಉತ್ಪನ್ನವಾಗಲು ಪುನರ್ದೀಕ್ಷೆಯನ್ನು ಹೊಂದಿ ಆಹಾರ ಗ್ರಹಣದ ವಿಷಯವಾಗಿ ವಿಶೇಷ ನಿರ್ಬಂಧಗಳನ್ನಿಟ್ಟುಕೊಂಡು ಆಚರಿಸುವವರು ಪ್ರಸಾದಿಕರೆಂದು ರೂಢಿಯಲ್ಲಿ ಹೇಳುವದುಂಟು. ಇವರು ಪಾಲ್ಕುರಿಕೆ ಸೋಮನಾಥ್ಯರು ವಿವರಿಸಿದ ೬೪ ಶೀಲಗಳಲ್ಲಿ ಕೆಲವುಗಳನ್ನು ಸಹ ಆಚರಿಸುತ್ತಿರಬಹುದು. ಆದರೆ ಶಿವಶರಣರ ನಡೆಯು ಮೇರೆಗೆ ಇವರು ಪ್ರಸಾದಿಕರೆಂದು ಹೇಳಲು ಬರಲಾರದು. ಪ್ರಸಾದಿಕರು ಷಟ್‌ಸ್ಥಲ, ಏಕೋತ್ತರ ಶತಸ್ಥಲಗಳ ಮರ್ಮವನ್ನು ಅರಿತವರಾಗಿರಬೇಕು. ಇದನ್ನರಿತುಕೊಂಡು ದಶವಿಧ ಪಾದೋದಕ, ಏಕಾದಶ ಪ್ರಸಾದಗಳನ್ನು ಆಚರಿಸಬೇಕು. ಇಂಥ ಆಚರಣೆಯಿಂದ ಅವರ ತನು, ಮನ, ಭಾವಗಳು, ಚಕ್ರಗಳು, ಶಕ್ತಿಗಳು ಇಂದ್ರಿಯಗಳು, ಕರಣಗಳು ಇವುಗಳಲ್ಲೆಲ್ಲ ಲಿಂಗದ ಕಳೆಯು ಬೆಳಗ ಹತ್ತುವದು. ಹೀಗೆ ಆಚರಿಸುವವರೇ ಪ್ರಸಾದಿಕರು.

---

# ವಿಭೂತಿ.

## ವಿಭೂತಿಯ ಮರ್ಮವು.

(೧) ಚಂದ್ರಮನ ಕಾಂಬುವದಕ್ಕೆ ಆ ಚಂದ್ರಮನಿಂದೊದಗಿದ ಬೆಳಗೇ ಮುಖ್ಯ. ಜ್ಯೋತಿಯ ಕಾಂಬುವದಕ್ಕೆ ಆ ಜ್ಯೋತಿಯಿಂದೊದಗಿದ ಬೆಳಗೇ ಮುಖ್ಯ. ರತ್ನವ ಕಾಂಬುವದಕ್ಕೆ ಆ ರತ್ನದಿಂದೊದಗಿದ ಕಳಾ ಲಹರಿಯೇ ಮುಖ್ಯ. ನಮ್ಮ ಗುಹೇಶ್ವರಲಿಂಗವ ಕಾಂಬುವದಕ್ಕೆ ಆ ಮಹಾ ವಸ್ತುವಿನ ದಿವ್ಯತೇಜದಿಂದೊದಗಿದ ಭಸಿತವೇ ಮುಖ್ಯ ಕಾಣಿರಣ್ಣಾ.

(೨) ಕಾಲನ ಸುಟ್ಟು ಭಸ್ಮವ ಧರಿಸಿದೆನಯ್ಯಾ ಬಸವಣ್ಣ ನಿನ್ನಿಂದ. ಕಾಮನ ಸುಟ್ಟು ಭಸ್ಮವ ಧರಿಸಿದೆನಯ್ಯಾ ಬಸವಣ್ಣ ನಿನ್ನಿಂದ. ತನುತ್ರಯಂಗ ಳೆಂಬ ತ್ರಿಪುರವ ಚಿತ್‌ಶಿಖಿ ಎಂಬ ಜ್ಞಾನಾಗ್ನಿಯಿಂದ ದಹಿಸಿ ಭಸ್ಮವ ಧರಿಸಿದೆನಯ್ಯ ಬಸವಣ್ಣ. ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮ ತ್ರಯಂಗಳ ದಹಿಸಿ ಭಸ್ಮವ ಧರಿಸಿದೆನಯ್ಯ ಬಸವಣ್ಣನಿನ್ನಿಂದ. ಸತ್ವರಜ ತಮಂಗಳ ಸುಟ್ಟುರುಹಿದ ಭಸ್ಮವ ಧರಿಸಿದೆನಯ್ಯಾ ಬಸವಣ್ಣನಿನ್ನಿಂದ. ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳ ದಹಿಸಿ ಭಸ್ಮವ ಧರಿಸಿದೆನಯ್ಯ ಬಸವಣ್ಣನಿನ್ನಿಂದ. ಸ್ವರ್ಗಮರ್ತ್ಯ ಪಾತಾಳಕ್ಕೆ ಆಧಾರಸ್ಥಾನವೇ ಚಿತ್ತು. ಆ ಚಿತ್‌ಸ್ವರೂಪು ಬಸವಣ್ಣ. ಇದುಕಾರಣ ಚಿದ್ವಿಭೂತಿಯನೆ ಸದಾ ಧರಿಸಿ ಶುದ್ಧ ಚಿದ್ರೂಪವಾಗಿರ್ದೆನು ನೋಡಾ ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ.

(೩) "ಅನಾದಿ ಶಾಶ್ವತಂ ನಿತ್ಯಂ ಚೈತನ್ಯಂ ಚಿತ್‌ಸ್ವರೂಪಕಂ। ಚಿದಂಗಂ ವೃಷಭಾಕಾರಂ ಚಿದ್ಭಸ್ಮಂ ಲಿಂಗಧಾರಣಂ। ಪ್ರಥಮಂ ಗೂಢಂ ನಿರ್ನಾಮಂ ದ್ವಿತೀಯಂ ಚಿತ್‌ಸ್ವರೂಪಕಂ ತೃತೀಯಂ। ಚಿದ್ವಿಲಾಸಂ ಚತುರ್ಥಂ ಭಸ್ಮಧಾರಣಂ ಆಪಾದಾಮಸ್ತಕಾದ್ಯಂ ಚ ರೋಮರೋಮ ಭವೇತ್ ಶಿವಂ। ಸ್ವಕಾಯಮುಚ್ಯತೆಲಿಂಗಂ। ವಿಭೂತಿ ಧೂಳನಾದ್ಭವೇತ್" ಎಂದುದಾಗಿ ಅನಾದಿಶಾಶ್ವತ ನಿತ್ಯ ಪರಶಿವ ಸ್ವರೂಪು ತಾನೇ ನೋಡಾ. ಶ್ರೀವಿಭೂತಿ ಪರಶಿವನ ಪರಮ ಚೈತನ್ಯ ಚಿತ್‌ಸ್ವರೂಪು ನೋಡಾ. ವಿಭೂತಿ ಚಿದಂಗ ವೃಷಭ ನೋಡಾ. ಆ ಚಿದ್‌ಭಸ್ಮವನೇ ನೀ ಧರಿಸಿರ್ಪೆ

ಘುಯ್ಯಾ. ನೀನೊಲಿದು ಧರಿಸಿದ ಪರಮಪಾವನ ಚಿದ್ಭಸ್ಮನನೇ ನಾನು ಸರ್ವಾಂಗದಲ್ಲಿ ಧರಿಸಿ ಸರ್ವಾಂಗವೆಲ್ಲವು ಶಿವಮಯವಾಗಿರುವದು ನೋಡಾ ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ.

(೪) ಆದಿಯಾಧಾರದಲ್ಲಿ ವೇಧಿಸಿ, ಚಿದ್ಭಸ್ಮವ ಭೇದಿಸಿ ಸರ್ವಾಂಗ ದಲ್ಲಿ ಧರಿಸಲು ಭವಬಂಧನದುರಿತ ದೋಷಗಳು ಪರಿಹರವಪ್ಪದು ತಪ್ಪದು ನೋಡಾ. ಇದು ಕಾರಣ ಅಡಿಗಡಿಗೆ ಶ್ರೀವಿಭೂತಿಯನೆ ಧರಿಸಿ ಮಲತ್ರ ಯಂಗಳ ತೊಳೆದೆನು ನೋಡಾ. ಮಲತ್ರಯಂಗಳ ಪರಿಹರವಾಗಿ ಮುನ್ನ ಭವ ಬಂಧನದ ಬೇರ ಸಂಹರಿಸಿದೆ. ಜನನಮರಣಂಗಳ ಬತ್ತಿ ಬರಿಸು ವದು ನೋಡಾ ಮಹಾಲಿಂಗಗುರುಶಿವಸಿದ್ಧೇಶ್ವರಪ್ರಭುವೇ.

(೫) ಭೂಮಿ ಜಲಾಗ್ನಿ ಮರುತಾಕಾಶವೆಂಬವೆಲ್ಲ ಶ್ರೀವಿಭೂತಿಮಯ ವಾಗಿ ತೋರುತ್ತಿಪ್ಪೆಂದರಿವ ಮನ ಚಕ್ಷುರಾದಿ ಇಂದ್ರಿಯಂಗಳೆಲ್ಲವೂ ಶ್ರೀ ವಿಭೂತಿಮಯವಾಗಿ ತೋರುತ್ತಿವೆ. ಶಿವ ಶಿವಾ, ಚಂದ್ರಾದಿತ್ಯ ಸರ್ವ ದೇವತಾರೂಪವೆಲ್ಲ ಶ್ರೀವಿಭೂತಿಮಯವಾಗಿ ತೋರುತ್ತಿವೆ. ಶಿವಶಿವಾ ಈ ಪರಿಯಿಂದ ತೋರಿ ವ್ಯಾಪಕವಾಗಿ ಬೆಳಗುವ ಪರಂಜ್ಯೋತಿ ಸ್ವರೂಪ ಶ್ರೀವಿಭೂತಿ ಎಂದು ಒಲಿದು ಧರಿಸಿದವನೇ ಜೀವನ್ಮುಕ್ತನಯ್ಯ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ.

(೬) ಪರಬ್ರಹ್ಮವಪ್ಪ ಅನಾದಿವಸ್ತುವಿಂ ಚಿತ್ತು ಉತ್ಪತ್ತಿ ಆ ಚಿತ್ತು ವಸ್ತುವಾದ ಶಿವಶಕ್ತ್ಯಂಗ ಮೂರ್ತಿಯಿಂದ ಪಂಚಮುಖಗಳುತ್ಪತ್ತಿ. ಆ ಮುಖಗಳಿಂದೆ ಪಂಚಕಲೆಗಳುತ್ಪತ್ತಿ. ಆ ಕಲೆಗಳಿಂದ ಪಂಚಸಾದಾಖ್ಯಂ ಗಳುತ್ಪತ್ತಿ. ಆ ಸಾದಾಖ್ಯದಿಂದೆ ಪಂಚಧೇನುಗಳುತ್ಪತ್ತಿ. ಆ ಧೇನುಗಳಿಂದ ಪಂಚಭಸ್ಮಗಳುತ್ಪತ್ತಿ. ಆ ಪಂಚಭಸ್ಮಂಗಳು ಪಂಚಪ್ರಣವ ಪಂಚಬೀಜ ಪಂಚಪಂಚಾಕ್ಷರಿ ಮಂತ್ರಂಗಳಿಂ ಪಂಚತತ್ವಸ್ಥಾನಂಗಳಲ್ಲಿ ದರ್ಶನ ಪ್ರೋಕ್ಷಣ ಸ್ನಾನ ಉದ್ಧೂಳನ ಧಾರಣಂಗಳ ಕ್ರಮವಿಡಿದು ಅಂಗನ್ಯಾಸ ಕರ ನ್ಯಾಸಂಗಳಿಂ ಸಕಲ ಭುವನ ಬ್ರಹ್ಮಾಂಡಂಗಳಂ ಸಚರಾಚರ ಪ್ರಾಣಿಗಳ ರಕ್ಷಣ್ಯಗೋಸುಗ ಭಸ್ಮಧಾರಣಮಾಡದನೆಂದೆಂತೆಂದೊಡೆ ಸಕಲಭುವನಂಗಳ ಪಾಲಿಸಿ ರಕ್ಷಿಸಲು ಶ್ರೀವಿಭೂತಿಯ ಸರ್ವಾಂಗ ಧಾರಣದಿಂ ತಾನೇ ಶ್ರೀವಿಭೂ ತಿಯಾಗಿರ್ದ ಘನವೇದ್ಯ ಶರಣನು ನೋಡಾ ಮುದ್ದುಗುರುಬಸವಲಿಂಗಪ್ರಭುವೇ.

# ವಿಭೂತಿಧಾರಣದ ಕ್ರಮಂಗಳು.

(೧) ಅಯ್ಯ ಶ್ರೀವಿಭೂತಿಯ ಧರಿಸುವ ಭೇದವೆಂತೆಂದೊಡೆ, ಸಹಜಲಿಂಗಧಾರಕರು ಎಂಟು ಸ್ಥಾನದಲ್ಲಿ ಧರಿಸುವದಯ್ಯ. ಕ್ರಿಯಾದೀಕ್ಷಾನ್ವಿತರಾದ ಉಪಾಧಿಭಕ್ತರು ೧೬ ಸ್ಥಾನದಲ್ಲಿ ಧರಿಸುವದಯ್ಯ. ಕ್ರಿಯಾದೀಕ್ಷೆ ಮಂತ್ರದೀಕ್ಷೆಯುಕ್ತವಾದ ನಿರುಪಾಧಿಭಕ್ತರು ೩೨ ಸ್ಥಾನದಲ್ಲಿ ಧರಿಸುವದಯ್ಯ. ಕ್ರಿಯಾದೀಕ್ಷೆ ಮಂತ್ರದೀಕ್ಷೆ ವೇಧಾದೀಕ್ಷೆ ಸಚ್ಚಿದಾನಂದ ದೀಕ್ಷೆಯುಕ್ತವಾದ ನಿರ್ವಂಚಕ ಭಕ್ತರು ೪೪ ಸ್ಥಾನದಲ್ಲಿ ಧರಿಸುವದಯ್ಯ. ಕ್ರಿಯಾ ಮಂತ್ರ ವೇಧಾಸಚ್ಚಿದಾನಂದ ನಿರ್ವಾಣಪದದೀಕ್ಷಾನ್ವಿತರಾದ ಸದ್ಭಕ್ತ ಶರಣಗಣಗಳು ಆಪಾದ ಮಸ್ತಕ ಪರಿಯಂತರ ಸ್ನಾನ ಧೂಳನವ ಮಾಡಿ ೬೮ ಸ್ಥಾನದಲ್ಲಿ ಮಂತ್ರಸ್ಮರಣೆಯಿಂದ ತ್ರಿಮಂತ್ರವ ಧರಿಸುವದಯ್ಯ ಕೂಡಲ ಚನ್ನಸಂಗಮದೇವಾ.

(೨) ಅಯ್ಯ ಸಹಜಲಿಂಗಧಾರಕ ಭಕ್ತ ಉಪಾಧಿಭಕ್ತರು ಗುರು ಪಾದೋದಕದಲ್ಲಿ ಸಮ್ಮಿಶ್ರವ ಮಾಡಿ ಧರಿಸುವದಯ್ಯ. ನಿರುಪಾಧಿ ಭಕ್ತ ಸಹಜಭಕ್ತರು ಗುರುಪಾದೋದಕ ಲಿಂಗಪಾದೋದಕ ಸಮ್ಮಿಶ್ರವ ಮಾಡಿ ಷಡಕ್ಷರಮಂತ್ರ ಸ್ಥಾಪಿಸಿ ಧರಿಸುವದಯ್ಯ. ನಿರ್ವಂಚಕಭಕ್ತ ನಿರ್ವಾಣ ಶರಣಗಣಂಗಳು ಗುರುಪಾದೋದಕದಲ್ಲಿ ಘಟ್ಟಿಯ ಕಟ್ಟಿ ಲಿಂಗಪಾದೋದಕವ ಆ ಘಟ್ಟಿಗೆ ಸಮ್ಮಿಶ್ರವ ಮಾಡಿ ಆದಿಪ್ರಣವಗಳಾರು ಅನಾದಿಪ್ರಣವಗಳಾರು ಚಿತ್ಕಲಾ ಪ್ರಸಾದ ಪ್ರಣವಗಳಾರು ನಿಃಕಳಂಕ ಚಿತ್ಕಲಾ ಮೂಲ ಪ್ರಣವ ಮೂರು ಇಂತು ೨೧ ಪ್ರಣವಂಗಳಂ ಸ್ಥಾಪಿಸಿ ಜಂಗಮಾಮೂರ್ತಿಗಳು ಧರಿಸಿದ ಮೇಲೆ ಧರಿಸುವದಯ್ಯ. ಹೀಗೆ ಧರಿಸಿದವರಿಗೆ ನಿಜಕೈವಲ್ಯಪದವಾಗುವದೆಂದಾತ ನಮ್ಮ ಕೂಡಲಚನ್ನಸಂಗಮದೇವಾ

(೩ ಅಯ್ಯ ಶ್ರೀವಿಭೂತಿಯ ಸತ್ಕ್ರಿಯೆಯಿಂದ ಧರಿಸುವ ಭೇದವೆಂತೆಂದೊಡೆ ಆವ ವರ್ಣದ ಗೋವಾದರೂ ಸರಿಯೇ. ಅವಯವಂಗಳು ನ್ಯೂನವಿಲ್ಲದೆ ಬರೆಗಳ ಹಾಕದಂಥ ಆಕಳನ ತಂದು ಗೋಮಯವ ಸ್ವಚ್ಛವಾದ ಸ್ಥಲದಲ್ಲಿ ಬೆಟ್ಟಿ ಮಾಡಿ ಒಣಗಿಸಿ ಕ್ರಿಯಾಗ್ನಿಯಿಂದ ದಹಿಸಿದ ಬೂದಿಯ ಧೂಳ ಪಾದೋದಕದಲ್ಲಿ ಶೋಧಿಸಿ, ಅದರೊಳಗಣ ತಿಳಿಯ ತೆಗೆದು ಘಟ್ಟಿಯ ಮಾಡಿ, ಪೂರ್ವದಲ್ಲಿ ಹೇಳಿದ ವಚನೋಕ್ತಿಯಿಂದ ಧರಿ

# ಪ್ರಗತಿ ಮಾರ್ಗ ಜೀವನ

## ವಿದ್ಯಾರ್ಥಿಗಳಿಗೂ ವಾಚನಾಲಯಗಳಿಗೂ ಉಪಯುಕ್ತವಾದ ಗ್ರಂಥ.

ಮನುಷ್ಯನಿಗೆ ಅವನ ಜೀವನದಲ್ಲಿ ನೈತಿಕ, ಬೌದ್ಧಿಕ, ವ್ಯಾವಹಾರಿಕ ಪ್ರಗತಿಗಳಿಗೆ ಒಳ್ಳೇ ವಿಚಾರಗಳು ಅವಶ್ಯಕವಿದ್ದು, ಅಂಥ ವಿಚಾರಗೆಳನ್ನು ಒದಗಿಸಿಕೊಡುವ ಗ್ರಂಥವು ಇದಾಗಿರುತ್ತದೆ.

ಬೆಲೆ — ೦—೧೪—೦

ಹಿತಚಿಂತಕ ಪ್ರಿಂ. ಪ್ರೆಸ್
ವಿಜಾಪುರ.

# ಶಿವಾನುಭವ

ವರ್ಷ ೨೨ | ನೋ. ೧೯೪೮ | ಸಂಚಿಕೆ ೮


## ಸೇವಾಧರ್ಮದ ಪ್ರೇರಕ ಶಕ್ತಿ ಎಲ್ಲಿದೆ? ಜಗದಣ್ಣ ಬಸವಣ್ಣನಲ್ಲಿ !

( ಬರೆದವರು---ಶ್ರೀ. ಅನ್ನದಾನೀಶ್ವರ ವಿರಕ್ತಮಠ )

ಸಮಾಜ ಸೇವೆ ಮಾಡಲಿಕ್ಕೆ ನಮಗೆ ಪ್ರೇರಣೆ ಬೇಕು. ಆ ಪ್ರೇರಕ ಶಕ್ತಿಯು ಎಲ್ಲಿಂದ ಬರುವದು? ಹಿಂದೂ ಧರ್ಮದ ಶ್ರೇಷ್ಠ ತತ್ವಜ್ಞಾನವೆಂದು ಹೇಳಲ್ಪಡುತ್ತಿರುವ ಅದ್ವೈತ ಸಿದ್ಧಾಂತದಿಂದ ಬರಬಹುದೇ? ಎಂದಿಗೂ ಇಲ್ಲ.

ಏಕೆಂದರೆ ಅದು ಇಹಜೀವನವನ್ನೇ ತಿರಸ್ಕರಿಸುವದು. "ಜಗತ್ತು ಸುಳ್ಳು. ಅಸ್ಥಿರ. ದೇಹವು ನೀರಮೇಲಿನ ಗುಳ್ಳಿ. ಅದರ ಕಡೆಗೆ ಲಕ್ಷ್ಯಗೊಡಬಾರದು. ಸಮಾಜ, ಶಿಕ್ಷಣ, ರಾಜಕಾರಣ, ಅರ್ಥಶಾಸ್ತ್ರ, ಕಲೆ, ವಿಜ್ಞಾನ, ವ್ಯಾಪಾರ ಇತ್ಯಾದಿ ಕಾರ್ಯಗಳೆಲ್ಲವೂ ಮಿಥ್ಯ. ಬ್ರಹ್ಮವೊಂದೇ ಸತ್ಯ. ಸನ್ಯಾಸಿಯಾಗುವದೇ ಶ್ರೇಷ್ಠ. ಪ್ರಗತಿ ಎಂಬುದು ಮಾಯೆ." ಇತ್ಯಾದಿಯಾಗಿ ಕೇವಲ ವೈರಾಗ್ಯವೇ ಶ್ರೇಷ್ಠವೆಂದು ಅದು ಹೇಳುವದು. ಇದರಿಂದ ಮನುಷ್ಯನು ಕರ್ತವ್ಯ ಪರಾಙ್ಮುಖನಾಗುವನು. ಇಹಲೋಕದ ಬಗ್ಗೆ, ಜಗತ್ತಿನಬಗ್ಗೆ, ಜಾಗತಿಕ ಪ್ರಗತಿಯ ಬಗ್ಗೆ, ಐಹಿಕ ಜೀವನದ ಬಗ್ಗೆ ನಿಷೇಧ, ತಿರಸ್ಕಾರ ಬಹಿಷ್ಕಾರ ಪ್ರವೃತ್ತಿ ಬೆಳೆಯುವದರಿಂದ ಸೇವಾಧರ್ಮ ನಡೆಯುವದಕ್ಕೆ ತನ್ನ ಪ್ರೋತ್ಸಾಹ

ವೇನೂ ಸಿಗದೇ ವಿರುದ್ಧವಾಗಿ ನಿರುತ್ತೇಜಕ ವಾತಾವರಣವೇ ತಯಾರಾಗುವದು.

ಹಾಗಾದರೆ ದ್ವೈತದಿಂದ ಆ ಪ್ರೇರಕ ಶಕ್ತಿಯೇನಾದರೂ ದೊರೆಯುವದೇ? ಇಲ್ಲವೇ ಇಲ್ಲ. ಏಕೆಂದರೆ ಕರ್ಮಗಳು, ವಿಧಿನಿಷೇಧಗಳು, ಜಾತಿಭೇದಗಳು, ಅಸ್ಪೃಶ್ಯತೆ, ಕುಲಮರ್ಯಾದೆ, ವರ್ಣ ಆಶ್ರಮ ವ್ಯವಸ್ಥೆ—ಇತ್ಯಾದಿ ಇತ್ಯಾದಿಯಾಗಿ ಅಧ್ಯಾತ್ಮಶಕ್ತಿಗೆ ಅಧ್ಯಾತ್ಮಕತೆಗೆ ವಿರೋಧವಾದ ಕೋಟಲೆಗಳೇ ನೂರಾರು ಕೋಟೆಗಳಂತೆ ಅಭೇದ್ಯವಾಗಿ ನಿಂತುಕೊಂಡಿವೆ. ಈ ಚಕ್ರವ್ಯೂಹ ಕೋಟೆಗಳಲ್ಲಿ ಮನುಷ್ಯನು ಹೊಕ್ಕರೆ ಪಾರಾಗಿ ಮುಕ್ತನಾಗುವಂತೆಯೇ ಇಲ್ಲ. ಅನೇಕ ವಿಧಾನಗಳೂ, ಮತದ ಅಂಧ ಶ್ರದ್ಧೆಯೂ, ಲೌಕಿಕಾಚಾರಗಳೇ ಕರ್ತವ್ಯವಾಗುವದರಿಂದ ಸೇವಾಧರ್ಮದ ಪ್ರಭಾವ ಬೀಳುವದೆಂತು?

ವಿಶಿಷ್ಟಾದ್ವೈತದಿಂದ ಭಕ್ತಿಮೂಲಕವಾದ ಜಾತಿಭೇದನಿರಸನಕ್ಕೆ ಎಡೆಯಿದ್ದರೂ ಪತಿತೋದ್ಧಾರಕ್ಕೆ ಅವಕಾಶವಿದ್ದರೂ ಸಮಾನ ಹಕ್ಕು ಬಾಧ್ಯತೆಗಳನ್ನು ಒದಗಿಸಿಕೊಡುವಂಥ ಒಂದು ಸಮಾಜ ವ್ಯವಸ್ಥೆ ಅಲ್ಲಿ ಇಲ್ಲ. ಕಾರಣ ಪ್ರೇರಕಶಕ್ತಿಯು ಅಷ್ಟು ಬಲವತ್ತರವಾಗಿಲ್ಲ.

ಅದ್ವೈತವು ವ್ಯವಹಾರದಲ್ಲಿ ಉಪಯೋಗವಿಲ್ಲ. ದ್ವೈತವು ಪ್ರಗತಿ, ಸ್ವಾತಂತ್ರ್ಯ, ಸಮಾನತೆಗಳಿಗೆ ವೈರಿ. ವಿಶಿಷ್ಟಾದ್ವೈತದಲ್ಲಿ ಪತಿತರಿಗೆ ಸಮಾನಹಕ್ಕು ಬಾಧ್ಯತೆಗಳನ್ನು ದೊರಕಿಸಿಕೊಡುವ ಸಮಾಜವ್ಯವಸ್ಥೆ ಇಲ್ಲ. ಆದಕಾರಣ ಸೇವಾಧರ್ಮದ ಪ್ರೇರಕಶಕ್ತಿಯು ಮೇಲೆ ಹೇಳಿದ ತತ್ವಜ್ಞಾನಗಳಲ್ಲಿ ಇಲ್ಲವೆಂದು ಸಿದ್ಧವಾದ ಮಾತು.

ಆರ್ಯ ಸಂಸ್ಕೃತಿಯು ಜೀವಾಳವಾಗಿರುವ ವರ್ಣಾಶ್ರಮ ವ್ಯವಸ್ಥೆಯಲ್ಲಿಯಾದರೋ ಉಚ್ಚನೀಚ ಉದ್ಯೋಗ, ಮೇಲುಕೀಳು ಕುಲ ಎಂಬ ಹೀನ ಮನೋವೃತ್ತಿಯೇ ತುಂಬಿದೆ. ಉದ್ಯೋಗ ಸ್ವಾತಂತ್ರ್ಯವಿಲ್ಲದೇ ವರ್ಣಾಶ್ರಮಿಗಳು ಮುಖ್ಯವಾಗಿ ಶೂದ್ರರು, ಅಸ್ಪೃಶ್ಯರು ಬಳಲುತ್ತಾರೆ. ಸಮಾನತೆಯಂತೂ ಇಲ್ಲವೇ ಇಲ್ಲ. ಶೂದ್ರನು ಮಾತ್ರ ಸೇವೆಯನ್ನು ಮಾಡಬೇಕು. ಉಳಿದ ಮೂರು ವರ್ಣದವರು ಸೇವೆಯು ಹೀನತರದ ಕೆಲಸವೆಂದು ತಿಳಿಯುತ್ತಾರೆ. ಆತ್ಮೋನ್ನತಿಗೆ,

ಆತ್ಮವಿಕಾಸಕ್ಕೆ, ಅಂತರಾತ್ಮನ ಜೀವನ್ಮುಕ್ತಿಗೆ, ಈ ವರ್ಣಾಶ್ರಮ ವ್ಯವಸ್ಥೆಯು ವೈರಿಯಾಗಿದೆ ಈ ವ್ಯವಸ್ಥೆಯ ಪ್ರಕಾರ ಬ್ರಾಹ್ಮಣನು ರಾಜಕಾರಣಿಯಾಗಲೀ, ಡಾಕ್ಟರನಾಗಲೀ, ಎಂಜಿನಿಯರನಾಗಲೀ, ಒಕ್ಕಲಿಗನಾಗಲೀ, ಅಡಿಗೆಯಾಳಾಗಲೀ. ಭಂಗಿಯಾಗಲೀ ಆಗಲಿಕ್ಕೆ ಸ್ವಾತಂತ್ರ್ಯವೇ ಇಲ್ಲ, ಇಂಥವರು ಇಂಥಿಂಥ ಕೆಲಸ ಮಾಡಬೇಕೆನ್ನುವದು ಇದೆಂಥ ಬಲಾತ್ಕಾರವು?

ಆತ್ಮೋನ್ನತಿಗೆ ಅವಶ್ಯವಿಲ್ಲದ ಈ ವರ್ಣವ್ಯವಸ್ಥೆಯನ್ನು ಭಗವದ್ಗೀತೆಯು ಕೂಡಾ ಪ್ರತಿಪಾದಿಸಿರುವದು. ಜನ್ಮವಿಶಿಷ್ಟವಾಗಲೀ ಗುಣಕರ್ಮ ವಿಶಿಷ್ಟವಾಗಲೀ ಯಾವದೂ ಆತ್ಮವಿಕಾಸಕ್ಕೆ ಆಧ್ಯಾತ್ಮಿಕ ವಿಕಾಸಕ್ಕೆ ಅನವಶ್ಯಕವೆಂದೇ ವರ್ಣಗಳಿಂದ ಪ್ರಯೋಜನವೇನು? ಎಂಬ ಪ್ರಶ್ನೆಯನ್ನು ಜಗದಣ್ಣ ಬಸವಣ್ಣನು ಜಗಜ್ಜಾಹೀರವಾಗಿ ಕೇಳಿರುವನು.

## ಸೇವಾ ಧರ್ಮದ ಪ್ರೇರಕ ಶಕ್ತಿಯು ಎಲ್ಲಿದೆ?

ಜಗತ್ತಿಗೆ ಇದುವರೆಗೆ ಗೊತ್ತಾಗದಿರುವ, ಗೊತ್ತಾದರೆ ಜಗತ್ತಿಗೆ ಹೊಸ ಬೆಳಕನ್ನೇ ಕೊಡುವ, ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತದ ಪ್ರಯೋಗದಲ್ಲಿದೆ ಆ ಪ್ರೇರಕಶಕ್ತಿಯು! ಲಿಂಗಾಂಗ ಸಾಮರಸ್ಯ ಸಂಸ್ಕೃತಿಯಲ್ಲಿದೆ. ವೈದಿಕ ಋಷಿಗಳು, ಆಚಾರ್ಯರು, ಸಂತರು, ದಾಸರು, ಭಗವದ್ಭಕ್ತರು ವೈರಾಗ್ಯಕ್ಕೆ ಇಹಜೀವನದ ತಿರಸ್ಕಾರಕ್ಕೆ ರಾಜಪಟ್ಟಗಟ್ಟಿರಬಹುದು. ಆದರೆ ಶರಣರು ಮಾತ್ರ ವೈರಾಗ್ಯಕ್ಕೇನೇ ರಾಜಪಟ್ಟಕಟ್ಟಿಲ್ಲ. "ಲಿಂಗಾಂಗ ಸಾಮರಸ್ಯ" ಎಂಬ ಹೆಸರೇ ವೈರಾಗ್ಯಕ್ಕೆ ರಾಜಪಟ್ಟವಿರಬಾರದು ಎಂಬ ಮಾತನ್ನೇ ಸ್ಪಷ್ಟ ಹೇಳುತ್ತದೆ. ಕೇವಲ ಲಿಂಗಕ್ಕೆ ಮಹತ್ವವಿಲ್ಲ. ಕೇವಲ ಅಂಗಕ್ಕೂ ಮಹತ್ವವಿಲ್ಲ. ಸಾಮರಸ್ಯಕ್ಕೆ ಮಹತ್ವವಿದೆ. ಸಮನ್ವಯಕ್ಕಿಂತಲೂ ಸಾಮರಸ್ಯಕ್ಕೆ ಹೆಚ್ಚು ಅರ್ಥವಿದೆ. ಲಿಂಗಾಂಗ ಸಾಮರಸ್ಯವೆಂದರೆ ಸುಖ-ಶಾಂತಿಗಳ ಸಾಮರಸ್ಯ.

ಶರಣರು ದ್ವೈತದ ಕರ್ಮಜಾಲವನ್ನೂ ಹರಿದುಹಾಕಿರುವರು. ಸಮಾನತೆಯ ಸಮಾಜ ವ್ಯವಸ್ಥೆಯನ್ನೂ ರಚಿಸಿರುವರು.

ಜಗದಣ್ಣ ಬಸವಣ್ಣನು ತನ್ನ ಅಮರ ವಚನಗಳಲ್ಲಿ ಹೇಳಿದ್ದನ್ನು ಕೇಳಿರಿ!

"ದ್ವೈತಾದ್ವೈತವನೋದಿ ಏನು ಮಾಡುವಿರಯ್ಯಾ? ಬರಿಯ ಮಾತಿನ ಮಾಲೆಯುಲೇನಹುದು? ಹಮ್ಮಿನಭಕ್ತಿ ಕರ್ಮಕ್ಕೆ ಮೊದಲು. ಅದ್ವೈತವ ನುಡಿದು ಅಹಂಕಾರಿಯಾದೆನಯ್ಯ! ತ್ರಿವಿಧ ದಾಸೋಹದಲಿಲ್ಲದೆ ಕಾಣಬಾರದು ಕೂಡಲಸಂಗಮದೇವನ.

ಕರ್ಮಿಗಳಿಗೆ ಶರಣರನುಭಾವ ನೆಲೆಗೊಳ್ಳದು. ಸಕಲ ಜೀವಾತ್ಮರಿಗೆ ಲೇಸನೇ ಬಯಸುವರು ಕೂಡಲಸಂಗನ ಶರಣರು.

ದೇವಲೋಕ ಮರ್ತ್ಯಲೋಕ ಬೇರಿಲ್ಲ ಕಾಣಿರೋ. ಭೃತ್ಯಾಚಾರವ ನುಡಿದು ವಿನಯ ಧ್ಯಾನವುಳ್ಳವರ ಎತ್ತಿಕೊಂಬನಯ್ಯ ಕೂಡಲಸಂಗಮದೇವಾ. ಸದುವಿನಯವೇ ಸದಾಶಿವನ ಒಲುಮೆಯಯ್ಯಾ. ದಯವೇ ಧರ್ಮದ ಮೂಲವಯ್ಯಾ. ಪ್ರಸಾದ ಕಾಯವ ಕೆಡಿಸಲಾಗದು. ಸರ್ವಂ ಲಿಂಗಮಯಂ ಜಗತ್ ಸ್ಥಾವರಜಂಗಮ ಒಂದೇ.

ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ. ಸ್ವರ್ಗ ಮರ್ತ್ಯ ಪಾತಾಳದೊಳಗೆ ಒಬ್ಬನೇ ದೇವ. ಹೇಗೆ ಮನ, ಹಾಗೆ ಘನ ತಪ್ಪದು ಕೂಡಲ ಸಂಗಮದೇವಾ.

ಶರಣರ ಅನುಭಾವ ಮಡಿವಾಳನ ಕಾಯಕದಂತೆ.

ಏನೆಂಬೆನೇನೆಂಬೆ ಒಂದೆರಡಾದುದು? ಏನೆಂಬೆನೇನೆಂಬೆ ಎರಡೊಂದಾದುದು? ಏನೆಂಬೆನೇನೆಂಬೆನವಿರಳ ಘನವ? ಮಹಾದಾನಿ ಕೂಡಲ ಸಂಗಯ್ಯ ತಾನೇ ಬಲ್ಲ.

ಸಮಸ್ತ ಕತ್ತಲೆಯ ಮಸಕವ ಕಳೆದಿಪ್ಪ ಇರವ ನೋಡಾ?

ಆರೂಢದ ಕೂಟದ ಸುಖವ ಕೂಡಲಸಂಗಯ್ಯ ತಾನೇ ಬಲ್ಲ-?

ಮೇಲಿನ ವಚನಗಳನ್ನು ನಿರ್ವಿಕಾರ ಮನಸ್ಸಿನಿಂದ ಓದಿದರೆ, ತಿಳಿದುಕೊಂಡರೆ. ಲಿಂಗದ ಒಂದು ಸ್ವರೂಪವು ಈ ವಿಶ್ವದ ಸುಖವು. ಭೌತಿಕ ಸುಖವು. ವೈಜ್ಞಾನಿಕ ಸುಖವು, ಲಿಂಗದ ಇನ್ನೊಂದು ಸ್ವರೂಪವು ಶಾಂತಿಯು. ಆಧ್ಯಾತ್ಮಿಕ ಸುಖವು. ಲಿಂಗಾಂಗ ಸಾಮರಸ್ಯವು ಸುಖಶಾಂತಿಗಳ ಸಾಮರಸ್ಯವು. ಎಂಬ ತತ್ವವಿಚಾರವು ಸುವ್ಯಕ್ತವಾಗುವದು.

ಶರಣಮಾರ್ಗದ ಸಂಚಾಲಕನಾದ ಶರಣಬಸವಣ್ಣನು ಜಗನ್ಮಿಥ್ಯೆಯನ್ನು ಸಾರುವ ಮಾಯಾವಾದಿಯಲ್ಲ. ಸರ್ವವೂ ಲಿಂಗಮಯವು ಎನ್ನುವ ಆನಂದವಾದಿಯು. ಆನಂದ ಸಾಧಕನು ಅಂಗವನ್ನು ಅಲ್ಲಗಳೆಯುವದಿಲ್ಲ. ಅರ್ಥಾತ್ ಇಹಜೀವನವನ್ನು ಅಲ್ಲಗಳೆಯುವದಿಲ್ಲ. ಜೀವನದಲ್ಲಿ ಲಿಂಗವನ್ನು ಅನುಭವಿಸಿ ಲಿಂಗದಲ್ಲಿ ಇದ್ದು ಜೀವನದ ಸಮಸ್ತ ಕತ್ತಲೆಯ ಮುಸಕು ಕಳೆದು ಬೆಳಗಿನ ಇರವ ಮಾಡಬೇಕೆಂಬ ಪ್ರಯತ್ನವಾದಿಯು.

ಅಂಗ ಮನ ಪ್ರಾಣ ಜೀವಾತ್ಮಗಳನ್ನು ಲಿಂಗವನ್ನಾಗಿಸುವದೇ ಲಿಂಗಾಂಗ ಸಾಮರಸ್ಯ. ಈ ಲಿಂಗಾಂಗ ಸಾಮರಸ್ಯ ಸಂಸ್ಕೃತಿಯ ಪ್ರಭಾವ ಮುದ್ರೆಯು ಜೀವನದ ಎಲ್ಲ ಕ್ಷೇತ್ರಗಳಲ್ಲಿ ವ್ಯಾಪಿಸಿ ಲಿಂಗಜೀವನವನ್ನು ತಯಾರಿಸುವದೇ ಶರಣರ ವಿಸ್ತಾರವಾದ ಕಾರ್ಯಕ್ಷೇತ್ರವಾಗಿದ್ದಿತು. ಈ ಲಿಂಗಾಂಗ ಸಾಮರಸ್ಯವಾಗಲಿಕ್ಕೆ ತ್ರಿವಿಧ ದಾಸೋಹವೇ ಸಾಧನಮಾರ್ಗ. ತ್ರಿವಿಧ ದಾಸೋಹವು ಸರ್ವಾರ್ಪಣಯೋಗದ ಪೂರ್ಣಯೋಗದ ಭೂಮಿಕೆಯೇ ಸರಿ. ವಚನ ಸಾಹಿತ್ಯವನ್ನು ವಿಶಾಲದೃಷ್ಟಿಯಿಂದ ಅಭ್ಯಾಸ ಮಾಡಿದರೆ ಈ ಮಾತಿನ ಸತ್ಯತೆಯು ಹೊಳೆಯುವದೇ ವಿನಃ ಸಂಕುಚಿತಬುದ್ಧಿಯಿಂದ ಮೇಲೆ ಮೇಲೆ ಓದಿದರೆ ಅರ್ಥವೇ ಆಗುವದಿಲ್ಲ.

ಆದಕಾರಣ ಸೇವಾಧರ್ಮದ ಪ್ರೇರಕಶಕ್ತಿಯು ಜಗದಣ್ಣ ಬಸವಣ್ಣನಲ್ಲಿಯೇ ಇದೆಯೆಂದು ಹೇಳುತ್ತೇವೆ.

---

"ಕೊಡುಕೊಳ್ಳು--ಕೂಡಿ ಉಂಡು" ಸಂಘಟನೆಯ ಸೂತ್ರ.

# ಜಗದಂಣ ಬಸವಂಣನ ಸಮಾಜ ಕ್ರಾಂತಿಯ ಒಂದು ನೋಟ.

ಬರೆದವರು:— ಶ್ರೀ. ಅನ್ನದಾನೀಶ್ವರ ವಿರಕ್ತಮಠ, ರಾಣೆಬೆನ್ನೂರ.



ಜಗದಂಣ ಬಸವಂಣನು ೧೨ ನೇ ಶತಮಾನದಲ್ಲಿ ಸಮಾಜದಲ್ಲಿ ಅತ್ಯದ್ಭುತ ಕ್ರಾಂತಿಯನ್ನು ಮಾಡಿದನು. ಹಳೆಯ ಮೂಢ ರೂಢಿ, ಕುರುಡ ನಂಬಿಗೆ, ಹೇಡಿತನದ ದಾಸ್ಯ ಮನೋವೃತ್ತಿ, ಪೊಳ್ಳು ಜಾತಿ ಬಂಧನ, ಜೊಳ್ಳು ಭಾವಿಕತನ, ಹುರುಳಿಲ್ಲದ ವೈದಿಕ ಕರ್ಮಜಾಲ ಮುಂತಾದವುಗಳಿಗೆ ಮಣ್ಣು ಕೊಟ್ಟು, ಹೊಸ ಭಾವನೆ, ಹೊಸ ವಿಚಾರ, ಹೊಸ ಆಚಾರ, ಹೊಸ ತತ್ವ, ಹೊಸ ಕೃತಿಗಳಿಂದ ಸುಸಜ್ಜಿತವಾದ ಹೊಸ ಸಮಾಜವನ್ನೇ ರಚಿಸಿದನು. ಯಾವ ಅವತಾರ ಪುರುಷರೂ, ಮತಸ್ಥಾಪಕರೂ ಮಾಡದ ಕೆಲಸವನ್ನು ಬಸವಂಣನವರು ಮಾಡಿದರು. ಇಂದಿನ ಸಮಾಜ ಸುಧಾರಕರಿಗೂ, ಸಮಾಜ ಕ್ರಾಂತಿಕಾರರಿಗೂ ಆದರ್ಶವಾದ ಅನೇಕ ಕ್ರಾಂತಿಯ ಕಾರ್ಯಗಳನ್ನು ನಮ್ಮ ಕನ್ನಡ ಅಣ್ಣಗಳು ೮೦೦ ವರ್ಷಗಳ ಹಿಂದೆಯೇ ಮಾಡಿ ಲಿಂಗೈಕ್ಯರಾಗಿರುವರು. ಜಗದ್ವಂದ್ಯರಾಗಿರುವ ಇಂದಿನ ಮಹಾತ್ಮಾ ಗಾಂಧಿಯವರಿಗೂ ಆದರ್ಶವಾದ ಸಾಮಾಜಿಕ ತತ್ವಗಳು ಜಗದಂಣ ಬಸವಂಣನ ಸಮಾಜ ರಚನೆಯ ಸಿದ್ಧಾಂತದಲ್ಲಿವೆ. ವಚನ ಸಾಹಿತ್ಯವು ಕನ್ನಡ ಸಾಹಿತ್ಯದ ಒಂದು ತೇಜಸ್ವಿಯಾದ, ಓಜಸ್ವಿಯಾದ ವಿಶಿಷ್ಟ ಸಾಹಿತ್ಯವು. ಈ ಸಾಹಿತ್ಯವನ್ನು **ಮತಿ ದೃಷ್ಟಿಯಿಂದ ಅಭ್ಯಾಸ ಮಾಡಬೇಕು. ಮತ ದೃಷ್ಟಿಯಿಂದ, ಪೂರ್ವಗ್ರಹ ದೂಷಿತ ಬುದ್ಧಿಯಿಂದ** ಅಥವಾ **ಆಧುನಿಕ ಗ್ರಹ ದೂಷಿತ ಮನದಿಂದ** ಓದಿದರೆ ಅದರ ಪ್ರಭಾವವು ಚನ್ನಾಗಿ ಹೊಳೆಯಲಾರದು. ಮತಿ ದೃಷ್ಟಿಯಿಂದ, ಸಮಾಜ ಸೇವಾ ದೃಷ್ಟಿಯಿಂದ, ಲಿಂಗ ದೃಷ್ಟಿಯಿಂದ, ಆಧ್ಯಾತ್ಮಿಕ ದೃಷ್ಟಿಯಿಂದ, ನಿರ್ಮಲ ಭಾವದಿಂದ ನಿರೀಕ್ಷಿಸಿದರೆ ಜಗತ್ತಿಗೇನೇ ವಚನ ಸಾಹಿತ್ಯವು ಕೈದೀಪವಾಗಿದೆಯೆಂದು ಹೊಳೆಯದಿರದು.

ಅಂಥ ವಚನ ಸಾಹಿತ್ಯದಲ್ಲಿ ಆಧ್ಯಾತ್ಮಿಕ, ಸಾಮಾಜಿಕ, ನೈತಿಕ, ಶೈಕ್ಷಣಿಕ, ಧಾರ್ಮಿಕ, ಸಾಹಿತ್ಯಿಕ, ರಾಜಕೀಯ, ಆರ್ಥಿಕ, ಸಾಂಘಿಕ ಮುಂತಾದ ಅನೇಕ ತತ್ವರತ್ನಗಳು ಇಂದಿನ ಜಗತ್ತನ್ನೇ ಪಲ್ಲಟಗೊಳಿಸಿ ಹೊಸ ಜಗತ್ತನ್ನೇ ನಿರ್ಮಾಣ ಮಾಡುವ ತತ್ವರತ್ನಗಳು ಥಳಥಳಿಸು ತ್ತವೆ. ಕೇವಲ ಆರ್ಯ ಸಂಸ್ಕೃತಿಯು ದುರಭಿಮಾನದಿಂದ, ವೈದಿಕ ಧರ್ಮದ ಅಂಧಶ್ರದ್ಧೆಯಿಂದ ಓದಿದರೆ ಓದಿದವರಿಗೆ ಅಸಂತೋಷ ವಾಗುವದು; ಏಕೆಂದರೆ ವೈದಿಕ ಕರ್ಮಜಾಲವನ್ನೂ, ಯಜ್ಞ ಸಂಸ್ಕೃತಿ ಯನ್ನೂ ಧ್ವಂಸ ಮಾಡಿ ಬಿಟ್ಟಿರುವರು ಅಲ್ಲಿ !

ಜಗತ್ತು ಇಂದು ಹೊಸ ಸಮಾಜ ವ್ಯವಸ್ಥೆಗಾಗಿ ಹಾತೊರೆಯು ತ್ತಿರುವದು. ಇಂದಿನ ವಿಷಮ ಸಮಾಜವು ಹೋಗಿ ಸಮಾನತೆಯ ಸಮಾಜದ ಉದಯದ ನಿರೀಕ್ಷಣೆಯನ್ನು ಮಾಡುತ್ತಿರುವದು. ಬರೀ ಆರ್ಥಿಕ ಸಮಾನತೆಯಲ್ಲ. ಆಧ್ಯಾತ್ಮಿಕ ಸಮಾನತೆಯೂ ಇಂದು ಜಗತ್ತಿಗೆ ಬೇಕಾಗಿದೆ. ಇಂಥ ಆಧ್ಯಾತ್ಮಿಕ ಮತ್ತು ಆರ್ಥಿಕ ಸಮಾನ ತೆಗೆ ಎಲ್ಲಕ್ಕೂ ಮೊದಲು ಒಂದು ಅತ್ಯುಚ್ಚ ಸಂಸ್ಕೃತಿಯು ಬೇಕು. ಅತ್ಯಂತ ಉನ್ನತವಾದ ಮತ್ತು ಅತ್ಯಂತ ಆಳವಾದ ಸಂಸ್ಕೃತಿಯು ಇಂದು ಜಾಗತಿಕ ಅಶಾಂತಿಯನ್ನು ಹೊಡೆದೋಡಿಸಬಲ್ಲುದು. ಅಂಥ ಪ್ರಭಾವಶಾಲಿಯಾದ ಸಂಸ್ಕೃತಿಯು ನಮ್ಮ ಜ್ಞಾನ ಮತ್ತು ಇಚ್ಛೆ, ಚಿತ್ ಮತ್ತು ಕ್ರಿಯಾ ಶಕ್ತಿಗಳನ್ನು ಪೂರ್ಣವಾಗಿ ಅರಳಿಸಿ, ಸುತ್ತಲೂ ಶೋಭಾಯಮಾನವಾಗಿರುವ ಸೃಷ್ಟಿಯಲ್ಲಿಯ ಶಕ್ತಿಗಳನ್ನು ಸಹ ಆವಿ ಷ್ಕರಿಸಿ, ಜಗದಲ್ಲಿ ಸ್ವಾತಂತ್ರ್ಯ, ಪ್ರಗತಿ, ಶಾಂತಿ, ಧೈರ್ಯ, ಉತ್ಸಾಹ, ಸಾಹಸ, ಮುಂತಾದ ಲಿಂಗ ಗುಣಗಳನ್ನು ಸುಗಂಧದಂತೆ ಹರಡಿ, ವೈಜ್ಞಾನಿಕ ಮತ್ತು ಆಧ್ಯಾತ್ಮಿಕ ಸಂಸ್ಕೃತಿಗಳಲ್ಲಿ ಸಮರಸವನ್ನು ಸುಮ ನೋಹರವಾಗಿ ಸ್ಥಾಪಿಸಬಲ್ಲುದು. ಅಂಥ ಅತ್ಯಂತ ಆಳವಾದ ಮತ್ತು ಅತ್ಯಂತ ಉನ್ನತವಾದ ಸಂಸ್ಕೃತಿಯು ಲಿಂಗಾಂಗ ಸಾಮರಸ್ಯದ ಸಂಸ್ಕೃ ತಿಯು. ಈ ಸಂಸ್ಕೃತಿಗನುಗುಣವಾಗಿಯೇ ವಚನ ಸಾಹಿತ್ಯದ ಯೋಗಿ ಗಳು ಜಗದ ಎಲ್ಲ ಸಮಸ್ಯೆಗಳನ್ನು ಬಿಡಿಸಿರುವರು. ನಮಗೆ ಬಿಡಿಸ ಲಿಕ್ಕೆ ಹೇಳಿರುವರು.

ಈ ದೃಷ್ಟಿಯಿಂದ ವಿಚಾರಿಸಿದರೆ "ಕೂಡಿ ಉಂಣು. ಕೊಡು ಕೊಳ್ಳು" ಈ ಸಾಮಾಜಿಕ ಕ್ರಾಂತಿಯು ಮತ್ತು ಕಲ್ಯಾಣದ ತತ್ವವು

ಲಿಂಗಾಂಗ ಸಾಮರಸ್ಯ ಸಂಸ್ಕೃತಿಯು ಒಂದು ಚೆಂದವಾದ ನೋಟವು. ಈ ಸಹ ಭೋಜನ ಮತ್ತು ಶರೀರ ಸಂಬಂಧಗಳಿಂದ ಸಮಾಜದಲ್ಲಿ ಪ್ರೇಮ ಬಾಂಧವ್ಯಗಳು ಹರಡಲನುವಾಗುತ್ತವೆ. ಸಮಾಜದಲ್ಲಿಯ ಒಳಭೇದಗಳು ನಾಶವಾಗುತ್ತವೆ. ಎಲ್ಲರೂ ಒಂದೇ. ಸಮಾನರು ಎಂಬ ಆತ್ಮವಿಶ್ವಾಸದ ಲಿಂಗವಾಣಿಯು ಹೊರಬೀಳುವದು. ಈ ಲಿಂಗವಾಣಿಯು—ನುಡಿಯು ಕೆಳಗೆ ಬಿದ್ದವರನ್ನು ಮೇಲೆ ಎತ್ತಿಕೊಳ್ಳುವದು. ಇದೇ ಲಿಂಗ ನುಡಿಯು ಸಮಾಜದ ತುಂಬ ಹಬ್ಬಿದರೆ ಸಮಾಜದಲ್ಲಿಯ ಭಿನ್ನ ಭಿನ್ನ ಹೃದಯುಗಳು ಸಮೀಪಕ್ಕೆ ಬರುವವು. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಮೋಕ್ಷದ ಪ್ರಕಾರಗಳು ಈ ತತ್ವಗಳಿಂದಲೇ ಇಹಲೋಕದಲ್ಲಿಯೇ ಸಾಧ್ಯವಾಗುತ್ತವೆ. ಅದು ಹೇಗೆಂದರೆಃ— ಲಿಂಗಾಂಗ ಸಾಮರಸ್ಯ ಸಂಸ್ಕೃತಿಯ ಬೆಳಕಿನಲ್ಲಿ ಬಾಳುತ್ತಿರುವ ಲಿಂಗಾಂಗಿಗಳ ಲೋಕದಲ್ಲಿ—ಸಮಾಜದಲ್ಲಿ— ಜನರು ಬರುವರು ಸಹ ಭೋಜನದಿಂದ. ಶರೀರ ಸಂಬಂಧದಿಂದ ಸಮೀಪಕ್ಕೆ ಬರುವರು. ಆಮೇಲೆ ಲಿಂಗಾಂಗಸಾಮರಸ್ಯ ಸಂಸ್ಕೃತಿಯು ರೂಪವನ್ನು ಹೊಂದುವದು. ಕೊನೆಗೆ ಲಿಂಗಾಂಗ ಸಾಮರಸ್ಯ ಸಂಸ್ಕೃತಿಯುಲ್ಲಿ ಅಂಗ, ಮನ, ಪ್ರಾಣ, ಜೀವಾತ್ಮಗಳನ್ನು ಸಮರಸಗೊಳಿಸುವರು. ಇಲ್ಲದ ದೇವಲೋಕಕ್ಕೆ ಜನರನ್ನು ಪ್ರೇರೇಪಿಸುವದಕ್ಕಿಂತ ಇಹಲೋಕದಲ್ಲಿಯೇ ದೇವತ್ವವನ್ನು ಹೊಂದಿ ಪ್ರಕಾಶಪಡಿಸುವಂತೆ ಮಾಡುವದು ಶ್ರೇಯಸ್ಕರವೂ ಪ್ರೇಯುಸ್ಕರವೂ ಆಗಿಲ್ಲವೇ? ಅಂದಮೇಲೆ ಸಹಭೋಜನ— ಶರೀರಸಂಬಂಧ ತತ್ವವು ಜಗದಲ್ಲಿ ದೇವತ್ವವನ್ನು ಪಡೆದು ಪ್ರಕಾಶನಗೊಳಿಸುವ ದಿವ್ಯತತ್ವದ ಚೆನ್ನಾದ ನೋಟವು ಎಂಬುದು ಸ್ವತಃ ಸಿದ್ಧವು. ಆದರೆ ಲಿಂಗಾಂಗ ಸಾಮರಸ್ಯ ಸಂಸ್ಕೃತಿಯು ಧ್ಯೇಯ–ಧೋರಣಗಳಿಲ್ಲದೇ ಸಹಭೋಜನ-ಶರೀರಸಂಬಂಧ ಮಾಡಿದರೆ –ಇಂದಿನ ಜಗತ್ತು ಮಾಡುತ್ತಿರುವದು—ವಿಜ್ಞಾನದ ಪ್ರಗತಿಗೆ ಪ್ರಭಾವಕ್ಕೆ ಮಾತ್ರ ಅನುವು ಮಾಡಿಕೊಟ್ಟಂತಾಗುವದು. ಅಂಗದ ಪ್ರಗತಿಯಾಯಿತು. ಲಿಂಗದ ಸಾಮರಸ್ಯವು ಅಂಗದೊಡನೆ ಆಗಬೇಕಲ್ಲವೇ ? ಅಂಗದ ಪ್ರಗತಿ ಭೂತಾತ್ಮ. ಲಿಂಗದ ಸಾಮರಸ್ಯ ಪರಮಾತ್ಮ. ಭೂತಾತ್ಮ-ಪರಮಾತ್ಮರ ಸಾಮರಸ್ಯದಿಂದ ಸಂಪೂರ್ಣತೆಯು ಪ್ರಕಟತೆಯುಲ್ಲವೇ ? ಆದರೂ ಇಂದಿನ ಜಗತ್ತು ಸಹಭೋಜನ –

ಶರೀರಸಂಬಂಧದಿಂದ ಲಿಂಗಾಂಗ ಸಾಮರಸ್ಯದ ಕಡೆಗೇನೇ ಸಾಗಿರು ವದು. ಸಾಗುವ ಹಾಗೆ ಅನು ಗತಿ ಇರುವದು. ಆದ್ದರಿಂದ ಸಹ ಭೋಜನ— ಶರೀರಸಂಬಂಧಗಳನ್ನು ಲಿಂಗದೃಷ್ಟಿಯ ನಿರ್ಮಲ ಮತಿ ಗಳು ಸ್ವಾಗತಿಸದೇ ಇರರು. ಬರೀ ಸ್ವಾಗತಿಸಿದರೆ ಸಾಲದು. ಜಗ ದಲ್ಲಿ ಲಿಂಗಾಂಗ ಸಾಮರಸ್ಯ ಸಂಸ್ಕೃತಿಯನ್ನು ಹರಡಬೇಕು. ಅದು ಕರ್ತವ್ಯ, ನಿತ್ಯನೇಮವಾಗಬೇಕು. ವಚನ ಸಾಹಿತ್ಯವನ್ನು ಬಿಟ್ಟು ಇದು ಸಾಧ್ಯವಿಲ್ಲ.

“ಪರಮಾತ್ಮ ಅಥವಾ ಲಿಂಗ ಎಲ್ಲರ ಹೃದಯದಲ್ಲಿ ಇರುವದು. ಕಾರಣ ಎಲ್ಲರೂ ಸಮಾನರು. ಎಲ್ಲರೂ ಸಮಾನ ಹಕ್ಕು ಬಾಧ್ಯತೆ ಗಳುಳ್ಳವರು. ಹೆಚ್ಚು ಕಡಿಮೆ, ಸ್ಪೃಶ್ಯ-ಅಸ್ಪೃಶ್ಯ, ದೀನ-ಧನಿಕ ಈ ಕೃತಕ ಭೇದಗಳಿಗೆ ಅರ್ಥವಿಲ್ಲ” ಹೀಗೆ ಹೇಳುವದು ಕೇವಲ ಬಾಯಿ ಮಾತಾದರೆ – ಮಾತಿನಲ್ಲಿ ಮಂತ್ರ ಬಳಸುವ ತತ್ವವಾದರೆ ಸಾಲದು. ಅದು ಕೃತಿಯಲ್ಲಿ ಇಳಿಯಬೇಕಲ್ಲ! ಈ ತತ್ವವನ್ನು ಸಮಾಜದಲ್ಲಿ ಬಳಿಕೆಯಲ್ಲಿ ತಂದು ದೃಶ್ಯರೂಪದಲ್ಲಿ ಸಿದ್ಧ ಮಾಡಿ ತೋರಿಸಬೇಕಲ್ಲವೇ? ಸಹಭೋಜನ— ಶರೀರಸಂಬಂಧಗಳು ಇದನ್ನೇ ಸಿದ್ಧ ಮಾಡುತ್ತವೆ.

ವಿಜ್ಞಾನ ಯುಗದ ಇಂದಿನ ಜಗತ್ತು ಸಹಭೋಜನ— ಶರೀರ ಸಂಬಂಧಗಳನ್ನು ಸಹಜವಾಗಿ ಮಾಡುತ್ತಿದ್ದರೂ ಹಿಂದುಸ್ತಾನದ ಕರ್ಮಠ ಜಗತ್ತು ಮಾತ್ರ ವಿರೋಧಿಸುವದರಲ್ಲಿಯೇ ಒಣ ಪಾಂಡಿತ್ಯ ವನ್ನು ತೋರಿಸುತ್ತಿರುವದು ಅದರ ಅವೈಜ್ಞಾನಿಕ ಮನೋವೃತ್ತಿಯನ್ನು ನಿಚ್ಚಳವಾಗಿ ಪ್ರಕಟಪಡಿಸುವದು. ಮೂಲೆಯಲ್ಲಿ ಮೂಗು ಹಿಡಿದು ಕೂಡುವ ಈ ಮನೋವೃತ್ತಿಯಿಂದ, ಈ ಕೂಪಮಂಡೂಕ ವೃತ್ತಿಯಿಂದ ವಿಜ್ಞಾನದ ಪ್ರಗತಿ ಅಥವಾ ಅಂಗದ ಪ್ರಗತಿಯು ಅರ್ಥಾತ್ ಭೌತಿಕ ಪ್ರಗತಿಯು ಎಂತಾಗಬಲ್ಲದು? ವಿಜ್ಞಾನದ ಪ್ರಗತಿಯಿಲ್ಲದೇ ಆಧ್ಯಾ ತ್ಮಿಕ ಪ್ರಗತಿಯೂ ಇಲ್ಲ. ಹೊಟ್ಟೆ-ಬಟ್ಟೆಗಳ ಚಿಂತೆಯಲ್ಲಿದ್ದ ಮನು ಷ್ಯನು ಆಧ್ಯಾತ್ಮಿಕ ಪ್ರಗತಿಯನ್ನು ಸಾಧಿಸಬಲ್ಲನೇ? ಆದ್ದರಿಂದಲೇ ಜಗದಂಣ ಬಸವಂಣನು ಕಾಯಕದ ವ್ಯವಸ್ಥೆಯನ್ನು ಮಾಡಿದ್ದಾನೆ. ಎಲ್ಲ ಕಾಯಕಗಳೂ ಸಮಾನವಾಗಿವೆ. ಕಾಯಕಗಳಲ್ಲಿ ಉಚ್ಚನೀಚತ್ವ ವಿಲ್ಲ. ಕುಲ, ಜಾತಿ, ವರ್ಣಗಳಲ್ಲಿ ಅರ್ಥವಿಲ್ಲ. ಹೊಲೆಯನು ನೀಚ

ಉದ್ಯೋಗ ಮಾಡುತ್ತಾನೆಂದೂ, ಅವನ ಜಾತಿ ಕೀಳೆಂದೂ, ಆದ್ದರಿಂದ ಅವನ ಕೂಡ ಸಹಭೋಜನ್ನ, ಶರೀರಸಂಬಂಧ ಮಾಡಬಾರದೆಂದೂ ಮನುಸ್ಮೃತಿಕಾರರೇ ಮುಂತಾದ ವೈದಿಕ ಯಜ್ಞ ಸಂಸ್ಕೃತಿಯ ಕರ್ಮಠರು ಹೇಳಿದ್ದಾರೆ. ಕರ್ಮಠರ ಈ ಮಾತು ಸ್ವಾರ್ಥ ಮೂಲಕವಾದುದೆಂದೂ, ಆಧ್ಯಾತ್ಮಿಕತೆಯಲ್ಲಿ ಸಮಾನತೆ, ಸ್ವಾತಂತ್ರ್ಯ, ಬಂಧುತ್ವಗಳಿರುವವೆಂದೂ, ಆಧುನಿಕ ಜಗತ್ತಿನ ವಿಜ್ಞಾನ ಯುಗದ ಹೊಸ ದೃಷ್ಟಿಯು ಎಲ್ಲ ಜನರೂ ಹೇಳುತ್ತಾರೆ. ಇದೇ ಮಾತನ್ನು ೮೦೦ ವರ್ಷಗಳ ಪೂರ್ವದಲ್ಲಿಯೇ ಹೇಳಿ ಮಾಡಿತೋರಿಸಿ ಸುಂದರ ಸಂಘಟನೆಯ ಸಮಾಜವನ್ನು ನಿರ್ಮಿಸಿ ಸಮಾನತೆಯನ್ನು ಹರಡಿ ಲಿಂಗಾಂಗ ಸಾಮರಸ್ಯ ಸಂಸ್ಕೃತಿಯ ಕಡೆಗೆ ಜಗತ್ತಿನ ಲಕ್ಷ ವೆಳೆದು ಲಿಂಗೈಕ್ಯರಾಗಿರುವರು ಬಸವಾದಿ ಶರಣ ಶರಣೆಯರು. ಆದಕಾರಣ ಕರ್ಮಠರು ಆಧುನಿಕ ದೃಷ್ಟಿಯಿಂದಲಾದರೂ ಆಧ್ಯಾತ್ಮಭಾವನೆಯಿಲ್ಲದಿದ್ದರೂ ಬಸವಣ್ಣನ ಸಂಘಟನೆಯ ಸೂತ್ರದ ಕಡೆಗೆ ಲಕ್ಷಗೊಟ್ಟು ಆಪ್ರಕಾರ ನಡೆಯಬೇಕು. ಆಧುನಿಕ ಜಗತ್ತಿನ ಕೂಡ ಪ್ರಗತಿ ಪಥದಲ್ಲಿ ಹೋಗಬೇಕು. ಇಲ್ಲದಿದ್ದರೆ ಕಾಲಚಕ್ರದಲ್ಲಿ ಸಿಲ್ಕಿ ಕತ್ತರಿಸಿ ಹೋಗುವರು.

ವೈದಿಕ ಕರ್ಮಕಾಂಡಿಗಳು, ಆರ್ಯಸಂಸ್ಕೃತಿಯ ಕರ್ಮಠರು, ಅವೈಜ್ಞಾನಿಕ ಮತ್ತು ಅನಾಧ್ಯಾತ್ಮಿಕ ಮನೋವೃತ್ತಿಯನ್ನು ಬೆಳಸಿಕೊಳ್ಳುವ ಮನುಸ್ಮೃತಿಯ ಕಟ್ಟಳೆಗಳಿಂದ ಕೂಡಿದವರಾದುದರಿಂದ ಅವರು ಸಹಭೋಜನ ಶರೀರ ಸಂಬಂಧಕ್ಕೆ ವಿರೋಧಿಸುವದು ಅವರ ಸ್ವಭಾವವೆಂದು ಒಂದು ವೇಳೆ ಹೇಳಬಹುದು.

ಆದರೆ ಆಧ್ಯಾತ್ಮಿಕ ಮತ್ತು ವೈಜ್ಞಾನಿಕ ಮನೋವೃತ್ತಿಯನ್ನು ವಿಕಾಸಗೊಳಿಸುವ ಲಿಂಗಾಂಗಸಾಮರಸ್ಯ ಸಂಸ್ಕೃತಿಯ ಪ್ರಭಾವದಲ್ಲಿ ಬೆಳೆದ ಲಿಂಗವಂತ ಸಮಾಜದಲ್ಲಿಯೂ ಸಹ ಸಹಭೋಜನ-ಶರೀರ ಸಂಬಂಧಗಳಿಗೆ ವಿರೋಧ ಬರುತ್ತಿರುವದೆಂದರೆ ಪರಮಾಶ್ಚರ್ಯವೂ ಅಸ್ವಾಭಾವಿಕವೂ ಆಗಿದೆ ಲಿಂಗಾಂಗ ಸಾಮರಸ್ಯ ಸಂಸ್ಕೃತಿಯ ಚಿತ್ಕಲಾ ಚೈತನ್ಯದ ಪ್ರಭಾವವು ಇವರ ಮೇಲೆ ಬೀಳದೇ ಕರ್ಮಠರ ನೆರಳು ಬಿದ್ದಿರುವದೇ ಇದಕ್ಕೆ ಕಾರಣವು. ಇವರು ಇನ್ನುಮೇಲಾದರೂ ಜ್ಞಾನದ ಕಳೆಯಿಂದ ಚೈತನ್ಯಯುಕ್ತರಾಗಿ ಬದುಕಲೆಂದೇ ಅವರ ಅಂಗದ ಮೇಲಿ

ರುವ ಇಷ್ಟಲಿಂಗದ ಸಂಕೇತವಾಗಿದೆ. ಅವರ ಅಂಗದ ಮೇಲಿರುವದು ನಿಜವಾಗಿಯೂ ಇಷ್ಟಲಿಂಗವೇ ಆಗಿದ್ದರೆ ಅವರು ಸಮಾಜ ಸಂಘಟನೆಗೆ ಎಂದೂ ವಿರೋಧಬರುತ್ತಿರಲಿಲ್ಲ ಸಮಾಜದಲ್ಲಿಯ ಅನಿಷ್ಟ ಪರಿಹಾರಕ್ಕಾಗಿಯೇ ಇಷ್ಟಲಿಂಗದ ಧಾರಣೆಯಿರುವದು. ಸಹಭೋಜನದಿಂದ ಆಚಾರ ಕೆಡುವದೆಂದೂ, ಶರೀರ ಸಂಬಂಧದಿಂದ ಕುಲಕೆಡುವದೆಂದೂ, ಹೇಳುವದು ಭಕ್ತಿಯೂ ಅಲ್ಲ. ಜ್ಞಾನವೂ ಅಲ್ಲ. ಇಷ್ಟಲಿಂಗದ ಜ್ಞಾನವಿಲ್ಲದೇ ಬರೀ ಪೂಜೆ ಮಾಡಿದರೆ ಕೀಳು ಗುಣವುಳ್ಳ ಸ್ತ್ರೀಯಳು ಶುದ್ಧ ನೀರಿನಲ್ಲಿ ಸ್ನಾನಮಾಡಿದಂತೆಯೇ ಸರಿ. ಎಂಬ ಜಗದಣ್ಣನ ವಚನವನ್ನು ನೋಡಿಯಾದರೂ ಕಲಿಯಿರಿ.

"ಉಂಬಲ್ಲಿ ಉಡುವಲ್ಲಿ ಕ್ರಿಯೆಯುಳಿಯಿತ್ತೆಂಬರು। ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು। ಎಂತಯ್ಯಾ ಅವರ ಭಕ್ತರೆಂತೆಂಬೆ? ಎಂತಯ್ಯಾ ಅವರ ಯುಕ್ತರೆಂತೆಂಬೆ? ಕೂಡಲಸಂಗಮದೇವ ಕೇಳಯ್ಯಾ! ಹೊಲತಿ ಶುದ್ಧನೀರ ಮಿಂದಂತಾಯಿತ್ತಯ್ಯಾ ॥"

ವಿಮರ್ಶಾತ್ಮಕ ವಿಚಾರವೆಂಬ ಐಶ್ವರ್ಯದ, ಆಧ್ಯಾತ್ಮಿಕ ಮತ್ತು ಸಾಮಾಜಿಕ ತತ್ವಜ್ಞಾನ ಮಂದಿರವಾದ, ಲಿಂಗಾಂಗಸಾಮರಸ್ಯ ಸಂಸ್ಕೃತಿಯನ್ನು ಅಂಗವಿಸಿಕೊಳ್ಳುವ ಕಲ್ಯಾಣದ ಮಹಾಮನೆಯಾಗಿದ್ದ, ಅನುಭವಮಂಟಪದಲ್ಲಿ ಸಮಗಾರ ಹರಳಯ್ಯನ ಮಗನಿಗೆ ಬ್ರಾಹ್ಮಣ ಮಧುವಯ್ಯನ ಮಗಳನ್ನು ತಕ್ಕೊಂಡು ಕಲ್ಯಾಣ ಕಟ್ಟಿದರು. (ಲಗ್ನ ಮಾಡಿದರು.) ಬಸವಣ್ಣನವರು ಮಾದರ ಚನ್ನಯ್ಯ, ಸಮಗಾರ ಹರಳಯ್ಯ, ಡೋಹರಕಕ್ಕಯ್ಯ, ಹಡಪದ ಅಪ್ಪಣ್ಣ, ಮಡಿವಾಳಮಾಚಯ್ಯ, ಮಾದಾರ ಧೂಳಯ್ಯ, ಮೇದಾರಕೇತಯ್ಯ, ತಳವಾರ ಕಾಮಿದೇವ, ಸೂಳಿ ಕಮಲಕ್ಕ, ಸತ್ಯಕ್ಕ, ಗುಡ್ಡವ್ವೆ ಮೊದಲಾದ ಸ್ತ್ರೀ ಪುರುಷರ ಕೂಡ ಬಸವಣ್ಣನವರು ಸಹಭೋಜನ ಮಾಡಿರುವರು. ಬಹುದೂರ ಪ್ರದೇಶಗಳಿಂದ ಬಂದು ಸಹಾಯಕರಾಗಿದ್ದ ವಿಭೂತಿಗಳಾದ ಅನೇಕ ಶರಣ-ಶರಣೆಯರೂ ಸ್ವತಂತ್ರನಾಗಿ ಕಾಯಕ ಮಾಡಿ ಬಂಧುಪ್ರೀತಿಯಿಂದ ಕೂಡಿ ಸಮಾನತೆಯಿಂದ ಕೂಡಿ ಉಂಡು ಕೊಟ್ಟು ಕೊಂಡಿರುವರು. ಜಾತ್ಯಂಧತೆಯ ಕುಲಾಚಾರದ ಕಟ್ಟು ಹರಿದು ಹೋದದ್ದರಿಂದ ಮೇಲಿನ ವಿಭೂತಿಗಳು ಒಂದುಕಡೆ ಕೂಡಿ ಲಿಂಗಾಂಗ ಸಂಸ್ಕೃತಿಯ ಚಿತ್ಕಲಾ

ಚೈತನ್ಯದಿಂದ ಪ್ರಕಾಶಕ್ಕೆ ಬಂದರು. ಇವರು ಹೇಳಿರುವ ವಚನಗಳೇ ಆ ವಿಭೂತಿಗಳ ಹಿರಿಮೆಯ ನಿದರ್ಶನಗಳಾಗಿವೆ. ವರ್ಣಾಶ್ರಮ, ಅಸ್ಪೃಶ್ಯತೆ, ಕುಲಾಚಾರ, ಜಾತಿಸಂಗಡ, ಗೋತ್ರಪ್ರವರ, ಉಚ್ಚನೀಚಗಳೆಂಬ ವಿಷವೃಕ್ಷಗಳು ಬೇರುಬಿಟ್ಟು ಹರಡಿಕೊಂಡು ಭೂತನಾಟ್ಯವಾಡುತ್ತಿದ್ದ ಆ ೧೨ನೇ ಶತಮಾನದಲ್ಲಿಯೇ ಉಂಟುಮಾಡಿದ ಪ್ರಚಂಡ ಕ್ರಾಂತಿಯನ್ನು ನೋಡಿದರೆ ಬಸವಣ್ಣನ ಗಂಡುಗಲಿತನವು ಸಹಜವಾಗಿ ವ್ಯಕ್ತವಾಗುವದು. ಆಗ ನಿರಂಕುಶ ರಾಜನಿದ್ದುದರಿಂತ ಬಸವನ ಕ್ರಾಂತಿಯು ರಾಜ್ಯಕ್ರಾಂತಿಗೂ ಕಾರಣವಾಯಿತು. ಈಗ ಪ್ರಜಾಸ್ವಾತಂತ್ರ್ಯದ ಕಾಲವಿದೆ. ಈಗ ಸಹ ಲಿಂಗವಂತರು ಹಿಂಜರಿಯುವದೆಂದರೆ ಜೀವನ್ಮೃತರೇ ಸರಿ. ಜೀವನ್ಮುಕ್ತರಲ್ಲ. ಏಳಿರಿ! ಪುನಃ ಶರಣ-ಶರಣೆಯರ ಕ್ರಾಂತಿ ಕಹಳೆಯನ್ನು ಊದೋಣ. ಅವರು ಬಿಟ್ಟಲ್ಲಿಂದ ಕಾರ್ಯ ಮುಂದುವರಿಸೋಣ!! ಲಿಂಗಾಂಗಸಾಮರಸ್ಯ ಸಂಸ್ಕೃತಿ ಪ್ರಭೆಯನ್ನು ಹರಡಿ ಹೊಸ ಸಮಾಜ ಕಟ್ಟೋಣ!!!

---

## ನೂರೊಂದು ಸ್ಥಲಗಳು.

( ಲೇಖಕರು--ಶ್ರೀ. ಬಸಪ್ಪ ಚನ್ನಪ್ಪ ಪಟ್ಟೇದ ವಂಟಮುರಿ. )

---

ಸಿದ್ಧಾಂತ ಶಿಖಾಮಣಿಯೊಳಗಿನ ಷಟ್‌ಸ್ಥಲಾಂತರ್ಗತ ನೂರೊಂದು ಸ್ಥಲಗಳನ್ನು ಓದಿ ಅವುಗಳ ಸಂಬಂಧವಾಗಿ ನನಗೆ ತೋರಿದ ಆಕ್ಷೇಪಗಳನ್ನು ಕುರಿತು, "ಶಿವಾನುಭವ" ವಾಚಕರ ಪರಿಶೀಲನೆಗಾಗಿ ಒಂದು ಪತ್ರವನ್ನು "ಶಿವಾನುಭವ"ದ ಎಪ್ರೀಲ ೧೯೪೪ರ ಸಂಚಿಕೆಯಲ್ಲಿ ಪ್ರಕಟಿಸಿರುವೆನಷ್ಟೇ! ಅದರಲ್ಲಿ ಮಾಡಿದ ಆ ಸ್ಥಲಗಳ ಹೊಂದಿಕೆಯು ನನ್ನ ತಿಳುವಳಿಕೆಯಂತೆ ಸರಿಯಾಗಿರುವದಿಲ್ಲ- ಈ ನೂರೊಂದು ಸ್ಥಲಗಳಲ್ಲಿ (೪೪) ಅಂಗಸ್ಥಲಗಳೆಂದೂ (೫೭) ಲಿಂಗಸ್ಥಲಗಳೆಂದೂ ಹೇಳಲ್ಪಟ್ಟಿರುವವು. ಅಂಗರು ತಮ್ಮ ತಮ್ಮ ಲಿಂಗಗಳಲ್ಲಿ ಬೆರೆಯುಲಿಕ್ಕೆ ಈ ಅಂಗಸ್ಥಾನಗಳು ಸಾಧನವಾಗಿರುತ್ತವೆ. ಅಂಗಸ್ಥಾನಗಳು ಅಂಗರು ತಮ್ಮ

ತಮ್ಮ ಲಿಂಗಗಳಲ್ಲಿ ಬೆರೆಯುವ ಕ್ರಮವನ್ನು ಹೇಳುತ್ತವೆ. ಆದಕಾರಣ ಅಂಗರು ತಮಗೋಸ್ಕರ ಹೇಳಲ್ಪಟ್ಟ ಅಂಗಸ್ಥಲಗಳನ್ನು ಹೊಂದಿದೊಡನೆಯೇ ತಮ್ಮ ಲಿಂಗದಲ್ಲಿ ಬೆರೆಯುತ್ತಲೇ ಮುಂದುವರಿಯತಕ್ಕದ್ದು. ಇದೇ ಸಮೀಚೀನವಾದ ಮಾರ್ಗವು. "ಅಂಗನು ಸಾಲಾಗಿ (೪೪) ಅಂಗಸ್ಥಲಗಳನ್ನು ಪಡೆದು ಐಕ್ಯನಾಗಬೇಕು. ಆ ಬಳಿಕ ಆ ಐಕ್ಯನೇ ಜಗದುದ್ಧಾರಾರ್ಥವಾಗಿ (೫೭) ಲಿಂಗಸ್ಥಲಗಳನ್ನಾಚರಿಸಬೇಕು." ಎಂದು ಹೇಳುವದ ಸರಿಯಲ್ಲ. ಅದರಿಂದ ಈ ನೂರೊಂದು ಸ್ಥಲಗಳು ಅನುಸರಿಸಲಿಕ್ಕೆ ತೀರ ದುರ್ಘಟನೀಯವೆಂದೂ ಅವುಗಳ ಗೋಜಿಗೆ ಹೋಗದೇ ಸುಮ್ಮನಿರುವದೇ ಪರಿಣಾಮಕರ ಎಂದೂ ಬಹುಜನ ಭಕ್ತರು ಭಾವಿಸುವರು. ಹೀಗಾಗಿಯೇ ಈ ಏಕೋತ್ತರ ಶತಸ್ಥಲದ ಬಳಕೆಯು ನಮ್ಮಲ್ಲಿ ಮೂಲೆಗುಂಪಾಗಿರುವದು. ಇದಲ್ಲದೆ ಬರಿಯ ಅಂಗಸ್ಥಲಗಳನ್ನಷ್ಟೇ ಪಡೆದರೆ ಐಕ್ಯತ್ವ ಸಂಭವಿಸಲಾರದು. ಮತ್ತು ಮುಂದಿನ ಲಿಂಗಸ್ಥಲಗಳು ಆ ಐಕ್ಯನ ಶೇಷಾಯುಷ್ಯದ ಕರ್ತವ್ಯವನ್ನು ಇರಿಸುವಂಥವಿರುತ್ತವೆಂದು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿದ್ದಾದರೂ ಸಮಂಜವೆನಿಸುವದಿಲ್ಲ. ಆ ಕಾರಣ ನನ್ನ ವಿಚಾರವನ್ನು ಮತ್ತೊಮ್ಮೆ ತಮ್ಮ ಮುಂದಿಡುವೆನೆಂದು ಅದೇ ಪತ್ರದಲ್ಲಿ ಅರಿಕೆ ಮಾಡಿದ್ದೆನು. ಆ ಮೇರೆಗೆ ನನ್ನ ಪ್ರಕೃತಿಯ ಪರಿಸ್ಥಿತಿಯನ್ನು ನೆನೆದು ಈಗ ಅದನ್ನು ಯಥಾಮತಿ ಮಂಡಿಸಿರುವೆನು.

ಅಂಗಸ್ಥಳಗಳು ಅಂಗರು ತಮ್ಮ ತಮ್ಮ ಲಿಂಗಗಳಲ್ಲಿ ಬೆರೆಯಲಿಕ್ಕೆ ಪಡೆಯಬೇಕಾದ ಆವಶ್ಯಕಸಾಧನಗಳು ಮಾತ್ರ! ಹೊಂದತಕ್ಕ ಸಾಧ್ಯವು (ಧ್ಯೇಯವು) ಇನ್ನೂ ಮುಂದೆಯೇ ಇರುವದು. ಅದನ್ನೇ ಸಂಪಾದಿಸುವ ಕ್ರಮವನ್ನು ಲಿಂಗಸ್ಥಳಗಳಲ್ಲಿ ಸೂಚಿಸಿದ್ದಾರೆ. ಅಂಗಸ್ಥಳಗಳು ಶಿಷ್ಯಗುರುವಿನಿಂದ ಯಾವಯಾವ ಸಂಗತಿಗಳನ್ನು ಅರಿಯಬೇಕೆಂಬದನ್ನು ಹೇಳುತ್ತಾರೆ. ಹಾಗೆ ಅರಿತು ತನ್ನಲ್ಲಿ ಮನಃಪೂರ್ವಕ ಸಂಗ್ರಹಿಸಿ ಮುಂದೆ ಭಕ್ತನು ಸ್ವತಃ ಹಾಗೆ ನಡೆಯತಕ್ಕದ್ದದೆ. ಈ ನಡೆಯೇ ಆತನು ತನ್ನ ಲಿಂಗದಲ್ಲಿ ಬೆರೆಯುವದರ ಅರ್ಥವು. ಹಾಗೆ ನಡೆಯದೇ ಬರೇ ತಿಳಕೊಂಡರೆ ಅದು ಗಿಳಿಯ ಪಾಠವಾಯಿತು. "ಫೋನೊ" ಯಂತ್ರವು ಸಂಗ್ರಹಿಸಿಟ್ಟುಕೊಂಡ ಹಾಡಾಯಿತು. ಅದರಿಂದ ಅವಕ್ಕೆ ಹೇಗೆ ಆನಂದ (ಉದ್ಧಾರ) ವಿಲ್ಲವೋ ಅದೇ ರೀತಿ ಮೇಲೆ ಹೇಳಿದ ಐಕ್ಯ

ನದಾಗುವದೆಂಬುದು ಸುಲಭವಾಗಿ ತಿಳಿಯುವಂತಿದೆ. ಪ್ರತಿಯೊಬ್ಬ ಭಕ್ತನು ತನ್ನ ಅಂಗಸ್ಥಲಗಳನ್ನು ಸಂಪಾದಿಸಿದ ಕೂಡಲೆ ತಾನು ಆರಾಧಿಸತಕ್ಕ ಲಿಂಗಸ್ಥಲಗಳನ್ನು ಅನುಸರಿಸಬೇಕು. ಹೀಗೆ ತಮ್ಮ ತಮ್ಮ ಲಿಂಗಗಳಲ್ಲಿ ಬೆರೆಯುತ್ತ ಕೊನೆಯವರೆಗೆ ಸಾಗಿದರೆ ಮಾತ್ರ ಐಕ್ಯನು ಸಂಪೂರ್ಣತ್ವ ಹೊಂದುವನು. ಆ ಸ್ಥಲಗಳ ಕ್ರಮವು ಕೆಳಗಿನಂತೆ ಆಗುವದು.

| ಕ್ರಮಾಂಕ | ಅಂಗರ | ಅಂಗಸ್ಥಲಗಳು | ಲಿಂಗಸ್ಥಲಗಳು | ಒಟ್ಟು |
|---|---|---|---|---|
| ೧ | ಭಕ್ತ | ೧೫ | ೯ | ೨೪ |
| ೨ | ಮಹೇಶ | ೯ | ೯ | ೧೮ |
| ೩ | ಪ್ರಸಾದಿ | ೭ | ೯ | ೧೬ |
| ೪ | ಪ್ರಾಣಲಿಂಗಿ | ೫ | ೯ | ೧೪ |
| ೫ | ಶರಣ | ೪ | ೧೨ | ೧೬ |
| ೬ | ಐಕ್ಯ | ೪ | ೯ | ೧೩ |
| | | ೪೪ | ೫೭ | ೧೦೧ |

(ಈ ಸ್ಥಲಗಳ ಹೆಸರುಗಳನ್ನು ಇಷ್ಟವುಳ್ಳವರು ಗ್ರಂಥಗಳಲ್ಲಿ ನೋಡಬಹುದು) ಅಂಗಸ್ಥಲಗಳು ಲಿಂಗಸ್ಥಳಗಳನ್ನು ಕ್ರಮಿಸಲಿಕ್ಕೆ ಅದು ಹೇಗೆ ಸಾಧನವಾಗಿರುವದೆಂಬುದು ಕೆಳಗಿನ ವಿವರಣೆಯಿಂದ ತಿಳಿಯುವಂತಿದೆ.

ಇಲ್ಲಿ ಅಂಗಸ್ಥಳಗಳ ಸಂಕ್ಷೇಪ ವಿವರಣೆಯುಳ್ಳ ಪಟ್ಟಿಯು ಮುಂದಿರುವದು ಅವಶ್ಯವದೆ. ಆದರೆ ಹಾಗೆ ಮಾಡಲು ಇದು ಸ್ಥಳವಲ್ಲ. ಪ್ರಕೃತಿಯ ಅನುಕೂಲತೆಯಂತೆ ಅದನ್ನು ಮುಂದೆ ಪ್ರಸಿದ್ಧಿಸುವ ಅಪೇಕ್ಷೆ ಉಂಟು.

## ಭಕ್ತಸ್ಥಲ.

ಇದರ ಅಂಗಸ್ಥಲಗಳು (೧೫), ಲಿಂಗಸ್ಥಲಗಳು ೯ ಇರುತ್ತವೆ. ಅಂಗಸ್ಥಲಗಳಲ್ಲಿ ಮೊದಲಿನ (೮) ಸ್ಥಲಗಳು ಜೀವನನ್ನು ಭಕ್ತನನ್ನಾಗಿ ಮಾಡುವದರಲ್ಲಿಯೇ ಹೋಗಿಬಿಡುವವು. ಮುಂದಿನವುಗಳಲ್ಲಿ (೯) ನೆಯದು ಅವನು ಹಿಡಿಯತಕ್ಕ ಮಾರ್ಗ ಕ್ರಿಯೆಗಳನ್ನು ಹೇಳುತ್ತದೆ. ಇವೆಲ್ಲ ತೀರ ಬಹಿರಂಗವು. ೧೦ ರಿಂದ ೧೨ರ ವರೆಗಿರುವ ಕ್ರಿಯೆಗಳು

ಮೀರಿದ ಕ್ರಿಯೆಗಳು (ಆಂತರಿಕವಾದವುಗಳು) ಇರುತ್ತವೆ. ಆವುಗಳ ತರುವಾಯದ (೩) ಮಾಟಗಳಲ್ಲಿ ೧ನೆಯ ಉಪಾಧಿ ಮಾಟವು ತ್ಯಾಗಾಂಗಿಗೂ ೧೪ನೆಯ ನಿರುಪಾಧಿ ಮಾಟವು ಭೋಗಾಂಗಿಗೂ ೧೫ನೆಯ ಸಹಜಮಾಟವು ಯೋಗಾಂಗಿಗೂ ಸಂಬಂಧಿಸಿರುವವು. ಭಕ್ತನ ಆಚಾರ ಲಿಂಗಸ್ಥಲಗಳು (೯) ಉಂಟು. ಅವುಗಳಲ್ಲಿ ಗುರುತ್ರಯುರಿಂದ ಲಿಂಗತ್ರಯ ಪಡೆದು ಆರಾಧಿಸಿ ಜಂಗಮತ್ರಯ ಪಡೆಯುವದನ್ನು ಹೇಳಿರುತ್ತದೆ. ಇದೆಲ್ಲ ನೋಡಿದರೆ ಭಕ್ತನ ಜನ್ಮಸಾಫಲ್ಯಕ್ಕಾಗಿ ಆತನ ಮುಂದಿರಿಸಿದ ಇಡೀ ಧ್ಯೇಯವೇ ಇದಾಗಿರುವದಲ್ಲದೆ ನೂತನ ದೀಕ್ಷಾಯುಕ್ತನಾದ, ತ್ಯಾಗಾಂಗನ ಪೂರ್ವಾವಸ್ಥೆಯಲ್ಲಿರುವವನ ಧ್ಯೇಯವಲ್ಲೆಂಬುದು ತಾನೇ ಒಡೆದು ಕಾಣುವಂತಿರುವದು. ಮುಂದಿನ ವಚನ ನೋಡಿರಿ. "ಆಧಾರದಲ್ಲಿ ಆಚಾರಲಿಂಗವ ಪೂಜಿಸಿ ಆಚಾರಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ. ಸ್ವಾಧಿಷ್ಠಾನದಲ್ಲಿ ಗುರುಲಿಂಗನ ಪೂಜಿಸಿ ಗುರುಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ. ಮಣಿಪೂರಕದಲ್ಲಿ ಶಿವಲಿಂಗನ ಪೂಜಿಸಿ ಶಿವಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ. ಅನಾಹತದಲ್ಲಿ ಜಂಗಮಲಿಂಗವ ಪೂಜಿಸಿ ಜಂಗಮಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ. ವಿಶುದ್ಧಿಯಲ್ಲಿ ಪ್ರಸಾದಲಿಂಗವ ಪೂಜಿಸಿ ಪ್ರಸಾದಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ ಆಜ್ಞಾ ಚಕ್ರದಲ್ಲಿ ಮಹಾಲಿಂಗವ ಪೂಜಿಸಿ ಮಹಾಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ. ಇಂತು ಷಡಾಧಾರದಲ್ಲಿ ಷಡ್‌ಲಿಂಗವ ಪೂಜಿಸಿ ಷಟ್‌ಸ್ಥಲ ಭಕ್ತನಾದನಯ್ಯಾ ನಿಮ್ಮ ಶರಣ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ"

ಮೇಲೆ ಹೇಳಿದ ಆಚಾರಲಿಂಗಕ್ಕೂ ಈ ವಚನದಲ್ಲಿ ಹೇಳಿದ ಆಚಾರಲಿಂಗಕ್ಕೂ ಭೂಮ್ಯಾಕಾಶದಷ್ಟು ಅಂತರವದೆ. ಈ ವಚನದಲ್ಲಿ ಹೇಳಿದ್ದು ಕೇವಲ ಬಹಿರಾಚಾರ ಲಿಂಗವು. ದೀಕ್ಷಾಯುಕ್ತನ ಶಕ್ತಿಗೆ ಸರಿಯಾದುದು (ಅನುರೂಪವಾದುದು.) ಮೇಲೆ ಹೇಳಿದ ಭಕ್ತನು ಅಂಗರೆಲ್ಲರಿಗೂ ಸಾಮಾನ್ಯವಾದ ಮಹಾಭಕ್ತನು; ಅವನ ಆಚಾರಲಿಂಗವು ಪರಿಪೂರ್ಣವಾದದ್ದು ಅಂದರೆ ಬಹಿರಾಚಾರ, ಅಂತರಿಕಾಚಾರ, ಸಹಜಾಚಾರಗಳನ್ನೆಲ್ಲ ಒಳಕೊಂಡುದು. ಈ ವಚನದಿಂದ ಮತ್ತೂ ಒಂದು ಮಾತು ಸ್ಪಷ್ಟವಾಗುವದೇನೆಂದರೆ — ಕೆಲ ಅರಿಯದ ಅಯ್ಯಗಳೂ ಗುರುವಿರಕ್ತರೂ "ನಾವು ಭಕ್ತರಲ್ಲಿ ಮಹೇಶ್ವರರು" ಎಂದು ಒಳ್ಳೇ ಬಿಂಕ

ದಿಂದ ಹೇಳುತ್ತಿರುವದು ತೀರ ಜೊಳ್ಳಾದುದೂ ಅವನತಿಕಾರಕವಾದುದೂ ಇರುವರೆಂಬುದು ಆರೂ ಲಿಂಗಗಳ ಪೂಜಕರೆಲ್ಲ ಭಕ್ತರೇ ಅಹುದು ಎಂಬುದು ತಾನೇ ಯಾರಿಗಾದರೂ ಒಡೆದುಕಾಣದೆ ಇರದು. ಜಗದ ಹಿರಿಯಣ್ಣ ಬಸವಣ್ಣನವರಾದರೂ '' ವಿಪ್ರನೊದಲ್ಗೊಂಡು ಅಂತ್ಯಜ ಕಡೆಯಾಗಿ ಲಿಂಗಧಾರಿಗಳನ್ನೆಲ್ಲ ಒಂದೇ ಎಂಬೆನು '' ಎಂದು ಹೇಳಿದ ವಚನದ ಸಾರವಾದರೂ ಇದೇ ! ಇದೂ ಅಲ್ಲದೆ ಆ ಪ್ರಮಥ ಪುಂಗ ವನು ಷಟ್‍ಸ್ಥಲಗಳನ್ನು ೩೬ ಸ್ಥಳಗಳಲ್ಲಿ ಬಿತ್ತರಿಸಿದ್ದಾನೆ. "ಷಡಂಗರು ಅದಾವ ಸ್ಥಳದಲ್ಲಿಯೇ ಇರಲಿ, ಅಲ್ಲಿಯೇ ಷಡುಸ್ಥಳವು ಬಂದು ಇಂಬು ಗೊಳ್ಳದಿದ್ದರೆ ಸುಡುವೆನೀ ತನುವೆನು. " ಎಂದೂ ಹೇಳಿದ್ದಾನೆ. ಹೀಗೆ ಷಡಂಗರಲ್ಲಿ ಪ್ರತಿಯೊಬ್ಬನು ಷಟ್‍ಸ್ಥಲಭೋಗಿಯಾದ ಮೇಲೆ "ನಾನು ಭಕ್ತನಲ್ಲ ನಾನು ಮಹೇಶ್ವರನಲ್ಲ" ಎಂದು ಹೇಳಲಿಕ್ಕೆ ಅದಾರ ಬಾಯಿ ಏಳುವದು ! ಸರ್ವರೂ ಭಕ್ತರೇ ! ಸರ್ವರೂ ಮಹೇಶ್ವರರೇ !। ಸರ್ವರೂ ಮಾರ್ಗ ಕ್ರಿಯಾಸಕ್ತರೇ !!! ಸರ್ವರೂ ಮೀರಿದ ಕ್ರಿಯಾಸಕ್ತರೇ ? !!! ಇದನ್ನೆಲ್ಲ ಲಕ್ಷಕ್ಕೆ ತಂದುಕೊಂಡು ಇನ್ನುಮೇಲಾದರೂ ಈ ಅಯ್ಯಗಳು ಎಚ್ಚರಿಯುವರೆಂದು ಆಶಿಸಬಹುದಲ್ಲವೇ ?

ದೀಕ್ಷಾಯುಕ್ತನಿಗೆ ಮುಂದಣ ಅಂಗಸ್ಥಳಗಳುః—(೯) ಭಕ್ತಿಸ್ಥಳ, (೧೦) ಲಿಂಗಾರ್ಚನಸ್ಥಳ, (೧೧) ಭವಿ ನಿರಸನ ಸ್ಥಳ, (೧೨) ಸೂತಕ ನಿರಸನ ಸ್ಥಳ, (೧೩) ನೀತಿ ಪಾಲನ ಸ್ಥಳ, (೧೪) ಕಾಯಕ ಸಂಪಾದನ ಸ್ಥಳ, (೧೫) ಉಪಾಧಿದಾನ ಸ್ಥಳ, ಇವೇಳು ಆತನ ಆಚಾರಲಿಂಗಸ್ಥಳ ಗಳುః—(೧) ಭಕ್ತ್ಯುದಯ, (೨) ಸಮತೋದಯ, (೩) ಕರುಣೋ ದಯ, (೪) ನಿತ್ಯ ಪೂಜಾನುಸರಣೆ, (೫) ಪ್ರಮಥಾನುಸರಣೆ, (೬) ಸತ್ಪಾತ್ರ ದಾನಾನು ಸರಣೆ, (೭) ಇಷ್ಟನಿದರ್ಶನ, (೮) ಸದಾಚಾರ ನಿದ ರ್ಶನ, (೯) ದಯಾಲತ್ವ ನಿದರ್ಶನ. ಹೀಗೆ ಒಂಬತ್ತು ಈ ಸ್ಥಳಗಳನ್ನು ಮಹೇಶ್ವರ ಸ್ಥಳದ ಉಪಸ್ಥಳಗಳೆಂದು ತಿಳಿಯಬೇಕು. ಇದರಿಂದ ಸ್ಥಳದ ಸಂಖ್ಯೆಯು ನೂರೊಂದನ್ನು ಮೀರಲಾರದು.

ಶಾಲೆಗೆ ಹಾಕಿದ ಚಿಕ್ಕ ಮಗುವಿಗೆ, ಅವನ ಧ್ಯೇಯವನ್ನು ( ದೇಶ ಭಾಷೆಯಲ್ಲಿ ಮುಲಕೀಪರೀಕ್ಷೆ ಪಾಸಾಗಬೇಕೆಂಬದನ್ನು ) ಮುಂದಿಟ್ಟು ಅವನಿಗೆ ಮೊದಲನೇ ಇಯತ್ತೆಯ ಅಭ್ಯಾಸವನ್ನು ಹೇಗೆ ಆರಂಭಿಸು ವರೋ ಹಾಗೆ, ದೀಕ್ಷಾಯುಕ್ತನಿಗೆ ಮೊದಲಿನ ಭಕ್ತಸ್ಥಳದೊಳಗಿನ ಅಂಗ

ಲಿಂಗಸ್ಥಳಗಳನ್ನು ಬರೇ ಉಪಚಾರಾರ್ಥವಾಗಿ ಕಿವಿಗೆ ಹಾಕಬಹುದು. ಅವುಗಳ ವಿಷಯದಲ್ಲಿಯೂ ಭಕ್ತಿಯನ್ನು ಜಾಗೃತಗೊಳಿಸಬಹುದು.

ಮಹಾಭಕ್ತನು (ಭಕ್ತನು) ತನ್ನ ಪರಿಪೂರ್ಣಾಚಾರಲಿಂಗದಲ್ಲಿ ಬೆರೆದು, ಸ್ವಯ–ಚರ–ಪರಜಂಗಮತ್ವ ಹೊಂದಬೇಕಾಗಿದೆ. ಅದರ ಸಲುವಾಗಿ ಅವನು ಅಂಗಸ್ಥಳಗಳಲ್ಲಿ— ಉಭಯ ( ಭಕ್ತ-ಜಂಗಮ, ಶಕ್ತಿ-ಶಿವ; ಅಂಗ-ಲಿಂಗ; ಭಾಂಡ-ಭಾಜನ; ಹೊರಗೊಳಗೂ ಇತ್ಯಾದಿ,) ತ್ರಿವಿಧ, (ಗುರು-ಲಿಂಗ ಜಂಗಮ; ಇಷ್ಟ-ಪ್ರಾಣ-ಭಾವ; ಸತ್ವ-ರಜ-ತಮ; ತ್ರಿಪುಟಿ, ಇತ್ಯಾದಿ) ಚತುರ್ವಿಧ (ಗುರು-ಲಿಂಗ-ಜಂಗಮಗಳಿಗೆ ಮೂಲ ಕಾರಣವಾದ ಪರಮಾತ್ಮ ಅಥವಾ ಪ್ರಸಾದ (ಇವುಗಳ) ಈ ನಾಲ್ಕರ ಶ್ರೇಷ್ಠತ್ವ) ಎಂಬ ಮೂರು ಸ್ಥಳಗಳು ಒಂದು ( ಏಕತ್ವ-ಉಳ್ಳವು ) ಎಂದು ಮೊದಲು ನಿಃಸಂಶಯವಾಗಿ ಅರಿತುಕೊಳ್ಳಲೇಬೇಕು. ಅದರಂತೆ ದೇಹ ಮೂಲಕ ಹಾಗೂ ಭಾವ ಮೂಲಕ ಮಾಡುವ ಕ್ರಿಯೆಗಳೆಲ್ಲವೂ ಆತ್ಮಗತವಾಗಬೇಕೆಂಬುದನ್ನು ತಿಳಿದಿರಲಿಕ್ಕೇಬೇಕು. ಈ ರೀತಿ ಮನಗಂಡ ಮೇಲೆ ಅದೇ ಪ್ರಕಾರ ತ್ರಿಲಿಂಗಗಳನ್ನು ಪೂಜಿಸಿದರೆ (ನಡೆದುಕೊಂಡರೆ) ತನ್ನ ಲಿಂಗದಲ್ಲಿ ಬೆರೆಯುವನು.

## ಮಹೇಶ್ವರ ಸ್ಥಲ.

ಇದರ ಅಂಗಸ್ಥಲಗಳು (೯) ಮತ್ತು ಲಿಂಗಸ್ಥಳಗಳು (೯) ಕೂಡಿ (೧೮) ಅವೆ. ಅಂಗಸ್ಥಳಗಳಲ್ಲಿ ೨ನೆಯದಾದ ಲಿಂಗನಿಷ್ಠಾ ಸ್ಥಳವೇ ಬಹು ಮಹತ್ವದ್ದದೆ. ಅದರ ತರುವಾಯ ಪೂರ್ವಾಶ್ರಯ (ಮೊದಲು ಹತ್ತಿದ ದುರ್ಗುಣ, ಚಟ, ಕೆಟ್ಟ ಸಂಪ್ರದಾಯ) ನಿರಸನಸ್ಥಳ ಇವೆರಡಿದ್ದರೆ ಉಳಿದ ಅನಿಷ್ಟಕಾರಕವಾದ ನಾಲ್ಕು ಸಂಗತಿಗಳನ್ನು ನಿರಸನಗೊಳಿಸುವದು ತಾನೇ ಸಾಧ್ಯವಾಗುವದು. ಮುಂದಿನ (೮) ನೆಯ ಸ್ಥಳದಲ್ಲಿ ಶಿವನು ನಿಜವಾಗಿಯೂ ಜಗನ್ಮಯನಾಗಿದ್ದುದನ್ನು ಒಪ್ಪಿಕೊಂಡರೂ (೯) ನೆಯದರಲ್ಲಿ ಅವನು ಭಕ್ತದೇಹಿಕನೇ ಎಂಬುದನ್ನು ಮರೆಯಬಾರದೆಂದು ಹೇಳಿರುವರು. ಈ ಲಿಂಗನಿಷ್ಠೆ ಪೂರ್ವಾಶ್ರಯ ತ್ಯಾಗ, ತನ್ನಲ್ಲಿಯೇ ಶಿವನಿರುವನಲ್ಲದೆ ಹೊರಗಿರುವದಿಲ್ಲೆಂಬ ದೃಢವಿಶ್ವಾಸ ಇವಿಲ್ಲದಿದ್ದರೆ ಮಹೇಶ್ವರನು ತನ್ನ ಗುರುಲಿಂಗದಲ್ಲಿ (ಬಹಿರಾಚಾರಲಿಂಗದಲ್ಲಿ) ಬೆರೆಯುವದು ಅಶಕ್ಯವೇ ಸರಿ. ಲಿಂಗವು ತನ್ನಲ್ಲಿಯೇ ಇರುವದೆಂಬ

ನಂಬುಗೆ ಇದ್ದರೇ ಮಾತ್ರ, ಕ್ರಿಯಾಗಮ, ಭಾವಾಗಮ, ಜ್ಞಾನಾಗಮ ಗಳನ್ನು ಯಥಾಪೂರ್ವಕ ನಡೆದು, ಸಕಾಯ (ದೇಹ, ಅಕಾಯ (ಮನ) ಪರಕಾಯ (ಜ್ಞಾನ) ಗಳ ಸಾಧನದಿಂದ ಧರ್ಮಾಚಾರ ಭಾವಾ ಚಾರ ಜ್ಞಾನಾಚಾರ ಸಂಪಾದಿಸಲಿಕ್ಕೆ ಬಹು ಸಹಾಯವಾಗುವದು. ದೀಕ್ಷಾಯುಕ್ತನಾದರೂ ಇದೇ ಮೇರೆಗೆ ತನ್ನ ಅಂಗಲಿಂಗಗಳಲ್ಲಿ ಬೆರೆಯ ಬೇಕು. ಅವು ಉಪಸ್ಥಳಗಳಿದ್ದುದರಿಂದಲೂ, ಸುಲಭವಾಗಿ ತಿಳಿಯು ವಂತೆ ಇರುವದರಿಂದಲೂ ಹೆಚ್ಚಿಗೆ ಬರೆಯುವ ಅವಶ್ಯಕತೆ ಇರುವದಿಲ್ಲ.

## ಪ್ರಸಾದಿ ಸ್ಥಳ.

ಇದರಲ್ಲಿ (೭) ಅಂಗಸ್ಥಳಗಳೂ (೯) ಲಿಂಗಸ್ಥಳಗಳೂ ಕೂಡಿ ಒಟ್ಟಿಗೆ (೧೬) ಸ್ಥಳಗಳಿವೆ. ಪ್ರತಿಯೊಂದರಲ್ಲಿ ಅಂಗಸ್ಥಲಗಳು ಶಿಕ್ಷಣದಿಂದ ಅರಿ ವುಪಡೆಯತಕ್ಕವುಗಳೂ, ಅಂಗಸ್ಥಳಗಳು ಆ ಪ್ರಕಾರ ನಡೆಯತಕ್ಕವು ಗಳೂ (ಅಂದರೆ ಲಿಂಗದಲ್ಲಿ ಬೆರೆಯತಕ್ಕವುಗಳೂ) ಇರುತ್ತವೆ. ಭಕ್ತನೇ ಗುರು-ಲಿಂಗ-ಜಂಗಮಗಳ ಮಹಾತ್ಮ್ಯವನ್ನರಿತು, ಅವನ್ನು ಸರಿಯಾಗಿ ಪೂಜಿಸಿ ಪ್ರಸಾದಪಡೆದು ಶರಣನಾಗಿ ಮುಂದೆ ಪ್ರಸಾದದಲ್ಲಿ ಬೆರೆದು ಕೃತಾರ್ಥನಾಗುವನು. ಆದಕಾರಣ ಇವುಗಳ ಮಹತ್ವವನ್ನರಿತವನೇ ಮುಂದೆ ಶಿವಲಿಂಗದಲ್ಲಿ ಸುಲಭವಾಗಿ ಬೆರೆಯುವನೆಂಬುದು ಸ್ಪಷ್ಟವು. ಶಿವಲಿಂಗವು ಹೊರಗಿಲ್ಲ, ತನ್ನ ಒಳಗೆ ಇರುವ ಸರ್ವಸಾಕ್ಷಿಕವಾದ ಜ್ಞಾತ್ರ ವಾಗಿರುವದು. ಅದರಲ್ಲಿ ಬೆರೆಯಬೇಕಾದರೆ ಹೊರಗಿನದೆಲ್ಲ (ಕಾಯ-ಇಂ ದ್ರಿಯ-ಪ್ರಾಣಗಳನ್ನೆಲ್ಲ) ಅವನಿಗೆ ಅರ್ಪಣ ಮಾಡಬೇಕಾಗುವದು ಹಾಗೆ ಅರ್ಪಿಸುವ ಪೂರ್ವದಲ್ಲಿ ಅವನ್ನೆಲ್ಲ ಅನುಕೂಲತೆ ಮಾಡಿಕೊಳ್ಳಬೇಕಾ ಗುವದು. ಇದನ್ನೇ ಅವುಗಳ ಅನುಗ್ರಹ ಪಡೆಯುವದೆಂದು ಹೇಳಿ ದ್ದಾರೆ. ಇಂತಾದಾಗಲೇ ಅವನು ಶಿವಲಿಂಗದ ಶಿಷ್ಯನೂ ಶುಶ್ರೂಷಕನೂ ಸಕಲರಿಗೆ ಸೇವ್ಯನೂ (ಅನುಕರಣೀಯನೂ) ಆಗುವದು ಶಕ್ಯವದೆ. ಈ ರೀತಿ ಉನ್ನತಿಪಡೆಯಲಿಕ್ಕೆ ಮೇಲೆ ಹೇಳಿದ ಆರೂ ಸ್ಥಳಗಳ ಮಹಾತ್ಮ್ಯ ವರಿತು ಅವನ್ನು ಅನುಸರಿಸದಿದ್ದರೆ ನಿರ್ವಾಹವೇ ಇಲ್ಲ.

## ಪ್ರಾಣಲಿಂಗಿ.

ಇದರಲ್ಲಿ ಅಂಗಸ್ಥಲಗಳು (೫) ಲಿಂಗಸ್ಥಳಗಳು (೯) ಕೂಡಿ (೧೪) ಅವೆ. ಇದು ಪ್ರಾಣಲಿಂಗವನ್ನು ಆಂತರಿಕ ಗುಣ ದ್ರವ್ಯಗಳಿಂದ ಪೂಜಿಸ

ತಕ್ಕುದ್ದಾಗಿರುವದು. ಆದಕಾರಣ ಮನಃ ಶುದ್ಧಿಯನ್ನೂ, ಸಾತ್ವಿಕ ಗುಣಗಳನ್ನೂ ಹೊಂದಬೇಕಾದುದು ಅವಶ್ಯ. ಇದನ್ನು ಪ್ರಾಣಲಿಂಗಾರ್ಚನೆಯ ಸ್ಥಳದಲ್ಲಿ ಹೇಳಿ ಮುಂದೆ ಶಿವಯೋಗ ಸಮಾಧಿಸ್ಥಳವು ಬಣ್ಣಿಸಲ್ಪಟ್ಟದೆ. ಅದಕ್ಕೆ ಸಿದ್ಧಾಂತ ಶಿಖಾಮಣಿಕರ್ತರು ಪಾತಂಜಲಿಯ ಪ್ರಾಣಾಯಾಮವನ್ನೇ ಮುಖ್ಯವಾಗಿ ಹೇಳಿರುವರು. ಆದು ನಮ್ಮ ಪ್ರಮಥರಿಗೆ ಮಾನ್ಯವಿಲ್ಲ. ಅದು ಕೃತ್ರಿಮವೂ (ಅಸ್ಥಿರವೂ) ಹಾಗೂ ಬಹು ಕಷ್ಟಕರವೂ ಆಗಿರುವದು. ಅಂತೇ ಆದನ್ನು ತಿರಸ್ಕರಿಸಿ ಸ್ವಾಭಾವಿಕವಾದ ಕ್ರಿಯಾಚಾರಗಳನ್ನೂ ಬಹಿರಂತರಂಗಗಳಲ್ಲಿ ಸಾಧಿಸಿಕೊಂಡು ಸೌಮ್ಯವಾದ ರಾಜಯೋಗ ಮಾರ್ಗದಲ್ಲಿ ಮುಂದುವರಿದು ಶಿವಯೋಗ ಸಮಾಧಿಯನ್ನೈದಲು ಅಂಗಲಿಂಗ ಸ್ಥಳಗಳನ್ನೇರ್ಪಡಿಸಿದ್ದಾರೆ. ವೀರಶೈವರು ಇದೇ ಮಾರ್ಗವನ್ನನುಸರಿಸಬೇಕು. ಲಿಂಗವು ಏಕದೇಶೀಯವಲ್ಲ. ಅದು ಸರ್ವವ್ಯಾಪಿಯು. “ लिंगमध्ये जगत् सर्वं त्रैलोक्यं सचराचरम् । ” ಅಹುದು. ಆದರೂ ಅದು ಅಂಗದೊಳಗೇ ಇರುವದಲ್ಲದೆ ಪ್ರತ್ಯೇಕವಾಗಿರುವದು ಶಕ್ಯವಿಲ್ಲೆಂಬ ಸಂಗತಿಗಳನ್ನು ಪ್ರಾಣಲಿಂಗಿಯೂ ಒಳಿತಾಗಿ ಅರಿದುಕೊಂಡಾಗಲೇ ತನ್ನ ಜಂಗಮಲಿಂಗದಲ್ಲಿ ಬೆರೆಯಲು ಶಕ್ತನಾಗುವನು. ಜಗತ್ತನ್ನೆಲ್ಲ ವ್ಯಾಪಿಸಿದ ಮಹಾಚೈತನ್ಯದಲ್ಲಿ ಬೆರೆಯಲು ಶಕ್ತನಾಗುವನು. ಅದು ನಿಜವಾಗಿ ಜೀವವೆಂಬ ಆತ್ಮನೇ ಅಹುದು ಎಂದು ಸಾಧಿಸಿಕೊಂಡು ತದನುಸಾರ ನಡೆಯಬೇಕು. ಜೀವಾತ್ಮನೂ, ಅಂತರಾತ್ಮನೂ, ಪರಮಾತ್ಮನೂ ಏನೆಂದರೂ ಪರಮಾತ್ಮನೇ ಹೊರತು ಅನ್ಯವೇನೂ ಅಲ್ಲ. ಹೀಗೆ ಜೀವ (ಪ್ರಾಣ)ವು ಪರಮಾತ್ಮವಾದ ಮೇಲೆ “ನಾನು” ಅನ್ನತಕ್ಕದೇನೂ ಉಳಿಯಲಿಲ್ಲ. ಕಾಯ-ಕರಣ-ಭಾವಗಳು ಈ ಮೊದಲೇ ಶಿವಾರ್ಪಿತವಾಗಿವೆ. ಆ ಕಾರಣ ನಿರ್ದೇಹಿ, ನಿರ್ಭಾವಿ ಆಗಿ ನಷ್ಟಪ್ರಾಯವಾಗಿ ಹೋಯಿತು. ಅದು ಆಗ “ನಾನು ನನ್ನದು” ಎಂಬುದು ಇಲ್ಲವಾದ ಮೇಲೆ ಪ್ರಾಣಲಿಂಗಿಯು ಆದಿಪ್ರಸಾದಿ ಅಂತ್ಯಪ್ರಸಾದಿ ಸೇವ್ಯಪ್ರಸಾದಿಯಾಗುವನು. ಹುಸಿಗಳೆಯಲು ಉಳಿಯುವ ಸತ್ಯವೇ ಪ್ರಸಾದವು. ಅಂತಹದನ್ನು ಪಡೆದವನೇ ಪ್ರಸಾದಿ. ಈತನೇ ಸ್ವಯ ಜಂಗಮನು. ಹೀಗೆ ಭಕ್ತನು ಜಂಗಮಲಿಂಗದಲ್ಲಿ ಬೆರೆದು ಏಕವಾಗುವದೇ ಉಭಯ ಸ್ಥಳವು.

## ಶರಣಸ್ಥಳ.

ಇದರಲ್ಲಿ ಅಂಗಸ್ಥಳಗಳು (೪) ಲಿಂಗಸ್ಥಳಗಳು (೧೨) ಒಟ್ಟು ೧೬ ಸ್ಥಳಗಳಿವೆ. ಅಂಗಸ್ಥಳಗಳಲ್ಲಿ ಮೊದಲು ದೀಕ್ಷಾಪಾದೋದಕ, ಜ್ಞಾನ

ಪಾದೋದಕ, ಎಂಬವುಗಳಿವೆ. ಪಾದೋದಕವೆಂದರೆ ಅನುಗ್ರಹ ಅಥವಾ ಕೃಪೆ. ದೀಕ್ಷೆ, ಶಿಕ್ಷೆಜ್ಞಾನಗಳು. ಗುರುವಿನಿಂದ ಪ್ರಾಪ್ತವಾಗದಿದ್ದರೆ ಭಕ್ತನಿಗೆ ಪ್ರಸಾದಿತ್ವ ಉಂಟಾಗದು. ಆದುದರಿಂದ ಶರಣನು ಮೊದಲು ತನ್ನ ತಾಮಸತನವನ್ನೆಲ್ಲ ಪರಿಪೂರ್ಣ ತ್ಯಜಿಸಿ ಪೂರ್ಣ ಸಾತ್ವಿಕನಾಗಬೇಕೆಂಬುದನ್ನು ಅರಿಯಬೇಕು. ತರವಾಯ ಶುದ್ಧ ಶಿವಜ್ಞಾನವನ್ನು ಗುರುವಿನಿಂದ ತಿಳಿದುಕೊಳ್ಳಬೇಕು. ಬಳಿಕ ತಾನು ಅಂಗಲಿಂಗದ ಸಾಮರಸ್ಯ ಹೊಂದುವದೇ ತನ್ನ ಜನ್ಮದ ಇತಿಕರ್ತವ್ಯವೆಂಬುದನ್ನು ಗೊತ್ತು ಮಾಡಿಕೊಳ್ಳಬೇಕು. ಇವೆಲ್ಲ ಸಾಧನಗಳು ಪ್ರಾಪ್ತವಾದ ಮೇಲೆ ತನ ಪ್ರಸಾದಲಿಂಗದಲ್ಲಿ ಬೆರೆಯಲಿಕ್ಕೆ ತಡವಾಗದು. ಪ್ರಸಾದವೇನೆಂದರೆಂಬದನ್ನು ಈ ಮೊದಲೇ ಹೇಳಿದೆ. ಮಾಯೆಯ ಮೂಲಕವಾಗಿಯೇ ಈ ಹುಡಿಯು ಉದಯಿಸಿ ಅಜ್ಞಾನ ವಶರಾದುದರಿಂದ ನಮ್ಮನ್ನು ಅದು ಅಂಟಿಕೊಂಡಿದೆ. ವಿವೇಕಿಯಾಗಿ ಶಿವಜ್ಞಾನದಿಂದ ಅದನ್ನು ಕಳೆದು ನಿಜವಸ್ತು ಸ್ವರೂಪಕ್ಕೆ ತಂದರೆ ಅದೇ ಪ್ರಸಾದ (ಪರಮಾತ್ಮ)ವಾಗುವದು. "ತಾನು ಸತಿ ಪ್ರಸಾದವೇ ಪತಿ" ಎಂದು ದೃಢಬುದ್ಧಿವಿಡಿದು ಶರಣನು ಅದರಲ್ಲಿ ಬೆರೆದು ಸರ್ವದಾ ಲಿಂಗಾನಂದ ರೂಪನಾಗುವನು. ಅದರ ಕ್ರಮವು ಎಂತೆಂದರೆ — ಲಿಂಗಸ್ಥಳಗಳಲ್ಲಿ ದೀಕ್ಷಾಪಾದೋದಕ ಮೊದಲಾದ ೧೨ ಸ್ಥಳಗಳಿವೆ. ಆದುದರಿಂದ ಸೇವ್ಯಪ್ರಸಾದಿಯಾದ ಶರಣನು ಪರಮಾತ್ಮ ಭಿನ್ನತೆಯಿಂದ ಕ್ರಿಯಾ-ಭಾವ-ಜ್ಞಾನಗಳ ನಿಷ್ಪತ್ತಿ (ಸಹಜಸ್ಥಿತಿ) ಹೊಂದಿ, ಪಿಂಡಾಕಾಶ,— ಬಿಂದ್ವಾಕಾಶ— ಮಹಾಕಾಶಗಳೋಪಾದಿ ಆ ಕ್ರಿಯಾಭಾವ ಜ್ಞಾನಗಳಿಂದ ಪ್ರಕಾಶಿಸುವನು. ಇಲ್ಲಿ ಶರಣನೇ ಗುರು, ತಾಮಸನಿರಸನವೇ ಲಿಂಗ, ಶೀಲಸಂಪಾದನವೇ ಜಂಗಮ. ಇವು ಮೂರು ಒಂದೆಂಬುದೇ ತ್ರಿವಿಧ ಸಂಪತ್ತಿಸ್ಥಳವು. ಇದೇ ಚರಜಂಗಮಸ್ಥಿತಿಯು.

## ಐಕ್ಯಸ್ಥಳ.

ಈ ಸ್ಥಳದಲ್ಲಿ (೪) ಅಂಗಸ್ಥಳಗಳೂ (೯) ಲಿಂಗಸ್ಥಳಗಳೂ ಕೂಡಿ ಒಟ್ಟು (೧೩) ಸ್ಥಳಗಳು ಇರುತ್ತವೆ. ಅಂಗಸ್ಥಳಗಳಲ್ಲಿ ಸರ್ವಾಚಾರ (ಬಾಹ್ಯಾಂತರಾತೀತ) ಗಳುಳ್ಳವನಾಗಬೇಕೆಂಬುದನ್ನೂ ಲೋಕತ್ರಯವನ್ನೆಲ್ಲ ಒಂದೇ ಲಿಂಗ ರೂಪ ಭಾಜನದಲ್ಲಿ ಸಮಾವಿಷ್ಟಗೊಳಿಸಿ ಅದನ್ನೆಲ್ಲ

ತನ್ನಲ್ಲಿಯೇ ಅಡಗಿಸಬೇಕು (ಅಂತರ್ಭವಿಸಬೇಕು) ಎಂಬುದನ್ನೂ ಅರಿತವರಾಗಿರಬೇಕು. ಮತ್ತು ಅದರಂತೆ ಲಿಂಗಸ್ಥಳದಲ್ಲಿ ಹೇಳಿದ ಕ್ರಮ ಹಿಡಿದು ನಡೆಯಬೇಕು. ಅದು ಎಂತೆಂದರೆ:—ಸ್ವೀಕೃತಪ್ರಸಾದಿ, ಶಿಷ್ಟೋದನ ಪ್ರಸಾದಿಯಾಗಿ ಚರಾಚರಲಯವನ್ನು ಹೊಂದಬೇಕು. ಸ್ವೀಕೃತವೆಂದರೆ ಈ ಮೊದಲೇ ಐಕ್ಯನು ಕೈಕೊಂಡುದು- ತನ್ನ ಕಾಯ-ಕರಣ-ಭಾವ-ಪ್ರಾಣಗಳನ್ನೂ ಹಾಗೂ ಜಗತ್ತಿನೊಳಗಿನ ಪಂಚವಿಷಯರೂಪ ಎಲ್ಲ ವಸ್ತುಗಳು ಇವನ್ನೆಲ್ಲವನ್ನೂ ಮುಂಚೆಯೇ ಪ್ರಸಾದವಾಗಿ ಮಾಡಿಕೊಂಡು ಸ್ವೀಕರಿಸಿರುವನು. ಹಾಗೆ ಸ್ವೀಕರಿಸುವಾಗ ಒಂದು ವಸ್ತುವನ್ನು ಮಾತ್ರ ಅವನು ತ್ಯಜಿಸಿರುವನು. ಅದು ಮಾಯೆಯು. ಅದನ್ನಾದರೂ ಈಗ ಪ್ರಸಾದವಾಗಿ ಸ್ವೀಕರಿಸದಿದ್ದರೆ ಅವನಿಗೆ ಪರಿಪೂರ್ಣ ಐಕ್ಯತ್ವವು ಸಂಭವಿಸಲಾರದು. ಅದೇ ಶಿಷ್ಟೋದನವು ಅಂದರೆ ಉಳಿದ ಅನ್ನವು. ಇನ್ನೂ ಅದು ಪ್ರಸಾದರೂಪಹೊಂದಿಲ್ಲ. ಅದನ್ನು ಸಹ ಪೂರ್ವದಲ್ಲಿ ಪಡೆದ ಶಿವಜ್ಞಾನದಿಂದ ಪ್ರಸಾದವನ್ನು ಮಾಡಿ ಸ್ವೀಕರಿಸಿದರೆ ಶಿಷ್ಟೋದನ ಪ್ರಸಾದಿ ಎನಿಸುವನು. ಈಗ ಮಾತ್ರ ತೋರುವ ದೃಶ್ಯವೆಲ್ಲವೂ ಒಂದೇ ಒಂದಾದ ಮಹಾಲಿಂಗರೂಪವಾಯಿತು. ಆದುದರಿಂದ ಇದು ಚರ-ಇದು ಅಚರ ಎಂಬುದೆಲ್ಲ ಲಯವಾಯಿತು.

ಮುಂದೆ ಭಾಂಡ- ಭಾಜನ- ಅಂಗಲೇಪನಗಳೆಂಬ ಸ್ಥಳಗಳಿರುವವು. ಭಾಂಡವೆಂದರೆ ಹೊರಗಣ ಮೈ, ಭಾಜನವೆಂದರೆ ಅದರೊಳಗಿರುವ ಚೈತನ್ಯ ರೂಪ ವಸ್ತು. ಹೊರಗಣ ಅಂಗವು ಹೊರಗುಳಿಯದೆ ಒಳಗಣ ಚೈತನ್ಯರೂಪ ಲಿಂಗದೊಡನೆ ಆಲೇಪನ ಅಂದರೆ ಐಕ್ಯಹೊಂದುವದೇ ಅಂಗಲೇಪನ, ಬಳಿಕ ಸ್ವಪರಾಜ್ಞೆ, ಭಾವಾಭಾವ, ಜ್ಞಾನಶೂನ್ಯ ಸ್ಥಳಗಳಿರುವವು. ಭಾಂಡಭಾಜನಗಳೊಂದಾದೊಡನೆ, ತಾನು ಅನ್ಯವು ಎಂಬುದಕ್ಕೇನೂ ಉಳಿಯಲಿಲ್ಲ. ಉಂಟು, ಇಲ್ಲ, ಎಂಬುದಕ್ಕೇನೂ ಉಳಿಯಲಿಲ್ಲ. ಆಕಾರಣ ಜ್ಞಾನಕ್ಕೆ ಯಾವ ಕಾರ್ಯವೂ ಉಳಿಯಲಿಲ್ಲ. ಆದುದರಿಂದ ಅದು ತಾನೇ ಶೂನ್ಯವಾಯಿತು. ಇಲ್ಲಿ ಏಕಾಂಗನೇ ಗುರು, ಸರ್ವಾಚಾರಸಂಪತ್ತಿಯೇ ಲಿಂಗ, ಏಕಭಾಜನವೇ ಜಂಗಮ, ಸಹಭೋಜನವೇ ಪ್ರಸಾದ, ಈ ನಾಲ್ಕು ಒಂದೆಂದರಿವುದೇ ಚತುರ್ವಿಧ ಸಾರಾಯವು. ಇದೇ ಪರಜಂಗಮ ಸ್ಥಿತಿಯು.

ಈ ಮೇರಿಗೆ ಪ್ರಮಥರು ದಿಗ್ದರ್ಶನ ಮಾಡಿದಂತೆ ಪ್ರತಿಯೊಬ್ಬ ಅಂಗನು ತನ್ನ ಲಿಂಗದಲ್ಲಿ ಬೆರೆಯುತ್ತ ಬೆರೆಯುತ್ತ ಸಾಗುವದು ಸ್ವಾಭಾವಿಕವಾದುದೂ ಶ್ರೇಯಸ್ಕರವಾದುದೂ ಉಂಟು.

## ವಿಭೂತಿ.

ಶಿವ ಶಿವ ಯೆನ್ನುತ ಧರಿಸೆ ವಿಭೂತಿಯು
ಭವ ಮುಗ್ಗರಿಸುತಲೋಡುವುದು !
ಕವಿ ಕವಿಯುವ ದುರ್ಮೋಹಭ್ರಾಂತುಗ
ಳವು ಬೆಳಿಬೆಳೆಯದೆ ಮೊಣಗುವುವು. ॥ ೧ ॥

ಸೂತಕ ಕಟ್ಟುಗಳ್ಕಳಚುವುವು ಭುವಿ
ಭೂತದ ಗಣ ಬಿದ್ದೋಡುವುವು.
ಕಾತುರ ಪಡುತಲಿ ಮಧಮತ್ಸರಗುಣ ಪ್ರ
ಖ್ಯಾತಿಯುಗೊಂಬದೆ ಕರಗುವುವು !! ॥ ೨ ॥

ನಾನಾ ಯೆಂಬುವ ಹಾಂಕಾರದ ನುಡಿ
ಬೇನೆಯು ವುಬ್ಬರ ವಿಳಿಸುವದು !
ನಾನೀ ನೆಂಬುವ ಭೇದವ ಸುಡುತಲಿ
ಜ್ಞಾನಕೆ ಸತ್ವವ ಸಾಧಿಪುದು !! ॥ ೩ ॥

ಭಕ್ತಿಯು ಬಿತ್ತುವುದೂ ದು
ರ್ಭಕ್ತಿ ಸಮೂಲವ ಕಡಿಯುವುದು !
ಮುಕ್ತಿಯು ಮಾರ್ಗದಿ ಮುಂದಾಗುತ ಶಿವ
ಚಿತ್ತವ ತೋರಿಸೆ ಗಟ್ಟಿ ಇದು ! ॥ ೪ ॥

ಅಷ್ಟಾ ವರಣದಿ ಆದಿ ಇದೂ ಶಿವ
ನಿಷ್ಠಾ ಪರದಲಿ ರತ್ನ ವಿದು ।
ಅಷ್ಟ ಧರಿದ್ರವ ದಹಿಸುತ್ತಲಿ ಬಹು
ಇಷ್ಟಾರ್ಥಗಳನ್ನೀಯುವುದು ॥ ॥ ೫ ॥

ಮಾಯೆಯ ಭ್ರಮೆಯನ್ನಳಿಸುವುದು ಸ
ತ್ಕಾಯಕದಾದಿಯ ತೋರುವುದು ।
ಕಾಯಜ ಹರಶಿವ ಭಕ್ತಿಯ ಪ್ರೇಮವ
ನೀಯುತ ಮುಕ್ತಿಯ ನೀಡುವುದು ॥ ॥ ೬ ॥

ಮಹಮಹ ಮಂತ್ರವ ಸಿದ್ಧಿಸಿ ಧರೆಯಲಿ
ಮಹಿಮಾ ನಾಡನು ಬೆಳಗುವುದು ।
ಮಹದೇವರ ಪುರಿಯೋಳ್ನಲಿಸುತ್ತಲಿ ಶ್ರೀ
ಮಹ ವದನದಿ ನಲಿ ನಲಿಯುವುದು॥ ॥ ೭ ॥

ಯೋಗಿ ವಿರಕ್ತನ ಮೋಹವಿದು ಶ್ರೀ
ಯೋಗದ ಬೋಧೆಯ ಭಾಗ್ಯವಿದು ।
ಯೋಗಿಗಳೊಡೆಯ ನಿರ್ವಾಣೇಶನ
ದೇಗುಲ ಶ್ರೀ ಮಹಲಿಂಗನದು ॥ ॥ ೮ ॥

**S. ಕರಿಯಪ್ಪ ಮಹದೇವರಹಳ್ಳಿ.**
ಶಿವಾನುಭವ ಸಂಘ,
ಕಾನಕಾನಹಳ್ಳಿ ತಾಲೂಕು, ಜಿಲ್ಲಾ ಬೆಂಗಳೂರ.

---

## ಬಾಳಿನಲ್ಲಿ ಸಾವು.

(ಲೇಖಕರು:— ಶ್ರೀಮಾನ್ ಉಪಾಧ್ಯಾಯ ಮ. ಮಲ್ಲಪ್ಪ ಕನ್ನಡಜಾಣ,
ಸಾಹಿತ್ಯ ಶಿರೋಮಣಿ ಜನತಾಜ್ಞಾನ ಪ್ರಚಾರಕ ಜ್ಞಾನಮಂದಿರ
ಹಲಗೂರು.)

ಬಾಳು ಮಾನವನಿಗೆ ಒಂದು ಕಾಯಸಿದ್ಧಿಯು. ಮರಣವು ಅರ್ಥಾತ್ ಸಾವು ಮಾನವನ ಅಭಿಲಾಷೆ ಆಕಾಂಕ್ಷೆಗಳಿಗೆ ಒಂದು ಮೇರೆಯು. ಜಾತಸ್ಯ ಮರಣಂ ಧ್ರುವಂ ಎಂದು ಆರ್ಯ ತಪಸಿಗಳ ವಾಣಿಯಿದ್ದರೆ ಮನುಷ್ಯ ಒಂದಿಲ್ಲ ಒಂದುದಿನ ಸಾಯಲೇಬೇಕು. "ಅರಸು

ಆಳುಗಳಿಬ್ಬರಿಗೂ ಸಾವು ಬಿಡದು" ಎಂದು ಹಳ್ಳಿಯವರ ನುಡಿಯಿರುತ್ತವೆ. ಭೂಮಿಯಲ್ಲಿ ನಾವು ಜನಿಸಿದ್ದಕ್ಕೆ ಮರಣವು ಅನಿವಾರ್ಯವು. ಬಾಳಿನ ರೂಪು ಬದಲಾಯಿಸುವ ಒಂದು ಸನ್ನಿವೇಶವು ಸಾವು. ಮರಣದಿಂದ ಉಂಟಾದ ದುಃಖವು ಅತಿ ದಾರುಣವೇ ಸರಿಯು. ಮಹಾತ್ಮರಿಗೆ ಮರಣವು ಒಂದು ವರಪ್ರಸಾದವು. "ನಾಳೆ ಬಪ್ಪುದು ನಮಗಿಂದೇ ಬರಲಿ ಇಂದು ಬಪ್ಪುದು ನಮಗೀಗಲೆ ಬರಲಿ. ಇದಕಾರಂಜುವರು? ಇದಕಾರಳುಕುವರು? ಜಾತಸ್ಯ ಮರಣಂ ಧ್ರುವಂ ಎಂದುದಾಗಿ ನಮ್ಮ ಕೂಡಲಸಂಗಮದೇವನ ಬರಹವ ತಪ್ಪಿಸುವರೆ?" ಎಂದು ಘೋಷಿಸಿರುವ ಮಹಾತ್ಮ ಬಸವಣ್ಣನವರೇ ಸಾಕ್ಷಿಯು. "ಕಟ್ಟಿ ತುಂಬಿದ ಮೇಲೆ ಕ್ಷಣ ಮಾತ್ರವಿರಲಿಲ್ಲ-" ಎಂಬ ಪುರಂದರದಾಸರ ನುಡಿಯನ್ನು ನೋಡೋಣ. ಮನುಷ್ಯನು ಈ ಪ್ರಪಂಚದಲ್ಲಿ ಒಂದು ಕ್ರಿಯೆ— Mission ಗಾಗಿ ಜನ್ಮತಾಳುವನು. ಅದು ಸಂಪೂರ್ಣವಾದತಕ್ಷಣವೇ ಈತನು ಈ ಪ್ರಪಂಚದಿಂದ ಬಿಡುಗಡೆಯಾಗುವನು— ಸಾಯುವನು. ಇದನ್ನು Mission Theory Of Life ಎನ್ನುತ್ತಾರೆ. ನೆಪೋಲಿಯನ್ನನು ಹಲವು ಯುದ್ಧ ಭೂಮಿಗಳಲ್ಲಿ ಮುಂದಿನ ಸಾಲಿನಲ್ಲಿ ನಿಂತು ಯುದ್ಧ ಮಾಡಿದಾಗ್ಯೂ ಒಂದು ಗುಂಡಾದರೂ ಆತನಿಗೆ ತಾಕಲಿಲ್ಲವು. ಆತನು ಏರಿದ ಅಶ್ವಗಳು ಎಷ್ಟೋ ಸತ್ತವು. ಅತನಿಗೆ ಮಾತ್ರ ಏನೂ ಆಗುತ್ತಿರಲಿಲ್ಲ. " No bullet will ever strike me so long as I am destined to live " ಎಂದು ಆಗಾಗ್ಗೆ ಆತನು ಹೇಳುತ್ತಿದ್ದನು. ಈ ಬಗೆಯ ಜೀವನ ಬೇಕೆಂಬ ಹವಣಿಕೆಯಿಂದ ವಾಟರ್ಲೂ ಯುದ್ಧದಲ್ಲಿ ಸೇನಾಪತಿ Nay ಬರುವುದು ಹತ್ತು ನಿಮಿಷ ಹೊತ್ತಾದ ಅನಂತರವೇ ಆತನಿಗೆ ಮುಂದೆ ಕದನ ಮಾಡುವುದು ಸರಿಯಲ್ಲವೆಂದು ಬಗೆದು ಶಸ್ತ್ರ ಸನ್ಯಾಸವನ್ನೇ ಮಾಡಿ, ತಾನು ಪ್ರಪಂಚಕ್ಕೆ ಬಂದ ಕೆಲಸವು ಮುಗಿಯಿತೆಂದು ಭಾಸವಾಯಿತು. "ನನ್ನ ಪ್ರಾಣ ಹೋಗುವುದಾದರೆ ಪ್ರಾರ್ಥನಾಮಂದಿರದಲ್ಲಿಯೇ ಹೋಗಲಿ" ಎಂದು ಉದ್ಘೋಷಿಸಿದ ಮಹಾತ್ಮಾ ಗಾಂಧಿಯವರು ರೂಢಿ ಕಾಲಕ್ಕಿಂತ ಐದು ನಿಮಿಷ ತಡವಾಗಿ ಪ್ರಾರ್ಥನೆಗೆ ತೆರಳಿದರು. ಈ ಅಶಾಂತಿ ಅವನಿಯಲ್ಲಿರುವುದು ಅನುಚಿತವೆಂದೇನೋ ಅರಿತು ಇಹಲೋಕವನ್ನು ಬಿಟ್ಟರು.

ಸಾಕ್ರೆಟೀಸನು 'ಪ್ಲೇಟೋ' ತತ್ವವನ್ನು ಹೊರಗೆಡುವಾಗ ಸಕಲ ವೇದಾಂತವೂ ಸಾವಿನ ಸಮಸ್ಯೆಯು ಸಂಗಡ ಹೊರಪಡುತ್ತದೆ ಎಂದನು. "Philosophy is the study of death" ಭಾರತದಲ್ಲಿನ ಪ್ರಬಲ ವೇದಾಂತವೂ ಕೂಡ ಸಾವಿನ ಪ್ರಶ್ನೆಯು ಸಂಗಡ ಮೊದಲಾಗುವುದು. ಭಗವದ್ಗೀತೆಯೂ ಕಠೋಪನಿಷತ್ತು, ಛಂದೋಗ್ಯ ಉಪನಿಷತ್ತೂ, ಸಾವಿನ ವಿಚಾರವನ್ನೇ ಮೊದಮೊದಲು ಪ್ರತಿಪಾದಿಸುವುದು." ಅಚ್ಛೇದ್ಯೋಽಯಂ ಅದಾಹ್ಯೋಽಯಂ ಅಕ್ಲೇದ್ಯೋಽ ಶೋಷ್ಯ ಏವ ಚ । ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥ ಅವ್ಯಕ್ತೋಽಯಂ ಅಚಿಂತ್ಯೋಽಯಮ ವಿಕಾರ್ಯೋಽ ಯಮುಚ್ಯತೆ । " ಶ್ಲೋಕದಿಂದ ಆತ್ಮದ ನಿತ್ಯವೂ, ಜಡಕಾಯದ ಅನಿತ್ಯತೆಯೂ ಅರಿವಾಗುವುದು. ಈ ಶಾಶ್ವತವಾದ ಸೂಕ್ಷ್ಮ ಶರೀರಕ್ಕೆ ಈ ಜಡಕಾಯವನ್ನು ಕಾಲಕಾಲಕ್ಕೆ ಹೊದಿಸಿ ಈ ಪ್ರಪಂಚದಲ್ಲಿ ಹುಟ್ಟಿಸಿದಂತೆ ಕಾಣುತ್ತದೆ. ಮನುಷ್ಯನ ದೇಹಕ್ಕೆ ಹರಿದ ಅಂಗಿಯನ್ನು ಬಿಸಾಡಿ ಹೊಸ ಅಂಗಿಯನ್ನು ಹಾಕುವಂತೆ, ಈ ಸೂಕ್ಷ್ಮ ಶರೀರಕ್ಕೆ ಒಮ್ಮೆ ಧರಿಸಿದ ಈ ಜಡಹೊದಿಕೆಯನ್ನು ಕೊಳೆತ ಕಾರಣ ಬಿಸಾಡುವುದು. ಪುನಃ ಹೊಸ ದೇಹದಲ್ಲಿ ಸೇರಿ ಪುನರ್ಜನ್ಮವಾಗುವುದು. "ವಾಸಾಂಸಿ ಜೀರ್ಣಾನಿ ಯಥಾ ವಿದಾಯ । ನವಾನಿಗೃಹ್ಣಾತಿನರೋಽಪರಾಣಿ । ತಥಾಶರೀರಾಣಿ ವಿಹಾಯ ಜೀರ್ಣಾನಿ । ಅನ್ಯಾನಿ ಸಂಯಾತಿ ನವಾನಿ ದೇಹೀ ॥ ' ಗೀತಾ ಶ್ಲೋಕವು ಈ ಅರ್ಥವನ್ನೇ ವ್ಯಕ್ತಪಡಿಸುವುದು. ಮರಣ ಪಡೆದ ಅನಂತರವೂ ಆತ್ಮಕ್ಕೆ ಅಧ್ಯಾತ್ಮಿಕ ಜೀವನವಿರುತ್ತದೆ ಎಂದು ಮಹಾ ವಿಜ್ಞಾನಿ ಆಲಿವರ್ ಲಾಡ್ಜನು ಹೇಳಿರುವನು. ಭಾರತೀಯ ವೇದಾಂತಿಯು ಪಾಶ್ಚಿಮಾತ್ಯ ವೈಜ್ಞಾನಿಕನಂತೆ ಮಾನವ ಶರೀರವು ವಸ್ತು ಜಗತ್ತಿನ ಒಂದು ಭಾಗವು ಎಂಬ ದೃಷ್ಟಿಯಿಂದಲೇ ತನ್ನ ವ್ಯಾಸಂಗವನ್ನು ಆರಂಭಿಸುವನು. ಮರಣವು ಈ ಜಗತ್ತಿನಲ್ಲಿ ಪ್ರತಿದಿವಸವೂ ಉಂಟಾಗುವ ಸಕಲ ಬದಲಾವಣೆಗಳಿಗಿಂತಲೂ ಬೇರೆಯಾದದ್ದೇನೂ ಅಲ್ಲ ಎಂದು ವೇದಾಂತವು ಅಭಿಪ್ರಾಯ ಪಡುತ್ತದೆ. ಪ್ರತಿಮಾನವನೂ ಪ್ರತಿಗಳಿಗೆಯಲ್ಲಿಯೂ ಸಾಯುತ್ತಿದ್ದರೂ–ಬದಲಾವಣೆಯಾಗುತ್ತಿದ್ದರೂ, ಮರಣವು ಹತ್ತಿರಕ್ಕೆ ಬಂದಾಗ ಆತನು ಏತಕ್ಕೆ ಅಳುವನೋ, ಏತಕ್ಕೆ ಅಳುಕುವನೋ ಎಂದು ವೇದಾಂತವು ಅಚ್ಚರಿಪಡುತ್ತದೆ. ಭಾರತದಲ್ಲಿ ವೇದಾಂತವು ಅನುಭವದ ಅರಿವನ್ನು ವಿಸ್ತಾರಗೊಳಿಸುವ ಕೆಲಸದಿಂದ ಮೊದಲು ಮಾಡುವುದು. ಎಲ್ಲವೂ

ಬ್ರಹ್ಮ ನಿಜವಾಗಿಯೂ ಯಾವ ಪ್ರಾಣಿಯನ್ನೂ ಮರಣವು ಆವರಿಸಲಾ ರದು ಎಂಬ ಅಂಶವನ್ನು ಅರಿತರೆ ಮರಣಕ್ಕೆ ಅಂಜಬೇಕಾದ್ದು, ಅಳ ಬೇಕಾದ್ದು ಇಲ್ಲವು.

ಪ್ರತಿಯೊಂದು ಪ್ರಾಣಿಯೂ, ಸಸ್ಯವೂ ಒಂದು ಏಕಾಣುವಾಗಿ ಜೀವನವನ್ನು ಆರಂಭಿಸುತ್ತವೆ. ಈ ಅಣುಜೀವನದ ಏಕೀಕರಣದ ಮಾರ್ಪಾಡನ್ನು ಮಾಡುತ್ತದೆ. ಈ ಬೆಳೆವಣಿಗೆಯು ನಿಲ್ಲದೆ ಒಂದೇ ಸಮನೆ ಆಗುತ್ತದೆ. ಅತ್ಯುತ್ತಮವಾಗಿ ಪರಿಶೋಧನೆಯಾದ ಅಣುವು ಪ್ರಾಣಿಯಲ್ಲಿ ಸೇರಿ, ಇತರಿಯದರ ಸಂಗಡ ಸೇರಿ ಸಹಕಾರ ಸಹಾಯ ದಿಂದ ಕೆಲಸ ಮಾಡುವುದು. ಕ್ರಿಮಿಯ ಅಣುವು ಸಣ್ಣದಾಗುತ್ತದೆ ಮತ್ತು ಒಂದು ಬೇರೆ ಸಮೂಹವಾಗುತ್ತದೆ. ಕ್ರಮಕ್ರಮೇಣ ಬಾಳಿನ ಏರುಪೇರುಗಳನ್ನು ಸರಿಪಡಿಸಲು ಕಾಯವು ಸಾಧ್ಯತೆಯನ್ನುಂಟುಮಾಡಿ ಕೊಡುತ್ತದೆ. ಜೀವನವು ಜೀರ್ಣತೆ ಮತ್ತು ಸರಿಪಡಿಸುವಿಕೆಯಿಂದೊ ಡಗೂಡಿದೆ. ಅಣುವಿನ ದೀರ್ಘತ್ವವು ಸ್ವಯಂಸ್ಪರ್ಧೆಯ ಬಲದ ಮೇಲೆ ಅವಲಂಬಿತವಾಗುತ್ತದೆ. ಈ ಕ್ರಿಮಿಯ ಅಣುವು ಸತತವು ಮರಣ ರಹಿತವೆಂಬುದು ಗೋಚರವಾಗುವುದು. ಕ್ರಿಮಿಗೆ ಮಾತ್ರ ಮರಣವಿರು ತ್ತದೆ. ಈ ವೈಜ್ಞಾನಿಕ ದೃಷ್ಟಿಯು ವೇದಾಂತ ದೃಷ್ಟಿಗೆ ಸಮನಾಗುತ್ತ ದೆಯೇ? ಈ ದೇಹವು ಬಹು ಅಣುಕೋಶ—Multicellular body- ಯಾಗಿರುತ್ತದೆ. ಸಾವಿರಾರು ಅಣುಕೋಶಗಳಿಂದ-Cells- ಈ ದೇಹವು ಮಾಡಿದುದಾಗಿರುತ್ತದೆ. ಮನುಷ್ಯನು ಜನ್ಮಧಾರಣ ಮಾಡಿದತಕ್ಷಣವೇ ಈ ಎಲ್ಲ ಅಣುಕೋಶಗಳು ಜೀವವನ್ನು ಧರಿಸುವುವು. ಅಣುಕೋಶಗಳ ಅಳಿವೇ ಮರಣವು. ಮರಣವು ಮಾನವನ ಗುರಿಸಾಧನೆಯಾದ ತಕ್ಷ ಣವೇ ಬರುವುದು. ಜಗತ್ತಿನಲ್ಲಿ ಪ್ರತಿಯೊಂದಕ್ಕೂ ಗುರಿಯಿರುತ್ತದೆ. "ತನ್ನ ತಾನರಿಯಬೇಕು" ಎಂದು ಉಪನಿಷತ್ತಿನಲ್ಲಿ ಇದನ್ನರಿತ ಜ್ಞಾನಿ ಗಳು ನುಡಿದಿರುವರು- ತಾನು ಈ ಪ್ರಪಂಚದಲ್ಲಿ ಬಂದ ಕೆಲಸವೇನು ಎಂಬುದನ್ನು ತಿಳಿದುಕೊಂಡು ಅದರ ಗುರಿಸಾಧನೆಗಾಗಿ ಹೆಣಗಾಡಿದರೆ ಮನುಷ್ಯನ ಕರ್ತವ್ಯವು ಮುಗಿಯಿತು. ಗುರಿಯು ಸಿಲ್ಕಿದವರಿಗೆ ಎಂದರೆ ಆತ್ಮಜ್ಞಾನವಾದವರಿಗೆ ತಮ್ಮಕೃತ್ಯವು ತಿಳಿಯುವುದು, ತಮ್ಮ ಕೆಲಸ ವನ್ನು ಮುಗಿಸಿಕೊಂಡು ಇಲ್ಲದಂತಾಗುವರು. ರಾಮಕೃಷ್ಣಪರಮಹಂಸರು, ಬಸವಣ್ಣ, ಮಹಾತ್ಮ ಗಾಂಧಿಯವರ ಚರಿತ್ರೆಯನ್ನು ಚೆನ್ನಾಗಿ ನೋಡಿ ದರೆ ಇದು ಗೋಚರವಾಗುವುದು.

# ಜೀವನದ ಹಾಡು.

—•—៖*៖—

ಉಸುರದಿರು ಭಾವನೆಯು ಸಂತಾಪ ಶೋಕದಲಿ
ಜೀವನವು ಬರಿಗನಸು ಬರಿಹುರುಳು ಎಂದು.
ಮರಣದಾ ಶಯ್ಯೆಯಲಿ ಮಲಗಿಹುದು ದಿವ್ಯಾತ್ಮ
ಕಾಣುತಿದೆ ಜಗವೆಲ್ಲ ಕುರುಡು ಕುರುಡಾಗಿ.

ಬಾಳಿಲ್ಲ ನಿಜವಿಹುದು. ಬಾಳಿನಲಿ ಬೆಳಕಿಹುದು.
ಮರಣವೇ ಜೀವನದ ಗುರಿಯು ಅಲ್ಲ.
ಮಣ್ಣಿನಿಂದಲೆ ಹುಟ್ಟಿ, ಮಣ್ಣಾಗಿ ತೆರಳುತಿಹೆ
ಎಂಬುದೀ ದನಿಯಿಲ್ಲ ಆತ್ಮದಲ್ಲಿ!

ಸೌಖ್ಯದಾ ಸಿರಿಯಿಲ್ಲ. ದುಃಖದಾ ಕಡಲಿಲ್ಲ.
ಬಾಳಿನಲಿ ವಿಧಿಸಿದಾ ಗೊತ್ತುಗುರಿಯು.
ಪಾಲಿಪುದು ಬಾಳಿನಲಿ ಮುನ್ನಡೆಯು ಹಿರಿನೋಟ
ದಿನದಿನವು ಬೆಳಗಾಗಿ ಅರಳಿದಂತೆ.

ಕಲೆಗಿಲ್ಲ ಆದಿ ತುದಿ ಕ್ಷಣಿಕವಿಹುದೀ ಬಾಳು
ಹೃದಯವಿರೆ ಬಲವಾಗಿ ಪುಷ್ಟಿಯಾಗಿ
ಹಾರುತಿದೆ ಎದೆಯಲ್ಲಿ ಹೂಣಿಡಲು ಹೊರಟಿರುವ
ಡೋಲಿನಾ ತೆರನಂತೆ ಮಸಣದಲ್ಲಿ.

ಜಗದಗಲ ಬಾಳಿನಾ ಸಮರವೇ ಹರಡಿರಲು,
ಬಿದ್ದಿಹೆವು. ಇರುಳಿನಾನಂತದೆಡೆಯಲ್ಲಿ
ಬಾಳದಿರು. ಪಶುವಂತೆ ಮೊನ್ನನೋಳ್ ಬಾಳಿನಲಿ.
ಧೈರ್ಯಗೊಡು ಕಲಿಯಂತೆ ಬಾಳ್ಗಿಚ್ಚಿನಲ್ಲಿ.

ನೆನಹು-ಬಿಡು. ಮುಂದಿನದು ಸುಖದ ಹೆಜ್ಜೇನೆಂದು
ಬಳಲದಿರು. ಹಿಂದಿನದ ನೆನಪುಗಳ ಪರಿಸಿ,
ನಡೆಯಿರಲಿ. ನಿತ್ಯತೆಯು ಸತ್ಯತೆಯು ಮಾರ್ಗದಲಿ
ಹೃದಯದೊಳಗೆಡೆಯಲ್ಲಿ! ದೇವನೆಡೆಯಲ್ಲಿ!!

ಅನುಭಾವಿಗಳ ತತ್ವ ಸೆಳೆಯುತಿರೆ, ನಮ್ಮನ್ನು
ಆಗಬಹುದೀ ಬಾಳು ಬೆಳಕ ಬುಗ್ಗೆ!
ಸಾವ ಮೊಗನಪ್ಪುತಿರೆ, ನಮ್ಮಂದಿನಾ ಕೃತಿಯು
ಬೆಳಕ ದಾರಿಯು ಮುಂದೆ ಭಾವಿಜನಕೆ.

ಭವಕಡಲ ತಾಪದಲಿ ಕಂಗೆಟ್ಟ ತಾಪಸಿಯು
ಬಾಳುವನು. ಹಿರಿಯರಾ ನುಡಿ--ತತ್ವದಲ್ಲಿ
ಕಡಲ ಮಳಲಲಿ ತೊಳಲಿ ಬಳಲುತಿಹ ಪರದೇಶಿ-
ನಡೆಜಾಡು ಕಾಣುತಲಿ ಧೈರ್ಯಗೊಂಬಂತೆ!
ಸಿದ್ಧನಿರು ಬದ್ಧಕಂಕಣನಾಗಿ ಬಾಳಿನಲಿ.
ಅವಿರತವು ನುಗ್ಗುತಿಹ ವಿಧಿವಿಲಾಸಕ್ಕೆ;
ಸಾಧಿಸೆಲೆ ಮುನ್ನೋಟ ಬೆನ್ನತ್ತಿ ಮುನ್ನುಗ್ಗಿ
"ಕಾಯಕವೇ ಕೈಲಾಸ"ದ ಮರಗುಡಿಯಲ್ಲಿ.

— ಕರಿಬಸವ ತನಯ.

---

## ಯತಿವಿರಕ್ತೆ.... ಅಕ್ಕಮಹಾದೇವಿ.

(ಬರೆದವರು:—ಬೂದಿಹಾಳಮಠ ಎಂ. ಎ. ಬಿ. ಟಿ.—ವಿಜಾಪುರ.)

ವಚನಸಾಹಿತ್ಯವು ಕನ್ನಡ ಸಾಹಿತ್ಯಸಾಗರದಲ್ಲಿ ರತ್ನಭಂಡಾರದಂತಿದೆ. ವಚನಸಾಹಿತ್ಯ ಉಗಮ ಹೊಂದಿದ್ದು ಶಂಕರದಾಸಿಮಯ್ಯ ದೇವರದಾಸಿಮಯ್ಯಗಳ ಕಾಲದಿಂದ. ಅವರಿಂದ ವಚನಸಾಹಿತ್ಯ ವಾಹಿನಿಯು ಹೊಸದಾಗಿ ಹರಿದು ಮಡುಪುಗಟ್ಟಿ ಮುಂದೆ ಹರಿಯುತ್ತ ಹೋಗಿದೆ. ಅನೇಕ ಪ್ರಮುಖ ವಚನಗಾರರು ಕನ್ನಡಸಾಹಿತ್ಯ ಸೇವೆಯನ್ನು ನಿರಂತರವಾಗಿ ಕೈಕೊಂಡಿದ್ದಾರೆ. ಭಕ್ತಿಭಂಡಾರಿ ಬಸವಣ್ಣನವರ ವಚನಗಳು ಹೇಗೆ ಜನಪ್ರಿಯವಾದವೋ ಹಾಗೆಯೇ ಅಕ್ಕನ ವಚನಗಳು ಅದ್ವಿತೀಯ ಸಾಹಿತ್ಯ ಪ್ರಪಂಚದಲ್ಲಿ ತಾರೆಗಳಂತೆ ಬೆಳಗುತಲಿವೆ. ಅವುಗಳ ಬೆಳಕು ತೇಜೋಮಯವಾಗಿ ಪ್ರಜ್ವಲಿಸುತಿದೆ.

ಅಕ್ಕನವರು ಮಾಯಾ ಪ್ರಪಂಚಕ್ಕೆ ಆದರ್ಶರು. ಅವರು ತೋರಿಸಿದ ಮಾರ್ಗ ಸ್ತ್ರೀ ಪ್ರಪಂಚಕ್ಕೆ ಉದಾಹರಣೆಯಾಗಿದೆ. ಅವರ ಜೀವನವೇ ಕಾವ್ಯಮಯವಾಗಿದೆ. ಅವರ ಭಕ್ತಿ ಅವರ ಶೀಲ ನಡವಳಿಗಳು ಅವರ ಅನುಭವಾಮೃತ ಶರಣಜೀವನ ಮುಂತಾದವುಗಳು ನಿತ್ಯ ಜೀವನದಲ್ಲಿ ಕಾಣಬರುವ ದೃಶ್ಯಗಳಾಗಿವೆ. ಅಕ್ಕನು ಇಂದಿನ ಪ್ರಪಂಚಕ್ಕೆ ಎದ್ದುಕಾಣುವ ಉದಾಹರಣೆಯಾದರೂ ಕೂಡ ಅವರು ಮಾಡಿದ ತ್ಯಾಗ ಶೀಲಗಳನ್ನು ಇಂದಿನ ಪ್ರಪಂಚ ಕೈಕೊಳ್ಳಲಾರದು. ಅವರು ಅಪ್ರತಿಮ ಸ್ತ್ರೀರತ್ನ.

ಅಕ್ಕನ ಹುಟ್ಟೂರು ಉಡುತಡಿ (ಉಡುಗಣಿ). ತಾಯಿತಂದೆಗಳು ಸುಮತಿ ನಿರ್ಮಲರು- ಶಿವಭಕ್ತರು. ಶಿವಾಚಾರ ಸಂಪನ್ನರು. ಸರಳ ಜೀವಿಗಳು. ಸಾದಾವೃತ್ತಿಯವರು. ಆ ಊರ ಅರಸು ಕೌಶಿಕ. ಬೇಟೆಗೆಂದು ಹೋದ ಅರಸ. ಕೌಶಿಕ ಒಂದು ದಿನ ರಾಜಮಾರ್ಗದಲ್ಲಿ ದಯಮಾಡಿಸುವಾಗ ಕಂಡ ಅಕ್ಕನನ್ನು ಅಕ್ಕನ ಮನ ಸೆಳೆಯುವ ಮೋಹನಾಕೃತಿಯನ್ನು ಕಂಡು ಆಕೆಯನ್ನು ವರಿಸುವ ಆಲೋಚನೆ ಮಾಡಿ ಅಕ್ಕನ ತಾಯಿತಂದೆಗಳ ಬಳಿಗೆ ತನ್ನ ಆಪ್ತಮಂತ್ರಿಗಳನ್ನು ಕಳುಹಿಸಿದ. ನೈಜವಾದ ಭಕ್ತಿಯಿಂದ ಚನ್ನಮಲ್ಲಿಕಾರ್ಜುನನನ್ನು ತನ್ನ ಹೃದಯ ಮಂದಿರದಲ್ಲಿ ಪೂಜಿಸುತ್ತಿದ್ದ ಅಕ್ಕ ಕೌಶಿಕನನ್ನು ವರಿಸಬಲ್ಲಳೆ? "ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಮಲ್ಲಿಕಾರ್ಜುನನಿಗೆ ಒಲಿದವಳು. "ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೆ" ಮನಸೋತವಳು ಇಂಥ ನರಪಶು ಕೌಶಿಕನಿಗೆ ವರಿಸುವದು ಸಾಧ್ಯವೇ? ತಾಯಿತಂದೆಗಳ ಮಾತುಗಳನ್ನು ಧಿಕ್ಕರಿಸಿ ತಾಯಿತನವನ್ನು ಒಲ್ಲೆನ್ನುವಳು. ಆದರೆ ಭವಿಯ ಸಂಪರ್ಕ ಮಾಡಲಾರಳು. ಆದರೆ ಮುಪ್ಪಿನ ತಾಯಿತಂದೆಗಳ ಮಾತುಗಳಿಗೆ ಬೆಲೆ ಕೊಟ್ಟು ಕೌಶಿಕನಿಗೆ ಕೆಲವು ಕರಾರುಗಳನ್ನು ಹಾಕಿ ಅರಸನಾದ ಕೌಶಿಕನ ಕೈಹಿಡಿದಳು. ವೈಭವದಿಂದ ಮದುವೆಯಾದ ಅಕ್ಕ ಅರಮನೆಯನ್ನು ಸೇರಿದಳು. ಶಿವಭಕ್ತೆ ಮಾಯಾಪ್ರಪಂಚದಲ್ಲಿ ಸಿಕ್ಕಳು. ಹೇಯವಾದ ಸಂಸಾರ ಜಂಜಡಕ್ಕೆ ತುತ್ತಾದಳು. ಮೋಹ, ಮದ, ಮಾತ್ಸರ್ಯಗಳ ಭವಣಿಗೆ ಆಹುತಿಯಾದಳು. ಮುಗ್ಧೆ ಅಕ್ಕ ಐಶ್ವರ್ಯ ಆಡಂಬರದ ಅರಮನೆಯ ವಿಲಾಸಗಳಿಗೆ ಮನಸೋಲದೆ ಶಿವಧ್ಯಾನ, ಶಿವಸ್ಮರಣೆ, ಮಲ್ಲಿಕಾರ್ಜುನ ಪೂಜೆ ಮೊದಲಾದ ಧಾರ್ಮಿಕ ವ್ಯವಹಾರಗಳಲ್ಲಿ ತೊಡಗಿದಳು.

“ ಮಾಯದ ಮದ ಕಾಯದ ಕತ್ತಲೆ ಜೀವದ ಜಂಜಡ ’’ ಗಳ ಪೇಚಾಟಕ್ಕೆ ಸಿಕ್ಕ ಅಕ್ಕನ ಹೃದಯವು ಬೆಂದಿತು. ಅಕ್ಕನಿಗೆ ಬೇರೆ ದಾರಿಯು ಕಾಣದೆ ಶಿವನ ಧ್ಯಾನದಲ್ಲಿ ನಿರತಳಾದಳು. ಕಾಮೋದ್ರೇಕನಾದ ಕೌಶಿಕನಿಗೆ ಅಕ್ಕನ ಧಾರ್ಮಿಕ ವೃತ್ತಿ ಸರಿಬೀಳಲಿಲ್ಲ. ಆಕೆಯನ್ನು ಬಲಾತ್ಕಾರದಿಂದ ಕಾಮಾಭಿಲಾಷೆಯನ್ನು ತೃಪ್ತಿಪಡಿಸುವ ಧೈರ್ಯ ಅವನಿಗಿಲ್ಲ. ಲಾವಣ್ಯವತಿಯಾದ ಮಹಾದೇವಿಯು ಒಲಿದು ಬರಬೇಕೆಂಬುದೇ ಅವನ ಉತ್ಕಟೇಚ್ಛೆ. ಎಷ್ಟೋ ದಿನಗಳು ಗತಿಸಿದವು. ಮುಂದೆ ಅವನು ಬಹಳವಾಗಿ ಯೋಚನೆಮಾಡಿ ಒಂದು ಹಂಚಿಕೆಯನ್ನು ಹೂಡಿದ. ತನ್ನ ಅರಮನೆಯ ರಸಿಕ ಪ್ರಿಯರನ್ನು ತನ್ನ ಕಡೆಗೆ ಒಲಿಸುವದಕ್ಕೆ ನಿಯೋಗಿಸಿರಬೇಕು. ಆ ವಿಲಾಸಿನಿಯರು ಆಕೆಯ ಸುತ್ತುವರಿದು ಕೌಶಿಕನ ರೂಪ ಗುಣಗಾನಗಳನ್ನು ಯಥೇಚ್ಛವಾಗಿ ಹೊಗಳಿದರು. ನಿಷ್ಕಲಂಕ ಪವಿತ್ರ ಹೃದಯದ ಅಕ್ಕ ಇಂಥ ಸವಿಮಾತುಗಳು ಕಹಿಯಾಗಿ ತೋರಿದವು. ಕೌಶಿಕನ ಚಿತ್ತವೃತ್ತಿಯನ್ನು ನಾನಾ ಮುಖವಾಗಿ ಖಂಡಿಸಿ ತನ್ನ ಹೃದಯೇಶ್ವರನಾದ ಚಲುವ ಚನ್ನಮಲ್ಲಿಕಾರ್ಜುನನ ಗುಣಗಾನ ವರ್ಣನೆಯನ್ನು ಮಾಡಿದಳು. “ ಪರಿಮಳವಿಲ್ಲದ ಪುಷ್ಪಕ್ಕೆಳಸುವದೇ ಭ್ರಮರ? ಗಿರಿಯಲ್ಲದೆ ಹುಲುಮರಡಿಯಲ್ಲಾಡುವದೇ ಹಂಸ? ಎನ್ನ ದೇವ ಚನ್ನಮಲ್ಲಿಕಾರ್ಜುನನಲ್ಲದೆ ಅನ್ಯಕ್ಕೆಳಸುವದೇ ಎನ್ನ ಮನ ಕೇಳಿರೆ ಕೆಳದಿಯರಿರಾ. ’’

ಸವಿಮಾತಿನಿಂದ ಆಕೆಯ ಮಾರ್ಪಾಡು ಹೊಂದದಿದ್ದದ ಮೂಲಕ ಅಂತಃಪುರದ ಸಖಿಯರು ಅಕ್ಕನಿಗೆ ಅನೇಕ ವಸ್ತ್ರಾಭರಣಗಳ ಆಶೆಯನ್ನು ತೋರಿಸಿರಬೇಕು. ಅಗ್ಗೆ ಆಕೆಯ ಹೃದಯದ ಅಂತರಾಳದಲ್ಲಿ ಅತಿಮಹತ್ತರವರ ಅಂದೋಲನವು ಒಡಮೂಡಿದಾಗ್ಗೆ ಇಂಥ ಕ್ಷಣಿಕ ವಸ್ತ ಆಭರಣಗಳಿಗೆ ಆಶೆಪಡುವಳೆ? ಅಕ್ಕನು ಆ ಗೆಳತಿಯರಿಗೆ ಮಾರ್ಮಿಕವಾಗಿ “ ಮಂಗಳವೇ ಮಜ್ಜನವೆನಗೆ, ದಿಗಂಬರವೇ ದಿವ್ಯಾಂಬರವೆನಗೆ, ರುದ್ರಾಕ್ಷಿಯೇ ವೈದೊಡಗೆ ಎನಗೆ, ಚನ್ನಮಲ್ಲಿಕಾರ್ಜುನನೇ ಗಂಡನೆನಗೆ” ಎಂದು ಉತ್ತರ ಕೊಟ್ಟಿರುವಳು. ಅಕ್ಕನ ವೈರಾಗ್ಯ ಭಾವನೆಯು ಪ್ರತಿಯೊಂದು ಮಾತಿನಲ್ಲಿ ಬಿಂಬಿಸುತ್ತಿದೆ. ಹೀಗೆ ಅಕ್ಕನು ಅರಮನೆಯ ಸ್ವೇಚ್ಛಾ ವೃತ್ತಿಯನ್ನು ಕಂಡು ಹೀಯಾಳಿಸಿರಬೇಕು. ನಿರ್ಭಯದಿಂದ, ನಿರಹಂಕಾರದಿಂದ, ಶಾಂತತೆದಿಂದ ಅನೇಕ ದಿನಗಳನ್ನು ಹೀಗೆಯೇ ನೂಕಿರಬಹುದು.

ಆಕೆಯು ಆಗಾಗ್ಗೆ "ಎನ್ನ ಸುತ್ತಿದ ಪ್ರಪಂಚವ ಬಿಡಿಸಯ್ಯ" ಎಂದು ಶಿವನಲ್ಲಿ ಬೇಡಿಕೊಂಡಿರುವಳು. ಅಕ್ಕನು ಮಹಾ ಸಾಧ್ವಿ. ಮೀರಾಬಾಯಿಯಂತೆ ಅನೇಕ ಅಡ್ಡಿ ಅಡಚಣಿಗಳು ಬಂದರೂ ಲೆಕ್ಕಿಸದೆ ತನ್ನ ಆಧ್ಯಾತ್ಮಿಕ ಜೀವನವನ್ನು ಅವ್ಯಾಹತವಾಗಿ ಸಾಗಿಸಿದ್ದಳು.

ಅಕ್ಕನ ಧಾರ್ಮಿಕ ಜೀವನವು ಕೌಶಿಕನ ಮನೆಯಲ್ಲಿ ಏಕಪ್ರಕಾರವಾಗಿ ಸಾಗಿತು. ಅಕ್ಕನ ಭಕ್ತಿ, ಅಕ್ಕನ ತಾತ್ವಿಕ ವಿಚಾರಗಳು, ಅಕ್ಕನ ಉದಾತ್ತ ವೈರಾಗ್ಯ ಭಾವನೆಗಳು ಅಕ್ಕನ ಗುರುಲಿಂಗ ಜಂಗಮರ ಅಪಾರವಾದ ಸೇವೆ ಮುಂತಾದವುಗಳು ಎಲ್ಲಾ ಕಡೆಗೆ ಪಸರಿಸಿದವು. ಅಕ್ಕನ ಭಕ್ತಿ ಪರಿಮಳವು ವಿನ್ಯಾಸವಾಗಿ ಜಂಗಮರು ಬೇರೆ ಬೇರೆ ಕಡೆಯಿಂದ ಬಂದು ಉಡುತಡಿಯನ್ನು ಸೇರಿದರು. ಆಗಮಿಸಿದ ಗುರುಗಳ ಆದರ ಆತಿಥ್ಯಗಳನ್ನು ಒಳ್ಳೆ ವಿನಯಪೂರ್ವಕವಾಗಿ ಅಕ್ಕ ನೆರವೇರಿಸಿದಳು. ಅರಮನೆಯಲ್ಲಿ ಲಿಂಗಪೂಜೆ, ಗುರುಪೂಜೆ, ಜಂಗಮಪೂಜೆ, ಹರಪೂಜೆ ಶಿವಾನುಭವ ಮೊದಲಾದವುಗಳು ಅತ್ಯಂತ ವೈಭವದಿಂದ ಸದಾ ಸಾಂಗವಾಗಹತ್ತಿದವು. ಶುಭ್ರವಾದ ಬಟ್ಟೆಯನ್ನುಟ್ಟುಕೊಂಡು ಅಕ್ಕ—ಯತಿವಿರಕ್ತೆ, ತನ್ನ ಅಚಲವಾದ ಭಕ್ತಿಯಿಂದ ಭಕ್ತಮಂಡಲಿಯೊಂದಿಗೆ ಪೂಜೆಗಳನ್ನು ಮಾಡಿಸಿದಳು. ವೈಭವಸಂಪನ್ನನಾದ ಕೌಶಿಕರಾಜನಿಗೆ ಅಕ್ಕನ ಪೂಜೆಗಳು ಅಸಹ್ಯವಾಗಿ ತೋರಿದವು. ಒಂದು ದಿವಸ ಮಹೇಶ್ವರ ಗುಂಪೊಂದು ಅರಮನೆಗೆ ದಯಮಾಡಿಸಿತು. ಅರಸನಿಗೆ ಈ ಸುದ್ದಿಯು ತಿಳಿದಕೂಡಲೆ ಆ ಗುಂಪಿಗೆ ತಿರುಗಿ ಹೋಗಲಿಕ್ಕೆ ತಿಳಿಸಿದ. ಜಂಗಮದ್ರೋಹ ಮಾಡಿದ ಕೌಶಿಕನ ನೀತಿಯನ್ನು ಖಂಡಿಸಿದಳು. ಅಕ್ಕನ ಪ್ರವೃತ್ತಿಕೇವಲ ಧಾರ್ಮಿಕ. ಕಾಮುಕ—ಕೌಶಿಕನನ್ನು ಅಕ್ಕ ಕಣ್ಣೆತ್ತಿ ನೋಡುತ್ತಿರಲಿಲ್ಲ. ಹೀಗೆಯೇ ಪುನಃ ಕೌಶಿಕನು ಅಕ್ಕನನ್ನು ಕೆಣಕಿದನು. ಕೊನೆಯದಾಗಿ ಅಕ್ಕನು ಆವನ ಸಹವಾಸವನ್ನು ತ್ಯಜಿಸಿ ಹೊರಟು ಹೋದಳು. ಶ್ರೀಶೈಲ ಪರ್ವತದ ದಾರಿಹಿಡಿದು ಹೋಗುವಾಗ್ಗೆ ಕೌಶಿಕನು ಮಾಯಾ ವೇಷದಿಂದ ಅಕ್ಕನನ್ನು ಕೆಣಕಿರಬೇಕು. ಆದರೆ ಅಕ್ಕ ಅವನನ್ನು ಒಳಿತಾಗಿ ಮೂದಲಿಸಿ ಕಳಿಸಿಕೊಟ್ಟಿರಬೇಕು.

ಅಕ್ಕನ ಯತಿವಿರಕ್ತೆಯ ಭಾವನೆಗಳು ಎಷ್ಟು ಅಸಾಧಾರಣವಾಗಿವೆಂಬುದನ್ನು ಈ ವಚನದಿಂದ ತಿಳಿಯುವದು.

ಹಸಿದೊಡೆ ಬಿಕ್ಷಾನ್ನಗಳುಂಟು.
ತೃಷೆಯಾದೊಡೆ ಕೆರೆಹಳ್ಳ ಬಾವಿಗಳುಂಟು.
ಶಯನಕ್ಕೆ ಹಾಳು ದೇಗುಲಗಳುಂಟು.
ಚನ್ನ ಮಲ್ಲಿಕಾರ್ಜುನಯ್ಯ
ಆತ್ಮ ಸಂಗಾತಕ್ಕೆ ನಿನೇನಗುಂಟು.

ಮುಂದೆ ಅಕ್ಕ ಕಲ್ಯಾಣಕ್ಕೆ ಹೋಗಿ ಅಲ್ಲಿ ಬಸವ, ಚನ್ನಬಸವ ಅಲ್ಲ ಮಾದಿ ಶಿವಶರಣರ ಸಹವಾಸದಲ್ಲಿದ್ದು ಅವರಿಂದ ಅನೇಕ ವಿಷಯ ಗಳನ್ನು ತಿಳಿದುಕೊಂಡಳು. ಅಣ್ಣನಿಂದ ಭಕ್ತಿಮಾರ್ಗವನ್ನು ಪ್ರಭುದೇವ ರಿಂದ ಜ್ಞಾನಮಾರ್ಗವನ್ನು ಅರಿತುಕೊಂಡಳು. ಹೀಗೆ ಅಕ್ಕನು ಭಕ್ತಿ ವೈರಾಗ್ಯ ಮಾರ್ಗಗಳಿಂದ ಶ್ರೀಶೈಲಕ್ಕೆ ಬಂದು ಅಲ್ಲಿ ಕೊನೆಗೆ ಚನ್ನಮಲ್ಲಿ ಕಾರ್ಜುನನಲ್ಲಿ ಬಯಲಾದಳು. ಅಂತರಂಗದ ದಿವ್ಯಜ್ಯೋತಿ ಜಗ ಜ್ಯೋತಿಯಲ್ಲಿ ಬೆರೆತು ಹೋಯಿತು.

---

## ವಚನಗಳು.

( ಲೇಖಕರು:—ಶ್ರೀ. ಆರ್. ಕೆ. ಹಿರೇಮಠ ಮು. ಧಾರವಾಡ )

೧

ಭಕ್ತಿಯು ವರತೆಯಲ್ಲಿದೆ. ಸತ್ಯ ಸಾಧನೆಯು ತಿಳಿನೀರು.
ನಿತ್ಯವೂ ಮನವೊಪ್ಪಿ ಸೇವಿಸಿದಡೆ, ಸಾಧನೆ ಸೆಲೆಯಾಗಿ
ಮೋಕ್ಷ ವಾರಿಧಿಗೆ ಹರಿದು ಕೂಡುವದು ಕಾಣಾ ಸಂಗಮನಾಥ.

೨

ಸಾಧನೆಯ ಶ್ರಮಜೀವಿ ನಾನು. ಅರಿವಿಲ್ಲದ ಮರುಳ ನಾನು.
ದಾರಿಗಾಣದ ಕುರುಡ ನಾನು. ದೇವ! ಕರುಣಿ !! ಭಕ್ತಿಯ
ಬುಗ್ಗೆಯಲಿ ಮುಗ್ಗಿಸಿ ಶುದ್ಧಜೀವಿಯ ಮಾಡು ಸಂಗಮನಾಥ.

೩

ತಿಂಗಳಿನ ತಂಗಿರಣ. ಸೊಗಸಾಗಿ ಸೂಸುವ ಸುಳಿಗಾಳಿ.
ಹಚ್ಚಗೆ ಒಪ್ಪಿತಿಹ ಗಿಡಗಂಟಿ. ಶಬ್ದ ಸುಳಿಯದ ಬಯಲು.
ಕೆಳಗೆ ತಿಳಿಗೊಳ; ಮೇಲೆ ಶಿವಗುಡಿ. ಇಂತಿರಲು ಬೇರೆ
ಸಾಧನಗಳೇಕೆ? ತಂದೆ! ನಿನ್ನ ಧ್ಯಾನಿಸಲು ಸಂಗಮನಾಥ.

---

ಪಂಚಾಕ್ಷರ ಷಡಕ್ಷರ ಮಂತ್ರಧ್ಯಾನದಿಂದ ಅನಿಮಿಷ ದೃಷ್ಟಿಯಿಂದ ನಿರೀಕ್ಷಿಸಿ ಮೂರು ವೇಳೆ ಪ್ರದಕ್ಷಿಣವ ಮಾಡಿ ಆ ಚಿದ್ಘನ ತೀರ್ಥವನ್ನು ದ್ವಾದಶ ದಳ ಕಮಲ ಮಧ್ಯದಲ್ಲಿ ನೆಲಿಸಿರುವ ಇಷ್ಟಮಹಾಲಿಂಗ ಜಂಗಮಕ್ಕೆ ಅಷ್ಟವಿಧ ಮಂತ್ರ ಸಕೀಲಂಗಳಿಂದ ಆಚಾರಾದಿ ಶೂನ್ಯಾಂತವಾದ ಅಷ್ಟವಿಧ ಲಿಂಗ ಧ್ಯಾನದಿಂದ ಅಷ್ಟವಿಧ ಬಂಧಗಳ ಸಮರ್ಪಿಸಿದಲ್ಲಿಗೆ ಅಷ್ಟವಿಧೋದಕವಾಗುವದಯ್ಯಾ. ಆ ಇಷ್ಟ ಮಹಾಲಿಂಗ ಜಂಗಮವೇ ಅಷ್ಟಾದಶ ಸ್ಮರಣೆಯಿಂದ ಮುಗಿದಲ್ಲಿಗೆ ನವಮೋದಕವಾಗುವದಯ್ಯಾ. ಉಳಿದುದಕ ತ್ರಿವಿಧೋದಕವೆನಿಸುವುದಯ್ಯಾ ಹೀಗೆ ಮಹಾಜ್ಞಾನ ಲಿಂಗ ಜಂಗಮ ಸ್ವರೂಪವಾದ ತೀರ್ಥವ ಮುಗಿದ ಮೇಲೆ ಕಟ್ಟೆಬಟ್ಟಲಲ್ಲಿ ಎಡೆ ಮಾಡಬೇಕಾದರೆ ಗೃಹದಲ್ಲಿರ್ದ ಕ್ರಿಯಾಶಕ್ತಿಯರಿಗೆ ಧಾರಣವಿದ್ದರೆ ತಾವು ಸಲಿಸಿದ ಪಾದೋದಕ ಪ್ರಸಾದವ ಕೊಡುವುದಯ್ಯಾ. ಸಹಜ ಲಿಂಗ ಭಕ್ತರಾದರೆ ಮುಖಮಜ್ಜನವ ಮಾಡಿಸಿ ತಾ ಧರಿಸುವ ವಿಭೂತಿ ಧಾರಣವ ಮಾಡಿಸಿ, ಶಿವಶಿವಾ, ಹರಹರಾ, ಬಸವಲಿಂಗಾ, ಎಂದು ಬೋಧಿಸಿ ಎಡೆಮಾಡಿಸಿಕೊಂಬುವುದಯ್ಯಾ. ಆಮೇಲೆ ತಾನು ಸ್ಥಲವಾದಡೆ ಸಂಬಂಧವಿಟ್ಟು ಪರಸ್ಥಲವಾದಡೆ ಚಿದ್ಘನ ಇಷ್ಟ ಮಹಾಲಿಂಗ ಜಂಗಮವ ಕರಸ್ಥಲದಲ್ಲಿ ಮೂರ್ತವ ಮಾಡಿಸಿಕೊಂಡು ದಕ್ಷಿಣ ಹಸ್ತದಲ್ಲಿ ಗುರುಲಿಂಗ ಜಂಗಮ ಸೂತ್ರವಿಡಿದು ಬಂದ ಕ್ರಿಯಾಭಸಿತವ ಲೇಪಿಸಿ, ಮೂಲ ಪ್ರಣವ ಪ್ರಸಾದ ಪ್ರಣವದೊಳಗೆ ಗೋಳಕ ಪ್ರಣವ, ಅಖಂಡ ಗೋಳಕ ಪ್ರಣವ, ಅಖಂಡ ಮಹಾ ಗೋಳಕ ಪ್ರಣವ, ಜ್ಯೋತಿ ಪ್ರಣವ ಧ್ಯಾನದಿಂದ ದ್ವಾದಶಮಣಿಯ ಧ್ಯಾನಿಸಿ ಪ್ರದಕ್ಷಿಸಿ ಮೂಲ ಮೂರ್ತಿ ಲಿಂಗ ಜಂಗಮದ ಮಸ್ತಕದ ಮೇಲೆ ಸ್ಪರ್ಶನವ ಮಾಡಿ, ಬಟ್ಟಲಿಗೆ ಮೂರುವೇಳೆ ಸ್ಪರ್ಶನವ ಮಾಡಿ, ಪದಾರ್ಥದ ಪೂರ್ವಾಶ್ರಯವ ಕಳೆದು ಶುದ್ಧಪ್ರಸಾದವೆಂದು ಭಾವಿಸಿ ಇಷ್ಟ ಮಹಾಲಿಂಗ ಜಂಗಮಕ್ಕೆ ಅಷ್ಟಾದಶ ಪ್ರಣವ ಮಂತ್ರ ಸ್ಮರಣೆಯಿಂದ ಮೂರು ವೇಳೆ ರೂಪನರ್ಪಿಸಿ, ಎರಡು ವೇಳೆ ರೂಪವ ತೋರಿ, ಸುರುಚಿ ಪ್ರಾಣಲಿಂಗ ಮಂತ್ರ ಧ್ಯಾನದಿಂದ ಸಮರ್ಪಿಸಿ ಷಡ್ವಿಧ ಲಿಂಗಲೋಲುಪ್ತಿಯಿಂದ ಸಂತೃಪ್ತನಾಗಿ ಆಚರಿಸಿದಾತನೇ ಗುರುಭಕ್ತನಾದ ನಿಚ್ಚ ಪ್ರಸಾದಿ ಎಂಬೆ ಕಾಣಾ ಚನ್ನಮಲ್ಲಿಕಾರ್ಜುನಾ.

೪. ಅಯ್ಯಾ ಸಮಸ್ತ ಮಾಯಾ ಬಲೆಯಲ್ಲಿ ಜನ್ಮ ಜನ್ಮಾಂತರ ನೆತ್ತಿ ತೊಳಲಿ ಬಳಲಿ ಅಂತ್ಯದಲ್ಲಿ ಜ್ಞಾನೋದಯವಾಗಿ ಶಿವಧೋ ಎಂದು

ಗುರೂಪಾವಸ್ಥೆಯಂ ಮಾಡುತ್ತಿರ್ದ ಶಿವಕಲಾತ್ಮಂಗೆ ಶ್ರೀಗುರು ಪ್ರತ್ಯಕ್ಷ ವಾಗಿ ಕೃಪಾದೃಷ್ಟಿಯಿಂ ನೋಡಲು, ಆ ಶಿವಕಲಾತ್ಮನು ಅತಿ ಸಂತೋಷದಿಂದ, ಎಲೇ ಶ್ರೀಗುರುನಾಥನೇ, ಎನ್ನಪರಾಧವ ನೋಡದೆ ನಿನ್ನ ದಯಾಂಬುಧಿಯಲ್ಲಿ ಮಡಗಿಕೋ ಎನ್ನ ಸರ್ವಾಧಾರ ಮೂರ್ತಿ ಎಂದು ಅಭಿವಂದಿಸಲು ಆಗ ಶ್ರೀ ಗುರುನಾಥನು ಮಹಾ ಸಂತೋಷ ಹುಟ್ಟಿ ಆ ಶಿವಕಳಾತ್ಮಂಗೆ ಪೂರ್ವದ ಜಡ ಶೈವ ಮಾರ್ಗವ ಬಿಡಿಸಿ ನಿಜ ವೀರ ಶೈವ ದೀಕ್ಷೆಯನಿತ್ತು ಹಸ್ತಮಸ್ತಕ ಸಂಯೋಗವ ಮಾಡಿ ಅಂತರಂಗದಲ್ಲಿ ಬೆಳಗುವ ಪ್ರಾಣಲಿಂಗವ ಬಹಿಷ್ಕರಿಸಿ ಕರಸ್ಥಲಕ್ಕೆ ಕೊಟ್ಟು ಮತ್ತಾ ಲಿಂಗವ ಸರ್ವಾಂಗದಲ್ಲಿ ಪೂರ್ಣವ ಮಾಡಿ ಲಿಂಗಾಂಗ ಷಟ್‌ಸ್ಥಾನವ ತೋರಿ ತನ್ನ ಸ್ವರೂಪ ನಿಲುಕಡೆಯ ತೋರಿ, ಚಿದ್ವಿಭೂತಿ, ರುದ್ರಾಕ್ಷಿ, ಪಂಚಾಕ್ಷರ, ಷಡಕ್ಷರ ಮೊದಲಾದ ಸಪ್ತಕೋಟಿ ಮಹಾ ಮಂತ್ರವರುಹಿ, ಷಟ್‌ಸ್ಥಲ ಮಾರ್ಗ, ಷಡ್ವಿಧಶೀಲ, ವ್ರತನೇಮಂಗಳನರುಪಿ, ಷೋಡಶ ಭಕ್ತಿಯ ಮರ್ಮವ ತಿಳುಹಿ, ಮೂವತ್ತೆರಡು ಕಲೆ ನೆಲೆಯನರುಪಿ, ಷೋಡಶವರ್ಣ, ದ್ವಾದಶಾಚಾರ ಸಗುಣ ನಿರ್ಗುಣ ಲೀಲೆಯ ಕರುಣಿಸಿ, ನನಗೂ ನಿನಗೂ ಚೈತನ್ಯ ಸ್ವರೂಪವಾದ ನಿರಂಜನ ಜಂಗಮಲಿಂಗ, ಲಿಂಗಜಂಗಮವೇ ಗತಿ ಎಂದು ನಿರೂಪಮಂ ಕೊಟ್ಟು, ಆ ಆಚರಣೆಯ ವಿಚಾರವ ಕರುಣಿಸಬೇಕು, ಸ್ವಾಮಿ ಎಂದು ಬೆಸಗೊಳಲು, ಕೇಳಯ್ಯಾ ನವಕುಮಾರ ದೇಶಿಕೋತ್ತಮನೇ ಆ ಲಿಂಗ ಜಂಗಮ ಜಂಗಮಲಿಂಗದ ಆಚರಣೆಯ ಸಂಬಂಧವ ಸದ್ಗುರುಮಾರ್ಗದಿಂ ಹಿಡಿದ ಜಂಗಮ ಭಕ್ತನಾದ ನಿಚ್ಚಪ್ರಸಾದಿ ಇವರಿಬ್ಬರಾಚರಣೆಯ ನಿನ್ನೊಬ್ಬನಲ್ಲಿ ಹುರಿಗೊಳಿಸಿ ಕೊಟ್ಟವು ನೋಡಯ್ಯಾ ಅದೆಂತೆಂದೊಡೆ:—ಕ್ರಿಯಾ ಜಂಗಮ ಮೂರ್ತಿಗಳು ನಿನ್ನರ್ಚನಾಸಮಯಕ್ಕೆ ದಿವಾರಾತ್ರಿಗಳೆನ್ನದೆ ಒದಗಿ ಬಂದಲ್ಲಿ ಅಚ್ಚ ಪ್ರಸಾದಿಯೋಪಾದಿಯಲ್ಲಿ ಕ್ರಿಯಾಚರಣೆಯನಾಚರಿಸುವದಯ್ಯಾ. ನಿನ್ನ ಸಮಯೋಚಿತಕ್ಕೆ ಕ್ರಿಯಾ ಜಂಗಮವು ದೊರೆಯದಿರ್ದರೆ ದಿವಾರಾತ್ರಿಯಲ್ಲಿ ನಿಚ್ಚ ಪ್ರಸಾದಿಯ ಸಂಬಂಧದಂತೆ ಜ್ಞಾನ ಜಂಗಮ ಸ್ವರೂಪವಾದ ಇಷ್ಟ ಮಹಾಲಿಂಗದಲ್ಲಿ ಚಿದ್ಘನ ತೀರ್ಥ ಪ್ರಸಾದವ ಮತ್ತು ಚಿದ್ಘನ ಲಿಂಗ ಜಂಗಮಕ್ಕೆ ಸಮರ್ಪಿಸಿ ತಾನಾ ಪರಿಣಾಮ ಪ್ರಸಾದದಲ್ಲಿ ಲೋಲುಪ್ತನಾದಾತನೇ ಲಿಂಗ ಭಕ್ತನಾದ ಸಮಯ ಪ್ರಸಾದಿ ನೋಡಾ ಕೂಡಲ ಚನ್ನ ಸಂಗಮದೇವಾ.

---

## ಬೇರೆ ಬೇರೆ ಪ್ರಸಾದಗಳ ಪರಿಣಾಮಗಳು.

೧. ಶ್ರೀ ಗುರುಲಿಂಗ ಜಂಗಮದ ನೋಟ ಪರುಷ ಪ್ರಸಾದ ದಿಂದೆ ಸಮಸ್ತ ಲೋಕದ ಮನು ಮುನಿ ಋಷಿಗಳೆಲ್ಲ ಪರಮಸುಖಿಗ ಳಾದರಯ್ಯಾ. ಶ್ರೀ ಗುರುಲಿಂಗ ಜಂಗಮದ ಹಸ್ತ ಪರುಷ ಪವಿತ್ರವಾದ ಶುದ್ಧಪ್ರಸಾದದಿಂದೆ ತನುವಿನ ಕಾಮ ವಿಕಾರವಳಿವುದಯ್ಯಾ. ಶ್ರೀಗುರು ಲಿಂಗ ಜಂಗಮದ ಸಿದ್ಧ ಪ್ರಸಾದದಿಂದ ಮನದ ಕಾಂಕ್ಷೆ ಹರಿವುದಯ್ಯಾ. ಶ್ರೀಗುರು ಲಿಂಗ ಜಂಗಮದ ಪ್ರಸಿದ್ಧ ಪ್ರಸಾದದಿಂದ ಭಾವದ ಭ್ರಮೆ ಕೆಡುವುದಯ್ಯಾ. ಶ್ರೀಗುರು ಲಿಂಗ ಜಂಗಮದ ಪ್ರಸಾದಿಯ ಪ್ರಸಾದ ದಿಂದ ಪ್ರಾಣನ ಪ್ರಪಂಚು ನಷ್ಟವಾಗುವುದಯ್ಯಾ. ಶ್ರೀ ಗುರು ಲಿಂಗ ಜಂಗಮದ ಘನಾಪ್ಯಾಯನ ಪ್ರಸಾದದಿಂದ ಇಂದ್ರಿಯಂಗಳೆಲ್ಲ ಲಿಂಗೇಂ ದ್ರಿಯ ಂಗಳಾಗುವವಯ್ಯಾ. ಶ್ರೀ ಗುರು ಲಿಂಗ ಜಂಗಮದ ಸಮಯ ಪ್ರಸಾದದಿಂದ ವಿಷಯಂಗಳೆಲ್ಲ ಲಿಂಗ ವಿಷಯಂಗಳಾಗುವವಯ್ಯಾ. ಶ್ರೀ ಗುರು ಲಿಂಗ ಜಂಗಮದ ಪಂಚೇಂದ್ರಿಯ ವಿರಹಿತ ಪ್ರಸಾದದಿಂದೆ ಕರಣಂಗಳೆಲ್ಲ ಲಿಂಗ ಕರಣಂಗಳಾಗುವವಯ್ಯಾ. ಶ್ರೀ ಗುರು ಲಿಂಗ ಜಂಗಮದ ಕರಣ ಚತುಷ್ಟಯ ವಿರಹಿತ ಪ್ರಸಾದ, ಸಮತೆ ಪ್ರಸಾದ ಸದ್ಭಾವ ಪ್ರಸಾದ, ಜ್ಞಾನ ಪ್ರಸಾದದಿಂದ ಸರ್ವಸಂಗ ಪರಿತ್ಯಾಗರಾಗಿ ಬಯಲನೇ ಹಾಸಿ, ಬಯಲನೇ ಹೊದ್ದು, ಬಯಲನೇ ಅರ್ಚಿಸಿ ಬಯ ಲನೇ ಭೋಗಿಸಿ, ಬಸವ ಮೊದಲಾದ ಪ್ರಮಥ ಗಣಂಗಳೆಲ್ಲ ಬಯಲೊ ಳಗೆ ಮಹಾ ಬಯಲಾದರು ನೋಡಾ. ಅದೆಂತೆಂದೊಡೆ:—ಜಂಗಮಾದಿ ಗುರೂಣಾಂಚ ಅನಾದಿ ಸ್ವಯ ಲಿಂಗವಾನ್ । ಆದಿ ಪ್ರಸಾದೇನ ಭಕ್ತಿ ಇಷ್ಟ ಪ್ರಾಣ ಪ್ರಸಾದಕಂ ॥ ಜಂಗಮಸ್ಯೈ ಪ್ರಸಾದೇನ ನೈವೇದ್ಯಂ ಚ ಸಮರ್ಪಣಂ ॥ ಪ್ರಸಾದೇನ ತು ಶುದ್ಧಾತ್ಮಾ ಪ್ರಸಾದಂ ಲಿಂಗ ರೂಪಕಂ॥ ಭಕ್ತ ಜಿಹ್ವಾಗ್ರತೆ ಲಿಂಗಂ ಲಿಂಗಂ ಜಿಹ್ವಾಗ್ರತೇ ರುಚಿಃ । ರುಚಿ ಜಿಹ್ವಾ ಪ್ರಸಾದಂಚ ಪ್ರಸಾದಂ ಪರಮಂ ಪದಂ ॥ ಪ್ರಸಾದಂ ಪರ ಬ್ರಹ್ಮಂ ಚ ಬ್ರಹ್ಮ ಪ್ರಸಾದಮೇವ ಚ । ಕೇವಲಂ ಶಿವಮೌನಂ ಚ ಮಂನಂ ಚ ಶಿವ ಲಿಂಗಕಂ ॥ ಇಂತೆಂದು ಹೇಳುತ್ತಿಹುದಾದ ಕಾರಣ ಶ್ರೀಗುರು ಲಿಂಗ ಜಂಗಮದ ಪ್ರಸಾದವೇ ಪರಮಾಮೃತ ಸುಧಿ ಜ್ಯೋತಿರ್ಮಯ ಲಿಂಗ ನೋಡಾ ಸಂಗನಬಸವೇಶ್ವರಾ.

---

# ಇಷ್ಟಲಿಂಗದಲ್ಲಿ ಪಾದೋದಕ ಪ್ರಸಾದಗಳ ಸಮರ್ಪಣ.

## (ಪಾದೋದಕ ಸಮರ್ಪಣ)

೧. ಅಯ್ಯಾ ಚಿಙ್ಘನ ತೀರ್ಥವ ಇಷ್ಟಲಿಂಗ-ರ್ಪಿತವ ಮಾಡುವ ವಿಚಾರವೆಂತೆಂದೊಡೆ:— ಗುರು ಲಿಂಗ ಮುಖದಲ್ಲಿ ಅಚ್ಚ ಪ್ರಸಾದ ಸ್ವರೂಪವಾದ ಇಷ್ಟಲಿಂಗಕ್ಕರ್ಪಿತವಯ್ಯ. ಗುರುಲಿಂಗ ಶಿವಲಿಂಗ ಮುಖದಲ್ಲಿ ಆಚರಣೆ ಸಂಬಂಧದಿಂದೆ ನಿಚ್ಚಪ್ರಸಾದ ಸಮಯ ಪ್ರಸಾದ ಸ್ವರೂಪವಾದ ಇಷ್ಟಲಿಂಗಕ್ಕರ್ಪಿತವಯ್ಯ. ಗುರುಲಿಂಗ ಶಿವಲಿಂಗ ಜಂಗಮ ಲಿಂಗ ಮುಖದಲ್ಲಿ ತ್ರಿವಿಧಾಚರಣೆ ಕರ್ತೃವಾದದರಿಂದ ಸ್ವಯ ಚರ ಪರ ಗುಣಮೂರ್ತಿ ಚಿತ್ಕಲಾ ಪ್ರಸಾದ ಸ್ವರೂಪವಾದ ಇಷ್ಟ ಮಹಾ ಲಿಂಗ ದೇವಂಗರ್ಪಿತವಯ್ಯಾ. ಆ ನಿಲುಕಡೆ ಎಂತೆಂದೊಡೆ:— ಶ್ರೀಗುರು ಲಿಂಗ ಜಂಗಮವು ಹಸ್ತ ಮಸ್ತಕ ಸಂಯೋಗವ ಮಾಡಿ ವೇಧಾ ಮಂತ್ರ ಕ್ರಿಯಾ ದೀಕ್ಷೆಯ ಕರುಣಿಸುವಲ್ಲಿ ಕರಕಮಲದ ದಶಾಂಗುಳ ಮಧ್ಯ ವೊದಲಾಗಿ ದ್ವಾದಶ ಪ್ರಣವ ಲಿಂಗ ಮೂರ್ತಿಗಳ ಮೂವತ್ತಾರು ಪ್ರಣವ ರೂಪಿನಿಂದ ಸಂಬಂಧಿಸಿರ್ಪರಯ್ಯ. ಇಂತು ಸಂಬಂಧ ಗುರು ಕಟಾಕ್ಷೆಯಿಂ ತಿಳಿದು ಷಡಕ್ಷರ ಮಂತ್ರಸ್ವರೂಪವಾದ ದಕ್ಷಿಣ ಹಸ್ತ ದಿಂದ ಷಡಕ್ಷರ ಮಂತ್ರ ಸ್ವರೂಪವಾದ ವಾಮ ಹಸ್ತ ಕಮಲದಲ್ಲಿ ನೆಲಸಿರ್ಪ ಚಿಙ್ಘನ ಇಷ್ಟಲಿಂಗ ದೇವಂಗೆ ಆಯಾಯ ಸ್ಥಲ ಬಂದು ಒದಗಿದಲ್ಲಿ ಮಕಾರ ಶಿಕಾರ ವಕಾರ ಅನಾಮಿಕ ಮಧ್ಯಾಂಗುಳಿ ತರ್ಜನಿ ವೊದಲಾದ ತ್ರಿವಿಧಂಗುಳಿಗಳಲ್ಲಿ ತ್ರಿವಿಧ ಲಿಂಗ ಮಂತ್ರಂಗಳಿಂದ ಇಷ್ಟ ಮಹಾಲಿಂಗ ರೂಪಿತವ ಮಾಡಿ ಭೋಗಿಸಬಲ್ಲಡೆ ಅಚ್ಚ ಸ್ವಯಂಭು ಪ್ರಸಾದಲಿಂಗ ಶರಣನೆಂಬೆ ನೋಡಾ ಸಂಗನಬಸವೇಶ್ವರಾ.

೨. ಅಯ್ಯಾ ನಿರ್ವಂಚಕತ್ವದಿಂದ ದಶವಿಧ ಲಿಂಗಂಗಳಿಗೆ ಏಕ ವಿಂಶತಿ ಮಂತ್ರ ಸ್ಮರಣೆಯಿಂದ ದಶವಿಧ ಪಾದೋದಕವನರ್ಪಿಸಿ ಸಂತೃಪ್ತಾನಂದ ಜಲದಲ್ಲಿ ಪರಿಣಾಮಿಸಬಲ್ಲಡೆ ನಿಜಪ್ರಸಾದಿ ಎಂಬೆನಯ್ಯಾ. ಆದರ ವಿಚಾರವೆಂತೆಂದೊಡೆ:— ಏಕ ವಿಂಶತಿ ಪ್ರಣವದೊಳಗೆ ಷಡ್ವಿಧ ಪ್ರಣವ ಸ್ಮರಣೆಯಿಂದ ಆಪ್ಯಾಯನೋದಕ, ಹಸ್ತೋದಕ, ಲಿಂಗಪಾದೋದಕ, ಶಿವಲಿಂಗ ಜಂಗಮಲಿಂಗ ಪ್ರಾಣಲಿಂಗ ದೇವಂಗೆ ಸಮ

ರ್ಪಿಸಿ ತಾನಾ ಪರಿಣಾಮದಲ್ಲಿ ಲೋಲುಪ್ತನಾದಡೆ ಅನಾದಿ ಲಿಂಗಸ್ವ ರೂಪ ಚನ್ನಬಸವಣ್ಣನೆಂಬೆ ನೋಡಾ. ನವವಿಧ ಪ್ರಣವದೊಳಗೆ ಷಡ್ವಿಧ ಪ್ರಣವ ಸ್ಮರಣೆಯಿಂದ ಪರಿಣಾಮೋದಕ, ನಿರ್ನಾಮೋದಕ, ಜಂಗಮ ಪಾದೋದಕ, ಪ್ರಸಾದಲಿಂಗ, ಮಹಾಲಿಂಗ, ಭಾವಲಿಂಗ ದೇವಂಗೆ ಸಮರ್ಪಿಸಿ ತಾನಾ ಸಂತೃಪ್ತಿಯಲ್ಲಿ ಲೋಲುಪ್ತನಾದಡೆ, ಅನಾದಿ ಜಂಗ ಮಸ್ವರೂಪ ಅಲ್ಲಮ ಪ್ರಭುರಾಯ ನೋಡಾ. ಇನ್ನುಳಿದ ತ್ರಿವಿಧಪ್ರಣವ ಸ್ಮರಣೆಯಿಂದ ನವವಿಧೋದಕವನೊಳಕೊಂಡ ಸತ್ಕ್ರಿಯೋದಕವ ನವವಿಧ ಲಿಂಗಕ್ಕೆ ಪರಾತ್ಪರ ಸ್ವರೂಪನಾದ ನಿಃಕಲ ಪರತತ್ವ ದೇವಂಗೆ ಸಮರ್ಪಿಸಿ ನಿತ್ಯ ತೃಪ್ತತ್ವದಿಂದ ಸರ್ವಾವಸ್ಥೆಯ ನೀಗಬಲ್ಲಡೆ ಅನಾದಿ ಶರಣ ಪ್ರಸನ್ನ ವ ರಾರ್ತಿ ಎಂಬೆ ನೋಡಾ ಸಂಗನ ಬಸವೇಶ್ವರಾ.

## ಪ್ರಸಾದ ಸಮರ್ಪಣ.

೩. ಅಯ್ಯಾ ನಿರಾಲಂಬ ನಿಃಕಳಂಕ ನಿಃಪ್ರಪಂಚತ್ವದಿಂದ ನಾಲ್ವತ್ತೆಂಟು ಪ್ರಣವ ಸ್ಮರಣೆಯಿಂದ ಏಕಾದಶ ಲಿಂಗಂಗಳಿಗೆ ಏಕಾದಶ ಪ್ರಸಾದವ ಸಮರ್ಪಿಸಿ, ತಾನಾ ಸಂತೃಪ್ತಿ ಮಹಾಪ್ರಸಾದದಲ್ಲಿ ಲೋಲುಪ್ತನಾದಡೆ ನಿಜಪ್ರಸಾದಿ ಎಂಬೆ ನೋಡಾ. ಅದರ ವಿಚಾರವೆಂತೆಂದೊಡೆ:- ನಾಲ್ವತ್ತೆಂಟು ಪ್ರಣವದೊಳಗೆ ದ್ವಾದಶ ಪ್ರಣವ ಸ್ಮರಣೆಯಿಂದ ಅಪ್ಯಾಯನ ಪ್ರಸಾದ, ಸಮಯ ಪ್ರಸಾದ, ಗುರುಪ್ರಸಾದ, ಆಚಾರಲಿಂಗ, ಗುರುಲಿಂಗ, ಇಷ್ಟಲಿಂಗ ದೇವಂಗೆ ಸುಚಿತ್ತ, ಸುಬುದ್ಧಿ, ನಿರುಪಾಧಿ ಹಸ್ತದಿಂದ ಸಮರ್ಪಿಸಿ, ಆ ತೃಪ್ತಿಯ ಲೋಲುಪ್ತಿಯಲ್ಲಿ ತಾನಾದಡೆ ಅನಾದಿ ನಿಃಕಳಂಕ ಗುರುಬಸವರಾಜನೆಂಬೆ ನೋಡಾ. ಮುವತ್ತಾರು ಪ್ರಣವದೊಳಗೆ ದ್ವಾದಶಪ್ರಣವ ಸ್ಮರಣೆಯಿಂದ ಪಂಚೇಂದ್ರಿಯ ವಿರಹಿತ ಪ್ರಸಾದ, ಕರಣ ಚತುಷ್ಟಯವಿರಹಿತ ಪ್ರಸಾದ, ಲಿಂಗಪ್ರಸಾದವ ಶಿವಲಿಂಗಜಂಗಮಲಿಂಗ ಪ್ರಾಣಲಿಂಗ ದೇವಂಗೆ ನಿರಹಂಕಾರ ಸುಮನ ನಿರಾಲಂಬ ಹಸ್ತದಿಂದ ಸಮರ್ಪಿಸಿ ಆ ತೃಪ್ತಿಯ ಲೋಲುಪ್ತಿಯಲ್ಲಿ ತಾನಾದಡೆ ಅನಾದಿ ನಿಃಕಾಮ್ಯ ಶೂನ್ಯಲಿಂಗ ಸ್ವರೂಪ ಚನ್ನಬಸವ ರಾಜನೆಂಬೆ ನೋಡಾ. ಇಪ್ಪತ್ತುನಾಲ್ಕು ಪ್ರಣವದೊಳಗೆ ದ್ವಾದಶ ಪ್ರಣವ ಸ್ಮರಣೆಯಿಂದ ಸಮತಾಪ್ರಸಾದ, ಪ್ರಸಾದಿಯಪ್ರಸಾದ, ಜಂಗಮಪ್ರಸಾದವ ಪ್ರಸಾದಲಿಂಗ ಮಹಾಲಿಂಗ ಭಾವಲಿಂಗ ದೇವಂಗೆ ಜ್ಞಾನ ಸದ್ಭಾವ

ನಿಃಪ್ರಪಂಚ ಹಸ್ತದಿಂದ ಸಮರ್ಪಿಸಿ ಆ ಪರಿಣಾಮ ಶೀಲಪ್ತಿಯಲ್ಲಿ ತಾನಾದಡೆ ಅನಾದಿ ನಿರಂಜನ ಜಂಗಮ ಸ್ವರೂಪು ಪ್ರಭುದೇವನೆಂಬೆ ನೋಡಾ. ಇನ್ನುಳಿದ ದ್ವಾದಶ ಪ್ರಣಾಮ ಸ್ಮರಣೆಯಿಂದ ಸದ್ಭಾವ ಪ್ರಸಾದ, ಜ್ಞಾನಪ್ರಸಾದ, ಇಂತು ನವಲಿಂಗ ಪ್ರಸಾದ ಪಾದೋದಕಂಗಳ ಸಂತೃಪ್ತಿಯಲ್ಲಿ ಸಾಕಾರ ನಿರಾಕಾರನಾದ ಪರತತ್ವ ಜ್ಯೋತಿರ್ಮಯ ಲಿಂಗದೇವಂಗೆ ನಿಜಾನಂದ ಹಸ್ತದಿಂದ ಸಮರ್ಪಿಸಿ ಮತ್ತಾ ಅನಾದಿಕಾಲ ಸನ್ಮತವಾದ ದಶವಿಧ ಪಾದೋದಕ ಏಕಾದಶ ಪ್ರಸಾದದಲ್ಲಿ ಕೂಡಿ ಘನಸಾರದಂತಾದಡೆ ಅನಾದಿಪೂರ್ಣಮಯ ನಿಜವಸ್ತು ತಾ ನೋಡಾ ಸಂಗನಬಸವೇಶ್ವರಾ.

---

## ಇಷ್ಟಲಿಂಗದಲ್ಲಿ ಏಕೋತ್ತರಶತಸ್ಥಲ, ಪಾದೋದಕ, ಪ್ರಸಾದ ಇವುಗಳ ಸಂಬಂಧ.

೧. ಅಯ್ಯಾ, ದೀಕ್ಷಾಗುರು ಶಿಕ್ಷಾಗುರು ಜ್ಞಾನಗುರುಗಳೆಂಬ ತ್ರಿವಿಧ ಗುರುಗಳು, ಕ್ರಿಯಾಲಿಂಗ ಜ್ಞಾನಲಿಂಗ ಭಾವಲಿಂಗವೆಂಬ ತ್ರಿವಿಧಲಿಂಗಗಳು, ಸ್ವಯಚರಪರವೆಂಬ ತ್ರಿವಿಧ ಜಂಗಮವು, ಈ ಒಂಬತ್ತು ಆಚಾರಲಿಂಗದಲ್ಲಿ ಸಂಬಂಧವು. ಸಕಾಯ ಅಕಾಯ ಪರಕಾಯವೆಂಬ ತ್ರಿವಿಧ ಗುರುಗಳು, ಕ್ರಿಯಾಗಮ ಭಾವಾಗಮ ಜ್ಞಾನಾಗಮವೆಂಬ ತ್ರಿವಿಧಲಿಂಗಗಳು, ಧರ್ಮಾಚಾರ ಭಾವಾಚಾರ ಜ್ಞಾನಾಚಾರವೆಂಬ ತ್ರಿವಿಧ ಜಂಗಮ, ಈ ಒಂಬತ್ತು ಗುರುಲಿಂಗದಲ್ಲಿ ಸಂಬಂಧವು. ಕಾಯಾನುಗ್ರಹ ಇಂದ್ರಿಯಾನುಗ್ರಹ ಪ್ರಾಣಾನುಗ್ರಹವೆಂಬ ತ್ರಿವಿಧ ಗುರುಗಳು, ಕಾಯಾರ್ಪಿತ ಕರಣಾರ್ಪಿತ ಭಾವಾರ್ಪಿತವೆಂಬ ತ್ರಿವಿಧ ಲಿಂಗಗಳು ಶಿಷ್ಯ, ಶುಶ್ರೂಷಾ, ಸೇವ್ಯವೆಂಬ ತ್ರಿವಿಧ ಜಂಗಮವು, ಈ ಒಂಬತ್ತು ಶಿವಲಿಂಗದಲ್ಲಿ ಸಂಬಂಧವು. ಈ ಮೂರು ಸ್ಥಲವು ಅನಾದಿ ಭಕ್ತನ ಮಾರ್ಗಕ್ರಿಯಾಸ್ವರೂಪು.

ದೇಹಾಗಮ ಸಿದ್ಧಾಗಮ ಸಪ್ತಾಗಮವೆಂಬ ತ್ರಿವಿಧ ಗುರುಗಳು, ಜೀವಾತ್ಮ ಅಂತರಾತ್ಮ ಪರಮಾತ್ಮವೆಂಬ ತ್ರಿವಿಧ ಲಿಂಗಂಗಳು, ಆದಿಪ್ರಸಾದಿ ಅಂತ್ಯಪ್ರಸಾದಿ ಸೇವ್ಯಪ್ರಸಾದಿ ಎಂಬ ತ್ರಿವಿಧ ಜಂಗಮವು, ಈ ಒಂಬತ್ತು ಜಂಗಮ ಲಿಂಗದಲ್ಲಿ ಸಂಬಂಧವು. ಕ್ರಿಯಾನಿಷ್ಪತ್ತಿ, ಭಾವನಿಷ್ಪತ್ತಿ, ಜ್ಞಾನನಿಷ್ಪತ್ತಿ ಎಂಬ ತ್ರಿವಿಧ ಗುರುಗಳು, ದೀಕ್ಷಾಪಾದೋದಕ ಶಿಕ್ಷಾಪಾದೋದಕ ಜ್ಞಾನಪಾದೋದಕವೆಂಬ ತ್ರಿವಿಧ ಲಿಂಗಂಗಳು, ಪಿಂಡಾಕಾಶ ಬಿಂದ್ವಾಕಾಶ ಮಹದಾಕಾಶವೆಂಬ ತ್ರಿವಿಧ ಜಂಗಮವು ಈ ಒಂಬತ್ತು ಪ್ರಸಾದ ಲಿಂಗದಲ್ಲಿ ಸಂಬಂಧವು. ಕೊಂಡುದು ಪ್ರಸಾದ ನಿಂದುದು ಓಗರ ಚರಾಚರನಾಸ್ತಿ ಎಂಬ ತ್ರಿವಿಧ ಗುರುಗಳು, ಕ್ರಿಯಾಪ್ರಕಾಶ ಭಾವಪ್ರಕಾಶ ಜ್ಞಾನಪ್ರಕಾಶವೆಂಬ ತ್ರಿವಿಧ ಲಿಂಗಗಳು ಭಾಂಡಸ್ಥಲ ಭಾಜನಸ್ಥಲ ಅಂಗಲೇಪನಸ್ಥಲವೆಂಬ ತ್ರಿವಿಧ ಜಂಗಮವು ಈ ಒಂಬತ್ತು ಮಹಾಲಿಂಗದಲ್ಲಿ ಸಂಬಂಧವು. ಈ ಮೂರು ಸ್ಥಲವು ಅನಾದಿ ಜಂಗಮದ ಮೀರಿದ ಕ್ರಿಯಾಸ್ವರೂಪವು.

ಈಯುಭಯಂ ಕೂಡಲು ಐವತ್ತುನಾಲ್ಕು ಸ್ಥಲಂಗಳಾದವು, ಮುಂದುಳಿದ ಮೂರು ಸ್ಥಲಂಗಳಲ್ಲಿ ಭಾವಾಭಾವನಷ್ಟಸ್ಥಲವೇ ಮೂಲ ಗುರುಸ್ವರೂಪವಾಗಿ ೧೮ ಗುರುಸ್ಥಲಂಗಳನೊಳಕೊಂಡು ಕ್ರಿಯಾ ಗುರು ಲಿಂಗಜಂಗಮಸ್ವರೂಪವಾದ ಇಷ್ಟಮಹಾಲಿಂಗದ ಅಧೋಪೀಠಿಕೆ ಎಂಬ ಹಲ್ಲೆಯಲ್ಲಿ ಸ್ಪರ್ಶನೋದಕ ಅವಧಾನೋದಕ ಗುರುಪಾದೋದಕ, ಆಪ್ಯಾಯನ ಪ್ರಸಾದ ಸಮಯಪ್ರಸಾದ ಗುರುಪ್ರಸಾದ, ಆದಿಪ್ರಸಾದಿ ನಿಚ್ಚಪ್ರಸಾದಿಯಾಗಿ ತೆರಹಿಲ್ಲದೆ ಒಪ್ಪುತ್ತಿರ್ಪುದು ನೋಡಾ.

ಜ್ಞಾನಶೂನ್ಯಸ್ಥಲವೇ ಮೂಲ ಜಂಗಮ ಸ್ವರೂಪವಾಗಿ ಈ ೧೮ ಚರಸ್ಥಲಂಗಳನೊಳಕೊಂಡು ಮಹಾಜ್ಞಾನ ಗುರುಲಿಂಗ ಜಂಗಮಸ್ವರೂಪವಾದ ಇಷ್ಟಮಹಾಲಿಂಗದ ಜಲರೇಖೆಯನುಳ್ಳ ಪಾನಿವಟ್ಟಲಲ್ಲಿ ಪರಿಣಾಮೋದಕ, ನಿರ್ನಾಮೋದಕ, ಜಂಗಮಪಾದೋದಕ, ಸತ್ಯೋದಕ, ಸಮತಾ ಪ್ರಸಾದ, ಪ್ರಸಾದಿಯ ಪ್ರಸಾದ, ಜಂಗಮ ಪ್ರಸಾದ, ಸದ್ಭಾವ ಪ್ರಸಾದ, ಜ್ಞಾನಪ್ರಸಾದ, ಸೇವ್ಯಪ್ರಸಾದಿ ಅಚ್ಚ ಪ್ರಸಾದಿಯಾಗಿ ತೆರಹಿಲ್ಲದೆ ಒಪ್ಪುತ್ತಿರ್ಪುದು ನೋಡಾ.

ಸ್ವಯ ಚರ ಪರವರಿಯದ ಸ್ಥಲವೇ ಮೂಲ ಲಿಂಗಸ್ವರೂಪವಾಗಿ ೧೮ ಲಿಂಗಸ್ಥಲಗಳನೊಳಕೊಂಡು ಜ್ಞಾನ ಗುರು ಲಿಂಗ ಜಂಗಮ ಸ್ವರೂಪವಾದ ಇಷ್ಟ ಮಹಾಲಿಂಗದ ಉನ್ನತವಾದ ಗೋಳಕದಲ್ಲಿ ಆಸ್ಯಾಯನೋದಕ, ಹಸ್ತೋದಕ, ಲಿಂಗಪಾದೋದಕ, ಪಂಚೇಂದ್ರಿಯ ವಿರಹಿತ ಪ್ರಸಾದ, ಕರಣಚತುಷ್ಟಯ ವಿರಹಿತಪ್ರಸಾದ, ಲಿಂಗಪ್ರಸಾದ, ಅಂತ್ಯ ಪ್ರಸಾದಿ ಸಮಯಪ್ರಸಾದಿಯಾಗಿ ತೆರಹಿಲ್ಲವೆ ಒಪ್ಪುತ್ತಿರ್ಪರು ನೋಡಾ.

ಇಂತಪ್ಪ ಲಿಂಗ ಜಂಗಮದ ಪಾದೋದಕ ಪ್ರಸಾದವ ಸ್ವೀಕರಿಸಿದಂಥ ಜಂಗಮ ಭಕ್ತರಾದ ಸಹಜ ಸದ್ಭಕ್ತರೇ ಪ್ರಸಾದ ಪಾದೋದಕ ಸಂಬಂಧಿಗಳು. ಇವರು ಸ್ವೀಕರಿಸಿದಂಥ ಪಾದೋದಕವೇ ನೇತ್ರದಲ್ಲಿ ಕರುಣಜಲ, ವಾಕ್ಕಿನಲ್ಲಿ ವಿನಯಜಲ, ಅಂತರಂಗದಲ್ಲಿ ಸಮತಾಜಲ, ಇಂತೀ ತ್ರಿವಿಧೋದಕವೇ ಗಟ್ಟಿಗೊಂಡು ಸಾಕಾರವಾಗಿ ತಿಳಿದುಪ್ಪ ಹೆರೆದುಪ್ಪದಂತೆ ಇಷ್ಟಮಹಾಲಿಂಗಕ್ಕೆ ತ್ಯಾಗಾಂಗವಾದ ಶುದ್ಧವಾಗಿರ್ಪುದಯ್ಯ. ಪ್ರಾಣಲಿಂಗಕ್ಕೆ ಭೋಗಾಂಗವಾದ ಸಿದ್ಧ ಪ್ರಸಾದವಾಗಿರ್ಪುದಯ್ಯ. ಭಾವಲಿಂಗಕ್ಕೆ ಯೋಗಾಂಗವಾದ ಪ್ರಸಿದ್ಧ ಪ್ರಸಾದವಾಗಿ ರ್ಪುದಯ್ಯ.

ಇಂತೀ ತ್ರಿವಿಧ ಪ್ರಸಾದ ಪಾದೋದಕವೇ ಶರಣನ ಶುದ್ಧ ಪ್ರಸಾದವೇ ಜಿಹ್ವೆಯಲ್ಲಿ ಅಚ್ಚಪ್ರಸಾದವಾಗಿರ್ಪುದಯ್ಯ. ಸಿದ್ಧ ಪ್ರಸಾದವೇ ಹಸ್ತದಲ್ಲಿ ನಿಚ್ಚ ಪ್ರಸಾದವಾಗಿರ್ಪುದಯ್ಯ. ಪ್ರಸಿದ್ಧ ಪ್ರಸಾದವೇ ಪಾದದಲ್ಲಿ ಸಮಯಪ್ರಸಾದವಾಗಿರ್ಪುದಯ್ಯ.

ಇಂತಪ್ಪ ಶರಣ ಸ್ವರೂಪವಾದ ಜ್ಞಾನಲಿಂಗ ಜಂಗಮದ ತೀರ್ಥ ಪ್ರಸಾದ ಸ್ವರೂಪವನ್ನು ಅರಿಯದೆ ಕ್ರಿಯಾ ಜಂಗಮಲಿಂಗದ ತೀರ್ಥ ಪ್ರಸಾದವನೆ ತೆಗೆದುಕೊಳ್ಳಬಹುದು. ಜ್ಞಾನಲಿಂಗ ಜಂಗಮದ ತೀರ್ಥ ಪ್ರಸಾದವನ್ನು ತೆಗೆದುಕೊಳ್ಳಲಾಗದೆಂಬ ಅಜ್ಞಾನಿಗಳ ಎನಗೊಮ್ಮೆ ತೋರದಿರಾ ಗುಹೇಶ್ವರಾ.

ಎಂಪೆ.ದಾಗಿ ಅಜ್ಞಾನ ತಂಡುಗಳು ನೀವೆಲ್ಲ ಕರ್ಮಪಾಶಬದ್ಧರು. ನಿಮಗೆಲ್ಲಿಯದೋ ಸತ್ಕುಲ ?

ಅದು ಅಲ್ಲದೆ ನಿಮ್ಮ ನಡಿಯೊಡನೆ ನಿಮಗೆ ಹಗೆ ಮಾಡಿ ತೋರಿ ಹೇನು ಕೇಳಿರೋ. ನಿಮಗೆ ಕುಲವು ವಶಿಷ್ಠ ವಿಶ್ವಾಮಿತ್ರ ಭರದ್ವಾಜ ಕೌಂಡಿನ್ಯ ಕಶ್ಯಪನೆಂಬ ಋಷಿಗಳಿಂದ ಬಂದಿತ್ತೆಂಬಿರಿ. ಅವರ ಪೂರ್ವ ಪೆತ್ತಿ ನ ಡಿದರೆ ಹುರುಳಿಲ್ಲ. ಅವರೆಲ್ಲ ಕೀಳುಜಾತಿಗಳಾದ ಕಾರಣ ನೀವೆ ಋಷಿ ಮೂಲವನು ನದಿಮೂಲವನೆತ್ತಲಾಗದೆಂಬಿರಿ. ನಿಮ್ಮ ನುಡಿ ನಿಮಗೆ ಘಾಯಿತ್ತೆಂದೆ ಕೇಳಿರೋ. ಅದಂತಿರಲಿ.

ನಿಮ್ಮ ಕುಲಕೆ ಗುರುವೆನಿಸುವ ಋಷಿಗಳೆಲ್ಲರೂ ಲಿಂಗವನಲ್ಲದೆ ಪೂಜಿಸರು. ವಿಭೂತಿ ರುದ್ರಾಕ್ಷಿಯುನಲ್ಲದೆ ಧರಿಸರು. ಪಂಚಾಕ್ಷರಿಯು ನಲ್ಲದೆ ಜಪಿಸರು. ಹಾಗೆ ನೀವು ಲಿಂಗವ ಪೂಜಿಸಿ, ವಿಭೂತಿ ರುದ್ರಾಕ್ಷಿಯು ಧರಿಸಿ ಪಂಚಾಕ್ಷರಿಯು ಜಪಿಸಿ ಈಶ್ವರ ಲಾಂಛನವ ಧರಿಸಿದಡ ನೀವು ಋಷಿಮೂಲದವರಹುದು. ಅದು ನಿಮಗಲ್ಲದೆ ವಿಷ್ಣುವಂ ಪೂಜಿಸಿ ಮುದ್ರಾಹಂ ಸುಡಿಸಿಕೊಂಡು ಸಾಲಿಗ್ರಾಮ, ಶಕ್ತಿ, ಲಕುಮಿ, ದುರ್ಗಿ ಎಂಬ ಕಿರುಕುಳ ದೈವರುಗಳ ಪೂಜಿಸಿ ನರಕಕ್ಕಿಳಿದು ಹೋಹರಾದ ಕಾರಣ ನೀವೇ ಹೀನ ಜಾತಿಗಳು.

ಬರಿದೆ ಬ್ರಹ್ಮವನಾಚರಿಸಿ ನಾವು ಬ್ರಹ್ಮರೆಂಬಿರಿ. ಬ್ರಹ್ಮವೆಂತಿಪ್ಪ ದೆಂದರಿಯಿರಿ.

ಸತ್ಯಂ ಬ್ರಹ್ಮ ಶೌಚಂ ಬ್ರಹ್ಮ ಬ್ರಹ್ಮಚೇಂದ್ರಿಯುನಿಗ್ರಹಃ ।
ಸರ್ವಜೀವದಯಾ ಬ್ರಹ್ಮ ಇತ್ಯೈತದ್ ಬ್ರಹ್ಮ ಲಕ್ಷಣಂ ॥
ಸತ್ಯಂ ನಾಸ್ತಿ ಶೌಚಂ ನಾಸ್ತಿ ನಾಸ್ತಿ ಚೇಂದ್ರಿಯುನಿಗ್ರಹಃ ।
ಸರ್ವಜೀವದಯಾ ನಾಸ್ತಿ ಏತಚ್ಚಾಂಡಾಲ ಲಕ್ಷಣಂ ॥

ಬ್ರಹ್ಮಕ್ಕೂ ನಿಮಗೂ ಸಂಬಂಧವೇನೋ ! ಬ್ರಹ್ಮವೇ ನಿಃಕರ್ಮ. ನೀವು ಕರ್ಮಿಗಳು. ಮತ್ತೆಂತೋ? ಬ್ರಹ್ಮಚರತೀತಿ ಬ್ರಾಹ್ಮಣಃ ಎಂದು ಗಳಹುತಿಪ್ಪಿರಿ. ಗಾಯತ್ರಿಯು ಜಪಿಸಿ ನಾವು ಕುಲಜರೆಂಬಿರಿ. ಆ ಗಾಯತ್ರಿ ಕರ್ಮವಲ್ಲದೆ ಮುಕ್ತಿಗೆ ಕಾರಣವಲ್ಲ. ವೇದವನೋದಿ ನಾವು ಬ್ರಹ್ಮ ರಾದೆವೆಂಬಿರಿ. ವೇದ ಹೇಳಿದ ಹಾಗೆ ನೀವು ನಡೆಯಿರಿ. ಅದೆಂತೆಂ ದೊಡೆ ' ದ್ಯಾವಾಭೂಮೀ ಜನಯನ್ ದೇವೋ ಏಕಃ ' ಎಂದೋದಿ

ಮರೆದು ವಿಷ್ಣುವನೆ ಭಜಿಸುವಿರಿ. 'ವಿಶ್ವತೋಮುಖ ವಿಶ್ವತಶ್ಚಕ್ಷುರ್ವಿಶ್ವತೋ ಬಾಹುಃ' ಎಂದೊರೆವುತ್ತಂ 'ಏಕೋರುದ್ರ ನದ್ವಿತೀಯಾಯ ತಸ್ಥೆ' ಎಂದು ಮರೆದು ಬೇರೊಬ್ಬ ದೈವವುಂಟೆಂದು ಗಳಹುತಿಪ್ಪಿರಿ. 'ಏಕಮೇವಾದ್ವಿತೀಯಂ ಬ್ರಹ್ಮ' ಎಂದೋದಿ ಕರ್ಮದಲಿ ಸಿಕ್ಕಿಹಿರಿ. ನೀವೇ ದುಃಕರ್ಮಿಗಳು. 'ಅಯಂ ಮೇ ಹಸ್ತೋಭಗವಾನ್ ಅಯಂ ಮೇ ಭಗವತ್ತರಃ' ಎಂದೋದಿ ಅನ್ಯ ಪೂಜೆಯಂ ಮಾಡುತಿಪ್ಪಿರಿ. 'ಶಿವೌ ಮೇ ಪಿತರೌ' ಎಂದೋದಿ ಸನ್ಯಾಸಿಗಳಿಗೆ ಮುಕ್ಕಳೆಂಬಿರಿ.

ಸದ್ಯೋಜಾತಾದ್ಭವೇದ್ ಭೂಮಿರ್ವಾಮದೇವಾತ್ತದಾ ಜಲಂ ।
ಅಘೋರಾದಗ್ನಿ ಮಿತ್ಯಾಹುಸ್ತತ್ ಪುರುಷಾದ್ವಾಯುರುಚ್ಯತೆ ।
ಈಶಾನಾದ್ಗಗನಾಕಾರಂ ಪಂಚಬ್ರಹ್ಮಮಯಂ ಜಗತ್ ॥

ಎಂದೋದಿ ಸರ್ವಂ ವಿಷ್ಣುಮಯಂ ಎನುತಿಪ್ಪಿರಿ 'ಜಲಮಿತಿ ಭಸ್ಮ ಸ್ಥಲಮಿತಿ ಭಸ್ಮ ಅಗ್ನಿರಿತಿ ಭಸ್ಮವಾಯುರಿತಿ ಭಸ್ಮ' ಎಂದೋದಿ ಮರೆದು ವಿಭೂತಿಯನಿಡಲೊಲ್ಲದೆ ಮಟ್ಟಿಯನಿಡುವಿರಿ. 'ರುದ್ರಾಕ್ಷ ಧಾರಣಂ ರುದ್ರ' ಎಂಬುದನೋದಿ ರುದ್ರಾಕ್ಷಿಯು ಧರಿಸಲೊಲ್ಲದೆ ಪದ್ಮಾಕ್ಷಿ ತೊಳಸಿಯ ಮಣಿಯಂ ಕಟ್ಟಿಕೊಂಬಿರಿ. 'ಪಂಚಾಕ್ಷರ ಸಮೋ ಮಂತ್ರೋ ನಾಸ್ತಿ ತತ್ವಂ ಮಹಾ ಮುನೆ' ಎಂಬುದನೋದಿ ಪಂಚಾಕ್ಷರಿಯು ಜಪಿಸಲೊಲ್ಲದೆ ಗೋಪಾಳ ಮಂತ್ರವ ನೆನೆವಿರಿ ಎಂತೋ? ನೀವು ಓದುವ ವೇದ ನಿಮಗೆ ವಿರುದ್ಧವಾಗಿರಲು ನೀವು ಕುಲಜರೆಂದು ವಂದಿಸಿದವರಿಗೆ ಸೂಕರ ಜನ್ಮದಲ್ಲಿ ಬಪ್ಪುದು ತಪ್ಪದು ನೋಡಿರೋ.

ವಿಪ್ರಾಣಾಂ ದರ್ಶನೇನ್ನೈವ ಪಾಪಂ ಭುಜಂತು ಮಾನವಾಃ ।
ವಿಪ್ರಾಣಾಂ ವಂದನಂ ಚೈವ ಕೋಟಿ ಜನ್ಮಸು ಸೂಕರಾಃ ॥

ಮತ್ತಂ 'ಅಣೋರಣೀಯಾನ್ ಮಹತೋ ಮಹೀಮಾನ್' ಎಂಬುದ ನೀವೇ ಓದಿ ಪ್ರಾಣಿಯಂ ಕೊಂದು ಯಾಗವನಿಕ್ಕಿ ದೇವರ್ಕಳುಗಳಿಗೆ ಹೋಮದ ಹೊಗೆಯಂ ತೋರಿ ಕೊಬ್ಬಿ ಬೆಳೆದ ಖಂಡವನೆ ತಿಂದು ಸೋಮಪಾನವೆಂಬ ಸುರೆಯನೆ ಕುಡಿದು ಮೈಮರೆದು ನೊಸಲಗಣ್ಣನ ತೋರುವಂತಹ ಶಿವಭಕ್ತರನು ನಿಂದಿಸಿ ನುಡಿಯುತಿಪ್ಪಿರಿ. ನಿಮ್ಮೊಡನೆ ನುಡಿವರೇ? ಇದು ಶ್ರುತ ದೃಷ್ಟ ಅನುಮಾನದಿಂದ ವಿಚಾರಿಸಿ ನೋಡಲು ನೀವೇ ಶಿವಭಕ್ತಿಯನರಿಯದ ನರರೂಪಿನ ನರಿಗಳು. ನಿಮ್ಮಿಂದ ಹೊರ

ಗಾವ ಹೊಲೆಯನೇ ಉತ್ತಮ ಕುಲಜನೆಂದು ಮುಡಿಗೆಯ ಹಾಕಿದೆನು, ಎತ್ತಿರೋ. ಉತ್ತಮ ಶಿವಭಕ್ತರೇ ಅಧಿಕರು ಎಂದು ಶಿವಭಕ್ತರೇ ಕುಲಜರು ಎಂದು ಎಮ್ಮ ಶಿವಭಕ್ತರೇ ಸರ್ವಜೀವ ದಯಾಪಾರಿಗಳು ಎಂದು ಶಿವಭಕ್ತರೇ ಸದ್ಯೋನ್ಮುಕ್ತರಯ್ಯ ಘನಗುರು ಶಿವಲಿಂಗ ರಾಮನಾಥಾ.

---

# ಢಕ್ಕೆಯ ಮಾರಯ್ಯ.

ಢಕ್ಕೆಯಮಾರಯ್ಯನೆಂಬ ಶಿವಶರಣನು ಡೊಳ್ಳು ಬಾರಿಸುಪವನಾಗಿ ಉಡಿಯಲ್ಲಿ ತಲೆಯಲ್ಲಿ ಬೇವಿನ ಸೊಪ್ಪನ್ನು ಕಟ್ಟಿಕೊಂಡು ಮಾರಿಯ ಮೂರ್ತಿಯೊಂದನ್ನು ಮುಂದಿಟ್ಟುಕೊಂಡು ಅದನ್ನು ಕುಣಿಸುತ್ತ ಭಕ್ತ ರಂಗಣಗಳಲ್ಲಿ ತಿರುಗುವನು. ಆಗ ಅವನು ಅಷ್ಟಾವರಣಗಳ ರೀತಿಯನ್ನೂ ಶಿವಶರಣರ ನಡೆಗಳನ್ನೂ ಜನರಿಗೆ ತಿಳಿಸಿ ಹೇಳುವನು. ಇದೇ ಆವನ ಕಾಯಕವಾಗಿತ್ತು. ಆಗ ಜನರು ತನಗೆ ಕೊಟ್ಟುದನ್ನು ತಾನಷ್ಟೇ ಉಪಭೋಗಿಸದೆ ಅದನ್ನು ದಾಸೋಹ ಕಾರ್ಯಗಳಿಗೆ ವೆಚ್ಚಮಾಡುವನು. ಈತನು ಈಗಿನ ಕಾಲದ ದುರುಗುಮುರಿಗೆಯವರು ಮಾಡುವಂಥ ಕಾಯಕ ವನ್ನು ಮಾಡುತ್ತಿರಬಹುದೆಂದು ತೋರುತ್ತದೆ. ಆದರೆ ಅವನು ಬಿಕ್ಷು ಕರಂತೆ ವರ್ತಿಸುವವನಲ್ಲ. ಆತನು ಶಿವಶರಣನಾಗಿ ಶಿವಜ್ಞಾನಿಯಾಗಿ ಒಂದು ಕಾಯಕವನ್ನು ಮಾಡುತ್ತ ಶಿವಾನುಭವವನ್ನು ಜನರಿಗೆ ಬೋಧಿಸುವನು. ಹೀಗೆ ಅವನು ಗ್ರಾಮದಲ್ಲಿ ಹೆಸರುವಾಸಿಯಾಗಿದ್ದನು.

ಢಕ್ಕೆಯ ಮಾರಯ್ಯನು ವಚನಕಾರನಿದ್ದಾನೆ. ಅವನ ಮುದ್ರಿಕೆಯು 'ಕಾಲಾಂತಕ ಭೀಮೇಶ್ವರಲಿಂಗ' ಎಂದಿದೆ. ಅವನ ೨೫ ವಚನಗಳು ನಮಗೆ ದೊರೆತಿದ್ದು ಅವುಗಳಲ್ಲಿ ಕೆಲವುಗಳನ್ನು ಮಾತ್ರ ಈ ಚರಿತ್ರೆಯ ಅಂತ್ಯದಲ್ಲಿ ಕೊಟ್ಟಿದ್ದೇವೆ. ಈ ವಚನಗಳು ಶ್ರೇಷ್ಠತರಗತಿಯವಾಗಿವೆ. ಅವುಗಳ ಮೇಲಿಂದ ಢಕ್ಕೆಯ ಮಾರಯ್ಯನು ಲಿಂಗಾಂಗಸಾಮರಸ್ಯದ ರೀತಿಯನ್ನು ಚನ್ನಾಗಿ ತಿಳಿದವನಾಗಿದ್ದನೆಂಬುದು ಸ್ಪಷ್ಟವಾಗುತ್ತಿದೆ. ಅವುಗಳಲ್ಲಿ ಕೆಲವು ಡೊಳ್ಳು ಬಾರಿಸುವ ಕಾಯಕವನ್ನು ಹೇಗೆ ಆಧ್ಯಾತ್ಮಿಕ ರೀತಿಯಿಂದ ನಿರ್ವಹಿಸಬೇಕೆಂಬುದನ್ನು ವಿವರಿಸುತ್ತವೆ. ಅವು ಲಕ್ಷಿಸತಕ್ಕವುಗಳಾಗಿವೆ.

ಢಕ್ಕೆಯ ಮಾರಯ್ಯನ ಚರಿತ್ರೆಯಿಂದ ಕರ್ನಾಟಕದಲ್ಲಿ ಹಿಂದಿನ ಕಾಲದಲ್ಲಿ ಅತ್ಯಂತ ನೀಚವೆಂದು ನಾವು ಈಗ ತಿಳಿದಿರುವ ಸಮಾಜಗಳಲ್ಲಿ ಸಹ ಶಿವಶರಣರ ಧಾರ್ಮಿಕ ಉಚ್ಚ ನಡೆಗಳು ಹೇಗೆ ಪಸರಿಸಿದ್ದವೆಂಬುದನ್ನು ನಾವು ಚನ್ನಾಗಿ ತಿಳಿಯಬಹುದು.

ಹೀಗಿರಲು ಒಂದು ದಿನ ಮಾರಯ್ಯನು ತನ್ನ ಢಕ್ಕೆಯನ್ನು ಬಾರಿಸುತ್ತ ಶಿವಶರಣರಲ್ಲಿ ಅತ್ಯಂತ ಖ್ಯಾತಿಯನ್ನು ಹೊಂದಿದ ಶಂಕರ ದಾಸಿಮಯ್ಯನ ಮನೆಗೆ ಹೋಗಿ ಅಲ್ಲಿ ತನ್ನ ಮಾರಿಯನ್ನು ಕುಣಿಸುತ್ತ ನಿಂತನು. ಆದರೆ ಶಂಕರದಾಸಿಮಯ್ಯನು ಕಿರುಕುಳ ದೈವತೆಗಳನ್ನು ನಿರಾಕರಿಸಿದವನು. ಅವನು ಅವುಗಳನ್ನು ತನ್ನ ಹಣೆಗಣ್ಣಿನಿಂದ ಸುಟ್ಟು ಹಾಕಿದವನು. ಇಂಥವನು ಮಾರಿಕವ್ವೆಗೆ ಭಕ್ತಿಯನ್ನು ತಾಳುವದೆಂತು? ಅದನ್ನು ಭಜಿಸುವವರಿಗೆ ಅವನು ದಾನ ಕೊಡುವದೆಂತು? ಅವನು ತನ್ನ ಅಂಗಣದಲ್ಲಿ ಢಕ್ಕೆಯ ಮಾರಯ್ಯನು ಡೊಳ್ಳು ಬಾರಿಸುತ್ತ ನಿಂತದ್ದನ್ನು ಕಂಡು ಅತ್ಯಂತ ಕೋಪಾವಿಷ್ಟನಾಗಿ ತನ್ನ ನೊಸಲುಗಣ್ಣನ್ನು ತೆರೆದು ಅದರಿಂದ ಹೊರಟ ಜ್ವಾಲೆಯನ್ನು ಆ ಮಾರಿಕವ್ವೆಯ ಮೇಲೆ ಬಿಟ್ಟನು. ಆದರೆ ಆಗ ಒಂದು ಆಶ್ಚರ್ಯವಾಯಿತು. ಆ ಜ್ವಾಲೆಯು ಆ ಮಾರಿಕವ್ವೆಯ ಮೇಲೆ ಬಿದ್ದರೂ ಅದು ಸುಟ್ಟುಹೋಗಲಿಲ್ಲ. ಇಷ್ಟೇ ಅಲ್ಲ ಆ ದೈವತವು ಶಂಕರದಾಸಿಮಯ್ಯನ ಉರಿಗಣ್ಣನ್ನೇ ನುಂಗಿಬಿಟ್ಟಿತು! ಹೀಗೆ ಶಂಕರದಾಸಿಮಯ್ಯನು ತನ್ನ ಉರಿಗಣ್ಣನ್ನು ಕಳೆದುಕೊಂಡವನಾಗಿ ಸತ್ವರಹಿತನಾಗಿ ಕಳೆಗುಂದಿದ ಮುಖವುಳ್ಳವನಾಗಿ ಮನೆಯಲ್ಲಿ ಕುಳಿತುಬಿಟ್ಟನು.

ಆಗ ಪಟ್ಟಣದಲ್ಲಿದ್ದ ಶಿವಾನುಭವಿಗಳು ಇದನ್ನು ಕೇಳಿ ಆಶ್ಚರ್ಯಭರಿತರಾಗಿ ಶಂಕರ ದಾಸಿಮಯ್ಯನ ಮನೆಗೆ ಬಂದು ಈ ತೆರನಾದ ಶಿವಭಕ್ತಿಯು ಎಲ್ಲಾದರೂ ಉಂಟೇ, ಎಂದು ಅಂಗಣದಲ್ಲಿ ಚರ್ಚಿಸುತ್ತಿರಲು ಢಕ್ಕೆಯ ಮಾರಯ್ಯನು—ನಾನು ಕುಣಿಸುತ್ತಿರುವ ಈ ಮಾರಿಕವ್ವೆಯು ನಿಮಗೆ ಗೊತ್ತಿಲ್ಲ. ಅದು ಹೆರವರನ್ನು ಪೀಡಿಸಿ ಹೊಟ್ಟೆ ಹೊರೆದುಕೊಳ್ಳುವ ದೈವತವಲ್ಲ. ಅದು ನನ್ನ ಜ್ಞಾನಶಕ್ತಿಯು. ಈ ಶಕ್ತಿಯನ್ನು ನಾನು ಈ ರೂಪಿನಲ್ಲಿ ಆರೋಹಿಸಿದ್ದರಿಂದ ಆ ಶಕ್ತಿಯು ಈ ರೂಪನ್ನು ಕುಣಿಸುತ್ತಿದೆ ಎಂದು ತಿಳಿಸಿದನು. ಆದಕ್ಕೆ ನೆರೆದ ಕೆಲವು ಭಕ್ತರು—ಇದು ಜ್ಞಾನ

ಶಕ್ತಿಯಾವದೇನು? ಇದನ್ನು ನೀನು ಇದಿರಿಟ್ಟು ಪೂಜಿಸುತ್ತೀಯಲ್ಲವೇ? ಆದರಿಂದ ಅದು ಪರದೈವತವು. ಅದನ್ನು ಹೀಗೆ ಮನ್ನಿಸಕೂಡದೆಂದು ಅವನೊಡನೆ ಚರ್ಚಿಸಿದರು. ಅದನ್ನು ಮಾರಯ್ಯನು ಕೇಳಿ ಕುಣಿಯುತ್ತಿರುವ ಆ ಮಾರಿಕವ್ವೆಯನ್ನು ತಾನು ಧಾರಣ ಮಾಡಿದ ಇಷ್ಟಲಿಂಗದಲ್ಲಿ ಅಡಗಿಸಿಬಿಟ್ಟನು. ಆ ಮೇಲೆ ಅವನು ಆ ಇಷ್ಟಲಿಂಗವನ್ನು ತನ್ನ ಕೈಯಲ್ಲಿ ಇಟ್ಟುಕೊಳ್ಳಲು ಅದು ಅಲ್ಲಿಯೇ ಮಾರಿಕವ್ವೆಯಂತೆ ಕುಣಿಯಹತ್ತಿತು! ನೆರೆದ ಜನರು ಇದನ್ನು ನೋಡಿ ಆಶ್ಚರ್ಯಭರಿತರಾಗಿ – ಢಕ್ಕೆಯ ಮಾರಯ್ಯನು ಇಷ್ಟಲಿಂಗವನ್ನು ನಿಜವಾಗಿ ಕಂಡವನಾಗಿದ್ದಾನೆ. ಅವನು ಅದನ್ನು ಸಾಧಿಸಿಕೊಂಡಿದ್ದಾನೆ. ಅವನೇ ನಿಜವಾದ ಶಿವಯೋಗಿಯು, ಎಂದು ಸ್ತುತಿಸಹತ್ತಿದರು. ಇದನ್ನು ಶಂಕರ ದಾಸಿಮಯ್ಯನು ನೋಡಿ ತನ್ನ ತಪ್ಪನ್ನು ಒಪ್ಪಿಕೊಂಡು ಢಕ್ಕೆಯ ಮಾರಯ್ಯನಿಗೆ—ನಿನ್ನ ಮಹತ್ವವನ್ನು ನಾನೀಗ ಅರಿತೆನು. ನಾನು ನನ್ನ ನೊಸಲುಗಣ್ಣನ್ನು ನಿನ್ನ ಇಷ್ಟದೇವತೆಯ ಮೇಲೆ ಪ್ರಯೋಗಿಸಿದೆನು. ನನ್ನಿಂದ ಅಪರಾಧವಾಯಿತು. ನನ್ನನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ಆಗ ಅಂಗಯ್ಯಲ್ಲಿ ಕುಣಿಯುತ್ತಿದ್ದ ಆ ಇಷ್ಟಲಿಂಗದೊಳಗಿಂದ ಮಾರಿಕವ್ವೆಯು ಪುನಃ ಹೊರಹೊರಟು ಸ್ವಸ್ವರೂಪವನ್ನು ತಾಳಿತು ಮತ್ತು ತಾನು ಮೊದಲು ನುಂಗಿದ್ದ ಶಂಕರ ದಾಸಿಮಯ್ಯನ ನೊಸಲುಗಣ್ಣನ್ನು ಅವನ ಮುಂದೆ ಉಗುಳಿಬಿಟ್ಟಿತು! ಇಷ್ಟೇ ಅಲ್ಲ, ಅದರ ಬಾಯಿಂದ ಜ್ವಾಲಾ ಪೂರ್ಣವಾದ ಇನ್ನೂ ಎಷ್ಟೋ ಕಣ್ಣುಗಳು ಹೊರಬೀಳ ಹತ್ತಿದವು!! ಆಗ ನೆರೆದ ಭಕ್ತರು ಇಂಥ ಕಣ್ಣುಗಳಿಂದ ಲೋಕಗಳು ದಹಿಸಿ ಹೋದಾವು, ಹಾಗೆ ಮಾಡಕೂಡದೆಂದು ಅವನಿಗೆ ಹೇಳಿಕೊಳ್ಳಲು ಅವು ಹೆಚ್ಚಿಗೆ ಹೊರಗೆಬರುವದು ನಿಂತಿತು.

ಶಂಕರ ದಾಸಿಮಯ್ಯನು ಈ ಮಹಿಮೆಯನ್ನು ನೋಡಿ, ಢಕ್ಕೆಯ ಮಾರಯ್ಯನಿಗೆ ನುಡಿದದ್ದು—ಪರದೈವತವೆಂಬುದು ಈಗ ನನಗೆ ತಿಳಿಯ ಬಂದಿತು. ಇಷ್ಟಲಿಂಗದ ಅರಿವು ನನಗುಂಟಾಯಿತು. ನೀನು ಮಹಾತ್ಮಿಕನು ಎಂದು ಸ್ತುತಿಸಿದನು. ಆ ಮೇಲೆ ಆವನು ಢಕ್ಕೆಯ ಮಾರಯ್ಯನಿಗೆ ತಾನು ಕೊಡತಕ್ಕ ಕಾಯಕವನ್ನು ಕೊಡಲಾಗಿ ಅವನು ಅದನ್ನು ತೆಗೆದುಕೊಂಡು ಮುಂದೆ ತೆರಳಿದನು.

ಢಕ್ಕೆಯ ಮಾರಯ್ಯನ ಈ ಚರಿತ್ರೆಯಲ್ಲಿ ಶಿವಾನುಭವದ ಮಹತ್ವದ ತತ್ವಗಳು ಅಡಕವಾಗಿರುತ್ತವೆ. ಶಿವಶರಣರು ಇಷ್ಟಲಿಂಗದ ರೀತಿಯನ್ನು ತಿಳಿದವರಾಗಿ ಅದರ ಮೂಲಕ ಲಿಂಗಾಂಗ ಸಾಮರಸ್ಯವನ್ನು ಹೇಗೆ ಹೊಂದಬೇಕೆಂಬುದನ್ನು ತಮ್ಮ ನಡೆಯಲ್ಲಿ ತೋರಿಸಿದ್ದಾರೆ. ಇದನ್ನು ನಾವು ಢಕ್ಕೆಯ ಮಾರಯ್ಯನ ಚರಿತ್ರೆಯಲ್ಲಿ ಕಾಣಬಹುದು.

ಸಾಮಾನ್ಯ ಜನರು ಭಜಿಸುವ ಮಾರಿಕವ್ವೆಯು ಜನರನ್ನು ಪೀಡಿಸಿ, ನೋಯಿಸಿ, ರೋಗಗಳಿಂದ ಅವರನ್ನು ಬಳಲಿಸಿ, ಅವರು ಕೊಟ್ಟ ಬಲಿಯ ಮೇಲೆ ಉಪಜೀವಿಸುವ ದೈವತವಾಗಿದೆ. ಹೀಗೆಯೇ ಆದರ ವರ್ಣನೆಗಳಿವೆ. ಆದರೆ ಢಕ್ಕೆಯ ಮಾರಯ್ಯನು ಪೂಜಿಸುತ್ತಿದ್ದ ಮಾರಿಕವ್ವೆಯು ಇಂಥ ದೈವತವಾಗಿರಲಿಲ್ಲ. ಅದು ಅವನ ಜ್ಞಾನಶಕ್ತಿಯಾಗಿತ್ತು. ಆದುದರಿಂದ ಶಂಕರ ದಾಸಿಮಯ್ಯನ ಉರಿಗಣ್ಣಿನ ಜ್ವಾಲೆಯು ಅದನ್ನು ಉರಿಯಿಸದೆ ಹೋಯಿತು. ಮಾರಯ್ಯನು ಇಷ್ಟಲಿಂಗ ಧಾರಿಯಾಗಿದ್ದನೆಂಬುದು ಅವನ ಈ ಚರಿತ್ರೆಯಲ್ಲಿ ಹೇಳಿದೆ. ಆದರೆ ಇಷ್ಟಲಿಂಗಧಾರಿಯಾದವನು ಇತರ ದೈವತಗಳನ್ನು ಪೂಜಿಸಕೂಡದೆಂಬ ಶಿವಶರಣರ ಉಕ್ತಿಗಳಿದ್ದು ಅವುಗಳಿಗೆ ಮಾರಯ್ಯನ ಈ ನಡೆಯು ವಿಸಂಗತವಲ್ಲವೇ ಎಂಬ ಸಂದೇಹವು ವಾಚಕರಲ್ಲಿ ಉಂಟಾಗಬಹುದು. ಆದರೆ ಮಾರಯ್ಯನು ನಡಿಸಿದ ಪೊವಾಡದಿಂದ ಇಂಥ ಸಂದೇಹವು ಉಂಟಾಗಲು ಕಾರಣವಿಲ್ಲ. ಯಾಕಂದರೆ ಇಷ್ಟಲಿಂಗದ ಉದ್ದೇಶವು ಪ್ರಾಣಲಿಂಗವನ್ನು ಸಾಧಿಸುವದೇ ಇರುತ್ತದೆ. ಪ್ರಾಣಲಿಂಗ ಅಥವಾ ಜ್ಞಾನಲಿಂಗವನ್ನು ಸಾಧಿಸಿದಲ್ಲಿ ಬಾಹ್ಯವಸ್ತುಗಳು ಅವು ಯಾವವಿದ್ದರೂ ಶಿವಾನುಭವಿಗೆ ಲಿಂಗಮಯವಾಗಿ ತೋರುತ್ತವೆ. ಆಗ ಅವನು ಅವುಗಳನ್ನೂ ಅವುಗಳ ವ್ಯಾಪಾರಗಳನ್ನೂ ಲಿಂಗರೂಪವಾಗಿ ಕಾಣುತ್ತಾನೆ. ಮತ್ತು ಹಾಗೆಯೇ ಅವುಗಳನ್ನು ಅನುಭವಿಸುತ್ತಾನೆ. ಉದಾ:-ಒಬ್ಬ ವಚನಕಾರನು ಭೂಮಿ, ಜೀವ, ಬೆಳೆ, ನೀರು, ಗಾಳಿ, ಎತ್ತು, ಬೀಜ ಇವುಗಳಲ್ಲಿ ಪರಮಾತ್ಮನು ತಿಂಥಿಣಿಯಾಗಿ ಅಂದರೆ ದಟ್ಟವಾಗಿ ವಾಸಿಸುತ್ತಾನೆಂದು ಹೇಳಿದ್ದಾನೆ. ಇದರಿಂದ ಬಹಿರಂಗದಲ್ಲಿದ್ದ ಇಂಥ ವಸ್ತುಗಳು ಮತ್ತು ಕ್ರಿಯೆಗಳು ಅವು ಯಾವವೇ ಇರಲಿ ಅವುಗಳ ಮೂಲಕ ಪ್ರಾಣಲಿಂಗವನ್ನು ಉಜ್ವಲಗೊಳಿಸಲು ಶಿವಾನುಭವಿಗೆ ಅವು ಸಾಧನಗಳಾಗಿ ಪರಿಣಮಿಸುತ್ತವೆ. ಮಾರಯ್ಯನ ನಡೆಯು ಈ ರೀತಿಯದಾಗಿರುತ್ತದೆ. ಅವನು ಪೂಜಿಸು

ಶ್ರೀಷ್ಠ ಮಾರಿಕವ್ವೆಯು ಅವನಿಗೆ ಸಾಮಾನ್ಯರು ಪೂಜಿಸುವ ಮಾರಿಕವ್ವೆಯಾಗಿರಲಿಲ್ಲ. ಅದರ ಮೂಲಕ ಅವನು ತನ್ನ ಲಿಂಗಶಕ್ತಿಯನ್ನು ತನ್ನಲ್ಲಿ ಬೆಳೆಸಿಕೊಳ್ಳುವ ಸಾಧನವಾಗಿತ್ತು. ಆದ್ದರಿಂದ ಮಾರಿಕವ್ವೆಯನ್ನು ತನ್ನ ಇಷ್ಟಲಿಂಗದಲ್ಲಿ ಅಡಗಿಸಿಕೊಳ್ಳಲು ಅವನು ಸಾಮರ್ಥ್ಯವನ್ನು ಹೊಂದಿದವನಾಗಿದ್ದನು. ಹಾಗೆ ತನ್ನ ಇಷ್ಟಲಿಂಗದಲ್ಲಿ ಅದನ್ನು ಅಡಗಿಸಿಕೊಳ್ಳಲಾಗಿ ಅದು ಮಾರಿಕವ್ವೆಯಂತೆ ಹಸ್ತದಲ್ಲಿ ಕುಣಿಯ ಹತ್ತಿತು.

ಢಕ್ಕೆಯ ಮಾರಯ್ಯನಿಗೆ ಈ ಮಾರಿಕವ್ವೆಯು ಸಾಮಾನ್ಯ ಜನರು ತಿಳಿಯುವಂತೆ ಹಿಂಸಾಚರಣೆಯುಳ್ಳ ದೈವತವಾಗಿರಲಿಲ್ಲ. ಅದು ಅವನ ಜ್ಞಾನಶಕ್ತಿಯನ್ನು ಹೆಚ್ಚಿಸುವ ಸಾಧನವಾಗಿದ್ದಿತು. ಮಾರಯ್ಯನ ಚರಿತ್ರೆಕಾರರಾದರೂ ಅವನ ಮಾರಿಕವ್ವೆಯನ್ನು ತಮ್ಮ ಗ್ರಂಥಗಳಲ್ಲಿ ಹೀಗೆಯೇ ವರ್ಣಿಸಿದ್ದಾರೆ.

ಇದಲ್ಲದೆ ಢಕ್ಕೆಯ ಮಾರಯ್ಯನಿಗೆ ಮಾರಿಕವ್ವೆಯು ಒಂದು ಕಾಯಕದ ವಸ್ತುವಾಗಿತ್ತು. ಅದರ ಮುಂದೆ ಅವನು ಢಕ್ಕೆಯನ್ನು ಬಾರಿಸುತ್ತ ಹೋಗಲಾಗಿ ಜನರು ಅವನ ಸುತ್ತಲೂ ನೆರೆಯುವರು. ಆಗ ಅವನು ಅವರಿಗೆ ಶಿವಶರಣರ ಚರಿತ್ರೆಗಳನ್ನು ಹೇಳಿ ಶಿವಾನುಭವವನ್ನು ಬೋಧಿಸುವನು. ಆಗ ಜನರು ತನಗೆ ಕೊಟ್ಟಿದ್ದನ್ನು ದಾಸೋಹ ಕಾರ್ಯಗಳಿಗೆ ಅವನು ಉಪಯೋಗಿಸುವನು.

ಶಿವಶರಣರಿಗೆ ಕಾಯಕದ ಇಂಥ ವಸ್ತುಗಳೆಲ್ಲವೂ ಪವಿತ್ರವಾದವುಗಳು. ಇದರಲ್ಲಿ ಅವರು ಉಪಯೋಗಿಸುವ ಸಾಧನಗಳು, ಉದಾ:— ಒಕ್ಕಲುತನದ ಸಾಮಾನುಗಳು, ನೇಗಿಯ ಸಾಮಾನುಗಳು, ಕುಂಬಾರನ ತಿಗರಿ, ಶಿಂಪಿಗನ ಕತ್ತರಿ ಇವೆಲ್ಲವೂ ಪವಿತ್ರವಾದವುಗಳು. ಲಿಂಗಪೂಜೆಗೆ ಬೇಕಾಗುವ ಪತ್ರೆಪುಷ್ಪಗಳು ಹೇಗೆ ಪವಿತ್ರವಾದವುಗಳೋ ಹಾಗೆಯೇ ಇವೂ ಕೂಡ ಅವರಿಗೆ ಪವಿತ್ರವಾದವುಗಳು. ಈ ಭಾವದಿಂದ ಢಕ್ಕೆಯ ಮಾರಯ್ಯನು ಮಾರಿಕವ್ವೆಯನ್ನು ಜನರ ಮುಂದೆ ಕುಣಿಸಿ ತನ್ನ ಕಾಯಕವನ್ನು ಮಾಡುವನು. ಇದರಲ್ಲಿ ದೋಷವು ಏಕೆ ಉಂಟಾಗಬೇಕು? ಅವನಿಗೆ ಈ ಕಾಯಕವು ಇಷ್ಟಲಿಂಗ ಪೂಜೆಯಂತೆ ಪರಿಣಮಿಸಿತು.

ಸರಿಯಾಗಿ ನಡಿಸಿದ ಕಾಯಕದಿಂದ ಅಂತರ್ಲಿಂಗವು ಅಥವಾ ಪ್ರಾಣಲಿಂಗವು ಪ್ರಸ್ಫುರಿಸಹತ್ತುತ್ತದೆ. ಕಾಯಕ ಮಾಡುವಲ್ಲಿ ಕಾಯ

ಕದ ಸಾಧನಗಳು, ಕಾಯಕವನ್ನು ನಡಿಸುವವನು ಮತ್ತು ಕಾಯಕದ ಅವನ ಉದ್ದೇಶಗಳು ಇವುಗಳಲ್ಲಿ ಸರಿಯಾಗಿ ಮೇಳವಿರಬೇಕು. ಹೀಗೆ ಮೇಳವಿಸಿ ನಡೆಯುವದೇ ಶಿವಶರಣರ ನಡೆಯಾಗಿರುತ್ತದೆ. ಆ ರೀತಿ ಮಾರಯ್ಯನು ನಡೆದದ್ದರಿಂದ ಅವನು ಇಷ್ಟಲಿಂಗಸಾಧಕನಾದನು.

ಕೆಳಗಿನ ತರಗತಿಯ ಜನರು ಕಿರುಮಳ ದೇವತೆಗಳನ್ನು ಭಜಿಸುತ್ತ ಹಿಂಸಾಚಾರಿಗಳಾಗಿರುತ್ತಾರೆ. ಅದ್ದರಿಂದ ಶಂಕರದಾಸಿಮಯ್ಯನು ಇಂಥ ಕೀಳ ದೇವತೆಗಳನ್ನು ಸುಟ್ಟುಬಿಡುತ್ತಿದ್ದನು- ಹೀಗೆ ಮಾಡುವದರಿಂದ ಅನ್ಯದೇವತೆಗಳ ಭಜನೆಯು ಜನರಲ್ಲಿ ದೂರಾಗುವದೆಂದು ಅವನು ಭಾವಿಸಿರಬೇಕು. ಆದರೆ ಢಕ್ಕೆಯ ಮಾರಯ್ಯನು ಇಂಥ ಮಾರ್ಗವನ್ನು ಸ್ವೀಕರಿಸಿರುವದಿಲ್ಲ. ಅವನು ಇಂಥ ದೇವತೆಗಳ ಭಜನೆಯನ್ನು ಮಾಡುತ್ತಲೇ ಇಷ್ಟಲಿಂಗ–ಪ್ರಾಣಲಿಂಗಗಳ ಅರಿವನ್ನು ತನ್ನಲ್ಲಷ್ಟೇ ಅಲ್ಲ, ಜನರಲ್ಲಿಯೂ ಕೂಡ ಉಂಟುಮಾಡಲು ಪ್ರಯತ್ನಿಸಿದ್ದಾನೆ. ಇದು ಅವನ ಈ ಚರಿತ್ರೆಯ ವೈಶಿಷ್ಟ್ಯವಾಗಿದೆ.

ಶಂಕರದಾಸಿಮಯ್ಯನ ಅಂಗಣದಲ್ಲಿ ಜನರು ಜರಗಿಸಿದ ವಾದದಲ್ಲಿ ಮಾರಿಕವ್ವೆಯು ಢಕ್ಕೆಯ ಮಾರಯ್ಯನ ಜ್ಞಾನಶಕ್ತಿ ಎಂದು ಹೇಳಲ್ಪಟ್ಟಿದೆ. ಆದರೆ ನೆರೆದವರಲ್ಲಿ ಕೆಲವರು ಅವನು ಆದನ್ನು ಇದಿರಿಟ್ಟು ಪೂಜಿಸುವದರಿಂದ ಅದು ಎಂದೂ ಅವನ ಇಷ್ಟಲಿಂಗವಾಗಲಾರದು, ಅದು ಸ್ಥಾವರ ದೇವತೆ ಎಂದು ಆಕ್ಷೇಪಿಸಿದರು. ಆದರೆ ಮಾರಯ್ಯನು ಅದು ಹಾಗಿರುವದಿಲ್ಲವೆಂಬುದನ್ನು ತೋರಿಸಲು ಆ ಮೂರ್ತಿಯನ್ನು ತನ್ನ ಇಷ್ಟಲಿಂಗದಲ್ಲಿ ಅಡಗಿಸಿಬಿಟ್ಟನು. ಆಗ ಆ ಲಿಂಗವು ಅವನ ಕೈಯ್ಯ ಮೇಲೆ ಕುಣಿಯಹತ್ತಿತು. ಮತ್ತು ಅವನು ಇಚ್ಛಿಸಿದ ಕೂಡಲೆ ಆ ಮಾರಿಕವ್ವೆಯು ಆ ಇಷ್ಟಲಿಂಗದೊಳಗಿಂದ ಪುನಃ ಹೊರಬಿದ್ದು ತನ್ನ ಪೂರ್ವ ಸ್ವರೂಪವನ್ನು ಹೊಂದಿತು. ಶಿವಾನುಭವದ ಆಚರಣೆಯ ಮೂಲಕ ಇಂಥ ಪರಿಣಾಮಗಳಾಗುವದು ಅಸಂಭವನೀಯವಲ್ಲವೆಂದು ತೋರುತ್ತದೆ.

ಮನುಷ್ಯನಲ್ಲಿ ಅಲೌಕಿಕವಾದ ಲಿಂಗಚೈತನ್ಯವು ಹುದುಗಿರುತ್ತದೆ. ಆದರೆ ಅವನ ಬಾಹ್ಯ ಕ್ರಿಯೆಗಳ ಸದುಪಯೋಗದಿಂದ ಆ ಶಕ್ತಿಯನ್ನು ತನ್ನಲ್ಲಿ ಪ್ರಕಟ ಮಾಡಿಕೊಳ್ಳಬಹುದು. ಇದು ಶಿವಶರಣರ ಚರಿತ್ರೆಯಲ್ಲಿ ಆಗಿಂದಾಗ್ಗೆ ಕಂಡುಬರುತ್ತದೆ.



# ಶಿ ವಾ ನು ಭ ವ

ಸಂಪುಟ ೨೩ | [ ಸಂಚಿಕೆ ೮



ಮೇ ೧೯೪೫

ವಿಜಾಪುರ.

# ವಿಷಯಗಳು.

# ಶಿವಾನುಭವ

| ವರ್ಷ ೨೩ | ಮೇ ೧೯೪೯ | ಸಂಚಿಕೆ ೮ |
| --- | --- | --- |

## ವೀರಶೈವರಲ್ಲಿ ಜಾತೀಯತೆ.

(ಲೇಖಕ:— ಶ್ರೀಯುತ ಕಲ್ಯಾಣಪ್ಪ ಬ್ಯಾಳಿ ಬಿ ಎ. ಬಿ- ಟಿ. ವಿಜಾಪುರ)

ಶಿವಶರಣರು ೧೨ನೆಯ ಶತಮಾನದಲ್ಲಿ ಉದಯವಾಗಿ ಜಾತೀಯತೆಯನ್ನು ನಿರ್ಮೂಲಗೊಳಿಸಿದರು. ಅವರು ಧರ್ಮ, ನೀತಿ, ಭಕ್ತಿ, ಕಾಯಕಗಳ ಮಹತ್ವವನ್ನು ತಿಳಿಸಿ ಹಿಂದೂಧರ್ಮದಲ್ಲಿ ನೆಲಿಸಿದ ೧೮ ಜಾತಿಗಳ ತಾರತಮ್ಯ ಭಾವವನ್ನು ನಷ್ಟಗೊಳಿಸಿ ಆ ಎಲ್ಲ ಜಾತಿಗಳನ್ನು ಒಂದುಗೂಡಿಸಿದರು. ಸದಾಚಾರ ಸ್ಫಭಕ್ತಿಯುಳ್ಳ ಅನ್ಯಜಾತಿಯವರನ್ನು ತಮ್ಮ ಮತದಲ್ಲಿ ಸೇರಿಸಿಕೊಂಡು ಜಾತಿಗಳಲ್ಲಿ ಐಕ್ಯತ್ವವನ್ನುಂಟು ಮಾಡಿದರು. ಹಿಂದುಸ್ಥಾನದಲ್ಲಿ ಬಹು ಜಾತಿಗಳನ್ನೊಂದುಗೂಡಿಸಿದ ದೊಡ್ಡದೊಂದು ಸಮಾಜವಾವುದಾದರೂ ಇದ್ದರೆ ಅದು ವೀರಶೈವ ಸಮಾಜವು.

ವೀರಶೈವರಲ್ಲಿ ಜಾತಿಭೇದಗಳಿಲ್ಲ. ಆದ್ದರಿಂದ ವೀರಶೈವವು ಒಂದು ಜಾತಿಯೆಂದು ಹೇಳಲಿಕ್ಕೆ ಬರುವದಿಲ್ಲ. ವೀರಶೈವಮತವಲ್ಲಿ ವಿಪ್ರ ಮೊದಲು ಅಂತ್ಯಜಕಡೆಯಾಗಿ ಎಲ್ಲ ಜಾತಿಗಳೂ ಸಮಾವೇಶವಾಗಿವೆ. ಆದ್ದರಿಂದ ವೀರಶೈವವೆಂಬುದು ಒಂದು ಸಮಾಜ ಅಥವಾ ಮತ; ಅದರೆ ಜಾತಿಯಲ್ಲ. ಭರತಖಂಡದಲ್ಲಿ ಬ್ರಹ್ಮಸಮಾಜ, ಪ್ರಾರ್ಥನಾ ಸಮಾಜ' ಥಿಯಾಸಫಿ, ಆರ್ಯಸಮಾಜ, ರಾಮಕೃಷ್ಣಮಿಶನ್, ಇಂಚಗೇರಿಪಂಥ, ವಾರಕರಿಪಂಥ ಎಂಬ ಕೆಲವು ಸಣ್ಣಪುಟ್ಟ ಪಂಥಗಳಿವೆ.

ಅದೇ ಮೇರೆಗೆ ವೀರಶೈವ ಎಂಬದೊಂದು ದೊಡ್ಡ ಸಮಾಜವಿರುತ್ತದೆ. ವೀರಶೈವಪಂಥದಲ್ಲಿ ಸೇರಿದವರೆಲ್ಲರೂ ಒಂದುಕಾಲಕ್ಕೆ ಪರಸ್ಪರ ಅನ್ನೋದಕ, ಮಿಶ್ರವಿವಾಹಗಳನ್ನು ಮಾಡುತ್ತಿದ್ದರು. ಆದರೆ ವರ್ಣಾಶ್ರಮಧರ್ಮಗಳ ಆಘಾತದಿಂದ ಮಧ್ಯಂತರದಲ್ಲಿ ಅವು ನಿಂತುಹೋದವು. ವರ್ಣಾಶ್ರಮಧರ್ಮಗಳಲ್ಲಿ ಕಂಡುಬರುವ ಜಾತೀಯತೆಯು ವಿರುದ್ಧ ಮೊದಲು ಕುಠಾರವೆತ್ತಿದವರು ಬೌದ್ಧರು. ಅನಂತರ ಈ ಸಾಹಸಕ್ಕೆ ಕೈಹಾಕಿದವರು ಶಿವಶರಣರು ಶಿವಶರಣರು ಕುಲಕೊಬ್ಬರಾಗಿ ಹೋಗಿದ್ದಾರೆ. ಅವರೆಲ್ಲರ ಹೆಸರನ್ನು ವೀರಶೈವರು ಸ್ಮರಿಸುತ್ತಾರೆ. ಸ್ವತಃ ಬಸವಣ್ಣನವರು ಜೈನಮತದ ನೀಲಾಂಬಿಕೆಯನ್ನೂ ವಿಪ್ರಕುಲದ ಗಂಗಾಂಬಿಕೆಯನ್ನೂ ವಿವಾಹವಾಗಿದ್ದರು. ಶಿವಶರಣರಾದ ಮಧುವಯ್ಯ ಹರಳಯ್ಯಗಳು ಅನುಕ್ರಮವಾಗಿ ಬ್ರಾಹ್ಮಣ-ಮಚ್ಚಿಗ ಜಾತಿಯವರಿದ್ದರೂ ಅವರ ನಡುವೆ ನೆಂಟಸ್ತನವು ನಡೆದುಹೋಯಿತು. ಬಹುಶಃ ಎಲ್ಲ ಹಿಂದೂ ಜನರು ಒಂದುಗೂಡಿದ ಪ್ರಾಚೀನ ಸಮಾಜವೆಂದರೆ ವೀರಶೈವ ಸಮಾಜವು. ಇದು ಕರ್ನಾಟಕದಲ್ಲಿ ವಿಶೇಷವಾಗಿಯೂ ಉಳಿದ ಪ್ರಾಂತಗಳಲ್ಲಿ ವಿರಳವಾಗಿಯೂ ಹಬ್ಬಿಕೊಂಡಿದೆ.

ಜಾತೀಯತೆಯನ್ನು ಹರಿದ ವೀರಶೈವ ಸಮಾಜವು ಸ್ಥಾಪಿಸಿದ ಸಂಸ್ಥೆಗಳಾಗಲಿ ನಡೆಯಿಸುವ ಉತ್ಸವ ಕಾರ್ಯಗಳಾಗಲಿ ಜಾತೀಯವಾದವುಗಳೆಂದು ಯಾರೂ ಭಾವಿಸಲಾಗದು ವೀರಶೈವ ಸಮಾಜವು ಜಾತ್ಯಾತೀತವಾಗಿದೆ. ಅನೇಕ ಜಾತಿಗಳು ಅದರಲ್ಲಿ ಕೂಡಿರುವದರಿಂದ ಅದು ಜಾತೀಯ ಸಮಾಜವಲ್ಲ. ಇದಲ್ಲದೆ ಕೇವಲ 'ವೀರಶೈವ' ಎಂಬ ಹೆಸರಿನ ಮೇಲಿಂದ ಆಯಾಯ ಸಂಸ್ಥೆಗಳು ಜಾತೀಯವಾದವುಗಳೆಂದು ತಿಳಿಯುವದು ತಪ್ಪು. ಉದಾಹರಣಾರ್ಥವಾಗಿ ಕೇವಲ ವೀರಶೈವ ಮತದವರಿಂದ ಹಣ ಕೂಡಿಸಿ ನಡೆಯಿಸಲ್ಪಡುವ ಒಂದು ಸಂಸ್ಥೆಯಲ್ಲಿ ೧೦೦ ಕ್ಕೆ ೯೦ ರಷ್ಟು ಅನ್ಯಮತೀಯರು ಕೆಲಸ ಮಾಡುತ್ತಿದ್ದರೆ ಮತ್ತು ೧೦೦ ಕ್ಕೆ ೭೦ ರಂತೆ ಅನ್ಯ ಮತೀಯರು ಆ ಸಂಸ್ಥೆಯು ಲಾಭ ಹೊಂದುತ್ತಿದ್ದರೆ ಆ ವೀರಶೈವ ಸಂಸ್ಥೆಯು ಜಾತೀಯವಾದುದೆಂದು ಹೇಳುವದು ತಪ್ಪು. ಅದೇಮೇರೆಗೆ ಆ ವೀರಶೈವ ಸಂಸ್ಥೆಯಲ್ಲಿ ೧೦೦ಕ್ಕೆ ೧೦೦ ಜನ ವೀರಶೈವ ಕೆಲಸಗಾರರು ದುಡಿದರೂ ಅದರ ಉಪಯೋಗವು

೧೦೦ಕ್ಕೆ ೯೦ ಜನ ವೀರಶೈವರಿಗೆ ಆಗುತ್ತಿದ್ದರೂ ಅದು ಜಾತೀಯ ಸಂಸ್ಥೆಯೆನಿಸಲಾರದು. ಯಾಕಂದರೆ ಅವರಿಂದ ಕೂಡಿಸಿದ ದುಡ್ಡು ಅವರಿಗೆ ಸಲ್ಲಿದರೆ ಅದರಲ್ಲಿ ಜಾತೀಯತೆಯು ಸ್ವಾರ್ಥವಿರಲಾರದು. ಆದರೆ ಅನ್ಯ ಮತದ ಒಂದು ಸಂಸ್ಥೆಯಲ್ಲಿ ಅದೇ ಮತದವರು ೧೦೦ಕ್ಕೆ ೧೦೦ ಜನರಿದ್ದು ಆ ಸಂಸ್ಥೆಯ ಉಪಯೋಗವು ೧೦೦ಕ್ಕೆ ೯೦ ಅದೇ ಜಾತಿಯ ಜನಕ್ಕೆ ಆಗುತ್ತಿದ್ದು ಆ ಸಂಸ್ಥೆಗೆ ಕೂಡಿಸಿದ ದುಡ್ಡು ಎಲ್ಲ ಜಾತಿಯವರಿಂದಲೂ ಬಂದಿದ್ದರೆ ಆ ಸಂಸ್ಥೆಗೆ ಸಾರ್ವಜನಿಕ ಸಂಸ್ಥೆಯೆಂಬ ಹೆಸರಿಟ್ಟ ಮಾತ್ರಕ್ಕೆ ಅದು ಜಾತ್ಯಾತೀತವಾದುದೆಂದು ಹೇಳುವದು ಕೇವಲ ಹುಚ್ಚುತನವು.

ಸರಕಾರ ನೌಕರಿಗಳನ್ನು ಕೊಡುವಾಗ ಜಾತಿಯನ್ನು ನೋಡದೆ ಯೋಗ್ಯತಾ ಹಾಗೂ ಪ್ರಶಸ್ತಿಪತ್ರಗಳನ್ನು ನೋಡುತ್ತೇವೆಂದು ಸರಕಾರವು ಹೇಳಬಹುದು. ಆದರೆ ಆ ಯೋಗ್ಯತೆ ಪ್ರಶಸ್ತಿ ಪತ್ರಗಳುಳ್ಳವರು ಒಂದು ವಿಶಿಷ್ಟಜಾತಿಯವರಾಗಿದ್ದರೆ ಸರಕಾರವು ಪರ್ಯಾಯದಿಂದ ಆ ಜಾತಿಯವರನ್ನು ಎತ್ತಿಹಿಡಿದಂತಾಗುತ್ತಿದೆ. ಅದರಿಂದ ಸಮಾಜದಲ್ಲಿ ಗಲಭೆಯೇಳುವ ಸಂಭವವುಂಟು. ಪ್ರಶಸ್ತಿ ಪತ್ರಗಳಷ್ಟೇ ನೌಕರಿಗೆ ಸಾಧನಗಳಲ್ಲ ಎಲ್ಲ ಜಾತಿಮತಪಂಥದವರಿಗೆ ನ್ಯಾಯ ತೋರಿಸುವದೂ ಸರಕಾರದ ಕರ್ತವ್ಯವಾಗಿದೆ. ಅದನ್ನು ತೋರಿಸುವ ಬಗೆ ಹೇಗೆಂದರೆ ಯಾವ ಪ್ರಾಂತದಲ್ಲಿ ಯಾವ ಜಾತಿಯ ಜನರ ಕಡೆಯಿಂದ ಕರರೂಪವಾಗಿ ಸರಕಾರಕ್ಕೆ ಹೆಚ್ಚು ಹಣವು ಸಲ್ಲುವದೋ ಅಂಥವರಿಗೇನೇ ಹೆಚ್ಚು ನೌಕರಿಗಳನ್ನು ಕೊಡುವದೂ ಕಡಿಮೆ ಕರ ಕೊಟ್ಟವರಿಗೆ ಕಡಿಮೆ ನೌಕರಿ ಕೊಡುವದೂ ನ್ಯಾಯವಾಗಿದೆ. ನೌಕರಿಯು ಆರ್ಥಿಕ ಪ್ರಶ್ನೆಯಾಗಿದೆ. ಆಡಳಿತೆಯ ಪ್ರಶ್ನೆಯೂ ಆಗಿದೆ. ಹೆಚ್ಚು ದುಡ್ಡು ಕೊಟ್ಟವರು ಹೆಚ್ಚು ನೌಕರಿ ಬೇಡುವದೂ ರಾಜ್ಯದಾಡಳಿತೆಯಲ್ಲಿ ಹೆಚ್ಚು ಭಾಗ ವಹಿಸುವದೂ ಅಗತ್ಯವಿದೆ. ಅದಕ್ಕನುಸರಿಸಿ ವೀರಶೈವ ಸಮಾಜವು ಅಧಿಕವಾದ ಪ್ರಾಂತಗಳಲ್ಲಿ ಹೆಚ್ಚು ಕರ ಕೊಡುವವರು ಇವರೇ ಅದುದರಿಂದ ಹೆಚ್ಚು ನೌಕರಿಗಳನ್ನು ಬೇಡುವದೂ ಆಡಳಿತೆಯಲ್ಲಿ ಹೆಚ್ಚು ಭಾಗವಹಿಸುವದೂ ನ್ಯಾಯಸಮ್ಮತವಾಗಿದೆ. ಅದ್ದರಿಂದ ಸರಕಾರವು ಇದನ್ನು ಮನ್ನಿಸಬೇಕಾಗುತ್ತದೆ ಇದೇ ಮಾತು ಮುನಸಿಪಾಲ್ಟಿ-ಲೋಕಲ್‌ಬೋರ್ಡ ಕಾಯಿದೆಕೌನ್ಸಿಲು ಅಸೆಂಬ್ಲಿಗಳಿಗೆ ಆರಿಸಿಬರುವ ಜನತೆಗೂ ಸಂಬಂಧಿ

ಸಿರುತ್ತದೆ. ಇಲ್ಲಿಯೂ ಹೆಚ್ಚು ಕರಕೊಡುವ ಸಮಾಜಕ್ಕೆ ಹೆಚ್ಚು ಸ್ಥಾನಮಾನಗಳು ದೊರೆಯುವದು ಯುಕ್ತವಾಗಿದೆ. ಪ್ರಜಾಸತ್ತಾತ್ಮಕವೇ ಮುಖ್ಯ ಗುರಿಯಾಗಿರುವ ನಮ್ಮ ರಾಜ್ಯದಲ್ಲಿ ಎಲ್ಲ ಕಡೆಗೂ ಕಾಂಗ್ರೆಸ್ ಪಕ್ಷವೇ ಜಯಶಾಲಿಯಾಗಿ ಮೆರೆಯಬೇಕೆಂದು ಹೇಳುವದು ಸಮಂಜಸವಾಗಲಾರದು. ಹಾಗೆ ಮಾಡಿದರೆ ನಿರಂಕುಶ ಪ್ರಭುತ್ವವನ್ನು ಸ್ಥಾಪಿಸಿದಂತಾಗುತ್ತದೆ. ಆದ್ದರಿಂದ ಉಳಿದ ಸಮಾಜ-ಪಕ್ಷಗಳಿಗೆ ಸರಕಾರವು ಪ್ರೋತ್ಸಾಹವೀಯಬೇಕು.

ಈಗ ದೇಶದಲ್ಲಿ ಹರಡಿದ ಜಾತೀಯತೆಯಿಂದ ಮಹದನರ್ಥಗಳು ಸಂಭವಿಸುತ್ತವೆ. ಆದ್ದರಿಂದ ಆ ಜಾತೀಯತೆಯನ್ನು ಹೊಡೆದಟ್ಟಬೇಕೆಂದು ಸರಕಾರವು ಪ್ರಯತ್ನಿಸುವದು ಸ್ತುತ್ಯವಾಗಿದೆ. ಜಾತೀಯತೆಯನ್ನು ಹೊಡೆದೋಡಿಸುವದೆಂದರೆ ಜಾತಿಗಳನ್ನು ನಷ್ಟಪಡಿಸಬೇಕೆಂಬರ್ಥವಲ್ಲ. ಹಾಗೆ ಮಾಡುವದು ಶಕ್ಯವೂ ಇಲ್ಲ. ಹಾಗೆ ಮಾಡಹೋದರೆ ಸಮಾಜದಲ್ಲಿ ದೊಡ್ಡ ಕೋಲಾಹಲವೇಳಬಹುದು. ಆದ್ದರಿಂದ ಶರಣರ ಮಾರ್ಗವನ್ನನುಸರಿಸಿ ಸಾಂಸ್ಕೃತಿಕ ದೃಷ್ಟಿಯಿಂದ ಜಾತಿಜಾತಿಗಳಲ್ಲಿ ಪ್ರೇಮ, ಐಕ್ಯತೆ ಸಹಕಾರ ಬೆಳೆಯಿಸುವದು ಸರಕಾರದ ಹಾಗೂ ಸಮಾಜಗಳ ಕರ್ತವ್ಯವಾಗಿದೆ ಅದರಂತೆ ಪರಸ್ಪರ ಜಾತಿಗಳಲ್ಲಿ ನೆಲಸಿರುವ ಅಸಹನೆ, ತಿರಸ್ಕಾರ, ದ್ವೇಷ, ಅನೈಕ್ಯತೆಗಳು ದೇಶಕ್ಕೆ ವಿಘಾತಕವಾದುದರಿಂದ ಅಂಥ ಭಾವನೆಗಳನ್ನು ತಡೆಗಟ್ಟಬೇಕಾಗುತ್ತದೆ. ಎಲ್ಲ ಜಾತಿಗಳನ್ನು ಒಂದುಗೂಡಿಸಿ ಒಂದು ವಿಶಿಷ್ಟವಾದ ಹೆಸರನ್ನಿಟ್ಟು ಅದರಂತೆ ಎಲ್ಲರನ್ನು ಕರೆಯ ಹಚ್ಚುವದು ಸದ್ಯಕ್ಕೆ ಶಕ್ಯವಿಲ್ಲ. ಆದರಿಂದ ಜಾತೀಯತೆಯು ಮತ್ತಿಷ್ಟು ಉಗ್ರಸ್ವರೂಪಹೊಂದಿ ದೇಶಕ್ಕೆ ಆಘಾತವನ್ನುಂಟು ಮಾಡಬಹುದು.

ಆದರೆ ಸದ್ಯಕ್ಕೆ ಒಂದು ಮುಖ್ಯ ಮತಕ್ಕೆ ಒಳಪಟ್ಟ ಜಾತಿಗಳೆಲ್ಲವೂ ಒಂದುಗೂಡಿ ಪರಸ್ಪರ ಶರೀರ ಸಂಬಂಧ ಸಹಭೋಜನಗಳನ್ನು ನಡೆಯಿಸಲು ಶಕ್ಯವಿದೆ. ಇದಕ್ಕೆ ಪ್ರಾಚೀನ ಸಂಸ್ಕೃತಿಯು ಒಪ್ಪುತ್ತಿದೆ. ಹಿಂದೆ ಇಂಥ ಉದಾಹರಣೆಗಳೂ ಉಂಟು ವೀರಶೈವಮತದಲ್ಲಿ ಅನೇಕ ಜಾತಿಗಳಿದ್ದು ಅವೆಲ್ಲವುಗಳು ಒಂದಾಗಬೇಕು. ಈ ಪ್ರಶ್ನೆಯನ್ನು ಆಯಾಯ ಒಳಪಂಗಡಗಳ ಮುಖಂಡರು ಕೂಡಿಕೊಂಡು ಬಗೆಹರಿಸಬೇಕು. ಇನ್ನು ಶಾಕಾಹಾರಿಗಳಾದ ಜನರೆಲ್ಲರೂ ಪರಸ್ಪರ ಅನ್ನಪಾನಾದಿಗಳನ್ನು ಮಾಡು

ವದು ಈಗಿನ ಕಾಲದಲ್ಲಿ ಸುಲಭಸಾಧ್ಯವಿದೆ. ಇದನ್ನು ಈಗಿನ ಸುಶಿಕ್ಷಿತರೂ ತರುಣರೂ ಹಾಟೆಲ್ಲಗಳೂ ಪ್ರಚಾರದಲ್ಲಿ ತಂದಿವೆ. ಮಿಶ್ರವಿವಾಹದ ಪ್ರಶ್ನೆಗೆ ಆಯಾಯ ಸಮಾಜಗಳು ಒಪ್ಪದಿದ್ದರೆ ಪ್ರೇಮಿಗಳು ಅಪವಾದವಾಗಿ ರಜಿಸ್ಟರ ಲಗ್ನ ಮಾಡಿಕೊಳ್ಳಬಹುದು. ಒಂದು ಜಾತಿಯವರು ಅನ್ಯಜಾತಿಯವರ ದೇವಾಲಯಗಳಿಗೆ ದೇವರ ದರ್ಶನಕ್ಕೆ ಹೋಗಬಹುದು. ಇದಲ್ಲದೆ ಪರಸ್ಪರ ಜಾತಿಯಲ್ಲಿ ನಡೆಯುವ ಜಾತ್ರೆ, ಉತ್ಸವ ಜಯಂತಿ ಮೊದಲಾದ ಧಾರ್ಮಿಕ ಕಾರ್ಯಗಳಲ್ಲಿ ಎಲ್ಲರೂ ಭಾಗವಹಿಸಿ ತಮ್ಮ ಸಹಾನುಭೂತಿಯನ್ನು ತೋರಿಸಬಹುದು. ಲಗ್ನ ಮಹೋತ್ಸವಾದಿ ಕಾರ್ಯಗಳಲ್ಲಿ ಒಂದು ಜಾತಿಯವರು ಅನ್ಯಜಾತಿಯ ತಮ್ಮ ಗೆಳೆಯರನ್ನು ಆಮಂತ್ರಿಸಬಹುದು. ಒಂದು ಜಾತಿಯ ವ್ಯಕ್ತಿಯು ಸತ್ತರೆ ಅನ್ಯಜಾತಿಯವರು ಆ ಸ್ಮಶಾನಯಾತ್ರೆಗೆ ಹೋಗಿ ತಮ್ಮ ಸೌಹಾರ್ದವನ್ನು ತೋರಿಸಬಹುದು. ಎಷ್ಟೋ ಸಾರ್ವಜನಿಕ ಸಂಸ್ಥೆಗಳಲ್ಲಿ ಎಲ್ಲ ಜಾತಿಯವರು ಪ್ರೇಮದಿಂದ ಕೂಡಿಕೊಂಡು ಕೆಲಸಮಾಡಬಹುದು. ಹರಿಜನರಿಗೆ ದೇವಾಲಯ, ಕೆರೆ, ಭಾವಿ, ಶಾಲೆ ಮುಂತಾದವುಗಳನ್ನು ಮುಕ್ತದ್ವಾರವಾಗಿ ಮಾಡಬಹುದು. ಶರಣರ ಹಾಗೂ ಸತ್ಪುರುಷರು ಯಾವ ಜಾತಿಯವರಿದ್ದರೂ ಅವರ ವಚನ ತತ್ವಪದಗಳನ್ನು ನಿಷ್ಪಕ್ಷಪಾತ ಬುದ್ಧಿಯಿಂದ ಪ್ರಚಾರ ಮಾಡಬಹುದು. ಈ ರೀತಿಯಿಂದ ಜಾತಿಜಾತಿಗಳಲ್ಲಿರುವ ದ್ವೇಷವು ತಾನೇ ನಷ್ಟವಾಗಿ ಐಕ್ಯತೆಯು ನೆಲೆಗೊಳ್ಳುವದು.

ಒಂದು ಮತಕ್ಕೆ ಅನ್ಯಮತದಿಂದ ಅನ್ಯಾಯ, ದ್ವೇಷ, ಸ್ವಾರ್ಥದ ಮೂಲಕ ಅಪಾಯವಾಗುತ್ತಿದ್ದರೆ ಸರಕಾರವವರು ಕಾಯಿದೆಯಿಂದ ಅದನ್ನು ತಡೆಗಟ್ಟಬೇಕು ಮನುಷ್ಯನಿಗೆ ದೇವರು ಬೇಕು, ಭಕ್ತಿಬೇಕು, ನೀತಿಬೇಕು. ಆತನಐಹಿಕ ಪಾರಮಾರ್ಥಿಕ ಉನ್ನತಿಯಾಗಬೇಕು. ಅದರ ಸಲುವಾಗಿ ಆಯಾಯ ಜಾತಿಯವರು ಒಂದಿಲ್ಲೊಂದು ಮತಕ್ಕೆ ಸಂಬಂಧಿಸಿರುತ್ತಾರೆ. ಕಾರಣ ಆ ಮತಗಳನ್ನು ರಕ್ಷಣೆ ಮಾಡುವದೂ ಸರಕಾರದ ಕರ್ತವ್ಯವು. ಜಾತೀಯತೆಯನ್ನು ನಿರ್ಮೂಲಗೊಳಿಸುವ ಉಪಾಯಗಳನ್ನು ಪ್ರಚಾರಗೊಳಿಸಬೇಕೇವಿನಾ ಜಾತಿಗಳನ್ನೆಂದಿಗೂ ನಷ್ಟಗೊಳಿಸಬಾರದು. ಅದು ಶಕ್ಯವಿಲ್ಲ. ಹಾಗೆ ಮಾಡಹೋದರೆ ಮತ್ತಿಷ್ಟು ಅನಾಹುತಗಳಾಗುವವು.

---

## ಸುಖವೇತರಲ್ಲಿ ಇದೆ?

ಸುಖವೇತರಲ್ಲಿದೆಂಬ ವಿಷಯವನ್ನು ಜನರು ಎಷ್ಟು ವಿಚಾರ ಮಾಡುತ್ತಾರೋ ಅದರಷ್ಟು ಅವರು ಬೇರೆ ಯಾವ ವಿಷಯದ ಬಗ್ಗೆಯೂ ವಿಚಾರ ಮಾಡುವದಿಲ್ಲ. ಆದರೆ ನಿಜವಾದ ಕಲ್ಪನೆಯು ಅದರ ವಿಷಯವಾಗಿ ಇದ್ದುದು ಬಹು ಸ್ವಲ್ಪ ಜನರಿಗೆ ಮಾತ್ರ. ತಾನು ಸುಖಿಯಾಗಿರಬೇಕೆಂಬ ಬಯಕೆಯು ಪ್ರತಿಯೊಬ್ಬನಲ್ಲಿಯೂ ಉಂಟು. ಆದರೆ ಆ ಸುಖವೇತರಲ್ಲಿದೆಂಬುದು ಮಾತ್ರ ಸಾವಿರ ಜನರಲ್ಲಿ ಒಬ್ಬನಿಗಾದರೂ ಇರುವದು ಸಂದೇಹಾಸ್ಪದವಾದದ್ದು. ನಾವು ಸುಖಿಗಳಾಗಬೇಕೆಂದು ಹಂಬಲಿಸಿ ಅದನ್ನು ಪಡೆಯಲು ಕಣ್ಣು ಮುಚ್ಚಿಕೊಂಡು ರಭಸದಿಂದ ಮಾರ್ಗಕ್ರಮಣ ಮಾಡುತ್ತಿರುತ್ತೇವೆ. ಇದರಲ್ಲಿ ನಮ್ಮ ಮಾರ್ಗವು ತಪ್ಪಿದ್ದಿದ್ದರೆ ನಾವು ಆ ಸುಖವನ್ನು ಬಿಟ್ಟು ದೂರ ದೂರ ಹೋಗಿಬಿಡುತ್ತೇವೆ. ಆದ್ದರಿಂದ ನಾವು ಏತರ ಕಡೆಗೆ ಹೋಗುತ್ತಿದ್ದೇವೆಂಬುದನ್ನು ಕುರಿತು ಮೊದಲು ವಿಚಾರ ಮಾಡುವದು ಅವಶ್ಯವು. ಮತ್ತು ಹೀಗೆ ವಿಚಾರಮಾಡಿ ಅದರ ಹತ್ತಿರ ಹೋಗಲು ಯಾವ ದಾರಿಯು ಸಮೀಪವಾದುದೋ ಅದನ್ನು ಕಂಡುಹಿಡಿಯಬೇಕು. ನಮ್ಮ ಹಾದಿಯು ತಪ್ಪಿರದಿದ್ದರೆ, ನಾವು ಯಾವಾಗಲೂ ಸುಧಾರಿಸುತ್ತ ಹೋಗುವೆವು. ಆದರೆ ಸಾಮಾನ್ಯವಾಗಿ ಜನರು ಸುಖದ ಹಾದಿಯು ಆವುದೆಂಬುದನು ತಿಳಿದುಕೊಳ್ಳದೆ ಹೋಗುವದುಂಟು. ಜನರು ಹಿಡಿದ ಹಾದಿಯಲ್ಲಿಯೇ ನಾವು ಹೋದರೆ ಅಥವಾ ಅವರು ಹೇಳಿದತ್ತ ಹೋದರೆ, ನಾವು ತಪ್ಪು ಮಾರ್ಗವನ್ನು ಹಿಡಿದು ತೊಳಲಾಡುವದರಲ್ಲಿ ಸಂದೇಹವಿಲ್ಲ.

ಆದುದರಿಂದ ನಾವು ಸಂಸಾರವೆಂಬ ತೊಡಕಿನ ಪ್ರದೇಶದೊಳಗಿಂದ ಸುರಕ್ಷಿತವಾಗಿ ಹೋಗಬೇಕಾದರೆ, ನಮಗೆ ಒಬ್ಬ ಯೋಗ್ಯ ಮಾರ್ಗದರ್ಶಕನು ಯಾವಾಗಲೂ ಬೇಕು. ಈ ಪ್ರವಾಸವು ಬೇರೆ ಪ್ರವಾಸದಂತಲ್ಲ, ಒಂದು ಗ್ರಾಮಕ್ಕೆ ಹೋಗುವಲ್ಲಿ ಬಹುಜನರ ಹಾಯ್ದಾಟದಿಂದ ನಿಚ್ಚಳವಾದ ಒಂದು ಹಾದಿಯು ಅದಕ್ಕೆ ಬಿದ್ದಿರುತ್ತದೆ. ಅದನ್ನು

ಹಿಡಿದು ಹೋದರೆ ಹೋಗತಕ್ಕ ಆ ಊರನ್ನು ನಾವು ಮುಟ್ಟುತ್ತೇವೆ. ಒಂದುವೇಳೆ ಹಾದಿ ತಪ್ಪಿದಲ್ಲಿ ಸಮೀಪದಲ್ಲಿದ್ದವರು ನಮಗೆ ಯೋಗ್ಯ ಹಾದಿಯನ್ನು ತೋರಿಸಬಹುದು. ಆದರೆ ಸೌಖ್ಯವನ್ನು ಕಾಣುವ ಹಾದಿಯು ಮಾತ್ರ ಹೀಗೆ ಸ್ಪಷ್ಟವಾಗಿ ಮೂಡಿದ್ದಿರುವದಿಲ್ಲ. ಇಲ್ಲಿ ಬಹು ಜನರು ಹೋದ ಹಾದಿಯು ಗೊಂಡಾಂತರದ್ದಿರುತ್ತದೆ. ಮತ್ತು ಹಾದಿ ತಪ್ಪಿದಲ್ಲಿ ಜನರು ನಿಜವಾದ ಹಾದಿಯನ್ನು ಅವನಿಗೆ ತೋರಿಸುವದನ್ನು ಬಿಟ್ಟು ತಪ್ಪುಹಾದಿಯನ್ನು ತೋರಿಸುತ್ತಾರೆ. ಆದ್ದರಿಂದ ನಾವು ಕುರಿಗಳಂತೆ ಇಂಥವರು ತೋರಿಸಿದ ಹಾದಿಯಿಂದ ಹೋಗದೆ ಯಾವದು ವಿಚಾರಕ್ಕೆ ಸರಿಯಾದದ್ದೋ ಅದನ್ನೇ ಅನುಸರಿಸಬೇಕೇ ಹೊರ್ತು ಜನರು ಹೇಳುವ ಸ್ವೈರ ವಿಚಾರಗಳನ್ನು ನಾವು ಅನುಸರಿಸುತ್ತ ಅಂಧತೆಯಿಂದು ಹೋಗಕೂಡದು.

ಸಾಮಾನ್ಯವಾಗಿ ಸೈನಿಕರು ಯುದ್ಧದಲ್ಲಿ ಸೋತುಹೋಗಿ ಗಾಬರಿಗೊಂಡು ಹೇಗೆ ಅಸ್ತವ್ಯಸ್ತವಾಗಿ ಹಿಂದಿರುಗುತ್ತಾರೋ ಹಾಗೆ ಜನರ ಸಾಮಾನ್ಯವಾಗಿ ವರ್ತಿಸುತ್ತಾರೆ. ಅವರಲ್ಲೊಬ್ಬನು ಮೊದಲು ಮುಗ್ಗರಿಸಿ ಬೀಳುತ್ತಾನೆ. ಇನ್ನೊಬ್ಬನು ಅವನನ್ನೆಡಹಿ ಅವನ ಮೇಲೆ ಬೀಳುತ್ತಾನೆ. ಅವನ ಮೇಲೆ ಅವನ ಹಿಂದಿನವನು, ಹಾಗೆಯೇ ಅವನ ಹಿಂದಿನವನು ಹೀಗೆ ಒಬ್ಬರಮೇಲೊಬ್ಬರು ಬೀಳುತ್ತ ಒತ್ತಟ್ಟಿಗೆ ಎಲ್ಲರೂ ಬಿದ್ದು ತೊಳಲಾಡುತ್ತಾರೆ. ಹೀಗೆ ಒಬ್ಬರ ನಡೆಯನ್ನು ಇನ್ನೊಬ್ಬರು ನೋಡಿ ನಡೆದರೆ ಅವರೆಲ್ಲರೂ ಸಂಕಟಕ್ಕೆ ಗುರಿಯಾಗುತ್ತಾರೆ. ಆದುದರಿಂದ ತಿಳಿಗೇಡಿಗಳಾದ ಜನರಿಂದ ನಾವು ದೂರಿದ್ದರೆ ನಾವು ಕ್ಷೇಮವನ್ನು ಹೊಂದುವೆವು.

ಪ್ರಪಂಚದಲ್ಲಿ ಸೌಖ್ಯವೆಂಬುದು ಜನರ ಬಹುಮತದ ಮೇಲೆ ಅವಲಂಬಿಸಿರುವದಿಲ್ಲ. ಯಾಕಂದರೆ ಜಗತ್ತಿನಲ್ಲಿ ಯಾವದು ಅತ್ಯುತ್ತಮವೋ ಅದಕ್ಕೆ ಬಹುಜನ ಸಮಾಜವು ಒಲಿಯುವದಿಲ್ಲ. ಪ್ರಪಂಚದ ರೀತಿಯೇ ಹೀಗೆ ಇದೆ. ಬಹುಜನ ಸಮಾಜವು ಯಾವುದನ್ನು ಮೆಚ್ಚಿರುವದೋ ಅದು ಬಹುಶಃ ಕೆಡಕಿಗೆ ಒಯ್ಯುವಂಥದಿರುತ್ತದೆಂಬುದನ್ನು ನಾವು ನೋಡುತ್ತೇವೆ. ಯಾಕಂದರೆ ಬಹುಜನ ಸಮಾಜವು ವಿಚಾರದಿಂದ ಹೋಗದೆ ಅಂಧಶ್ರದ್ಧೆಯಿಂದ ಹೋಗುವದುಂಟು. ಇದು ಬಹು ಹಗುರಾದ ದಾರಿಯು. ಯಾವದು ರೂಢಿಯಂತಿರುವದೋ ಅದನ್ನೇ

ಎಲ್ಲರೂ ಅನುಸರಿಸುತ್ತಾರೆ. ಆ ರೂಢಿಯು ಹಿತವಾದುದೋ ಅಥವಾ ಅಹಿತವಾದುದೋ ಎಂಬುದನ್ನು ಯಾರೂ ಪರೀಕ್ಷಿಸುವದಿಲ್ಲ. ಸಾಮಾನ್ಯ ಜನರಲ್ಲಿ ಶ್ರೀಮಂತರೂ ಇರಬಹುದು ಮತ್ತು ಬಡವರೂ ಇರಬಹುದು. ಆದರೆ ಈ ತೆರದ ಬಾಹ್ಯಸ್ವರೂಪಿನಿಂದ ಜನರ ಅಂತರಂಗವನ್ನು ತಿಳಿಯಲು ಶಕ್ಯವಲ್ಲ ಅವರ ಬಾಹ್ಯವನ್ನು ನಂಬಿದರೆ ಅದು ತಪ್ಪುಹಾದಿಗೆ ಹಚ್ಚುತ್ತದೆ. ಆದರೆ ಯಾವನು ಶುದ್ಧಾಂತಃಕರಣಿಯಾಗಿರುತ್ತಾನೋ ಅವನು ಜನತೆಯಲ್ಲಿಯ ಶುದ್ಧಾಶುದ್ಧ ರೀತಿಯನ್ನು ತಿಳಿಯಲು ಸಮರ್ಥನಿರುತ್ತಾನೆ. ಬಹಿರಂಗದ ಸುಖಸಾಧನಗಳು ಮನುಷ್ಯನ ವಿಚಾರಗಳನ್ನು ಮುಸುಕಿಸಿ ಬಿಡುವದರಿಂದ ಇಂಥವುಗಳಿಗೆ ತಿಳಿದವನು ಮನಗೊಡದೆ ವಿಚಾರಕ್ಕೆ ಸಲ್ಲುವಂತಹದನ್ನೇ ಅವನು ಅನುಸರಿಸಿಹೋಗಬೇಕು.

## ನಿಜವಾದ ಸುಖವು ಎಲ್ಲಿದೆ?

ಮನೋವಿಕಾರಗಳಿಂದ ದೂರಾಗಿರುವದೋ ಸುಖವು. ಆದ್ದರಿಂದ ಮಾನವನು ತಾನು ದೇವರು ಮತ್ತು ತನ್ನ ಸಂಗಡಿಗರು ಇವರೊಡನೆ ಹೇಗಿರಬೇಕೆಂಬುದನ್ನು ಮೊದಲು ಅರಿತುಕೊಳ್ಳಬೇಕು. ಅನಿಶ್ಚಯಾತ್ಮಕವಾಗಿರುವ ಭವಿಷ್ಯತ್ಕಾಲದ ಮೇಲೆ ಅವನು ಅವಲಂಬಿಸದೆ ಈಗಿನದನ್ನು ಲಕ್ಷಿಸಿ ನಡೆಯಬೇಕು. ಮುಂದಿನದರ ಬಗ್ಗೆ ಆಶೆನಿರಾಶೆ ಮತ್ತು ಭಯಭೀತಿಯುಳ್ಳವನಾಗದೆ ಈಗಿದ್ದುದರಲ್ಲಿ ಅವನು ಸಮಾಧಾನಿಯಾಗಿರಬೇಕು. ಸಮಾಧಾನವೇ ಸುಖಕ್ಕೆ ಸಾಧನವು. ಯಾವನು ಸಮಾಧಾನಿಯಾಗಿರುತ್ತಾನೋ ಅವನಿಗೆ ಬೇಕಾದುದೇನೂ ಇರುವದಿಲ್ಲ ದೇವರು ಮನುಷ್ಯನಿಗೆ ಕೊಟ್ಟುದೆಲ್ಲವೂ ಅವನಲ್ಲಿಯೇ ಇರುತ್ತದೆ. ಅದು ಅವನ ಕಯ್ಯಲ್ಲಿಯೇ ಇದೆ ಆದರೆ ಸಾಮಾನ್ಯವಾಗಿ ಜನರು ಅದನ್ನು ನೋಡದೆ ಕಣ್ಣುಮುಚ್ಚಿ ನಡೆಯುತ್ತಾರೆ. ಹೇಗೆ ಕತ್ತಲಲ್ಲಿ ತಮಗೆ ಬೇಕಾದ ಪದಾರ್ಥಗಳನ್ನು ಹುಡುಕುತ್ತಿರುವಾಗ ಆ ಪದಾರ್ಥಗಳನ್ನು ಎಡವಿ ಅವುಗಳ ಮೇಲೆ ಬಿದ್ದರೂ ಕೂಡ ಅವುಗಳನ್ನು ಅವನು ಕಾಣಲಾರನೋ ಹಾಗೆಯೇ ಇವರ ದೃಷ್ಟಿಗೆ ಸುಖವು ತೋರಿದರೂ ಅದು ಅವರ ದೃಷ್ಟಿಗೆ ಬೀಳುವದಿಲ್ಲ.

ಸಮಾಧಾನ ಗುಣವು ಕೆಲವೊಂದು ವಿಶಿಷ್ಟತೆಯುಳ್ಳದ್ದು. ಸುಖವು ಉಂಟಾದರೂ ಅವನ ಮನಸ್ಸು ಅದರಲ್ಲಿ ಪರವಶತೆಯನ್ನು ಹೊಂದುವದಿಲ್ಲ. ಕಷ್ಟಗಳು ಬಂದರೂ ಅದು ದುಃಖದಿಂದ ವಿಹ್ವಲವಾಗುವದಿಲ್ಲ. ಹೀಗೆ ಸಮಾಧಾನ ಗುಣವಿದ್ದರೆ ಅದು ಮನುಷ್ಯನ ಪರಿಪೂರ್ಣಸ್ಥಿತಿಯು. ಕಷ್ಟದಲ್ಲಿದ್ದರೂ ಅವನ ಈ ಗುಣವು ಕ್ಷಿಣಿಸಿಯಾಗುವದಿಲ್ಲ. ಹೀಗೆ ನಡಿಯುವ ಮನುಷ್ಯನು ಉಚ್ಚಸ್ಥಿತಿಯನ್ನು ಹೊಂದುತ್ತಾನೆ. ಅವನು ಯಾವಾಗಲೂ ಸ್ವಾವಲಂಬಿಯು. ಹೆರವರ ಸಹಾಯವನ್ನು ಬಯಸನು. ಯಾವನು ಹೆರವರ ಸಹಾಯದಿಂದ ಏರಿರುತ್ತಾನೋ ಅವನಿಗೆ ಇಂಥ ಸಹಾಯವು ತಪ್ಪಿದಲ್ಲಿ ಅವನು ಕೂಡಲೇ ನೆಲಕ್ಕೆ ಬೀಳುತ್ತಾನೆ. ಆದ್ದರಿಂದ ಮನುಷ್ಯನು ಯೋಗ್ಯವಾವುದೆಂಬುದನ್ನು ಮೊದಲು ತಿಳಿದುಕೊಂಡು ಅದಕ್ಕೋಸ್ಕರ ಅವನು ನಿರಂತರ ಪ್ರಯತ್ನ ಮಾಡುತ್ತಹೋಗುತ್ತಾನೆ. ಹೀಗಿರುವವನು ಯಾವಾಗಲೂ ಸಮಾಧಾನದಿಂದಿರುತ್ತಾನೆ. ಅವನು ವಸ್ತುಗಳ ನಿಜಸ್ಥಿತಿಯನ್ನು ಅರಿತುಕೊಳ್ಳುತ್ತಾನೆ. ಅವನು ಮಾಡುವ ಕಾರ್ಯಗಳಲ್ಲಿ ಯಾವಾಗಲೂ ಸುವ್ಯವಸ್ಥೆಯು ಇರುತ್ತದೆ. ಅವನ ನಡೆಯಲ್ಲಿ ಕೆಲವೊಂದು ಕಟ್ಟು ಅಥವಾ ನಿಯಮವು ಇರುತ್ತದೆ. ಅವನು ಉದಾರಗುಣವುಳ್ಳವನು. ಅವನು ತನ್ನ ಜೀವಿತದಲ್ಲಿ ತಿಳಿವಳಿಕೆಯಿಂದ ನಡಿಯುತ್ತಾನೆ. ಇದರಿಂದ ಅವನು ಎಲ್ಲರಿಗೂ ಪ್ರಿಯ್ಯನಾಗುತ್ತಾನೆ. ಎಲ್ಲರೂ ಅವನನ್ನು ಆದರಿಸುತ್ತಾರೆ. ಅವನಲ್ಲಿ ಸದಸದ್ವಿಚಾರ ಬುದ್ಧಿಯು ಜಾಗ್ರತವಾಗಿರುತ್ತದೆ. ಅವನಲ್ಲಿ ಚಾಂಚಲ್ಯವೆಂಬುದು ಇರುವದಿಲ್ಲ. ಆದರೆ ಈ ಬಗೆಯ ಸಮಾಧಾನ ಗುಣವು ಯಾರಲ್ಲಿ ಇರುವದಿಲ್ಲವೋ ಅವರ ವೃತ್ತಿಯಲ್ಲಿ ಯಾವಾಗಲೂ ಬದಲಾವಣೆಯು ಆಗುತ್ತದೆ. ಸುತ್ತಲಿನ ಘಟನೆಗಳು ಆಕರ್ಷಕವಾಗಿ ತೋರಬಹುದು. ಅಥವಾ ಭೀತಿಯನ್ನುಂಟುಮಾಡುತ್ತಿರಬಹುದು. ಆದರೆ ಸಮಾಧಾನಿಯಾದ ಮನುಷ್ಯನು ಯಾವಾಗಲೂ ಶಾಂತನಾಗಿರುತ್ತಾನೆ. ಸಂತೋಷ ಕೊಡುವ ವಸ್ತುಗಳು ಅವನ ಸುತ್ತಲೂ ಇದ್ದರೂ ಅವು ಇಂದ್ರಿಯಗಳನ್ನು ವಿಕಾರಗೊಳಿಸುವದರಿಂದ ಅವುಗಳಿಗೆ ಅವನು ಮನಗೊಡನು. ಸಮಾಧಾನಗುಣವುಳ್ಳವನು ಇವುಗಳನ್ನು ತೊರೆದು ಯಾವ ವಸ್ತುವು ಆತ್ಮಕ್ಕೆ ಶಾಂತಿ ಮತ್ತು ಸ್ಥೈರ್ಯವನ್ನು ಕೊಡುತ್ತದೋ ಅದನ್ನೇ ಅವನು ಹಿಂಬಾಲಿಸುತ್ತ ನಿರಂತರವಾದ ಸುಖದಲ್ಲಿರುತ್ತಾನೆ. ಯಾವನ

ಮನಸ್ಸು ಶುದ್ಧವಾಗಿರುತ್ತದೋ ಅವನೇ ಸುಖಿಯು. ಅವನ ವೃತ್ತಿಯಲ್ಲಿ ಬದಲಾವಣೆಗಳಾಗುವದಿಲ್ಲ. ದೈವವು ಅವನಿಗೆ ಅನುಕೂಲತೆಗಳನ್ನು ಉಂಟುಮಾಡಿರಬಹುದು ಅಥವಾ ಮಾಡಿರಲಿಕ್ಕಿಲ್ಲ. ಆದರೆ ಅವನು ಅವುಗಳನ್ನು ಅವಲಂಬಿಸದೆ ತನ್ನ ಕಾರ್ಯದಲ್ಲಿದ್ದು ಸಮಾಧಾನಿಯಾಗಿರುತ್ತಾನೆ ಮನುಷ್ಯನು ದುಃಖಿಸಕೂಡದು. ಇತರರ ಕೂಡ ಜಗಳಾಡಲೂ ಬಾರದು. ಹಾಗೆಯೇ ಕೆಲಸ ಮಾಡದೆ ಸೋಮಾರಿಯಾಗಿರಬಾರದು. ಅಥವಾ ಭಯಗ್ರಸ್ತನಾಗಿಯೂ ಇರಕೂಡದು. ಭಯಗ್ರಸ್ತನಾದವನು ಬೇರವರನ್ನು ಆಶ್ರಯಿಸುತ್ತಾನೆ. ತಿಳಿವಳಿಕೆಯುಳ್ಳವನು ಹೀಗೆ ವರ್ತಿಸುವದರಿಂದ ಅವನು ಯಾವಾಗಲೂ ಸಮಾಧಾನದಲ್ಲಿರುತ್ತಾನೆ. ಮನುಷ್ಯನು ಆನಂದ ಮತ್ತು ದುಃಖ ಇವುಗಳ ವಶದಲ್ಲಿ ಇರಕೂಡದು. ಅವು ನಮಗೆ ಯೋಗ್ಯ ಯಜಮಾನರಲ್ಲ. ಅವುಗಳಲ್ಲಿ ಗಂಡಾಂತರವಿದೆ ಮತ್ತು ಅವು ನಮ್ಮನ್ನು ಕಷ್ಟಕ್ಕೆ ಗುರಿಮಾಡುತ್ತವೆಂಬದನ್ನು ನಾವು ತಿಳಿದು ಆಚರಿಸಬೇಕು.

ನ್ಯಾಯವಾದುದನ್ನು ಮಾಡಿದಲ್ಲಿ ನಮಗೆ ಆನಂದವಾಗುತ್ತದೆ. ಇದು ಸ್ವಾಭಾವಿಕವು. ಸರಿಯಾಗಿ ಮಾಡಿದ ಕಾರ್ಯಗಳ ಪರಿಣಾಮಗಳು ನಮಗೆ ಹಿತಮಾಡುವಂಥವುಗಳು. ಆದ್ದರಿಂದ ಇವುಗಳಿಂದಾಗುವ ಆನಂದವನ್ನು ನಾವು ನಿರಾಕರಿಸಬೇಕೆಂದು ನಾವು ಹೇಳುವದು ಯೋಗ್ಯವಾಗಲಾರದು. ಇಂಥ ಕಾರ್ಯಗಳನ್ನು ಮಾಡುವಲ್ಲಿ ಆನಂದವೆನಿಸಿದರೆ ಅದನ್ನು ನಾವು ತಿರಸ್ಕರಿಸಬಾರದು. ಈ ಆನಂದವು ಆತ್ಮನಲ್ಲಿ ಉಂಟಾದುದು. ಆದರೆ ಕೀಳು ಕಾರ್ಯಗಳಿಂದ ಆದ ಆನಂದವು ಹೀನತರವಾದುದು. ಅವುಗಳ ಸುಖಕರ ಪರಿಣಾಮಗಳು ಬಾಹ್ಯದಲ್ಲಿ ಮಾತ್ರ ತೋರುತ್ತವೆಯೇ ಹೊರ್ತು ಅವು ಹೃದಯ ಅಥವಾ ಅಂತರಾಳದಿಂದ ಉಂಟಾದವು ಅಲ್ಲ. ನಿಜವಾದ ಆನಂದದಲ್ಲಿ ಸಮಾಧಾನವೂ ಗಾಂಭೀರ್ಯವೂ ಇರುತ್ತವೆ. ಆನಂದದ ಸ್ಥಾನವು ಮನುಷ್ಯನ ಹೃದಯವು. ಧೈರ್ಯಶಾಲಿಯಾದವನು ನಿಷ್ಠೆಯುಳ್ಳವನು ಮತ್ತು ಸ್ಥಿರಪ್ರಜ್ಞನು. ಅವನು ವಿಷಯವಿಕಾರಗಳನ್ನು ನೆಲಕ್ಕೆ ಹಾಕಿ ತುಳಿದುಬಿಟ್ಟವನು. ಇಂಥವನು ಹೊಂದುವ ಆನಂದಕ್ಕೆ ಎಣೆಯೇ ಇಲ್ಲ.

ಸಮಾಧಾನವುಳ್ಳ ಮನುಷ್ಯನು ಸಾವಿಗೆ ಅಂಜುವದಿಲ್ಲ. ಅವನು ಸಾವನ್ನು ಸ್ವಾಗತಿಸುತ್ತಾನೆ. ಬಡತನ ಬಂದರೂ ಅವನು ಅದಕ್ಕೆ ಬಾಗಿಲು

ತೆರೆದು ಅದನ್ನು ಸ್ವಾಗತಿಸುತ್ತಾನೆ. ಅವನು ಎಂಥ ಸ್ಥಿತಿಯಲ್ಲಿದ್ದರೂ ವಿಷಯಕ್ಕೆ ಒಳಗಾಗುವದಿಲ್ಲ. ಇಂಥವನಲ್ಲಿ ಎಂದೆಂದಿಗೂ ಅಳಿಯದಂಥ ಆನಂದವನ್ನು ದೇವರು ಇಟ್ಟಿರುತ್ತಾನೆ.

ಅಜ್ಞಾನಿಗಳಾದವರ ಆನಂದಕ್ಕೆ ತಳಹದಿ ಎಂಬುದಿಲ್ಲ. ಅದು ಬಹು ತೇಲುವಾದದ್ದು. ಅದು ಕೇವಲ ಬಹಿರಂಗ ವಸ್ತುವು. ಆದರೆ ಜ್ಞಾನಿಗಳ ಆನಂದವು ಶಾಶ್ವತವಾದದ್ದು, ಸ್ಥಿರವಾದದ್ದು. ಶರೀರವೆಂಬುದು ಶಾಶ್ವತವಲ್ಲ. ಅದ್ದರಿಂದ ಅದಕ್ಕೆ ಸಂಬಂಧಿಸಿದ ಆನಂದಗಳು ಕೇವಲ ಕ್ಷಣಿಕವಾದವುಗಳು. ಆದರೆ ಯಾವನ ಸದಸದ್ವಿಚಾರ ಬುದ್ಧಿಯಲ್ಲಿ ಶಾಂತತೆಯು ನೆಲಿಸಿರುತ್ತದೋ, ಯಾವನ ವಿಚಾರಗಳಲ್ಲಿ ಕಾಪಟ್ಯವಿಲ್ಲವೋ, ಯಾವನ ವರ್ತನೆಯಲ್ಲಿ ಸದಾಚಾರವಿರುತ್ತದೋ ಅವನಲ್ಲಿರುವ ಆನಂದಕ್ಕೆ ಅಳತೆ ಎಂಬುದಿಲ್ಲ. ಅದು ಅವನಲ್ಲಿ ಶಾಶ್ವತವಾಗಿರುತ್ತದೆ. ಅದುವೇ ನಿಜವಾದ ಸುಖವು.

---

## ಆಧುನಿಕ ಧರ್ಮದ ರೀತಿ.

ಧರ್ಮದಲ್ಲಿಯ ಮೊದಲಿನ ಪದ್ಧತಿಗಳು ಈಗ ಲಯವಾಗುತ್ತ ನಡೆದಿರುತ್ತವೆ. ಇದು ಎಲ್ಲ ದೇಶಗಳಲ್ಲಿಯೂ ಕಂಡುಬರುತ್ತದೆ. ಇಂಗ್ಲಂಡ ಅಮೇರಿಕೆಗಳಲ್ಲಿ ಧರ್ಮದ ಮೊದಲಿನ ಸ್ವರೂಪು ಈಗ ಪೂರ್ಣವಾಗಿ ಅಳಿದುಹೋಗಿದೆ. ಚೀನದಲ್ಲಿ ಬದಲಾವಣೆ ಆಗಿದೆ. ಭಾರತದಲ್ಲಿಯೂ ಬದಲಾವಣೆಯಾಗುತ್ತ ನಡೆದದೆ. ಈಗ ಎಲ್ಲಕಡೆಗೂ ಹೊಸ ಧ್ಯೇಯಗಳೂ ಹೊಸ ನಂಬಿಗೆಗಳೂ ಹೊಸ ವಿಚಾರಗಳೂ ಉಂಟಾಗಹತ್ತಿವೆ. ಅವುಗಳಿಗೂ ಪುರಾತನ ಧಾರ್ಮಿಕ ಪದ್ಧತಿಗಳಿಗೂ ಮೇಳವಿಲ್ಲ. ಹಿಂದಿನ ಧರ್ಮವು ಬಹಿರಂಗದ ಆಚರಣೆಗಳಲ್ಲಿ ಮಾತ್ರ ಕೆಲಮಟ್ಟಿಗೆ ಈಗ ಉಳಿದಿರುತ್ತದೆ. ಅದ್ದರಿಂದ ಅದರ ಮೇಲೆ ಈಗಿನ ತರುಣರ ವಿಶ್ವಾಸವಿಲ್ಲ. ಮುದುಕರೂ ಕೂಡ ಇದೇ ಪ್ರವಾಹದಲ್ಲಿ ಬಿದ್ದಿರುತ್ತಾರೆ. ಇದರಿಂದ ಈ ಕಾಲದಲ್ಲಿ ಧರ್ಮದ ಪ್ರಭಾವವು ಜನತೆಯ ಅಭಿಪ್ರಾಯ ಮತ್ತು ನಡೆಯಲ್ಲಿ ಏನೂ ಕಾಣದಂತಾಗಿದೆ.

## ಧಾರ್ಮಿಕ ಅವನತಿಗೆ ಕಾರಣ.

ಧರ್ಮಗಳು ಹುಟ್ಟಿದಾಗ ಅವುಗಳಲ್ಲಿ ಪ್ರಸಾರದ ಗುಣವು ಇರುತ್ತದೆ. ಅವು ಕೆಲವೊಂದು ಸಾಮಾಜಿಕ ದೋಷವನ್ನು ಪರಿಹಾರಮಾಡಲು ಹಿಂದಿನಕಾಲದಲ್ಲಿ ಹುಟ್ಟಿದ್ದರಿಂದ ಅವು ಕೆಲವುಕಾಲ ಹಬ್ಬುತ್ತಹೋದವು. ಮುಂದೆ ಅವು ವಿಶಿಷ್ಟ ಸಮಾಜಗಳಾಗಿ ಪರಿಣಮಿಸಿದವು. ಹೀಗೆ ಅವು ಸಮಾಜಗಳಾದ ಕೂಡಲೆ ಅವುಗಳಲ್ಲಿ ಅಧಿಕಾರಿ ವರ್ಗಗಳು ಉತ್ಪನ್ನವಾದವು ಈ ವರ್ಗಗಳು ಧನ, ವೈಭವ, ಅಧಿಕಾರಗಳನ್ನು ಮಾತ್ರ ಹೊಂದಲು ಪ್ರಯತ್ನಿಸಹತ್ತಿದವು ಇಂಥ ಪ್ರಯತ್ನಗಳು ಆರಂಭವಾದ ಕೂಡಲೆ ಸಮಾಜಗಳಲ್ಲಿ ನೀತಿ, ನಡೆ, ಮತ್ತು ಧರ್ಮ ಇವು ಉಳಿಯಲಾರವು. ಅಧಿಕಾರದ ಮೂಲಕ ಧರ್ಮಾಧಿಕಾರಿಗಳು ಧರ್ಮರಹಿತರಾದರು. ದೇವಾಲಯಗಳು ಅಂಗಡಿಗಳಾಗಹತ್ತಿದವು. ಅಲ್ಲಿ ಧರ್ಮದ ಮಾರಾಟವು ನಡೆಯಹತ್ತಿತು. ಕ್ರಿಸ್ತರಲ್ಲಿ ಪೋಪರು, ಹಿಂದೂಗಳಲ್ಲಿ ಬ್ರಾಹ್ಮಣರು, ಲಿಂಗಾಯತರಲ್ಲಿ ಮಠಾಧಿಪತಿಗಳು, ಬೌದ್ಧರಲ್ಲಿ ಶ್ರವಣರು ಹೀಗೆ ಧರ್ಮದ ಮಾರಾಟವನ್ನು ಪ್ರಾರಂಭಿಸಿದರು. ಈ ಮಾರಾಟವು ಪ್ರಾರಂಭವಾದ ಕೂಡಲೆ ಆ ಧರ್ಮಗಳ ಪ್ರಭಾವವು ಜನರ ಮೇಲೆ ಎಷ್ಟುಮಾತ್ರವೂ ಉಳಿಯದೆ ಹೋಯಿತು.

ಶಿವಶರಣರ ತತ್ವಗಳು ಅಸ್ತಿತ್ವದಲ್ಲಿರುವವರೆಗೆ ವೀರಶೈವ ಧರ್ಮವು ಪ್ರಸಾರವಾಗುತ್ತ ನಡೆಯಿತು. ಮುಂದೆ ಈ ತತ್ವಗಳು ಮರೆತು ಹೋದವು. ಅವು ಮರೆತು ಹೋದಕೂಡಲೆ ಧರ್ಮದ ಹೆಸರಿನಿಂದ ಧರ್ಮಾಧಿಕಾರಿಗಳು ಅಜ್ಞಜನರಿಂದ ಹಣ ದೋಚಿಸುವ ಪ್ರಯತ್ನಗಳನ್ನು ಮಾಡಹತ್ತಿದರು. ಆಗ ಶಿವಶರಣರ ವಿಚಾರಗಳಿಗೆ ಬೆಲೆ ಉಳಿಯಲಿಲ್ಲ. ಹೀಗಾದ ಕೂಡಲೆ ವೀರಶೈವ ಧರ್ಮವು ಮಸುಳಿಸಿತು. ಅದು ಬೆಳೆಯುವದು ನಿಂತಿತು. ಶಿವಶರಣರ ತತ್ವಗಳು ಈಗ ಸಮಾಜದಲ್ಲಿ ಎಷ್ಟುಮಾತ್ರವೂ ಉಳಿದಿರುವದಿಲ್ಲ

## ಧರ್ಮದಲ್ಲಿ ಸ್ವತಂತ್ರ ವಿಚಾರ ಮಾಡುವ ಪ್ರವೃತ್ತಿ.

ಪೃಥ್ವಿಯಲ್ಲಿರುವ ಧರ್ಮಗಳೆಲ್ಲ ಬಹುಶಃ ಸ್ವಸಂರಕ್ಷಣೆ, ಅಂಜಿಕೆ, ಅಜ್ಞಾನ ಇವುಗಳ ಮೇಲೆ ಅವಲಂಬಿಸಿರುತ್ತವೆ. ಧರ್ಮಾಧಿಕಾರಿಗಳು ಜನತೆಯಲ್ಲಿಯ ಅಜ್ಞಾನ ಸ್ಥಿತಿಯನ್ನು ಉಪಯೋಗಿಸಿಕೊಂಡು ತಮ್ಮ

ಧಾರ್ಮಿಕ ವರ್ಚಸ್ಸನ್ನು ಬೆಳಸಿಕೊಂಡರು. ಆದರೆ ಇನ್ನುಮೇಲೆ ಈ ಸ್ಥಿತಿಯು ಉಳಿಯಲಾರದು. ಜನರು ಹೆಚ್ಚೆಚ್ಚು ತಿಳವಳಿಕೆಯುಳ್ಳವರಾಗುತ್ತ ನಡೆದಿದ್ದಾರೆ. ಅವರು ಬಾಲ್ಯಕರಂತೆ ಇರುವದಿಲ್ಲ. ಬಾಲಕರು ಅಂಜುವಂತೆ ಅವರು ಇನ್ನುಮೇಲೆ ಅಂಜಲಾರರು. ಅವರು ಸ್ವತಂತ್ರ ವಿಚಾರ ಮಾಡುವವರಾಗಿದ್ದಾರೆ.

ಧರ್ಮವು ಪುರಾತನಕಾಲದ್ದೆಂದು ಹೇಳಿದ ಮಾತ್ರಕ್ಕೆ ಅದು ಪವಿತ್ರವಾದುದೆಂದು ಮೊದಲು ನಂಬುತ್ತಿದ್ದಂತೆ ಇನ್ನುಮೇಲೆ ಯಾರೂ ನಂಬಲಾರರು. ವೇದಾಗಮ ಉಪನಿಷತ್ತಿನ ಸಂಸ್ಕೃತ ವಾಕ್ಯಗಳನ್ನು ಉದಹರಿಸಿದ ಮಾತ್ರಕ್ಕೆ ಅವುಗಳ ತತ್ವಗಳು ಸಿದ್ಧವಾದವೆಂದು ತಿಳಿಯುವ ಕಾಲವು ಹೋಯಿತು. ಈಗಿನದು ವಿಜ್ಞಾನದ ಯುಗವಾಗಿದೆ. ಪ್ರತಿಯೊಬ್ಬನು ವಿಚಾರ ಮಾಡಿ ನೋಡುತ್ತಾನೆ. ಆದ್ದರಿಂದ ವಿಚಾರಕ್ಕೆ ಸಮರ್ಪಕವೆಂದು ತೋರಿದರೆ ಮಾತ್ರ ಅವನು ಅದರಂತೆ ನಡಿಯುವವನು. ಇಲ್ಲದಿದ್ದರೆ ನಡಿಯುವದಿಲ್ಲ.

## ಅಂಧಶ್ರದ್ಧೆಯ ಲೋಪವು.

ಪುರಾತನವಾದುದೆಲ್ಲ ಸಾಧುವೆಂದು ತಿಳಿಯಕೂಡದೆಂದು ಮಹಾಕವಿಯಾದ ಕಾಳಿದಾಸನು ಸಹ ಹೇಳಿದ್ದಾನೆ. ಶಿವಶರಣರು ಹಾಗೆಯೇ ಹೇಳಿದ್ದಾರೆ. ಮಹಾದೇವಿಯಕ್ಕನು ಚಿಕ್ಕವಳಾದರೇನು, ಅವಳು ಸ್ತ್ರೀಯಳಾದರೇನು, ಅವಳ ಯೋಗ್ಯತೆಯು ಕಡಿಮೆಯೇ ಎಂದು ಶಿವಶರಣರು ತಮ್ಮ ವಚನಗಳಲ್ಲಿ ನುಡಿದಿದ್ದಾರೆ. ಎಲ್ಲಿ ಧರ್ಮ, ನೀತಿ, ನಡೆ ಇವೆಯೋ ಅವೆಲ್ಲವೂ ಶ್ರೇಷ್ಠವಾದುವೆಂದು ಅವರು ಹೇಳಿದ್ದಾರೆ. ಆಧುನಿಕರೂ ಹೀಗೆಯೇ ಹೇಳುತ್ತಿದ್ದಾರೆ. ಶಿವಶರಣರು ಅಂಧಶ್ರದ್ಧೆಯ ಮೇಲೆ ತಮ್ಮ ಧರ್ಮವನ್ನು ಸ್ಥಾಪಿಸಿಲ್ಲ. ಅವರು ಸದಸದ್ವಿಚಾರ, ತಿಳವಳಿಕೆ, ಶುದ್ಧನಡೆನುಡಿ, ಆಚಾರವಿಚಾರ ಇವುಗಳ ಮೇಲೆ ಸ್ಥಾಪಿಸಿದ್ದಾರೆ. ಇದು ಆಧುನಿಕರಿಗೆ ಸಮ್ಮತವಾಗುವ ಮಾರ್ಗವಾಗಿರುತ್ತದೆ.

## ಶಕ್ತಿಗಳ ಯೋಗ್ಯ ವಿಕಾಸವೇ ಧರ್ಮ.

ಶಿವಶರಣರು ಮನುಷ್ಯನಲ್ಲಿರುವ ಎಲ್ಲ ಶಕ್ತಿಗಳನ್ನು ವಿಕಾಸಗೊಳಿಸುವದೇ ಧರ್ಮವೆಂದು ಹೇಳಿದ್ದಾರೆ. ಈ ಶಕ್ತಿಗಳಲ್ಲಿ ಆದ ವಿಕಾಸಕ್ಕೆ ಅವರು ಲಿಂಗವೆಂದು ಕರೆದಿದ್ದಾರೆ. ಮನುಷ್ಯನ ಇಂದ್ರಿಯಗಳು,

ಅಂತಃಶಕ್ತಿಗಳು, ನಡೆನುಡಿಗಳು ಅಸಂಖ್ಯಾತವಿರುತ್ತವೆ. ಅವು ಸನ್ಮಾರ್ಗದಲ್ಲಿ ಚರಿಸಿದರೆ, ಅವು ಆಚಾರಲಿಂಗ, ಜಂಗಮಲಿಂಗ, ಕ್ರಿಯಾಲಿಂಗ, ಜ್ಞಾನಲಿಂಗ ಎಂದು ಮೊದಲಾಗಿ ಅವರು ಕರೆದರು. ಈ ಲಿಂಗಗಳು ಸ್ವಂತ ಜ್ಞಾನ ಮತ್ತು ನಡೆಯಿಂದಲೇ ಅವನಲ್ಲಿ ಉಂಟಾಗಿರಬೇಕು. ಅಂಧಶ್ರದ್ಧೆಯಿಂದ ಅವನಲ್ಲಿ ಅವು ಉಂಟಾಗಲಾರವು. ದೇವಾಲಯ ಕಟ್ಟಿದರೆ ಈ ನಡೆಗಳು ಅವನಲ್ಲಿ ಬರಲಾರವು. ಮುಂಜಾವಿನಿಂದ ಸಂಜೆಯ ವರೆಗೆ ಲಿಂಗಕ್ಕೆ ನೀರು ಹಣಿಸುತ್ತ ಕುಳಿತರೂ ಅವು ಬರಲಾರವು. ಲಿಂಗವು ಬರಿಯ ಉದಕದಲ್ಲಿ ನೆನೆವನೇ ಎಂದು ಬಸವೇಶ್ವರನು ತನ್ನ ಒಂದು ವಚನದಲ್ಲಿ ಹೇಳಿದ್ದಾನೆ.

## ಕಾಯಕವೇ ಧರ್ಮವು.

ಅನೇಕರು ಧರ್ಮವನ್ನು ತಮ್ಮ ಹೊಟ್ಟೆ ಹೊರೆದುಕೊಳ್ಳುವ ಉದ್ಯೋಗವನ್ನಾಗಿ ಮಾಡಿಕೊಂಡಿದ್ದಾರೆ. ದುಡಿಯಲಾರದ್ದಕ್ಕೆ ಅವರಿಗೆ ಧರ್ಮವು ಒಂದು ಉದ್ಯೋಗವಾಗಿದೆ. ಒಬ್ಬ ವಚನಕಾರನು ಜನರು ದುಡಿಯಲಿಕ್ಕೆ ಒಲ್ಲದೆ ಹಸಿದಿರುವರು, ಲಂಗೋಟಿಯನ್ನು ಗಳಿಸಲಾರದೆ ಭಿಕ್ಷೆ ಬೇಡುವರು ಎಂದು ಇಂಥವರನ್ನು ಹೀಯಾಳಿಸಿದ್ದಾನೆ ತಾನು ದುಡಿದರೆ ತನಗುಂಟು, ತನ್ನ ಪ್ರಮಥರಿಗುಂಟು ಎಂದು ಬಸವೇಶ್ವರನು ತನ್ನ ವಚನದಲ್ಲಿ ಹೇಳಿದ್ದಾನೆ. ಆಧುನಿಕರಿಗೆ ಇವು ಒಗ್ಗುವ ಮಾತುಗಳಾಗಿವೆ. ಈಗ ಧರ್ಮದ ವಿಷಯವಾಗಿ ಹೊಸ ವಿಚಾರಗಳು ಸಮಾಜದಲ್ಲಿ ಉಂಟಾಗಹತ್ತಿವೆ. ಇವುಗಳ ಪ್ರಕಾರ ಮನುಷ್ಯನು ಜನರಲ್ಲಿ ಬೆರೆತಿರಬೇಕು, ಬೆರೆತುಕೊಂಡು ಅವರ ಕೂಡ ದುಡಿಯಬೇಕು, ಆದರೆ ಅವರನ್ನು ನೋಡುತ್ತ ತಟಸ್ಥ ಕುಳ್ಳಿರಬಾರದು. ಇಂಥವನೇ ಧರ್ಮಿಷ್ಠನೆಂದು ತಿಳಿಯಹತ್ತಿದ್ದಾರೆ. ಶಿವಶರಣರ ಕಾಯಕದ ವಿಚಾರಗಳೇ ಇವಾಗಿರುತ್ತವೆ. ಧರ್ಮಿಷ್ಠರೆಂದು ಹೇಳಿಸಿಕೊಳ್ಳಲು ಎಲ್ಲರೂ ಸೋಮಾರಿಗಳಾಗಿ ಭಿಕ್ಷ ಬೇಡುತ್ತ ಇದ್ದರೆ ಜಗತ್ತು ನಡೆಯುವ ಬಗೆಹೇಗೆ?

## ಏಕಾಂತದಲ್ಲಿ ತಪಸ್ಸನ್ನಾಚರಿಸುವದು ಧರ್ಮವಲ್ಲ.

ಮೊದಲಿನ ಕಾಲದ ಸಾಧುಗಳೂ ಸಂತರೂ ಇನ್ನುಮುಂದೆ ಉಳಿಯಲಾರರು. ಅವರು ಪೂರ್ವಕಾಲದಲ್ಲಿ ಜಗತ್ತನ್ನು ಬಿಟ್ಟು ಒಂದು ಅರಣ್ಯಪ್ರದೇಶವನ್ನು ಹುಡಿಕಿಕೊಂಡು ಏಕಾಂತವಾಸಿಗಳಾದರು. ಅವರು

ದೇವರ ಧ್ಯಾನ ಮಾಡುವದರಲ್ಲಿಯೇ ಕಾಲಕಳೆದರು. ಜನರಾದರೂ ಅವರನ್ನು ತಪಸ್ವಿಗಳೆಂದು ಹೇಗಳಿದರು ಆದರೆ ಇನ್ನುಮುಂದೆ ಆತ್ಮ ಸುಧಾರಣೆ ಮಾಡಿಕೊಳ್ಳುವದೇ ಧಾರ್ಮಿಕ ನಡೆಯೆಂದು ತಿಳಿಯುವ ಕಾಲವು ಬಂದಿದೆ. ಆತ್ಮಸುಧಾರಣೆ ಎಂದರೆ ನಡೆನುಡಿ ಶುದ್ಧವಾಗಿರುವದು, ಹೆರವರನ್ನು ತನ್ನಂತೆ ಭಾವಿಸುವದು, ಹಿಂಸಾತ್ಮಕ ಮಾರ್ಗವನ್ನು ತ್ಯಜಿಸುವದು. ದಾನಧರ್ಮ ಮಾಡುವದು, ದಯೆಯಿಂದಿರುವದು ಇವೇ ಮೊದಲಾದವುಗಳು ಇರುತ್ತವೆ

ಸಿದ್ಧರಾಮೇಶ್ವರನು ಶಿವಶರಣರಲ್ಲಿ ಬಹು ಪ್ರಸಿದ್ಧನು. ಅವನು ಯೋಗಮಾರ್ಗವನ್ನು ಚನ್ನಾಗಿ ಬಲ್ಲವನು. ಆದರೆ ಅವನು ಹೇಳುವದೇನಂದರೆ:— "ತಪವ ಮಾಡಿ ಸ್ವರ್ಗವ ಪಡೆದಿಹೆನೆಂಬವರ ಮುಖವ ನೋಡಲಾಗದು.......ಲಿಂಗದ ಕುರುಹ ತಿಳಿದು ಅಂಗಗುಣಗಳ ನತಿಗಳೆದು ಲಿಂಗವಾದುದೇ ಸ್ವರ್ಗ......"ವೆಂತಲೂ "ಕೈಲಾಸ ಕೈಲಾಸವೆಂದು ಬಡಿದಾಡುವ ಅಣ್ಣಗಳಿರಾ, ಕೇಳಿರಯ್ಯ. ಕೈಲಾಸವೆಂಬುದೊಂದು ಭೂಮಿಯೊಳಿರುವ ಹಾಳು ಬೆಟ್ಟ. ಅಲ್ಲಿರುವ ಮುನಿಗಳೆಲ್ಲ ಜೀವಗಳ್ಳರು. ......ಎಮ್ಮ ಪುರಾತನರಿಗೆ ಸದಾಚಾರದಿಂದ ವರ್ತಿಸಿ ಲಿಂಗಾಂಗ ಸಮ್ಮರಸವ ತಿಳಿದು ನಿಮ್ಮ ಪಾದಪದ್ಮದೊಳು ಬಯಲಾದ ಪದವಿಯೇ ಕೈಲಾಸ......"ವೆಂತಲೂ ಹೇಳಿದ್ದಾನೆ. ಅವನು ಸದಾಚಾರದಿಂದಿರುವದೇ ಉನ್ನತಿಯ ಮಾರ್ಗವೆಂದು ಹೇಳಿದ್ದಾನೆ. ಶಿವಶರಣರ ಈ ವಿಚಾರಗಳು ಆಧುನಿಕರು ಒಪ್ಪುವಂತಹವಾಗಿವೆ.

### ದೇವರು ಮನುಷ್ಯನಲ್ಲ. ಅವನು ಒಂದು ಅದ್ಭುತಶಕ್ತಿ.

ದೇವರು ಮನುಷ್ಯಾಕೃತಿಯುಳ್ಳ ಒಂದು ವಸ್ತುವೆಂದು ಮೊದಲು ತಿಳಿಯುತ್ತಿದ್ದಂತೆ ಇನ್ನು ಮುಂದೆ ಯಾರೂ ತಿಳಿಯಲಾರರು. ಕ್ರಿಸ್ತಿಯನ್ನರೂ ಮಹಮ್ಮದೀಯರೂ ಈಗಲೂ ಹಾಗೆಯೇ ತಿಳಿದಿದ್ದಾರೆ. ಆದರೆ ಈಗ ದೇವರೆಂದರೆ ಇಡೀ ಜಗತ್ತು. ಅವನಿಗೆ ಆದಿಯೂ ಇಲ್ಲ, ಅಂತ್ಯವೂ ಇಲ್ಲ, ಅವನನ್ನು ಲೌಕಿಕರು ತಿಳಿಯುವದು ಶಕ್ಯವಿಲ್ಲ, ಅಜ್ಞೇಯನು, ಅವನೊಂದು ಮಹಾಶಕ್ತಿಯು ಎಂಬ ವಿಚಾರಗಳು ತಿಳಿದವರಲ್ಲಿ ಉಂಟಾಗಹತ್ತಿರುತ್ತವೆ- ಈಗಿನ ವಿಜ್ಞಾನವೂ ಕೂಡ ಈ ವಿಚಾರಗಳನ್ನು ಸಮರ್ಥಿಸಹತ್ತಿದೆ. ಶಿವಶರಣರ ವಿಚಾರಗಳಾದರೂ ಹೀಗೆಯೇ

ಇವೆ. ಪರಮಾತ್ಮನಿಗೆ ಮನುಷ್ಯನಂತೆ ಕೈಕಾಲು ಕಣ್ಣು ಇವೆ ಎಂದು ಅವರು ಎಂದೂ ನಂಬಿರುವದಿಲ್ಲ. ಅವರು "ಎಲ್ಲಿಲ್ಲಿ ನೋಡಿದಡಲ್ಲಿ ನೀನೇ ದೇವಾ" ಎಂತಲೂ "ಅಣುವಿಂಗೆ ಅಣು, ಮಹತ್ತಿಂಗೆ ಮಹತ್ತು" ಎಂತಲೂ "ಮನಕ್ಕಗಮ್ಯ ಅಗೋಚರವಾಗಿ ಅಲ್ಲಲ್ಲಿ ಎಲ್ಲಿಯೂ ನೀನೇ ಇಪ್ಪೆ"ಯಯ್ಯಾ ಎಂತಲೂ ದೇವರನ್ನು ವರ್ಣಿಸಿರುತ್ತಾರೆ. ಬಸವೇಶ್ವರನು "ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ" ಎಂದು ದೇವರನ್ನು ಸ್ತುತಿಸುತ್ತಾನೆ. ಪರಮಾತ್ಮನು ಸರ್ವಚೈತನ್ಯಮಯನು, ಸರ್ವವ್ಯಾಪಕನು, ಚಿತ್‌ಪ್ರಕಾಶನು, ಚಿದ್ರೂಪನು ಎಂದು ವಚನಕಾರರು ಅವನ ಸ್ವರೂಪವನ್ನು ವರ್ಣಿಸಿರುತ್ತಾರೆ. ಈಗಿನ ವಿಜ್ಞಾನಿಗಳೂ ಕೂಡ ಈ ತತ್ವಕ್ಕೆ ಬರಹತ್ತಿರುತ್ತಾರೆ.

## ದೇವರಿಗೆ ಪ್ರಪಂಚುವೆಂಬುದಿಲ್ಲ.

ಇನ್ನುಮೇಲೆ ಸುಶಿಕ್ಷಿತರು ಶಿವನಿಗೆ ಪಂಚಮುಖಗಳಿವೆ, ಅವನಿಗೆ ಹೆಂಡಿರು ಮಕ್ಕಳಿದ್ದಾರೆ, ಅವನು ಪ್ರಪಂಚಮಾಡುತ್ತಾನೆ, ವಿಷ್ಣುವಿಗೆ ಲಕ್ಷ್ಮೀ ಎಂಬ ಹೆಂಡತಿ ಇದ್ದಾಳೆ, ಅವನಿಗೂ ಮಕ್ಕಳಿವೆ, ಎಂದು ಹೇಳುತ್ತ ಅನೇಕ ಬಗೆಯ ವಿಗ್ರಹಗಳನ್ನು ಮಾಡಿ ಭಜಿಸಿರಿ ಎಂದು ಹೇಳಿದರೆ ನಂಬದಂಥ ಪರಿಸ್ಥಿತಿಯು ಈಗ ಉಂಟಾಗಿರುತ್ತದೆ.

## ಮಾನವೀ ಪ್ರಾಣಿಯ ಉನ್ನತಿಯೇ ಧರ್ಮವು.

ನಾವು ಜನರ ಕೂಡ ಸರಿಯಾಗಿ ನಡೆದರೆ ಅದು "ಉತ್ತಮತನ"ವೆಂದು ಎಲ್ಲರೂ ಹೇಳಹತ್ತಿರುತ್ತಾರೆ. ಜಗತ್ತಿನಲ್ಲಿ ಒಂದು ಶ್ರೇಷ್ಠ ಮತ್ತು ಉದಾತ್ತ ಶಕ್ತಿಯು ಇದ್ದು, ಅದರ ಅಂಶವನ್ನು ನಮ್ಮಲ್ಲಿ ಉಂಟು ಮಾಡಿಕೊಳ್ಳಬೇಕು, ಇದೇ ಮೋಕ್ಷದ ಹಾದಿಯು, ನಮ್ಮ ಮಾನಸಿಕ ಮತ್ತು ಬೌದ್ಧಿಕ ಶಕ್ತಿಗಳನ್ನು ಬೆಳಸಬೇಕು, ಇದೇ ಆತ್ಮಸುಧಾರಣೆ, ಎಂದು ತಿಳಿಯುವ ಕಾಲವು ಒಂದಿರುತ್ತದೆ. ಈ ಪ್ರಕಾರ ಒಂದು ಹೊಸ ತರದ ಸಾಮಾಜಿಕ ಶಾಸ್ತ್ರವು ಉಂಟಾಗಹತ್ತಿದೆ. ಇನ್ನುಮೇಲೆ ತಮ್ಮ ಸ್ವಕ್ಕೆ ತಾವಿರದೆ ತಮ್ಮ ಸಂಬಂಧವಿದ್ದವರೊಡನೆ ಪ್ರೇಮದಿಂದ ವರ್ತಿಸುತ್ತ ಎಲ್ಲರನ್ನು ಶ್ರೇಷ್ಠ ಮಾರ್ಗಕ್ಕೆ ಒಯ್ಯುವದೇ ಈ ಹೊಸ ಶಾಸ್ತ್ರದ ಉದ್ದೇಶವಾಗಿದೆ. ಮಾನವೀಪ್ರಾಣಿಯ ಉನ್ನತಿಯನ್ನು ಮಾಡುವದೇ ಧರ್ಮವು, ಎಂದು ಎಲ್ಲರೂ ತಿಳಿಯಹತ್ತಿದ್ದಾರೆ. ಮನುಷ್ಯರಲ್ಲಿ ಪರಸ್ಪರ

ಭೇದವಿಲ್ಲ, ಅವರು ಒಂದೇಯಾಗಿದ್ದಾರೆ, ಅವರು ಸ್ವಾರ್ಥಿಗಳಾಗಿರಕೂಡದು, ಒಟ್ಟು ಜನಾಂಗಕ್ಕೆ ಎಲ್ಲರೂ ಸಹಾಯಕಾರಿಗಳಾಗಿಯೇ ವರ್ತಿಸಬೇಕು, ಹೀಗೆ ನಡಿಯುವದೇ ಶ್ರೇಷ್ಠ ಧರ್ಮ ಎಂದು ತಿಳಿಯುವ ಕಾಲವು ಇದಾಗಿದೆ.

## ಲಿಂಗಧಾರಣೆಯಲ್ಲಿ ಜಾತಿಭೇದವಿಲ್ಲ.

ಶಿವಶರಣರು ಈ ತತ್ವವನ್ನು ಎಂದೋ ಕಂಡುಹಿಡಿದು ಹಾಗೆ ಆಚರಿಸಿದ್ದಾರೆ. ಅವರು ಮಾನವೀ ಪ್ರಾಣಿಯಲ್ಲಿ ಭೇದವೆಣಿಸಿಲ್ಲ. ಅವರು ಸದಾಚಾರಕ್ಕೆ ಮಹತ್ವ ಕೊಟ್ಟಿದ್ದಾರೆ. ಸದಾಚಾರವು ಲಿಂಗವಿದ್ದುದರ ಪರಿಣಾಮವೆಂದು ಅವರು ಹೇಳಿದ್ದಾರೆ. ಅದುದರಿಂದ ಸದಾಚಾರಿಗಳು ಯಾರಿರುವರೋ ಅವರಿಗೆಲ್ಲ ಅವರು ಲಿಂಗಧಾರಣೆ ಮಾಡಿದ್ದಾರೆ. ಹೀಗೆ ಲಿಂಗಧಾರಣೆ ಮಾಡಿದ ಕೂಡಲೆ ಅವರಲ್ಲಿ ಜಾತಿ, ವರ್ಣ, ಕುಲ, ಗೋತ್ರ ಎಂಬ ಭೇದಭಾವವನ್ನು ಅವರು ಎಣಿಸಿಲ್ಲ. ಸ್ತ್ರೀಪುರುಷ ಭೇದ, ಸ್ಪೃಶ್ಯಾಸ್ಪೃಶ್ಯ ಭೇದ ಈ ಮೊದಲಾದ ಭೇದಗಳನ್ನು ಅವರು ಬಿಟ್ಟುಕೊಟ್ಟಿರುವರು. ಎಲ್ಲರೂ ಸಮಾನರೆಂದು ಅವರು ಘಂಟಾಘೋಷವಾಗಿ ಹೇಳಿದ್ದಾರೆ.

## ಜನಹಿತವೇ ನಿಜವಾದ ಧರ್ಮ.

ಈ ಕಾಲದಲ್ಲಿ ನಾವು ಚಿರಂಜೀವಿಗಳಾಗಿರಬೇಕು, ದೇವರ ಸನ್ನಿಧಿಯಲ್ಲಿ ಯಾವಾಗಲೂ ಇರಬೇಕು, ಎಂಬ ಧ್ಯೇಯಗಳು ಹೊರಟುಹೋಗಹತ್ತಿವೆ. ವೈಕುಂಠದಲ್ಲಿಯೋ, ಕೈಲಾಸದಲ್ಲಿಯೋ, ಅಥವಾ ಸ್ವರ್ಗದಲ್ಲಿಯೋ ನಾವು ಇದ್ದುಕೊಂಡು ಒಂದುಬಗೆಯ ಸುಖಪಡೆಯಬೇಕು ಎಂದು ನಮ್ಮ ಪೂರ್ವಜರು ಅಪೇಕ್ಷೆಪಡುತ್ತಿದ್ದರು. ಕ್ರಿಸ್ತರೂ ಮಹಮ್ಮದೀಯರೂ ಸ್ವರ್ಗಸುಖವನ್ನು ಹೊಂದಬೇಕೆಂಬ ಧ್ಯೇಯವನ್ನು ಇಟ್ಟುಕೊಂಡಿದ್ದಾರೆ. ಈ ಧ್ಯೇಯಗಳು ಈಗ ಹೊರಟುಹೋಗಹತ್ತಿವೆ. ಆದರೆ ನಾವು ನಮ್ಮ ಶಕ್ತಿಗಳನ್ನು ಬೆಳಸಿಕೊಂಡು ಅವುಗಳಿಂದ ಎಲ್ಲರಿಗೂ ಹಿತಮಾಡಬೇಕು, ಎಂಬ ವಿಚಾರಗಳು ಹೆಚ್ಚೆಚ್ಚು ದೃಢವಾಗಹತ್ತಿವೆ. ಇದೇ ನಿಜವಾದ ಧರ್ಮವೆಂದು ಎಲ್ಲರೂ ತಿಳಿಯಹತ್ತಿದ್ದಾರೆ. ಇದು ಶಿವಶರಣರ ಮಾರ್ಗವಾಗಿದೆ. ಬಸವೇಶ್ವರನು— "ದೇವಲೋಕ

ಮರ್ತ್ಯಲೋಕವೆಂಬುವು ಬೇರಿಲ್ಲ ಕಾಣಿರೋ. ಸತ್ಯವ ನುಡಿವುದೇ ದೇವಲೋಕ, ಅಸತ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ, ಅನಾಚಾರವೇ ನರಕವೆಂತಲೂ ಇನ್ನೊಬ್ಬ ವಚನಕಾರನು ಈ ಲೋಕದಲ್ಲಿಯೇ, ಅನಂತಲೋಕಗಳಿವೆ ಎಂತಲೂ ಹೇಳಿದ್ದಾರೆ.

ಯಾವ ವಸ್ತುವು ಉತ್ತಮವಾದುದೋ ಅದಕ್ಕೆ ನಾಶವೆಂಬುದಿಲ್ಲ. ಅದು ಎಲ್ಲಿಯಾದರೂ ಉಳಿಯಲೇಬೇಕು. ಅದು ಒಂದುವೇಳೆ ಈಗ ದೃಶ್ಯವಾಗಿರದಿದ್ದರೆ ಅದು ಕೆಲವೊಂದು ಕಾಲದಲ್ಲಿ ಹೊರಹೊರಡಲೇಬೇಕು. ಸಾಧುಸತ್ಪುರುಷರ ಮತ್ತು ಧರ್ಮಸ್ಥಾಪಕರ ವಿಚಾರಗಳು ಮೊದಲು ಕಹಿಯಾಗಿ ತೋರುತ್ತವೆ. ಅದ್ದರಿಂದ ಜನರು ಅವರನ್ನು ಹಿಂಸಿಸಿದರು. ಆದರೆ ಮುಂದೆ ಅವರ ಶ್ರೇಷ್ಠ ವಿಚಾರಗಳು ಪ್ರಕಟವಾಗಹತ್ತಲು ಅವರ ಸ್ಮರಣೆಯೂ ಸಮಾಜದಲ್ಲಿ ಯಾವಾಗಲೂ ಉಳಿದಿದೆ. ಈ ದೃಷ್ಟಿಯಿಂದ ಅವರೇ ಚಿರಕಾಲ ಬಾಳುವಂಥವರು ಕೈಲಾಸವಾಸಿಗಳು, ಅಮರರು, ಎಂದು ಏಕೆ ಹೇಳಬಾರದು.

## ಜಗತ್ತು ಮಾಯೆಯಲ್ಲ.

ಜಗತ್ತು ಪರಮಾತ್ಮನ ಒಂದು ಲೀಲೆ ಎಂದು ಶಿವಶರಣರ ಉಕ್ತಿಗಳು ಇವೆ. ಇದಕ್ಕೆ ಮೂಲಚಿತ್ತು ಎಂಬ ವಿಶಿಷ್ಟ ಹೆಸರಿದೆ. ಇದರ ಮೂಲಕ ಜಗತ್ತಿನಲ್ಲಿ ನಾನಾ ವಿಧ ಅಸಂಖ್ಯ ಶಕ್ತಿಗಳುಂಟಾಗುತ್ತವೆ. ಅವು ಅನೇಕ ವಸ್ತುಗಳಲ್ಲಿ ಮತ್ತು ಜೀವಜಂತುಗಳಲ್ಲಿ ಸೇರಿ ವಿಧವಿಧವಾಗಿ ವ್ಯವಹರಿಸುತ್ತವೆ. ಈ ವ್ಯವಹರಣೆಯಲ್ಲಿಯೇ ಇವುಗಳ ಉನ್ನತಿಯು ಇರುತ್ತದೆ. ಪದಾರ್ಥಗಳಲ್ಲಿ ಹುದುಗಿರುವ ಶಕ್ತಿಗಳು ಅವುಗಳಲ್ಲಿಯ ಕ್ರಿಯೆಗಳಿಂದಲೇ ವಿಕಾಸ ಹೊಂದುತ್ತ ಹೋಗುತ್ತವೆ. ಹಿಂದೂ ಧರ್ಮದಲ್ಲಿ ಕೆಲವು ತತ್ವಜ್ಞಾನಿಗಳು ಜಗತ್ತು ಎಂಬುದಕ್ಕೆ ಅಸ್ತಿತ್ವವಿಲ್ಲ, ಅದು ಮಾಯೆ, ಅಂದರೆ ತೋರಿಕೆ ಮಾತ್ರ ಎಂದು ಭಾವಿಸಿರುತ್ತಾರೆ. ಆದರೆ ಶಿವಶರಣರು ಹೀಗೆ ಭಾವಿಸುವದಿಲ್ಲ. ಆದ್ದರಿಂದ ಮನುಷ್ಯನು ಪ್ರಪಂಚ ಅಥವಾ ಜಗತ್ತಿನಲ್ಲಿದ್ದುಕೊಂಡು ತನ್ನ ಕಾರ್ಯಗಳನ್ನು ಮಾಡಲೇಬೇಕು. ಹೀಗೆ ಮಾಡುವದರಿಂದಲೇ ಅವನ ಶಕ್ತಿಗಳು ವಿಕಾಸ ಹೊಂದುತ್ತ ಹೋಗುತ್ತವೆ. ವಿಕಾಸವು ಅವನಲ್ಲಿ ಲಿಂಗವು ಉಂಟಾದದ್ದರ ಪರಿಣಾಮ

ವಾಗಿದೆ. ಹೀಗೆ ಲಿಂಗ ಗುಣಗಳನ್ನು ತನ್ನಲ್ಲಿ ಅವನು ಬೆಳಸಿಕೊಳ್ಳುತ್ತ ಕಡೆಗೆ ಲಿಂಗವಾಗಿಯೇ ಹೋಗಬೇಕು. ಇವು ಶಿವಶರಣರ ಶಿವಾನುಭವದ ತತ್ವಗಳವೆ.

ಆದ್ದರಿಂದ ಶಿವಶರಣರು ನಿಷ್ಕ್ರಿಯೆಯನ್ನು ಹೀಯಾಳಿಸುತ್ತಾರೆ. ಮನುಷ್ಯನು ಜಗತ್ತಿನಲ್ಲಿ ನಡೆದಿರುವ ಕಾರ್ಯಗಳನ್ನು ನೋಡಿ ಅವನು ಉಪೇಕ್ಷೆ ಬುದ್ಧಿಯಿಂದ ಎಂದೂ ಇರಕೂಡದು. ಅವುಗಳಲ್ಲಿ ಅವನು ಅಂಗವಹಿಸಿ ಅವುಗಳನ್ನು ಉನ್ನತಸ್ಥಿತಿಗೆ ತರಲು ಪ್ರಯತ್ನಿಸಲೇಬೇಕು. ಹಿಂದಿನ ಕಾಲದ ಸಾಧುಗಳು ಹೀಗೆ ಮಾಡದೆ ಪ್ರಪಂಚಕ್ಕೆ ತಿರಸ್ಕರ ಹೇಯ ಬುದ್ಧಿಯನ್ನು ತಾಳಿ ಅದನ್ನು ನಿಂದಿಸುವದರಲ್ಲಿ ತೊಡಗಿದರು. ಪ್ರಪಂಚವು ಎಂದರೆ ಮಾಯೆ, ಸ್ತ್ರೀಯಳು ಎಂದರೆ ರಾಕ್ಷಸಿಯು, ಎಂದು ಹೇಳುತ್ತ ಜನತೆಯನ್ನು ಸುಧಾರಿಸುವ ಮಾರ್ಗವನ್ನು ತೋರೆದರು ಆದರೆ ಶಿವಶರಣರು ಹೀಗೆ ಎಂದೂ ಆಚರಿಸಿಲ್ಲ. ಅವರು 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರೆ'ಂದು ಜಗತ್ತಿನ ಮಹತ್ವವನ್ನು ತಿಳಿಸಿ ಹೇಳಿದ್ದಾರೆ. ಜನತೆಯ ಸುಧಾರಣೆಯ ಮಾರ್ಗವನ್ನು ಅವರು ತೋರಿಸಿದ್ದಾರೆ. ಶಿವಶರಣರ ಈ ವಿಚಾರಗಳು ಆಧುನಿಕರಿಗೆ ಮಾರ್ಗದರ್ಶಿಯಾಗಿವೆ.

## ಧರ್ಮವು ವೈಯ್ಯಕ್ತಿಕವಾಗಹತ್ತಿದೆ.

ಈ ಕಾಲದಲ್ಲಿ ಸಾಮುಹಿಕ ಧರ್ಮವು ಜನರಿಗೆ ಪ್ರಿಯವಾಗುವ ಸಂಭವವಿಲ್ಲ. ಸಾಮೂಹಿಕ ಧರ್ಮದಲ್ಲಿ ರೀತಿ ನಡೆ ಆಚಾರ ವಿಚಾರಗಳ ಬಗ್ಗೆ ಹೇಗೆ ಆ ಧರ್ಮದಲ್ಲಿರುವವರು ಕಟ್ಟು ಮಾಡುತ್ತಾರೋ ಹಾಗೆ ಎಲ್ಲರೂ ನಡೆಯಲೇಬೇಕೆಂಬ ನಿರ್ಬಂಧವಿರುತ್ತದೆ. ಅವುಗಳು ಅವರಿಗೆ ಸಮ್ಮತವಿರಲಿ, ಅಥವಾ ಇಲ್ಲದಿರಲಿ ಅವುಗಳನ್ನು ಅವರು ಸ್ವೀಕರಿಸಲೇಬೇಕು. ಕ್ರಿಶ್ಚಯನ್ನ ಮತ್ತು ಮುಸ್ಲೀಮ ಧರ್ಮಗಳು ಈ ವಿಧವಾಗಿರುತ್ತವೆ. ಆದ್ದರಿಂದ ಅವು ಇತರರನ್ನು ಧರ್ಮಾಂತರಗೊಳಿಸುವದು ಶ್ರೇಷ್ಠ ಧಾರ್ಮಿಕ ಕಾರ್ಯವೆಂದು ತಿಳಿದಿರುತ್ತವೆ. ಆದರೆ ಹಿಂದೂ ಧರ್ಮವು ಮೂಲದಲ್ಲಿ ವೈಯ್ಯಕ್ತಿಕ ಧರ್ಮವಾಗಿದ್ದು ಅದರಲ್ಲಿ ಹಿಂದುಗಡೆ ಅನೇಕ ಕಾರಣಗಳ ಮೂಲಕ ಗುಂಪುಗಳಾಗಿ ಇವು ಅನುವಂಶಿಕವಾಗಿ ಸಹ ಮಾಡಲ್ಪಟ್ಟವು. ಇವು ವರ್ಣಗಳು, ಜಾತಿಗಳು ಎಂದು ಹೇಳಲ್ಪಟ್ಟವು. ಹೀಗೆ ಹಿಂದೂ ಧರ್ಮದ ಪೂರ್ವದ ವೈಯ್ಯಕ್ತಿಕ ಸ್ವರೂಪ

ಹೊರಟು ಹೋಗಿ ಸಾಮೂಹಿಕ ಧರ್ಮವಾಯಿತು. ಆದರೆ ಶಿವಶರಣರು ಈ ವಿಧದ ತತ್ವವನ್ನು ಸ್ವೀಕರಿಸಿರುವದಿಲ್ಲ. ಮನುಷ್ಯನು ಮಾಡುವ ಕ್ರಿಯೆಗಳು ಅವನಿಗೆಯೇ ಸಂಬಂಧಿಸಿರುತ್ತವೆಂದು ಅವರು ತಿಳಿದಿರುವದರಿಂದ ಒಬ್ಬರ ಆಚರಣೆಯು ಬೇರೊಬ್ಬರಿಗೆ ಅನ್ವಯಿಸುವದಿಲ್ಲ. ಗಂಡನು ಮಾಡುವ ಆಚರಣೆಯು ಹೆಂಡತಿಗೆ ಸಂಬಂಧಿಸುವದಿಲ್ಲ. ಮತ್ತು ತಂದೆಯು ಮಾಡುವ ಆಚರಣೆಯು ಮಗನಿಗೆ ಸಂಬಂಧಿಸುವದಿಲ್ಲ. ಪ್ರತಿಯೊಬ್ಬನು ತನ್ನ ತನ್ನ ಆಚರಣೆಯಲ್ಲಿದ್ದುಕೊಂಡು ಆತ್ಮೋನ್ನತಿಯನ್ನು ತಾನೇ ಮಾಡಿಕೊಳ್ಳತಕ್ಕದ್ದು. ಅವರಿಗೆ ಪೂಜಾರಿಗಳು ಬೇಡ. ಆದ್ದರಿಂದ ಬಸವನ ಆಚರಣೆಯು ಭಕ್ತಸ್ಥಳದ್ದೆಂದೂ, ಮಡಿವಾಳ ಮಾಚಿದೇವನ ಆಚರಣೆಯು ಮಹೇಶ್ವರ ಸ್ಥಲದ್ದೆಂದೂ, ಚನ್ನಬಸವೇಶ್ವರನ ಆಚರಣೆಯು ಪ್ರಸಾದಿಸ್ಥಲದ್ದೆಂದೂ, ಸಿದ್ಧರಾಮನ ಆಚರಣೆಯು ಪ್ರಾಣಲಿಂಗಿಸ್ಥಲದ್ದೆಂದೂ, ಅಲ್ಲಮ ಪ್ರಭುವಿನ ಆಚರಣೆಯು ಶರಣಸ್ಥಲದ್ದೆಂದೂ, ಅಜಗಣ್ಣನ ಆಚರಣೆಯು ಐಕ್ಯಸ್ಥಲದ್ದೆಂದೂ, ಶಿವಶರಣರು ತಮ್ಮ ವಚನಗಳಲ್ಲಿ ಹೇಳಿದ್ದುಂಟು. ಅವರವರ ಮಾರ್ಗದಂತೆಯೇ ಅವರು ಆಚರಿಸಬೇಕೇ ಹೊರತು "ನೋಡಿ ನೋಡಿ ಮಾಡುವ ನೇಮ ಸಲ್ಲದು, ಸಲ್ಲದು" ಎಂದು ಅವರು ನುಡಿದಿದ್ದಾರೆ. ಷಟ್‌ಸ್ಥಲ ಶಾಸ್ತ್ರವು ಪ್ರಗತಿಯ ಮಾರ್ಗವನ್ನು ಸಾಮಾನ್ಯವಾಗಿ ಸೂಚಿಸುತ್ತದೆ. ಅದರಲ್ಲಿ ಹೇಳಿದ ತತ್ವಗಳಂತೆ ಪ್ರತಿಯೊಬ್ಬ ಶರಣನು ತನ್ನ ತನ್ನ ಕ್ರಿಯೆಗಳನ್ನು ಮಾಡುತ್ತ ತನ್ನಲ್ಲಿ ಉಚ್ಚ ಸ್ಥಿತಿಯನ್ನು ಉಂಟುಮಾಡಿಕೊಳ್ಳುತ್ತ ಕಡೆಗೆ ಬಯಲನ್ನು ಬೆರೆಯತಕ್ಕದ್ದು. ಆದ್ದರಿಂದ ಶಿವಶರಣರ ಧರ್ಮದಲ್ಲಿ ಒತ್ತಾಯವೆಂಬುದಿಲ್ಲ. ಪ್ರತಿಯೊಬ್ಬನು ತನ್ನ ಪ್ರಗತಿಯನ್ನು ತನ್ನ ಯೋಗ್ಯತೆಯ ಪ್ರಕಾರ ತಾನೇ ಮಾಡಿಕೊಳ್ಳಬೇಕು. ಇದು ಅವನ ಕಡೆಗೆಯೇ ಇದೆ. ಅವನು ಎರಡನೆಯವರ ಬೆಂಬಲವನ್ನು ಅಪೇಕ್ಷಿಸಬಾರದು. ಶಿವಶರಣರು ಈ ತತ್ವವನ್ನು ಸಮರ್ಥಿಸುವದರಿಂದ ಸ್ವತಂತ್ರ ವಿಚಾರಕ್ಕೆ ಅವರ ಧರ್ಮದಲ್ಲಿ ಎಡೆ ಇದೆ.

## ಹೊಸ ಬಗೆಯ ಧರ್ಮದ ಉಗಮ.

ಧರ್ಮದಲ್ಲಿ ವಿಚಾರಕ್ಕೆ ಹೀಗೆ ಸ್ಥಾನವು ದೊರೆತ ಕೂಡಲೆ ಅದರಲ್ಲಿ ಕಾಲಕಾಲಕ್ಕೆ ಪರಿಸ್ಥಿತಿಗೆ ಅನುಸರಿಸಿ ಬದಲಾವಣೆಗಳಾಗುವವು. ಹಿಂದಿನ ರೂಢಿಗಳು ಹೊರಟು ಹೋಗಿಬಿಡುತ್ತವೆ. ಆ ರೂಢಿಗಳು

ಉಪಯುಕ್ತವಿದ್ದರೆ ಮಾತ್ರ ಉಳಿಯುವವು. ಉಪಯುಕ್ತವಿರದಿದ್ದರೆ ಅವು ಉಳಿಯಲಾರವು. ಈ ಸ್ಥಿತಿಯುಂಟಾದಲ್ಲಿ ಸಾಂಪ್ರದಾಯಕ್ಕೆ ಅಂಟಿಕೊಂಡವರು ಧರ್ಮ ಹೋಯಿತೆಂದು ಬೆದರುತ್ತಾರೆ. ಆದರೆ ಅವರು ಹಾಗೆ ತಿಳಿಯುವ ಕಾರಣವಿಲ್ಲ. ಧರ್ಮಕ್ಕೆ ಹೊಸ ಸ್ವರೂಪ ಮಾತ್ರ ಬಂದಿತೆಂದು ಮಾತ್ರ ಅವರು ತಿಳಿಯಬೇಕು. ಇದು ಸಜೀವ ಧರ್ಮದ ಗುರುತಾಗಿದೆ. ಹಿಂದೂ ಧರ್ಮವು ಬೇರೆ ಬೇರೆ ಕಾಲಗಳಲ್ಲಿ ಹೊಸ ಹೊಸ ಸ್ವರೂಪವನ್ನು ಹೊಂದುತ್ತ ಬಂದಿರುತ್ತದೆ. ಆದ್ದರಿಂದ ಅದು ಈ ವರೆಗೂ ಬಾಳಿದೆ. ವೇದಕಾಲದಲ್ಲಿ ಇದ್ದ ಹಿಂದೂ ಧರ್ಮವು ಉಪನಿಷತ್ ಕಾಲದಲ್ಲಿ ಉಳಿಯಲಿಲ್ಲ. ಉಪನಿಷತ್ ಕಾಲದಲ್ಲಿದ್ದ ಧರ್ಮವು ಪೌರಾಣಿಕ ಕಾಲದಲ್ಲಿ ಉಳಿಯಲಿಲ್ಲ. ಹೀಗೆ ಅದರಲ್ಲಿ ಬದಲಾವಣೆಗಳಾಗುತ್ತ ಬಂದಿವೆ. ಶೈವ ಧರ್ಮಗಳಲ್ಲಿಯೂ ಇದೇ ರೀತಿಯಾಗಿದೆ. ತಮಿಳು ದೇಶದಲ್ಲಿದ್ದ ಪುರಾತನರ ಶೈವ ಧರ್ಮದ ಸ್ವರೂಪವು ಕರ್ನಾಟಕದ ಶಿವಶರಣರ ಕಾಲದಲ್ಲಿ ಉಳಿಯಲಿಲ್ಲ. ಆಗ ವೀರಶೈವ ಧರ್ಮವು ಬುದ್ಧಿ ಪ್ರಧಾನವಾದ ಧರ್ಮವಾಯಿತು. ಆದ್ದರಿಂದ ಮನುಷ್ಯನು ಕ್ರಿಯಾಪ್ರಧಾನವಾದ ಭಕ್ತಸ್ಥಲದಲ್ಲಿ ಉಳಿದರೆ ಅವನಲ್ಲಿ ಧಾರ್ಮಿಕ ಪ್ರಗತಿಯಾಗಲಾರದೆಂದು ಶಿವಶರಣರು ಭಾವಿಸಿದ್ದಾರೆ ಆದ್ದರಿಂದ ಭಕ್ತನು ಜ್ಞಾನಪ್ರಧಾನವಾದ ಶರಣಸ್ಥಲದಲ್ಲಿಯೂ ಇರಬೇಕೆಂದು ಅವರು ಬೋಧಿಸಿದ್ದಾರೆ. ಆದ್ದರಿಂದ ಭಕ್ತನು ಭಕ್ತನ ಶರಣನೂ ಆಗಬೇಕು. ಹಾಗೆಯೇ ಕೇವಲ ಜ್ಞಾನದಿಂದ ಮೋಕ್ಷವಾಗುವದೆಂದು ಅವರು ಭಾವಿಸದೆ ಜ್ಞಾನದೊಡನೆ ಕ್ರಿಯೆಯೂ ಬೇಕೆಂದು ಅವರು ಹೇಳಿದ್ದಾರೆ. ಆದ್ದರಿಂದ ಶರಣನು ಶರಣನ ಭಕ್ತನೂ ಆಗಬೇಕು. ಹೀಗೆ ಅವರು ಶೈವ ಧರ್ಮದಲ್ಲಿ ಹೊಸ ಪರಿಸ್ಥಿತಿಗೆ ಅನುಸರಿಸಿ ಸುಧಾರಣೆಗಳನ್ನು ಮಾಡುತ್ತ ಅವುಗಳ ತತ್ವಗಳನ್ನು ಪ್ರಸಾರಪಡಿಸಿದ್ದಾರೆ. ಈ ಪ್ರಸಾರ ಕಾರ್ಯವನ್ನು ಅವರು ಎಲ್ಲರಿಗೂ ತಿಳಿಯುವ ಕನ್ನಡ ಭಾಷೆಯಲ್ಲಿ ಮಾಡಿದ್ದರಿಂದ ಅವರ ಧರ್ಮವು ಬಹು ತೀವ್ರವಾಗಿ ಎಲ್ಲ ಕಡೆಗೂ ಹಬ್ಬಿತು.

---

# ಜೀವಜ್ಯೋತಿ ಬಸವಣ್ಣನವರು.

(ಲೇ:- ಮಹಾಂತ ದೇವರು ಇಲಕಲ್ಲ. ಶಿವಯೋಗಮಂದಿರ ಬದಾಮಿ)



ಬಸವನ ಪುಣ್ಯಕೀರ್ತಿಲತೆ ಬೇರ್ವರಿಯಿತ್ತು ರಗೇಂದ್ರ ಲೋಕದೊಳ್ ।
ದೆಶೆಗಳನಗ್ಗಳಂ ಮುಸುಕಿ ಪರ್ವಿದುದಾಗಳೆ ಮರ್ತ್ಯ ಲೋಕದೊಳ್ ॥
ಕುಸುಮಿತವಾಗಿ ಸೌರಭದಿಹೊಂಪುಳಿ ಯೋಯ್ತ್ತು ಮರೇಂದ್ರ ಲೋಕದೊಳ್
ಪಸರಿಸಿ ಪೂರಿತಾಮಳ ಸುಧಾಫಳ ಮಾದುದು ರುದ್ರಲೋಕದೊಳ್ ॥

—ಹರಿಹರ

ಒಂದು ಭವ್ಯವಾದ ಅರಮನೆಯು ಮಳೆಗಾಳಿ ಹೊಡೆತಕ್ಕೆ ಸಿಕ್ಕು ಆದರಲ್ಲಿರುವ ಸ್ತಂಭಗಳು ಸಡಿಲಾಗಿ ಬೀಳುವ ಪ್ರಸಂಗ ಒದಗಿದಾಗ ನಿಪುಣನಾದ ಶಿಲ್ಪಿಗನೊಬ್ಬನು ಬಂದು ಅದನ್ನು ತನ್ನ ಹಿರಿದಾದ ಜಾಣ್ಮೆಯಿಂದ ಮತ್ತೆ ಭದ್ರಪಡಿಸಿ ರಮ್ಯವಾಡುವಂತೆ, ೧೨ ನೇ ಶತಮಾನದಲ್ಲಿ ವೀರಶೈವ ಸಮಾಜವೆಂಬ ಅರಮನೆಯು ಜೀರ್ಣವಾಗಿ ಹೋಗುವ ಸಮಯದಲ್ಲಿ "ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭೂತಲೇ । ತದಾ ತದಾವತಾರೋಯಂ ಗಣೇಶಸ್ಯವರಾನನೇ" ಎಂದು ಪಾರಮೇಶ್ವರಾಗಮದಲ್ಲಿ ಗೌರಿಯನ್ನು ಕುರಿತು ಪರಮೇಶ್ವರನೇ ನುಡಿದಿರುವಂತೆ ಬಸವ ಭಾಸ್ಕರನು ಉದಯವಾದ ದಿನವಿಂದು. ಇಂದಿನ ದಿನವು ಪ್ರತಿಯೊಬ್ಬ ಮಾನವನಿಗೂ-ಬಹು ಪವಿತ್ರವಾದುದು. ಯಾವ ಮಹಾತ್ಮನು ಸಿರಿಗನ್ನಡದೇವಿಯ ಒಡಲೊಳು ಉದಯಿಸಿ, ತನ್ನ ಅಂತರ್ಗತ ಶಕ್ತಿಗಳಿಂದಲೂ, ನಡೆ-ನುಡಿಗಳಿಂದಲೂ, ವೀರಶೈವ ಮತವನ್ನು ಉದ್ಧರಿಸಿ ಆ ಮತಕ್ಕೆ ತೇಜಸ್ಸನ್ನೂ, ಕೀರ್ತಿಯನ್ನೂ, ತಂದುಕೊಟ್ಟು, ಧಾರ್ಮಿಕ ಕ್ರಾಂತಿಯನ್ನು ಮಾಡಿ ಕನ್ನಡನಾಡಿನತುಂಬ ವಚನ ಸಾಹಿತ್ಯದ ಹೊಳೆಯನ್ನು ಹರಿಸಿ, ನೀರಡಿಸಿದವರಿಗೆ ವಚನಾಮೃತವನ್ನು ಕುಡಿಸಿ, ಸ್ವೋದ್ಧಾರ ಮಾಡಿಕೊಂಡು ಪರರುದ್ಧಾರ ಮಾಡಿದ ಲೋಕೋಪಕಾರಿ- ಭಗವಾನ್ ಬಸವಮಹಾತ್ಮನು ಹುಟ್ಟಿದ ದಿನವು ಯಾರಿಗೆ ತಾನೇ ಸಂತಸವಾಗಲಿಕ್ಕಿಲ್ಲ? ಹುರುಪು ಹುಮ್ಮಸಗಳು ಚಿಮ್ಮಲಿಕ್ಕಿಲ್ಲ? ಹಾಗಾದರೆ ಇದುವರೆಗೂ ಎಷ್ಟೋ ಜನರು ಹುಟ್ಟಿ ಸತ್ತಿರುತ್ತಾರೆ. ಅವರದೇಕೆ

ಜಯಂತಿಯನ್ನು ಮಾಡುವದಿಲ್ಲ? ಯಾವ ಮಾನವನು ಅಲ್ಪಭಾವನೆ, ಕೀಳುವಿಚಾರಗಳನ್ನು ತನ್ನಲ್ಲಿ ಅಡಗಿಸಿಕೊಂಡು ನಿರಂತರವೂ ಸಂಸಾರದ ಸುಖದುಃಖಗಳಲ್ಲಿಯೇ ಬಳಲಿದಂಡಾಗುವವಗೆ ಸ್ವೋದ್ಧಾರ ಮಾಡಿಕೊಳ್ಳುವ ಬಗೆ ಎಂತು? ಇದೆಲ್ಲವನ್ನು ಅರಿಯದಿರುವವನಿಗೆ ಹಿರಿಯ ಸ್ಥಾನ ದೊರೆಯುವದೆಂತು? ಮಾನವನು ಮಾನವತ್ವ ಪಡೆಯಬೇಕಾದರೆ ಪಶುವೃತ್ತಿ ತೊರೆದು ಪಶುಪತಿಯ ತತ್ವದ ಬೀಜಗಳನ್ನು ತನ್ನ ಹೃದಯ ಭೂಮಿಕೆಯಲ್ಲಿ ಹಾಕಿಕೊಳ್ಳಬೇಕು. ಭಕ್ತಿಜಲವನ್ನು ಆ ಭೂಮಿಗೆ ಸಿಂಚಿಸಬೇಕು. ಅಹಂಕಾರದ ಕಸವನ್ನು ಕಿತ್ತಬೇಕು. ಸಂಸಾರದ ಹೆಂಟೆಯ ನೊಡೆಯಬೇಕು. ಭ್ರಾಂತಿಯ ಬೇರನ್ನಗೆದು ಎಸೆಯುತ್ತ ಆ ಬ್ರಹ್ಮಬೀಜದ ಸಸಿಗಳನ್ನು ಸಲುಹಿದರೆ ಆವಾಗ ರಸವತ್ತಾದ ಹಣ್ಣುಗಳು ದೊರೆಯುತ್ತವೆ.

೨

ಇಂದಿಗೆ ಬಸವಣ್ಣನವರು ನಮ್ಮ ಸಮಾಜದಲ್ಲಿ ಇಲ್ಲ. ಆದರೆ ಆವರು ಆಗಿ ಹೋಗಿ ಎಂಟು ಶತಮಾನಗಳಾಚೆಗಾದರೂ ಅವರ ಅಮೋಘ ಆತ್ಮಬಲದಿಂದಲೂ ಮತ್ತು ಮೇಧಾಶಕ್ತಿಯಿಂದಲೂ ಜನಜೀವನವನ್ನೇ ಪರಿಶುದ್ಧಿಗೊಳಿಸುವ ತತ್ವಗಳನ್ನು ನಿರೀಕ್ಷಿಸಿದ್ದಾದರೆ ಬಸವಣ್ಣನವರ ಜೀವನಸ್ಮೃತಿ ನಮ್ಮ ಹೃದಂತರಾಳದಲ್ಲಿ ಚಿತ್ರಕಾರನು ಪೂರೈಸಿದ ಚಿತ್ರದಂತಿದ್ದಾರೆ. ಆ ಚಿತವನ್ನು ತಿರುಗಿಸಿ ತಿರುಗಿಸಿ ಬೇಕಾದ ಕಡೆ ನಿಂತು ಬೇಕಾದ ಬೆಳಕು ಬಿಟ್ಟು ನೋಡಬಹುದು. ಆದರೆ ಆ ಚಿತ್ರವನ್ನು ಚಿತ್ತ ಭಿತ್ತಿಯಲ್ಲಿ ಒತ್ತಿಗೊಂಡವರಿಗಷ್ಟೇ ಆ ಚಿತ್ರದ ವೈಚಿತ್ರ್ಯ ಸೊಬಗು ಸುಖಾನಂದಗಳು ಲಭಿಸುತ್ತವೆ.

ಬಸವಣ್ಣನವರು ನಮ್ಮಂತೆಯೇ ಒಂದು ಗ್ರಾಮದಲ್ಲಿ ಜನಿಸಿದರು. ಬೆಳೆದರು. ವಿದ್ಯಾರ್ಥಿಯಾಗಿ ವಿದ್ಯೆಗಳಿಸಿದರು. ತಪಸ್ಸಿದ್ಧಿಗಾಗಿ ಯಾವ ಕಾಡಿಗೂ ಹೋಗಲಿಲ್ಲ ಮತ್ತು ಜೀವನದ ಯಾವ ವ್ಯವಹಾರವನ್ನು ತೊರೆಯಲಿಲ್ಲ. ವಿವಾಹಿತರಾದರು. ಪುತ್ರರನ್ನು ಹಡೆದರು. ಆದರೆ ಬಸವಣ್ಣನವರ ಹೆಸರೇ ಕಾಲಪ್ರವಾಹವಲ್ಲಿ ತೇಲಿ ಬರುತ್ತಿರುವುದೇಕೆ? ಅಥವಾ ಅವರು ಮಂತ್ರಿಯ ಉಚ್ಚಪದವಿಗೇರಿದ್ದಾರೆಂದೋ? ಅಲ್ಲ. ಬಸವಣ್ಣನವರು ಆ ಅಹಂಕಾರದ ಗಜವನ್ನೇರಿದ್ದರೆ "ದ್ವಿತೀಯ ಶಂಭು" ಎಂಬ ಪದವಿ ದೊರೆಯುತ್ತಿತ್ತೇ? ಈ ಪದವಿ ಪಡೆಯಬೇಕಾದರೆ

ಸಾಮಾನ್ಯರಿಗೆ ಸಾಧ್ಯವೆ? ಈ ಪದವಿ ದೊರೆಯಬೇಕಾದರೆ ಹುಟ್ಟಿದಂದಿನಿಂದ ಅವಸಾನದವರೆಗೂ ಪ್ರತಿಯೊಂದು ಸದ್ಗುಣಗಳ ಪರೀಕ್ಷೆಯಲ್ಲಿ ಉತ್ತೀರ್ಣನಾಗುತ್ತ ಹೋಗಬೇಕು. ಒಮ್ಮೆಯಾದರೂ ಅನುತ್ತೀರ್ಣನಾಗಬಾರದು. ಜ್ಞಾನದೀವಿಗೆ ಹಚ್ಚಿರಬೇಕು. ಭಕ್ತಿಯೆಂಬ ಬಳ್ಳಿಯನ್ನು ತನುವೆಂಬ ವೃಕ್ಷಕ್ಕೆ ಸುತ್ತಿರಬೇಕು. ಆ ವೃಕ್ಷದಲ್ಲಿ ಸದ್ಭಾವನೆಯ ಅಲರುಗಳು ಅರಳಿ ಸತತವೂ ಕಂಪು ಬೀರುತ್ತಿರಬೇಕು. ಆ ವಾಸನೆಯಿಂದ ಇನ್ನಿತರರೂ ಸುಖವನ್ನು ಅನುಭವಿಸುತ್ತಿರಬೇಕು. ಮತ್ತು ಆ ವೃಕ್ಷದಲ್ಲಿ ಸತ್ಯ, ಅಹಿಂಸೆ, ಮೊದಲಾದ ಹಣ್ಣುಗಳು ಬಿಟ್ಟಿರಬೇಕು. ಆ ನಂತರ "ದ್ವಿತೀಯಶಂಭು" ಎಂಬ ಪದವಿ ದೊರೆಯುತ್ತದೆ.

## ಬಸವಣ್ಣನವರು ಕ್ರಾಂತಿಕಾರರೆ?

ಜೀವಜ್ಯೋತಿ ಬಸವಣ್ಣನವರು ಕ್ರಾಂತಿಕಾರರು. ಅಹುದು. ಇವರು ಕ್ರಾಂತಿಕಾರರಾಗದಿದ್ದರೆ ಜಗತ್ತಿಗೆ ಶಾಂತಿ, ಕಾಂತಿಗಳು ದೊರೆಯುವ ಬಗೆ ಹೇಗೆ? ಕಾಡಿನಲ್ಲಿರುವ ಗಿಡಗಳ ಹೂಗಳಂತೆ ಅಲ್ಲಿಯೇ ಅರಳಿ ಉದುರಿದ್ದರೆ ಜಗತ್ತಿಗೆ ಇವರ ತತ್ವ ಬೋಧನೆ ಆಗುವದು ಅಸಾಧ್ಯವಿತ್ತು. ೧೧-೧೨ ನೇ ಶತಮಾನದಲ್ಲಿ ಧಾರ್ಮಿಕ ಕ್ಷೇತ್ರದಲ್ಲಿಯೂ ಸಾಹಿತ್ಯ ಕ್ಷೇತ್ರದಲ್ಲಿಯೂ ಒಂದು ಕ್ರಾಂತಿಯಾಗವೆದ್ದಿತ್ತು. ಹಿಂದು ಧರ್ಮೀಯರಲ್ಲಿ ಅನೈಕ್ಯವೂ, ಉಚ್ಚ ನೀಚ ಭಾವನೆಯೂ, ಸ್ವಾರ್ಥಪರತೆಯೂ ತುಂಬಿ ತುಳುಕುತ್ತಿದ್ದವು. ದ್ವೇಷ, ಅಸೂಯೆ, ಮುಂತಾದ ಅವಗುಣಗಳು ಮನೆಮಾಡಿಕೊಂಡಿದ್ದವು. ಎಷ್ಟೋ ಜನ ವೈದಿಕ ಧರ್ಮದ ಸೋಗಿನಿಂದ ಅನೇಕ ಅಧರ್ಮವನ್ನು ಆಚರಿಸುತ್ತ ನಾನಾ ದೇವತೆಗಳನ್ನು ಪೂಜಿಸುತ್ತಿದ್ದರು. ಮತ್ತು ಅದೇ ಕಾಲದಲ್ಲಿ ಹಿಂದೂಧರ್ಮದಲ್ಲಿ ಹಿಂದೆ ಎಂದೂ ಆಗದ ಅನೇಕ ಮತ ಮತಾಂತರ ಗಲಭೆಗಳೂ, ಕಲಹಗಳೂ, ಉದಯಿಸಿ ಬೆಳೆಯುತ್ತ ಕೊನೆಗೆ ಹಿಂದೂಧರ್ಮವೇ ನಷ್ಟವಾಗುವ ಸಂಭವವು ಬಂದಿತ್ತು. "ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ" ಎಂಬ ಭಗವದ್ಗೀತೆಯ ಉಕ್ತಿಯನ್ನು ಮರೆದು ವಿಚಾರಹೀನರಾಗಿ ತಮಗೆ ಜನ್ಮದಿಂದ ಬಂದ ಜಾತಿಗೇನೇ ಮೇಲ್ಮೆ ಕೊಟ್ಟಿದ್ದರು. ಕೀಳರಾದವರಿಗೆ ಮೇಲಿನ ಸ್ಥಾನ ದೊರೆಯುವಂತಿದ್ದರೂ ಅವರಿಗೆ ಮೇಲೇರಲು ಅಡ್ಡಿಹಾಕುತ್ತಿದ್ದರು. ಈ ದೇವರು ಸತ್ಯವೋ,

ಆ ದೇವರು ಸತ್ಯವೋ, ಹೋತವನ್ನು ಕೊಲ್ಲುವದು ಮೇಲೋ, ಬಿಡುವದು ಮೇಲೋ, ಮೊದಲಾದ ಸಂಶಯಕ್ಕೆ ತುತ್ತಾಗಿ ಕಂಡಕಂಡ ದೇವರಿಗೆಲ್ಲ ಹರಕೆ ಹೊತ್ತು ಧೃಡವಾದ ಭಕ್ತಿ, ನಿಷ್ಠೆ, ಇವೆಲ್ಲವನ್ನು ಮರೆತು ನಿಜವಾದ ದೇವನೊಬ್ಬನ ಪಡೆಯದಲೆ ಮೌಢ್ಯದ ಮಡುವಿನಲ್ಲಿ ತಿರುತಿರುಗಿ ತೊಳಲಿ ಬಳಲುತ್ತಿದ್ದರು. ಈ ಪ್ರಸಂಗದಲ್ಲಿ ಮಹಾತ್ಮಾ ಬಸವಣ್ಣನವರು ನಡಕಟ್ಟಿ ಇದೆಲ್ಲವನ್ನು ತಿಳಿಸಲಿಕ್ಕೆ—

"ದೇವನೊಬ್ಬ ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದರೆ ಕಿವಿ ಮೂಗ ಕೊಯ್ವರು. ಹಲವು ದೇವರ ಎಂಜಲವ ತಿಂಬುವರ ನೇನೆಂಬೆನಯ್ಯ ಕೂಡಲಸಂಗಮದೇವಾ"

'ನಂಬಿದ ಹೆಂಡತಿಗೆ ಗಂಡನೊಬ್ಬ ಕಾಣಿರೋ, ನಂಬಬಲ್ಲ ಭಕ್ತಂಗೆ ದೇವನೊಬ್ಬ ಕಾಣಿರೋ, ಬೇಡಬೇಡ ಅನ್ಯದೈವದ ಸಂಗ ಹೊಲ್ಲ. ಬೇಡ ಬೇಡ ಅನ್ಯ ದೈವವೆಂಬುದು ಹಾದರ ಕಾಣಿರೋ, ಕೂಡಲಸಂಗಮದೇವ ಕಂಡರೆ ಕಿವಿ ಮೂಗ ಕೊಯ್ವಕಾಣಿರೋ." ಇಂಥ ತತ್ವ ಗರ್ಭಿತ ನಿಷ್ಠುರ ವಚನಗಳನ್ನು ಕ್ರಾಂತಿ ಕಹಳೆಯಲ್ಲಿ ಇಟ್ಟು ಊದದಿದ್ದರೆ ಧರ್ಮವೆಲ್ಲ ನಿರ್ನಾಮವಾಗಿ ನಿರ್ವೀರ್ಣ್ಯವಾಗುವ ಪ್ರಸಂಗ ಒದಗುತ್ತಿತ್ತು. ಆದರೆ ಕ್ರಾಂತಿಪುರುಷರಾದ ಬಸವಣ್ಣನವರು ಇದೆಲ್ಲವನ್ನೂ ತುಂಬಾ ವಿಚಾರದ ವರೆಗಲ್ಲಿನಲ್ಲಿ ತಿಕ್ಕಿತಿಕ್ಕಿ ಸಾಮಾಜಿಕ ರಂಗದಲ್ಲಿ ಒಂದು ಧರ್ಮಕ್ರಾಂತಿಯನ್ನು ಮಾಡಿದ್ದರಿಂದಲೇ, ಬಸವಣ್ಣನವರು ನಮ್ಮೆಲ್ಲರ ಹೃನ್ಮಂದಿರದಲ್ಲಿ ಅವಿತುಕೊಂಡಿದ್ದಾರೆ. ಅಂತೆಯೇ ನಾವುಗಳೆಲ್ಲರೂ ಒಂದು ಗೂಡಿ ಆ ಮಹಾತ್ಮನ ಭವ್ಯ ಶಕ್ತಿಗೆ ಮೆಚ್ಚಿ ನೆಚ್ಚಿ ತಲೆದೂಗುತ್ತಿದ್ದೇವೆ. ಜಯಂತಿಯನ್ನು ಆಚರಿಸುತ್ತಿದ್ದೇವೆ.

## ಕನ್ನಡ ನುಡಿಗೆ ಮೇಲ್ಮೆಯಾರಿಂದ ?

ಭಕ್ತಿ ಭಾಂಡಾರಿ ಬಸವಣ್ಣನವರು ತೆಲಗು, ತಮಿಳು, ಆಂಧ್ರ ಮುಂತಾದ ಭಾಷೆಗಳ ದಾಳಿಯಿಂದ ಕಳೆಗುಂದಿರುವ ಕನ್ನಡ ನುಡಿಯನ್ನು ಪುನರುಜ್ಜೀವನಗೊಳಿಸಿದರು. ಕನ್ನಡ ಭಾಷಾ ವೃಕ್ಷವು ಇದೀಗ ಇಷ್ಟು ಪ್ರಬಲವಾಗಿ ಪಲ್ಲವಿಸಬೇಕಾದರೆ ಬಸವಣ್ಣ ಮೊದಲಾದ ಮಹಾಶರಣರ ವಚನ ಸಾಹಿತ್ಯದಿಂದಲೇ ಬೆಳೆಯಿತು. ಈ ವಚನ ಸಾಹಿತ್ಯದಲ್ಲಿ ಛಂದಸ್ಸು ಅಲಂಕಾರ ವಿಲ್ಲದಿದ್ದರೂ ಭಾವ ಪ್ರಾಧಾನ್ಯ ವಿದ್ದುದರಿಂದ ವಿದ್ವನ್ಮಣಿ

ಗಳೂ, ತಲೆದೂಗುವಂತಿವೆ. ಕಲಿಯುಂತಿವೆ. ಒಂದು ಸಲ ಈ ವಚನ ಪ್ರವಾಹದಲ್ಲಿ ಧುಮುಕಿ ಈಜಿದರೆ ಎನಿತು ಶಾಂತಿ ಸುಖಗಳು ಉದ್ಭೂತ ವಾಗುತ್ತವೆಂಬುದು ಈಜಿ ತಣಿದವರಿಗೇ ಗೊತ್ತು. ಈ ವಚನಗಳಲ್ಲಿ ತರ್ಕದ ತಿಕ್ಕಾಟವಿಲ್ಲ. ವಾದವಿವಾದದ ಗೊಂದಲವಿಲ್ಲ. ಆದರೆ ಈ ವಚನಗಳು ಅವಿದ್ಯಾ ವಿದ್ವಾಂಸರಿಗೆ ತಿಳಿಯಲಾರವು. ಚಿಕ್ಕವರೇ, ಇರಲಿ, ಅವರ ಒಳ್ ಗಣ್ಣು ತೆರೆದಿರಬೇಕು. ಒಳಬಾಳು ಬೆಳಕಿರಬೇಕು. ಧ್ಯೇಯ ಸಿದ್ಧಿಯ ಹಂಬಲವು ಅವರ ಅಂತರಾಳದಲ್ಲಿ ತುಂಬಿರಬೇಕು. ಅಂದರೇನೆ ಅರಿಯು ತ್ತವೆ. ಅಕ್ಕ ಮಹಾದೇವಿಯು ಚಿಕ್ಕವಳಾಗಿದ್ದರೂ ಮಹಾಶರಣ ಶರಣೆ ಯರಲ್ಲಿ ಅಗ್ರಸ್ಥಾನ ಪಡೆಯಬೇಕಾದರೆ ಆಕೆಯಲ್ಲಿಯ ಅಂತಃಶಕ್ತಿಯು ಎಷ್ಟು ದೃಢವಾಗಿತ್ತು ? ಮನೋಬಲ ಎಂತಹದು ? ಆತ್ಮತೇಜಸ್ಸು ಎನಿತು ಇತ್ತು ? ಎಂಬುದು ಆಕೆಯ ವಚನಗಳನ್ನು ಓದಿದವರಿಗೆ ಅರಿದಮಾತು. ಒಮ್ಮೆಯಾದರೂ ಶರಣರ ವಚನಗಳನ್ನು ಓದಿದವರ ಹೃದಯದ ಮೇಲೆಯೂ ಭಾವಾವಿಷ್ಟ ಭಕ್ತಿಯ ತೆರೆಗಳು ಎದ್ದು ಸಂಸಾರ ವ್ಯಾಮೋಹದಿಂದ ದೂರ ಇರಬೇಕೆಂದೆನ್ನಿಸುತ್ತದೆ. ವಚನಗಳಿಗೆ ವೀರಶೈವೇತರರು ಕನ್ನಡ ಉಪ ನಿಷತ್ತುಗಳೆಂದು ಕರೆಯಬೇಕಾದರೆ ಆ ವಚನಗಳಲ್ಲಿಯ ಭಾವ ಸೌಷ್ಠವ, ವಿಚಾರದ ಪ್ರಾಧಾನ್ಯತೆ, ಅರ್ಥಗಾಂಭೀರ್ಯ, ಭಕ್ತಿಯ ಹಿರಿಮೆ ಎಷ್ಟಿ ತ್ತೆಂಬುದು ಈ ಎರಡುಕ್ತಿಗಳಿಂದ ಹೇಳಲಸಾಧ್ಯ. ವಚನವಾಙ್ಮಯದ ಮಹ ತ್ವವನ್ನು ಪ್ರತಿಯೊಬ್ಬರೂ ಅರಿಯಬೇಕು. ಅರಿತು ಆಚರಿಸಬೇಕು. ಕನ್ನಡ ನುಡಿಯು ಬೆಳೆದು ಬೆಳಗಬೇಕು ಎಂದರಿದು ವಿಶ್ವಪ್ರೇಮಿ ಮಹಾತ್ಮಾ ಬಸವಣ್ಣನವರು. "ಶಿವಾನುಭವ ಮಂಟಪ" ವನ್ನು ಸ್ಥಾಪಿಸಿ ವೈರಾಗ್ಯ ಚಕ್ರವರ್ತಿಗಳಾದ ಶ್ರೀ ಅಲ್ಲಮಪ್ರಭುದೇವರನ್ನು ಅಧ್ಯಾತ್ಮ ಸಿಂಹಾಸನದ ಮೇಲೆ ಕೂಡ್ರಿಸಿ ಅವರಿಂದ ಶರಣಗೋಷ್ಠಿಗೆ ಜ್ಞಾನೋಪದೇಶ ಮಾಡಿಸಿ ಜಂಗಮಸಂಕುಲವನ್ನು ತಿದ್ದಿ ದಾರಿಗೆ ತಂದರು. "ಶಿವಾನುಭವಮಂಟಪ"ವು ಸ್ಥಾಪಿತವಾದನಂತರ, ಚನ್ನಬಸವಣ್ಣ, ಮೋಳಿಗೆಮಾರಯ್ಯ, ಮಾಚಿದೇ ವರು, ಅಕ್ಕಮಹಾದೇವಿ, ಮೊದಲಾದ ಮಹಾಶರಣ ಶರಣೆಯರು ಆತ್ಮ ವಿಚಾರದ ವಿಮರ್ಶೆಗಳನ್ನು ಮಾಡುತ್ತಿದ್ದರು. ಅವರೆಲ್ಲರೂ ಅಂತರ್ಗತ ವಿಚಾರಗಳನ್ನು ಸುಲಲಿತ ಕನ್ನಡ ಭಾಷೆಯಲ್ಲಿ ಬರೆದುದರಿಂದಲೇನೇ ಕನ್ನಡ ಬಾವುಟ ಹಾರಲುಹತ್ತಿತು. ಇವೆಲ್ಲ ವಚನರತ್ನಗಳನ್ನು ಪರಿಶ್ರಮದಿಂದ ಪರಿಶೋಧಿಸಿ ನಮಗೆಲ್ಲರಿಗೂ ಒದಗಿಸಿಕೊಟ್ಟ "ವಚನಶಾಸ್ತ್ರ ಪಿತಾಮಹ"

ರಾದ ಮಾನ್ಯ ಶ್ರೀ. ರಾ. ಬ. ಫ. ಗು. ಹಳಕಟ್ಟಿಯವರೇ, ವಿನುತ ಪಾತ್ರರೆಂದುಸುರಿದರೆ ನನ್ನ ಈ ಕಿರುನುಡಿಗೆ ಇನ್ನು ಅಲ್ಪವೇ !

## ಬಸವಜಯಂತಿ ಹೇಗೆ ಆಚರಿಸಬೇಕು ?

ಬಸವಜಯಂತಿಯನ್ನು ಆಚರಿಸುವಾಗ ಮುಖ್ಯವಾಗಿ ನಾವುಗಳು ಬಸವನ ಆಚರಣೆಯನ್ನು ಮನದಲ್ಲಿ ತಂದುಕೊಂಡು ಆಚರಿಸಿದೇ ಆದರೆ ಅದರ ಸಾರ್ಥಕತೆ ಬಲು ಸುಲಭರೀತಿಯಿಂದ ಲಭಿಸುತ್ತದೆ. "ನುಡಿದಂತೆ ನಡೆದರೆ ಅದೇ ಜನ್ಮ ಕಡೆ" ಎಂಬುಕ್ತಿಯಂತೆ ಬಾಳು ಪರಿಪೂರ್ಣವಾಗಬೇಕು. "ವೇಷಕ್ಕೆ ತಕ್ಕ ಆಚಾರ, ವಿಚಾರವಿದ್ದವರಿಗಷ್ಟೇ ಕೂಡಲಸಂಗನಿಗೆ ಪ್ರೀತಿ: ಭಾವಶುದ್ಧಿಯಿಲ್ಲದವರನ್ನು ಅಳಿಯಾಶೆದೋರಿ ಬೇಸಾಡುವನು. ಆ ಕೂಡಲಸಂಗನ ಮನೆಗೆ ಹೋಗಬೇಕಾದರೆ ಹೃದಯ ಪಾತ್ರೆಯಲ್ಲಿ ರಸಪತ್ತಾದ ಶಾಂತಿ, ದಯೆ, ಭಕ್ತಿ, ಜ್ಞಾನಗಳೆಂಬ ಹಣ್ಣುಗಳನ್ನು ತುಂಬಿಕೊಂಡು ಹೋಗಿದ್ದಾದರೆ ಮಮತೆಯಿಂದ ಸ್ವೀಕರಿಸಿ ಎತ್ತಿಕೊಳ್ಳುತ್ತಾನೆ.

ಹಿರಿಯರೇ,—ಕೊನೆಯದಾಗಿ ಜೀವಜ್ಯೋತಿ ಬಸವೇಶ್ವರನ ಮಾರ್ಮಿಕವಾದ ವಚನವೊಂದನ್ನು ಓದಿ ವಿರಮಿಸುತ್ತೇನೆ.

"ಕಳಬೇಡ ಕೊಲಬೇಡ ಹುಸಿಯ ನುಡಿಯಲುಬೇಡ, ಮುನಿಯಬೇಡ ಅನ್ಯರಿಗೆ ಅಸಹ್ಯಪಡಬೇಡ, ಇದಿರು ಹಳಿಯಲುಬೇಡ, ತನ್ನ ಬಣ್ಣಿಸಬೇಡ, ಇದೇ ಬಹಿರಂಗ ಶುದ್ಧಿ ಇದೇ ಅಂತರಂಗ ಶುದ್ಧಿ, ಇದೇ ನಮ್ಮ ಕೂಡಲಸಂಗಮದೇವನ ಒಲಿಸುವ ಪರಿ.

---

# ಕದಳೀ ಬನದ ಬಟ್ಟೆ.

( ಲೇಖಕ:— ಶ್ರೀ ಲಕ್ಷ್ಮಣರಾವ ಜಮುಖಂಡಿ ಮು. ಗದಗ )



ಡಾ. ನಂದೀಮಠ ಇವರು ತಾವು ಬರೆದ 'A Handbook of Virasaivisom' ಎಂಬ ನಿಬಂಧದಲ್ಲಿ ಅಕ್ಕಮಹಾದೇವಿಯವರ, "ವನವೆಲ್ಲ ನೀವೇ, ವನದೊಳಗಣ ದೇವತರುವೆಲ್ಲ ನೀವೆ. ತರುವಿನೊಳಗಾಡುವ ಖಗಮೃಗವೆಲ್ಲ ನೀವೇ. ಚನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರ." ಎಂಬ ವಚನವನ್ನು ಮತ್ತು ಬಸವಣ್ಣನವರ, "ಎತ್ತೆತ್ತ ನೋಡಿದಡತ್ತತ್ತ ನೀವೇ ದೇವಾ, ಸಕಲ ವಿಸ್ತಾರದ ರೂಹು ನೀವೇ ದೇವಾ, ವಿಶ್ವತೋ ಚಕ್ಷು ನೀವೇ ದೇವಾ, ವಿಶ್ವತೋ ಮುಖ ನೀವೇ ದೇವಾ, ವಿಶ್ವತೋ ಬಾಹು ನೀವೇ ದೇವಾ, ವಿಶ್ವತೋ ಪಾದ ನೀವೇ ದೇವಾ, ಕೂಡಲ ಸಂಗಮ ದೇವಾ" ಎಂಬ ವಚನವನ್ನು ಒತ್ತಟ್ಟಿಗೆ ತಂದು, " All groves you are; all trees in all groves you are; all animals that paly in trees you are; oh . Chenna Mallikarjuna, all you are; disclose yourself to me! " " Wherever I cast my glances, there you are my God; the form of all space you are, my God; universal eye you are, my God; universal month you are, my God... .....Oh, my God, Kudal Sangama! " ಈ ಪ್ರಕಾರ ಭಾಷಾಂತರಿಸಿರುವರು.

ಡಾ. ನಂದೀಮಠ ಇವರ ನಿಬಂಧಕ್ಕೆ ಬರೆದ ಪ್ರಸ್ತಾವನೆಯಲ್ಲಿ, ಅನುಭಾವಿಗಳಾದ ಡಾ. ರಾನಡೆಯವರು, "Who will not be charmed by the utterances of Mahadevi Akka when she says, while speaking about God, that not merely the wood or the trees are God, but also the beasts of prey and the fowl of the air which inhabit them, an idea which reminds us closely of a similar utterance

of Dr. Caird about the field, the fighters and the strife being all God ?" ಎಂದು ಬರೆದಿರುವರು.

ಅಕ್ಕಮಹಾದೇವಿಯವರು,

"ಚಿಲಿಮಿಲಿ ಎಂದೋದುವ ಗಿಳಿಗಳಿರಾ,
ನೀವು ಕಾಣಿರೆ, ನೀವು ಕಾಣಿರೆ.
ಸರವೆತ್ತಿ ಪಾಡುವ ಕೋಗಿಲೆಗಳಿರಾ,
ನೀವು ಕಾಣಿರೆ, ನೀವು ಕಾಣಿರೆ.
ಎರಗಿ ಬಂದಾಡುವ ತುಂಬಿಗಳಿರಾ,
ನೀವು ಕಾಣಿರೆ, ನೀವು ಕಾಣಿರೆ.
ಕೊಳನ ತಡೆಯೊಳಾಡುವ ಹಂಸೆಗಳಿರಾ,
ನೀವು ಕಾಣಿರೆ, ನೀವು ಕಾಣಿರೆ.
ಗಿರಿಗಂಹ್ವರದೊಳಗಾಡುವ ನವಿಲುಗಳಿರಾ,
ನೀವು ಕಾಣಿರೆ, ನೀವು ಕಾಣಿರೆ.
ಚನ್ನಮಲ್ಲಿಕಾರ್ಜುನನೆಲ್ಲಿರ್ದಿಹನೆಂದು,
ನೀವು ಹೇಳಿರೆ, ನೀವು ಹೇಳಿರೆ."

ಎಂದು ಗಿಳಿಗಳಲ್ಲಿ, ಕೋಗಿಲೆಗಳಲ್ಲಿ, ತುಂಬಿಗಳಲ್ಲಿ, ಹಂಸೆಗಳಲ್ಲಿ ಮತ್ತು ನವಿಲುಗಳಲ್ಲಿ ಚನ್ನಮಲ್ಲಿಕಾರ್ಜುನನನ್ನು ಅರಸುವರು.

ಅಕ್ಕಮಹಾದೇವಿಯುವರ,

"ವನವೆಲ್ಲ ನೀವೇ, ವನದೊಳಗಣ ದೇವತರುವೆಲ್ಲ ನೀವೇ. ತರುವಿನೊಳಗಾಡುವ ಖಗಮೃಗವೆಲ್ಲ ನೀವೇ. ಚನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರ." ಎಂಬ ವಚನಕ್ಕೆ ಡಾ. ನಂದೀಮಠ ಮತ್ತು ಅನುಭಾವಿಗಳಾದ ಡಾ|| ರಾನಡೆಯವರು ಕೊಟ್ಟ ಮಹತ್ವದ ಸ್ಥಾನವನ್ನು ನೋಡಿದರೆ, ಅಕ್ಕಮಹಾದೇವಿಯುವರು, ವನದಲ್ಲಿ, ವನದೊಳಗಿನ ದೇವ ತರುಗಳಲ್ಲಿ, ತರುಗಳೊಳಗಾಡುವ ಖಗಮೃಗಗಳಲ್ಲಿ, ಅರ್ಥಾತ್

ಗಿಳಿ,
ಕೋಗಿಲೆ,
ತುಂಬಿ,
ಹಂಸೆ, ಮತ್ತು
ನವಿಲು ಮುಂತಾದ ಖಗವೃಂದದಲ್ಲಿ,

ಹುಲ್ಲೆ, ಸಾರಂಗ ಮುಂತಾದ ಮೃಗವೃಂದದಲ್ಲಿ, ಚನ್ನಮಲ್ಲಿಕಾರ್ಜುನನನ್ನು ಕಂಡರೆಂದು ಊಹಿಸಬಹುದು.

'ಮಹಾದೇವಿಯಕ್ಕನ ರಗಳೆ'ಯಲ್ಲಿ, ಹರಿಹರನು,

'ಹಳ್ಳದೊಳು ಹೊದರಿನೊಳು ಬೆತ್ತದೊಳು ಬಿದಿರ್ಗಳೊಳು
ಕೊಳ್ಳದೊಳು ಕೊಳಗಳೊಳು ಕೆರೆಗಳೊಳು ತೊರೆಗಳೊಳು
ಬೆಟ್ಟದೊಳು ಘಟ್ಟದೊಳು ಸರುವಿನೊಳು ದರುವಿನೊಳು
ಇಟ್ಟಣಿಪ ಹುಲಿ ಹುಲ್ಲೆ ಇಮ್ಮಾವು ಮರಗಳೊಳು
ಕೂಡೆ ಪೆರ್ಬುಲಿ ಕಡವು ಕರಡಿ ಸಾರಂಗದೊಳು
ಕಾಡಾನೆ ಕಾಳ್ಕೋಣವೆನಿಪ ಮೃಗ ವೃಂದದೊಳು
ಮಲ್ಲಿನಾಥನನಲ್ಲಿ ನೆನೆವುತಂ ನಡೆವುತಂ
ಮಲ್ಲಿನಾಥನ ನಿಷ್ಠೆಯಿಂದ ಸುಖವಡೆವುತಂ
ಬಂದು ಪರ್ವತ ಮಲ್ಲಿನಾಥನಂ ನೆರೆಕಂಡು
ನಿಂದು ಪೊಡಮಟ್ಟು ನಯದಿಂದೆ ನೇಹಂ ಗೊಂಡು
ಗೀತಮಂ ಪಾಡುತಂ ಪೊರಮಟ್ಟು ನಡೆತಂದು
ನೂತನ ಶ್ರೀಶೈಲದೊಳಗೆ ಚಿತ್ತಂ ಸಂದು
ಎಲ್ಲಿ ಲತೆವನಗಳುಂಟಲ್ಲಲ್ಲಿ ಮಹದೇವಿ
ಸಲ್ಲಲಿತ ಪುಷ್ಪವಾಟಿಯೊಳಲ್ಲಿ ಮಹದೇವಿ
ಕಲ್ಲ ಗವಿಗಳ ನಡುವೆ ಮಲ್ಲಿನಾಥನ ಪೂಜೆ
ಎಲ್ಲಿ ತಿಳಿಗೊಳವಲ್ಲಿ ಮಲ್ಲಿನಾಥನ ಪೂಜೆ
ಬಾಳೆ ಸಹಕಾರದೊಳು ನೀಲಕಂಠನ ಪೂಜೆ
ಲೀಲೆಯಿಂ ಹಿಮಜಲಾವಲಯ ವಿಲಸಿತ ಪೂಜೆ
ವದವು ಹಂಸೆಗಳಿಪ್ಪ ನದಿಯ ತಡಿಯೊಳು ಪೂಜೆ
ವಿದಳಿತಾಂಬುಜಯುತ ತಟಾಕ ತೀರದ ಪೂಜೆ

ನಿರ್ಜಿತ ನಿವಾತ ನಿಸ್ಸಂಗ ನಿರ್ಮಳ ಪೂಜೆ
ನಿರ್ಜಿತಾನಂಗ ಮಂಗಳಮಯ ಮಹಾ ಪೂಜೆ.'

ಯಾಗಿ, ಪರ್ವತದೊಳಿದ್ದು, ಅಕ್ಕಮಹಾದೇವಿಯವರು, ಶ್ರೀಶೈಲದೊಳಗೆ ಪೊಕ್ಕರೆಂದು ವರ್ಣಿಸಿರುವನು.

ಅಕ್ಕಮಹಾದೇವಿಯವರ, "ಕದಳಿಯ ಬನದಲ್ಲಿ ಭವಹರನ ಕಂಡೆನು." ಈ ವಾಕ್ಯಕ್ಕೆ ನಾವು ಮಾಡಬಹುದಾದ ಅನೇಕ ಅರ್ಥಗಳಲ್ಲಿ, ಒಂದು ಅರ್ಥವನ್ನು ಸೂಚಿಸುವದಕ್ಕೆ,

"ಕದಳಿಯ ಬನವೆಲ್ಲ,
ನೀವೇ.

ಕದಳಿಯ ಬನದೊಳಗಿನ,
ವಿದಳಿತಾಂಬುಜಯುತ ತಟಾಕವು,
ತಿಳಿಗೊಳವು,
ಪರಿವ ನಿರ್ಮಲ ತರಂಗಿಣಿಯು,
ನೀವೇ.

ಕದಳಿಯ ಬನದೊಳಗಿನ,
ಲತೆಗಳು,
ಪುಷ್ಪವಾಟಿಗಳು,
ಬಾಳೆ ಸಹಕಾರ ಮುಂತಾದ ದೇವತರುಗಳು
ನೀವೇ.

ಕದಳಿಯ ಬನದಲ್ಲಿ,

ಚಿಲಿಮಿಲಿ ಎಂದೋದುವ ಗಿಳಿಗಳು
ಮಾಮರದ ಎಳೆತಳಿತದಲ್ಲಿ ಸ್ವರಗೈಯುವ ಕೋಗಿಲೆಗಳು,
ಪರಿಮಳದ ಪುಷ್ಪಕ್ಕೆಳಿಸಿ ಬಂದಾಡುವ ತುಂಬಿಗಳು.
ಕೊಳನ ತಡಿಯೊಳಾಡುವ ಹಂಸೆಗಳು,
ಗಿರಿ-ಗಂಹ್ವರದೊಳಾಡುವ ನವಿಲುಗಳು
ನೀವೆ.

ಕದಳಿಯ ಬಸದಲ್ಲಿ,
ಶ್ರೀಗಿರಿಯ ಸ್ವರ್ಗಕ್ಕೈಹಾರಿಸುವ ಶಿಖರಗಳ ಮೇಲೆ
ಅಲೆದಾಡುವ, ಹುಲ್ಲೆ ಸಾರಂಗ ಮುಂತಾದ ಮೃಗವೃಂದವು,
ನೀವೇ.

ಭಾವದಲ್ಲಿ ತಮ್ಮ ನಿಜದ ನೆಲೆಯನರಿವುತ್ತ
ಸುಜ್ಞಾನ ಸತ್ಕ್ರಿಯಾ ಸುನೀತಿ ಸುಮಾರ್ಗದಲ್ಲಿ ವರ್ತಿಸುವ,
ಪಾತಾಲಗಂಗೆಯಲ್ಲಿ ಮಿಂದು
ಜ್ಯೋತಿರ್ಲಿಂಗಕ್ಕೆ ದೃಷ್ಟಿಯಿಟ್ಟು
ಕದಳಿಯ ಬನದೊಳು ಸುಳಿಯುವ,
ಅನುಭಾವಿಗಳು,

'ತಲೆಯ ಮೇಲೆ ಎಳೆವೆಳದಿಂಗಳುಳ್ಳ'
ಚನ್ನಮಲ್ಲಿಕಾರ್ಜುನಾ,
ನೀವೇ. ”

ಎಂದು ಒಂದು ವಾಕ್ಯವನ್ನು ವಿಶೇಷವಾಗಿ ಅಕ್ಕಮಹಾದೇವಿಯವರ ಮತ್ತು ಹರಿಹರನ ಶಬ್ದಗಳಲ್ಲಿ ರಚಿಸಬಹುದು.

---

ಭಾವಃ— ವಚನಕಾರನು ಭಿಕ್ಷೆಯನ್ನು ತಿರಸ್ಕರಿಸುತ್ತ ಭಿಕ್ಷೆಬೇಡು ವರ ಜೀವನವನ್ನು ಮರೆತು ಒರಗಿರುವುದೇ ಮಾರಿ ಎಂದು ಹೇಳಿದ್ದಾನೆ. ಭಿಕ್ಷೆ ಎಂಬ ಮರನೆಯನ್ನು ಹರಿದಲ್ಲಿ ಮೋಕ್ಷವೆಂದು ಹೇಳುತ್ತಾನೆ. ಈ ವಚನದಲ್ಲಿ ತಾನು ಪೂಜಿಸುವ ಮಾರಿ ಆವುದೆಂಬುದನ್ನು ವಚನಕಾರನು ಹೇಳಿದ್ದಾನೆ.

(೮) ಬ್ರಹ್ಮಂಗೆ ಸರಸ್ವತಿಯಾಗಿ ಜಿಹ್ವೆಲಿ ಬಂದಳು ಮಾಯೆ. ವಿಷ್ಣುವಿಂಗೆ ಲಕ್ಷ್ಮಿಯಾಗಿ ಭವಕ್ಕೆ ತಿರುಗಿಸಿದಳು ಮಾಯೆ. ರುದ್ರಂಗೆ ಉಮಾದೇವಿಯಾಗಿ ಶಿರತೊಡೆಯಲ್ಲಿ ಕಾಡಿದಳು ಮಾಯೆ. ಎಳ್ಳಿಗೆ ಎಣ್ಣೆ ಮುಳ್ಳಿಗೆ ಮೊನೆಯಾಗಿ ಹೂವಿಗೆ ಗಂಧವಾಗಿ ಆವರವರಂಗದಲ್ಲಿ ಹಿಂಗದೆ ಪ್ರತಿರೂಪಾಗಿ ಸಂದಿಲ್ಲದೆ ಕಾಡುತ್ತಿದ್ದಾಳೆ ಮಾಯೆ. ಢಕ್ಕೆಯ ಉಲುಹು ಅಡಗುವವಕ್ಕೆ ಮುನ್ನವೇ ನಿಶ್ಚಯಿಸಿಕೊಳ್ಳಿ ಕಾಲಾಂತಕ ಭೀಮೇಶ್ವರ ಲಿಂಗವನರಿಯಬಲ್ಲಡೆ.

ಭಾವಃ— ನಾನು ಸಾಯುವವರೆಗೂ ಕಾಯಕ ಮಾಡುವೆನು. ಕಾಯಕ ಮಾಡುತ್ತ ಸತ್ತುಹೋಗುವ ಮೊದಲೇ ಪರಮಾತ್ಮನನ್ನು ಅರಿತುಕೋ ಎಂದು ವಚನಕಾರನು ತನಗೆ ಹೇಳಿಕೊಳ್ಳುತ್ತಿದ್ದಾನೆ.

(೯) ಮಹಾ ಕಾಳಂಧರ ಹಿಂಗಿ ಮಹಾದೇವನ ಮರೆದವರಿಗೆ ಮಾಯಾಂಗನೆ ಮಾರಿಯಾದಳು. ಸತ್ಕ್ರಿ ಸಜ್ಞಾನ ಯುಕ್ತಿಯಿಂದ ಸದಾಶಿವನನರಿಯಲಾಗಿ ಉಮಾದೇವಿಯಾದಳು. ಇಂತೀ ಗುಣವ ಮರೆದಡೆ ಮಾಯೆಯಾಗಿ ಅರಿದಡೆ ಸಮವಾಗಿ ತನಗನ್ಯ ಭಿನ್ನವಿಲ್ಲದೆ ಢಕ್ಕೆಯ ಉಲುಹು ಅಡಗುವುದಕ್ಕೆ ಮೊದಲೇ ಕಾಲಾಂತಕ ಭೀಮೇಶ್ವರ ಲಿಂಗವನರಿಯಬೇಕು.

ಭಾವಃ— ಇದರಲ್ಲಿ ವಚನಕಾರನು ಮಹಾದೇವನನ್ನು ಮರೆದಲ್ಲಿ ಮಾರಿಯು, ಮರೆಯದಿದ್ದರೆ ಉಮಾದೇವಿಯು ಎಂದು ಹೇಳಿದ್ದಾನೆ. ಅವನು ಮಾರಿಯು ತನಗನ್ಯ ಭಿನ್ನವಿಲ್ಲವೆಂದು ತಿಳಿಯುತ್ತೇನೆ, ಹೀಗೆ ತಿಳಿದುಕೊಂಡು ಢಕ್ಕೆಯ ಉಲುಹು ಅಡಗುವದಕ್ಕೆ ಮುನ್ನವೇ ನಾನು ಸಾಮರಸ್ಯವನ್ನು ಹೊಂದುತ್ತೇನೆಂದು ಹೇಳುತ್ತಾನೆ.

(೧೦) ಮಾಯಾಗುಣ ರೂಪಾದಲ್ಲಿ ಮಲಕ್ಕೊಡಲಾಯಿತ್ತು. ಮಲಸ್ವರೂಪಾಗಿ ನಿಂದಲ್ಲಿ ಬಲವಂತರೆಲ್ಲರು ಮಲದ ಬೆಂಬಳಿಯಲ್ಲಿ ಮರುಳಾದರು.

ಮರುಳಾಟದಲ್ಲಿ ಮಾರಿ ಒಲವರವಾಗಿ ಮನಶುದ್ಧವಿಲ್ಲದವರ ಮನೆ ಮನೆಯಲ್ಲಿ ವಿಕಾರವ ಮಾಡುತ್ತಿದ್ದಾಳೆ. ಮಾರಿಯ ಮುರಿದು ದ್ವಾರಾವತಿಯ ಕೆಡಿಸಿ .•ಕೈಯ್ಯ ಢಕ್ಕೆಯ ಗತಿ ಹಿಂಗಿ ಮಾಯೆಯ ಬಾಗಿಲ ಭ್ರಾಂತಿಯ ಬಿಟ್ಟಲ್ಲಿ ಕಾಲಾಂತಕ ಭೀಮೇಶ್ವರ ಲಿಂಗವನರಿವುದು.

(೧೧) ಸ್ಥೂಲಮಯ ಸೂಕ್ಷ್ಮಮಯ ಕಾರಣಮಯಂಗಳಲ್ಲಿ ಇಷ್ಟ ಪ್ರಾಣ ಭಾವಂಗಳಲ್ಲಿ ಉಚಿತವನರಿದು ಮಾಡುವುದೇ ಯೋಗ. ಆ ಯೋಗವ ಪ್ರಯೋಗಿಸಿ ನಿಂದಲ್ಲಿ ಕಾಲಾಂತಕ ಭೀಮೇಶ್ವರ ಲಿಂಗದಲ್ಲಿ ಉಭಯವಳಿದ ಭಾವ.

ಇಲ್ಲಿ ಉದಹರಿಸಿದ ವಚನಗಳ ಮೇಲಿಂದ ಢಕ್ಕೆಯ ಮಾರಯ್ಯನ್ನು ಕೇವಲ ಶಿವಾನುಭವಿಯಾಗಿ ಢಕ್ಕೆಯನ್ನು ಬಾರಿಸುತ್ತ ಮಾರಿಯನು ಕುಣಿಸುವ ಕಾಯಕವನ್ನು ಮಾಡುತ್ತಿದ್ದನೆಂಬುದು ಸ್ಪಷ್ಟವಾಗುತ್ತದೆ. ಅವನು ತ್ರಿಲಿಂಗಗಳ ಆಚರಣೆಯನ್ನು ಬಲ್ಲವನಾಗಿದ್ದನೆಂತಲೂ ಅವನು ಕಾಯಕಕ್ಕೋಸ್ಕರ ಇಟ್ಟುಕೊಂಡ ಮಾರಿಯನ್ನು ಸಾಮಾನ್ಯ ಜನರು ಭಾವಿಸುತ್ತಿರುವಂತೆ ಭಾವಿಸುತ್ತಿದ್ದಿಲ್ಲವೆಂತಲೂ ಲಿಂಗಾನುಭವಕ್ಕೋಸ್ಕರ ಅಂತರಂಗದ ಕುರುಹನ್ನಾಗಿ ಇಟ್ಟುಕೊಂಡಿದ್ದನೆಂತಲೂ ತೋರಿಬರುತ್ತದೆ.

ಢಕ್ಕೆಯ ಮಾರಯ್ಯನು ಶಂಕರದಾಸಿಮಯ್ಯನ ಸಮಕಾಲೀನನಾದುದರಿಂದ ಅವನು ೧೧ ನೇ ಶತಮಾನದ ಮಧ್ಯದಲ್ಲಿರಬೇಕು. ಆದುದರಿಂದ ಅವನು ಬಸವೇಶ್ವರನಕಿಂತಲೂ ಒಂದು ನೂರು ವರ್ಷ ಮೊದಲಿನವನಾಗುತ್ತಾನೆ. ಅವನಿದ್ದ ಗ್ರಾಮವು ಶಂಕರದಾಸಿಮಯ್ಯನಿದ್ದ ಕಂದಗಲ್ಲು ಇರಬಹುದೆಂದು ನಾವು ಊಹಿಸಬಹುದಾಗಿದೆ. ಈ ಕಂದಗಲ್ಲು ವಿಜಾಪುರ ಜಿಲ್ಲಾ ಹುನಗುಂದ ತಾಲೂಕಿನಲ್ಲಿರುವ ಇಲಕಲ್ಲ ಗ್ರಾಮದಿಂದ ಪೂರ್ವ ದಿಕ್ಕಿಗೆ ೧೦-ಮೈಲುಗಳ ಮೇಲೆ ಇರುತ್ತದೆ.

---

# ಗಾಣದ ಕನ್ನಪ್ಪ

ಗಾಣದ ಕನ್ನಪ್ಪನೆಂಬ ಶಿವಶರಣನು ಕಲ್ಯಾಣ ಪಟ್ಟಣವಲ್ಲಿ ವಾಸ ಮಾಡಿಕೊಂಡಿದ್ದನು. ಅವನ ಹೆಂಡತಿಯ ಹೆಸರು ರೇಚವ್ವೆ. ಉಭಯತರು ಶಿವಭಕ್ತಿ ಸಂಪನ್ನರು. ಅವರು ಕಲ್ಯಾಣ ಪಟ್ಟಣದಲ್ಲಿ ಬಸವೇಶ್ವರನ ಸನ್ನಿಧಿಯಲ್ಲಿ ನಡೆಯುತ್ತಿದ್ದ ಶಿವಾನುಭವ ಸಗ್ಗೋಷ್ಠಿಗಳನ್ನು ಕೇಳಿ ಲಿಂಗಭಕ್ತಿಯುಳ್ಳವರಾಗಿ ಷಟ್‌ಸ್ಥಲಾಚರಣೆಯಲ್ಲಿ ನಿರತರಾಗಿದ್ದರು. ಆದರೆ ಉಭಯತರು ಗುಪ್ತಭಕ್ತಿಯುಳ್ಳವರು. ಆದ್ದರಿಂದ ಅವರ ಭಕ್ತಿಯು ಎಷ್ಟು ಗಾಢವಾಗಿದ್ದಿತೆಂಬುದನ್ನು ಯಾರೂ ಅರಿತಿರಲಿಲ್ಲ. ಗಾಣದ ಕನ್ನಪ್ಪನು ಶಿವಾನುಭವ ಮಂಟಪದಲ್ಲಿ ನಡೆಯುತ್ತಿದ್ದ ಚರ್ಚೆಗಳನ್ನು ಯಾವಾಗಲೂ ಕೇಳುವವನಾದ್ದರಿಂದ ಅವನು ತನ್ನ ಅನುಭಾವಗಳನ್ನು ಕುರಿತು ವಚನಗಳನ್ನು ರಚಿಸುವವನಾದನು. ಈ ಕಾಲದಲ್ಲಿ ಶಿವಾನುಭವ ಮಂಟಪದಲ್ಲಿ ಅತ್ಯಂತ ಮನ್ನಣೆಯನ್ನು ಹೊಂದಿ ಎಲ್ಲರಿಗೂ ಮಾರ್ಗದರ್ಶಿಯಾದವನು ಅಲ್ಲಮ ಪ್ರಭುವು. ಆದ್ದರಿಂದ ಗಾಣದ ಕನ್ನಪ್ಪನು ಅಲ್ಲಮ ಪ್ರಭುವಿನ ಹೆಸರಿನಿಂದಲೇ ತನ್ನ ವಚನಗಳನ್ನು ರಚಿಸಿದ್ದಾನೆ. ಅವನ ವಚನಗಳ ಮುದ್ರಿಕೆಯು 'ಗುಹೇಶ್ವರನ ಶರಣ ಅಲ್ಲಮ' ಎಂಬುದಾಗಿದೆ. ಹೀಗೆ ಕನ್ನಪ್ಪನು ಅನೇಕ ವರ್ಷ ಪರ್ಯಂತರ ಕಲ್ಯಾಣಪಟ್ಟಣದಲ್ಲಿ ವಾಸವಾಗಿದ್ದನು.

ಕನ್ನಪ್ಪನು ನಿತ್ಯಮಾಡುವ ಕಾಯಕವು ಮೀನು ಹಿಡಿಯುವದೇ ಆಗಿತ್ತು. ಅವನು ದಿನಾಲು ಮುಂಜಾವಿನಲ್ಲೆದ್ದು ಲಿಂಗಪೂಜಾದಿ ಕ್ರಿಯೆಗಳನ್ನು ತೀರಿಸಿಕೊಂಡು ಗಾಣವಲೆ ಬೀಸುವಲೆ ಮೊದಲಾದ ಬಲೆಗಳನ್ನು ತೆಗೆದುಕೊಂಡು ತ್ರಿಪುರಾಂತಕೇಶ್ವರನ ಕೆರೆಯಲ್ಲಿ ಮೀನುಗಳನ್ನು ಹಿಡಿಯುತ್ತ ಕುಳ್ಳಿರುವನು. ಹೀಗೆ ಮೀನುಗಳನ್ನು ಹಿಡಿದು ಅವುಗಳನ್ನು ಪೇಟೆಯಲ್ಲಿ ವಿಕ್ರಯಿಸಿ ಬಂದ ಲಾಭವನ್ನು ಜಂಗಮರಿಗೆ ನೀಡಿ ವೀರಶೈವ ಧರ್ಮದ ಪ್ರಕಾರ ಮಾರ್ಗ ಕ್ರಿಯಾಚರಣೆಯನ್ನು ಪಾಲಿಸುತ್ತ ಬಂದನು. ಹೀಗಿರಲು ಒಂದು ದಿವಸ ಅವನ ಮನಸ್ಸಿನಲ್ಲಿ ತನ್ನ ಮನೆಯಲ್ಲಿ ಗಣಪರ್ವವನ್ನು ಮಾಡಬೇಕೆಂಬ ಅಭಿಲಾಷೆಯುಂಟಾಯಿತು. ಆ ದಿನ ಅವನು ತನ್ನ ಲಿಂಗ ಪೂಜೆಯಲ್ಲಿ ರತನಾಗಿ ಕುಳಿತಿರಲು ಆ ಸಮಯದಲ್ಲಿ—ನಿನಗೇನು ಬೇಕು ಬೇಡು ಎಂಬ ಶಬ್ದಗಳು ಅವನ ಕಿವಿಗೆ ತಾಕಿದಂತಾದವು. ಆಗ ಅವನು

ನನಗೊಂದು ಸ್ವರ್ಣಮತ್ಸ್ಯವನ್ನು ಕೊಡುವುದು ಎಂದು ಉಚ್ಚರಿಸಿದನು. ಹಾಗೆಯೇ ಆಗಲೆಂಬ ಶಬ್ದಗಳನ್ನು ಅವನು ಪುನಃ ಕೇಳಿ ತ್ರಿಪುರಾಂತಕೇಶ್ವರನ ಕೆರೆಗೆ ಬಂದು ಬಲೆ ಹಾಕಿರಲು ಅವನ ಗಾಳಕ್ಕೆ ಒಂದು ನಿಜವಾದ ಹೇಮದ ಮತ್ಸ್ಯವೇ ತಗುಲಿಬಂದಿತು! ಅವನು ಅದನ್ನು ಸಂತೋಷದಿಂದ ತೆಗೆದುಕೊಂಡು ಪೇಟೆಗೆ ಬಂದು ಮಾರಲು ಅವನಿಗೆ ಅದರಿಂದ ಭಾರೀ ಹಣವು ದೊರೆಯಿತು. ಆಗ ಅವನು ಶಿವಾನುಭವ ಮಂಟಪಕ್ಕೆ ಹೋಗಿ ಅಲ್ಲಿದ್ದ ಚರಮೂರ್ತಿಗಳಿಗೆ ತನ್ನ ಮನೆಗೆ ಆ ದಿನ ಪ್ರಸಾದಕ್ಕೆ ಬರಬೇಕೆಂದು ಬಿನ್ನಹಮಾಡಿ ಮನೆಗೆ ಬಂದನು.

ಭೋಜನ ಸಮಯವಾಯಿತು. ಆಗ ಬಹು ಜನ ಜಂಗಮರು ಅವನ ಮನೆಗೆ ಬರಹತ್ತಿದರು. ಅಲ್ಲಿ ಅವರು ಬಂದು ನೋಡುತ್ತಾರೆಯೇ ಅವನ ಅಂಗಣದಲ್ಲಿ ಸತ್ತ ಮೀನುಗಳೇ ಬಿದ್ದಿದ್ದವು. ಎಲ್ಲೆಲ್ಲಿಯೂ ದುರ್ಗಂಧವೇ ಮುಸುಕಿ ಹೋಗಿತ್ತು. ಅದನ್ನು ಅವರು ನೋಡಿ ಹೇಸಿ ಹೊರಗಿನಿಂದಲೇ ಹೊರಟುಹೋಗಿ ಬಸವೇಶ್ವರನ ಮನೆಗೆ ಬಂದರು. ಕನ್ನಪ್ಪನು ಮನೆಯೊಳಗಿಂದ ಹೊರಗೆ ಬರುವಷ್ಟರಲ್ಲಿ ಜಂಗಮರೆಲ್ಲರೂ ಹೋಗಿಬಿಟ್ಟುದನ್ನು ನೋಡಿ ಅವರನ್ನು ಕರೆತರಲು ಬಸವನ ಮಂದಿರಕ್ಕೆ ಬರಲು ಅವರು ಅವನಿಗೆ—ನೀನೆಲ್ಲಿಯ ಭಕ್ತ? ನಿನ್ನ ವಿಭೂತಿ ರುದ್ರಾಕ್ಷಿ ಲಿಂಗವನ್ನು ನೋಡಿ ನಂಬಿ ಬಂದೆವು. ಇನ್ನು ಮೇಲೆ ನಿನ್ನ ಮನೆಗೆ ನಾವು ಬಾರೆವು ಎಂದು ಹೇಳಿ ಅವರು ಅವನ ಲಿಂಗವನ್ನು ಕಿತ್ತು ಅವನನ್ನು ಹೊರಗೆ ಹಾಕಿದರು.

ಮುಂದೆ ಆ ಜಂಗಮರು ಬಸವೇಶ್ವರನ ಅರಮನೆಯಲ್ಲಿ ಭೋಜನಕ್ಕೆ ಕುಳಿತುಕೊಂಡು ಲಿಂಗಾರ್ಚನೆ ಮಾಡುತ್ತಿರುವಾಗ್ಗೆ ಅವರು ತಮ್ಮ ಲಿಂಗಸಜ್ಜೆಗಳನ್ನು ನೋಡುತ್ತಾರೆಯೇ, ಅವುಗಳಲ್ಲಿ ಲಿಂಗವಿರಲಿಲ್ಲ! ಆಗ ಅವರು ಅಂಜಿ ಜರ್ಜರಿತರಾದರು. ಬಸವೇಶ್ವರನು ಅವರಿಂದ ನಡೆದ ಸಂಗತಿಗಳನ್ನೆಲ್ಲ ತಿಳಿದುಕೊಂಡು— ಶಿವನು ಸರ್ವತೋಮುಖನಾಗಿದ್ದಾನೆ. ಈ ಜಂಗಮರು ತಪ್ಪು ಮಾಡಿದ್ದಾರೆಂದು ತಿಳಿದು ಅವನು ತಾನಾಗಿಯೇ ಗಾಣದ ಕನ್ನಪ್ಪನ ಮನೆಗೆ ಬಂದು ಅವನಿಗೆ ಜಂಗಮರು ನಿನ್ನ ಲಿಂಗವನ್ನು ಕಸೆದು ಅಪರಾಧ ಮಾಡಿದ್ದಾರೆ. ಅವರನ್ನು ಕ್ಷಮಿಸಿ. ಅವರ ಲಿಂಗವನ್ನು ಅವರಿಗೆ ಕೊಡಬೇಕೆಂದು ಅವನಿಗೆ ನಮಸ್ಕರಿಸಿದನು. ಆಗ ಕನ್ನಪ್ಪನು ಜಂಗ

ಮರು ನನ್ನ ಲಿಂಗವನ್ನು ಕಸೆದಿದ್ದರ ಪರಿಣಾಮವಾಗಿ ಅವರಿಗೆ ಹೀಗಾಗಿ ರಬೇಕೆಂದು ಊಹಿಸಿ—ನಾನು ಈಗ ತ್ರಿಪುರಾಂತಕೇಶ್ವರನ ಕೆರೆಗೆ ಹೋಗುವೆನು. ಅಲ್ಲಿಗೆ ಲಿಂಗಗಳನ್ನು ಕಳೆದುಕೊಂಡ ಜಂಗಮರೆಲ್ಲರಿಗೂ ಬರ ಹೇಳೆಂದು ಬಸವೇಶ್ವರನಿಗೆ ಹೇಳಿ- ತಾನು ಕೆರೆಯ ತಡಿಯಲ್ಲಿ ಬಂದು ಶಿವ ನನ್ನು ಧ್ಯಾನಿಸಹತ್ತಿದನು. ಅಷ್ಟರಲ್ಲಿ ಲಿಂಗವನ್ನು ಕಳೆದುಕೊಂಡ ೩೬ ಜನ ಜಂಗಮರು ಅಲ್ಲಿಗೆ ಬರಲು ಕನ್ನಪ್ಪನ ಧ್ಯಾನದ ಮೂಲಕ ಅವರ ೩೬ ಲಿಂಗಗಳು ಕೆರೆಯ ನೀರಿನ ಮೇಲಿನಿಂದ ಹರಿದು ಬರಹತ್ತಿದವು! ಅವುಗಳನ್ನು ಅವರು ತಿರುಗಿ ತೆಗೆದುಕೊಂಡು—ಕನ್ನಪ್ಪನೇ ನಾವು ನಿನಗೆ ಅಪರಾಧ ಮಾಡಿದೆವು. ನೀನೇ ನಿಜವಾದ ಶರಣನು. ನೀನೇ ನಮ್ಮ ಗುರುವು ಎಂದು ಸ್ತುತಿಸುತ್ತ ಮರಳಿ ಹೋದರು.

ನಮ್ಮ ಹತ್ತಿರ ಗಾಣದ ಕನ್ನಪ್ಪನ ೧೦ ವಚನಗಳು ಮಾತ್ರ ಇವೆ. ಅವುಗಳಲ್ಲಿ ಕೆಲವುಗಳನ್ನು ಮಾತ್ರ ಇಲ್ಲಿ ಉದಹರಿಸುತ್ತೇವೆ.

(೧) ತನ್ನ ತಾ ಬೀಳುವುದು ಕಂಡು ತಳ್ಳಿ ಹಗೆಯಾಗಲೇಕೆ? ಒಡೆದುದ ಕಂಡು ಒಡೆಯರಿ ಎನಲೇಕೆ? ಇರಿ ಬಿಡು ಮುಡಿಯನರಿಯನರಿಯದೆ ಒಡೆಯರೆಂದು ಕೊಡುವ ಕಾಲ ಪಳಿಹಕ್ಕೆ ಇವರರೊಡೆಯರಲ್ಲದೆ ಅಸಮಾಕ್ಷರಲ್ಲ. ಇಂತೀ ಗಸಣಿಗಿನ್ನೇವೆ ಕನ್ನಯ್ಯ ಪ್ರಿಯ ಗುಹೇಶ್ವರ ಶರಣ ಅಲ್ಲಮ.

ಇದು ಅಶುದ್ಧವಾಗಿದೆ. ಅರ್ಥವು ಅಸ್ಪಷ್ಟವಾಗಿದೆ. ಆದರೆ ಇದರ ಮುದ್ರಿಕೆಯಲ್ಲಿ ಕನ್ನಯ್ಯ ಪ್ರಿಯ ಎಂದಿರುವದರಿಂದ ಈ ವಚನವು ಗಾಣದ ಕನ್ನಪ್ಪನದೆಂದು ಸಿದ್ಧವಾಗುತ್ತದೆ.

(೨) ಗಾಣವ ಹಾಕಲಾಗಿ ಆರಾರ ಸಿಕ್ಕಿದರು? ಆರೈಕೆಗೊಳ್ಳಯ್ಯ. ಐದಕ್ಕೊಂದು ಹೋಗಿ ನಾಲ್ಕರಲ್ಲಿ ನಾಚಿಕೆಗೆಟ್ಟ. ಜಗದಾಸೆಯ ಬಯಕೆಯಿಂದ ದಶಾವತಾರವಾದ. ಇಷ್ಟರ ಇಂದ್ರಿಯಕ್ಕಾಗಿ ಪಾಶವ ಹೊತ್ತ ತಲೆಯಲ್ಲಿ. ಇಂತೀ ವೇಷಧಾರಿ ಹಾಕಿದ ಗಾಣದಲ್ಲಿ ಯಷ್ಟಕ್ಕೆ ಸಿಕ್ಕಿ ಘಾಸಿಯಾದರು. ಇನ್ನೀಸುವವರಾರಯ್ಯ ಗುಹೇಶ್ವರನ ಶರಣ ಅಲ್ಲಮನಲ್ಲದೆ?

ಇದರಲ್ಲಿ ವಚನಕಾರನು ತನ್ನ ಗಾಣ ಹಾಕುವ ಕಾಯಕವನ್ನು ಕುರಿತು ಹೇಳಿದ್ದಾನೆ. ಗಾಣವೆಂದರೆ ಗಾಣಿಗರು ಉಪಯೋಗಿಸುವ ಗಾಣವಿರದೆ ಮೀನು ಬಲೆಗಾರರು ಹಾಕುವ ಬಲೆ ಎಂಬ ಅರ್ಥವು ಈ ಶಬ್ದಕ್ಕೆ ಇದೆ.

(೩) ನಾ ಬಂದುದಕ್ಕೆ ಮಾಡಿದೆ. ನೀ ಕಳುಹಿದವರ ಕೊಂದೆ, ಬಂದೆ. ನೀವಿರಿಸಿದಂತಿದ್ದು ಎನಗಿನ್ನು ಬಂಧ ಮೋಕ್ಷವೇಕೆ? ಕನ್ನಯ್ಯ ಪ್ರಿಯ ಗುಹೇಶ್ವರನ ಶರಣ ಅಲ್ಲಮನಲ್ಲಿ ಲೇಪವಾದವಂಗೆ?

ಉಳಿದ ವಚನಗಳಲ್ಲಿ ಗೂಢಾರ್ಥಗಳಿದ್ದು ಅವು ಬಹು ಅಸ್ಪಷ್ಟವಾಗಿವೆ. ಆದ್ದರಿಂದ ಅವುಗಳನ್ನು ನಾವು ಇಲ್ಲಿ ಉದಹರಿಸುವದಿಲ್ಲ.

ಶಿವಶರಣರೆಲ್ಲರೂ ಅಹಿಂಸಾಚಾರಿಗಳು. ಆದರೆ ಶಿವಶರಣರಲ್ಲಿ ಮೂವರು ಇದಕ್ಕೆ ಅಪವಾದಗಳಾಗಿದ್ದಾರೆ. ಶ್ವಪಚಯ್ಯ, ತೆಲುಗು ಜೊಮ್ಮಯ್ಯ ಮತ್ತು ಗಾಣದ ಕನ್ನಪ್ಪ ಇವರು ಇದ್ದಾರೆ. ಇವರೆಲ್ಲರೂ ಶಿವಶರಣರಲ್ಲಿ ಶ್ರೇಷ್ಠ ಸ್ಥಾನವನ್ನು ಹೊಂದಿದವರು. ಶ್ವಪಚಯ್ಯನು ಬಸವೇಶ್ವರನಕಿಂತಲೂ ಬಹಳ ಹಿಂದಿನವನು. ತೆಲುಗು ಜೊಮ್ಮಯ್ಯನು ಅವನಕಿಂತ ೬೦-೭೦ ವರ್ಷ ಮೊದಲು ಇದ್ದವನು. ಆದರೆ ಗಾಣದ ಕನ್ನಪ್ಪನು ಅವನ ಸಮಕಾಲೀನನು. ಇದೊಂದು ವಿಚಾರಾರ್ಹವಾದ ಸಂಗತಿಯಾಗಿದೆ. ಒಂದು ಧರ್ಮವು ಪ್ರಸಾರ ಹೊಂದುವ ಕಾಲದಲ್ಲಿ ಅನೇಕ ರೀತಿ ನಡೆಗಳುಳ್ಳ ಸಮಾಜಗಳ ಜನರು ಅದರಲ್ಲಿ ಬಂದು ಸೇರ್ಪಡೆಯಾಗುವದುಂಟು. ಅವರು ತಮ್ಮ ಪೂರ್ವದ ಪದ್ಧತಿಗಳನ್ನು ಕೂಡಲೇ ಬಿಡುವದಿಲ್ಲ. ಆದರೆ ಅವರು ಶುದ್ಧ ಮನಸ್ಸುಳ್ಳವರು. ಇಂಥವರನ್ನು ಧರ್ಮಸ್ಥಾಪನೆಯ ಆರಂಭದ ಕಾಲದಲ್ಲಿ ಉಪೇಕ್ಷಿಸದೆ ಅವರಿಗೂ ಬೋಧೆಮಾಡಿದ್ದು ಕಂಡುಬರುತ್ತದೆ. ಅವರನ್ನು ಸಮಾಜದಲ್ಲಿ ತೆಗೆದುಕೊಂಡು ಅವರಲ್ಲಿ ತಮ್ಮ ರೀತಿ ನಡೆಗಳನ್ನು ತಿಳುಹಿಸುತ್ತ ಹೋಗಿ ಅವರನ್ನು ಸರಿಯಾದ ಹಾದಿಗೆ ಹಚ್ಚಿರಬಹುದೆಂದು ತೋರುತ್ತದೆ. ಆದ್ದರಿಂದ ವೀರಶೈವರಿಗೆ ಹೊರತಾದ ಆಚಾರಗಳನ್ನು ಪಾಲಿಸುವಂಥ ಶಿವಶರಣರ ಉದಾಹರಣೆಗಳು ಅಲ್ಲಲ್ಲಿ ದೊರಕುತ್ತವೆ. ಆದರೆ ಅವು ಪೂರ್ವಾಶ್ರಮದಲ್ಲಿ ಆದವುಗಳಿರಬಹುದು. ಆದುದರಿಂದ ಶರಣರು ಇಂಥ ನಡೆಗಳನ್ನೂ ಕೆಲವು ಕಾಲ ಉಪೇಕ್ಷಿಸಿಯೂ ಬಿಟ್ಟಿರಬಹುದು. ತಮಿಳುದೇಶದ ೬೩ ಪುರಾತನರ ಚರಿತ್ರೆಗಳಲ್ಲಿಯೂ ಕೂಡ ಇಂಥ ಸಂಗತಿಗಳು ಕಂಡು ಬರುತ್ತವೆ. ಬೇಡರ ಕನ್ನಪ್ಪನು ಮಾಂಸಾಹಾರಿಯು. ಅತಿ ಭಕ್ತನು ಮೀನು ಬಲೆಗಾರನು. ಆದರೂ ಇವರು ವೀರಶೈವರಿಗೆ ಅತ್ಯಂತ ಪೂಜ್ಯರಾಗಿದ್ದಾರೆ.

---

# ದೀಪದಕಲಿ.

ಕಾಂಚೀಪುರದಲ್ಲಿ ದೀಪದಕಲಿ ಎಂಬ ಶಿವಶರಣನು ವಾಸಮಾಡು ತ್ತಿದ್ದನು. ಅವನು ವೀರಶೈವರಲ್ಲಿ ಶಿವಶರಣನೆಂದು ಯಾವಾಗಲೂ ಬಹಳ ಪ್ರಸಿದ್ಧಿಯನ್ನು ಹೊಂದಿದ್ದಾನೆ. ವ್ಯಾಪಾರಮಾಡಿಕೊಂಡಿರುವದೇ ಅವನ ಕಾಯಕವಾಗಿತ್ತು. ಅವನು ಗುರುಲಿಂಗಜಂಗಮದಲ್ಲಿ ಅತ್ಯಂತ ಭಕ್ತಿಯು ಳ್ಳವನು. ಅವನು ಅನ್ಯದೈವವನ್ನು ಎಂದೂ ಭಜಿಸನು. ಹೀಗಿರುವಲ್ಲಿ ಅವನು ವ್ಯಾಪಾರಕ್ಕೋಸ್ಕರ ಪರಸ್ಥಳಕ್ಕೆ ಹೊರಟನು. ಅವನು ಮಾರ್ಗ ಕ್ರಮಣ ಮಾಡುತ್ತಿರುವಾಗ ಅವನಿಗೆ ಒಂದು ಘೋರಾರಣ್ಯವು ಹತ್ತಿತು. ಅದರೊಳಗಿಂದ ಅವನು ಬಹು ಪ್ರಯಾಸದಿಂದ ಪ್ರಯಾಣಮಾಡುತ್ತ ದಾರಿಯಲ್ಲಿ ಒಂದು ಜೀರ್ಣವಾದ ಶಿವಾಲಯವು ಅವನಿಗೆ ಹತ್ತಿತು. ಅವನು ಅದರಲ್ಲಿರುವ ಲಿಂಗವನ್ನು ಕಂಡು ಭಕ್ತಿಯ ಉದ್ರೇಕದಿಂದ ಶಿವನು ಇಲ್ಲಿ ಏಕಾಕಿಯಾಗಿ ಇರಬಹುದೇ? ಇಲ್ಲಿ ಹುಲಿ ಕರಡಿ ಕಾಡ ಮೃಗಗಳು ಇವೆ, ರಕ್ಕಸ ಮೊದಲಾದ ಶತ್ರುಗಳ ಭಯವಿದೆ, ಎಂದು ಮುಗ್ಧ ಭಕ್ತಿಯಿಂದ ಶಿವನಿಗೋಸ್ಕರ ಚಿಂತೆಮಾಡಹತ್ತಿದನು. ಆಗ ಅವನು ತನ್ನಲ್ಲಿದ್ದ ಚಿನ್ನ ರನ್ನ ಕಂಚು ತಾಮ್ರ ಮೊದಲಾದುವನ್ನು ವಿಕ್ರಯಮಾಡಿ ಆ ದ್ರವ್ಯದಿಂದ ಒಂದು ದೇವಾಲಯವನ್ನು ನಿರ್ಮಿಸಹತ್ತಿದನು. ದೇವಾಲಯದ ಸುತ್ತಲೂ ಒಂದು ಎತ್ತರವಾದ ಆಳವೇರಿಯನ್ನು ಕಟ್ಟಿಸಿದನು. ಅಲ್ಲಿ ಬಹು ಜನ ಸೇವಕ ರನ್ನು ತಂದಿರಿಸಿ ಅವರಿಂದ ಪಹರೆಯನ್ನು ತಿರುಗಿಸಹತ್ತಿದನು. ಅವರು ಬೆಳಗಿನವರೆಗೂ ಪಹರೆಯನ್ನು ತಿರುಗುವರು. ಹೀಗೆ ಕೆಲವು ದಿವಸಗ ಳಾದ ಬಳಿಕ ಅವನಲ್ಲಿದ್ದ ದ್ರವ್ಯವೆಲ್ಲವೂ ತೀರಿಹೋಯಿತು. ಪಹರೆಯ ವರಿಗೆ ಸಂಬಳವನ್ನು ಕೊಡುವದು ಅವನಿಂದ ಆಗಲಿಲ್ಲ. ಆಗ ಅವರೆ ಲ್ಲರೂ ಬಿಟ್ಟು ಹೋಗಲಾಗಿ ತಾನೊಬ್ಬನೇ ಪಹರೆ ತಿರುಗಹತ್ತಿದನು. ರಾತ್ರೆ ಯಲ್ಲಿ ದೀವಟಿಗೆಯನ್ನು ಹತ್ತಿಸಿ ಆಳವೇರಿಯ ಸುತ್ತಲೂ ತಿರುಗುವನು. ಬರ ಬರುತ್ತ ದೀವಟಿಗೆಗೆ ಬೇಕಾಗುವ ಎಣ್ಣೆಯೂ ತೀರಿ ಹೋಯಿತು! ಆಗ ತೈಲವಿಲ್ಲದೆ ಹೋಗಲು ದೀಪದ ಕಲಿಯು ಹಿಂಜರಿಯದೆ ತನ್ನ ಮಸ್ತಕದ ಕೂದಲಿನ ಜಡೆಗಳನ್ನು ಹೆಣೆದು ಅವುಗಳಿಗೆ ಬೆಂಕಿ ಹಚ್ಚಲು ಉದ್ಯುಕ್ತನಾದನು. ಆಗ ಶಿವನು ಅವನ ಭಕ್ತಿಗೆ ಮೆಚ್ಚಿ ಆ ಗುಡಿಯ ಸಹ ವಾಗಿ ದೀಪದ ಕಲಿಯನ್ನು ಕೈಲಾಸಕ್ಕೆ ಕೊಂಡೊಯ್ದನು.

---

# ರಕ್ಕಸ ಬ್ರಹ್ಮಯ್ಯ

ಅಡಿಕಿಹಾಳೆಂಬ[1] ಪುರದಲ್ಲಿ ರಕ್ಕಸ ಬ್ರಹ್ಮಯ್ಯನೆಂಬ ಅಧಿಪತಿಯು ರಾಜ್ಯವಾಳುತ್ತಿದ್ದನು. ಅವನು ತನ್ನ ಗ್ರಾಮದ ಸುತ್ತಲಿದ್ದ ೧೬ ಗ್ರಾಮ ಗಳಿಗೆ ಅಧಿಪತಿಯಾಗಿ ತನ್ನ ರೈತರ ಮೆಚ್ಚುಗೆಯನ್ನು ಸಂಪಾದಿಸಿಕೊಂಡು ಅನ್ಯಾಯವನ್ನು ಮಾಡದೆ ಇರುತ್ತಿದ್ದನು. ಅವನು ಸಂಪೂರ್ಣ ವೀರ ಶೈವಾಚಾರವುಳ್ಳವನಾಗಿ ಅಷ್ಟಾವರಣ ನಿರತನಾಗಿದ್ದನು. ಪಾದೋದಕ ಪ್ರಸಾದಸೇವನೆಯೇ ಅವನ ವೈಶಿಷ್ಟ್ಯವಾಗಿತ್ತು. ಆವನು ರಾಜ್ಯವಾಳುವಲ್ಲಿ ಸಮೀಪದ ಅಧಿಪತಿಗಳೊಡನೆ ಹಗೆತನವನ್ನು ಮಾಡಿ ಅವರ ಮೇಲೇರಿ ಹೋಗಲಿಲ್ಲ. ಹಾಗೆಯೆ ಹೆರವರು ತನ್ನ ಮೇಲೇರಿ ಬಂದರೆ ಅವರನ್ನು ಶೌರ್ಯದಿಂದ ಎದುರಿಸಿ ಓಡಿಸಿಬಿಡುವನು. ಹೀಗೆ ತನ್ನವರನ್ನು ಕಾಪಾ ಡುತ್ತ ಗುರು ಲಿಂಗ ಜಂಗಮ ದಾಸೋಹ ಕಾರ್ಯಗಳಲ್ಲಿ ನಿರತನಾಗಿ ರಾಜ್ಯವಾಳುತ್ತ ಬಂದನು.

ಅವನು ಏಕಲಿಂಗ ನಿಷ್ಠಾಪರನು. ಪರದೈವತವನ್ನು ಎಂದೂ ಭಜಿ ಸನು. ಸ್ಥಾವರಲಿಂಗಗಳನ್ನು ಎಂದೂ ನಂಬನು. ತೀರ್ಥಕ್ಷೇತ್ರಗಳಿಗೆ ಹೋಗನು. ಅವನು ಗುರು ಲಿಂಗ ಜಂಗಮಗಳನ್ನು ವಿಭೂತಿ ಮಂತ್ರ ರುದ್ರಾಕ್ಷಿಗಳಿಂದ ತನ್ನಲ್ಲಿ ಒಳಗುಮಾಡಿಕೊಂಡು ಪಾದೋದಕ ಪ್ರಸಾದ ವನ್ನು ಯಾವಾಗಲೂ ಸೇವಿಸುವನು. ಅವನು ಒಬ್ಬ ಚರಮೂರ್ತಿಯನ್ನು ನೇಮಿಸಿಕೊಂಡು ಅವನೊಡನೆ ಪಾದೋದಕ ಪ್ರಸಾದದ ಆಚರಣೆಗಳನ್ನು ನಡೆಸುತ್ತ ಬಂದನು.

ಹೀಗಿರುತ್ತಿರಲು ಅವನ ನಿಷ್ಠೆಯು ಅತ್ಯಂತವಾಗಿ ಬಲಿಯುತ್ತಲೇ ಹೋಯಿತು. ಅವನು ತನ್ನ ಸಮಯಾಚಾರದ ದೇವರನ್ನು ನೇಮಿಸಿ ಕೊಳ್ಳುವಾಗ ಅವನು ತನ್ನ ಬಿನ್ನಹವನ್ನು ಬಿಟ್ಟು ಯಾವ ಕಡೆಗೂ ಹೋಗಬಾರದು., ಅವನು ತನ್ನಲ್ಲಿಯೇ ಇರಬೇಕು, ಹೀಗೆ ಅವನನ್ನು ನೇಮಿಸಿ ಕಡೆಗೆ ಅವನನ್ನು ತನ್ನಲ್ಲಿಯೇ ಅಡಗಿಸಿಕೊಂಡು ಲಿಂಗಾಂಗ ಸಾಮ ರಸ್ಯವನ್ನು ಹೊಂದಬೇಕೆಂಬ ಅಪೇಕ್ಷೆಯು ಉಂಟಾಯಿತು. ಹಾಗೆ ಒಂದು ವ್ರತವನ್ನು ಮಾಡಿಕೊಂಡು ಒಬ್ಬ ಚರಮೂರ್ತಿಗೆ ತನ್ನ ಈ ರೀತಿಯನ್ನು ತಿಳಿಸಿ ಅವನ ಒಪ್ಪಿಗೆಯನ್ನು ಹೊಂದಿ ಅವನನ್ನು ತನ್ನಲ್ಲಿ ಇಟ್ಟುಕೊಂಡು ಪಾದೋದಕ ಪ್ರಸಾದ ಸೇವನೆಯಲ್ಲಿ ಇರಹತ್ತಿದನು.

---

(೧). ಕೆಲವು ಗ್ರಂಥಗಳಲ್ಲಿ ಕೊಟ್ಟದ ಹೊಳೆ ಎಂದಿದೆ.

ಸಿದ ಲಿಂಗಧಾರಕ ಭಕ್ತರಿಗೆ ಗುರುದೀಕ್ಷೆಯುಂಟಾಗುವದಯ್ಯಾ. ಉಪಾಧಿ ಭಕ್ತಂಗೆ ಗುರುಲಿಂಗ ಜಂಗಮದ ಸದ್ಭಕ್ತಿ ದೊರೆವುದಯ್ಯಾ. ನಿರುಪಾಧಿ ಭಕ್ತಂಗೆ ತ್ರಿವಿಧ ಪಾದೋದಕ ಪ್ರಸಾದ ದೊರೆವುದಯ್ಯಾ. ಸಹಜ ಭಕ್ತಂಗೆ ನಿರ್ವಾಣ ಪದವಾಗುವದಯ್ಯಾ. ನಿರ್ವಾಣ ಭಕ್ತಂಗೆ ನಿಃಕಳಂಕ ಜ್ಯೋತಿರ್ಮಯ ಪರಶಿವಲಿಂಗದಲ್ಲಿ ಕೂಟಸ್ಥನಾಗಿ ನಿರಂಜನ ಜಂಗಮದಲ್ಲಿ ಕೂಡಿ ಹರಗಣ ಸಹನಾಗಿ ನಿರಾವಯವ ಸಮಾಧಿ ತಪ್ಪದು ನೋಡಾ ಕೂಡಲಚನ್ನಸಂಗಮ ದೇವಾ.

---

## ವಿಭೂತಿಧಾರಣ ಸ್ಥಳಗಳು

(೧) ತ್ರಿಪುಂಡ್ರ ಧಾರಣಸ್ಥಾನಂಗಳಲ್ಲಿ ಧರಿಸಬೇಕು. ಆ ಸ್ಥಾನಂಗಳಾವವೆಂದಡೆಃ—

### ೩೨ ಸ್ಥಾನಂಗಳು.

ಮೂರ್ಧ್ನ, ಲಲಾಟ, ಕರ್ಣದ್ವಯ, ನೇತ್ರದ್ವಯ, ಘ್ರಾಣ, ಮುಖ, ಬಾಹುದ್ವಯ, ಭುಜದ್ವಯ, ಮಣಿಬಂಧದ್ವಯ, ಸ್ತನದ್ವಯ, ವಕ್ಷ, ಉದರ, ಪಾರ್ಶ್ವದ್ವಯ, ನಾಭಿ, ಮೇಢ್ರ, ಪಾಯು, ಪೃಷ್ಠ, ಉರುದ್ವಯ, ಜಾನುದ್ವಯ, ಜಂಘದ್ವಯ, ಪಾದದ್ವಯವೆಂಬ ಮೂವತ್ತೆರಡು ಸ್ಥಾನಂಗಳುಃ- ಬಳಿಕ,

### ೧೬ ಸ್ಥಾನಂಗಳು.

ಶಿರಸ್ಸು, ಭಾಳ, ಕರ್ಣಯುಗ್ಮ, ಓಷ್ಠದ್ವಿತೀಯ, ಕಂಠ, ಬಾಹುಯುಗ, ಭುಜಯುಗ, ಮಣಿಬಂಧದ್ವಯ, ಹೃದಯ, ಅಪರ, ನಾಭಿ ಎಂಬ ಹದಿನಾರು ಸ್ಥಾನಂಗಳುಃ—

### ೮ ಸ್ಥಾನಂಗಳು.

ಮಸ್ತಕ, ಅಳಿಕ, ಗ್ರೀವ, ಬಾಹುದ್ವಯ, ಹೃದಯ, ನಾಭಿ, ಪೃಷ್ಠ ಎಂಬ ಎಂಟು ಸ್ಥಾನಂಗಳಿರ್ಪವದರಲ್ಲಿಃ—

## ೧೧ ಸ್ಥಾನಗಳು.

ಶಿರಸ್ಸು, ಲಲಾಟ, ಶ್ರೋತ್ರದ್ವಯ, ಕಂಠ, ಭುಜದ್ವಯ, ವಕ್ಷ, ಪೃಷ್ಠ, ನಾಭಿ, ಸ್ಕಂಧವೆಂಬ ಏಕಾದಶ ಸ್ಥಾನಂಗಳೇ ಮುಖ್ಯವಾಗಿರ್ಪವದರಲ್ಲಿ:—

---

## ವಿಭೂತಿ ಧಾರಣದರ ಪರಿಣಾಮಂಗಳು ಮತ್ತು ಅದರ ಮಹತ್ವ.

೧ ಶ್ರೀಗುರುಲಿಂಗಜಂಗಮರ ದೀಕ್ಷಾಭಸಿತವ ನಂಬುಗೆಯಿಂದ ಅಷ್ಟೈಶ್ವರ್ಯವಿದೆಂದು ಶ್ರೀಗುರು ಸ್ಮರಣೆಯಿಂದ ಲಲಾಟದಲ್ಲಿ ಧರಿಸಿದಾಕ್ಷಣವೇ ವಿಧಿಬರೆದ ಲಿಖಿತವಂ ತೊಡೆದು ಶಿವಲಿಖಿತವ ಲಿಖಿಸುವದಯ್ಯ. ಶ್ರೀಗುರು ಲಿಂಗಜಂಗಮದ ಶಿಕ್ಷಾಭಸಿತವ ಅಷ್ಟವಿಧಸ್ಥಾನ ಷೋಡಶಸ್ಥಾನ ಸ್ಥಾನಗಳಲ್ಲಿ ಧರಿಸಿದವರಿಗೆ ಗುರುತ್ವವ ಕೊಟ್ಟು ಲಿಂಗನಿಷ್ಠಾಪರ ಭಕ್ತಿಯ ತೋರುವದಯ್ಯ. ಶ್ರೀಗುರುಲಿಂಗ ಜಂಗಮದ ದೀಕ್ಷಾ ಶಿಕ್ಷಾಜ್ಞಾನಭಸಿತವ ಸರ್ವಾಂಗದಲ್ಲಿ ಸ್ನಾನ ಧೂಳನವ ಮಾಡಿ ೪ ಸ್ಥಾನಂಗಳಲ್ಲಿ ಸ್ಮರಣೆಯಿಂ ಧರಿಸಿದ ಲಿಂಗಶರಣರಿಗೆ ಸರ್ವಾಚಾರ ಸಂಪತ್ತಿನ ಜಂಗಮಾನುಭಾವವ ತೋರುವದಯ್ಯ. ಸಕಲಕ್ರಿಯೆಗಳಿಗೆ ಈ ಕ್ರಿಯಾ ಚಿದ್ಭಸಿತವೇ ಕಾರಣ ಸ್ವರೂಪವಯ್ಯ. ಸಕಲಾಚಾರಂಗಳಿಗೆ ಈ ಕ್ರಿಯಾ ಚಿದ್ಭಸಿತವೇ ಶುಭ ಕೆಲಸವಯ್ಯ. ಶ್ರೀಗುರುಲಿಂಗ ಜಂಗಮದ ಪಾದೋದಕ ಪ್ರಸಾದ ಕ್ರಿಯಾ ಚಿದ್ಭಸಿತಕ್ಕಿಂತ ಪರವಸ್ತುವಿಲ್ಲ ನೋಡಾ. ಅದೆಂತೆಂದೊಡೆ " ಅನಾದಿ ಶಾಶ್ವತಂಶಾಂತಂ ಚೈತನ್ಯಂ ಚಿತ್‌ಸ್ವರೂಪಕಂ ಚಿದಂಗವ್ಯಷಭಾಕಾರಂ ಚಿದ್ಭಸ್ಮಂ ಲಿಂಗಂ ಸ್ನಾನಯೇತ್ ॥ ಆಪಾದಮಸ್ತಕಂ ಚೈವ ರೋಮರೋಮೋದ್ಭವೇ ಶಿವಂ । ಸ್ವಕಾಯಮುಚ್ಯತೆ ಲಿಂಗಂ ವಿಭೂತಿ ಧೂಳಸಂಭವೇತ್ ॥ ಪ್ರಥಮಂ ಗೂಢಂ ನಿರ್ನಾಮಂ ದ್ವಿತೀಯಂ ಚಿತ್‌ಸ್ವರೂಪಕಂ । ತೃತೀಯಂ ಚಿದ್ವಿಲಾಸಂ ಚ ಚತುರ್ಥಂ ಭಸ್ಮಧಾರಣಾತ್ ॥ ಇಂತೆಂದುದಾಗಿ ಶ್ರೀಗುರು ಲಿಂಗಜಂಗಮದ ಚಿತ್‌ಪ್ರಕಾಶ ಚಿದ್ಭಸಿತವೇ ಪರಾತ್ಪರವಸ್ತು ನೋಡಾ ಸಂಗನಬಸವೇಶ್ವರಾ.

(೨) ಶ್ರೀವಿಭೂತಿಯನೊಲಿದು ಧರಿಸಲು ಸಕಲದುರಿತನಿವಾರಣವ ಮಾಡಿ ಘನ ಸುಖವ ಕೊಡುವುದು ನೋಡಾ. ಪ್ರಣವದ ಬೆಳಗು, ಪಂಚಾಕ್ಷರಿಯ ಕಳೆ, ಪರಮನಂಗದ ರುಚಿ ಶ್ರೀವಿಭೂತಿ ನೋಡಾ. ಶಾಂತಿಯ ನೆಲೆವನೆ, ಸರ್ವರಕ್ಷೆಯ ತವರೆನಿಸಿ ಸಮಸ್ತ ಕಾಮಿತ ಸುಖವೀವುದು ಶ್ರೀ ವಿಭೂತಿ ನೋಡಾ. ಭೂತ ಪ್ರೇತ ಪಿಶಾಚ ಬ್ರಹ್ಮರಾಕ್ಷಸ ಅಪಸ್ಮಾರ ಬಾಧೆಯ ಬಿಡಿಸಿ ನಿಜಸುಖವಿತ್ತು ಸಲಹುವದು ಶ್ರೀವಿಭೂತಿ ನೋಡಾ ನಿಜಗುರುಸ್ವತಂತ್ರ ಸಿದ್ಧಲಿಂಗೇಶ್ವರನೇ ತಾನಾದ ವಿಭೂತಿ ನೋಡಾ.

(೩) ದುರುಳು ಮಾರಿಯ ಹುರುಳುಗೆಡಿಸಿ, ಅಂತಕನ ಹಲ್ಲ ಕಿತ್ತು ವಿಧಿಲಿಖಿತವ ತೊಡೆವುದು ವಿಭೂತಿ. ಪರಮಜ್ಞಾನದ ಸಿರಿಯನಿತ್ತು ಭವವ ಪರಿವುದು ವಿಭೂತಿ. ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ನಿಜಪದದಲ್ಲಿ ರಿಸುವುದು ವಿಭೂತಿಯಯ್ಯ.

(೪) ಪರಮೇಶ್ವರನ ಪರಮೈಶ್ವರ್ಯವೆನಿಪ ನಿತ್ಯ ನಿಜವಾದ ವಿಭೂತಿ ಯನು ಭಕ್ತಿಯಿಂದೊಲಿದು ಧರಿಸಲು ನಿತ್ಯರಪ್ಪರು ನೋಡಿರೇ. ಮುನ್ನ ಜಮದಗ್ನಿ ಕಶ್ಯಪ ಅಗಸ್ತ್ಯ ಮೊದಲಾದ ಋಷಿಗಳು ಸಮಸ್ತ ದೇವತೆ ಗಳು ಮೂರು ಮೂರು ಬಾರಿ ಆಯುಷ್ಯವ ಪಡೆದರೆಂದು ವೇದಂಗಳು ಸಾರುತ್ತಿವೆ. "ತ್ರಿಯಾಯುಷಂಗ ಜಮದಗ್ನಿಃ ಕಶ್ಯಪಸ್ಯ ತ್ರಿಯಾಯುಷಂ। ಅಗಸ್ತ್ಯಸ್ಯ ತ್ರಿಯಾಯುಷಂ । ಯದ್ದೇವಾನಾಂ ತ್ರಿಯಾಯುಷಂ । ತನ್ಮೇ ಯಸ್ತು ತ್ರಿಯಾಯುಷಂ ॥" ಎಂಬವು ಶ್ರುತಿಗಳು. ಇದನರಿದು ಧರಿಸಿರೇ ನಿಜಗುರುಸ್ವತಂತ್ರ ಸಿದ್ಧಲಿಂಗೇಶ್ವರನನೊಲಿಸಬಲ್ಲಡೆ.

(೫) ಪಂಚಗವ್ಯದಿಂದಾದ ಗೋಮಯವ ತಂದೈಸಿ ಪಂಚಾಮೃತ ಸಂಪರ್ಕದಿಂ ಪಂಚಾಕ್ಷರಿಯ ಮಂತ್ರದಿಂದ ಅಭಿವಂದಿಸಿ ಜ್ಞಾನವಹ್ನಿಯಲ್ಲಿ ದಹಿಸಿ ವಿಭೂತಿಯಂ ಸುಕೃತದಿಂದ ತೆಗೆದುಕೊಂಡು ಎಡದ ಹಸ್ತದೊ ಳ್ಪಿಡಿದುಕೊಂಡು ಬಲದ ಹಸ್ತದಿಂ ಮುಚ್ಚಿಕೊಂಡು ಜಲಮಿಶ್ರಮಾಡಿ ಲಲಾಟ ಮೊದಲಾಗಿರ್ದ ದಿವ್ಯಸ್ಥಾನಂಗಳೊಳು ಧರಿಸಿ ಲಿಂಗಾರ್ಚನೆಯ ಮಾಡುವ ಶರಣನಾತನೇ ವೇದವಿತ್ತು ಆತನೇ ಶಾಸ್ತ್ರಜ್ಞ ಆತನೇ ಸದ್ಯನ್ಮುಕ್ತನಯ್ಯ ಸೌರಾಷ್ಟ್ರ ಸೋಮೇಶ್ವರಾ.

(೬) ಪಂಚಬ್ರಹ್ಮದಿಂದುದಯವಾದ ನಂದೆ ಭದ್ರೆ ಸುರಭಿ ಸುಶೀಲ ಸುಮನೆ ಎಂಬ ಪಂಚಗೋವಿನಿಂದಾದ ಭೂತಿ ಭಸಿತ ಭಸ್ಮ ಕ್ಷಾರ ರಕ್ಷೆ

ಎಂಬ ಪಂಚನಾಮವಾಯಿತ್ತು. ಅದೆಂತೆಂದೊಡೆ ಶಿವಜ್ಞಾನಸುಖದ ಮಹ ದೈಶ್ವರ್ಯ ಸ್ವರೂಪಿನಿಂ ಭೂತಿಯಾಯಿತ್ತು. ಸಕಲ ಕಾಂಕ್ಷೆಗಳ ಬಯ ಕೆಯಂ ಸುಟ್ಟ ನಿಃಕಾಮರೂಪಿನಿಂ ಭಸಿತವಾಯಿತ್ತು. ಪೂರ್ವಕರ್ಮವನು ರುಪಿ ನಿಃಕರ್ಮರೂಪಿನಿಂ ಭಸ್ಮವಾಯಿತ್ತು. ಮಲಮಾಯೆಯು ಕಳೆವುದರಿಂ ಕ್ಷರೆಯಾಯಿತ್ತು. ಭೂತ ಪ್ರೇತ ಪಿಶಾಚ ರಾಕ್ಷಸಂಗಳ ಹೊದ್ದಲೀಯ್ಯದಿಪ್ಪ ದರಿಂ ರಕ್ಷೆಯಾಯಿತ್ತು. ಇಂತಪ್ಪ ವಿಭೂತಿಯ ಮಹಾತ್ಮೆಯನರಿದು ನೀನೊ ಲಿದ ವಿಭೂತಿಯ ನಾನು ಧರಿಸಿ ಬದುಕಿದೆನು ಕಾಣಾ ಸೌರಾಷ್ಟ್ರ ಸೋಮೇ ಶ್ವರಾ.

(೭) ನಂದಿ, ಭದ್ರೆ, ಸುರಭಿ, ಸುಶೀಲ, ಸುಮನವೆಂಬ ಕಪಿಲೆ, ಕರಿದು ಕೆಂದ, ಬಿಳಿದು, ಚಿತ್ರವರ್ಣದ ಗೋವುಗಳ ಗುಣಧರ್ಮಂಗಳ ವಿಚಾ ರಿಸಿ ಆ ಗೋವುಗಳ ಶುದ್ಧಮುಖದಲ್ಲಿ ಬಂಧನವಂ ಮಾಡಿ ಆಹಾರ ತೃಪ್ತಿಗ ಳರಿದು ಸಲುಹುತ ಆ ಪಂಚಗೋವುಗಳ ಗೋಮಯಮಂ ಊರ್ಧ್ವಕ ಬಳವಂ ಬಿಟ್ಟು ಅಧಃಕಬಳವಂ ತ್ಯಜಿಸಿ ಮಧ್ಯದಲ್ಲಿಹ ಗೋಮಯವ ಸದ್ಯೋಜಾತ ಮಂತ್ರದಿಂ ಪಿಡಿದು ವಾಮದೇವ ಮಂತ್ರದಿಂ ಕಬಳಗಳ ಮಾಡಿ, ತತ್ಪುರುಷ ಮಂತ್ರದಿಂದ ಒಣಗಿಸಿ ಶುದ್ಧವಹ ಭೂಮಿಯಾ ಗಿಹ ವನಾಂತರದಲ್ಲಿ ವೃಕ್ಷದಡಿಯಲ್ಲಿ ಚಕ್ರಾಕಾರ ಕುಂಡವಂ ಮಾಡಿಸಿ ಸಮ್ಮಾರ್ಜನೆಯಿಂದ ಷಡು ಅನುಲೇಪನದಿಂ ಶುದ್ಧ ಭೂಮಿಯಲ್ಲಿ ಪಂಚ ವರ್ಣದ ರಂಗವೋಲೆಯಂ ತುಂಬಿ ಪಂಚ ಸಂಚಫಲ ಪಂಚಭಕ್ಷ್ಯ ಪರ ಮಾನಂದದಿಂದೆ ಅಷ್ಟವಿಧಾರ್ಚನೆ ಕ್ರಮವಿಡಿದು ಪಂಚ ಅಧಿದೇವತೆಯಪ್ಪ ಮಾಂತ್ರಿಕಮೂರ್ತಿಗಳಂ ಕೂಡಿಕೊಂಡು ಒಣಗಿದ ಗೋಮಯ ಕಬಳಗಳಂ ಧೂಳಪಾದೋದಕದಿಂ ಅಗ್ರೋದಕಗಳಿಂ ಚಿಂಸಿಸಿ ಅರ್ಘ್ಯಪಾದ್ಯಾಚಮನ ಗಳಿಂದರ್ಚಿಸಿ ಅಘೋರ ಮಂತ್ರದಿಂದ ದಹನವಂ ಮಾಡುವ ಸಮಯ ಅಖಂಡಗೋಳಕಾಕಾರವಾದ ತೇಜೋಮೂರ್ತಿಯ ಧ್ಯಾನಿಸಿ ದಹನವಂ ಮಾಡಿ ಆ ಪಂಚಭಸ್ಮವಂ ಈಶಾನ್ಯಮಂತ್ರದಿಂದೆ ಎಲೆ ಮೃಣ್ಮಯಾದಿ ಬಿಲ್ವ ಅಶೋಕ ಶಿಲೆಯ ಪಂಚಲೋಹಾಂತ್ಯಮದ ಪಾತ್ರಗಳೆಂಬ ಭರಣಿ ಗಳಲ್ಲಿ ತುಂಬಿದ ಭಸ್ಮಮಂಥನದೋಪಾದಿಯಲ್ಲಿ ಸಂಪಾದಿಸಿಕೊಳುತ ಪಂಚಪ್ರಣವ ತ್ರಿಪಂಚ ಬೀಜ ಪಂಚ ಅಘೋರ ಪಂಚ ಪಂಚಾಕ್ಷರಿ ಮಂತ್ರಗಳಿಗೆ ಗೃಹಸ್ತ ವಾನಪ್ರಸ್ತ ಬ್ರಹ್ಮಚರ್ಯ ಯತಿ ಪರಮಹಂಸಾದಿ ಆಶ್ರಮಂಗಳಲ್ಲಿ ಆಚರಿಸುವ ಭಕ್ತಜಂಗಮವು ಧಾರಣಮಾಡುವ ಕ್ರಮ

ವೆಂತೆಂದೊಡೆ- ಶ್ಲೋ॥ ಮಧ್ಯಮನಾಮಿಕಾಂಗುಷ್ಠಂ । ಭಸ್ಮಮುದ್ರಾಂತ್ಯ ಮಾದಯ ॥ ವಾಮೆ ಕರತಳಾಸ್ಮಧ್ಯೆ । ಸಿಕ್ಷಿಪ್ಯಾರ್ಚನವಿಧಿ ಕ್ರಿಯಾತ್ ॥ ಎಂಬ ಹರಗುರುವಾಕ್ಯ ಪ್ರಮಾಣದಿಂ ಭೂತಿರ್ಭಸಿತ ಭಸ್ಮ ಕ್ಷರೆ ರಕ್ಷವೆಂಬ ಪಂಚಭಸ್ಮಂಗಳಂ ಮಧ್ಯಮನಾಮಿಕಾಂಗುಲಿಗಳಿಂದ ತೆಗೆದುಕೊಂಡು ಎಡದ ಹಸ್ತದಲ್ಲಿ ಓ ದವಾಗ್ನಿಯಂ ಅಗ್ನಿ ಭಸ್ಮ ಎಂಬ ಆಗ್ನೇಯ ಮಂತ್ರದಿಂ ಭಸ್ಮಂಗಳ ಪತ್ರಿಯಾಂಗುಲಿಗಳಿಂದೆತ್ತಿ, ಓಂ ಅಗ್ನಿರಿತಿಭಸ್ಮ, ವಾಯುರಿತಿಭಸ್ಮ, ಜಲಮಿತಿಭಸ್ಮ, ಸ್ಥಲಮಿತಿಭಸ್ಮ, ವ್ಯೋಮಿತಿಭಸ್ಮ ಸರ್ವಹವಾ ಇದಂ ಭಸ್ಮ, ಮನಯೇತಾನಿಚಕ್ಷೂಂಷಿ ಎಂಬ ಮಂತ್ರದಿಂ ತಂದು ಎಡಪ ಹಸ್ತದಲ್ಲಿ ಮಡಗಿ, ಬಲದ ಮೊಳಪಾದದಮೇಲಿಟ್ಟು ಎಡದ ಹಸ್ತದಲ್ಲಿಪ್ಪ ಭಸ್ಮದಲ್ಲಿ ಓಂ ಹಸ್ತದ ಅನಾಮಿಕಂಗುಲಿಯಿಂದ ಪಂಚ ಮುದ್ರೆಯಂ ಬರೆದು ಮಧ್ಯಪ್ರಣಮ ಪಂಚದಿಶ ಮೂಲಿಗಳಲ್ಲಿ ಪಂಚಾ ಕ್ಷರಂಗಳಂ ಬರೆದು ಅರ್ಘ್ಯಪಾದ್ಯ ಆಚಮನಂಗಳಿಂ ಗಂಧ ಪುಷ್ಪಾಕ್ಷತಿ ಧೂಪದೀಪಾರುತಿಗಳಿಂದ ಅರ್ಚಿಸಿ ಶ್ರೀ ಭಸ್ಮಕ್ಕೆ ತ್ರಿಯಾಂಗುಲಿಗಳಿಗೆ ತ್ರಿಪ್ರ ದಕ್ಷಿಣ ಓಂ ಸಯೋಷ ಭಸ್ಮಂ ಜ್ಯೋತಿ, ಓಂ ಸಯೋಷಭಸ್ಮಂ ಜ್ಯೋತಿ ಓಂ ಸಯೋಷಭಸ್ಮಂ ಎಂದು ಪ್ರದಕ್ಷಣವಂ ಮಾಡಿ ನಯನ ಲಲಾಟ ಸ್ಪರ್ಶ ನಂಗಳಿಗೆ ನಮಸ್ಕರಿಸಿ ಸಪ್ತವಾರದಲ್ಲಿ ಪಂಚಾಕ್ಷರಂಗಳಿಂದ ಅಭಿಮಂತ್ರಿಸಿ ಶಿಖೆಯಲ್ಲಿ ಸ್ಥಾಪಿಸಿಕೊಂಡು ಅಖಂಡವಪ್ಪ ತೇಜಮುಂಡದಲ್ಲಿ ಅಗ್ನಿಯಾಕಾ ರದ ಮಧ್ಯದಲ್ಲಿ ಶುದ್ಧ ಸ್ಫಟಿಕಾಕಾರದಿಂದ ಶಕ್ತ್ಯಯುಕ್ತಮೂರ್ತಿಯ ಅಗಾ ಜಲಾವೃತಂ ರುದ್ರವಹ್ನಿಮಂಡಲ ಮಧ್ಯ ಯತ್ಕಲಾವಶಯುತಂ ಶಕ್ತಿಸ್ವಸ್ತಿಕ ಧಾರಣಾತ್ ॥ ಆವಿಯೆಶ್ಯ ಭಸ್ಮಾ ಸಂಧ್ಯಾಮುದ್ಧೂಳೆ ದಿವ್ಯಸ್ಥಾನೆಶಿವ ಧ್ಯಾಯಾತ್ ಎಂಬ ಪ್ರಣಮದಿಂ ಶಿಖಿಯಲ್ಲಿಟ್ಟು ಭಸ್ಮಧ್ಯಾನವಂ ಮಾಡಿ, ಆ ಭಸ್ಮವಂ ಬಲದ ತೊಡೆಗೆ ಇಳುಹಿಕೊಂಡು ಪ್ರೋಕ್ಷಣ ಸ್ಪರ್ಶ ಸ್ನಾನ ಧಾರಣಲೇಪನ ಕವಚಸ್ತಂಭನೋಚ್ಚಾಟನ ಧೂಳಿತಬಂಧನ ಯಂತ್ರವಿಧಾನ್ನ ವೆಂತೆಂದೊಡೆ, ಸಾಕ್ಷಿ ॥ ಪ್ರೋಕ್ಷಣಸ್ಪರ್ಶನಂ ಸ್ನಾನಂ ಧಾರಣಂ ಕವಚ ಲೇಪನಂ ॥ ಸ್ತಂಭನೋಚ್ಚಾಟನ ಧೂಳಿತ ಬಂಧನಂ ಮಂತ್ರ ಭಸ್ಮನಾತ್ ॥ ಎಂಬ ಹರಗುರುವಾಕ್ಯ ಪ್ರಮಾಣವಂ ತಿಳಿದು ಆ ಪಂಚಭಸ್ಮಂಗಳ ಓಂ ಹ್ರಾಂ ನಂ ಸದ್ಯೋಜಾತಾಯನಮಃ ಎಂದು ಪಾದದ್ವಯಾದಿಗುಹ್ಯಗುದ ಪರ್ಯಂತ ಪ್ರೋಕ್ಷನಂ ಮಾಡುವದು ಹ್ರೀಂ ಮಾಂ ವಾಮದೇವಾಯನಮಃ ಎಂದು ಗುಹ್ಯಾದಿನಾಭಿಪರ್ಯಂತರ ಪ್ರೋಕ್ಷಣವ ಮಾಡುವದು. ಹ್ರೂಂ

ಶ್ರೀಂ ಅಘೋರಾಯನಮಃ ಎಂದು ನಾಭಿಯಿಂದ ಹೃದಯಪರಿಯಂತರ ಪ್ರೋಕ್ಷಣವ ಮಾಡುವದು. ಹ್ರೈಂ ವಾಂ ತತ್ಪುರುಷಾಯನಮಃ ಎಂಬ ಮಂತ್ರದಿಂದ ಹೃದಯಾದಿ ಮುಖಪರಿಯಂತರ ಪ್ರೋಕ್ಷಣವ ಮಾಡುವದು. ಹ್ರೌಂ ಯಂ ಈಶಾನಾಯನಮಃ ಮಂತ್ರದಿಂದ ಶಿರಸ್ಸಿನಲ್ಲಿ ಪ್ರೋಕ್ಷಣವ ಮಾಡುವದು. ಮತ್ತು ಭಸ್ಮವಂ ಬಲದ ಪಾದ ತಳಾಂಗುಷ್ಠಮೇಗಾಲು ಹರಡುಗಳ ಕಪಗಂಡಕ್ಕೊಳಪಾದ ತೊಡೆಗಳಲ್ಲಿ ರಾಂ ರಿಂ ರೂಂ ರೆಂ ರೈಂ ರೊಂ, ರೌಂ ರಂ ರಃ ಎಂಬ ಮಂತ್ರದಿಂದ ಸ್ಪರ್ಶನವಮಾಡುವದು. ಎಡದಪಾದ ತಳಾಂಗುಷ್ಠ ಮೊಳಕಾಲು ಪರಡುಗಳು ಕಪಗಂಡ ಮೊಳಪಾದ ತೊಡೆಗಳಲ್ಲಿ ಕಾಂ ಕಿಂ ಕೂಂ ಕೆಂ ಕೈಂ ಕೊಂ ಕೌಂ ಕಂ ಕಃ ಎಂಬ ಮಂತ್ರದಿಂದ ಸ್ಪರ್ಶನವ ಮಾಡುವದು. ಗುದ ಗುಹ್ಯ ನಾಭಿ ಹೃದಯ ಸ್ಥಾನಗಳು ಭುಜಗಳು ತಾಳುಗಳಲ್ಲಿ ಸಾಂ ಸೀಂ ಸೂಂ ಸೆಂ ಸೈಂ ಸೌಂ ಸಂ ಸಃ ಎಂಬ ಮಂತ್ರದಿಂದ ಸ್ಪರ್ಶನ ಮಾಡುವದು. ಶ್ರೋತ್ರಂಗಳು ನಯನಗಳು ನಾಸಿಕ ನಾಳಂಗಳು ಜಿಹ್ವೆ, ಮೂರ್ಧ ಪಾದ ಭ್ರೂಮಧ್ಯಗಳಲ್ಲಿ ಹ್ರಾಂ ಹ್ರೀಂ ಹ್ರೂಂ ಹ್ರಂ ಹ್ರೈಂ ಹ್ರೊಂ ಹ್ರೌಂ ಹ್ರಂ ಹ್ರಃ ಎಂಬ ಮಂತ್ರದಿಂದ ಸ್ಪರ್ಶನ ಮಾಡುವದು. ಶಿರಸ್ಸಿನ ಪಶ್ಚಿಮ ಪೂರ್ವ ಉತ್ತರದಕ್ಷಿಣ ಮಧ್ಯಮ ನಾಮಿಕಾಂಗುಷ್ಠಂಗಾಲುಗಳಿಂದೆ ತ್ರಿಮಂತ್ರ ಸ್ಪರ್ಶನಗಳಿಗೆ ಕ್ಷಾಂ ಕ್ಷೀಂ ಕ್ಷೂಂ ಕ್ಷೇಂ ಕ್ಷೈಂ ಕ್ಷೋಂ ಕ್ಷೌಂ ಕ್ಷಂ ಕ್ಷಃ ಎಂಬ ಮಂತ್ರದಿಂದೆ ಸಿರಸ್ಸುಲಲಾಟ ಭ್ರುವಪರಿಯಂತರ ಸ್ಪರ್ಶನವಂ ಮಾಡಿ ಮತ್ತು ಭಸ್ಮವಂ ಶಿರಮುಖ ಕೊರಳು ಬಾಹು ಹೃದಯ ಬೆನ್ನು ನಾಭಿ ಕಟಿ ಗುಹ್ಯಪರಿಯಂತರವು ಓಂ ನಾಂ ಮಾಂ ಶೀಂ ನಾಂ ಯಾಂ ಅಂ ಏಂ ಮಾಂ ಎಂಬ ಮೂಲಪಂಚಾಕ್ಷರಿ ಮಂತ್ರದಿಂದ ಸ್ನಾನವಂ ಮಾಡುವದು. ಗುದ ತೊಡೆ ಮೊಳಪಾದ ಜಾನು ಪರಡು ಪಾದಾಂಗುಲತಳಂಗಳೆಂಬ ಎರಡು ಪಾದಗಳಿಗೆ ಓಂ ಹ್ರಾಂ ಹ್ರೀಂ ಹ್ರೂಂ ನಮಃ ಶಿವಾಯ ಎಂಬ ಸ್ಥೂಲ ಪಂಚಾಕ್ಷರೀ ಮಂತ್ರದಿಂದೆ ಸ್ನಾನವಂ ಮಾಡುವದು. ಮತ್ತೆ ಭಸ್ಮವಂ ವಿರಾನ್ಮಾನೋರುದ್ರ ಭಾಲು ಕೋವಧೀರ್ಹವಿಷ್ಮಂತೋ ಮನಸಾವಿದೆಮತೆ ಎಂಬ ಮಂತ್ರದಿಂದೆ ಮಂತ್ರೋದಕದಿಂದೆ ಭಸ್ಮವಂ ಮರ್ದಿಸಿ ಮಾನಸ್ತೋಕೆತನಯೆಮಾನ ಆಯುಷಿಂಮಾನೋಗೋಷು ಮಾನೋ ಅಸ್ವಿಷುರಿರಿಷಃ ಎಂಬ ಮಂತ್ರದಿಂದೆ ಮರ್ದಿಸಿದ ಭವಬಲದ ತ್ರಿಪುಂಡ್ರಗಳಿಂದೆತ್ತಿ. ಓಂ ತ್ರಿಯಂ, ಕಂ ಯಜಾಮಹಿ ಸೌಂಧಿಪುಷ್ಟಿವದನಂ ಹರ್ವಾಲೋಕಮಿಬಾಧ

ನಾತ್ | ವೃತ್ಯೈ ವುಕ್ಷಿಯ್ಯ ಸೂಾಂವೃತಾತ್ ಎಂಬ ಮಂತ್ರದಿಂ ಲಿಂಗಕ್ಕೆ ಧಾರಣ ತಿಲಕವನಿಟ್ಟು ಅನಾಮಿಕ ಮಧ್ಯಮ ಅಂಗುಷ್ಠಾಂಗುಲಗಳ ಲ್ಲಿರ್ದ ಭಸ್ಮದಲ್ಲಿ ತ್ರಿಯಾಗ್ನಿ ತ್ರಿಬೀಜ ತ್ರಿವಿಧಗುಣ ತ್ರಿಲೋಕ ತ್ರಿಯಾತ್ಮ ತ್ರಯಶಕ್ತಿತ್ರಯ ಮೂರ್ತಿತ್ರಯ ವೇದಂಗಳ ಪರಿಯಾಯಂಗಳನರಿದು ಅಂ ಊಂ ಮಾಂ ಓಂ ಹ್ರೀಂ ಶಿವಾಯ ಎಂಬ ಸೂಕ್ಷ್ಮ ಪಂಚಾಕ್ಷರಿ ಮಂತ್ರ ಸ್ಮರಣೆಯಿಂದ ತ್ರಿಯಾಯುಷಂ ಜಪದಲ್ಲಿ ಕಶ್ಯಪಸ್ಯ ತ್ರಿಯಾಯುಷಂ ಯದ್ದೇವಾನಾಂತ್ರಿಯಾಯುಷಂ ತನ್ಮೆ ಅಸ್ತು ತ್ರಿಯಾಯುಷಂ ಎಂಬ ಮಂತ್ರ ದಿಂದೆ ಲಲಾಟ ತುಂಬಿ ತ್ರಿಪುಂಡ್ರ ಧಾರಣವಂಮಾಡಿ ಮೇದಾವಿಭೂಯಾಸಂ ವರ್ಚಸ್ವೆ ಭೂಯಾಸಂಬ್ರಹ್ಮ ವರ್ಚಸ್ವ ಭೂಯಾಸಂ ತೇಜಸ್ವಭೂಯಾಸಂ ಆಯುಷ್ಮಾರ್ಭೂಯಾಸಂ ಯಸ್ವಸ್ತಿ ಭೂಯಾಸಂ ಸರ್ವ ಸಮೃದ್ಧೋಭೂ ಯಾಸಂ ಎಂದು ಶಿರಶಿಖಿಲಲಾಟ ಕರ್ಣ ಕಂಠ ನಾಸಿಕ ಜಿಹ್ವೆ, ನೇತ್ರ ಭುಜ ಬಾಹು ಮೂಲ ಮಣಿಬಂಧ ಹೃದಯ ಬೆನ್ನು ಸ್ತನ ನಾಭಿಯಲ್ಲಿ ಓಂ ಹ್ರಾಂ ಹ್ರೀಂ ನಮಃ ಶಿವಾಯ ಎಂಬ ಮಾಯಾಖ್ಯ ಪಂಚಾಕ್ಷರೀ ಮಂತ್ರದಿಂದೆತ್ತಿ ತ್ರಿಪುಂಡ್ರ ಧಾರಣವಂ ಮಾಡಿ ಮತ್ತು ಭಸ್ಮಮಂ ಕರ ತಳ ಕರಪೃಷ್ಠಂಗಳಲ್ಲಿ ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ನಮಃ ಶಿವಾಯ ಎಂಬ ಪ್ರಸಾದ ಪಂಚಾಕ್ಷರ ಮಂತ್ರದಿಂ ಭಸ್ಮಲೇಪನ ಮಾಡುವದು. ಇನ್ನು ನ್ಯಾಸಂ ಕಾಲಾಯ ನಮಃ ಅಂಗುಷ್ಠಾಭ್ಯಾ ನಮ: ಕಲವಿಕರಣಾಯ ತರ್ಜನಿ ಭ್ಯೋನಮ: ಬಲಾಯ ಮಧ್ಯಮಾಭ್ಯಾಯನಮಃ ಬಲನಿಕರಣಾಯ ಅನಾ ಮಿಕಾಭ್ಯಾನಾಂನಮಃ ಬಲಪ್ರಮಥನಾಯಕನಿಷ್ಟಕಾಯನಮಃ ಸರ್ವಭೂತದ ಮನಾಯಕರ ತಳಕರಪೃಷ್ಠಾಭ್ಯಾಯನಮಃ ಇದು ಕರಾಂಗುಲಿನ್ಯಾಸಮಂ ಮಾಡಿ ಕಾಲಾಯನಮಃ ಹೃದಯಾಯನಮಃ ಕಲವಿಕರಣಾಯ ಶಿರಸಿ ಸ್ವಾಹಾಬಲಾಬು ಶಿಖಾಯೈವೌಷಟ್ ಬಲವಿಕರಣಾಯ ಕವಚಾಯ ಹ್ರೂಂ ಬಲಪ್ರಮಥನಾಯಕ ನೇತ್ರತ್ರಯಾಯವೌಷಟ್ ಸರ್ವಭೂತದಮನಾಯಕರ ತಳ ಅಸ್ತ್ರಾಯ ಹ್ರೂಂ ಫಟ್ ಇದು ಅಂಗನ್ಯಾಸವಂ ಮಾಡುವದು. ಇಂತೀ ಭಸ್ಮ ಮಹಾತ್ಮೆಮಂತ್ರ ಎಂತೆಂಬೊಡೆ, ವೃಥಾ ಭೂತಿಭೂರ್ತಿಕರೆ ಪವಿತ್ರ ಜನನೀ ಪಾಪೌಘ ವಿಧ್ವಂಸಿನೀ | ಸರ್ವೋಪದ್ರವಿನಾಶನಿ ಸುಖಕರೀಸರ್ವಾರ್ಥ ಸಂಪತ್ಕರಿ ॥ ಭೂತಪ್ರೇತ ಪಿಶಾಚ ರಾಕ್ಷಸ ಹರಿ ದುಷ್ಟಾರಿ ಸಂಹಾರಿ | ತೇಜೋರಾಜ್ಯವಿಶೇಷ ಮೋಕ್ಷಕಾರಿಣಿಭೂತಿಸ್ಸದಾಧಾರ್ಯತಾಂ | ಎಂದು

ತಿಳಿದು ಭಸ್ಮಧಾರಣವ ಮಾಡುವ ಶರಣರ ಚರಣಕ್ಕೆ ನಮೋ ನಮೋ ಎಂಬೆ ಕಾಣಾ ಮದ್ಗುರುಬಸವಲಿಂಗಪ್ರಭುವೇ ||

---

## ವಿಭೂತಿ ಧರಿಸುವ ಕ್ರಮ.

ಓಂ ನಮಶ್ಶಿವಾಯ ಎಂಬ ಮಂತ್ರವನು ೧೧ ವೇಳೆ ಸ್ಮರಿಸಿ ಶರಣನ ಹಸ್ತಪಾದವ ತೊಳೆದು ಲಿಂಗಮಂ ಮಾಂಡಿ ಆ ಮೇಲೆ ಮುಖ ಮಜ್ಜನಂಗೈದು ಉನ್ನತಾಸನದಿಂ ಶ್ರೀಗುರುಬಸವಲಿಂಗಾಯನ್ನಮಃ ಎಂಬ ಮಂತ್ರದಿಂ ಸ್ವಸ್ಥಸಿದ್ಧಾಸನ ಪದ್ಮಾಸನ ನೀರಾಸನವೆಂಬ ತ್ರಿವಿಧಾಸನದಲ್ಲಿ ಆವುದಾನೊಂದು ಆಸನದಿಂ ಮೂರ್ತವಮಾಡಿ ಓಂ ನಮಃ ಶಿವಾಯ ಎಂಬ ಮಂತ್ರವನು ೯ ಸ್ಮರಿಸಿ ವಿಭೂತಿಯ ಲಿಂಗವನ್ನು ಬಲಭಾಗದಲ್ಲಿ ಮಡಿಗಿ ಶ್ರೀಗುರುಬಸವಲಿಂಗಾಯ ಎಂಬ ಮಂತ್ರದಿಂ ಬಿಡುವದು. ಶ್ರೀಗುರು ಬಸವಲಿಂಗಾಯನಮಃ ಎಂಬ ಮಂತ್ರದಿಂದ ಕ್ಷಣ ಹಸ್ತವ ಮೇಲೆ ಮಡು ಗವದು. ಮಡಿಗಿ ಓಂ ಎಂಬ ಮಂತ್ರವನು ೭ ಸ್ಮರಿಸುವದು. ಓಂ ನಮಃ ಶಿವಾಯ ಎಂಬ ಮಂತ್ರದಿಂ ಕುರಂಗಮುದ್ರೆಯಿಂದ ಮಸ್ತಕದ ಮೇಲೆ ಇರಿಸುವದು. ಓಂ ಎಂಬ ಮೂಲ ಪ್ರಣಮುವನು ೭ ಸ್ಮರಿಸುವದು ಆಮೇಲೆ ಓಂ ನಮಃ ಶಿವಾಯ ಎಂಬ ಮಂತ್ರದಿಂ ವಾಮ ಭಾಗದ ಪಾಣಿ ತಾಣದಲ್ಲಿ ಇಟ್ಟು ಓಂ ಎಂಬ ಪ್ರಣಮುವನು ಲಿಖಿಸಿ ಅರ್ಘ್ಯಮಂ ಕೊಟ್ಟು ಓಂ ಎಂಬ ಮಂತ್ರದಿಂ ೭ ವೇಳೆ ಮಂತ್ರಿಸಿ ಊದಿ ಓಂ ನಮಃ ಶಿವಾಯ ಎಂಬ ಮಂತ್ರದಿಂ ೬ ವೇಳೆ ಲಿಂಗದಲ್ಲಿ ಸ್ನಾನವ ಮಾಡುವದು. ಯಕಾರ ಪ್ರಣವದಿಂ ೫ ವೇಳೆ ಮಸ್ತಕದಲ್ಲಿ ವಕಾರದಿಂ ೪ ವೇಳೆ ಮುಖದಲ್ಲಿ ಶಿಕಾರ ದಿಂದ ವೇಳೆ ಹೃದಯದಲ್ಲಿ ಮಕಾರದಿಂ ೧೩ ಕಟಿಯಲ್ಲಿ ನಕಾರದಿಂ ೮ ವೇಳೆ ಪಾದದಲ್ಲಿ ಸ್ನಾನವ ಮಾಡುವದು. ಓಂ ನಮಃ ಶಿವಾಯ ಎಂಬ ಮಂತ್ರ ದಿಂದ ಸರ್ವಾಂಗಗಳಲ್ಲಿ ಸ್ನಾನವ ಮಾಡುವದು. ಆಮೇಲೆ ಅರ್ಘ್ಯವುಂ ಕೊಡುವದು ಓಂ ಎಂಬ ಮಂತ್ರದಿಂ ಸ್ಮರಿಸುವದು. ಆಮೇಲೆ ಎರಡು ಹಸ್ತಕ್ಕೆ ವಿಭೂತಿಯನು ತಳೆದು ಓಂ ಎಂಬ ಮಂತ್ರವನು ಮಧ್ಯಹಸ್ತದಲ್ಲಿ ಲಿಖಿಸಿ ಶ್ರೀಗುರು ಬಸವಲಿಂಗಾಯನಮಃ ಓಂ ಹ್ರಾಂ ಹ್ರೂಂ ಹೃದಯಾಯ

# ಪ್ರಗತಿ ಮಾರ್ಗ ಜೀವನ

ವಿದ್ಯಾರ್ಥಿಗಳಿಗೂ ವಾಚನಾಲಯಗಳಿಗೂ
ಉಪಯುಕ್ತವಾದ ಗ್ರಂಥ.

ಮನುಷ್ಯನಿಗೆ ಅವನ ಜೀವನದಲ್ಲಿ ನೈತಿಕ, ಬೌದ್ಧಿಕ, ವ್ಯಾವಹಾರಿಕ
ಪ್ರಗತಿಗಳಿಗೆ ಒಳ್ಳೇ ವಿಚಾರಗಳು ಅವಶ್ಯಕವಿದ್ದು,
ಅಂಥ ವಿಚಾರಗಳನ್ನು ಒದಗಿಸಿಕೊಡುವ ಗ್ರಂಥವು ಇದಾಗಿರುತ್ತದೆ.

ಬೆಲೆ — ೦—೧೪—೦

ಹಿತಚಿಂತಕ ಪ್ರಿಂ. ಪ್ರೆಸ್
ವಿಜಾಪುರ.

*From,*

Shivanubhava
Office
Bijapur

# BOOK-POST.

R. N. B. 2554

ಶ್ರೀ. ರಾ॥ ರಾ॥

ಚನ್ನಮಲ್ಲಪ್ಪ ಸಿದ್ದಪ್ಪ ಬಡೇವಿ
ಪೋ. ಬಸಹಟ್ಟಿ
ವ್ಹಾಯಾ-ಕುಡಚಿ ಸ್ಟೇಶನ್






ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ಬಾ॥ ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ವಾರ್ಡ [illegible] ಮನೆ ನಂ. [illegible] ರಲ್ಲಿರುವ ತಮ್ಮ ಹಿತಚಿಂತಕ [illegible] ದಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.



# ಶಿ ವಾ ನು ಭ ವ

ಸಂಪುಟ ೨೩ | [ ಸಂಚಿಕೆ ೬



ಜೂನ ೧೯೪೯

ವಿಜಾಪುರ.

# ವಿಷಯಗಳು.







# ಶಿವಾನುಭವ

| ವರ್ಷ ೨೩ | ಜೂನ ೧೯೪೯ | ಸಂಚಿಕೆ ೯ |
|---|---|---|

## ತಿಳಿವಳಿಕೆ ಎಂದರೇನು?

(ಒಬ್ಬ ಶಿವಾನುಭವಿ)



ಮನುಷ್ಯನಿಗೆ ಸುಖವಾಗುವದು ಅವನ ಶೀಲ ಮತ್ತು ಅವನ ತಿಳಿವಳಿಕೆ ಇವುಗಳ ಮೇಲೆ ಅವಲಂಬಿಸಿರುತ್ತದೆ. ಇವುಗಳಲ್ಲಿ ತಿಳಿವಳಿಕೆ ಎಂಬುದೇನೆಂಬುದನ್ನು ನಾವು ಅರಿಯುವದು ಬಹು ಅವಶ್ಯವಿರುತ್ತದೆ.

### ತಿಳಿವಳಿಕೆಯ ಸ್ವರೂಪ.

ವಸ್ತುಗಳಲ್ಲಿ ತನಗೆ ಕೆಡುಕಾವುದು, ಒಳಿತಾವುದು ಎಂಬುದನ್ನು ತಿಳಿದುಕೊಂಡು ಅವುಗಳಲ್ಲಿ ಸ್ವೀಕರಿಸಲು ಯಾವದು ಯೋಗ್ಯವು ಮತ್ತು ಯಾವುದು ಅಯೋಗ್ಯವು ಎಂಬುದನ್ನು ಕಂಡುಹಿಡಿಯುವ ಸಾಮರ್ಥ್ಯವೇ ತಿಳಿವಳಿಕೆ ಎಂದು ಹೇಳಬಹುದು. ಈ ಸಾಮರ್ಥ್ಯವು ಜನರು ಅನ್ನುವದನ್ನು ನಂಬುವದರಿಂದ ಉಂಟಾಗುವದಿಲ್ಲ. ಅದು ವಸ್ತುಗಳ ನಿಜಸ್ಥಿತಿಯ ಜ್ಞಾನದ ಮೇಲೆ ಅವಲಂಬಿಸಿರುತ್ತದೆ. ತಿಳಿವಳಿಕೆ ಇದ್ದರೆ, ಅದು ನಾವು ನುಡಿಯುವ ನುಡಿಗಳನ್ನು ಮತ್ತು ಮಾಡುವ ಕಾರ್ಯಗಳನ್ನು ತೂಗಿ ನೋಡಲು ಹಚ್ಚುತ್ತದೆ. ನಮಗೆ ಸುಖ ಬರಲಿ ಅಥವಾ ದುಃಖ ಬರಲಿ ನಾವು ಸಂತೋಷದಲ್ಲಿದ್ದಾಗ್ಗೆ ಉಬ್ಬದಂತೆ ಮತ್ತು ದುಃಖದಲ್ಲಿದ್ದಾಗ ವಿಹ್ವಲರಾಗದಂತೆ ಅದು ಮಾಡುತ್ತದೆ. ಅಂದರೆ ನಾವು

ಯಾವಾಗಲೂ ಸಮಾಧಾನದಲ್ಲಿರುವಂತೆ ಅದು ಮಾಡುತ್ತದೆ. ತಿಳಿವಳಿಕೆ ಎಂಬುದು ಹಿಂದೆ ಆಗಿಹೋದದ್ದನ್ನು ವಿಚಾರ ಮಾಡುವಂತೆ ಮತ್ತು ಮುಂದೆ ಬರಬಹುದಾದ್ದನ್ನು ನಿರೀಕ್ಷಿಸುವಂತೆ ಮಾಡುತ್ತದೆ. ಅದು ವಸ್ತುಗಳಲ್ಲಿ ನಿತ್ಯವಾವುದು, ಅನಿತ್ಯವಾವುದು ಎಂಬುದರ ಜ್ಞಾನ ಮಾಡಿಕೊಡುತ್ತದೆ. ಅದು ಪರಿಸ್ಥಿತಿಯನ್ನು ಸೂಕ್ಷ್ಮದೃಷ್ಟಿಯಿಂದ ಅವಲೋಕಿಸುವಂತೆ ಮಾಡುತ್ತದೆ. ಮತ್ತು ಆಯಾ ಪರಿಸ್ಥಿತಿಗಳಲ್ಲಿ ಮನಸ್ಸು ಹೇಗಿರಬೇಕೆಂಬುದನ್ನು ಸಹ ಅದು ತಿಳಿಸುತ್ತದೆ. ಇವೆಲ್ಲವೂ ತಿಳಿವಳಿಕೆ ಇದ್ದದ್ದರ ಚಿಹ್ನಗಳಾಗಿವೆ.

### ತಿಳಿವಳಿಕೆ ಇದ್ದವನು ಪೂರ್ಣ ಸುಖಿಯು.

ಪೂರ್ಣ ತಿಳಿವಳಿಕೆ ಇದ್ದವನು ಪೂರ್ಣ ಸುಖಿಯಾಗಿರುತ್ತಾನೆ. ತಿಳಿವಳಿಕೆಯು ಎಂದು ಪ್ರಾರಂಭವಾಗುತ್ತದೋ ಅಂದಿನಿಂದ ಅವನಿಗೆ ಕಠಿಣವಾದ ಜೀವಿತವು ಹಗುರಾಗಿ ತೋರಹತ್ತುತ್ತದೆ. ಪ್ರತಿಯೊಬ್ಬನು ತಾನು ತಿಳಿಯುವದಷ್ಟೇ ಅಲ್ಲ, ತಿಳಿದದ್ದನ್ನು ತಾನು ದಿನಾಲು ಧ್ಯಾನ ಮಾಡುತ್ತಿರಬೇಕು. ಅಂದರೆ ಅದನ್ನು ಯಾವಾಗಲೂ ಮನಸ್ಸಿನಲ್ಲಿ ತಂದುಕೊಳ್ಳಬೇಕು. ಇದರಿಂದ ಅವನ ಮನೋವೃತ್ತಿಯು ಬದಲಾಗುತ್ತ ಹೋಗುತ್ತದೆ. ಮತ್ತು ಅದೇ ಮುಂದೆ ಅವನಿಗೆ ಸ್ವಭಾವವಾಗಿ ಉಳಿದು ಬಿಡುತ್ತದೆ. ನಾವು ಹೇಳಿದಂತೆ ಯಾವಾಗಲೂ ನಾವು ನಡೆಯುತ್ತಿರಬೇಕು. ಹೇಳುವದರ ಉದ್ದೇಶವು ಜನರಲ್ಲಿ ತಮ್ಮ ವಿದ್ವತ್ತೆಯನ್ನು ತೋರಿಸುವದಕ್ಕೋಸ್ಕರವಲ್ಲ. ಅದರಂತೆ ತಾವೂ ಕೂಡ ನಡೆಯುವದೂ ಇರುತ್ತದೆ. ನಾವು ಆನಂದಪಡುವದಕ್ಕೋಸ್ಕರ ಕೆಲವೊಂದು ಮನೋರಂಜನ ಕಾರ್ಯವನ್ನು ಮಾಡುತ್ತಿರಬಹುದು. ಅಥವಾ ನಮ್ಮ ಬಿಡುವಿನ ವೇಳೆಯಲ್ಲಿ ಆವುದಾನೊಂದು ಕಾಲಹರಣ ಕಾರ್ಯ ಮಾಡುತ್ತಿರಬಹುದು. ಆದರೆ ಇವು ಮನಸ್ಸಿನ ಮೇಲೆ ಶಾಶ್ವತ ಪರಿಣಾಮ ಮಾಡುವದಿಲ್ಲ. ತಿಳಿವಳಿಕೆ ಎಂಬುದು ಹೀಗಲ್ಲ. ತಿಳಿವಳಿಕೆಯು ನಮ್ಮ ಮನಸ್ಸನ್ನು ತಿದ್ದುತ್ತದೆ. ಅದು ನಮ್ಮ ಕ್ರಿಯೆಗಳಲ್ಲಿ ಯಾವಾಗಲೂ ತೋರುತ್ತದೆ. ಅದು ನಾವೇನು ಮಾಡತಕ್ಕದ್ದು, ಯಾವುದನ್ನು ಮಾಡಬಾರದು, ಎಂಬುದನ್ನು ತಿಳಿಯಹಚ್ಚುತ್ತದೆ. ಹಡಗನಡಿಸುವವನ ಕಯ್ಯಲ್ಲಿ ಯಾವಾಗಲೂ ಚುಕ್ಕಾಣಿ ಇರುತ್ತದೆ. ಅವನು ಅದನ್ನು ಎಂದೂ ಬಿಡುವದಿಲ್ಲ. ಹಾಗೆ

ಮನುಷ್ಯನು ತಿಳವಳಿಕೆ ಎಂಬ ಚುಕ್ಕಾಣಿಯನ್ನು ಯಾವಾಗಲೂ ಹಿಡಿಯಲಿಕ್ಕೆಬೇಕು. ಚುಕ್ಕಾಣಿಯು ಹೇಗೆ ನಾವಿಕನಿಗೆ ಪ್ರತಿ ನಿಮಿಷ ಬೇಕೋ, ಹಾಗೆ ತಿಳವಳಿಕೆ ಎಂಬ ಚುಕ್ಕಾಣಿಯು ಮನುಷ್ಯನಿಗೆ ಪ್ರತಿನಿಮಿಷವೂ ಬೇಕು. ಅದು ನಾವು ಮಾಡತಕ್ಕ ಕರ್ತವ್ಯಗಳನ್ನು ಹೇಳಿಕೊಡುತ್ತದೆ. ಉದಾಹರಣಾರ್ಥವಾಗಿ ನಾವು ನಮ್ಮ ತಾಯಿ ತಂದೆಗಳೊಡನೆ ಭಕ್ತಿಯಿಂದ ನಡೆಯಬೇಕು, ಮಿತ್ರರೊಂದಿಗೆ ಪ್ರಮಾಣಿಕತನದಿಂದ ನಡೆಯಬೇಕು, ಬಡವರಿಗೆ ಸಹಾಯ ಮಾಡಬೇಕು, ಬುದ್ಧಿ ಹೇಳುವಲ್ಲಿ ಎಲ್ಲವನ್ನು ತಿಳಿದು ಹೇಳಬೇಕು ಇವೇ ಮೊದಲಾದವುಗಳನ್ನು ಅದು ತಿಳಿಸಿಕೊಡುತ್ತದೆ. ಆದ್ದರಿಂದ ತಿಳವಳಿಕೆ ಇದ್ದವನಲ್ಲಿ ಅಂಜಿಕೆ ಇರಲಾರದು. ಅವನಲ್ಲಿ ಯಾವಾಗಲೂ ಸಮಾಧಾನ ಗುಣವಿರುತ್ತದೆ. ಅವನಿಗೆ ಪರರ ಹಣವನ್ನು ಅಪಹರಿಸಿ ಸಿರಿವಂತನಾಗುವದು ಬೇಡ. ಆದರೂ ಅವನಲ್ಲಿ ಕಾರ್ಯದಕ್ಷತೆ ಇರುತ್ತದೆ. ಆದ್ದರಿಂದ ಅವನಿಗೆ ಎಷ್ಟು ಬೇಕೋ ಅಷ್ಟು ಆದಾಯ ಇದ್ದೇ ಇರುತ್ತದೆ. ಇವೆಲ್ಲ ತಿಳವಳಿಕೆಯ ಪರಿಣಾಮಗಳು. ಇಂಥವನೇ ನಿಜವಾದ ಸುಖಿಯು.

## ತಿಳಿವಳಿಕೆಯುಳ್ಳವನ ನಡೆ.

ಮನುಷ್ಯನು ಬೇಕಾದ ಪರಿಸ್ಥಿತಿಯಲ್ಲಿರಲಿ, ಅವನ ತಿಳವಳಿಕೆಯು ಅವನಿಗೆ ತನ್ನ ಕರ್ತವ್ಯವನ್ನು ಮಾಡಲು ಹಚ್ಚುತ್ತದೆ. ಅವನಿಗೆ ದೈವವು ಅನುಕೂಲವಿದ್ದರೆ, ತಿಳವಳಿಕೆಯು ಮಿತಿಯಿಂದಿರಲು ಅವನಿಗೆ ತಿಳಿಸಿ ಹೇಳುತ್ತದೆ. ಅನುಕೂಲವಿರದಿದ್ದರೆ, ಅಸಹಾಯನಾಗಿ ಅವನು ಧೈರ್ಯಗುಂದುವಂತೆ ಅದು ಮಾಡುವದಿಲ್ಲ. ಅವನಿಗೆ ಒಂದು ವೇಳೆ ವಿಪುಲ ಭೂಮಿಯು ಇದ್ದು, ಅವನಿಗೆ ಅದರಿಂದ ಸಂಪತ್ತು ಉಂಟಾದಲ್ಲಿ ಅವನು ತನ್ನ ಸದ್ವೃತ್ತಿಯನ್ನು ಬಿಡುವಂತೆ ಅದು ಮಾಡುವದಿಲ್ಲ. ಒಂದು ವೇಳೆ ಬಡವನಾದರೆ ಅದರಲ್ಲಿಯೂ ಕೂಡ ಅವನು ತನ್ನ ಸದ್ವೃತ್ತಿಯನ್ನು ಬಿಡನು. ಅವನಿಗೆ ಸೇವಕರಿರದಿದ್ದರೆ, ತಾನೇ ಸೇವಕನಾಗಿ ದುಡಿಯುತ್ತಾನೆ. ವನ್ಯ ಪಶುಗಳು ಎಷ್ಟು ಭೀಕರವಾಗಿದ್ದರೂ ಅವುಗಳನ್ನು ಸಾಧು ಮಾಡುವ ಸಾಮರ್ಥ್ಯವು ಕೆಲವು ಆಟಗಾರರಲ್ಲಿರುತ್ತದೆ. ಇವರು ಸಿಂಹನನ್ನು ಸಹ ತಮ್ಮ ಅಂಕಿತದಲ್ಲಿ ಇಟ್ಟುಕೊಳ್ಳುತ್ತಾರೆ. ತಿಳವಳಿಕೆಯುಳ್ಳವನು ಹಾಗೆಯೇ ಆಚರಿಸುತ್ತಾನೆ. ಅವನಿಗೆ ಬೇಕಾದಂಥ

ಕಠಿಣ ಪ್ರಸಂಗಗಳು ಬರಲಿ, ಅವು ಅತ್ಯಂತ ಉಗ್ರರೂಪುಳ್ಳವಾದರೂ ಅವು ಅವನೆದುರಿಗೆ ಸೌಮ್ಯರೂಪವನ್ನು ತಾಳುತ್ತವೆ ಶೀಲವಳಿಕೆ ಎಂಬುದು ನಮ್ಮ ಶರೀರದ ಯಾವ ಭಾಗಕ್ಕೂ ಹತ್ತಿಕೊಂಡಿರುವದಿಲ್ಲ. ಆದರೂ ಅದು ನಮ್ಮ ಮನಸ್ಸಿನಲ್ಲಿಯೇ ಇರುತ್ತದೆ ಅದು ಅಲ್ಲಿದ್ದು ಕೊಂಡು ನಮ್ಮ ಜೀವಿತವನ್ನು ಹೇಗೆ ನಡಿಸಬೇಕೆಂಬುದನ್ನು ಹೇಳುತ್ತದೆ. ಹೀಗೆ ಅದು ನಮಗೆ ಬೋಧಿಸುತ್ತ ನಮ್ಮ ಜೀವಿತವು ಸುಖಮಯವಾಗುವಂತೆ ಮಾಡುತ್ತದೆ ಯಾವ ವಸ್ತುವು ಉತ್ತಮವಾದದ್ದು ಮತ್ತು ಯಾವ ವಸ್ತುವು ಕೆಡುಕಾದದ್ದು ಎಂಬುದನ್ನು ಅದು ಯಾವಾಗಲೂ ತಿಳಿಸುತ್ತದೆ. ಅದು ನಮ್ಮ ವಿಚಾರಗಳನ್ನು ಉಚ್ಚ ವಾತಾವರಣದಲ್ಲಿ ಒಯ್ದು ಬಿಡುತ್ತದೆ. ಅದು ನಶ್ವರ ವಸ್ತುಗಳು ಯಾವವು ಎಂಬುದನ್ನು ತಿಳಿಸಿ ಅವುಗಳಿಂದ ದೂರಿರಲು ನಮಗೆ ಹೇಳುತ್ತದೆ. ಯಾವದು ಶಾಶ್ವತವೋ, ಅತ್ತಕಡೆಗೆ ನಮ್ಮ ಮನಸ್ಸು ಹೊರಳುವಂತೆ ಮಾಡುತ್ತದೆ. ಅದು ಸೃಷ್ಟಿಯೊಳಗಿನ ನಡೆ ವಸ್ತುಗಳನ್ನು ಸಂಶೋಧಿಸಿ ಅವುಗಳ ತತ್ವಗಳನ್ನು ಜನರಲ್ಲಿ ಹರಡತ್ತದೆ. ದೇವರು ರಚಿಸಿದ ಚಮತ್ಕಾರಗಳನ್ನು ನಾವು ಅರಿಯುವಂತೆ ಅದು ಮಾಡುತ್ತದಷ್ಟೇ ಅಲ್ಲ, ಅವುಗಳ ತತ್ವಗಳಂತೆ ನಾವು ನಡೆಯಲೂ ನಮಗೆ ಪ್ರೇರಣೆಮಾಡುತ್ತದೆ. ಮನುಷ್ಯನಿಗೆ ಜೀವಿತದಲ್ಲಿ ಆಕಸ್ಮಿಕ ಆಘಾತಗಳಾಗುವದುಂಟು ಆದರೆ ಇವು ದೇವರ ಇಚ್ಛೆ ಎಂದು ಅವನು ಭಾವಿಸಿ ದೇವರ ಮೇಲೆ ಭಾರ ಹಾಕಿ ಸಮಾಧಾನದಿಂದಿರುತ್ತಾನೆ. ಈ ಪ್ರಕಾರ ಅವನು ಪರಿಸ್ಥಿತಿಯ ನಿಜತ್ವವನ್ನು ಅರಿತುಕೊಂಡು ಈ ನಿಜತ್ವಕ್ಕನುಸರಿಸಿ ವರ್ತಿಸುತ್ತಾನೆ. ತನ್ನಲ್ಲಿ ತಪ್ಪು ಅಭಿಪ್ರಾಯಗಳುಂಟಾಗದಂತೆ ಅವನು ಬಹಳ ಜಾಗ್ರತೆ ಪಡುತ್ತಾನೆ. ಕೇವಲ ಕ್ಷಣಿಕವಾದ ಇಂದ್ರಿಯಗಳ ಮೋಹಕ್ಕೆ ಬೀಳುವದಿಲ್ಲ. ವಸ್ತುಗಳು ಶಾಶ್ವತ ಸುಖಕೊಡುತ್ತಿದ್ದರೆ ಮಾತ್ರ ಅವು ಉಪಯುಕ್ತವಾದವುಗಳೆಂದು ಅವನು ತಿಳಿಯುತ್ತಾನೆ. ವಸ್ತುಗಳ ಬಹಿರಂಗ ಕಾರ್ಯಗಳ ಮೇಲಿಂದ ಅವನು ಅವು ಸುಖದಾಯಕವಾದವುಗಳೆಂದು ತಿಳಿಯುವದಿಲ್ಲ. ಆದರೆ ಆ ಸುಖವು ಅವನ ಅಂತರಂಗದಿಂದ ಉದ್ಭವಿಸಿದರೆ ಮಾತ್ರ ಅವು ಸುಖದಾಯಕವೆಂದು ತಿಳಿಯುತ್ತಾನೆ. ಯಾವ ಮನುಷ್ಯನು ತನ್ನನ್ನು ಅಂಕಿತದಲ್ಲಿ ಇಟ್ಟುಕೊಳ್ಳಲು ಶಕ್ತನಲ್ಲವೋ ಅಂಥವನು ಬೇಕಾದಂಥ ಉಚ್ಚಸ್ಥಾನದಲ್ಲಿರಲಿ, ಅವನು ದೊಡ್ಡವನೆಂದು

ಯಾರೂ ತಿಳಿಯುವದಿಲ್ಲ. ಅವನ ಆಚರಣೆಯಂತೆ ಅವನಿಗೆ ಸುಖವು ಉಂಟಾಗುತ್ತದೆ. ನಿಜವಾದ ಸುಖಕ್ಕೂ ಉಚ್ಚ್ರಸ್ಥಿನಕ್ಕೂ ಸಂಬಂಧ ವಿಲ್ಲ. ಸುಖವು ಶಾಶ್ವತ ತಳಹದಿಯ ಮೇಲೆ ನಿಲ್ಲುತ್ತದೆ

## ತಿಳಿವಳಿಕೆ ಇದ್ದವನು ಸ್ಥಿರಬುದ್ಧಿಯವನು

ತಿಳಿವಳಿಕೆಯುಳ್ಳ ಮನುಷ್ಯನು ಬೇಕಾದಂಥ ಸ್ಥಿತಿಯಲ್ಲಿರಲಿ, ಅವನು ಯಾವಾಗಲೂ ಸುಖಿಯಾಗಿರುತ್ತಾನೆ. ಯಾಕಂದರೆ ಅವನು ಎಲ್ಲ ವಸ್ತುಗಳನ್ನು ತನ್ನ ಅಂಕಿತದಲ್ಲಿಟ್ಟುಕೊಂಡು ವಿಚಾರವೆಂಬುದರ ಮೇಲೆ ಅವಲಂಬಿಸಿ ನಡೆಯುತ್ತಾನೆ. ಅವನು ಮನೋವಿಕಾರಗಳ ಮೇಲೆ ಅವಲಂಬಿಸಿ ನಡೆಯುವದಿಲ್ಲ ಇದೇ ಅವನ ಸುಖಕ್ಕೆ ಕಾರಣವು ಅವನ ಆಯುಷ್ಯದಲ್ಲಿ ಅನೇಕ ಏರಿಳಿತಗಳು ಸಂಭವಿಸಬಹುದು. ಆದರೂ ಅವುಗಳಲ್ಲಿ ಅವನ ಮನಸ್ಸು ಅಚಲವಾಗಿರುತ್ತದೆ. ಆದರೆ ತಿಳಿವಳಿಕೆ ಇಲ್ಲದವರು ತಮ್ಮ ನೆರಳಿಗೆ ಸಹ ಅಂಜುತ್ತಾರೆ. ಅವರಿಗೆ ಸ್ವಲ್ಪ ತೊಂದರೆಗಳು ಬಂದರೆ ಸಾಕು, ಅವರು ಗಾಬರಿಗೊಳ್ಳುತ್ತಾರೆ. ಅವರ ವಿಚಾರವು ಕುಂಠಿತವಾಗುತ್ತದೆ. ಆದರೆ ತಿಳಿದವರು ಯಾವುದನ್ನು ಮಾಡುತ್ತಿದ್ದರೂ ಅವರು ಏಕಾಗ್ರಚಿತ್ತದಿಂದ ಮಾಡುತ್ತಾರೆ ಅಂದರೆ ಮನಸ್ಸು ಹಾಕಿ ವಿಚಾರಪೂರ್ವಕವಾಗಿ ಮಾಡುತ್ತಾರೆ. ಇದೇ ಇವರ ವರ್ತನೆಯಾಗಿರುತ್ತದೆ.

## ತಿಳಿವಳಿಕೆ ಇದ್ದವನು ಯಾವಾಗಲೂ ತೃಪ್ತನು.

ತಿಳಿವಳಿಕೆಯುಳ್ಳವನು ತನ್ನ ಜೀವಿತದ ಧ್ಯೇಯವಾವುದು ಮತ್ತು ಅದರ ವ್ಯಾಪಕತೆಯು ಎಷ್ಟು ಎಂಬುವನ್ನು ಮೊದಲು ನಿರ್ಧರಿಸಿಕೊಳ್ಳುತ್ತಾನೆ. ಇವುಗಳನ್ನು ನೋಡಿಕೊಂಡು ಅವುಗಳಿಗೆ ಸಹಾಯವಾಗುವಂಥ ಕಾರ್ಯಗಳನ್ನೇ ಅವನು ಮಾಡುತ್ತ ಹೋಗುತ್ತಾನೆ. ಇವುಗಳಿಗೆ ಸಹಾಯವಾಗದವುಗಳನ್ನು ಅವನು ಬಿಟ್ಟುಕೊಡುತ್ತಾನೆ. ಮತ್ತು ಅವನು ತನಗೆ ದೊರಕಿದ್ದರಲ್ಲಿಯೇ ತೃಪ್ತನಾಗಿರುತ್ತಾನೆ. ದೊರಕದೆ ಇದ್ದವುಗಳನ್ನು ಅವನು ಬಯಸುವದಿಲ್ಲ. ಆದರೂ ಅವನು ಆವಶ್ಯಕವಾದ ವಸ್ತುಗಳು ತನಗೆ ಬೇಡವೆಂದೆನ್ನುವದಿಲ್ಲ. ಅವು ತನಗೆ ಸಾಕಷ್ಟಿರಬೇ

ಕೆಂಬುದನ್ನು ತಿಳಿದುಕೊಂಡು ಅಷ್ಟೇ ಅವನು ಬಯಸುತ್ತಾನೆ. ಯಾಕಂದರೆ ತಾನು ಕಷ್ಟದಲ್ಲಿರಬೇಕೆಂಬ ಅಭಿಪ್ರಾಯವು ಅವನದಲ್ಲ.

## ತಿಳಿವಳಿಕೆಯುಳ್ಳವನು ಧೈರ್ಯಸ್ಥನು

ಸೃಷ್ಟಿಯಲ್ಲಿರುವ ನೈಸರ್ಗಿಕ ಸೃಷ್ಟ ವಸ್ತುಗಳು ಗಂಭೀರವಾಗಿ, ಸಪ್ಪಳಿಲ್ಲದೆ ಕಾರ್ಯಮಾಡುತ್ತವೆ. ಹಾಗೆಯೇ ಇವನು ತನ್ನ ಕಾರ್ಯ ಮಾಡುತ್ತಾನೆ. ಅಂದರೆ ಇವನು ತನ್ನ ಕಾರ್ಯಗಳನ್ನು ಸಾವಧಾನವಾಗಿ ನಡಿಸಿಕೊಂಡು ಹೋಗುತ್ತಾನೆ. ಅವನಲ್ಲಿ ಸದ್ದುಗುಲ್ಲುಗಳಿಲ್ಲ. ಗಂಡಾಂತರಗಳು ಬಂದರೆ ಅವುಗಳನ್ನು ಧೈರ್ಯದಿಂದ ಇದಿರಿಸುತ್ತಾನೆ. ಆದರೆ ಅವುಗಳನ್ನು ನಿಷ್ಕಾರಣವಾಗಿ ಕೆಣಕಿ ಬುದ್ಧಿಪುರಸ್ಸರವಾಗಿ ಅವುಗಳನ್ನು ತನ್ನ ಮೇಲೆ ತಂದುಕೊಳ್ಳುವದಿಲ್ಲ. ಅವನು ಹೀಗೆ ಮಾಡಿದಲ್ಲಿ ಅವುಗಳಿಗೆ ಅವನು ಅಂಜುತ್ತಾನೆಂತಲ್ಲ, ಇದು ಅವನಲ್ಲಿರುವ ಎಚ್ಚರಿಕೆ ಅಥವಾ ಮುಂಜಾಗ್ರತೆಯು ಮೂಲಕ. ಅವನು ಅನೇಕ ಕಲೆಗಳನ್ನು ಕಲಿತಿರಬಹುದು. ಆದರೆ ಅವುಗಳ ಉಪಯೋಗವನ್ನು ಅವನು ತನಗೆ ಹಿತವಾಗುವಂತೆ ಮಾಡಿಕೊಳ್ಳುತ್ತಾನೆ ಅನಿಶ್ಚಯಾತ್ಮಕ ಸ್ಥಿತಿಯು ಅವನಿಗೆ ಉಂಟಾದಲ್ಲಿ ಅವನು ಆಗ ಬಹಳ ಎಚ್ಚರದಿಂದ ನಡೆಯುತ್ತಾನೆ. ಅಭ್ಯುದಯದ ಕಾಲವು ಬಂದರೆ ಮಿತಿಯಿಂದ ಹಿಡಿತದಿಂದ ಇರುತ್ತಾನೆ ಸಂಕಟಕಾಲದಲ್ಲಿ ಧೈರ್ಯಗುಂದುವುದಿಲ್ಲ. ಹೀಗೆ ಅವನಿಗೆ ಎಂಥ ಪರಿಸ್ಥಿತಿಯುಂಟಾದರೂ ಅದರ ಉಪಯೋಗವನ್ನು ಅವನು ಮಾಡಿಕೊಳ್ಳುತ್ತಾನೆ. ಆದರೂ ಅವನ ಆಯುಷ್ಯದಲ್ಲಿ ಅವನಿಗೆ ಕೆಲವು ಅನಿರೀಕ್ಷಿತ ಸಂಕಟಗಳು ಬರಬಹುದು. ಆದರೆ ಅವು ಅವನ ಮನಸ್ಸನ್ನು ದಿಗಿಲು ಬಡಿಸಲಾರವು ಉದಾಹರಣಾರ್ಥವಾಗಿ ಅವನ ಶರೀರಕ್ಕೆ ಯಾತನೆಗಳು ಸಂಭವಿಸಬಹುದು. ಅವನ ಮಕ್ಕಳು ಮರಿಗಳು ಸತ್ತು ಹೋಗಬಹುದು. ಅಥವಾ ಅವನ ಆಸ್ತಿಗೆ ಹಾನಿಯುಂಟಾಗಬಹುದು. ಆದರೆ ಅವು ಅವನನ್ನು ಧೈರ್ಯಗುಂದಿಸಲಾರವು. ಈ ತರದ ಕಷ್ಟಪರಂಪರೆಗಳು ಅವನಿಗೆ ಬಂದು ಕದಾಚಿತ್ ಅವನ ಮನಸ್ಸಿಗೆ ಅವು ಉದ್ವಿಗ್ನತೆಯನ್ನು ಉಂಟುಮಾಡಬಹುದು. ಯಾಕಂದರೆ ಮನುಷ್ಯನ ಮನಸ್ಸು ಕಲ್ಲು ಅಥವಾ ಉಕ್ಕಿನಿಂದ ಮಾಡಿದ್ದಿರುವದಿಲ್ಲ. ಅವನು ಅವುಗಳಷ್ಟು ಕಠೋರನಾದರೆ ಅವನು ಮನುಷ್ಯನೆಂದು ಹೇಳಲು ಬರಲಾರದು. ಆದರೂ ತಿಳಿದವನು ಈ ಎಲ್ಲದರೊಳಗಿಂದ ಪಾರಾಗಿ ಸುರಕ್ಷಿತವಾಗಿ

ತನ್ನ ಪ್ರಪಂಚವನ್ನು ನಡಿಸುತ್ತಾನೆ. ಇಂಥವನಿಂದಲೇ ನಾಡಿನ ಅಭ್ಯುದಯವಾಗುವದು.

## ತಿಳಿವಳಿಕೆಯು ತರಹಗಳು.

ತಿಳಿದವರಲ್ಲಿ ಕೆಲವು ತರಹಗಳಿವೆ. ಇವರಲ್ಲಿ ಇಂಥವರು ಹೆಚ್ಚು ಇಂಥವರು ಕಡಿಮೆ ಎಂದು ಹೇಳುವದು ಸರಿಯಾಗಲಾರದು. ಈ ತರಹಗಳು ಅವರವರ ಸ್ವಭಾವಗಳ ಮೇಲೆ ಅವಲಂಬಿಸಿರುತ್ತವೆ. ಒಬ್ಬನು ಮೃದುಸ್ವಭಾವದವನಿರಬಹುದು. ಅವನು ಜನರು ಹೇಳಿದಕೂಡಲೆ ನಂಬುತ್ತಿರಬಹುದು. ಇನ್ನೊಬ್ಬನು ಹೆಚ್ಚಿಗೆ ವಿಚಾರ ಮಾಡುವವನಿರಬಹುದು. ಇವನು ಎಲ್ಲತರದ ವಿವರಗಳನ್ನು ತಿಳಿದುಕೊಂಡು ಆಮೇಲೆ ಮಾತುಕೊಡುವನು. ಮತ್ತೊಬ್ಬನು ಚನ್ನಾಗಿ ಅರಿತವನು. ಆದರೂ ಮಿತಭಾಷಿಯು. ಆದ್ದರಿಂದ ಅವನಿಗೆ ತಿಳಿದಿಲ್ಲವೆಂಬ ಭಾವವು ಜನರಲ್ಲಿ ಉಂಟಾಗಬಹುದು. ಇನ್ನೊಬ್ಬನು ಮಾತಿನಲ್ಲಿ ಜಾಣನು. ಆದ್ದರಿಂದ ಅವನು ಬಹಳ ಬಲ್ಲವನೆಂಬ ತಿಳುವಳಿಕೆಯು ಜನರಲ್ಲಿ ಉಂಟಾಗಬಹುದು. ಹೀಗೆ ತಿಳಿವಳಿಕೆ ಇದ್ದವರು ಅನೇಕ ರೀತಿಯಾಗಿರುವರು. ಅವರು ಜನರಲ್ಲಿ ಅನೇಕ ಬಗೆಯ ಅಭಿಪ್ರಾಯಗಳನ್ನು ತಮ್ಮಕುರಿತು ಉಂಟುಮಾಡಿಕೊಳ್ಳುತ್ತಾರೆ. ತಿಳಿದವರಲ್ಲಿರುವ ಈ ಬಗೆಯ ತಾರತಮ್ಯವನ್ನು ಜನರು ಅರಿಯುವದು ಬಹಳ ಅವಶ್ಯವಿದೆ. ಇವರೆಲ್ಲರಿಂದಲೂ ಸಮಾಜಕ್ಕೆ ಉಪಯೋಗವಿದೆ.

ತಿಳಿವಳಿಕೆಯ ರೀತಿಯಲ್ಲಿಯೂ ಕೆಲವು ತಾರತಮ್ಯಗಳಿವೆ. ಕೆಲವರು ವಿಷಯಗಳ ಸಾಮಾನ್ಯ ರೀತಿಯನ್ನು ಅಥವಾ ಅವುಗಳ ಹೊಳಹನ್ನು ಮಾತ್ರ ಅರಿತವರಿರಬಹುದು. ಅವರು ಆ ವಿಷಯಗಳನ್ನು ಪೂರ್ಣ ತಿಳಿದವರಾಗಿರಲಿಕ್ಕಿಲ್ಲ. ಬೇರೆ ಕೆಲವರು ವಿಷಯಗಳನ್ನು ಚನ್ನಾಗಿ ತಿಳಿದವರಿರಬಹುದು. ಆದರೆ ಇವರು ತಾವು ತಿಳಿದದ್ದನ್ನು ಕಾರ್ಯರೂಪಕ್ಕೆ ತರುವದಿಲ್ಲ. ಯಾಕಂದರೆ ಇದಕ್ಕೆ ಬೇಕಾಗುವ ಮನೋಧೈರ್ಯ ಅಥವಾ ಸಾಹಸವು ಅವರಲ್ಲಿ ಇರುವದಿಲ್ಲ. ಇಂಥವರು ಅಜ್ಞಾನಿಗಳ ವರ್ಗದಲ್ಲಿಯೇ ಬರುತ್ತಾರೆ. ಇವರಿಂದ ಸಮಾಜಕ್ಕೆ ಅಥವಾ ದೇಶಕ್ಕೆ ಯಾವ ಪ್ರಯೋಜನವೂ ಇರುವದಿಲ್ಲ. ಕೆಲವರು ತಿಳಿದವರಿದ್ದರೂ ಆ ತಿಳಿವಳಿಕೆಯನ್ನು ಪ್ರಯೋಗದಲ್ಲಿ ತರಲು ಬೇಕಾಗುವ

ಸ್ಥಿರಬುದ್ಧಿಯು ಅವರಲ್ಲಿರುವದಿಲ್ಲ. ಅವರು ಬಹಳ ಚಂಚಲ ಸ್ವಭಾವದವರು. ಇಂಥವರಿಂದಲೂ ಯಾವ ಪ್ರಯೋಜನವು ಆಗಲಾರದು. ಹೀಗೆ ತಿಳಿವಳಿಕೆ ಇದ್ದವರಲ್ಲಿ ಅವರವರ ಸ್ವಭಾವ, ವೃತ್ತಿ, ನಡೆ ಇವುಗಳ ಮೂಲಕ ಕೆಲವರು ಸಮಾಜಕ್ಕೆ ಉಪಯೋಗವುಳ್ಳವರೂ ಕೆಲವರು ಉಪಯೋಗವಿಲ್ಲದವರೂ ಆಗುತ್ತಾರೆ.

---

## ಅಷ್ಟಾವರಣ. *

(ಲೇಖಕರು :– ಶ್ರೀ ಮನ್ನಿಡುಮಾಮಿಡಿ ಶ್ರೀಶೈಲ ಶ್ರೀ ಜ. ಚ. ಚನ್ನಬಸವರಾಜ ದೇಶಿಕೇಂದ್ರರು.)

ಮರವೆಯು ಹರಿಯುದವನು, ಮಾತು ಮಂತ್ರವ ಮಾಡದವನು, ಭವಿಯು ಭಕ್ತನ ಮಾಡದವನು, ಅನನುಭವಿಯು ಅನುಭವಿಯಾಗಿಸದವನು, ಪ್ರಪಂಚದುಃಖಿಯು ಪರಮಾರ್ಥ ಸುಖಿಯಾಗುವಂತೆ ಸಗದವನು ಗುರುವೆಂತಾದಾನು ಶ್ರೀ ನಿಡುಮಾಮಿಡಿ ಶ್ರೀಗಿರಿಸೂರ್ಯ ಸಿಂಹಾಸನಾಧೀಶವಾಸ ಕುಮಾರೇಶ್ವರ.

ಅಂಗಭಾವವ ತೊಲಗಿಸಿ ಲಿಂಗಭಾವವ ತೋರದ್ದು, ಸೃಷ್ಟಿಸ್ಥಿತಿ ಲಯಂಗಳ ಭ್ರಷ್ಟಗೊಳಿಸದ್ದು, ಪಾಪಿಯು ಪವಿತ್ರನಾಗಿಸದ್ದು, ಶುದ್ಧಸಿದ್ಧಿಗಳ ಕೈಗೂಡಿಸದ್ದು ಲಿಂಗವೆಂತಪ್ಪುದಯ್ಯ ಶ್ರೀನಿಡುಮಾಮಿಡಿ ಶ್ರೀಗಿರಿಸೂರ್ಯಸಿಂಹಾಸನಾಧೀಶವಾಸ ಕುಮಾರೇಶ್ವರ.

ಜಗದ ಜಂಜಡನ ಕಳೆಯುದವನ, ಜನನಮರಣಗಳ ಮುರಿದಿಕ್ಕದವನ, ಜೀವಭಾವವ ತೊಡೆದು ಶಿವಭಾವ ತುಂಬದವನ, ಜನಜಂಗುಳಿಯನು ಜನಾರ್ದನರೂಪೆಂದು ಭಾವಿಸದವನ, ಜಡಭಾವವಳಿಸಿ ಜ್ಯೋತಿರ್ಲಿಂಗ ಸದ್ಭಾವವುಳಿಸದವನ ಜಂಗಮವೆಂತೆಂಬೆನಯ್ಯ ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶವಾಸ ಕುಮಾರೇಶ್ವರ.

---

* ಪ್ರಕಟವಾಗಲಿರುವ "ವಚನಾಂಜಲಿ" ಎಂಬ ಗ್ರಂಥದಿಂದ.

ದುರಿತವ ದೂಡದೆ, ದುಮ್ಮಾನ ಸುಮ್ಮಾನ ಮಾಡದೆ, ದುರ್ಭಾವವ ಸದ್ಭಾವನೆಸಗದೆ, ಅಜ್ಞಾನಾಂಧಕಾರವ ಕಳೆದು ಸುಜ್ಞಾನ ಪ್ರಭೆಯು ಪ್ರಜ್ವಲಿಸದೆ, ತಲೆಬರಹವ ತೊಡೆಯದೆ, ತನುಗುಣವ ತೊತ್ತುಳಿಯದೆ, ಕರಣೇಂದ್ರಿಯ ಕರ್ಮವ ಕಳೆಯದೆ ಭಸಿತವೆಂತಾದೀತು? ಭೂತಿ ವಿಭೂತಿಯೆಂತಾದೀತು? ಕ್ಷಾರರಕ್ಷವೆಂತಾದೀತು? ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶವಾಸ ಕುಮಾರೇಶ್ವರ.

ಅಕ್ಷಿ ಶಿವಲಕ್ಷಿಸದಿದ್ದರೆ, ಕರಣ ಹರಚರಣವಾಗದಿದ್ದರೆ, ಕಾಯ ಶಿವಕಾಯವಾಗದಿದ್ದರೆ, ರಂಜನಸೃಷ್ಟಿ ರಂಜನರಹಿತ ಸೃಷ್ಟಿಯಾಗದಿದ್ದರೆ ಭವಿ ಮುದ್ರೆ ಭಕ್ತ ಮುದ್ರೆಯಾಗಿ ತೋರದಿದ್ದರೆ ರುದ್ರಾಕ್ಷಿಭದ್ರಾಕ್ಷಿಯುಪ್ಪುದೆ ಶ್ರೀ ನಿಡುಮಾಮಿಡಿ ಶ್ರೀಗಿರಿಸೂರ್ಯಸಿಂಹಾಸನಾಧೀಶವಾಸ ಕುಮಾರೇಶ್ವರ.

ಪರಾಪಶ್ಯಂತಿ ಮಧ್ಯಮ ವೈಖರಿಗಳ ಪರಿಶುದ್ಧಿಗೊಳಿಸದ್ದು, ಅಪಾತ್ರ ಪಾತ್ರವಗೊಳಿಸದ್ದು, ಪದಾರ್ಥ ಪೂರ್ವಾಶ್ರಯುವ ಪರಿಹರಿಸದ್ದು, ರತಿ ಉಪರತಿಗೊಳಿಸದ್ದು,-ಸುವಿರತಿಗೊಳಿಸದ್ದು-ಶಿವರತಿಗೊಳಿಸದ್ದು, ರೂಢವ ನಾರೂಢವಾಗಿಸದ್ದು, ಸೂಕ್ತಿ ಸೂತ್ರವ ಮಾಡದ್ದು ಸನ್ಮಂತ್ರವೆಂತಪ್ಪುದು ಹೇಳಾ ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶವಾಸ ಕುಮಾರೇಶ್ವರ.

—ಮುಂದುವರಿವುದು.

---

# ಕ್ರಿಯೆಯಲ್ಲಿ ಫಲಪದವನ್ನು ಅಪೇಕ್ಷಿಸಬೇಡ.

(ಒಬ್ಬ ಶಿವಾನುಭವಿ.)

ಒಂದಾನೊಂದು ಕಾಲದಲ್ಲಿ ಒಂದು ನದಿ ಮತ್ತು ಒಂದು ಹೊಂಡ ಇವುಗಳ ನಡುವೆ ವಾಗ್ವಾದವು ಉಂಟಾಯಿತು. ಹೊಂಡವು ನದಿಗೆ ಅಂದದ್ದು— "ನೀನು ಮಹಾಮೂರ್ಖನು. ನೀನು ನಿನ್ನ ಎಲ್ಲ ಜಲವನ್ನು ಮತ್ತು ಹತ್ತಿರಿದ್ದ ಎಲ್ಲ ದ್ರವ್ಯವನ್ನು ಸಮುದ್ರಕ್ಕೆ ಒಯ್ದು ಹಾಕಿ ಬಿಡುತ್ತೀ. ನೀನು ನಿನ್ನ ನೀರನ್ನು ಮತ್ತು ದ್ರವ್ಯವನ್ನು ಹೀಗೆ ಸಮುದ್ರಕ್ಕೆ ಹಾಕಿ ಅದನ್ನು ಕಳೆದುಕೊಳ್ಳಬೇಡ. ನಿನ್ನ ದ್ರವ್ಯವನ್ನು ಸಮುದ್ರದಲ್ಲಿ ಸುರಿಯುತ್ತಾ ಹೋದರೆ, ಆ ಸಮುದ್ರದ ನೀರು ಎಂದಾದರೂ ಸಿಹಿಯಾಗಬಲ್ಲುದೇ? ಈಗ ಅದು ಎಷ್ಟು ಕಹಿಯಾಗಿದೆಯೋ ಅಷ್ಟೇ ಕಹಿಯಾಗಿ ಅದು ಮುಂದೆಯೂ ಉಳಿಯುವದು. ಅದರ ಉಪ್ಪೇನೂ ಕಡಿಮೆಯಾಗಲಾರದು. ನೀ ಮಾಡುವ ಕೆಲಸ ಹಂದಿಯ ಮುಂದೆ ಮುತ್ತಿನ ರಾಶಿಯನ್ನು ಸುರುವಿದಂತೆಯೇ ಸರಿ" ಎಂದು ನುಡಿಯಿತು. ಇದು ಒಬ್ಬ ಪ್ರಾಪಂಚಿಕನು ಇನ್ನೊಬ್ಬ ಪ್ರಾಪಂಚಿಕನಿಗೆ ಹೇಳತಕ್ಕ ಸಲಹೆ ಇದೆ. ಪ್ರಾಪಂಚಿಕನು ತನ್ನ ಮುಂದಿನದನ್ನು ಎಣಿಕೆ ಹಾಕುತ್ತಾನೆ. ತಾನು ಮಾಡುವ ಕೆಲಸಗಳ ಪರಿಣಾಮವನ್ನು ಲಕ್ಷಿಸುತ್ತಾನೆ. ಆದರೆ ಆ ನದಿಯು ಇಂಥ ಪ್ರಾಪಂಚಿಕನಾಗಿರಲಿಲ್ಲ. ಅದು ನುಡಿದದ್ದು— "ಎಲೋ ಹೊಂಡವೇ, ನಿನ್ನ ಮಾತನ್ನು ನಾನು ಒಪ್ಪಲಾರೆ. ನನ್ನ ಕಾರ್ಯದಲ್ಲಿ ನನಗೆ ಯಾವ ಹಿತವಾಗುವದು ಮತ್ತು ಆ ಕಾರ್ಯದಿಂದ ಯಾವ ಪರಿಣಾಮಗಳಾಗುವವು ಎಂಬುದರ ಗೊಡವೆ ನನಗೇಕೆ? ನನಗೆ ಜಯವಾದರೂ ಅಷ್ಟೇ, ಅಪಜಯವಾದರೂ ಅಷ್ಟೇ. ದುಡಿಕೆಯು ಸಲುವಾಗಿಯೇ ನಾನು ದುಡಿಯುತ್ತೇನೆ. ದುಡಿಕೆಯೇ ನನಗೆ ಪ್ರೀತಿಯ ವಸ್ತುವು. ದುಡಿಯುವದೇ ನನ್ನ ಜೀವನವು. ಕಾರ್ಯ ಮಾಡುತ್ತಿರುವದೇ ನನ್ನ ಪ್ರಾಣವು. ನನ್ನ ಆತ್ಮನಲ್ಲಿ—ನನ್ನ ನಿಜವಾದ ಆತ್ಮನಲ್ಲಿ— ಚೈತನ್ಯ ಅಥವಾ ಶಕ್ತಿಯು ಎಂಬುದಿದೆ. ಆ ಶಕ್ತಿ ಇರುವವರೆಗೆ ನಾನು ಕಾರ್ಯ ಮಾಡುವೆನು. ಆ ಕಾರ್ಯದ ಫಲವನ್ನು ನಾನು ಇಚ್ಛಿಸುವದಿಲ್ಲ"- ಎಂದು ಉತ್ತರ ಕೊಟ್ಟಿತು.

ಇದು ಒಬ್ಬ ಶಿವಾನುಭವಿಗೆ ಸಲ್ಲುವ ನುಡಿಯಾಗಿದೆ.

ಮುಂದೆ ಆ ನದಿಯು ತನ್ನ ಕೆಲಸ ಅಂದರೆ ಸಮುದ್ರದಲ್ಲಿ ನೀರು ಸುರಿಯುವದನ್ನು ಹಾಗೆಯೇ ನಡಿಸಿತು. ಅದು ತನ್ನ ಲಕ್ಷಾವಧಿ ಅಬ್ಜಾವಧಿ ಕೊಡ ಸಿಹಿ ನೀರನ್ನು ಅದರಲ್ಲಿ ಸುರಿಯಿತು. ಹೀಗೆ ಮಾಡು ವದರಿಂದ ತನಗೇನು ಲಾಭವೆಂಬುದನ್ನು ಅದು ಲಕ್ಷಿಸಲಿಲ್ಲ. ಇತ್ತ ಲೋಭಿಯಾದ ಹೊಂಡವು ತನ್ನ ನೀರನ್ನು ಕಾಯುತ್ತಲೇ ಕುಳಿತಿತು. ಆದರೆ ಇದರ ಪರಿಣಾಮವು ಬೇರೆಯಾಯಿತು ಆ ನೀರು ಮೂರು ನಾಲ್ಕು ತಿಂಗಳುಗಳಲ್ಲಿ ಬಹಳ ಕಡಿಮೆಯಾಯಿತು. ಅದರಿಂದ ಆ ನೀರು ನಾರಹತ್ತಿತು. ಕೊಳೆಯುತ್ತಿರುವ ಹೊಲಸು ಅದರಲ್ಲಿ ತುಂಬಿತು. ಕ್ರಿಮಿಗಳು ಅದರಲ್ಲಿ ಓಡಾಡಹತ್ತಿದವು. ಅದರ ಸಮೀಪದಲ್ಲಿ ಯಾರೂ ಹಾಯದಂತೆ ಆಯಿತು. ಆದರೆ ಆ ಹೊಳೆಯು ಮೊದಲಿದ್ದ ಸ್ಥಿತಿ ಯಲ್ಲಿಯೇ ಉಳಿಯಿತು ಅದರಲ್ಲಿ ಶುದ್ಧ ಸ್ವಚ್ಛ ತಿಳಿಯಾದ ನೀರು ಹರಿಯುತ್ತಲೇ ಇತ್ತು. ಶಾಶ್ವತವಾಗಿ ಹರಿಯುವ ಬುಗ್ಗೆಗಳು ಮೊದ ಲಿನಂತೆಯೇ ಅದಕ್ಕೆ ನೀರು ತಂದು ಸುರಿಯುತ್ತಿದ್ದವು. ಸಮುದ್ರದ ನೀರು ಸದ್ದಿಲ್ಲದೆ ಸಪ್ಪಳಿಲ್ಲದೆ ಸಾವಕಾಶವಾಗಿ ಉಗಿಯಾಗಿ ಮೇಲಕ್ಕೆ ಹೋಗಿ ಅದು ಮೋಡಗಳ ಮೂಲಕ ನೆಲಕ್ಕಿಳಿದು ಭೂಮಿಯಲ್ಲಿ ಇಂಗಿ ಆ ಬುಗ್ಗೆಗಳೊಳಗಿಂದ ಹರಿದುಬಂದು ನದಿಯನ್ನು ಕೂಡುತ್ತಿತ್ತು. ಹೀಗೆ ಆ ಬುಗ್ಗೆಗಳು ನದಿಯ ನೀರನ್ನು ಬತ್ತಗೊಡಲಿಲ್ಲ. ಸಕಾಲದಲ್ಲಿ ಸಮು ದ್ರದ ಮೂಲಕ ಕಾರ್ಮೋಡಗಳಾಗುವವು. ಆ ಕಾರ್ಮೋಡಗಳಿಂದ ಸ್ವಚ್ಛ ಸಿಹಿಯಾದ ನೀರು ಕೆಳಕ್ಕೆ ಸುರಿದು ನದಿಗಳಲ್ಲಿ ಹರಿದು ಬರುತ್ತಿತ್ತು. ಹೀಗೆ ಆ ನದಿಯು ಸಮುದ್ರಕ್ಕೆ ನೀರನ್ನು ಕೊಡುತ್ತಬಂದರೂ ಅದು ಎಂದೂ ಒಣಗದೆ ಶುದ್ಧ ಸಿಹಿ ನೀರಿನಿಂದ ತುಂಬಿಕೊಂಡು ಶಾಶ್ವತವಾಗಿ ಸಾವಿರಾರು ವರ್ಷಗಳಿಂದ ಹರಿದುಬರುತ್ತಿತ್ತು.

ನದಿಯ ಆಚರಣೆಯು ಶಿವಾನುಭವಿಗೆ ಸಲ್ಲುವ ಆಚರಣೆಯು. ಇದು ಶಿವಾನುಭವಿಯು ಮಾಡುವ ಕಾಯಕದ ರೀತಿಯು. ಅವನು ಫಲಪದವನ್ನು ಅಪೇಕ್ಷಿಸನು. ಅರ್ಪಣಭಾವಯುಕ್ತನಾಗಿ ಪ್ರತಿಕ್ಷಣ ಕಾರ್ಯಮಾಡುತ್ತಿರುವನು. ಹೀಗೆ ಕಾರ್ಯ ಮಾಡುತ್ತಿರುವದೇ ಅವನ ಧ್ಯೇಯವು, ಜೀವಿತವು.

ಆದರೆ ಕ್ಷುದ್ರವಾದ ಲೋಭಿಯಾದ ಹೊಂಡವು ತನ್ನ ಮುಂದಿನ ಗತಿ ಏನೆಂಬುದನ್ನು ಚಿಂತಿಸುತ್ತ ಕುಳಿತಿತು. ಇದರಿಂದ ಅದು ಅನರ್ಥಕ್ಕೆ ಒಳಗಾಯಿತು. ಆದ್ದರಿಂದ ಮನುಷ್ಯನಾದವನು ಕೆಲಸದ ಸಲುವಾಗಿಯೇ ಕೆಲಸ ಮಾಡಬೇಕು. ಅವನು ಪ್ರತಿಫಲವನ್ನು ಆಶಿಸಕೂಡದು. ದುಡಿಯುವದೇ ಅವನ ಧ್ಯೆಯುವಾಗಿರಬೇಕು.

ಹೀಗೆ ಕೆಲಸ ಮಾಡಿದಲ್ಲಿ ಅವನಲ್ಲಿ ಸಿಟ್ಟು ಎಂಬುದು ಹೋಗಿ ಬಿಡುತ್ತದೆ. ಇಂಥವನು ಯಾರನ್ನೂ ದ್ವೇಷಿಸನು. ಇದೇ ಇಂದ್ರಿಯ ನಿಗ್ರಹವು. ಶಾಶ್ವತ ಸಮಾಧಾನವನ್ನುಂಟು ಮಾಡುವಂತಹದು. ಮನುಷ್ಯನು ಪರಿಣಾಮಗಳೇನಾಗುವವೆಂಬುದನ್ನು ಆಲೋಚಿಸಬಾರದು. ಅವನು ಯೋಗ್ಯವಾದದ್ದನ್ನು ಮಾಡುತ್ತಲೇ ಹೋಗಬೇಕು. ಜನರು ಸಹಾಯ ಮಾಡಿಯಾರೆಂಬುದನ್ನು ಸಹ ಅವನು ಆಶಿಸಕೂಡದು.

ನೀನೊಬ್ಬ ಗ್ರಂಥಕಾರನಿರಬಹುದು. ಗ್ರಂಥ ಬರೆಯಲು ನೀನು ಬಹಳ ಕಷ್ಟಪಟ್ಟಿರಬಹುದು. ಆಗರೆ ಜನರು ನಿನ್ನ ಗ್ರಂಥಗಳಿಗೆ ಅನುಕೂಲ ವಿಮರ್ಶೆ ಮಾಡುವರೆಂಬದನ್ನು ನಿರೀಕ್ಷಿಸಬೇಡ. ಅಥವಾ ಕಡುತರ ಟೀಕೆ ಮಾಡುವರೆಂತಲೂ ನಿರೀಕ್ಷಿಸಬೇಡ ಜನರು ನಿನ್ನ ಕೃತಿಗಳನ್ನು ಹೇಗೆ ತಿಳಿಯುವರೆಂಬುದನ್ನು ಸಹ ಲಕ್ಷಿಸಬೇಡ. ಅವರಿಂದ ಏನೂ ಆಶಿಸಬಾರದು. ಕೆಲಸದ ಸಲುವಾಗಿಯೇ ನೀನು ಕೆಲಸ ಮಾಡುತ್ತ ಹೋಗಬೇಕು.

ಈ ಪ್ರಕಾರ ಮನುಷ್ಯನಾದವನು ಕೆಲವೊಂದು ಅಭಿಲಾಷೆಗಳಿಗೊಳಗಾಗದೆ ದುಡಿಯಬೇಕು. ಅಭಿಲಾಷೆಯಿಂದ ದೂರಿರಬೇಕು. ಇದರ ಅರ್ಥವು ಕೆಲಸದಿಂದ ದೂರ ಇರಬೇಕೆಂಬುದಲ್ಲ. ಆದರೆ ಕೆಲಸದ ಹಂಬಲ, ಅದರ ಚಿಂತೆ, ಇವುಗಳಿಂದ ದೂರಿರಬೇಕು ಎಂಬ ಅರ್ಥವು. ಇದರಿಂದ ಮನಸ್ಸಿನ ಕ್ಷುಬ್ಧತೆ ಹೋಗಿ ಬಿಡುತ್ತದೆ. ಮನುಷ್ಯನ ಮನೋವೃತ್ತಿಯು ಬದಲಾಗುತ್ತದೆ. ಹೀಗೆ ಆದಲ್ಲಿ ಅವನಲ್ಲಿ ಎಷ್ಟು ಗಾಂಭೀರ್ಯ, ಎಷ್ಟು ಸುಖ, ಎಷ್ಟು ಸಮಾಧಾನವಿರುವದೆಂಬುದನ್ನು ಹೇಳತೀರದು. ಮನುಷ್ಯನ ಜೀವಿತದಲ್ಲಿ ನಾನಾತರದ ಮನೋವಿಕಾರಗಳು ಉಂಟಾಗುತ್ತವೆ. ಅವುಗಳನ್ನು ದೂರಮಾಡಬೇಕಾದಲ್ಲಿ ನಿರಂತರ ಕೆಲಸ ಮಾಡುತ್ತಿರುವದೊಂದೇ ಉತ್ತಮ ಉಪಾಯವು.

ಮನುಷ್ಯನು ತಾನು ಐಕ್ಯಸ್ಥಿತಿ, ಮೋಕ್ಷ, ಅಥವಾ ಸಾಮರಸ್ಯ ವನ್ನು ಹೊಂದಬೇಕೆಂದು ಅಪೇಕ್ಷಿಸುತ್ತಾನೆ. ಕೆಲಸದಲ್ಲಿ ಮಗ್ನನಾದ ವನಲ್ಲಿ ಸಾಮರಸ್ಯ ಅಥವಾ ಐಕ್ಯದ ಅಂಶವು ಇದ್ದೇ ಇರುತ್ತದೆ. ಈ ಅಂಶವನ್ನು ಅವನು ನಿತ್ಯ ಕಾಯಕದಿಂದ ತನ್ನಲ್ಲಿ ದೃಢಪಡಿಸಿಕೊಳ್ಳ ಬೇಕು. ಈ ಅಂಶಕ್ಕೆ ನೀರುಣಿಸಿ ಬೆಳಸುತ್ತಲೇ ಹೋಗಬೇಕು. ಇದ ರಿಂದ ಅವನಿಗೆ ಶಾಶ್ವತ ಸುಖವು ದೊರೆಯುತ್ತದೆ.

ಇದೇ ಆತ್ಮಾನುಭವವು, ಶಿವಾನುಭವವು, ಲಿಂಗಾನುಭವವು, ಲಿಂಗಾಂಗ ಸಾಮರಸ್ಯವು, ಪರಮಾತ್ಮನನ್ನು ಕಾಣುವದು. ಈ ರೀತಿ ಕೆಲಸ ಮಾಡುವವನಲ್ಲಿ ಈ ಶಿವಾನುಭವವು ತಾನಾಗಿಯೇ ಅವನಿಗೆ ತಿಳಿಯದಂತೆ ಉಂಟಾಗಹತ್ತುತ್ತದೆ.

ಕೆಲಸ ಮಾಡವವನು ಯಾವಾಗಲೂ ಪರಿಶುದ್ಧನ. ಅವನಲ್ಲಿ ಅವಗುಣಗಳು ಬರಲಾರವು. ಅವನಲ್ಲಿ ಆನಂದವು ಯಾವಾಗಲು ವಾಸ ಮಾಡುತ್ತದೆ. ಈ ಆನಂದವೇ ಅವನು ಮಾಡುತ್ತಿರುವ ಕೆಲಸಕ್ಕೋ ಸ್ಕರ ದೊರೆಯುವ ಪ್ರತಿಫಲವು, ಪಾರಿತೋಷಕವು.

ಇಂಥ ಆನಂದದಲ್ಲಿ ಮುಳುಗಿದವನು ಯಾವಾಗಲೂ ಆರೋಗ್ಯ ವುಳ್ಳವನಾಗಿರುತ್ತಾನೆ. ಬೇನೆಗಳು ಅವನಿಂದ ದೂರಿರುತ್ತವೆ. ಅವನ ರಕ್ತವು ಅವನಲ್ಲಿ ಶುದ್ಧವಾಗಿ ಹರಿಯುತ್ತದೆ. ಸೋಂಕು ರೋಗಗಳು ಅವನನ್ನು ತಗಲಲಾರವು.

ಸ್ವಾರ್ಥಿಯಾದವನು ಇಂಥ ಸುಖವನ್ನು ಪಡೆಯುವದನ್ನು ಬಿಟ್ಟು ಕೊಟ್ಟು ಕೆಲವೊಂದು ಉದ್ದೇಶವನ್ನಿಟ್ಟುಕೊಂಡು ಕೆಲಸಮಾಡುತ್ತಾನೆ. ಅವನು ಪ್ರಪಂಚದ ಆಶೆಗೊಳಗಾಗಿರುತ್ತಾನೆ. ಮಹತ್ವಾಕಾಂಕ್ಷೆಗಳಿಂದ ಅವನು ತಳಮಳಿಸುತ್ತಾನೆ. ಇವನು ಯಾವಾಗಲೂ ಚಿಂತಾತುರನಾಗಿ ರುತ್ತಾನೆ. ಇವನು ಕ್ಷುಲ್ಲಕ ಧ್ಯೇಯಗಳನ್ನಿಟ್ಟುಕೊಂಡು ನಡೆಯುತ್ತಾನೆ. ಇವನು ಪದಾರ್ಥಗಳ ಬಾಹ್ಯಮೆರುಗುಗಳಿಗೆ ಮನಸೋತಿರುತ್ತಾನೆ. ಇದ ರಿಂದ ಅವನ ಪ್ರಗತಿಯು ನಿಂತು ಹೋಗಿ ಬಿಡುತ್ತದೆ.

ಆದ್ದರಿಂದ ಮನುಷ್ಯನು ದುಡಿಯಲೇಬೇಕು. ದುಡಿತದಿಂದ ತತ್ ಕ್ಷಣ ಅವನಿಗೆ ಆನಂದವಾಗಹತ್ತುತ್ತದೆ. ಆ ಆನಂದದಲ್ಲಿ ಅವನು ಮಗ್ನ

ನಾಗಿರುತ್ತಾನೆ ಈ ಆನಂದವನ್ನು ಸರಿಗಟ್ಟುವಂಥ ಪಾರಿತೋಷಕವು ಜಗತ್ತಿನಲ್ಲಿ ಯಾವದೂ ಇಲ್ಲ.

ಸಂಸಾರದ ವ್ಯಾಮೋಹವನ್ನು ಬಿಡುವದೆಂದರೆ ಇದೇ ಇರುತ್ತದೆ. ಇದೇ ಪರಮಧರ್ಮವು, ಪರಮಾತ್ಮನ ದಿವ್ಯ ಪೂಜೆ.

ಕೆಲಸ ಮಾಡುವಲ್ಲಿ ಒಂದು ದೊಡ್ಡ ಹೊಣೆಯು ಬಂದಿತೆಂದು ಭೀತಿಯನ್ನು ಎಂದೂ ತಾಳಬಾರದು. ಕೆಲಸದಲ್ಲಿ ಹಿಂಜರಿಯಬಾರದು. ಅದೊಂದು ಆತ್ಮೋದ್ಧಾರಕ್ಕೋಸ್ಕರ ಬಂದೊದಗಿದ ಸುಸಂಧಿ ಎಂದು ತಿಳಿಯಬೇಕು. ಆದ್ದರಿಂದ ಆ ಕೆಲಸದಿಂದ ತನಗಾಗುವ ಪ್ರತಿಫಲವೇನೆಂದು ಕೇಳಬಾರದು. ಮನುಷ್ಯನು ಚಿರಕಾಲ ವಾಸಿಸುವದು ಈ ಜಗದಲ್ಲಿಯೇ, ಅವನು ಯಾನಾಗಲೂ ಕಾಲಕಳೆವುದು ಇಲ್ಲಿಯೇ, ಸ್ವರ್ಗನರಕಗಳೆಂಬುವು ಇಲ್ಲಿಯೇ, ಸುಖದುಃಖಗಳೆಲ್ಲ ಇಲ್ಲಿಯೇ ಇವೆ ಎಂದು ಭಾವಿಸಿ ಕಾರ್ಯತತ್ಪರನಾಗಿ ಕೆಲಸಮಾಡಬೇಕು. ಸತ್ತಮೇಲೆ ಏನಾಗುವದೆಂಬುದು ಯಾರಿಗೆ ಗೊತ್ತು? ಕೆಲಸದಲ್ಲಿಯೇ ಸ್ವರ್ಗವಿದೆಂದು ಭಾವಿಸಿ ಕಾರ್ಯ ಮಾಡುವುದು. ಇದು ಶಿವಾನುಭವಿಯ ಆಚರಣೆಯು. ಕಾಯಕವೆಂದರೆ ಇದೇ.

ಇಂಗ್ಲಿಷದಲ್ಲಿ ಒಂದು ನಾಣ್ನುಡಿ ಇದೆ. "First deserve and then desire" ಎಂದರೆ ಮೊದಲು ಸಾಮರ್ಥ್ಯವನ್ನು ಹೊಂದು, ಆಮೇಲೆ ಇಚ್ಛಿಸು, ಎಂದು ಇದರ ಅರ್ಥವಿದೆ. "ಮೊದಲು ಸಾಮರ್ಥ್ಯವನ್ನು ಹೊಂದು" ಇದು ಸರಿಯಾದ ಮಾತು. ಆದರೆ ಅದರ ತರುವಾಯದ ಮಾತು, "ಆಮೇಲೆ ಇಚ್ಛಿಸು" ಇದು ಮಾತ್ರ ಮನುಷ್ಯನಲ್ಲಿ ಇರಕೂಡದು. ಆ ಇಚ್ಛೆಯನ್ನು ಅವನು ಹೊಡೆದುಹಾಕಬೇಕು. ಕಾರ್ಯಮಾಡುತ್ತಿರುವದೇ ಅವನ ಉದ್ದೇಶವಾಗಿರಬೇಕು. ಅದೇ ಅವನ ಧ್ಯೇಯ, ಅದೇ ಅವನಿಗೆ ದೊರೆಯುವ ಪ್ರತಿಫಲ ಮಾಡುವ ಕಾರ್ಯದ ಪರಿಣಾಮ ಪರಮಾತ್ಮನ ಕಡೆಗೆ. ಪರಿಣಾಮದಲ್ಲಿ ಕಷ್ಟವಾದರೂ ಅಷ್ಟೇ, ಸುಖವಾದರೂ ಅಷ್ಟೇ.

ಕೆಲವೊಂದು ಕಲ್ಲು ಗೋಡೆಯಲ್ಲಿರಲು ಯೋಗ್ಯವಿದೆಂದು ಭಾವಿಸಿರಿ. ಹಾಗಿದ್ದರೆ ಆ ಕಲ್ಲು ಕಡೆಗೆ ಗೋಡೆಯಲ್ಲಿಯೇ ಹೋಗಿ ಬೀಳುವದು. ಇದು ನಿಶ್ಚಯ. ಅದು ಬೀದಿಯ ಮೇಲೆ ಬೀಳುವದಿಲ್ಲ.

ದೀವಿಗೆ ಉರಿಯುತ್ತಿದೆಂದು ತಿಳಿಯಿರಿ. ಅದು ಹೊನ್ನೀ ಹುಳುಗಳು ತನ್ನಲ್ಲಿಗೆ ಬರಬೇಕೆಂದು ಅದು ಅವುಗಳಿಗೆ ಎಂದೂ ನಿಮಂತ್ರಣ ಕೊಡುವದಿಲ್ಲ. ಆ ಹುಳುಗಳು ತಾವಾಗಿಯೇ ಆ ದೀವಿಗೆಯ ಕಡೆಗೆ ಬರುತ್ತವೆ. ಕೆಲವೊಂದು ಸ್ಥಳದಲ್ಲಿ ಸ್ವಚ್ಛವಾಗಿ ಜುಳುಜುಳು ಹರಿಯುವ ನೀರು ಇದೆ ಎಂದು ತಿಳಿಯಿರಿ. ಜನರು ತಾವಾಗಿಯೇ ಅದಿದ್ದಲ್ಲಿಗೆ ಹೋಗುತ್ತಾರೆ. ಆ ನೀರು ಜನರು ತನ್ನಲ್ಲಿಗೆ ಬರಬೇಕೆಂದು ಎಂದೂ ಅವರನ್ನು ಕರೆಯುವದಿಲ್ಲ. ಚಂದ್ರಮನು ಉದಯಿಸಿದರೆ ಸಾಕು. ಅದರ ಸ್ವಚ್ಛ ಬೆಳದಿಂಗಳಲ್ಲಿ ಆನಂದಪಡಲು ಜನರು ತಾವಾಗಿಯೇ ಮನೆಯಿಂದ ಹೊರಗೆ ಬಂದು ಅದರಲ್ಲಿ ಅಡ್ಡಾಡುವರು. ಆ ಬೆಳದಿಂಗಳು ತನ್ನಲ್ಲಿ ಬರಬೇಕೆಂದು ಅವರನ್ನು ಎಂದೂ ಕರೆಯುವದಿಲ್ಲ. ಹಾಗೆ ಯೋಗ್ಯತೆಯು ಇದ್ದಕೂಡಲೆ ಅದಕ್ಕೆ ಉಚಿತವಾದ ಸ್ಥಾನವು ದೊರೆಯಲೇಬೇಕೆಂದು ಜಗತ್ತಿನ ನಿಯಮವಿದೆ. ಆದ್ದರಿಂದ ಕಾರ್ಯ ಮಾಡುವವನು ಜನರನ್ನು ಆಶಿಸುತ್ತ ಕುಳ್ಳಿರುವದು ಬೇಡ.

ಆದ್ದರಿಂದ ಮನುಷ್ಯನು ದುಡಿಯಲೇಬೇಕು ಕೆಲಸ ಮಾಡಲೇಬೇಕು. ಸತತವಾಗಿ ಕೆಲಸ ಮಾಡಬೇಕು. ಆಗ ಆತನ ನಿಜತ್ವವು ಜನರಿಗೆ ತೋರಹತ್ತುತ್ತದೆ. ಜನರು ಅವನನ್ನು ನೋಡಿದರೆ ಅವನು ತನ್ನ ಕಾರ್ಯದಲ್ಲಿ ಮುಳುಗಿಹೋಗಿರುತ್ತಾನೆಂದು ಅವರಿಗೆ ಕಾಣಬಹುದು. ಆದರೆ ಈ ಸ್ಥಿತಿಯೇ ಕೈವಲ್ಯವು. ಅದೇ ನಿರ್ವಾಣವು, ಅದೇ ಸಾಮರಸ್ಯವು. ಇಂಥವನ ಕಡೆಗೆ ಜಯವೆಂಬುದು ತಾನಾಗಿಯೇ ಹರಿದು ಬರುತ್ತದೆ. ಅವನ ಕೆಲಸವನ್ನು ಹೊಗಳುವಂಥವರು ತಾವಾಗಿಯೇ ಮುಂದೆ ಬರುವರು.

ಆರಂಭದಲ್ಲಿ ಕೆಲಸ ಮಾಡುವಲ್ಲಿ ತೊಂದರೆಗಳು ಉಂಟಾಗಬಹುದು. ಜನರು ನಿಂದಿಸಬಹುದು. ಇದರೆ ಆತ್ಮಾರ್ಪಣ ಭಾವದಿಂದ ಕೆಲಸ ಮಾಡುವವನು ಇಂಥ ಪಿತಕ್ಕೆ ಧೈರ್ಯಗೆಡುವದಿಲ್ಲ. ಜೀಜಸ್ ಕ್ರೈಸ್ತನನ್ನು ಜನರು ಮೊದಲು ಉಪೇಕ್ಷಿಸಿದರು. ನಿಂದಿಸಿದರು. ಕಡೆಗೆ ಅವನನ್ನು ಶಿಲುಬೆಗೆ ಹಾಕಿದರು. ಸಾಕ್ರೆಟಿಸನಂಥ ತತ್ವಜ್ಞಾನಿಗೆ ವಿಷವನ್ನು ಕುಡಿಸಿ ಕೊಂದರು. ಬುದ್ಧನು ತೀರಿದ ಬಳಿಕ ಅವನನ್ನು ಯಾರೂ ನೆನಿಸಲಿಲ್ಲ. ಬಸವನು ಅಂತ್ಯಕಾಲದಲ್ಲಿ ಕಲ್ಯಾಣ

ವನ್ನು ಬಿಟ್ಟು ಓಡಿಹೋಗಬೇಕಾಯಿತು. ಆದರೆ ಇವರು ಪ್ರಸ್ಥಾಪಿಸಿದ ತತ್ವಗಳು ಶಾಶ್ವತವಾಗಿ ಈಗಲೂ ಉಳಿದವೆ.

ಶಿವಶರಣರ ಚರಿತ್ರೆಗಳನ್ನು ನೋಡಿರಿ. ಅವರು ಬಹು ಕ್ಲೇಶಪಟ್ಟಿದ್ದಾರೆ. ಪರಿವಳಿಗೆ (ಪರಳಿಯ) ವೈಜವ್ವೆ, ಸೋಹಳಿಯ ಸೋಮವ್ವೆ, ಹರಳಯ್ಯ ಮಧುವಯ್ಯಗಳು, ನಾನದಿಗೆಯ ಗುಡ್ಡವ್ವೆ, ಕೋವೂರು ಬ್ರಹ್ಮಯ್ಯ ಹೀಗೆ ಅನೇಕರು ಬಹಳ ಕಷ್ಟಪಟ್ಟಿದ್ದಾರೆ. "ಅರೆವನಯ್ಯ ಸಣ್ಣವಾಹನ್ನಕ್ಕ, ಒರೆವನಯ್ಯ ಬಣ್ಣಗಾಂಬನ್ನಕ್ಕ, ಅರೆದರೆ ಸಣ್ಣಗಾಗಿ, ಒರೆದರೆ ಬಣ್ಣಬಂದರೆ ಕೂಡಲಸಂಗಮದೇವನೊಲಿದು ಸಲಹುವ" ಎಂದು ಬಸವೇಶ್ವರನ ನುಡಿ ಇದೆ. ಸುಗಂಧ ದ್ರವ್ಯವನ್ನು ಮೊದಲು ಜಜ್ಜಬೇಕಾಗುತ್ತದೆ. ಆಮೇಲೆ ಅದರ ಸುವಾಸನೆಯು ಹೊರಸೂಸುತ್ತದೆ. ನೆಲದಲ್ಲಿ ಬೀಜವನ್ನು ಮೊದಲು ಬಿತ್ತುತ್ತಾರೆ. ಆ ಬೀಜವು ಮೊದಲು ನಾಶವಾಗಬೇಕು. ಆಮೇಲೆ ಅದರೊಳಗಿಂದ ಮೊಳಕೆಯು ಹಾಯ್ದು ಗಿಡವು ಹೊರಬೀಳುತ್ತದೆ. ಹಾಗೆಯೇ ಮನುಷ್ಯನು ತನ್ನನ್ನು ಮೊದಲು ಅಡಗಿಸಬೇಕು, ತನ್ನನ್ನು ಮರೆಯಿಸಬೇಕು. ಅಂದರೆ ನಾನು ನನ್ನದೆಂಬ ಸ್ವಾರ್ಥವನ್ನು ಅವನು ತೊಲಗಿಸಬೇಕು. ಮುಂದಿನ ಹಂಬಲವನ್ನು ಬಿಡಬೇಕು. ಅವುಗಳನ್ನು ಬಿಟ್ಟು ಕೆಲಸದಲ್ಲಿ ತೊಡಗಬೇಕು. ಹೀಗೆ ಮಾಡಿದಲ್ಲಿ ಅವನಿಗೆ ಶಾಶ್ವತ ಸುಖವು ದೊರಕುವದು.

---

# ಸ್ತ್ರೀ ಸ್ವಾತಂತ್ರ್ಯ

(ಲೇಖಕಃ- ಶ್ರೀಯುತ ಕಲ್ಯಾಣಪ್ಪಾ ಬ್ಯಾಳಿ, ಬಿ. ಎ. ಬಿ. ಟಿ. ವಿಜಾಪುರ)



ಸ್ತ್ರೀಯರಿಗೆ ಸ್ವಾತಂತ್ರ್ಯವನ್ನು ಕೊಡಬೇಕೋ ಹೇಗೆ? ಕೊಟ್ಟರೆ ಎಷ್ಟರಮಟ್ಟಿಗೆ ಕೊಡಬೇಕು? ಎಂಬ ವಿಷಯವು ಅತ್ಯಂತ ಮಹತ್ವದ್ದಾಗಿದೆ. ಇತ್ತೀಚಿಗೆ ಪಾಶ್ಚಾತ್ಯರ ಅನುಕರಣವು ಹೆಚ್ಚಾಗಿ ಸ್ವಾತಂತ್ರ್ಯದ ಬಿರುಗಾಳಿಯು ಎಲ್ಲೆಡೆಯಲ್ಲಿಯೂ ತುಂಬಿಕೊಂಡಿದೆ. ಸ್ತ್ರೀಯರು ಕೇವಲ ವಿಷಯೋಪಭೋಗದ ವಸ್ತುಗಳೆಂದೂ ಅವರು ಯಾವಾಗಲೂ ಗಂಡಸರ ಗುಲಾಮರಾಗಿಯೇ ಕಾಲಕಳೆಯಬೇಕೆಂದೂ ಅಡಿಗೆಯ ಮನೆಯ ವ್ಯವಸ್ಥೆ ಮಕ್ಕಳ ಜೋಪಾನಗಳಷ್ಟೇ ಅವರ ಕಾರ್ಯಕ್ಷೇತ್ರಗಳೆಂದೂ ತಿಳಿಯುವದು ಮೂರ್ಖತನ. ಅವರ ಕಾರ್ಯಕ್ಷೇತ್ರವು ಅದಕ್ಕೂ ವಿಸ್ತಾರವಾಗಿರುವದೆಂದು ಎಲ್ಲರೂ ಒಪ್ಪತಕ್ಕ ಮಾತಾಗಿದೆ. ಹೀಗಿದ್ದ ಪಕ್ಷದಲ್ಲಿ ಸ್ತ್ರೀಯರಿಗೆ ಗಂಡಸರಿಗೆ ಕೊಡುವ ಶಿಕ್ಷಣವನ್ನೆಲ್ಲ ಕೊಡಬಹುದೇ? ಸ್ತ್ರೀ ಪುರುಷರಿಗೆ ಕೂಡಿಯೇ ಒಂದೇ ವಿದ್ಯಾಲಯದಲ್ಲಿ ಶಿಕ್ಷಣ ಕೊಡಬಹುದೇ? ಸ್ತ್ರೀಯರು ನೌಕರಿ ಮಾಡಬಹುದೇ? ಅವರು ಗಂಡಸರೊಡನೆ ಕೂಡಿಕೊಂಡು ಸಾರ್ವಜನಿಕ, ಸಾಮಾಜಿಕ, ರಾಜಕೀಯ ಧಾರ್ಮಿಕ ರಂಗಗಳಲ್ಲಿ ಕಾರ್ಯಗಳನ್ನು ಮಾಡಬಹುದೇ? ಸ್ತ್ರೀಯರು ಪುನರ್ವಿವಾಹವನ್ನು ಮಾಡಿಕೊಳ್ಳಬಹುದೇ? ಇತ್ಯಾದಿ ಪ್ರಶ್ನೆಗಳು ಉದ್ಭವಿಸುವವು.

“ನ ಸ್ತ್ರೀ ಸ್ವಾತಂತ್ರ್ಯಮರ್ಹತಿ” “ನಾರೀ ಪ್ರತ್ಯಕ್ಷ ರಾಕ್ಷಸೀ” “ಸ್ತ್ರೀಯರು ಬಾಲ್ಯದಲ್ಲಿ ತಂದೆಯಿಂದಲೂ ಪ್ರಾಯದಲ್ಲಿ ಗಂಡನಿಂದಲೂ ಮುಪ್ಪಿನಲ್ಲಿ ಮಗನಿಂದಲೂ ರಕ್ಷಿಸಲ್ಪಡುವವಳಾದ್ದರಿಂದ ಆಕೆಗೆ ಸ್ವಾತಂತ್ರ್ಯವಿಲ್ಲ.” ಈ ರೀತಿಯಾಗಿ ಸ್ತ್ರೀಯರನ್ನು ಅಧೋಗತಿಗೊಯ್ಯುವದು ಸುಜ್ಞರಿಗೆ ಭೂಷಣವಲ್ಲ. ಸ್ತ್ರೀಯರು ಶಾರೀರಿಕ ಶಕ್ತಿಯಲ್ಲಿ ಮಾತ್ರ ಪುರುಷರಿಗಿಂತ ಕಡಿಮೆಯಿದ್ದರೂ ಮಾನಸಿಕ, ಬೌದ್ಧಿಕ, ನೈತಿಕ ಶಕ್ತಿಗಳಲ್ಲಿ ಗಂಡಸರಿಗಿಂತ ಯಾವ ವಿಧದಿಂದಲೂ ಕಡಿಮೆಯಾಗಿಲ್ಲ. ಎಷ್ಟೋ ಸ್ತ್ರೀಯರು ಸರಕಸ್ಸಿನಲ್ಲಿ ಯುದ್ಧರಂಗದಲ್ಲಿ ಗಂಡಸರಷ್ಟೇ

ಪ್ರಬಲತೆಯನ್ನು ತೋರಿಸಿದ್ದುಂಟು. ತಾರಾಬಾಯಿ ಎಂಬವಳು ಸರಕಸ್ಸಿನಲ್ಲಿ ಅದ್ಭುತವಾದ ಕಸರತ್ತುಗಳನ್ನು ಪ್ರದರ್ಶಿಸುತ್ತಿದ್ದಳು. ಝಾಂಸಿ ರಾಣಿ, ಚಾಂದಬೀಬಿ, ಕಿತ್ತೂರಚನ್ನಮ್ಮ, ಬೆಳವಡಿಮಲ್ಲಮ್ಮ ಮೊದಲಾದ ಸ್ತ್ರೀಯರು ಯುದ್ಧದಲ್ಲಿ ಅಸಾಧಾರಣವಾದ ಪರಾಕ್ರಮವನ್ನು ವ್ಯಕ್ತಗೊಳಿಸಿದ್ದಾರೆ. ಆದಿ ಶಕ್ತಿಯು ಎಷ್ಟೋ ಜನದೈತ್ಯರನ್ನು ಸಂಹಾರ ಮಾಡಿದ್ದಾಳೆ. ಮೊನ್ನಿನ ಜಾಗತಿಕ ಯುದ್ಧದಲ್ಲಿ ರಶಿಯಾ ಜರ್ಮನಿಗಳಲ್ಲಿ ಸ್ತ್ರೀಯರು ನಾವಿಕರೂ ವೈಮಾನಿಕರೂ ಆಗಿ ವೈರಿಗಳ ಮೇಲೆ ದಾಳಿ ಮಾಡಿದ್ದಾರೆ. ಕ್ರಮಬದ್ಧವಾದ ಶಿಕ್ಷಣ ಕೊಟ್ಟರೆ ಸ್ತ್ರೀಯರು ಪುರುಷರಿಗಿಂತ ಶಾರೀರಕ ದೃಷ್ಟಿಯಲ್ಲಿ ಹಿಂದುಳಿಯಲಾರರೆಂದು ಹೇಳಿದರೂ ಸೃಷ್ಟಿಯಲ್ಲಿ ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸಿದರೆ ಹೆಣ್ಣುಜಾತಿಯು ಗಂಡುಜಾತಿಗಿಂತ ಶಾರೀರಿಕ ಸಾಮರ್ಥ್ಯದಲ್ಲಿ ಕಡಿಮೆಯಿದ್ದುದು ಸಾಮಾನ್ಯವಾಗಿ ಕಂಡು ಬರುತ್ತದೆ. ಆದುದರಿಂದಲೇ ಹೆಚ್ಚು ಶ್ರಮದ ಕೆಲಸಗಳನ್ನು ಗಂಡಸರೂ ಕಡಿಮೆ ಶ್ರಮದ ಕೆಲಸಗಳನ್ನು ಹೆಂಗಸರೂ ಪ್ರಾಚೀನಕಾಲದಿಂದಲೂ ಮಾಡುತ್ತ ಬಂದಿರುತ್ತಾರೆ.

ಅದೇ ಮೇರೆಗೆ ಹೆಂಗಸರ ಸ್ವಭಾವವು ಗಂಡಸರ ಸ್ವಭಾವಕ್ಕಿಂತ ಹೆಚ್ಚು ಕೋಮಲವಾಗಿರುವದರಿಂದ ಮಕ್ಕಳ ಪಾಲನಪೋಷಣೆ, ದಯೆ, ಪರೋಪಕಾರ, ಈಶ ಭಕ್ತಿ ಪ್ರೇಮ ಮುಂತಾದ ಸೌಮ್ಯಗುಣಗಳು ಗಂಡಸರಿಗಿಂತ ಹೆಂಗಸರಲ್ಲಿ ಹೆಚ್ಚಾಗಿರುತ್ತವೆ. ಹಡೆಯುವವರು ಹೆಣ್ಣುಮಕ್ಕಳೇ ಆಗಿರುವದರಿಂದ ಮಕ್ಕಳು ಮರಿಗಳ ಜೋಪಾಸನೆಗಾಗಿ ಮನೆಯನ್ನೇ ಅವರು ಹೆಚ್ಚಾಗಿ ಅವಲಂಬಿಸಬೇಕಾಗುತ್ತದೆ. ಆದರೆ ಗಂಡಸರಿಗೆ ಹೆಂಗಸರಂತೆ ಮನೆಗೆ ಅಂಟಿಕೊಂಡು ಕೂಡ್ರುವ ಪ್ರಸಂಗ ಬರುವದಿಲ್ಲ.

ಆದರೆ ಹೆಂಗಸರು ಗಂಡಸರಿಗಿಂತ ಕಡಿಮೆ ಎಂದು ಹೇಳುವದು ಮೂರ್ಖತನವು. ಎಡಗೈ ಬಲಗೈಗಳಲ್ಲಿ ಯಾವದು ಹೆಚ್ಚು ಯಾವದು ಕಡಿಮೆಯೆಂಬುದನ್ನು ಹೇಳಲಿಕ್ಕಾಗುವದಿಲ್ಲ. ಎಡಗೈಗಿಂತ ಬಲಗೈ ಮೇಲೆಂದು ಹೇಳುವವರು ಹುಚ್ಚರೇ ಸರಿ. ಆದರೆ ಎರಡೂ ಕೈಗಳು ಕೂಡಿಕೊಂಡು ಮಾಡುವ ಕೆಲಸಗಳೂ ಉಂಟು. ಪ್ರತ್ಯೇಕವಾಗಿ ಮಾಡುವ ಕೆಲಸಗಳೂ ಉಂಟು. ಅವು ಸ್ವಾಭಾವಿಕವಾಗಿಯೇ ಮಾಡು

ತ್ರವೆ. ಆದರೆ ಒಂದರ ಕೆಲಸದಲ್ಲಿ ಮತ್ತೊಂದು ಕೈಹಾಕಲಿಕ್ಕೆ ಹೋಗುವದಿಲ್ಲ. ಪ್ರತಿಯೊಂದೂ ಸೈಯ್ಯ ದೇಹಕ್ಕೆ ಅಷ್ಟೇ ಮಹತ್ವದ್ದಾಗಿದೆ. ಇದೇ ಮೇರೆಗೆ ಸ್ತ್ರೀಯರ ಸ್ವಭಾವ ಗುಣಗಳಿಗನುಸಾರವಾಗಿ ಮಾಡತಕ್ಕ ಕೆಲಸಗಳು ಬೇರೆ. ಪುರುಷರ ಗುಣಸ್ವಭಾವಗಳಿಗನುಸರಿಸಿ ಮಾಡತಕ್ಕ ಕೆಲಸಗಳು ಬೇರೆ. ಆಯಾಯ ಕೆಲಸಗಳನ್ನು ಅವರು ಸ್ವಾಭಾವಿಕವಾಗಿಯೇ ಮಾಡುತ್ತಿದ್ದಾರೆ. ಅಂತೆಯೇ ಸಂಸಾರವು ಸುಗಮವಾಗಿಯೂ ಸುಖಕರವಾಗಿಯೂ ಸಾಗಿದೆ. ಪುರುಷರಷ್ಟೇ ಮಹತ್ವವು ಸ್ತ್ರೀಯರಿಗೂ ಉಂಟು. ಒಬ್ಬರು ಹೆಚ್ಚಲ್ಲ, ಇನ್ನೊಬ್ಬರು ಕಡಿಮೆಯಲ್ಲ. ಈ ಎಲ್ಲ ಸಂಗತಿಗಳನ್ನು ಲಕ್ಷದಲ್ಲಿಟ್ಟುಕೊಂಡು ಮೇಲ್ಕಂಡ ಸಮಸ್ಯೆಗಳನ್ನು ಬಿಡಿಸಲು ಪ್ರಯತ್ನಿಸೋಣ.

ಸ್ತ್ರೀಯರಿಗೆ ಗಂಡಸರಿಗೆ ಕೊಡುವ ಶಿಕ್ಷಣವನ್ನು ಕೊಡಬಹುದೇ? ಎಂಬ ವಿಷಯವನ್ನು ವಿವೇಚಿಸೋಣ. ಸ್ತ್ರೀಯರಿಗೆ ಪುರುಷರಂತೆ ಓದುಬರಹ ಲೆಕ್ಕಪತ್ರಗಳನ್ನು ಕಲಿಸುವದು ಉಪಯುಕ್ತವಾಗಿದೆ. ಸ್ತ್ರೀಯರು ಮನೆಯಲ್ಲಿ ಅಡಿಗೆ, ಮಕ್ಕಳ ಪೋಷಣೆ, ಮನೆಯ ಅಚ್ಚುಕಟ್ಟುತನ ಮುಂತಾದವುಗಳ ಕಡೆಗೆ ಹೆಚ್ಚು ಲಕ್ಷ ಹಾಕಬೇಕಾಗುವದರಿಂದ ಅವರಿಗೆ ಪಾಕಶಾಸ್ತ್ರ, ಆರೋಗ್ಯಶಾಸ್ತ್ರ, ಹೊಲಿಗೆ, ಕಸೂತಿ, ಹೆಣಿಕೆ, ರಂಗವಲ್ಲಿ ಮುಂತಾದ ಉಪಯುಕ್ತ ವಿಷಯಗಳನ್ನು ಕಲಿಸಲೇಬೇಕು. ಇದಲ್ಲದೆ ಸ್ತ್ರೀಯರ ಸಹವಾಸದಲ್ಲಿಯೇ ಮಕ್ಕಳು ಚಿಕ್ಕಂದಿನಲ್ಲಿ ಕಾಲಕಳೆಯಬೇಕಾಗುವದರಿಂದ ಆಕೆಯ ಪ್ರೇಮ, ನಡೆನುಡಿ, ಭಕ್ತಿ ಮುಂತಾದ ಸದ್ಗುಣಗಳ ಪರಿಣಾಮವು ಮಕ್ಕಳ ಮೇಲೆ ಚಿರಸ್ಥಾಯಿಯಾಗಿ ಉಳಿಯುವದು. ಆದುದರಿಂದ ಒಳ್ಳೆ ತಾಯಿಯು ತನ್ನ ಮನೆಯನ್ನು ಸ್ವರ್ಗಮಯವಾಗಿ ಮಾಡಬಲ್ಲಳು. ಅಂಥ ತಾಯಂದಿರಿಂದ ಪ್ರಪಂಚಕ್ಕೆ ಸುಖ. ಆದುದರಿಂದ ಸ್ತ್ರೀಯರಿಗೆ ನೀತಿಭಕ್ತಿಗಳನ್ನು ಕಲಿಸಿಕೊಡುವದು ಅತ್ಯಾವಶ್ಯಕ. ಪುರಾಣ, ಕೀರ್ತನೆ, ಶರಣರಚರಿತ್ರೆ, ದೇವತಾಪೂಜೆ ಮುಂತಾದ ಸಂಗತಿಗಳು ಅಳವಡುವಂಥ ಶಿಕ್ಷಣವು ಅವಶ್ಯಕ. ಮ. ಗಾಂಧಿಯವರನ್ನು ಅವರ ತಾಯಿಯು ರಾಮಮಂದಿರಕ್ಕೆ ಕರೆದುಕೊಂಡು ಹೋಗುತ್ತಿದ್ದುದರಿಂದ ಮ. ಗಾಂಧಿಯವರಲ್ಲಿ ದೇವಭಕ್ತಿಯು ಕೊನೆತನಕ ನೆಲೆಗೊಂಡಿತು. ಆ ಭಾವನೇ ಅವರನ್ನು

ಮಹಾತ್ಮರನ್ನಾಗಿ ಮಾಡಿತು. ಶಿವಾಜಿಯು ತಾಯಿಯ ಮಗನಿಗೆ ತಾನು ಕೇಳಿದ ಪುರಾಣಪುಣ್ಯ ಕಥೆಗಳನ್ನು ಹೇಳಿದ್ದರಿಂದಲೇ ಅತನು ಹಿಂದೂ ರಾಜ್ಯವನ್ನು ಪುನರುಜ್ಜೀವನ ಗೊಳಿಸಲು ಸಮರ್ಥನಾದನು.

ಆದರೆ ಸ್ತ್ರೀಯರಿಗೆ ಗಹನ ವಿಷಯಗಳಾದ ಗಣಿತ, ಶಾಸ್ತ್ರೀಯ ವಿಷಯ, ಅರ್ಥಶಾಸ್ತ್ರ, ತರ್ಕ, ವೇದಾಂತ ಮುಂತಾದವುಗಳನ್ನು ಕಲಿ ಸುವದು ಅನವಶ್ಯಕ. ಕಲಿಸಿದರೆ ಆ ವಿಷಯಗಳು ಅವರಿಗೆ ಬರುವದಿ ಲ್ಲವೆಂತಲ್ಲ. ಆ ವಿಷಯಗಳಲ್ಲಿ ಅವರು ಗಂಡಸರಷ್ಟೇ ಪ್ರಾವೀಣ್ಯವನ್ನೂ ಪ್ರಾಶಸ್ತಿಯನ್ನೂ ಪಡೆಯಬಹುದು. ಆದರೆ ಅವುಗಳಿಂದ ಮನೆತನಕ್ಕೆ ಏನೂ ಉಪಯೋಗವಿಲ್ಲ. ಅದಕ್ಕಾಗಿ ಸ್ತ್ರೀಯರು ತಮ್ಮ ಅಮೌಲ್ಯವಾದ ಆಯುಷ್ಯವನ್ನು ವ್ಯರ್ಥ ಹಾಳುಮಾಡಿಕೊಳ್ಳುವದು ಬೇಡ. ಆವುಗಳ ನ್ನೆಲ್ಲ ಅವರು ಗಂಡಸರಿಗೆ ಬಿಟ್ಟುಕೊಡಬೇಕು. ಪೋಲೀಸ, ಮಿಲಿಟರಿ ಶಿಕ್ಷಣವಂತೂ ಗಂಡಸರಿಗೇ ಮೀಸಲಾಗಿರಬೇಕು. ಅವು ಸ್ತ್ರೀಯರಿಗೆ ಸಲ್ಲವು. ಬಲಗೈಯ ಕಾರ್ಯವನ್ನು ಎಡಗೈ ಮಾಡಹತ್ತಿದರೆ ಬಲಗೈಗೆ ಎಡಚಾದಂತಾಗಿ ತೊಂದರೆಯುಂಟಾಗುವದು. ಅದೇ ಮೇರೆಗೆ ಗಂಡ ಸರು ಕಲಿಯುವ ವಿಷಯಗಳನ್ನು ಹೆಂಗಸರೂ ಕಲಿತು ಸಮಾಜದಲ್ಲಿ ಕೆಲಸಮಾಡಹತ್ತಿದರೆ ಅನೇಕ ತೊಂದರೆಗಳು ಸಂಭವಿಸಬಹುದು. ಸ್ತ್ರೀಯರು ತಮ್ಮ ವಿಷಯಗಳನ್ನು ಬೇಕಾದಹಾಗೆ ಕಲಿಯಲು ಸ್ವತಂತ್ರ ರಿದ್ದಾರೆ. ಆದರೆ ಗಂಡಸರ ವಿಷಯಗಳಲ್ಲಿ ಕೈಹಾಕುವದು ನಿಸರ್ಗ ವಿರುದ್ಧ.

ಸ್ತ್ರೀಯರು ಗಂಡಸರಂತೆ ಸರಕಾರಿ ಇಲ್ಲವೆ ಖಾಸಗಿ ಸಂಸ್ಥೆಗ ಳಲ್ಲಿ ನೌಕರಿಮಾಡಬಹುದೇ? ಎಂಬ ಪ್ರಶ್ನೆಯನ್ನು ವಿಚಾರಿಸುವಾ. ಮನೆಗೆಲಸಗಳಿಗೆ ಮಕ್ಕಳ ಪಾಲನೆಪೋಷಣೆಗಳಿಗೆ ಅತಂಕವನ್ನುಂಟು ಮಾಡುವ ಯಾವ ಹೊರಗಿನ ಕೆಲಸಗಳಿದ್ದರೂ ಸ್ತ್ರೀಯರಿಗೆ ಅವು ಹಿತ ಕಾರಿಯಲ್ಲವೆಂದು ನಮ್ಮ ಸ್ಪಷ್ಟಅಭಿಪ್ರಾಯ. ಮನೆಯನ್ನು ಸ್ವರ್ಗಮಯ ವಾಗಿ ಮಾಡುವ ಕಾಯಕವೇನೂ ಕಡಿಮೆ ಯೋಗ್ಯತೆಯದಲ್ಲ. ಸ್ತ್ರೀಯರು ಪುರುಷರ ಹೋರೆಗಳಾದ ಒಕ್ಕಲತನ, ವ್ಯಾಪಾರ, ನೇಕಾರಿಕೆ, ಕುಂಬಾ ರಿಕೆ, ಕಂಬಾರಿಕೆ, ಬಡಿಗತನ, ಸಿಂಪಿಗಿತನ ಮುಂತಾದ ಕೈಗಾರಿಕೆ ಗಳಲ್ಲಿ ಗಂಡನಿಗೆ ಸಹಕಾರಿಯಾಗಿ ನಡೆಯಲು ಯಾವ ಅಡ್ಡಿಯೂ

ಇಲ್ಲ. ಆದರೆ ಮನೆಯು ಹೊರಗೆ ನೌಕರಿ ಮಾಡುವದು ಸರಿಯಾದುದಲ್ಲ. ಕೆಲವರು ಹೀಗೆ ಪ್ರಶ್ನೆ ಮಾಡಬಹುದು. ಸ್ತ್ರೀಯರು ತಮ್ಮ ಶೀಲವನ್ನು ಚೆನ್ನಾಗಿಟ್ಟುಕೊಂಡು ಮನೆತನದ ಕಾರ್ಯಗಳನ್ನೂ ನೋಡಿಕೊಂಡು ಮದುವೆ ಆಗಲಿ ಬಿಡಲಿ, ನೌಕರಿಮಾಡಿ ಹೆಚ್ಚೆಚ್ಚಿಗೆ ಪಗಾರ ಪಡೆದು ಸುಖದಿಂದ ಪ್ರಪಂಚ ಸಾಗಿಸುತ್ತಿದ್ದರೆ ಅಂಥವರಿಗೆ ನೌಕರಿಯು ದ್ವಾರಗಳನ್ನು ಮುಚ್ಚಿಡಬಹುದೇ? ಆದರೆ ಸ್ತ್ರೀಯರು ನೌಕರಿಗೆ ಸೇರಿದರೆ ಮನೆತನಕ್ಕೆ ತೊಂದರೆಗಳು ಬಾರದೆ ಸುಸೂತ್ರ ಪ್ರಪಂಚ ಸಾಗೀತೆಂದು ಹೇಳಲಾಗುವದಿಲ್ಲ. ಕೆಲವು ಅಪವಾದಗಳು ದೊರೆಯಬಹುದು. ಅಪವಾದಗಳು ಸಾಮಾನ್ಯ ನಿಯಮಕ್ಕೆ ಸಮನ್ವಯಿಸುವದಿಲ್ಲ. ಹೆಂಗಸರ ಶೀಲವು ಗಂಡಸರಗಿಂತಲೂ ಬಹು ಪವಿತ್ರವಾದುದು. ಅದು ನಮ್ಮ ಆರ್ಯಭೂಮಿಯ ವೈಶಿಷ್ಟ್ಯ. ಈ ವಿಷಯದಲ್ಲಿ ಭಾರತೀಯ ಸ್ತ್ರೀಯರೇ ಜಗತ್ತಿಗೆ ಆದರ್ಶಪ್ರಾಯರು. ಸುಶಿಕ್ಷಿತ ಸ್ತ್ರೀಯರು ಶೀಲವನ್ನು ಕಾಪಾಡಿಕೊಳ್ಳುವದು ಪರಮ ಧರ್ಮ. ಆದರೆ ಗಂಡಸರು ಗೂಳಿಗಳಾಗಿ ತಿರುಗಬೇಕೆಂದು ನಮ್ಮ ಅಭಿಪ್ರಾಯವಲ್ಲ. ಶೀಲವು ಗಂಡಸರಿಗೂ ಬೇಕು. ಹೆಂಗಸರಿಗೂ ಬೇಕು. ಆದರೆ ಮಕ್ಕಳನ್ನು ಹಡೆದು ಮನೆತನವನ್ನು ಸ್ವರ್ಗತುಲ್ಯವಾಗಿ ಮಾಡುವ ಹೆಣ್ಣುಮಕ್ಕಳಿಗೆ ಅದು ಹೆಚ್ಚಾಗಿ ಬೇಕು.

ಆದರೆ ಹೆಂಗಸರು ಹೊರಗೆ ಮಾಡತಕ್ಕ ಪವಿತ್ರ ಕಾರ್ಯಗಳು ಪ್ರಾಮುಖ್ಯವಾಗಿ ಎರಡು ಇರುತ್ತವೆ. (೧) ಪ್ರಾಥಮಿಕ ಶಾಲೆಯ ಅಧ್ಯಾಪಕಿಯರು (೨) ದಾದಿಗಳು. ಇವೆರಡು ಕಾರ್ಯಕ್ಷೇತ್ರಗಳನ್ನು ಸರಕಾರದವರು ಸಂಪೂರ್ಣವಾಗಿ ಸ್ತ್ರೀ ಸಮಾಜಕ್ಕೆ ಧಾರೆಯೆರೆದು ಬಿಡಬೇಕು. ವಿದ್ಯಾಖಾತೆಯ ಮೇಲಧಿಕಾರಿಗಳು ಸಹ ಸ್ತ್ರೀಯರೇ ಇರಬೇಕು. ಅದರ ಖರ್ಚ ಕಂದಾಯವನ್ನೆಲ್ಲ ಸರಕಾರವು ಸ್ತ್ರೀಯರಿಗೆ ಒಪ್ಪಿಸಿಬಿಡಬೇಕು. ಆದರೆ ಸ್ತ್ರೀಯರು ಉಳಿದ ದಿವಾಣಿ, ನ್ಯಾಯಖಾತೆ, ಪೋಸ್ಟ, ರೇಲ್ವೆ ಈ ಮೊದಲಾದ ಯಾವ ಖಾತೆಗಳಲ್ಲಿಯೂ ನೌಕರಿ ಮಾಡುವದು ಯುಕ್ತವಲ್ಲ. ಒಮ್ಮೊಮ್ಮೆ ಯುದ್ಧ ಮೊದಲಾದ ಅನಿಷ್ಟ ಪ್ರಸಂಗಗಳಲ್ಲಿ ಪುರುಷರ ಸಂಖ್ಯೆಯು ಕಡಿಮೆಯಾಗಿ ನೌಕರಿ ಮಾಡುವವರು ಇಲ್ಲದಂತಾಗಲು ಸ್ತ್ರೀಯರು ಅನಿವಾರ್ಯವಾಗಿ ಕೆಲವು ನೌಕರಿಗಳನ್ನು ಮಾಡಲೇ ಬೇಕಾಗುತ್ತದೆ. ಆದರೆ ಮುಂದೆ ಜನಸಂಖ್ಯೆಯು ಬೆಳೆದು ಪರಿಸ್ಥಿತಿಯು ಸುಧಾರಿಸಿದರೆ ಆ ಹೆಂಗಸರು ಗಂಡಸರಿಗೆ ತಮ್ಮ ಕೆಲಸಗಳನ್ನೊಪ್ಪಿಸಿ ಹಿಂದಕ್ಕೆ

ಸರಿದುಕೊಳ್ಳಬೇಕಾಗುತ್ತದೆ. ಗಂಡ ಸತ್ತ ಹೆಣ್ಣುಮಗಳು ಮಗು ಸಣ್ಣದಿದ್ದಾಗ ಮನೆತನದ ಭಾರವನ್ನೆಲ್ಲ ನಡೆಯಿಸಿ ಮಗನು ದೊಡ್ಡವನಾದ ಬಳಿಕ ಅವನಿಗೆ ಒಪ್ಪಿಸಿ ತಾನು ಹಿಂದಕ್ಕೆ ಸರಿದುಕೊಳ್ಳುವಳು. ಫ್ರಾನ್ಸ, ಇಂಗ್ಲಂಡ, ಜರ್ಮನಿ ದೇಶಗಳಲ್ಲಿ ಅನೇಕರು ಯುದ್ಧದಲ್ಲಿ ಸೇರಿದ್ದರಿಂದ ಸ್ತ್ರೀಯರು ಮುಂದೆ ಬಂದು ಅನೇಕ ಖಾತೆಗಳಲ್ಲಿ ನೌಕರಿ ಮಾಡಿದರು. ಹಾಗೆ ಮಾಡಿದ್ದು ಅನಿವಾರ್ಯ. ಅನಿವಾರ್ಯವಾದುದು ಅಗತ್ಯವಲ್ಲ.

ಸ್ತ್ರೀಪುರುಷರು ಕೂಡಿಯೇ ವಿದ್ಯಾಭ್ಯಾಸ ಮಾಡಬಹುದೇ? ಎಂಬ ಪ್ರಶ್ನೆಯನ್ನು ವಿಚಾರಿಸೋಣ. ಈಗಿನ ಸಮಾಜದ ಸ್ಥಿತಿಯಲ್ಲಿ ಹುಡುಗರು ಹುಡುಗಿಯರನ್ನು ಒತ್ತಟ್ಟಿಗೆ ಕೂಡಿಸುವದು ಅಪಾಯಕರ. ಹೆಣ್ಣು ಹುಡುಗರ ಸಂಸರ್ಗದಿಂದ ಗಂಡು ಹುಡುಗರಿಗೆ ಅಭ್ಯಾಸದಲ್ಲಿ ಪ್ರೋತ್ಸಾಹವುಂಟಾಗದೆ ಅಧಃಪತನವಾಗುವ ಪ್ರಸಂಗವೇ ಹೆಚ್ಚು. ಆದುದರಿಂದ ಮಾಧ್ಯಮಿಕ ಶಾಲೆಗಳಲ್ಲಾಗಲಿ ಕಾಲೇಜಗಳಲ್ಲಾಗಲಿ ತರುಣತರುಣಿಯರು ಕೂಡಿ ಕಲಿಯುವದು ಸಮಂಜಸವಲ್ಲ. ತರುಣರಿಗೆ ಸ್ತ್ರೀಸಂಸರ್ಗದ ವಾತಾವರಣವು ಬೇಡವೆಂದೇ ಪ್ರಾಚೀನ ಋಷಿಗಳು ಸ್ತ್ರೀ ಸಂಪರ್ಕವಿಲ್ಲದ ತಪೋವನಗಳಲ್ಲಿ ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸಿದ್ದರೆಂಬ ಮಾತನ್ನು ನಾವು ಮರೆಯಲಾಗದು.

ಸ್ತ್ರೀಯರು ಸಾರ್ವಜನಿಕ, ಸಾಮಾಜಿಕ, ರಾಜಕೀಯ ಧಾರ್ಮಿಕ ರಂಗಗಳಲ್ಲಿ ಗಂಡಸರೊಡನೆ ಕೂಡಿಕೊಂಡು ಕೆಲಸ ಮಾಡಬಹುದೇ? ಈ ಪ್ರಶ್ನೆಯನ್ನು ಸ್ವಲ್ಪ ವಿಚಾರಿಸೋಣ. ಯಾವದೇ ದೇಶವನ್ನು ತೆಗೆದುಕೊಂಡರೂ ಅದರಲ್ಲಿ ಬಹುಶಃ ಗಂಡಸರಷ್ಟೇ ಹೆಂಗಸರೂ ಇರುತ್ತಾರೆ. ಗಂಡಸರ ಉದ್ಧಾರದ ವಿಷಯವು ಗಂಡಸರಿಗೆ ಅವಶ್ಯವಾದಂತೆ ಹೆಂಗಸರ ಉದ್ಧಾರದ ವಿಷಯಗಳನ್ನು ಹೆಂಗಸರೂ ಕೈಕೊಳ್ಳಲು ಸಮರ್ಥರಿದ್ದಾರೆ. ಆದ್ದರಿಂದ ಆದರ್ಶ ಮಹಿಳೆಯರು ಮುಂದೆಬಂದು ತಮ್ಮ ಸ್ತ್ರೀ ಸಮಾಜವನ್ನು ಎಲ್ಲ ದೃಷ್ಟಿಯಿಂದಲೂ ಉದ್ಧಾರ ಮಾಡಬೇಕು. ಒಮ್ಮೊಮ್ಮೆ ಆದರ್ಶ ಪುರುಷರನ್ನು ಕೂಡಿಕೊಂಡು ಸ್ತ್ರೀಯರು ಆಯಾಯ ಕ್ಷೇತ್ರಗಳಲ್ಲಿ ಕೆಲಸ ಮಾಡಬಹುದು. ಮ. ಗಾಂಧಿಯವರ ಬೆನ್ನು ಕಟ್ಟಿಕೊಂಡು ಎಷ್ಟೋ ಸ್ತ್ರೀಯರು ರಾಜಕೀಯ ರಂಗದಲ್ಲಿ ಸತ್ಯಾಗ್ರಹವನ್ನು ಹೂಡಿ ಕಾರಾಗೃಹವಾಸವನ್ನನುಭವಿಸಿ ಸ್ವಾತಂತ್ರ್ಯ ಸಂಪಾದನೆ

ಯಲ್ಲಿ ಭಾಗಿಗಳಾದರು. ಇದು ಸ್ತುತ್ಯ. ಆದರೆ ಮ. ಗಾಂಧಿಯವರ ಅಂಧಾನುಕರಣ ಮಾಡಲಿಕ್ಕೆ ಹೋದ ಎಷ್ಟೋ ತರುಣ ತರುಣಿಯರು ಪ್ರಭಾತಫೇರಿಗಳಲ್ಲಿ ಭಾಗವಹಿಸಿ ಅಸಹ್ಯವಾದ ಅನಾಹುತಗಳಿಗೆ ಗುರಿಯಾದದ್ದನ್ನೂ ನಾವು ಕೇಳುತ್ತೇವೆ. ಧಾರ್ಮಿಕ ಕ್ಷೇತ್ರದಲ್ಲಿ ಭಗವಾನ್ ಬುದ್ಧದೇವನನ್ನು ಅನುಸರಿಸಿದ ಭಿಕ್ಷುಣಿಯರು ತಮ್ಮ ಜೀವನವನ್ನು ಸಾರ್ಥಕಮಾಡಿಕೊಂಡದ್ದೇನೋ ನಿಜ. ಆದರೆ ಮುಂದೆ ವಿಹಾರಗಳಲ್ಲಿ ಭಿಕ್ಷುಕ ಭಿಕ್ಷುಣಿಯರು ಕೂಡಿ ವೈರಾಗ್ಯ ಸಾಧಿಸುವದನ್ನು ಬಿಟ್ಟು ಪ್ರಪಂಚಮಾಡಿದ ಉದಾಹರಣೆಗಳೂ ಕಂಡುಬರುತ್ತಿವೆ. ಬಸವಾದಿ ಪ್ರಮಥರ ಕಾಲದಲ್ಲಿ ಅಕ್ಕಮಹಾದೇವಿ, ಸತ್ಯಕ್ಕ, ನೀಲಮ್ಮ ಮೊದಲಾದ ಶಿವಶರಣೆಯರು ಶಿವಾನುಭವ ಮಂಟಪದಲ್ಲಿ ಶಿವಶರಣರೊಡನೆ ಉದಾತ್ತ ವಿಷಯಗಳನ್ನೇ ಚರ್ಚಿಸಿ ಬೆಳಕಿಗೆ ಬಂದದ್ದು ನಿಜ. ಆದರೆ ಧರ್ಮದ ಹುಚ್ಚಿನಿಂದ ಕಪಟ ಸನ್ಯಾಸಿಗಳ ಹಾಗೂ ದುರುಳ ವೇದಾಂತಿಗಳ ಬಲೆಗೆ ಬಿದ್ದು ಕೆಟ್ಟುಹೋದ ಸ್ತ್ರೀಯರ ಉದಾಹರಣೆಗಳಿಗೇನು ಕಡಿಮೆ? ಆದುದರಿಂದ ಸ್ತ್ರೀಯರು ಪುರುಷರೊಡನೆ ಕೂಡಿ ಯಾವದೇ ಕ್ಷೇತ್ರದಲ್ಲಿ ದುಡಿಯುವದು ವಿಹಿತವಲ್ಲ. ಸ್ತ್ರೀಯರು ಪ್ರತ್ಯೇಕವಾಗಿ ತಮ್ಮ ಸುಧಾರಣೆಗೋಸುಗ ಅಕ್ಕನಬಳಗ, ಸ್ತ್ರೀ ಸಂಘ, ಕನ್ಯಾಮಂಡಳ ಮೊದಲಾದ ಸಂಘಟನೆಗಳನ್ನು ಬೆಳಸಿಕೊಂಡು ತಮ್ಮೊಳಗೆ ವರ್ತಮಾನಪತ್ರ, ಗ್ರಂಥವಾಚನ, ವಚನಗಾಯನ, ವಚನಪಠಣ, ವ್ಯಾಖ್ಯಾನ, ತತ್ವಪದ, ಹೊಲಿಗೆ, ಹೆಣಿಕೆ, ಕಸೂತಿ, ಆರೋಗ್ಯಶಾಸ್ತ್ರ, ದಾದಿಯ ಕೆಲಸ, ಔಷಧೋಪಚಾರ ಇತ್ಯಾದಿ ಉಪಯುಕ್ತ ಸಂಗತಿಗಳನ್ನೇ ಚರ್ಚಿಸಬಹುದು. ಗ್ರಂಥಗಳನ್ನು ಬರೆದು ಪ್ರಕಟಿಸಬಹುದು. ಪ್ರತ್ಯೇಕವಾದ ವರ್ತಮಾನಪತ್ರ ಮಾಸಿಕಗಳನ್ನೇ ತೆಗೆಯಬಹುದು. ವಿಜಯಲಕ್ಷ್ಮಿ ಪಂಡಿತ, ಸರೋಜಿನಿ ನಾಯುಡು, ಕಮಲಾದೇವಿ ಚಟ್ಟೋಪಾಧ್ಯಾಯರಂಥ ಪೆಣ್ಮಣಿಗಳು ರಾಜಕೀಯ ರಂಗವಲ್ಲಿ ಸೇರಿ ಪುರುಷರೊಡನೆ ಕೂಡಿ ಕೆಲಸ ಮಾಡುತ್ತಿರಬಹುದು. ಅಂಥವರು ವಿರಳ ಹಾಗೂ ಅಪವಾದ. ಆದುದರಿಂದ ಸಾಮಾನ್ಯ ಸ್ತ್ರೀಯರು ಸಂಘಶಕ್ತಿಯನ್ನು ತಮ್ಮೊಳಗೆ ಬೆಳಸಿಕೊಂಡು ತಮ್ಮ ಅಜ್ಞಾನ, ಮೂಢನಂಬಿಗೆ ನಿರಕ್ಷರತೆ ಮುಂತಾದವುಗಳನ್ನೇ ಹೋಗಲಾಡಿಸಿಕೊಂಡು ಆದರ್ಶಮಹಿಳೆಯರಾಗಲು ಪ್ರಯತ್ನಿಸಬೇಕು. ಅದಕ್ಕೆ ಅವರು ಸ್ವತಂತ್ರರೇ ಇದ್ದಾರೆ.

ಆದರೆ ಅವರು ಮುನಸಿಪಾಲಿಟಿ ಲೋಕಲ್ ಬೋರ್ಡ ಅಸೆಂಬ್ಲಿಗಳ ಸದಸ್ಯರಾಗುವ ಅವಶ್ಯಕತೆಯಿಲ್ಲ.

ಸ್ತ್ರೀಯರು ಪುನರ್ವಿವಾಹ ಮಾಡಿಕೊಳ್ಳಬಹುದೇ? ಧಾರ್ಮಿಕ ಪೂಜಾಮಂತ್ರ ಪಠಣಗಳಲ್ಲಿ ಅವರಿಗೆ ಅಧಿಕಾರ ಬೇಡವೇ? ಇತ್ಯಾದಿ ಪ್ರಶ್ನೆಗಳು ಕೂಡ ಮಹತ್ವದವಾಗಿವೆ. ಕೆಲವು ಸಮಾಜಗಳಲ್ಲಿ ಪುನರ್ವಿವಾಹವೆಂದರೆ ಕೆರಳಬಹುದು. ಆದರೆ ಪುರುಷರಿಗೆ ಪುನರ್ವಿವಾಹದ ಅಧಿಕಾರವಿರುವಂತೆ ಸ್ತ್ರೀಯರಿಗೂ ಇರುವದು ವಿಹಿತ. ಪುನರ್ವಿವಾಹವಾಗುವದೂ ಬಿಡುವದೂ ಅವರವರ ಇಚ್ಛೆ. ಅದಕ್ಕೆ ಸಮಾಜದ ನಿರ್ಬಂಧವಿರಕೂಡದು. ಒಬ್ಬ ಬಾಲವಿಧವೆಯು ಸಂಸಾರ ಸುಖವನ್ನು ಅನುಭವಿಸಬೇಕೆಂದು ಇಚ್ಛಿಸಿದರೆ ಅಪರಾಧವೇನು? ಗಂಡ ಸತ್ತರೆ ಆಕೆಯ ತಲೆಬೋಳಿಸಿ ಕೆಂಪುಮಡಿ ಉಡಿಸಿ ಅಮಂಗಳ ಮಾಡಿ ಅವಳ ದರ್ಶನವು ಕೂಡ ಅಪಶಕುನವೆಂದು ತಿಳಿಯುವಷ್ಟು ಕೀಳ್ದೆಸೆಗೆ ಸ್ತ್ರೀ ಸಮಾಜವನ್ನು ಏಕೆ ಎಳೆಯಬೇಕು? ಹೆಂಡತಿ ಸತ್ತ ಗಂಡನು ಅದೇ ಮೇರೆಗೆ ಅಮಂಗಲನೂ ಅಶುಭಪ್ರದನೂ ಎಂದು ಯಾಕೆ ಭಾವಿಸುವದಿಲ್ಲ? ಇದೆಲ್ಲ ಸ್ವಾರ್ಥಿಗಳಾದ ಗಂಡಸರ ಕುಚೇಷ್ಟೆಯಲ್ಲವೇ? ಹೆಂಗಸರು ಅಬಲೆಯರಾದುದರಿಂದ ಇದನ್ನೆಲ್ಲ ಸಹಿಸಿಕೊಂಡಿದ್ದಾರೆ. ಅವರ ಸಹನ ಗುಣ ದೊಡ್ಡದು. ವಿಧವೆಗೆ ಬೇರೊಬ್ಬ ಪತಿ ಬೇಕಿಲ್ಲವೆಂತಲ್ಲ. ಸಮಾಜದ ನಿರ್ಬಂಧವಿರುವದರಿಂದ ಪುನರ್ವಿವಾಹಕ್ಕೆ ಹೆದರಿಕೊಂಡು ಕುಳಿತಿದ್ದಾರೆ ಸರಕಾರದವರು ಈ ನಿರ್ಬಂಧವನ್ನು ತೆಗೆದುಹಾಕಿ ಪುಣ್ಯ ಕಟ್ಟಿಕೊಂಡರೆ ಇಲ್ಲವೆ ಸ್ತ್ರೀ ಸಮಾಜವು ಆ ಬಗ್ಗೆ ಆಂದೋಲನ ಹೂಡಿದರೆ ಒಂದಿಲ್ಲೊಂದು ದಿನ ಈ ದುಷ್ಟಸಾಂಪ್ರದಾಯವು ಅಳಿದು ಹೋಗಲೇ ಬೇಕು. ವಿಧವೆಯು ಜೀವನವನ್ನು ಸಾಯುವ ತನಕ ಕೊಳೆಯಗೊಡುವದು ಯಾವ ಧರ್ಮ? ವಿಧುರನು ಮತ್ತೊಂದು ಲಗ್ನವಾದರೂ ಪವಿತ್ರನೇ! ಆದರೆ ಕೆಲವು ಸಮಾಜಗಳಲ್ಲಿ ವಿಧವೆಯು ಉಡಕಿಯಾದರೂ ಅಮಂಗಲೆಯೆಂದು ಲಗ್ನಮಹೋತ್ಸವಾದಿ ಶುಭಕಾರ್ಯಗಳಲ್ಲಿ ಅವಳಿಗೆ ಪ್ರವೇಶವಿರುವದಿಲ್ಲ. ಇದಾದರೂ ಅನಿಷ್ಟವಿಷಯ. ಪುನರ್ವಿವಾಹವಾದ ಹೆಂಗಸು ಗಂಡಸಿನಂತೆ ಸುಮಂಗಲೆಯೇ ಸರಿ. ಕುಂಕುಮ ಮಂಗಲ ಸೂತ್ರಗಳು ಆಕೆಗೆ ಇರಬೇಕು. ಅಂದರೆ ಪುರುಷರು ಸ್ತ್ರೀಯರಿಗೆ ಸ್ವಾತಂತ್ರ್ಯ ಸಮಾನಾಧಿಕಾರ ಕೊಟ್ಟಂತಾಗುವದು. ಇಲ್ಲದಿ

ದ್ದರೆ ಅವರನ್ನು ಅಧೋಗತಿಗೆ ಎಳೆವಂತಾಗುವದು. ಕೆಲವು ಸಮಾಜಗಳಲ್ಲಿ ಸ್ತ್ರೀಯರಿಗೆ ದೇವಪೂಜೆ ಮಂತ್ರಪಠಣಗಳ ಅಧಿಕಾರವಿರುವದಿಲ್ಲ. ಸ್ತ್ರೀಯಳು ಶೂದ್ರಸಮಾನಗಳೆಂದು ಆಕೆಗೆ ಆ ಅಧಿಕಾರ ಕೊಟ್ಟಿಲ್ಲ. ಇದು ತೀರ ಅನ್ಯಾಯ. ಸ್ತ್ರೀಯರು ಪುರುಷರಂತೆ ದೇವಪೂಜೆ ಮಂತ್ರಪಠಣ ಮಾಡಲು ಸಂಪೂರ್ಣ ಸ್ವತಂತ್ರರಿದ್ದಾರೆ.

ನಾವು ಸ್ತ್ರೀ ಸ್ವಾತಂತ್ರ್ಯದ ಬಗ್ಗೆ ವಿಚಾರಿಸುವಾಗ ಪಾಶ್ಚಾತ್ಯ ಸಂಸ್ಕೃತಿ ಶಿಷ್ಟಸಾಂಪ್ರದಾಯಗಳ ಕಡೆಗೆ ನೋಡಲಾಗದು. ನಮ್ಮ ಪವಿತ್ರವಾದ ಆರ್ಯ ಭೂಮಾತೆಯ ಪ್ರಾಚೀನ ಪದ್ಧತಿಗಳನ್ನು ಬಿಡಲಾಗದು. ಚುಂಬನ, ಪರಸ್ಪರ ವಿನೋದ ಸಂಭಾಷಣೆ, ಮುಂತಾದವುಗಳನ್ನು ಪಾಶ್ಚಾತ್ಯ ಪುರುಷರು ಸ್ತ್ರೀಯರೊಡನೆ ವ್ಯವಹರಿಸುತ್ತಾರೆ. ಈ ಸಾಂಪ್ರದಾಯಗಳು ನಮಗೆ ತಕ್ಕವಲ್ಲ. ಪಾಶ್ಚಾತ್ಯರು ಸ್ತ್ರೀಯರ ನೈತಿಕಕ್ಕೆ ಅಷ್ಟು ಗಮನಕೊಟ್ಟಂತೆ ಕಾಣುವದಿಲ್ಲ. ಒಬ್ಬ ಸ್ತ್ರೀಯು ತನ್ನ ಜನ್ಮದಲ್ಲಿ ನೂರಾರು ಗಂಡಂದಿರ ವಿವಾಹ ವಿಚ್ಛೇದನ ಮಾಡಿಕೊಂಡು ಮತ್ತೆ ಕುಮಾರಿಯಾಗಿ ನಲಿದಾಡಬಹುದು. ಇದು ಭಾರತೀಯ ಸ್ತ್ರೀ ಸಮಾಜಕ್ಕೆ ನಗೆಗೇಡು. ಅವರ ನೀತಿ ರೀತಿಗಳು, ಶಿಷ್ಟ ಸಾಂಪ್ರದಾಯಗಳು ಅವರಿಗೆ ಮಾನ್ಯವಿದ್ದರೆ ನಮ್ಮ ರೀತಿ ನೀತಿಗಳೂ, ಶಿಷ್ಟ ಸಾಂಪ್ರದಾಯಗಳೂ ನಮಗೆ ಮಾನ್ಯ. ಸ್ತ್ರೀಯರಲ್ಲಿ ನಾವು ಯಾವ ಸುಧಾರಣೆಯನ್ನು ಮಾಡಿದರೂ ನಮ್ಮ ಆರ್ಯ ಸಂಸ್ಕೃತಿಯ ಪವಿತ್ರ ಧ್ಯೇಯಗಳನ್ನನುಸರಿಸಿಯೇ ಮಾಡಬೇಕು. ಆದರೂ ನಮ್ಮ ಹಿಂದಿನ ಪದ್ಧತಿಯಲ್ಲಿ ವಿಧವಾ ಜೀವನದಂಥ ಕೊಳೆಗಳೇನಾದರೂ ಇದ್ದರೆ ಅವುಗಳನ್ನು ಕಿತ್ತಿಹಾಕಲು ಹಿಂಜರಿಯಬಾರದು. ಅಂದರೆ ಸ್ತ್ರೀ ಸಮಾಜವು ಸ್ವಾತಂತ್ರ್ಯ ಸುಖದಿಂದ ಈ ಪ್ರಪಂಚದಲ್ಲಿ ಬದುಕಿ ಬಾಳುವದು.

---

# ಇಂಗ್ಲೀಷ ಕಲಿಯುವ ವಿದ್ಯಾರ್ಥಿಗಳಿಗೆ—

( ಬರೆದವರು:— ಶ್ರೀ ಅನ್ನದಾನೀಶ್ವರ ವಿರಕ್ತಮಠ. ಮು - ಮುಂಡರಗಿ)



ಇಂಗ್ಲೀಷ ಕಲಿಯುವ ನಮ್ಮ ವಿದ್ಯಾರ್ಥಿಗಳು ಆರೋಗ್ಯವಂತರೂ, ದೃಢಕಾಯರೂ, ಬುದ್ಧಿಶಾಲಿಗಳೂ, ನೈತಿಕ ವೀರರೂ, ಆತ್ಮಶಕ್ತಿ ಸಂಪನ್ನರೂ ಆಗಿ ಬೆಳೆಯಲೆಂದು ನಮ್ಮ ಮುಂದಾಳುಗಳ ಬಯಕೆಯಾಗಿದೆ. ಆ ಬಯಕೆಯಂತೆ ನಮ್ಮ ಜನಕಾ ಸರಕಾರವು ಶಿಕ್ಷಣ ಪ್ರಪಂಚದಲ್ಲಿ ಬದಲಾವಣೆಗಳನ್ನು ಮಾಡುತ್ತ ಸಾಗಿರುವದು. ಆದರೆ ನಮ್ಮ ವಿದ್ಯಾರ್ಥಿಗಳು ತಮ್ಮ ಮನೋವೃತ್ತಿಯಲ್ಲಿ ಬದಲಾವಣೆ ಮಾಡಿಕೊಂಡು ನಡೆಯಲಿಕ್ಕೆ ತಯಾರಾಗುವದು ಅತ್ಯಂತ ಅಗತ್ಯವಾಗಿದೆ. ಎಷ್ಟೇ ಕಾಯಿದೆಗಳಾಗಲಿ, ಎಷ್ಟೇ ಭಾಷಣಗಳಾಗಲಿ, ಎಷ್ಟೇ ಪ್ರದರ್ಶನಗಳಾಗಲಿ, ಎಷ್ಟೇ ಸಂಘಗಳಾಗಲಿ, ನಮ್ಮ ವಿದ್ಯಾರ್ಥಿಗಳನ್ನು ಪೂರ್ಣ ಮನುಷ್ಯತ್ವವನ್ನು ಬೆಳಿಸಿಕೊಳ್ಳುವಂತೆ ಪ್ರೇರಿಸಿದರೂ ಅವರು ತಮ್ಮ ಮನಸ್ಸಿನ ಪ್ರವೃತ್ತಿಯನ್ನು ಉದಾತ್ತಗೊಳಿಸಲಿಕ್ಕೆ ಸಿದ್ಧರಾಗದ ವಿನಹ ಉಪಯೋಗ ಬೀಳುವದಿಲ್ಲ. ಕಾರಣ ಇಂಗ್ಲೀಷ ವಿದ್ಯಾರ್ಥಿಗಳು ಇನ್ನು ಮೇಲೆ ಬಹು ದಿನಗಳ ಜಾಡ್ಯದಿಂದ ಮುಕ್ತರಾಗಲಿಕ್ಕೆ ದೃಢನಿಶ್ಚಯ ಮಾಡಿ ಏಳಲಿಕ್ಕೇಬೇಕು. ಇಚ್ಛಾಬಲದಿಂದ ಕ್ರಿಯಾಶಕ್ತಿಯುತ್ಪನ್ನವಾಗುವದೆಂಬ ಸಿದ್ಧಾಂತವನ್ನು ನೆನಪಿನಲ್ಲಿಡಬೇಕು. ಇಚ್ಛಾಬಲದಿಂದ ಜ್ಞಾನಶಕ್ತಿಯೂ, ಜ್ಞಾನಶಕ್ತಿಯಿಂದ ಆನಂದವೂ, ಉದಯವಾಗುತ್ತವೆಂದು ನಮ್ಮ ಪರಮಪೂಜ್ಯ ಮಹಾತ್ಮಾ ಗಾಂಧೀಜಿಯವರು ಬೋಧಿಸಿರುವದನ್ನು ಲಕ್ಷದಲ್ಲಿಡಬೇಕು.

## ಶಿಕ್ಷಣದ ಗುರಿ

ನಮ್ಮ ಶಿಕ್ಷಣಕ್ಕೆ ಈಗ ಉದಾತ್ತವಾದ ಗುರಿಯನ್ನು ನಮ್ಮ ಪಂಡಿತ ಜವಾಹರಲಾಲ ನೆಹರು ಮುಂತಾದ ಮುಂದಾಳುಗಳು ಕೊಟ್ಟಿರುವರು. ದೇಹ, ಮನಸ್ಸು ಮತ್ತು ಆತ್ಮ ಈ ಮೂರೂ ತಕ್ಕ ರೀತಿಯಲ್ಲಿ ಬೆಳವಣಿಗೆ ಹೊಂದಿದರೆ ವಿದ್ಯಾರ್ಥಿಯು ಪೂರ್ಣ ಮಾನವನಾಗುವನೆಂದೂ, ಅಂಥ ಅತಿ-ಮಾನವನು ನಮ್ಮ ದೇಶದ ಕಲ್ಯಾಣವನ್ನೂ ಜಗತ್ತಿನ ಶಾಂತಿಯನ್ನೂ ಮಾಡಲಿಕ್ಕೆ ಸಮರ್ಥನಾಗುವನೆಂದೂ, ಅಂಥ ವಿಶಾಲ ವಿಶ್ವಸಂಸ್ಕೃತಿಯೇ

ಆತಕರಿರುವಂತೆ ಮಾಡುವದೇ ಶಿಕ್ಷಣದ ಗುರಿಯೆಂದೂ ಮಹಾ ಮಹಾ ವಿಭೂತಿಗಳು ಹೇಳಿರುವರು. ಈ ವಿಶ್ವಸಂಸ್ಕೃತಿಯು ಭೌತಿಕ ಮತ್ತು ಆಧ್ಯಾತ್ಮಿಕ ಸಂಸ್ಕೃತಿಗಳ ಸಂಗಮವು. ಇಂಥ ಕೂಡಲ ಸಂಗಯ್ಯನ ಸಾಕ್ಷಾತ್ಕಾರವೇ ನಮ್ಮ ವಿದ್ಯಾರ್ಥಿಗಳ ಗುರಿಯಾಗಿರಬೇಕೇ ವಿನಃ ಕೇವಲ ನಮ್ಮ ಪೌರ್ವಾತ್ಯ ಸಂಸ್ಕೃತಿಯನ್ನು ಹೊಗಳು ಭಟ್ಟರಂತೆ ಬಾಯ್ತುಂಬ ಹೊಗಳುವದು ಗುರಿಯಾಗಬಾರದು.

## ಸಾಧನ ಮಾರ್ಗ

ಪೂರ್ಣ ಮಾನವನಾಗಲಿಕ್ಕೆ ನಮ್ಮ ಶರೀರವು ಶ್ರೇಷ್ಠ ಮತ್ತು ಪ್ರಥಮ ಸಾಧನವು. ಶರೀರವು ಪ್ರಸಾದಕಾಯವೆಂದೂ ಅದನ್ನು ಕೆಡಿಸಬಾರದೆಂದೂ ಜಗದಣ್ಣನಾದ ಬಸವಣ್ಣನು ಹೇಳಿರುವನು, ಹಠಯೋಗ ಸಾಧನೆಯನ್ನಾದರೂ ಮಾಡಬಹುದು. ಆಸನ ಮತ್ತು ಪ್ರಾಣಾಯಾಮಗಳನ್ನಾದರೂ ಮಾಡಬಹುದು. ಆಧುನಿಕ ಪದ್ಧತಿಯಂತೆ ಶಾರೀರಿಕ ಶಿಕ್ಷಣವನ್ನಾದರೂ ಹೊಂದಬಹುದು. ಹಳೇ ಪದ್ಧತಿಯ ಗರಡೀ ಸಾಧನೆಯನ್ನಾದರೂ ಮಾಡಬಹುದು. ಹೇಗಾದರೂ ಮಾಡಿ ಶರೀರವನ್ನು ಆರೋಗ್ಯ ಸಂಪನ್ನ ಮತ್ತು ಶಕ್ತಿ ಸಂಪನ್ನವಾಗಿ ಮಾಡಿಕೊಳ್ಳಲಿಕ್ಕೆ ದೃಢನಿಶ್ಚಯ ಮಾಡಲಿಕ್ಕೆ ಬೇಕು. ಅನಾರೋಗ್ಯ ಮತ್ತು ಅಶಕ್ತಿಯುಳ್ಳ ತರುಣರಿಂದ ಮಾನವರ ಕಲ್ಯಾಣವಾಗಲಾರದು. ತನ್ನ ಉದ್ಧಾರ ಮಾಡಿಕೊಳ್ಳದವನು ಅನ್ಯರ ಉದ್ಧಾರ ಹೇಗೆ ಮಾಡಿಯಾನು ? ಇಂದ್ರಿಯಗಳ ಗುಲಾಮಗಿರಿಯಾಗಲಿ, ಪರಲೋಕ ಚಿಂತೆಯಾಗಲಿ ನಮಗೆ ಬೇಡ. ನಿರುತ್ಸಾಹದ ನಿರಾಶಾವಾದದಿಂದ ಕಾಲಹರಣ ಮಾಡುವದು ಬೇಡ. ಉತ್ಸಾಹ ಪೂರ್ಣ, ಆನಂದಯುಕ್ತ ಆಶಾವಾದದ ವಾತಾವರಣದಲ್ಲಿಯೇ ಇರೋಣ, ಬೆಳೆಯೋಣ, ಬೆಳಗೋಣ, ಭೌತಿಕ ಪ್ರಗತಿಯಿಲ್ಲದಿದ್ದರೆ ಆಧ್ಯಾತ್ಮಿಕ ಪ್ರಗತಿಯು ಸಾಧ್ಯವಿಲ್ಲ. ಆಧ್ಯಾತ್ಮಿಕ ಶಾಂತಿಯಿಲ್ಲದಿದ್ದರೆ ಭೌತಿಕ ಪ್ರಗತಿ ಸಾಧ್ಯವಿಲ್ಲ. ಅನುಭವದಿಂದ ಮನಸ್ಸಿನ ಶಕ್ತಿಯನ್ನು ಹೆಚ್ಚಿಸೋಣ. ಅರುಹಿನಿಂದ ಆತ್ಮಶಕ್ತಿಯನ್ನು ಬೆಳೆಸೋಣ. ಜ್ಞಾನ-ವಿಜ್ಞಾನಗಳಿಂದ ಬುದ್ಧಿ ಶಕ್ತಿಯನ್ನು ವೃದ್ಧಿಮಾಡಿಕೊಳ್ಳೋಣ ಸದಾ ಪ್ರಸನ್ನ ಮತ್ತು ಪ್ರಫುಲ್ಲಿತ ಮುಖಗಳುಳ್ಳವರಾಗಲಿಕ್ಕೆ ಸಾಧ್ಯಮಾಡೋಣ ಕನ್ನಡಿಯನ್ನಾದರೂ ಉಪಯೋಗಿಸಿರಿ. ಲಿಂಗವನ್ನಾದರೂ ನೋಡಿರಿ. ಧ್ಯಾನ ಶಕ್ತಿಯು

ನ್ನಾದರೂ ಬಲಿಸಿರಿ. ಹೇಗಾದರೂ ಮಾಡಿ ನಿಜವಾದ ಪ್ರಸಾದಿಕರಾಗಿರಿ. ದೇಹಕಾಂತಿ, ಬುದ್ಧಿಸ್ಥೈರ್ಯ, ಮನೋಬಲ, ಶುಕ್ರಸ್ಥೈರ್ಯ;- ಇವೆಲ್ಲವೂ ಪ್ರಸಾದಿಸ್ಥಲದಿಂದ ಸಾಧ್ಯವಾಗುತ್ತವೆ. ಇಂಥ ಮನಃಪ್ರಸಾದವನ್ನು ಶರಣರ ಸಂಗದಿಂದ, ಶರಣರ ಸಂಸ್ಕೃತಿ ಸಾಹಿತ್ಯ ತತ್ವಗಳಿಂದ ಹೊಂದಿರಿ. ಹೇಗಾದರೂ ಮಾಡಿ ಶಿಕ್ಷಣದ ಗುರಿಯನ್ನು ಮುಟ್ಟಿರಿ.

ಮನೆಯಲ್ಲಿ, ಶಾಲೆಯಲ್ಲಿ, ಸಮಾಜದಲ್ಲಿ ಇಂಥ ವಾತಾವರಣವನ್ನೇ ಉತ್ಪನ್ನಮಾಡಿರಿ. ಆ ವಾತಾವರಣ ಉತ್ಪನ್ನ ಮಾಡುವಂಥ ಶಿಕ್ಷಕರ ಸಂಗ ಮಾಡಿರಿ. ಶಿಸ್ತಿನಿಂದಲೂ, ಸೇವಾ ಭಾವನೆಯಿಂದಲೂ, ಶಾಂತಿಯಿಂದಲೂ, ಜ್ಞಾನದಿಂದಲೂ, ಸ್ವಚ್ಛತೆಯಿಂದಲೂ, ವ್ಯಾಯಾಮದಿಂದಲೂ, ವೀರ್ಯರಕ್ಷಣೆಯಿಂದಲೂ ನಡೆದರೆ ಅಂಥ ಪ್ರಾಸಾದಿಕ ವಾತಾವರಣವು ಹುಟ್ಟುವದು. ಏಳಿರಿ! ಎಚ್ಚೇಳಿ! ಕಾರ್ಯದಲ್ಲಿ ನಿರತರಾಗಿರಿ!!!

---

## ಭಕುತ ಗಣಂಗಳ ನಡೆ.

ಪಾರಮಾರ್ಥವರಿದ ಗುರುವಿನಡಿಯ ಸೇರಿ ಭಕುತಿಯಿಂದ ।
ವೀರಶೈವ ಮಾರ್ಗದಿರವನರಿದು ಸತತ ಯುಕುತಿಯಿಂದ ॥
ಮೂರನಾರನಳಿದು ನಿತ್ಯ ಮೂರ ಆರ ಬೆರೆಯಬೇಕು ।
ಸಾರ ಸುಖವ ಪಡೆಯಬೇಕು ಪರಮಭಕ್ತ ಮಾಹೇಶ್ವರನು ॥೧॥

—ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳು
ಸಖರಾಯ ಪಟ್ಟಣ.

---

ಹೀಗಿರಲು ತಾನು ನೇಮಿಸಿಕೊಂಡ ಸಮಯಾಚಾರದ ದೇವರು ರಕ್ಕಸಬ್ರಹ್ಮಯ್ಯನಿಗೆ- ನನಗೆ ಕಾಶೀ, ರಾಮೇಶ್ವರ, ಗೋಕರ್ಣ, ಮೊದಲಾದ ಕ್ಷೇತ್ರಗಳನ್ನು ನೋಡುವ ಆಶೆ ಉಂಟಾಗಿದೆ. ಹೋಗಲು ನನಗೆ ಒಪ್ಪಿಗೆ ಕೊಡಬೇಕೆಂದು ಕೇಳಿಕೊಳ್ಳಲು, ಬ್ರಹ್ಮಯ್ಯನು- ಅಲ್ಲಿಗೇಕೆ ಹೋಗಬೇಕು? ಆ ಕ್ಷೇತ್ರಗಳು ಇಲ್ಲಿ ನಾವಿದ್ದಲ್ಲಿಯೇ ಇವೆ, ಬೇಕಾದರೆ ತೋರಿಸುವೆನು, ಎಂದು ಹೇಳಿ ಅದಕ್ಕೆ ಅವನು ಅನೇಕ ಆಗಮ ಪ್ರಮಾಣಗಳನ್ನು ಉದಹರಿಸಿದನು. ಆದರೆ ಆ ಜಂಗಮನು- ನನಗೇನೂ ಆ ತೀರ್ಥಗಳು ಇಲ್ಲಿ ಕಣ್ಣಿಗೆ ಬೀಳುವದಿಲ್ಲ, ಎಂದು ನುಡಿದನು. ಅದಕ್ಕೆ ರಕ್ಕಸಬ್ರಹ್ಮಯ್ಯನು ಅವನನ್ನು ತನ್ನ ಮೇಲುಪ್ಪರಿಗೆಯ ಮೇಲೆ ಕರೆದುಕೊಂಡು ಹೋಗಿ- ಇಗೋ ನೋಡು. ಇಲ್ಲಿ ಕೆಲಬಲದಲ್ಲಿ ಕೇದಾರ ನೀಲಕಂಠ ಕ್ಷೇತ್ರಗಳಿವೆ. ಕಾಣುವದಿಲ್ಲವೇ? ಇತ್ತ ನಮ್ಮ ಮನೆಯ ಸುತ್ತಲೂ ನೋಡು. ವಿಸ್ತಾರವಾದ ಶ್ರೀಶೈಲಪರ್ವತವು ಕಾಣಿಸುವದಿಲ್ಲವೇ? ಇಲ್ಲಿ ನನ್ನ ಮನೆಯ ಅಂಗಣದಲ್ಲಿ ವಾರಣಾಸಿ ಕ್ಷೇತ್ರವು ಇದೆ. ಅದೂ ಕೂಡ ನಿನಗೆ ಕಾಣಿಸುವದಿಲ್ಲವೇ, ಎಂದು ಕೇಳಿದನು. ಅದಕ್ಕೆ ಆ ಚರಮೂರ್ತಿಯು- ಹೌದು, ಹೌದು, ಅವು ನನಗೆ ಕಾಣಿಸುತ್ತವೆ, ಎಂದೆನ್ನಲು ಇನ್ನು ಮತ್ತೇನು ನೋಡಬೇಕೆನ್ನುತ್ತೀ ಎಂದು ಕೇಳಿದನು. ಅದಕ್ಕೆ ಆ ಚರಮೂರ್ತಿಯು- ನಾನು ಕೈಲಾಸವನ್ನು ನೋಡಬೇಕೆನ್ನುತ್ತೇನೆ ಎಂದು ಅನ್ನಲು ಆ ಬ್ರಹ್ಮಯ್ಯನು- ನನ್ನ ಶರೀರದಲ್ಲಿಯೇ ಆ ಕೈಲಾಸವಿದೆ ಎಂದು ಹೇಳಿ ಅದರ ವಿಸ್ತೀರ್ಣವನ್ನು ಅಲ್ಲಿಯೇ ತೋರಿಸಿಕೊಟ್ಟನು. ಆಗ ಚರಮೂರ್ತಿಗೆ ಸಮಾಧಾನವಾಗಿ- ನೀನು ಹೇಳಿದ್ದು ನಿಜವು. ನಾನು ಇನ್ನು ಮೇಲೆ ನಾನೆಲ್ಲಿಯೂ ನಿನ್ನನ್ನು ಬಿಟ್ಟು ಯಾವ ಕ್ಷೇತ್ರಕ್ಕೂ ಹೋಗುವದಿಲ್ಲ ಎಂದು ಹೇಳಿದನು.

ಮುಂದೆ ಆ ಚರಮೂರ್ತಿಯು ಬ್ರಹ್ಮಯ್ಯನ ಅರಮನೆಯಲ್ಲಿಯೇ ಇರಹತ್ತಿದನು. ಆದರೆ ಅವನ ಮನಸ್ಸಿನಲ್ಲಿ ಕ್ಷೇತ್ರ ದರ್ಶನ ಮಾಡಬೇಕೆಂಬ ಆಕಾಂಕ್ಷೆಯು ಪುನಃ ಉಂಟಾಯಿತು. ಅದನ್ನು ಬಿಡುವದು ಅವನಿಂದಾಗಲಿಲ್ಲ. ಆಗ ಅವನು ಬ್ರಹ್ಮಯ್ಯನನ್ನು ಕೇಳಿದರೆ, ಅವನು ನನ್ನನ್ನು ಬಿಡುವದಿಲ್ಲ, ಎಂದು ತಿಳಿದುಕೊಂಡು ಅರ್ಧ ರಾತ್ರಿಯಲ್ಲಿ ಎದ್ದು ಬ್ರಹ್ಮಯ್ಯನ ಮನೆ ಬಿಟ್ಟು ಹೊರಗೆ ಓಡಿಹೋಗಹತ್ತಿದನು. ಆದರೆ ಬ್ರಹ್ಮಯ್ಯನು ಅಕಸ್ಮಾತ್ತಾಗಿ ಅವನು ಓಡಿಹೋಗುವವನನ್ನು ಕಂಡು ಅವನ ತಲೆಯನ್ನು ತತ್ಕ್ಷಣವೇ ಹೊಡೆದು ತನ್ನ ಲಿಂಗಾರ್ಚನೆಯ ಕೋಣೆಯಲ್ಲಿಟ್ಟುಬಿಟ್ಟನು.

ಮುಂದೆ ಮರುದಿನ ಲಿಂಗಾರ್ಚನೆಯ ವೇಳೆಯಾಗಲು ಬ್ರಹ್ಮಯ್ಯನು ಆ ಚರಮೂರ್ತಿಯ ಶಿರವನ್ನು ಅವನ ಅಟ್ಟೆಯ ಮೇಲಿಡಲು ಅದಕ್ಕೆ ಪ್ರಾಣವು ಬಂದಿತು. ಆಗ ಅವನು ತನ್ನ ಅರ್ಪಿತ ಮೊದಲಾದ ಕ್ರಿಯೆಗಳನ್ನು ಮಾಡಿ ಕೊಂಡನು. ಅವು ಮುಗಿದ ಬಳಿಕ ಆ ಶಿರವೂ ಧಡವೂ ಮೊದಲಿನಂತೆಯೇ ಬೇರೆ ಬೇರೆ ಆದವು. ಮುಂದೆ ಬ್ರಹ್ಮಯ್ಯನು ಇನ್ನೊಬ್ಬ ಚರಮೂರ್ತಿಯನ್ನು ನೇಮಿಸಿಕೊಂಡು ಅವನೊಡನೆ ತನ್ನ ಕ್ರಿಯೆಗಳನ್ನು ಮಾಡಿಕೊಳ್ಳಹತ್ತಿದನು. ಆದರೆ ಅವನೂ ಕೂಡ ಮೊದಲಿನ ಚರಮೂರ್ತಿಯಂತೆ ನಾನು ಇನ್ನು ಮೇಲೆ ನಿನ್ನಲ್ಲಿರಲಾರೆನು, ತೀರ್ಥಯಾತ್ರೆಗೆ ಹೋಗುವೆನೆಂದು ಹೇಳಿ ಹೊರಗೆ ಹೊರಟನು. ಅವನು ಹೋಗುವಾಗ ಬ್ರಹ್ಮಯ್ಯನು ಅವನ ತಲೆಯನ್ನೂ ಹೊಡೆದು ತನ್ನ ಲಿಂಗಾರ್ಚನೆಯ ಕೋಣೆಯಲ್ಲಿಟ್ಟನು. ಈ ಪ್ರಕಾರ ಬ್ರಹ್ಮಯ್ಯನು ಒಬ್ಬರ ಹಿಂದೊಬ್ಬರು ೩೭ ಜನ ಚರಮೂರ್ತಿಗಳ ಶಿರಚ್ಛೇದನವನು ಮಾಡಿ ಅವರ ಶಿರಗಳನ್ನು ತನ್ನ ಲಿಂಗಾರ್ಚನೆಯ ಕೋಣೆಯಲ್ಲಿಟ್ಟು ಮೂರು ವೇಳೆ ಅವರಲ್ಲಿ ಪ್ರಾಣವನ್ನು ತುಂಬಿ ಅವರನ್ನು ಪೂಜಿಸುತ್ತ ಇರಹತ್ತಿದನು.

ರಕ್ಕಸಬ್ರಹ್ಮಯ್ಯನ ಈ ರೀತಿಯು ಜನರಿಗೆ ತಿಳಿದು ಅವರಲ್ಲಿ ಶರಣರಾದ ಕೆಲವರು ಅವನನ್ನು ಕೊಂಡಾಡಹತ್ತಿದರು. ಆದರೆ ಲೋಕದ ಜನರು ಅವನನ್ನು ನಿಂದಿಸಹತ್ತಿದರು. ಜಂಗಮರು ಅವನ ಗ್ರಾಮಕ್ಕೆ ಬರಲು ಭಯಪಡಹತ್ತಿದರು. ಅವರು ಈ ಬ್ರಹ್ಮಯ್ಯನು ಭಕ್ತನಲ್ಲ, ಬ್ರಹ್ಮರಾಕ್ಷಸನು ಎಂದು ಹೇಳಿ ಅವನ ಮನೆಯ ಸಮೀಪಕ್ಕೆ ಹೋಗಲು ಹಿಂಜರಿದರು. ಅವನಿಗೆ ಯಾವ ಚರಮೂರ್ತಿಯೂ ಸಿಗದಂತೆ ಆಯಿತು. ಅವನ ಪೂಜಾದಿ ಕಾರ್ಯಗಳು ನಿಂತುಹೋದವು.

ಬ್ರಹ್ಮಯ್ಯನ ಉತ್ಕಟವಾದ ಈ ವೃತ್ತಾಂತವನ್ನು ಶಿವನು ತಿಳಿದವನಾಗಿ ಚರಮೂರ್ತಿಗಳು ಅವನ ಸನಿಯಕ್ಕೆ ಬಾರದ್ದನ್ನು ಅರಿತು ತಾನೇ ಜಂಗಮರೂಪ ಧಾರಣಮಾಡಿ ಅಡಿಕಿಹಾಳಕ್ಕೆ ಬಂದನು. ಅವನು ಮೊದಲು ಬ್ರಹ್ಮಯ್ಯನಿಂದ ಭಕ್ತ್ಯುಪಚಾರಗಳನ್ನು ಕೈಕೊಂಡು ಅವನು ಮಾಡುತ್ತ ಬಂದ ದುರ್ಘಟದ ಭಕ್ತಿಯನ್ನು ಕಂಡು, ಇದೇನೆಂದು ಕೇಳಲು-ಜಂಗಮರು ತಾವು ಮೊದಲು ವಚನಕೊಟ್ಟು ನನ್ನ ಸಮಯಾಚಾರಕ್ಕೆ ಹಿಂದುಗಡೆ ಒಲ್ಲೆವೆಂದು ಅನ್ನುತ್ತಾರೆ. ಅವರಿಗೆ ನಾನು ಇಂಥ ಖಡ್ಗ ಪೂಜೆಯನ್ನು ಮಾಡುತ್ತೇ

ಸಿನಲು, ಶಿವನು ಪ್ರೀತನಾಗಿ ನಿನ್ನಂಥ ಭಕ್ತರು ಎಲ್ಲಿ ದೊರೆಯಬೇಕು ? ನಿನ್ನಲ್ಲಿಯೇ ನಾನು ಇರುವೆನು ಎಂದು ಹೇಳಿದನು. ಅವಕ್ಕೆ ಬ್ರಹ್ಮಯ್ಯನು ನೀವಿಲ್ಲಿರಲಾರಿರಿ. ಕೆಲವೊಂದು 'ಕಟ್ಟುಬಿನ್ನಹ' ಮಾಡಿಕೊಂಡು ಹೋಗುತ್ತ ಬರುತ್ತ ಇರಬೇಕು, ಎಂದು ತಿಳಿಸಿದನು. ಆದರೆ ಶಿವನು ನಾನು ನಿನ್ನನ್ನು ಬಿಟ್ಟು ಎಂದೂ ಹೋಗುವದಿಲ್ಲ, ಎಂದು ವಚನ ಕೊಡಲು ಬ್ರಹ್ಮಯ್ಯನು ಹಾಗೆಯೇ ಆಗಲೆಂದು ಹೇಳಿ ಅವನನ್ನು ತನ್ನ ಮನೆಯಲ್ಲಿಟ್ಟುಕೊಂಡನು.

ಹೀಗೆ ಕೆಲವು ದಿನಸಗಳಾದ ಬಳಿಕ ಶಿವನು ಬ್ರಹ್ಮಯ್ಯನಿಗೆ- ನನಗೆ ಏಳು ಲೋಕ, ಏಳು ಸಮುದ್ರ ನೋಡುವ ಅಭಿಲಾಷೆಯಾಗಿದೆ, ಎಂದು ಹೇಳಲು ಬ್ರಹ್ಮಯ್ಯನು- ನೋಡಿ ಸ್ವಾಮಿ, ಎಂದು ೧೪ ಭುವನ ವಿಸ್ತಾರ ವನ್ನು ಅವನಿಗೆ ತೋರಿಸಿದನು. ಅದನ್ನು ಶಿವನು ನೋಡಿ ಅಗಾಧಬಟ್ಟು ನಿನ್ನ ಸ್ಥಾನವು ಕೈಲಾಸದಂತಿದೆ, ನಾನು ನಿನ್ನನ್ನು ಬಿಟ್ಟು ಎಂದೂ ಹೋಗುವ ದಿಲ್ಲ ಎಂದು ಹೇಳಿದನು.

ಆದರೆ ಕೆಲವು ದಿನಸಗಳಾದ ಮೇಲೆ ಶಿವನಿಗೂ ಕೂಡ ಬ್ರಹ್ಮಯ್ಯ ನಲ್ಲಿರುವದು ಬೇಸರವಾಗಹತ್ತಿತು. ಆದ್ದರಿಂದ ಅವನು ಒಂದು ರಾತ್ರಿಯಲ್ಲಿ ಪಹರೆಯವನನ್ನು ತಪ್ಪಿಸಿ ಓಡಿಹೋದನು. ಪಹರೆಯವನು ಎಷ್ಟು ಹುಡಿಕಿ ದರೂ ಸಿಕ್ಕಲಿಲ್ಲ. ಆಗ ಅವನು ಬ್ರಹ್ಮಯ್ಯನಿಗೆ ಜಂಗಮನು ಓಡಿಹೋದನು, ಸಿಕ್ಕಲಿಲ್ಲ ಎಂದು ಹೇಳಲು, ಬ್ರಹ್ಮಯ್ಯನು ಜಪಮಾಡುವಲ್ಲಿ ಆಗ ತೊಡಗಿದ್ದು ಎದ್ದು ಹೋಗಲಾರದೆ ತನ್ನ ಶಿರಸ್ಸನ್ನೇ ಕತ್ತರಿಸಿ, ಅದಕ್ಕೆ- ನೀನು ಆ ಚರ ಮೂರ್ತಿಯು ಎಲ್ಲಿರುವನೋ ಅವನನ್ನು ಹುಡಿಕಿಕೊಂಡು ಬಾ, ಎಂದು ಆಜ್ಞಾಪಿಸಿದನು. ಆಗ ಆ ಶಿರವು ಬರಸಿಡಿಲಿನಂತೆ ಜಂಗಮರೂಪಿನಲ್ಲಿದ್ದ ಶಿವ ನನ್ನು ಬೆನ್ನುಹತ್ತಿ, ಕೈಲಾಸಕ್ಕೆಯೇ ಹೋಗಿ, ಅಲ್ಲಿ ಹರಿಯಜ, ಇಂದ್ರ ಪ್ರಮಥರಿರಲು, ಶಿವನ ಪಾದಕ್ಕೆ ಎರಗಿ- ಬ್ರಹ್ಮಯ್ಯನು ನಿಮ್ಮನ್ನು ಕರೆಯು ತ್ತಿದ್ದಾನೆ, ಅಲ್ಲಿಗೆ ಬರಬೇಕೆಂದು ಹೇಳಲು, ಶಿವನು ಬ್ರಹ್ಮಯ್ಯನ ಆಜ್ಞೆ ಯನ್ನು ಮೀರಲಾರದೆ ಅವನಲ್ಲಿಗೆ ಬಂದು ಪ್ರತ್ಯಕ್ಷನಾಗಿ- ಬ್ರಹ್ಮಯ್ಯನೇ, ನಾನು ನಿನಗೆ ಪ್ರೀತನಾದೆನು. ನಿನಗೇನು ಬೇಕು ಬೇಡೆಂದು ನುಡಿಯಲು, ಬ್ರಹ್ಮಯ್ಯನು ಅವನನ್ನು ನಮಸ್ಕರಿಸಿ, ನಾನು ಹೊಡೆದು ಹಾಕಿದ ೩೬ ಜನ ಚರಮೂರ್ತಿಗಳನ್ನು ಕೈಲಾಸಕ್ಕೆ ಕರೆದುಕೊಂಡು ಹೋಗು. ನಾನು ಮಾತ್ರ ನನ್ನ ಸಮಯಾಚಾರವನ್ನು ಮಾಡುತ್ತ ಇಲ್ಲಿಯೇ ಇರುವೆನೆಂದು ಹೇಳಿದನು. ಶಿವನು ಹಾಗೆಯೇ ಆಗಲೆಂದು ಹೇಳಿ ಆ ಚರಮೂರ್ತಿಗಳಿಗೆ ಪ್ರಾಣವನ್ನು ಕೊಟ್ಟು ಅವರನ್ನು ಕೈಲಾಸಕ್ಕೆ ಕರೆದೊಯ್ದನು. ಆದರೆ ರಕ್ಕಸಬ್ರಹ್ಮಯ್ಯನು

ತನ್ನ ಸಮಯಾಚಾರದ ಭಕ್ತಿಯನ್ನು ಬಿಡದೆ ಪಾಲಿಸುತ್ತ ಕಡೆಗೆ ತನ್ನ ಇಷ್ಟಲಿಂಗದಲ್ಲಿ ತನ್ನ ಸಮಯಾಚಾರದ ದೇವರುಗಳು ಸಹವಾಗಿ ಲಿಂಗೈಕ್ಯನಾದನು.

ರಕ್ಕಸಬ್ರಹ್ಮಯ್ಯನು ವಚನಕಾರನಿದ್ದಾನೆ. ಅವನ ೧೬ ವಚನಗಳು ನಮ್ಮ ಹತ್ತಿರವಿದ್ದು ಅವುಗಳ ಮುದ್ರಿಕೆಯು 'ರಕ್ಕಸನೊಡೆಯ ಕೊಟ್ಟುದು ಬೇಡ' ಎಂದಿದೆ. ಅವು ಬಹು ಗೂಢಾರ್ಥವುಳ್ಳವು. ಅತ್ಯಂತ ಅಶುದ್ಧವಿದ್ದು ಅರ್ಥಮಾಡಲು ಆಗುವದಿಲ್ಲಾದ್ದರಿಂದ ಅವುಗಳನ್ನು ನಾವು ಇಲ್ಲಿ ಉದಹರಿಸಿಲ್ಲ. ಅವುಗಳಲ್ಲೊಂದರಲ್ಲಿ ಬಸವೇಶ್ವರನ ಉಲ್ಲೇಖವಿದೆ. ಆದ್ದರಿಂದ ಈ ವಚನಕಾರನು ಬಸವೇಶ್ವರನಕಿಂತಲೂ ಈಚಿನವನಾಗಿದ್ದಾನೆಂದು ತೋರುತ್ತದೆ. ಅವನ ಗ್ರಾಮವಾದ 'ಅಡಿಕಿಹಾಳು' ಅಥವಾ 'ಕೊಟ್ಟದ ಹೊಳೆ' ಎಲ್ಲಿದೆಂಬದು ನಮಗೆ ಗೊತ್ತಾಗುವದಿಲ್ಲ. ಇದು ಸಂಶೋಧಿಸತಕ್ಕ ವಿಷಯವಾಗಿದೆ.

ರಕ್ಕಸಬ್ರಹ್ಮಯ್ಯನ ಚರಿತ್ರೆಯಿಂದ ಅವನು ಎಂಥ ಕ್ರೂರ ಮನುಷ್ಯನಿರಬಹುದೆಂದು ವಾಚಕರು ಅವನನ್ನು ಧಿಕ್ಕರಿಸಬಹುದು. ನಾವು ಈ ಚರಿತ್ರೆಯನ್ನು ಪ್ರಸಿದ್ಧಿಸಬಾರದಿತ್ತೆಂತಲೂ ಅವರು ಅಭಿಪ್ರಾಯಪಡಬಹುದು. ಆದರೆ ಅನೇಕ ಶಿವಶರಣರು ವೀರಶೈವ ಮತದ ನಡೆನುಡಿಗಳನ್ನು ಆಚರಿಸಿ ತೋರಿಸಿದ್ದಾರೆ. ಅವುಗಳಲ್ಲಿಯ ಗೂಢಾರ್ಥಗಳನ್ನು ತಿಳಿಯುವದು ಅವಶ್ಯವು. ಆದ್ದರಿಂದ ಅವುಗಳನ್ನು ನಾವು ದುರ್ಲಕ್ಷಿಸಬಾರದು. ವೀರಶೈವರು ಸ್ಥಾವರ ಲಿಂಗಗಳನ್ನು ಅಥವಾ ಇತರ ದೇವತೆಗಳನ್ನು ಎಂದೂ ಪೂಜಿಸಬಾರದೆಂಬುದು ನಿಜಧರ್ಮವು. ಇದನ್ನು ಈ ಚರಿತ್ರೆಯು ಅತ್ಯಂತವಾಗಿ ಸ್ಪಷ್ಟಪಡಿಸುವದರಿಂದ ನಾವು ಈ ಚರಿತ್ರೆಯನ್ನು ಇದ್ದಕ್ಕಿದ್ದ ಹಾಗೆ ಕೊಟ್ಟಿದ್ದೇವೆ. ಶಿವಶರಣರ ನಡೆಗಳ ವಿಷಯವಾಗಿ ಮೊದಲಿನ ಕಾಲವಲ್ಲಿ ಆಗಿಂದಾಗ್ಗೆ ಮತಭೇದಗಳಾಗುತ್ತಿದ್ದವೆಂದು ಅವರ ಚರಿತ್ರೆಗಳಿಂದ ನಾವು ಊಹಿಸಬಹುದಾಗಿದೆ. ಪುರಾತನ ಕಾಲದ ವಾಙ್ಮಯವು ನಮಗೆ ಪೂರ್ಣ ದೊರೆತಿಲ್ಲಾದ್ದರಿಂದ ಈ ಮತಭೇದದ ಸಂಗತಿಗಳ ವಿವರಣೆಗಳು ನಮಗೆ ಉಪಲಬ್ಧವಿಲ್ಲ. ಆದರೆ ರಕ್ಕಸಬ್ರಹ್ಮಯ್ಯನ ಚರಿತ್ರೆಯನ್ನು ನಾವು ನಿರೀಕ್ಷಿಸಿದಲ್ಲಿ ವೀರಶೈವರು ಸ್ಥಾವರ ಲಿಂಗಗಳ ಮತ್ತು ಇತರ ದೇವತೆಗಳ ಪೂಜೆಯನ್ನು ಎಷ್ಟು ಮಾತ್ರವೂ ಮಾಡಕೂಡದೆಂಬುದು ಸ್ಪಷ್ಟವಾಗುತ್ತದೆ.

---

# ಶಿವಶರಣರು ಮಾಡಿದ ಕ್ರಾಂತಿ

ನಾವು ಅನೇಕ ಶಿವಶರಣರ ಚರಿತ್ರೆಗಳನ್ನು ಪ್ರಸಿದ್ಧಿಸುತ್ತ ಇದ್ದು ಅವುಗಳ ಮೇಲಿಂದ ಅವರು ಎಂಥ ಮಹತ್ತರವಾದ ಕ್ರಾಂತಿಯನ್ನು ದೇಶದಲ್ಲಿ ಮಾಡಿದರೆಂಬುದು ವಾಚಕರ ನಿದರ್ಶನಕ್ಕೆ ಬರದೆ ಇರಲಾರದು. ಈ ಚರಿತ್ರೆಗಳನ್ನು ಬರೆಯುವಲ್ಲಿ ನಾವು ಕೇವಲ ಪವಾಡಗಳಿಗೆ ಉನ್ನತ ಸ್ಥಾನವನ್ನು ಕೊಟ್ಟಿರುವದಿಲ್ಲ. ಪವಾಡಗಳ ಮಹತ್ವವು ಕೆಲವು ಮಟ್ಟಿಗೆ ಇದ್ದರೂ ಶಿವಶರಣರು ತಮ್ಮ ಜೀವಿತದಲ್ಲಿ ಯಾವ ಕಾರ್ಯಗಳನ್ನು ಮಾಡಿದರು ಮತ್ತು ಅವರು ತಮ್ಮ ನಡೆಯಲ್ಲಿ ಶಿವಾನುಭವವನ್ನು ಹೇಗೆ ಅಳವಡಿಸಿಕೊಂಡಿದ್ದರು, ಎಂಬುದನ್ನು ವಾಚಕರ ಲಕ್ಷ್ಯಕ್ಕೆ ತರಲು ನಾವು ಬಹಳ ಪ್ರಯತ್ನಿಸಿದ್ದೇವೆ. ಇವರು ಶಿವಾನುಭವದಂತೆ ನಡೆದುದಲ್ಲದೆ ಅವರ ತಿಳವಳಿಕೆಯನ್ನು ವಚನಗಳ ಮೂಲಕ ಸರ್ವಜನರಿಗೂ ಮಾಡಿಕೊಟ್ಟಿದ್ದಾರೆ. ಅವಶ್ಯವಿದ್ದಲ್ಲಿ ಅವರು ರಚಿಸಿದ ವಚನಗಳನ್ನು ನಾವು ಈ ಗ್ರಂಥದಲ್ಲಿ ಉದಹರಿಸುತ್ತಲೂ ಬಂದಿದ್ದೇವೆ. ಶಿವಶರಣರ ನಡೆ ಮತ್ತು ಅವರ ವಿಚಾರ ಇವುಗಳ ಮೂಲಕ ವೀರಶೈವ ಧರ್ಮವು ದೇಶದಲ್ಲಿ ಪ್ರಸಾರವಾಗುತ್ತ ಹೋಗಿರುತ್ತದೆ.

೧೧ನೇ ೧೨ನೇ ಶತಮಾನಗಳಲ್ಲಿ ಹಿಂದುಸ್ತಾನದಲ್ಲಿ ಕರ್ನಾಟಕಕ್ಕೆ ಉನ್ನತ ಸ್ಥಾನವು ಪ್ರಾಪ್ತವಾಗಿತ್ತು. ಇದು ಅಲ್ಲಿ ಆಳಿದ ಸಾರ್ವಭೌಮ ರಾಜರ ಮೂಲಕವೇ ಇರುತ್ತದೆ. ಅವರು ಕಲೆ ಮತ್ತು ವಾಙ್ಮಯ ಇವುಗಳಿಗೆ ಉತ್ತೇಜನ ಕೊಡುತ್ತಿದ್ದದರಿಂದ ಅನೇಕ ದೇಶಗಳ ವಿದ್ವಾಂಸರೂ ಕಲಾವಿದರೂ ತತ್ವವೇತ್ತಿಗಳೂ ಅವರ ರಾಜಧಾನಿಯ ಸ್ಥಳವಾದ ಕಲ್ಯಾಣಕ್ಕೆ ಬಂದು ರಾಜರಿಂದ ಮನ್ನಣೆಯನ್ನು ಹೊಂದಿ ಹೋಗುತ್ತಿದ್ದರು. ಇದೇ ಕಾಲದಲ್ಲಿಯೇ ಶಿವಶರಣರ ಪ್ರಚಾರ ಕಾರ್ಯಗಳು ಕರ್ನಾಟಕದಲ್ಲಿ ಬಲವಾಗಿ ಸಾಗಿದ್ದವು. ಬಸವೇಶ್ವರನ ಕಾಲದಲ್ಲಿ ಈ ಕಾರ್ಯಗಳು ಶಿವಾನುಭವ ಮಂಟಪದ ಮೂಲಕ ಒಳ್ಳೇ ರಭಸದಿಂದ ಮುಂದುವರಿದಿದ್ದವು. ಇದರಿಂದ ಹಿಂದುಸ್ತಾನದಲ್ಲಿಯ ಎಲ್ಲ ದೇಶಗಳಲ್ಲಿಯೂ ಶಿವಶರಣರು ಉದಯವಾದದ್ದು ನಾವು ಈ ವರೆಗೆ ವಿವರಿಸಿದ ಚರಿತ್ರೆಗಳಿಂದ ವಾಚಕರಿಗೆ ತಿಳಿದುಬರುವದು.

ಶಿವಲೆಂಕ ಮಂಚಣ್ಣನು ವೀರಶೈವರಲ್ಲಿ ವಿದ್ವತ್ತೆಯಲ್ಲಿ ಉನ್ನತ ಸ್ಥಾನವನ್ನು ಪಡೆದಿದ್ದಾನೆ. ಅವನು ಪಂಡಿತತ್ರಯರಲ್ಲಿ ಒಬ್ಬನಾಗಿದ್ದಾನೆ. ಈತನು ಕಾಶೀಪಟ್ಟಣದಲ್ಲಿ ತನ್ನ ವಿದ್ವತ್ತೆಗೋಸ್ಕರ ಖ್ಯಾತಿಯನ್ನು ಪಡೆದು ವಿಶ್ವೇಶ್ವರ

ದೇವಾಲಯದಲ್ಲಿ ತನ್ನ ಪೊವಾಡವನ್ನು ಮೆರೆಯಿಸಿದನು. ಅವನು ಮುಂದೆ ಕಲ್ಯಾಣಕ್ಕೆ ಆಗಮಿಸಿದನು.

ಓಡಿಸಾ ಪ್ರಾಂತದಲ್ಲಿ ಸುಜ್ಞಾನಿದೇವ ಮತ್ತು ನನ್ನಯ್ಯ ಇವರು ಪ್ರಖ್ಯಾತಿಯನ್ನು ಹೊಂದಿದವರಾಗಿ ಕಡೆಗೆ ಕಲ್ಯಾಣಕ್ಕೆ ಬಂದು ಅಲ್ಲಿಯ ಶಿವಾನುಭವ ಮಂಟಪವನ್ನು ಹೊಂದಿದವರಾದರು.

ಗುಜರಾಥ ದೇಶದಿಂದ ಆದಿಶೆಟ್ಟಿ ಅಥವಾ ಆದಯ್ಯನು ಕರ್ನಾಟಕಕ್ಕೆ ಬಂದು ವೀರಶೈವ ಧರ್ಮವನ್ನು ಹೊಂದಿ ಪುಲಿಗೆರೆ ಅಂದರೆ ಈಗಿನ ಲಕ್ಷ್ಮೇಶ್ವರದಲ್ಲಿ ಸೌರಾಷ್ಟ್ರ ಸೋಮನಾಥನು ನೆಲಿಸುವಂತೆ ಮಾಡಿದನು. ಅವನು ವಚನಕಾರನಾದನು. ಬಹುಜನ ವಚನಕಾರರು ಸೋಮೇಶ್ವರನ ಭಕ್ತರಾಗಿದ್ದಾರೆ.

ಕೇರಳದೇಶ ಎಂದರೆ ಮಲಬಾರ ಪ್ರಾಂತದಲ್ಲಿ ಕುಡಗಲೂರಿನ ಗೊಗ್ಗವ್ವೆ, ಚಾರಮರಾಯ, ಭದ್ರಗಾಯಕ ಇವರು ಪ್ರಸಿದ್ಧಿಗೆ ಬಂದಿದ್ದಾರೆ.

ಕಾಶ್ಮೀರದಲ್ಲಿ ಬೊಂತಾದೇವಿ, ನಿಜಲಿಂಗ ಚಿಕ್ಕಯ್ಯ, ಮೋಳಿಗಿ ಮಾರಯ್ಯ, ಮಹಾದೇವಿಯಮ್ಮ ಇವರೆಲ್ಲರೂ ಉಚ್ಚ ಶಿವಾನುಭವಿಗಳು. ಇವರೆಲ್ಲರೂ ವಚನಕಾರರು. ಅವರು ಕಡೆಗೆ ಕಲ್ಯಾಣದಲ್ಲಿ ಬಸವೇಶ್ವರನ ಸನ್ನಿಧಿಯನ್ನು ಸಾರಿದರು.

ಮಹಾರಾಷ್ಟ್ರ ದೇಶದಲ್ಲಿ ಉರಿಲಿಂಗದೇವ, ಅವನ ಶಿಷ್ಯ ಉರಿಲಿಂಗ ಪೆದ್ದಿ, ಪರಳಿಯ ವೈಜವ್ವೆ, ಕೋಲಂಬೆ, ಗುಂಬಾರ ಗುಂಡಯ್ಯ ಇವರು ಶಿವಶರಣರಲ್ಲಿ ಶ್ರೇಷ್ಠ ಸ್ಥಾನವನ್ನು ಹೊಂದಿದ್ದಾರೆ. ಇವರಲ್ಲಿ ಮೊದಲಿನ ನಾಲ್ವರು ಗೋದಾವರೀತೀರ ಪ್ರದೇಶದವರು.

ಈ ಶಿವಶರಣರಲ್ಲಿ ಬಹುತರ ಎಲ್ಲರೂ ಕ್ರಾಂತಿಕಾರರು, ಅಂದರೆ ತಾವಿದ್ದ ನಾಡಿನಲ್ಲಿ ಅವರು ಸ್ವಸ್ಥವಾಗಿ ಕುಳ್ಳಿರದೆ ಶಿವಾನುಭವದ ಶ್ರೇಷ್ಠ ವಿಚಾರಗಳನ್ನು ತಮ್ಮ ತಮ್ಮ ನಾಡುಗಳಲ್ಲಿ ಪ್ರಸಾರಮಾಡಿದವರು ಇದ್ದಾರೆ. ಇವರು ಮಾಡಿದ ಕಾರ್ಯಗಳ ಮೂಲಕವೇ ವೀರಶೈವ ಧರ್ಮವು ಎಲ್ಲ ಕಡೆಗೂ ಪಸರಿಸಿರುತ್ತದೆ. ಆದರೆ ಎಲ್ಲಕ್ಕೂ ಹೆಚ್ಚು ಪರಿಣಾಮವಾದದ್ದು ಆಂಧ್ರದೇಶದಲ್ಲಿ. ಅದರ ತರುವಾಯ ದ್ರಾವಿಡದೇಶದಲ್ಲಿ. ಚೋಳ ರಾಜರು ದ್ರಾವಿಡ ದೇಶವನ್ನು ಕಾಂಚೀಪಟ್ಟಣದಲ್ಲಿ ಆಳುತ್ತಿದ್ದರು. ಈ ಕಾಲದಲ್ಲಿ ಬಹುಜನ ಶಿವಶರಣರು ಎಲ್ಲಕಡೆಗೂ ಪ್ರವಾಸವನ್ನು ಮಾಡಿ

ದ್ದಾರೆ. ಅವರೆಲ್ಲರೂ ತಮ್ಮ ಪ್ರವಾಸದಲ್ಲಿ ಬಹುಶಃ ಕಾಂಚೀಪಟ್ಟಣಕ್ಕೆ ಹೋಗಿ ಅಲ್ಲಿ ಚೋಳರಾಜರ ಆಸ್ಥಾನದಲ್ಲಿ ತಮ್ಮ ಪೊವಾಡಗಳನ್ನು ಮೆರೆಯಿಸಿದ್ದಾರೆ. ಚನ್ನಯ್ಯ, ಮೆರೆಮಿಂಡದೇವ, ಈ ವಚನಕಾರರು ಅಲ್ಲಿಗೆ ಹೋಗಿ ತಮ್ಮ ಮಹತ್ವವನ್ನು ಪ್ರದರ್ಶಿಸಿದ್ದಾರೆ. ಎಡೆಮಠದ ನಾಗಿದೇವ ಮತ್ತು ಮಸಣಮ್ಮ ಇವರು ಮೊದಲು ಕಾಂಚೀಪಟ್ಟಣದಲ್ಲಿದ್ದು ಮುಂದೆ ಕರ್ನಾಟಕಕ್ಕೆ ಬರುವವರಾದರು. ಈ ಪ್ರಕಾರ ಶಿವಶರಣರು ದ್ರಾವಿಡ ದೇಶದಲ್ಲಿ ವೀರಶೈವ ಮತದ ಪ್ರಭಾವವನ್ನು ಬೀರಿದ್ದಾರೆ.

ಶಿವಶರಣರ ವಿಚಾರಗಳು ಆಂಧ್ರದೇಶದಲ್ಲಿ ಎಲ್ಲಕ್ಕೂ ಹೆಚ್ಚು ಪ್ರಸಾರವಾಗಿದ್ದರಿಂದ ಅಲ್ಲಿ ಬಹುಜನ ಶಿವಶರಣರೂ ವಿದ್ವಾಂಸರೂ ಉಂಟಾಗಿರುವದು ಕಂಡುಬರುತ್ತದೆ. ಇವರಲ್ಲಿ ಮೊದಲಿಗನು ಶ್ರೀಪತಿ ಪಂಡಿತನು. ಇವನು ವಿಜಯವಾಡ ಎಂದರೆ ಈಗಿನ ಬೆಜವಾಡದಲ್ಲಿ ಜನಿಸಿ, ಶಿವಶರಣರ ತತ್ವಗಳನ್ನು ಬಹುಕಡೆಗೆ ಪ್ರಸಾರ ಮಾಡಿದ್ದರಿಂದ ಅನೇಕ ಸಾಮಂತರೂ ರಾಜರೂ ಅವನ ಅನುಯಾಯಿಗಳಾಗಿದ್ದರು. ಅವನಿಗೆ ಬಹುಜನರು ಶಿಷ್ಯರಾಗಿದ್ದರು. ಆಂಧ್ರರು ಈ ಕಾಲಕ್ಕೆ ಆಗಿಂದಾಗ್ಗೆ ಕರ್ನಾಟಕಕ್ಕೆ ಬಂದು ಇಲ್ಲಿ ಅನೇಕ ಪೊವಾಡಗಳನ್ನು ಮಾಡಿದ್ದಾರೆ. ಉರಿಲಿಂಗಪೆದ್ದಿ, ತೆಲುಗೇಶ ಮಸಣಯ್ಯ, ತೆಲುಗು ಜೊಮ್ಮಯ್ಯ ಇವರು ಇಂಥವರಲ್ಲಿ ಮುಖ್ಯರಾಗಿದ್ದಾರೆ. ಅಲ್ಲದೆ ಶಿವಪ್ರಿಯನಾಚಿ, ವೇಮನಾರಾಧ್ಯ ಇವರು ವಚನಕಾರರ ತತ್ವಗಳನ್ನು ಪರಿಪಾಲಿಸುವವರಾದರು. ಮುಂದೆ ಬಸವೇಶ್ವರನ ಕಾಲದಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯನು ದ್ರಾಕ್ಷಾರಾಮ ಕ್ಷೇತ್ರದಲ್ಲಿ ಜನಿಸಿ ಆಂಧ್ರ ಮತ್ತು ದ್ರಾವಿಡ ದೇಶಗಳಲ್ಲಿ ವೀರಶೈವ ತತ್ವಗಳನ್ನು ಪ್ರಸಾರ ಮಾಡಿದ್ದಾನೆ.

ದ್ರಾಕ್ಷಾರಾಮ ಕ್ಷೇತ್ರವು ಕಾಕಿನಾಡ ಜಿಲ್ಲೆಯಲ್ಲಿ ಗೋದಾವರೀ ನದಿಯ ಮುಖದಲ್ಲಿ ಇದೆ. ಇದು ಸೃಷ್ಟಿ ಸೌಂದರ್ಯದಿಂದ ಕೂಡಿದ ರಮಣೀಯ ಪ್ರದೇಶವು. ಈ ಕ್ಷೇತ್ರಸ್ಥಾನದಲ್ಲಿ ಭೀಮೇಶ್ವರ ದೇವಾಲಯವಿರುತ್ತದೆ. ಈ ಪ್ರದೇಶದಲ್ಲಿಯೇ ಅಮರಗುಂಡವೆಂಬ ಪ್ರಸಿದ್ಧ ಕ್ಷೇತ್ರವಿದೆ. ಭೀಮೇಶ್ವರ ಲಿಂಗದ ಅರ್ಚಕನಿಗೆ ಮಲ್ಲಿಕಾರ್ಜುನನೆಂಬ ಮಗನು ಆಗಲು ಅವನು ಮುಂದೆ ಮಲ್ಲಿಕಾರ್ಜುನ ಪಂಡಿತಾರಾಧ್ಯನೆಂದು ಹೆಸರಾದನು. ಅವನು ಮಾಡಿದ ಕಾರ್ಯಗಳು ಘನತರವಾದವುಗಳು. ಶ್ರೀಶೈಲ ಪ್ರಾಂತದಲ್ಲಿ ಈ ಕಾಲದಲ್ಲಿ ಆಗಿಂದಾಗ್ಗೆ ಶಿವಾನುಭವಿಗಳು ನೆರೆದು ಶಿವಾನುಭವದ ತತ್ವಗಳನ್ನು ಚರ್ಚೆ

ಮಾಡುತ್ತ ಇದ್ದದರಿಂದ ಶಿವಶರಣರಿಗೆ ಅದು ಮುಖ್ಯ ಸ್ಥಳವಾಯಿತು. ಹೇಗೆ ಕಲ್ಯಾಣದಲ್ಲಿ ಶಿವಾನುಭವ ಮಂಟಪವೋ, ಹಾಗೆಯೇ ಆಂಧ್ರ ದೇಶದಲ್ಲಿ ಶ್ರೀಶೈಲ ಮಲ್ಲಿಕಾರ್ಜುನನಿದ್ದ ಸ್ಥಾನವಾಯಿತು. ಕರ್ನಾಟಕದ ಶಿವಶರಣರಿಗೂ ಕೂಡ ಅದು ಪವಿತ್ರಸ್ಥಾನವಾಗಿದೆ. ಹೀಗೆ ಅಲ್ಲಿ ನೆರೆಯುತ್ತಿದ್ದ ಮಹಾನುಭಾವರು ಉತ್ತರಕ್ಕೆ ಹೈದ್ರಾಬಾದ ಪ್ರದೇಶ, ಪೂರ್ವ ಮತ್ತು ದಕ್ಷಿಣ ದಿಗ್ಭಾಗಗಳಲ್ಲಿ ಶಿವಶರಣರ ತತ್ವಗಳ ಪ್ರಸಾರಮಾಡಹತ್ತಿದರು. ಈ ಕಾಲಕ್ಕೆ ಈ ಪ್ರಾಂತದಲ್ಲಿ ಸಕಳೇಶ ಮಾದರಸ, ವೈದುನ ರಾಮಯ್ಯ, ವೇಮನಾರಾಧ್ಯ, ಸೋಮನಾರಾಧ್ಯ, ತಂಗಟೂರ ಮಾರಯ್ಯ, ಸೂರಂಬೆ ಮೊದಲಾದ ಶಿವಶರಣರು ಶಿವಾನುಭವದ ತತ್ವಗಳನ್ನು ಪಾಲಿಸುತ್ತ ಪ್ರಸಿದ್ಧರಾಗಿದ್ದಾರೆ.

ಈ ಪ್ರಕಾರ ಶಿವಶರಣರ ತತ್ವಗಳು ಪ್ರಸಾರ ಹೊಂದಲಿಕ್ಕೆ ಅವರು ಕನ್ನಡದಲ್ಲಿ ರಚಿಸಿದ ವಚನಶಾಸ್ತ್ರವೇ ಮುಖ್ಯ ಕಾರಣವಾಯಿತು. ಇವುಗಳ ಮೂಲಕವೇ ವೀರಶೈವ ಮತಬೋಧೆಗಳು ಎಲ್ಲ ಕಡೆಗೆ ನಡೆದವು. ವಚನಗಳು ಎಷ್ಟು ಪರಿಣಾಮಕಾರಿಗಳೆಂಬುದು ಮಲ್ಲಿಕಾರ್ಜುನ ಪಂಡಿತಾರಾಧ್ಯನಿಗೆ ಸಂಬಂಧಪಟ್ಟ ಕೆಳಗಿನ ಚಿಕ್ಕ ಕಥೆಯಿಂದ ವಾಚಕರಿಗೆ ತಿಳಿದುಬರುವದು.

## ವಚನಶ್ರವಣದಿಂದ ಪಂಡಿತಾರಾಧ್ಯನು ಕನ್ನಡದ ಜ್ಞಾನ ಹೊಂದಿದ್ದು

ಮಲ್ಲಿಕಾರ್ಜುನ ಪಂಡಿತಾರಾಧ್ಯನು ವೀರಶೈವ ಮತಪ್ರವರ್ತಕರಲ್ಲಿ ಉಚ್ಚ ಸ್ಥಾನವನ್ನು ಹೊಂದಿದ್ದಾನೆ. ಆತನ ಮೂಲಕವೇ ಶಿವಶರಣರ ವಿಚಾರಗಳು ಆಂಧ್ರ ದೇಶದಲ್ಲಿ ೧೨ ನೇ ಶತಮಾನದಲ್ಲಿ ಪ್ರಸಾರ ಹೊಂದಿದವು. ಅವನು ಪ್ರಸಿದ್ಧಿಗೆ ಬಂದ ಕಾಲದಲ್ಲಿಯೇ ಬಸವೇಶ್ವರನು ಶಿವಶರಣರೊಂದಿಗೆ ಕಲ್ಯಾಣದಲ್ಲಿ ಶಿವಾನುಭವ ಮಂಟಪದಲ್ಲಿ ಶಿವಾನುಭವದ ಉಚ್ಚ ತತ್ವಗಳನು ಪ್ರಸಾರ ಪಡಿಸುತ್ತಾ ಇದ್ದನು. ಇದರಿಂದ ಅವನ ಮತ್ತು ಶಿವಶರಣರ ಕೀರ್ತಿಯು ಸುತ್ತಲಿನ ದೇಶಗಳಲ್ಲಿ ಹೆಚ್ಚುತ್ತಲೇ ಬಂದಿತು. ಹಾಗೆಯೇ ಆಂಧ್ರ ದೇಶದಲ್ಲಿಯೂ ಕೂಡ ಶರಣರ ಪ್ರಭಾವವು ಬೆಳೆಯುತ್ತಲೇ ಇತ್ತು.

ಮಲ್ಲಿಕಾರ್ಜುನ ಪಂಡಿತಾರಾಧ್ಯನು ಉಚ್ಚ ತರಗತಿಯ ಕವಿಯಾಗಿದ್ದಾನೆ. ಅವನು ಒಂದು ದಿನ ಶುದ್ಧ ತೆಲುಗಿನಲ್ಲಿ ಪರಶಿವನ ಸ್ತೋತ್ರ ಪದಗಳನ್ನು ರಚಿಸಿದನು. ಆಗ ಜನರೆಲ್ಲರೂ ಅವುಗಳನ್ನು ಕೇಳಿ, ಶಿವ ಶಿವಾ ! ಪಂಡಿತಾರಾಧ್ಯನು ಕನ್ನಡ ನುಡಿಯಲ್ಲಿ ಇಂಥ ಶಿವನ ಸ್ತೋತ್ರವನ್ನು

ಮಾಡಿದ್ದಾದರೆ ಅದನ್ನು ಕರ್ನಾಟಕ ದೇಶದ ಜನರೆಲ್ಲ ಕೇಳಿ ಧನ್ಯರಾಗು ತ್ತಿದ್ದರು. ಆದರೆ ಪಂಡಿತಾರಾಧ್ಯನಿಗೆ ಈ ಭಾಷೆಯಲ್ಲಿ ಪಾಂಡಿತ್ಯವಿದೆಯೋ ಇಲ್ಲವೋ ಎಂದು ನುಡಿಯಹತ್ತಿದರು.

ಹೀಗಿರಲು ಬಸವೇಶ್ವರನು ನಿರೂಪಿಸಿದ ಕನ್ನಡ ವಚನಗಳನ್ನು ಪಂಡಿ- ತಾರಾಧ್ಯನ ಪಟ್ಟಣದಿಂದ ಕಲ್ಯಾಣಕ್ಕೆ ಹೋಗಿ ಬಂದವರು ಪಠನ ಮಾಡು ತ್ತಿರುವದನ್ನು ಅವನು ಕೇಳಿ ಅವರನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವರ ಮೂಲಕ ಅವುಗಳನ್ನು ನಿತ್ಯ ಕೇಳುವದರಲ್ಲಿ ತೊಡಗಿದನು. ಅವುಗಳನ್ನು ಅವನು ದಿನಾಲು ಭಕ್ತಿಪೂರ್ವಕವಾಗಿ ಕೇಳುತ್ತ ಇರಲು ಅವುಗಳಲ್ಲಿದ್ದ ಶಿವಾನುಭವದ ಉಚ್ಚ ವಿಚಾರಗಳು ಅವನ ಹೃದಯದಲ್ಲಿ ಬಿಂಬಿಸಿದವು. ಆಗ ಕನ್ನಡದ ಜ್ಞಾನವು ಅವನಿಗೆ ಪರಶಿವ ಮುಖಸಿದ್ಧ ಸೂಚಿತವೋ ಎನ್ನುವಂತೆ ಸುಲಲಿತವಾಗಿ ಅವನಲ್ಲಿ ಉಂಟಾಗಹತ್ತಿತು. ಹೀಗಾಗಲು ಶಕ್ಯ ವೆಂಬುದಕ್ಕೆ ಅನೇಕ ಉದಾಹರಣೆಗಳು ಈಗಲೂ ನಮಗೆ ದೊರೆಯುತ್ತವೆ. ಈಚೆಗೆ ವಚನಗಳನ್ನು ಆಗಿಂದಾಗ್ಗೆ ಕೇಳಿ ಕೇಳಿ, ಪಾಠಮಾಡಿದ್ದರ ಪರಿ ಣಾಮವಾಗಿ, ಕನ್ನಡದ ಅಭ್ಯಾಸವಿಲ್ಲದ ಅನೇಕ ಸ್ತ್ರೀ-ಪುರುಷರು ಅತ್ಯು ತ್ತಮ ರೀತಿಯಿಂದ ಶುದ್ಧ ಕನ್ನಡದಲ್ಲಿ ವ್ಯಾಖ್ಯಾನಗಳನ್ನು ಕೊಡುತ್ತಿರುವ ಉದಾಹರಣೆಗಳು ಅನೇಕ ಇರುತ್ತವೆ.

ಮುಂದೆ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಕನ್ನಡ ನುಡಿಯಲ್ಲಿಯೇ ಶಿವಾಧಿಕ್ಯವೆಂಬ ಕಾವ್ಯವನ್ನು ರಚಿಸಿ ಅದನ್ನು ಓಲೆಯಲ್ಲಿ ಬರೆದು ಆ ಓಲೆ ಯನ್ನು ಒಂದು ವಿಭೂತಿಯ ಕರಡಿಗೆಯಲ್ಲಿ ಮಡಗಿ ಆ ಕರಡಿಗೆಯನ್ನು ಒಬ್ಬ ಶಿವಶರಣನ ಕೈಯಲ್ಲಿ ಕೊಟ್ಟು- ಅಯ್ಯಾ ಭಕ್ತನೇ, ಬಸವೇಶ್ವರನನ್ನು ನೀನು ಕಂಡು, ನನ್ನ ಶರಣಾರ್ಥಿಯನ್ನು ಅವನಿಗೆ ಹೇಳಿ, ಅವನಿಗೆ ಈ ಓಲೆಯನ್ನು ಕೊಡೆಂದು ಹೇಳಿ ಕಳುಹಿದನು.

ಆ ಭಕ್ತನು ಅದನ್ನು ತೆಗೆದುಕೊಂಡು ಬಸವೇಶ್ವರನಲ್ಲಿಗೆ ಹೋಗಿ ನಮಸ್ಕರಿಸಿ ಭಕ್ತಿಯಿಂದ ಅವನಿಗೆ ಕೊಡಲು, ಬಸವೇಶ್ವರನು ಅದನ್ನು ತೆಗೆದುಕೊಂಡು ಅದರೊಳಗಿದ್ದ ಶಿವಾಧಿಕ್ಯ ಕಾವ್ಯವನ್ನು ಓದಿನೋಡಿ, ಅತ್ಯಂತ ಭಕ್ತಿಯುಳ್ಳವನಾಗಿ "ಶರಣು, ಶರಣು" ಎಂದು ಅದನ್ನು ನಮ ಸ್ಕರಿಸಿದನು. ಪಂಡಿತಾರಾಧ್ಯನು ಮಹಾ ಮಹಿಮನೆಂಬುದು ಆ ಕಾವ್ಯದಿಂದ ಅವನಿಗೆ ತಿಳಿದುಬಂದಿತು. ಆಗ ಅವನಿಗೋಸ್ಕರ ಬಸವೇಶ್ವರನು ಅತ್ಯಂತ ಭಕ್ತಿಯನ್ನು ತಾಳಿದವನಾಗಿ ಪಂಡಿತಾರಾಧ್ಯನ ಸ್ತೋತ್ರ ಪದಗಳನ್ನು ಕನ್ನಡ

ಭಾಷೆಯಲ್ಲಿ ರಚಿಸಿ ಅದೇ ವಿಭೂತಿಯ ಕರಡಿಗೆಯಲ್ಲಿ ಅವುಗಳನ್ನು ಇಟ್ಟು ಆದರಲ್ಲಿ ಭಸ್ಮವನ್ನು ತುಂಬಿ, ಆ ಪೆಟ್ಟಿಗೆಯನ್ನು ಮುದ್ರಿಸಿ ಅವನ್ನು ಬಂದಿದ್ದ ಆ ಶರಣನ ಕಯ್ಯಲ್ಲಿಯೇ ಕೊಟ್ಟು ಪಂಡಿತಾರಾಧ್ಯನಲ್ಲಿಗೆ ತಿರುಗಿ ಕಳುಹಿದನು.

ಆಗ ಪಂಡಿತಾರಾಧ್ಯನು ಆ ಭಕ್ತನು ತಂದ ವಿಭೂತಿಯ ಕರಡಿಗೆಯನ್ನು ಬಿಚ್ಚಿ ಒಳಗಿದ್ದ ಭಸ್ಮವನ್ನು ಹಣೆಯಲ್ಲಿ ಧರಿಸಿ ಪ್ರತಿಕ್ಷಣ 'ಬಸವಾ' 'ಬಸವಾ' ಎಂಬ ನಾಮವನ್ನು ಉಚ್ಚರಿಸುತ್ತ, ಆ ಪೆಟ್ಟಿಗೆಯಲ್ಲಿದ್ದ ಕಾವ್ಯವನ್ನು ಪಠನ ಮಾಡಿದನು. ಅವನು ಹೀಗೆ ಪಠನಮಾಡಿದ ಕೂಡಲೆ ಕನ್ನಡ ಭಾಷೆಯು ಅವನಲ್ಲಿ ಸರಸಾಗಿ ತನ್ನಷ್ಟಕ್ಕೆ ತಾನೇ ನಲಿಯಹತ್ತಿತು.

ಆಗ ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಪರಶಿವನ ಪಾವನ ಸ್ವರೂಪನಾದ ಶ್ರೀ ಬಸವೇಶ್ವರನ ಸ್ತುತಿಯನ್ನು ಅಚ್ಚಗನ್ನಡದಲ್ಲಿ ಮತ್ತು ಸಂಸ್ಕೃತದಲ್ಲಿ ಬರೆದು ಆ ಬಸವಸ್ತೋತ್ರವನ್ನೇ ಭೂವಿನುತ ವಾಕ್ಯವನ್ನಾಗಿ ಮಾಡಿ ಮೆರೆದು ತಾನೂ ಕೂಡ ಬಸವನಾಮಾಮೃತ ಸಂತುಷ್ಟ ಚಿತ್ತನಾಗಿ ದೇಶದಲ್ಲಿ ಮೆರೆದನು. ಅಂದಿನಿಂದ ಬಸವನ ವಿಷಯವಾಗಿ ಅತುಲವಾದ ಭಕ್ತಿಭಾವವು ಆಂಧ್ರದೇಶದ ವೀರಶೈವರಲ್ಲಿ ಮಾತ್ರವಲ್ಲದೆ ಅಲ್ಲಿಯ ಶೈವ ಮತ್ತು ಆರಾಧ್ಯ ಸಾಂಪ್ರದಾಯಿಕರಲ್ಲಿಯೂ ಕೂಡ ಈಗಲೂ ಚ್ಯುತಿ ಇಲ್ಲದೆ ವಾಸಮಾಡುತ್ತಾ ಇದೆ. ಇದು ಶಿವಶರಣರು ರಚಿಸಿದ ವಚನಶಾಸ್ತ್ರದ ಪ್ರಭಾವವೇ ಹೊರ್ತು ಬೇರೊಂದಲ್ಲ.

---

## ಧವಳೇಶ್ವರ

ಮಲ್ಲಿಕಾರ್ಜುನ ಪಂಡಿತಾರಾಧ್ಯನು ಅಮರಗುಂಡ ಎಂಬ ಕ್ಷೇತ್ರದಲ್ಲಿ ಕೆಲವು ದಿವಸ ವಾಸವಾಗಿದ್ದನು. ಅವನು ಅಲ್ಲಿ ಇದ್ದಾಗ್ಗೆ ಕಲ್ಯಾಣಕ್ಕೆ ಹೋಗಿ ಬಸವನನ್ನು ಕಾಣಬೇಕೆಂಬ ಕುತೂಹಲವು ಅವನಲ್ಲಿ ಉಂಟಾಯಿತು. ಆಗ ಅವನು ತನ್ನ ಪರಿವಾರದೊಂದಿಗೆ ಅತ್ತ ಹೊರಡಲು ಉದ್ಯುಕ್ತನಾದನು. ಅವನು ಮೊದಲು ನಡುಗುಡುಮೂಲ ಎಂಬ ಗ್ರಾಮಕ್ಕೆ ಬಂದನು. ಅಲ್ಲಿ ವೀರ ಚಾಕಿದೇವನೆಂಬ ಶಿಷ್ಯನಿದ್ದು ಅವನು ಆ ನಾಡಿದಲ್ಲಿ ವೀರ ಭಕ್ತಿಗೋಸ್ಕರ ಬಹಳ ಹೆಸರುವಾಸಿಯಾಗಿದ್ದನು. ಅಲ್ಲಿ ಪಂಡಿತಾರಾಧ್ಯನು ಕೆಲವು ದಿವಸ ತಳುವಿ ಅವನ ಭಕ್ತಿಯನ್ನು ಸ್ವೀಕರಿಸುವವನಾದನು. ಆಗ ಬಹುಜನರು ಆ ಗ್ರಾಮಕ್ಕೆ ಬಂದು ಶಿವಶರಣರ ಉಚ್ಚ ವಿಚಾರಗಳ ಬೋಧೆಯನ್ನು ಪಂಡಿತಾರಾಧ್ಯನಿಂದ ಕೇಳುವಂಥವರಾದರು.

ಈ ಪ್ರಕಾರ ಪಂಡಿತಾರಾಧ್ಯನು ಅಲ್ಲಿ ಕೆಲವು ದಿವಸವಿದ್ದು ಮುಂದೆ ಸಂಚಾರ ಮಾಡುತ್ತ ಈ ಭಾಗದಲ್ಲಿ ಅತ್ಯಂತ ಪ್ರಸಿದ್ಧ ಪಟ್ಟಣವಾದ ಪಾನುಗಲ್ಲಿಗೆ ಬಂದನು. ಇದು ಈಗ ಹೈದ್ರಾಬಾದ ಇಲಾಖೆಯಲ್ಲಿ ಮಹಬೂಬನಗರ ಜಿಲ್ಲೆಯಲ್ಲಿರುತ್ತದೆ. ಈ ಪಾನುಗಲ್ಲಿನಲ್ಲಿ ಉದಯಭೂಪಾಲನೆಂಬ ರಾಜನು ಆಳುತ್ತಿದ್ದನು. ಅವನು ತನ್ನ ರಾಜ್ಯದಲ್ಲಿ ಶಿವಭಕ್ತಿ ಎಂಬುದನ್ನು ತರಹರಿಸದೆ ಶಿವಭಕ್ತರನ್ನು ಪೀಡಿಸುವವನಾಗಿದ್ದನು. ಅವನಲ್ಲಿ ಗೋವಿಂದ ಪೆಗ್ಗಡೆ ಎಂಬವನು ಕೆಲವೊಂದು ಅಧಿಕಾರ ಸ್ಥಾನವನ್ನು ಹೊಂದಿ ಅವನನ್ನು ಓಲೈಸುತ್ತ ಇದ್ದನು. ಅವನು ಬಾಹ್ಯದಲ್ಲಿ ವಿಷ್ಣುಭಕ್ತನಂತೆ ತೋರಿದರೂ ನಡೆಯಲ್ಲಿ ಶಿವಭಕ್ತನಾಗಿ ಶಿವಾಚಾರದಲ್ಲಿಯೇ ನಿರತನಾಗಿದ್ದನು.

ಮಲ್ಲಿಕಾರ್ಜುನ ಪಂಡಿತಾರಾಧ್ಯನು ಪಾನುಗಲ್ಲಿಗೆ ಬಂದ ಬಳಿಕ ಗೋವಿಂದ ಪೆಗ್ಗಡೆಯು ಅವನನ್ನು ಇದಿರುಗೊಂಡು ಸಂಭ್ರಮದಿಂದ ಅವನನ್ನು ತನ್ನ ಗೃಹಕ್ಕೆ ಕರೆತಂದು ಉನ್ನತಾಸನವನಿಕ್ಕಿ ಸರ್ವ ಸತ್ಕಾರವನ್ನು ಮಾಡಿಸುವವನಾದನು. ಆಗ ಬಹುಜನ ಜಂಗಮರು ಪಂಡಿತಾರಾಧ್ಯನಿದ್ದಲ್ಲಿಗೆ ಬಂದು ಅವನನ್ನು ಕಾಣಲು ಅವನ ಅರ್ಚನೆ ಪೂಜಾದಿ ಕಾರ್ಯಗಳು ಮನೆಯಲ್ಲಿ ಬಹು ಸಂಭ್ರಮದಿಂದ ನಡೆದವು. ಗೋವಿಂದ ಪೆಗ್ಗಡೆಯು ಹೀಗೆ ಪಂಡಿತಾರಾಧ್ಯನನ್ನು ಕೆಲವು ದಿವಸ ಓಲೈಸುತ್ತಾ ಇದ್ದನು.

ಮಲ್ಲಿಕಾರ್ಜುನ ಪಂಡಿತಾರಾಧ್ಯನ ವಿರೋಧಿಗಳು ಆ ಗ್ರಾಮದಲ್ಲಿ ಅನೇಕರಿದ್ದು ಪೆಗ್ಗಡೆಯು ಅವನನ್ನು ಹೀಗೆ ಓಲೈಸುವದನ್ನು ಅವರು ಸೈರಿಸಲಾರದೆ ಅರಸನಲ್ಲಿಗೆ ಹೋಗಿ ಧವಳೇಶನು ತಮ್ಮ ಊಳಿಗದವನು. ಅವನು ತಮ್ಮ ಊಳಿಗವನ್ನು ಬಿಟ್ಟುಕೊಟ್ಟು ಶಿವಭಕ್ತನಾದ ಪಂಡಿತಾರಾಧ್ಯನ ಊಳಿಗದಲ್ಲಿದ್ದಾನೆ. ತಮ್ಮ ಸೇವೆಯಲ್ಲಿರಲು ನಾವು ಎಷ್ಟು ಹೇಳಿದರೂ ಅವನು ನಮ್ಮ ಮಾತನ್ನು ಕೇಳುವದಿಲ್ಲ. ಮಹಾಸ್ವಾಮಿಗಳು ಅವನನ್ನು ಕರಿಸಿ ತಿಳಿಹೇಳಬೇಕೆಂದು ಕೊಂಡೇ ಹೇಳಿದರು.

ಆಗ ಅರಸನು ಧವಳೇಶ್ವರನನ್ನು ಕರಿಸಿ ಅವನಿಗೆ- ನೀನು ನನ್ನ ಸಂಬಳವನ್ನು ಉಣ್ಣುತ್ತೀ. ಹೀಗೆ ನನ್ನಿಂದ ಪೋಷಿತನಾಗಿ ನಿನ್ನ ಗುರುವನ್ನು ಹೀಗೆ ಓಲೈಸುವದು ಸರಿಯೇ? ಎಂದು ಕೇಳಿದನು.

ಇದಕ್ಕೆ ಧವಳೇಶ್ವರನು- ನಾನು ನನ್ನ ಕಾಯಕಕ್ಕೋಸ್ಕರ ನಿಮ್ಮನ್ನು ಓಲೈಸುತ್ತೇನೆ. ಆದರೆ ಭಕ್ತಿಗೆಂದು ಗುರುವನ್ನು ಓಲೈಸುತ್ತೇನೆ. ಇದರಲ್ಲಿ ದೋಷವಾವುದು? ಎಂದು ಉತ್ತರಕೊಟ್ಟನು.

ಅದಕ್ಕೆ ಅರಸನಂದದ್ದು– ನಿನ್ನ ಶರೀರವು ನನ್ನಿಂದ ಪೋಷಿತವಾಗಿದೆ. ನನ್ನ ಪಡುಗ (ಪಾದರಕ್ಷೆ) ವನ್ನು ಹಿಡಿ ಎಂದರೆ ನೀನು ಹಿಡಿಯಲೇ ಬೇಕು. ನಿನ್ನ ಸಿರವನ್ನು ಅರಿದುಕೊಡು ಎಂದರೆ ಕೊಡಲೇಬೇಕು ಎಂದು ನುಡಿದನು.

ಅದಕ್ಕೆ ಧವಳೇಶ್ವರನು– ಅಹುದು ನಾನು ನಿನ್ನ ಸಂಬಳವನ್ನು ಉಂಡು ಈ ದೇಹವನ್ನು ಪೋಷಿಸುತ್ತಾ ಬಂದಿದ್ದೇನೆ. ಇಂಥ ಈ ದೇಹವನ್ನು ನೀನು ತೆಗೆದುಕೋ. ಆದರೆ ನನ್ನ ಭಕ್ತಿಯು ಮಾತ್ರ ನಿನ್ನ ಅಂಕಿತವಲ್ಲ. ಅದರ ಸ್ವಾಮಿತ್ವವು ನನ್ನ ಕಡೆಗೆ ಇದೆ, ಎಂದು ನುಡಿಯುತ್ತ ಇಂಥ ದೇಹವನ್ನು ಇಡಬಾರದೆಂದು ತನ್ನ ಖಡ್ಗದಿಂದ ತನ್ನ ಸಿರವನ್ನು ಕತ್ತರಿಸಿ ಅರಸನಿಗೊಪ್ಪಿಸಿದನು. ಆಗ ಅವನ ಎಡದ ಕಯ್ಯಲ್ಲಿ ಸಿರ, ಬಲದ ಕಯ್ಯಲ್ಲಿ ಖಡ್ಗ ಹೀಗೆ ಹಿಡಿದುಕೊಂಡು ನಾಂಟ್ಯವನಾಡಹತ್ತಿದನು. ಅದನ್ನು ನೋಡಿ ಭೂಮಿಯು ಕಂಪಿತವಾಯಿತು. ಇಷ್ಟಕ್ಕೆ ಇದು ಮುಗಿಯಲಿಲ್ಲ. ಧವಳೇಶನ ದೇಹವು ಹೋಯಿತೆಂಬುದು ಸರಿ. ಆದರೆ ಅವನಲ್ಲಿದ್ದ ಗಣಾಚಾರವು ಅವನ ಕಯ್ಯಲ್ಲಿದ್ದ ಖಡ್ಗದಿಂದಲೇ ಆ ಭೂಪಾಲನ ಕೊರಳನ್ನು ಕತ್ತರಿಸಿ ನೆಲಕ್ಕುರುಳುವಂತೆ ಮಾಡಿತು. ಆಗ ಅರಸನ ಬಲವು ಆ ದೇಹವನ್ನು ಛಿನ್ನ ಭಿನ್ನಮಾಡಲು ಮುಂದುವರಿಯಿತು. ಆದರೆ ಆ ಬಲನೆಲ್ಲ ಧವಳೇಶನ ಅಗಾಧವಾದ ಖಡ್ಗದ ಮೂಲಕ ಸಂಹಾರವಾಯಿತು. ಇಷ್ಟೇ ಅಲ್ಲ, ಅರಸನ ಸಂತಾನವೆಲ್ಲವೂ ಕೂಡ ನಿಃಸಂತಾನವಾಯಿತು. ಹೀಗೆ ಪಟ್ಟಣದಲ್ಲಿ ಕೋಲಾಹಲವು ನಡೆದಿರಲು, ಆಕಾಶದಿಂದ ಪುಷ್ಪಕ ವಿಮಾನವು ಬಂದು ಅದರಲ್ಲಿದ್ದ ಗಣಾಧೀಶ್ವರರು ಧವಳೇಶ್ವರನನ್ನು ಅದರ ಮೇಲೆ ಹತ್ತಿಸಿ ಕೈಲಾಸಕ್ಕೊಯ್ದರು.

ಮಲ್ಲಿಕಾರ್ಜುನ ಪಂಡಿತಾರಾಧ್ಯನು ಹೀಗೆ ಪಾನುಗಲ್ಲಿನಲ್ಲಿ ತನ್ನ ಶಿಷ್ಯನ ಮೂಲಕ ನಡೆದ ಅದ್ಭುತವನ್ನು ಕಂಡು ಮುಂದೆ ಕಲ್ಯಾಣಕ್ಕೆ ಬಸವನನ್ನು ಕಾಣಲು ಪಯಣ ಮಾಡುವವನಾದನು.

ಧವಳೇಶ್ವರನು ಬಸವೇಶ್ವರನ ಸಮಕಾಲೀನನು. ಈ ಕಾಲದಲ್ಲಿಯೇ ವೀರಶೈವ ಧರ್ಮವು ಪ್ರಸಾರವಾದದ್ದು. ಆಗ ದೇಶದಲ್ಲೆಲ್ಲ ಒಂದು ಅದ್ಭುತ ಕ್ರಾಂತಿಯುಂಟಾಯಿತು. ಇದು ಶಿವಶರಣರ ಚರಿತ್ರೆಗಳಿಂದ ಕಂಡುಬರುತ್ತದೆ. ಈ ಸಮಯದಲ್ಲಿ ವಿರೋಧಿಗಳು ಶಿವಶರಣರನ್ನು ಬಹಳ ಪೀಡಿಸಿರುವರು, ಅವರನ್ನು ಹಿಂಸಿಸಿರುವರು, ಅವರನ್ನು ಸಂಪೂರ್ಣ ನಾಶ ಮಾಡಲೂ ಯತ್ನಿಸಿ ಸಿರುವರು. ಆದರೆ ಶಿವಶರಣರು ಈ ಹಿಂಸೆಗಳನ್ನು ಎದುರಿಸಿ ಜಯಶೀಲರಾಗಿದ್ದಾರೆ. ಇದರ ನಿಜೇತಿಹಾಸವು ಇನ್ನೂ ಸಂಶೋಧಿಸಲ್ಪಟ್ಟಿಲ್ಲ. ಆದರೂ

ಇಂಥ ಕ್ರಾಂತಿಯುಂಟಾದದ್ದರ ಸೂಚನಾತ್ಮಕ ಸಂಗತಿಗಳು ಶಿವಶರಣರ ಚರಿತ್ರೆಗಳಲ್ಲಿ ಅಲ್ಲಲ್ಲಿ ದೃಗ್ಗೋಚರವಾಗುತ್ತವೆ. ಮೂರುಡಿಗೆಯ ನಾಚಯ್ಯ, ಕೋವೂರು ಬ್ರಹ್ಮಯ್ಯ, ಪರದಾನಿ ಗುಡ್ಡಮ್ಮ, ಆದಯ್ಯ, ವೈಜವ್ವೆ, ಚನ್ನ ಮಲ್ಲಯ್ಯ ಇವರ ಚರಿತ್ರೆಗಳು ಇದಕ್ಕೆ ಉದಾಹರಣೆಗಳಾಗಿವೆ. ಧವಳೇಶ್ವರನ ಚರಿತ್ರೆಯು ಇಂಥ ವೀರ ಶಿವಶರಣರ ಚರಿತ್ರೆಗಳಲ್ಲಿ ಒಂದಾಗಿರುತ್ತದೆ.

---

## ರೇವಯ್ಯದೇವ

ಕರ್ನಾಟಕದಲ್ಲಿಯ ಶಿವಶರಣರು ಕಲ್ಯಾಣಪಟ್ಟಣದಲ್ಲಿ ಶಿವಾನುಭವ ಮಂಟಪವನ್ನು ಏರ್ಪಡಿಸಿಕೊಂಡು ಅಲ್ಲಿಂದ ಶಿವಾನುಭವದ ತತ್ವಗಳನ್ನು ಇಡೀ ಉತ್ತರ ಕರ್ನಾಟಕ, ಕೇರಳ ಮತ್ತು ಮೈಸೂರು ಪ್ರಾಂತಗಳನ್ನು ಒಳಕೊಂಡು ಚೋಳ ರಾಜ್ಯದವರೆಗೂ ಪ್ರಸಾರ ಪಡಿಸಿದ್ದಾರೆ. ಹಾಗೆಯೇ ಆಂಧ್ರ ವೀರಶೈವರು ಆರಂಭದಲ್ಲಿ ಶ್ರೀಶೈಲದಲ್ಲಿ ತಮ್ಮ ಮುಖ್ಯ ಸ್ಥಾನವನ್ನು ಮಾಡಿಕೊಂಡು ಅದರ ಸುತ್ತಲಿನ ಪ್ರದೇಶಗಳಲ್ಲಿ ಮೊದಲು ವೀರಶೈವ ಮತವನ್ನು ಹಬ್ಬಿಸಿದರು. ಆ ಮೇಲೆ ಅವರು ಶ್ರೀಪತಿಪಂಡಿತಾಧ್ಯ, ಅವನ ತರುವಾಯ ಮಲ್ಲಿಕಾರ್ಜುನ ಪಂಡಿತಾರಾಧ್ಯ, ಇವರ ನೇತೃತ್ವದಲ್ಲಿ ವಿಜಯವಾಟಿಕಾ ಅಂದರೆ ಈಗಿನ ಬೆಜವಾಡ, ದ್ರಾಕ್ಷಾರಾಮಕ್ಷೇತ್ರ ಮತು ಅಮರಗುಂಡ ಈ ನಗರಗಳಲ್ಲಿ ತಮ್ಮ ಕೇಂದ್ರಸ್ಥಾನಗಳನ್ನು ಸ್ಥಾಪಿಸಿ ಕೊಂಡು ಆಂಧ್ರದೇಶದಲ್ಲಿ ವೀರಶೈವ ಮತವನ್ನು ಅಲ್ಲಲ್ಲಿ ಪ್ರಸ್ಥಾಪಿಸುತ್ತ ನಡೆದರು. ಅವರ ಕಾರ್ಯಕ್ಷೇತ್ರವು ಭಾರತದ ಪೂರ್ವದಿಕ್ಕಿನಿಂದ ಸಾಗಿ ಚೋಳರಾಜ್ಯದ ವರೆಗೂ ವಿಸ್ತಾರಹೊಂದಿತು. ಆದರೆ ಇವುಗಳಲ್ಲಿ ಕರ್ನಾಟಕ ದಲ್ಲಿ ನಡೆದ ಕಾರ್ಯಗಳೇ ಹೆಚ್ಚು ಪ್ರಭಾವವುಳ್ಳವಾಗಿರುತ್ತವೆ

ಮಲ್ಲಿಕಾರ್ಜುನ ಪಂಡಿತಾರಾಧ್ಯನು ಬಸವೇಶ್ವರನ ಸಮಕಾಲೀನನು. ಅವನ ಪ್ರಚಾರ ಕಾರ್ಯಗಳ ಮೂಲಕ ಅವನಿಗೆ ಅಸಂಖ್ಯ ಶಿಷ್ಯರುಗಳಾದರು. ಅವರಲ್ಲಿ ಧವಳೇಶ್ವರಯ್ಯ, ದೇವಯ್ಯ, ರೇವಯ್ಯ, ರೇಮಯ್ಯ, ರೇಚಯ್ಯ ವೆಲ್ಲಗೊಂಡನ ಮಹಾದೇವಯ್ಯ, ದೊನ್ನಮಯ್ಯ, ಇವರು ಮುಖ್ಯರಾಗಿದ್ದರು. ಅವರು ವಿದ್ವಾಂಸರಾಗಿ ಪಂಡಿತಾರಾಧ್ಯನ ಸಂಚಾರದಲ್ಲಿ ಅವನಿಗೆ ಯಾವಾಗಲೂ ಸಹಾಯಕರಾಗಿರುತ್ತಿದ್ದರು.

ಹೀಗಿರುವಲ್ಲಿ ವೆಲ್ನಾಡ ಚೋಳನು ಈಗ ಗುಂಟೂರು ಜಿಲ್ಲೆಯಲ್ಲಿರುವ ಧನದಮುರದಲ್ಲಿ ( ಇಂದಿನ ಚಂದವ್ರೋಲು ) ಇಲ್ಲಿ ರಾಜವಾಳುತಿದ್ದನು. ಅವನು ಬೌದ್ಧಾಚಾರ್ಯನೆಂಬವನನ್ನು ತನ್ನ ಗುರುವನ್ನಾಗಿ ಮಾಡಿಕೊಂಡಿದ್ದನು. ಈ ಬೌದ್ಧಾಚಾರ್ಯನು ಜಗತ್ತಿನಲ್ಲಿ ಜೀನನೇ ದೈವವು, ಅವನ ಹೊರ್ತು ಬೇರೊಂದು ದೈವವಿಲ್ಲ. ಇದನ್ನು ಖಂಡಿಸುವವರ್‍ಯಾರಾದರೂ ಇದ್ದರೆ, ಅವರು ನನ್ನ ಕೂಡ ವಾದಿಸಬೇಕು, ಎಂದು ಬಹಿರಂಗವಾಗಿ ಆಹ್ವಾನವನ್ನಿತ್ತನು. ಆಗ ಅರಸನು ಜೈನ, ಬೌದ್ಧ, ಚಾರ್ವಾಕ ವೇದಾಂತ ಮೊದಲಾದ ಅನೇಕ ಮತಸ್ಥರನ್ನು ಆವನ ಕೂಡ ವಾದಿಸಲು ತನ್ನ ಆಸ್ಥಾನಕ್ಕೆ ಬರಮಾಡಿಕೊಂಡನು. ಹಾಗೆಯೇ ವೀರಶೈವರಲ್ಲಿ ಬಹು ಪ್ರಸಿದ್ಧನಾಗಿದ್ದ ಮಲ್ಲಿಕಾರ್ಜುನ ಪಂಡಿತಾರಾಧ್ಯನನ್ನೂ ವಾದಕ್ಕೋಸ್ಕರ ಕರೆಯಿಸಿಕೊಂಡನು. ಈ ವಾದದಲ್ಲಿ ಬೌದ್ಧಾಚಾರ್ಯನನ್ನು ಮೊದಲ್ಗೊಂಡು ಉಳಿದ ಎಲ್ಲ ಮತಸ್ಥರೊಡನೆ ವಾದಗಳು ನಡೆದು ಕಡೆಗೆ ಪಂಡಿತಾರಾಧ್ಯನು ವಾದದಲ್ಲಿ ಶಿವನೇ ದೈವವು, ಅವನೊಬ್ಬನೇ ಇದ್ದಾನೆ, ಅವನನ್ನು ಬಿಟ್ಟು ಬೇರೆ ಯಾವ ದೈವವೂ ಇಲ್ಲ, ಎಂದು ವೇದಾಗಮ ಶಾಸ್ತ್ರ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ಎಲ್ಲರನ್ನು ಸೋಲಿಸಿದನು. ಆಗ ಅರಸನು ಅವನನ್ನು ಅಂತ್ಯಂತನಾಗಿ ಮನ್ನಿಸಿ ತಿರುಗಿ ಕಳಿಸಿದನು.

ವೆಲ್ನಾಡ ಚೋಳನಲ್ಲಿಯ ಜೈನರು ತಮ್ಮ ಗುರುವಾದ ಬೌದ್ಧಾಚಾರ್ಯನಿಗೆ ಹೀಗೆ ಸೋಲುಂಟಾದದ್ದಕ್ಕೆ ಅತ್ಯಂತ ಕುಪಿತರಾಗಿ ಪಟ್ಟಣದಲ್ಲಿ ಮಲ್ಲಿಕಾರ್ಜುನ ದೇವಾಲಯವೆಂದಿದ್ದು ಆವರು ಅದರ ದೀಪಮಾಲೆಯ ಕಂಭವನ್ನು ಕಿತ್ತು ಅದರ ಅರ್ಚಕನನ್ನು ಕೊಂದುಹಾಕಿ ಅವನ ಹೊಟ್ಟೆಯನ್ನು ಸೀಳಿ ಸಮುದ್ರ ಮಧ್ಯದಲ್ಲಿದ್ದ ತಮ್ಮ ಜಿನನ ಗುಡಿಯ ಮುಂದೆ ಆ ದೀಪಸ್ತಂಭವನ್ನುನೆಟ್ಟರು.

ಈ ಮಲ್ಲೇಶ್ವರ ದೇವಾಲಯವು ಈಗಲೂ ಧನದಮುರಕ್ಕೆ ಸಮೀಪವಾಗಿರುವ ಕಾಕುಳಕ್ಷೇತ್ರದಲ್ಲಿದೆ. ಈ ಪಟ್ಟಣಕ್ಕೆ ಸಮೀಪವಿರುವ ಸಮುದ್ರದಲ್ಲಿ ಒಂದು ದ್ವೀಪವಿದ್ದು ಅಲ್ಲಿ ಮೊದಲು ಚೈತ್ಯಾಲಯವಿದ್ದಂತೆ ತೋರುತ್ತದೆ. ಈ ದೀಪಕ್ಕೆ ದೀವೀಖಂಡವೆಂಬ ಹೆಸರು ಈಗ ಇದೆ. ಇಲ್ಲಿದ್ದ ಚೈತ್ಯಾಲಯದ ಇದಿರಿಗೆ ಈ ಮಲ್ಲೇಶ್ವರ ದೇವಾಲಯದ ದೀಪಸ್ತಂಭವನ್ನು ಬೌದ್ಧಾಚಾರ್ಯನು ನಡಿಸಿರ ಬಹುದೆಂದು ತೋರುತ್ತದೆ.

ಇದು ಮಲ್ಲಿಕಾರ್ಜುನ ಪಂಡಿತಾರಾಧ್ಯನಿಗೆ ತಿಳಿಯಿತು. ಆಗ ಅವನ ಶಿಷ್ಯನಾದ ರೇವಯ್ಯ ದೇವನು- ಇದಕ್ಕೆ ನಾನು ಪ್ರತೀಕಾರ ಮಾಡುವೆನೆಂದು ಗುರುವಿನ ಅಪ್ಪಣೆಯನ್ನು ಪಡೆದುಕೊಂಡು ಶಿವಾರ್ಚಕನನ್ನು ಕೊಂದು ಹಾಕಿದ ಪರವಾದಿ ಬೌದ್ಧಾಚಾರ್ಯನನ್ನು ಕೊಂದು ಹಾಕುವೆನೆಂದು ಪ್ರತಿಜ್ಞೆಯನ್ನು ಮಾಡಿ ಶಿವಶರಣರೊಂದಿಗೆ ದೀಪಸ್ತಂಭವನ್ನು ನಡಿಸಿದ್ದ ಜಿನಾಲಯವಿದ್ದಲ್ಲಿಗೆ ಬಂದನು.

ಆಗ ಬೌದ್ಧಾಚಾರ್ಯನು ಜಿನನ ಪ್ರತಿಮೆಯ ಪೂಜೆಯನ್ನು ಮಾಡಲು ಅದೇ ಸಮುದ್ರಕ್ಕೆ ಹೋಗಿದ್ದನು. ಆಗ ರೇವಯ್ಯನು ತನಗೆ ದಾರಿಯನ್ನು ಕೊಡಬೇಕೆಂದು ಸಮುದ್ರಕ್ಕೆ ಅಪ್ಪಣೆ ಮಾಡಲು ಅದು ಅವನಿಗೆ ದಾರಿಯನ್ನು ಕೊಟ್ಟಿತು. ಆ ದಾರಿಯಿಂದ ರೇವಯ್ಯನು ಜಿನಾಲಯವಿದ್ದಲ್ಲಿಗೆ ಹೋಗಿ ಅಲ್ಲಿದ್ದ ಬೌದ್ಧಾಚಾರ್ಯನನ್ನು ಕೊಂದುಹಾಕಿ, ಅವನ ಹೊಟ್ಟೆಯನ್ನು ಸೀಳಿ, ನಾಲಿಗೆಯನ್ನು ಕೊಯ್ದು, ದೀಪಸ್ತಂಭವನ್ನು ಕಿತ್ತು ಧಡಕ್ಕೆ ತಂದನು. ಬರುವ ಮುಂಚೆ- ನಾನೇ ಬೌದ್ಧಾಚಾರ್ಯನನ್ನು ಕೊಂದಿದ್ದೇನೆಂದು ಒಂದು ಓಲೆಯನ್ನು ಬರೆದು ಹೆಣಕ್ಕೆ ಸಿಕ್ಕಿಸಿದನು. ಆ ಮೇಲೆ ಅವನು ಆ ಕಂಭವನ್ನು ತಂದು ಮೊದಲಿನಂತೆ ಶಿವಾಲಯದ ಇದಿರಿಗೆ ನಡಿಸಿದನು.

ಬೌದ್ಧಾಚಾರ್ಯನ ಶಿಷ್ಯರು ಬೌದ್ಧಾಚಾರ್ಯನಿಗೆ ಹೀಗಾದುದನ್ನು ವೆಲ್ನಾಡ ಚೋಳಗೆ ಹೇಳಲು ಚೋಳನು- ನನ್ನ ಗುರುವನ್ನು ಕೊಂದವರು ಯಾರೆಂದು ಕೇಳಲು ಅಲ್ಲಿದ್ದ ರೇವಯ್ಯದೇವರು- ನಾನೇ ಕೊಂದೆನೆಂದು ಹೇಳಿದನು. ಆಗ ಅರಸನು ಶಾಸ್ತ್ರಜ್ಞರನ್ನು ಕರಿಸಿ ಇವನಿಗೆ ಆವ ಶಿಕ್ಷೆಯನ್ನು ಕೊಡಬೇಕೆಂದು ಕೇಳಲು ಅವರು ಚಾತುರ್ವರ್ಣದವರು ತಪ್ಪು ಮಾಡಿದರೆ ಅವರಿಗೋಸ್ಕರ ಆಜ್ಞೆಗಳುಂಟು. ಆದರೆ ಭಕ್ತರಿಗೆ ಯಾವ ಆಜ್ಞೆಗಳಿಲ್ಲವೆಂದು ಹೇಳಿದರು. ಆದರೆ ಅರಸನು ಅವರ ಹೇಳಿಕೆಯನ್ನು ಉಲ್ಲಂಘಿಸಿ ರೇವಯ್ಯದೇವನ ಕಣ್ಣುಗಳನ್ನು ಕೀಳಬೇಕೆಂದು ತನ್ನ ಚಾರರಿಗೆ ಆಜ್ಞೆಯನ್ನು ಮಾಡಿದನು. ಅವರು ಹಾಗೆಯೇ ಅವನ ಕಣ್ಣುಗಳನ್ನು ಕಿತ್ತಿದರು. ಆದರೆ ಸಮೀಪದಲ್ಲಿದ್ದ ರೇವಯ್ಯನ ಆರಾಧ್ಯ ಶಿಷ್ಯರು ಕಣ್ಣುಗಳಿಗೆ ಭಸ್ಮವನ್ನು ತಳೆದು ವಿಭೂತಿಯನ್ನು ತೋರಿಸಲು ಕಳೆದ ಕಣ್ಣುಗಳು ತಿರುಗಿ ಬಂದವು. ಹೀಗಾದುದನ್ನು ಚೋಳನು ನೋಡಿ ಪುನಃ ಕಣ್ಣುಗಳನ್ನು ತೆಗೆಯಿಸಲು ಅವು ಪುನಃ ಮೂಡಿದವು. ಹೀಗೆ ಅವುಗಳನ್ನು ತೆಗೆದು ಹಾಕಿದ ಹಾಗೆ ಅವು ಮತ್ತೆ ಮತ್ತೆ ಬರುತ್ತಿರಲು ರೇವಯ್ಯನು- ಇನ್ನು

ಮುಂದೆ ಪುನಃ ನನ್ನ ಕಣ್ಣುಗಳು ಬಂದರೆ, ಶಿವನೇ ನಿನಗೆ ಶಿವಗಣಂಗಳಾಣೆ ಎಂದು ಅನ್ನಲು ಅವನಿಗೆ ಕಣ್ಣು ಬರುವದು ನಿಂತಿತು.

ಆ ಮೇಲೆ ರೇವಯ್ಯದೇವನು ಈ ಚೋಳ ಪಾಪಾತ್ಮನನ್ನು ನೋಡ ಬಾರದೆಂದು ಆ ಸ್ಥಳವನ್ನು ಬಿಟ್ಟುಕೊಟ್ಟು ದ್ರಾಕ್ಷಾರಾಮ ಕ್ಷೇತ್ರಕ್ಕೆ ಬಂದು ಮಲ್ಲಿಕಾರ್ಜುನ ಪಂಡಿತಾರಾಧ್ಯನ ಸಹವಾಸದಲ್ಲಿ ಇರಹತ್ತಿದನು.

ಹೀಗೆ ಕೆಲವು ದಿನಗಳಾದ ಮೇಲೆ ವೆಲ್ನಾಡಚೋಳನ ಸ್ವಪ್ನದಲ್ಲಿ ಶಿವನು ಅವನನ್ನು ತ್ರಿಶೂಲದಿಂದ ಇರಿದಂತಾಯಿತು. ಅವನಿಗೆ ಇರಿದಲ್ಲಿ ಮೂರು ಹುಣ್ಣುಗಳು ಹುಟ್ಟಿ ಅವು ವೆಗ್ಗಳವಾದವು. ಅವನಿಗೆ ಅವುಗಳ ಮೂಲಕ ಅತ್ಯಂತ ವೇದನೆಯಾಗಹತ್ತಿತು. ಆಗ ಅವನ ಮಂತ್ರಿಗಳು ಅವನಿಗೆ- ನೀವು ಮಲ್ಲಿಕಾರ್ಜುನ ಪಂಡಿತಾರಾಧ್ಯನನ್ನು ಕ್ಲೇಶಪಡಿಸಿದಿರಿ, ಇದರಿಂದ ನಿಮಗೆ ಹೀಗಾಗಿರಬೇಕು, ಅವನನ್ನು ಕರೆತಂದರೆ ನಿಮಗೆ ಗುಣ ವಾಗುವದೆಂದು ಬೋಧಿಸಲು, ಅವನು ಪರಿಚಾರಕರನ್ನು ಅವನಲ್ಲಿಗೆ ಕಳು ಹಿದನು. ಅವರು ಅವನಿದ್ದಲ್ಲಿಗೆ ಬಂದು ಅವನಿಗೆ ಕೈಮುಗಿದು- ಪಂಡಿ ತಾರಾಧ್ಯರೇ, ನಮ್ಮರಸು ನಿಮಗೆ ಅರ್ಧ ರಾಜ್ಯವನ್ನು ಕೊಡುವದಲ್ಲದೆ ನಿಮ್ಮಿಂದ ದೀಕ್ಷೆಯನ್ನು ಹೊಂದಲು ಅಪೇಕ್ಷಿಸುತ್ತಿದ್ದಾನೆ. ಅವನಲ್ಲಿಗೆ ಬರಬೇಕು ಎಂದು ನಿವೇದಿಸಿದರು. ಅವಕ್ಕೆ ಪಂಡಿತಾರಾಧ್ಯನು ಅವರ ಮಾತು ಕೇಳಿ ಕಿವಿಗಳನ್ನು ಮುಚ್ಚಿಕೊಂಡು- ಅವನ ಮುಖವನ್ನು ನಾನು ನೋಡಲಾರೆನು ಎಂದು ತಿರುಗಿ ಹೇಳಿಕಳುಹಿದನು. ಪರಿಚಾರಕರು ತಿರುಗಿ ಬಂದು ಅರಸನಿಗೆ ಹಾಗೆಯೇ ಹೇಳಿದರು. ಮುಂದೆ ಅರಸನು ವೇದನೆಯ ಲ್ಲಿಯೇ ಪರಿತಪಿಸುತ್ತ ಮರಣಹೊಂದಿದನು.

ಮೂಲ ಗ್ರಂಥಗಳಲ್ಲಿ ವೆಲ್ನಾಡ ಚೋಳನು ಜೈನನೆಂತಲೂ, ಬೌದ್ಧಾ ಚಾರ್ಯನು ಜೈನನೆಂತಲೂ, ಅವನು ದೀಪಮಾಲೆಯ ಸ್ತಂಭವನ್ನು ನಡಿ ಸಿದ್ದು ಜೈತ್ಯಾಲಯದ ಮುಂದೆ ಎಂತಲೂ, ಹೇಳಲ್ಪಟ್ಟಿರುತ್ತದೆ. ನಾವು ಹಾಗೆಯೇ ಇಲ್ಲಿ ವಿವರಿಸಿದ್ದೇವೆ. ಆದರೆ ಬೌದ್ಧಾಚಾರ್ಯ ಈ ಹೆಸರಿನ ಮೇಲಿಂದ ಆತನು ಬೌದ್ಧನಿರಬಹುದೆಂದು ತೋರುತ್ತದೆ. ಈ ಕಾಲದಲ್ಲಿ ಕರ್ನಾಟಕ ಮತ್ತು ಆಂಧ್ರ ದೇಶಗಳಲ್ಲಿ ಕೆಲವು ಸ್ಥಳಗಳಲ್ಲಿ ಬೌದ್ಧಾಲಯ ಗಳಿದ್ದುದು ಇತಿಹಾಸದಿಂದ ತಿಳಿದುಬರುತ್ತದೆ. ಈ ಚಂದವ್ರೋಲು ಗ್ರಾಮದ ಸಮೀಪವಾಗಿಯೇ ನಡುಗೂಡು, ಅಮರಾವತಿ ಮುಂತಾದ ಬೌದ್ಧರ ಪುರಾ ತನ ಸ್ಥಾನಗಳಿರುತ್ತವೆ.

---

ನಮಃ ಓಂ ಹ್ರೀಂ ಶಿರಸೆ ಸ್ವಾಹಾ, ಓಂ ಹ್ರೂಂ ಶಿಖಾಯು ವೌಷಟ್ ಓಂ ಹ್ರೈ ಕವಚಾಯು ಹ್ರೂಂ, ಓಂ ಹ್ರೌಂ ನೇತ್ರತ್ರಯಾಯು ವೌಷಟ್ ಓಂ ಹಃ ಅಸ್ತ್ರಾಯುಫಟ್ ಎಂಬ ಮಂತ್ರದಿಂ ಕರನ್ಯಾಸವ ಮಾಡು ವದು. ಆಮೇಲೆ ಓಂ ನಮಃ ಶಿವಾಯು ಎಂಬ ಮಂತ್ರ ಲಿಂಗದಲ್ಲಿ ಯುಕಾರದಿಂ ಮಸ್ತಕದಲ್ಲಿ, ವಕಾರದಿಂ ಮುಖದಲ್ಲಿ, ಶಿಕಾರದಿಂ ಹಸ್ತ ಹೃದಯುದಲ್ಲಿ, ಮುಕಾರದಿಂ ಕಟಿಯುಲ್ಲಿ, ನಕಾರದಿಂ ಪಾದದಲ್ಲಿ ಉದ್ಧೂ ಳಿಸುವದು. ಓಂ ನಮಃ ಶಿವಾಯು ಎಂಬ ಮಂತ್ರದಿಂ ಸರ್ವಾಂಗದಲ್ಲಿ ಉದ್ಧೂಳಿಸುವದು. ಆಮೇಲೆ ಅರ್ಘ್ಯವಂ ಕೊಟ್ಟು ಓಂ ನಿಮಂತ್ರಿಸಿ ಓಂ ನಮಃ ಶಿವಾಯು ಎಂಬ ಮಂತ್ರದಿಂ ಲಿಂಗದಲ್ಲಿ ಲಲಾಟದಲ್ಲಿ ಪಶ್ಚಿಮ ದಲ್ಲಿ ಶಿಖಿಯುಲ್ಲಿ ಬ್ರಹ್ಮರಂಧ್ರದಲ್ಲಿ ಆಜ್ಞೆಯುಲ್ಲಿ ಬಲದ ಕರ್ಣದಲ್ಲಿ, ಎಡದ ಕರ್ಣದಲ್ಲಿ ಬಲದ ನೇತ್ರದಲ್ಲಿ ಎಡದ ನೇತ್ರದಲ್ಲಿ ಈಡಾಪಿಂಗ ಳೆಯುಲ್ಲಿ ಪಶ್ಚಿಮದಲ್ಲಿ ಕಂಠದಲ್ಲಿ ಹೆಗಲಲ್ಲಿ ಬಲಭುಜದಲ್ಲಿ ಎಡದ ಭುಜದಲ್ಲಿ ಬಲದ ತೋಳಿನಲ್ಲಿ ಎಡದ ತೋಳಿನಲ್ಲಿ ಬಲಕೂರ್ಪ ಯುಡ ಕೂರ್ಪರದಲ್ಲಿ ಬಲದ ಮುಂಗಯ್ಯ ಎಡಮುಂಗಯ್ಯಲ್ಲಿ ಬಲ ಕರಕೋಟ ಎಡಕರಕೋಟದಲ್ಲಿ ಎರಡು ಆರೆಹಸ್ತದಲ್ಲಿ ಹೃದಯುದಲ್ಲಿ ಉಭಯು ಪಾರ್ಶ್ವದಲ್ಲಿ ನಾಭಿಯುಲ್ಲಿ ಕಟಿಯುಲ್ಲಿ ಗುಹ್ಯದಲ್ಲಿ ಉಭಯು ಉರದಲ್ಲಿ ದ್ವಿತೀಯು ಜಂಘೆಯುಲ್ಲಿ ದ್ವಂದ್ವಕಣಕಾಲಲ್ಲಿ ಉಭಯು ಹರ ಡಿನಲ್ಲಿ ಎರಡು ಮೇಗಾಲಲ್ಲಿ ಬೆರಳುಗಳಲ್ಲಿ ದ್ವಿತೀಯು ಅರೆಮಡದಲ್ಲಿ ತ್ರಿಪುಂಡ್ರವ ಮಾಡುವದು. ಓಂ ಹಣೆಯುಲ್ಲಿ ನಮವೆರಡು ಭುಜದಲ್ಲಿ ಶಿ ನಾಭಿಯುಲ್ಲಿ ವ ಯುಕಾರವೆರಡು ಪಾದದಲ್ಲಿ ಓಂ ಬಲಪಾರ್ಶ್ವದಲ್ಲಿ ಆ ಎಡದಲ್ಲಿ ಊಂ ಪೂರ್ವ ಮಾಂ ಪಶ್ಚಿಮದಲ್ಲಿ ಹಂ ಮೂರ್ಧನಿಯುಲ್ಲಿ ಲಿಂ ಗುದದಲ್ಲಿ ಗಂ ಮಸ್ತಕದಲ್ಲಿ ಲಿಖಿಸಿ ಲಿಂಗಾರ್ಚನೆಯು ಮಾಡು ವದು ವಿಭೂತಿ ಧಾರಣಾಕ್ರಮ ಸಮಾಪ್ತ.

## ಹಸ್ತ ಪರುಷ ಮಾಡುವ ಕ್ರಮ.

ಹಸ್ತದಲ್ಲಿ ಭಸ್ಮವೆಂಸಿ ಚಿನ್ನಾದ ಚಿದ್ಬಿಂದು ಚಿತ್ಕಳೆಪರನಾದ ಪರ ಬಿಂದು ಪರಕಳೆಯುನು ಸಂಬಂಧಿಸಿ ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ನಮಃ ಶಿವಾಯು ಎಂಬ ಮಂತ್ರದಿಂದ ಮೂರು ವೇಳೆ ಮಂತ್ರಿಸಿ ಸ್ಪರಿಸುವದು.

## ವಿಭೂತಿ.

ಅದು ಮಹಾವಸ್ತುವಿನ ದಿವ್ಯ ತೇಜವು. ಅದು ಕಾಲ, ಕಾಮ, ಕರ್ಮತ್ರಯ, ತನುತ್ರಯ ಇವುಗಳನ್ನು ಚಿತ್‌ಶಿಖಿ ಎಂಬ ಜ್ಞಾನಾಗ್ನಿಯಿಂದ ದಹಿಸಿದ ಚಿನ್ಹವು. ಶಿವಶರಣರು ಅದು ಪರಶಿವನ ಪರಮ ಚೈತನ್ಯವು, ಚಿತ್‌ಸ್ವರೂಪ ಎಂದು ಭಾವಿಸಿ ಅದನ್ನು ಲೇಪಿಸಿಕೊಳ್ಳುತ್ತಾರೆ.

### ದೀಕ್ಷಾಭಸಿತ, ಶಿಕ್ಷಾಭಸಿತ, ಕ್ರಿಯಾಭಸಿತ

ವಿಭೂತಿಗಳು ಮೂರು ವಿಧವಾಗಿವೆ. (೧) ಕ್ರಿಯಾಗ್ನಿಯಿಂದ ದಹಿಸಿದ ಬೂದಿಯನ್ನು ಧೂಳಪಾದೋದಕದಲ್ಲಿ ಅಥವಾ ಗುರುಪಾದೋದಕದಲ್ಲಿ ಶೋಧಿಸಿ ಘಟ್ಟಿಯ ಮಾಡಿದ್ದು ದೀಕ್ಷಾಭಸಿತವು. (೨) ಗುರುಪಾದೋದಕ ಮತ್ತು ಲಿಂಗಪಾದೋದಕ ಇವುಗಳನ್ನು ಸಮ್ಮಿಶ್ರ ಮಾಡಿ ಷಡಕ್ಷರ ಮಂತ್ರವನ್ನು ಸ್ಥಾಪಿಸಿದ್ದು ಶಿಕ್ಷಾಭಸಿತವು. (೩) ಗುರು ಪಾದೋದಕದಲ್ಲಿ ಘಟ್ಟಿಯ ಕಟ್ಟಿ, ಲಿಂಗಪಾದೋದಕವನ್ನು ಆ ಘಟ್ಟಿಗೆ ಸಮ್ಮಿಶ್ರಮಾಡಿ ಆದಿ ಪ್ರಣವಗಳಾರು, ಅನಾದಿಪ್ರಣವಗಳಾರು, ಚಿತ್ಕಲಾ ಪ್ರಸಾದ ಪ್ರಣವಗಳಾರು, ನಿಃಕಳಂಕ ಚಿತ್ಕಲಾ ಮೂಲ ಪ್ರಣವ ಮೂರು ಹೀಗೆ ೨೧ ಪ್ರಣವಗಳನ್ನು ಸ್ಥಾಪಿಸಿ ತಯಾರಿಸಿದ್ದು ಕ್ರಿಯಾಭಸಿತವು. ಜ್ಞಾನಭಸಿತವೆಂತಲೂ ಇದಕ್ಕೆ ಹೆಸರಿದೆ. ಅಷ್ಟಾವರಣದ ಆಚರಣೆಯಲ್ಲಿ ಆಚರಿಸುವವರ ಅನುಕೂಲತೆಗೋಸ್ಕರ ಶಿವಶರಣರು ಈ ವಿಧಗಳನು ಕಲ್ಪಿಸಿದ್ದಾರೆ. ಈ ದೃಷ್ಟಿಯಿಂದ ಲಿಂಗಧಾರಕ ಭಕ್ತರು, ಉಪಾಧಿಭಕ್ತರು ನಿರುಪಾಧಿಭಕ್ತರು ಎಂಬ ಮೂರು ವರ್ಗಗಳು ಅನುಕ್ರಮವಾಗಿ ಮಾಡಲ್ಪಟ್ಟಿರುತ್ತವೆ. ಅವರು ಆಯಾ ರೀತಿಯಿಂದ ಭಸಿತವನ್ನು ಉಪಯೋಗಿಸುವುದು. ಈ ವಿಧಗಳು ಅವರವರ ಅನುಕೂಲತೆಗೋಸ್ಕರ ಮಾಡಲ್ಪಟ್ಟಿರುತ್ತವೆ. ಸಹಜಭಕ್ತ ಮತ್ತು ನಿರ್ವಾಣಭಕ್ತ ಎಂತಲೂ ಇನ್ನು ಎರಡು ವಿಧಗಳನ್ನು ಕಲ್ಪಿಸುವದುಂಟು. ಇವರು ಎಲ್ಲರಿಗೂ ಮೇಲ್ತರ ಗತಿಯವರು.

### ವಿಭೂತಿ ಧಾರಣದ ಸ್ಥಳಗಳು.

(೧) ಲಿಂಗಧಾರಕ ಭಕ್ತರು ೮ ಸ್ಥಾನಗಳಲ್ಲಿ ಧರಿಸುವುದು. ಅವು ಮಸ್ತಕ, ಲಲಾಟ, ಗ್ರೀವ, ಎರಡು ಬಾಹುಗಳು, ಹೃದಯ, ನಾಭಿ,

ಪೃಷ್ಠ ಹೀಗೆ ಇರುತ್ತವೆ. (೨) ಉಪಾಧಿಭಕ್ತರು ಧರಿಸುವ ಸ್ಥಳಗಳು ೧೬ ಇವೆ. ಅವು— ಶಿರಸ್ಸು, ಭಾಳ, ಎರಡು ಕರ್ಣಗಳು, ಎರಡು ಓಷ್ಠ್ರ, ಕಂಠ, ಎರಡು ಬಾಹುಗಳು, ಎರಡು ಭುಜಗಳು, ಎರಡು ಮಣಿಬಂಧಗಳು, ಹೃದಯ, ಅಪರ, ನಾಭಿ ಹೀಗೆ ಇರುತ್ತವೆ. (೩) ನಿರುಪಾಧಿ ಭಕ್ತರು ಧರಿಸುವ ಸ್ಥಾನಗಳು ೩೨ ಇವೆ. ಅವು ಮೂರ್ಧ, ಲಲಾಟ, ಎರಡು ಕರ್ಣಗಳು, ಎರಡು ನೇತ್ರಗಳು, ಘ್ರಾಣ, ಮುಖ ಎರಡು ಬಾಹುಗಳು, ಎರಡು ಭುಜಗಳು, ಎರಡು ಮಣಿಬಂಧಗಳು. ಎರಡು ಸ್ತನಗಳು, ವಕ್ಷ, ಉದರ, ಎರಡು ಪಾರ್ಶ್ವಗಳು, ನಾಭಿ, ಮೇಢ್ರ, ಪಾಯು, ಪೃಷ್ಠ, ಉರುದ್ವಯ, ಎರಡು ಜಾನುಗಳು, ಎರಡು ಜಂಘೆಗಳು, ಎರಡು ಪಾದಗಳು ಹೀಗೆ ಇರುತ್ತವೆ.

## ವಿಭೂತಿ ಧಾರಣದ ಪರಿಣಾಮಗಳು.

ದೀಕ್ಷಾಭಸಿತದಿಂದ ವಿಧಿಲಿಖಿತವು ತೊಡೆದು ಶಿವಲಿಖಿತವು ಲಿಖಿಸಲ್ಪಡುವದು. ಶಿಕ್ಷಾಭಸಿತದಿಂದ ಲಿಂಗನಿಷ್ಠಾಪರ ಭಕ್ತಿಯು ತೋರುವದು. ಜ್ಞಾನ ಅಥವಾ ಕ್ರಿಯಾಭಸಿತದಿಂದ ಸರ್ವಾಚಾರ ಸಂಪತ್ತು, ಜಂಗಮಾನುಭವವು ದೊರೆಯುವವು.

## ಪಂಚಭಸ್ಮಗಳು.

(೧) ಭೂತಿ-ಇದು ಶಿವಜ್ಞಾನಸುಖ ಮಹದೈಶ್ವರ್ಯವನ್ನುಂಟು ಮಾಡುತ್ತದೆ. (೨) ಭಸಿತವು-ಮನುಷ್ಯನ ಸಕಲಕಾಂಕ್ಷೆಗಳನ್ನು ಸುಟ್ಟು ನಿಃಕಾಮನನ್ನಾಗಿ ಮಾಡುತ್ತದೆ. (೩) ಭಸ್ಮ- ಇದು ಪೂರ್ವಕರ್ಮವನ್ನು ದೂರಮಾಡುತ್ತದೆ. (೪) ಕ್ಷಾರ- ಇದು ಮಾಯೆಯನ್ನು ಕೆಡಿಸುತ್ತದೆ. (೫) ರಕ್ಷೆ- ಇದು ಭೂತ, ಪ್ರೇತ, ಪಿಶಾಚ, ರಾಕ್ಷಸ ಬಾಧೆಗಳನ್ನು ತಪ್ಪಿಸುತ್ತದೆ. ಇವೆಲ್ಲವು ನಂದೆ, ಭದ್ರೆ, ಸುರಭಿ, ಸುಶೀಲ, ಸುಮನ ಎಂಬ ಗೋವುಗಳ ಮೂಲಕ ಆಯಾ ಮಂತ್ರಗಳಿಂದ ಉತ್ಪನ್ನವಾಗುತ್ತವೆ.

---

# ರುದ್ರಾಕ್ಷಿಯ ಅರ್ಥ.

(೧) ಪರಶಿವನ ಜ್ಞಾನ ಚಕ್ಷುವಿನಲ್ಲಿ ಉದಯವಾದ ರುದ್ರಾಕ್ಷಿಯ ಹಸ್ತದೊಳು ಉರು ಕಂಠ ಕರ್ಣಮಸ್ತಕದಲ್ಲಿ ಧರಿಸಿದ ಶಿವಶರಣನೇ ರುದ್ರನು. ಆ ರುದ್ರಾಕ್ಷಿಯ ಜಪಿಸಿದಾತನೇ ಸದ್ಯನ್ಮುಕ್ತನು. ಇದು ಕಾರಣ ಅಜ ಹರಿ ಸುರ ಮುನಿಮುನೀಶ್ವರರು ಶ್ರೀವಿಭೂತಿ ರುದ್ರಾಕ್ಷಿಯನೇ ಧರಿಸಿ ಶಿವಲಿಂಗಾರ್ಚನೆಯ ಮಾಡುತಿರ್ಪರು. ಪ್ರಮಥಗಣ ರುದ್ರಗಣ ಮುಖ್ಯವಾದ ಗಣಾಧೀಶ್ವರರು ವಿಭೂತಿ ರುದ್ರಾಕ್ಷಿಯನೆ ಧರಿಸಿ ಪ್ರಣವ ಪಂಚಾಕ್ಷರಿಯನೇ ಜಪಿಸಿ, ಪ್ರಣವ ಸ್ವರೂಪಿಗಳಾಗುತಿರ್ಪರು ನೋಡಾ. ಇದು ಕಾರಣ ನಾನು ವಿಭೂತಿ ರುದ್ರಾಕ್ಷಿಯನೇ ಧರಿಸಿ ಶಿವಲಿಂಗಾರ್ಚನೆಯ ಮಾಡಿ ಪ್ರಣವ ಪಂಚಾಕ್ಷರಿಯನೇ ಜಪಿಸುತ್ತಿರ್ದೆನಯ್ಯ ಮಹಾಲಿಂಗ ಗುರುಶಿವ ಸಿದ್ಧೇಶ್ವರಪ್ರಭುವೇ.

(೨) ತತ್ವ ಚಿಂತಾಮಣಿಗಳೆಂಬ ರುದ್ರಾಕ್ಷಿಗಳ ಭಕ್ತಿಭಾವದಲ್ಲಿ ಸರಗೊಳಿಸಿ ಯುಕ್ತಿವಿಧಾನವಿಡಿದು. ಧರಿಸಿ ಸದ್ಯನ್ಮುಕ್ತನಾದೆನಯ್ಯ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

(೩) ಸತ್ಯಸದಾಚಾರವಂತರು ಮುನ್ನ ರುದ್ರಾಕ್ಷಿಯ ಧರಿಸಿ ಮುಕ್ತಿಯ ನೈದಿದರು ನೋಡಿರಯ್ಯ. ಇದನರಿದು ಮುಕ್ತಿ ಬೀಜವೆನಿಪ ರುದ್ರಾಕ್ಷಿಯ ಧರಿಸಿರಯ್ಯ. ದರ್ಶನಸ್ಪರ್ಶನದಿಂದ ಪಾಪನಾಶನ ಕಾಣಿರಯ್ಯ. ರುದ್ರನದಿಮುಖವಾದ ರುದ್ರಾಕ್ಷಿಯ ರುದ್ರನ ಮುದ್ರೆ ಎಂದರಿದು ಧರಿಸಿದರಯ್ಯ. ರುದ್ರಾಕ್ಷಿಯ ಧರಿಸಿದವರು ರುದ್ರರಪ್ಪರು ತಪ್ಪದು ಕಾಣಿರಯ್ಯ. ಇಂತಿದನರಿದು ಶಿಖಿ ಮಸ್ತಕ ಕಂಠ ಕರ್ಣ ಹೃದಯ ಬಾಹು ಮಣಿಬಂಧ ಅಕ್ಷಮಾಲೆಯಾಗಿ ಧರಿಸಿ ಹರವರೇ ರುದ್ರರು. ರುದ್ರಾಕ್ಷಿಯ ಧರಿಸಿಹ ರುದ್ರರ ದರ್ಶನ ಸ್ಪರ್ಶನ ಸಂಭಾಷಣೆಯಿಂದ ಸರ್ವ ಪಾಪಕ್ಷಯುವಾಗಿ ಕೇವಲ ಮುಕ್ತಿಯಪ್ಪುದು ತಪ್ಪದಯ್ಯ ನಿಜ ಗುರು ಸ್ವತಂತ್ರಸಿದ್ಧಲಿಂಗೇಶ್ವರನ ಬೆರಸಬೇಕಾದಡೆ ಶ್ರೀ ರುದ್ರಾಕ್ಷಿಯ ನೊಲಿದು ಧರಿಸಿರಯ್ಯ.

(೪) ಶರಣನ ಚಿದಾನಂದ ವಸ್ತುವಿನ ಸ್ವಯಂಭು ಲೀಲಾವತಾರವಾದ ರುದ್ರಮೂರ್ತಿಯ ನೇತ್ರೋದಕದಿಂದ ಉದ್ಭವಿಸಿದ ಶ್ರೀರುದ್ರಾಕ್ಷಿಯೇ ತನಗೆ ಭೂಷಣಾಲಂಕಾರಂಗಳಾಗಿ ಒಪ್ಪಿ ತೋರುವ ಕಾರಣ

# ಪ್ರಗತಿ ಮಾರ್ಗ ಜೀವನ

## ವಿದ್ಯಾರ್ಥಿಗಳಿಗೂ ವಾಚನಾಲಯುಗಳಿಗೂ ಉಪಯುಕ್ತವಾದ ಗ್ರಂಥ.

ಮನುಷ್ಯನಿಗೆ ಅವನ ಜೀವನದಲ್ಲಿ ನೈತಿಕ, ಬೌದ್ಧಿಕ, ವ್ಯಾವಹಾರಿಕ ಪ್ರಗತಿಗಳಿಗೆ ಒಳ್ಳೇ ವಿಚಾರಗಳು ಅವಶ್ಯಕವಿದ್ದು, ಅಂಥ ವಿಚಾರಗಳನ್ನು ಒದಗಿಸಿಕೊಡುವ ಗ್ರಂಥವು ಇದಾಗಿರುತ್ತದೆ.

ಬೆಲೆ – ೦—೧೪—೦

ಹಿತಚಿಂತಕ ಪ್ರಿಂ. ಪ್ರೆಸ್
ವಿಜಾಪುರ.

BOOK-POST. R. N. B. 2554

*From,*
**Shivanubhava**
**Office**
**Bijapur**

ಶ್ರೀ. ರಾ॥ ರಾ॥
ಚನ್ನಮಲ್ಲಪ್ಪ ಸಿದ್ದಪ್ಪ ಬಡೇವಿ
ಪೋ. ಬಸಹಟ್ಟಿ
ವ್ಹಾಯಾ-ಕುಡಚಿ ಸ್ಟೇಶನ್



ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ಬ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ವಾರ್ಡ ೩, ಮನೆ ನಂ. ೧೩೬೮ ರಲ್ಲಿರುವ, ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

# ವಿಷಯುಗಳು.

# ಶಿವಾನುಭವ

| ವರ್ಷ ೨೩ | ಜುಲೈ ೧೯೪೯ | ಸಂಚಿಕೆ ೧೦ |
|---|---|---|

## ಸದ್ಗುಣದ ಮಹತ್ವ.

(ಲೇಖಕ:— ಒಬ್ಬ ಶಿವಾನುಭವಿ)

ಮನುಷ್ಯನ ಶರೀರವು ನಶ್ವರವಾದುದು. ಆದರೆ ಅದರಲ್ಲಿ ಚಿರಕಾಲ ಬಾಳುವಂತಹ ಒಂದು ವಸ್ತುವು ಇದೆ. ಅದು ಅವನಲ್ಲಿರುವ ಸದ್ಗುಣ. ಇದಕ್ಕೆ ಸಾವಿಲ್ಲ. ಕೇಡಿಲ್ಲ. ಮನಸ್ಸಿನ ದೊಡ್ಡಸ್ತಿಕೆಯೇ ಸದ್ಗುಣವೆಂದು ಹೇಳಬಹುದು. ಈ ಸದ್ಗುಣವನ್ನು ಸೋಲಿಸುವವರು ಅಥವಾ ನಾಶಮಾಡುವವರು ಯಾರೂ ಇಲ್ಲ. ಅಭ್ಯುದಯದ ಕಾಲದಲ್ಲಿ ಅದು ಮನುಷ್ಯನನ್ನು ಸೊಕ್ಕಿಗೇರುವಂತೆ ಮಾಡುವದಿಲ್ಲ. ಕಷ್ಟಕಾಲದಲ್ಲಿ ಅದು ದುಃಖಿಸುವಂತೆಯೂ ಮಾಡುವದಿಲ್ಲ. ಇದರಲ್ಲಿ ಸ್ಥಿರತೆಯ ಗುಣವಿದೆ. ಸದ್ಗುಣಕ್ಕೆ ಅಂಜಿಕೆ ಎಂಬುದಿಲ್ಲ. ಹೀಗಿದ್ದರೂ ಅದು ಸಭ್ಯನಡತೆಯುಳ್ಳದು. ಅದಕ್ಕೆ ಅತಿಯಾಶೆ ಎಂಬುದಿಲ್ಲ. ಅದು ಇದ್ದುದರಲ್ಲಿ ತೃಪ್ತಿಬಡುತ್ತದೆ ಅದು ಯಾವಾಗಲೂ ಆನಂದದಲ್ಲಿರುತ್ತದೆ. ಆ ಆನಂದಕ್ಕೆ ಕಡೆ ಇಲ್ಲ. ಅದು ಶಾಶ್ವತವಾದುದು. ಶಿವಾನುಭವಿಯು ಹೀಗೆ ಸದ್ಗುಣಿಯಾಗಿ ಜಗತ್ತಿನಲ್ಲಿ ವ್ಯವಹರಿಸುತ್ತಾನೆ.

ಒಬ್ಬನು ಅತ್ಯುತ್ತಮ ವೈದ್ಯನಾಗಿರಬಹುದು. ಅಥವಾ ಅತ್ಯುತ್ತಮ ಆಳುವವನಾಗಿರಬಹುದು. ಅಥವಾ ಉತ್ತಮ ಪಂಡಿತನಾಗಿರಬಹುದು. ಈ ಹೆಸರುಗಳಿಂದ ಜನರು ಅವನನ್ನು ಕರೆಯುವರು. ಆದರೆ ಅವನಲ್ಲಿ ಸದ್ಗುಣವಿಲ್ಲದಿದ್ದರೆ ಅವನು ಉತ್ತಮ ಮನುಷ್ಯನೆಂದು ಯಾರೂ ಅನ್ನಲಾರರು. ಈ ಹೆಸರು ದೊರಕಿಸುವದು ಕಠಿಣವಿದೆ.

ತನ್ನಲ್ಲಿರುವ ವಿಪುಲ ಆಸ್ತಿಯ ಮೂಲಕ ಯಾವನೂ ಉತ್ತಮನೆನಿಸಿಕೊಳ್ಳಲಾರ. ಆದರೆ ಅವನ ನಡೆಯಲ್ಲಿ ಮತ್ತು ಕೃತಿಯಲ್ಲಿ ಸದ್ಗುಣ ತೋರಿದರೆ ಮಾತ್ರ ಅವನು ಉತ್ತಮನೆನಿಸಿಕೊಳ್ಳುವನು. ಇಲ್ಲದಿದ್ದರೆ ಅವನು ಅವಗುಣಿಯು ಅಥವಾ ಕೆಡುಕನೆಂದು ಜನರು ಅವನಿಗೆ ಅನ್ನುತ್ತಾರೆ.

ಸದ್ಗುಣವು ಲಿಂಗವಿದ್ದುದರ ಚಿನ್ಹವು. ಶಿವಶರಣರು ಲಿಂಗದ ಅರ್ಥವನ್ನು ಹೀಗೆಯೇ ಮಾಡಿದ್ದಾರೆ. ದುರ್ಗುಣಿಗೆ ದೇಹದ ಮೇಲೆ ಲಿಂಗವಿದ್ದರೂ ಅದು ಬಾಹ್ಯಲಿಂಗವೇ ಹೊರತು ಅದರಲ್ಲಿ ನಿಜತ್ವವು ಇರುವದಿಲ್ಲ.

ಯುದ್ಧಸಮಯದಲಿ ಒಬ್ಬನು ಗೆದ್ದಿರಬಹುದು ಮತ್ತು ಅವನ ಇದಿರಾಳಿಯು ಸೋತಿರಬಹುದು. ಆದರೆ ಸೋತವನಲ್ಲಿ ಸದ್ಗುಣವಿದ್ದರೆ ಅವನೇ ದೊಡ್ಡವನು. ಗೆದ್ದವನಲ್ಲಿ ದುರ್ಗುಣವಿದ್ದರೆ ಅವನು ಸೋತವನಕಿಂತಲೂ ಕಡೆಯುನು.

ಮನುಷ್ಯನಲ್ಲಿ ಪ್ರಾಮಾಣಿಕತನ— ಅಂದರೆ ನಡೆಯಲ್ಲಿ ನುಡಿಯಲ್ಲಿ ಸತ್ಯತೆಯು ಇರಬೇಕು ಆದರೆ ಹಾಗೆ ಇರದೆ ಮನೋವಿಕಾರಗಳಿಗೆ ಒಳಗಾಗಿ ಅವನು ನಡೆದರೆ ಜಗತ್ತಿನಲ್ಲಿ ಅವನದೆಂಬುದು ಅವುದೂ ಇರಲಾರದು. ಕೆಲವೊಂದು ಕಾಲದಲ್ಲಿ ಮಿತ್ರರು ನಮ್ಮನ್ನು ಬಿಟ್ಟು ಬಿಡಬಹುದು. ನಮ್ಮ ಮನೆಯಲ್ಲಿಯ ಎಲ್ಲ ಜೀನಸುಗಳು ನಾಶವಾಗಬಹುದು. ಆದರೆ ನಮ್ಮಲ್ಲಿ ಸದ್ಗುಣವು ಚ್ಯುತಿ ಹೊಂದದಿದ್ದರೆ, ನಮ್ಮದಾವುದೂ ನಾಶವಾಗಿಲ್ಲೆಂದು ತಿಳಿಯಬೇಕು.

ಒಂದು ಬುಗ್ಗೆಯಿಂದ ನೀರು ಹೊರಹೊರಟು ಅದು ಮುಂದೆ ಪ್ರವಾಹವಾಗಿ ಹರಿಯುತ್ತಿರಬಹುದು. ಅಥವಾ ಒಂದೆಡೆಯಲ್ಲಿ ಅದು ನಿಂತು ಜಲಾಶಯವಾಗಬಹುದು. ಆದರೆ ಆ ಬುಗ್ಗೆಯ ನೀರು ಜೀವಂತ ಇರುವ ವರೆಗೆ ಆ ಹರಿಯುವ ಪ್ರವಾಹ ಇದ್ದರೂ ಅಷ್ಟೇ, ಬಿಟ್ಟರೂ ಅಷ್ಟೇ. ಜಲಾಶಯವು ಇದ್ದರೂ ಅಷ್ಟೇ, ಬತ್ತಿದರೂ ಅಷ್ಟೇ. ಹಾಗೆಯೇ ಮನುಷ್ಯನಲ್ಲಿ ಸದ್ಗುಣವೆಂಬ ಬುಗ್ಗೆ ಇರುವವರೆಗೆ ಜನರು ಅವನನ್ನು ಹೊಗಳಿದರೂ ಅಷ್ಟೇ, ಅಥವಾ ನಿಂದಿಸಿದರೂ ಅಷ್ಟೇ. ಅದು ಅವನನ್ನು

ತಾಕಲಾರದು. ಆವನು ಸ್ಥಿರಬುದ್ಧಿಯುಳ್ಳವನಾಗಿ ಯಾವಾಗಲೂ ಸಮಾಧಾನದಲ್ಲಿರುತ್ತಾನೆ.

ಒಬ್ಬ ಮನುಷ್ಯನ ಸುತ್ತಲೂ ಗೆಳೆಯರ ಗುಂಪು ಮುಕುರಿರಬಹುದು. ಅಷ್ಟರಿಂದ ಅವನು ಜಾಣನೆಂದು ತಿಳಿಯಕೂಡದು. ಅಥವಾ ಜನರು ಅವನನ್ನು ಬಿಟ್ಟಿರಬಹುದು. ಅಷ್ಟರಿಂದ ಅವನು ಮೂರ್ಖನೆಂತಲೂ ತಿಳಿಯಕೂಡದು. ಅನೇಕ ಕಾರಣಗಳ ಮೂಲಕ ಜನರು ಒಬ್ಬನ ಸುತ್ತಲೂ ನೆರೆಯುತ್ತಾರೆ. ಮತ್ತೊಬ್ಬನಿಂದ ದೂರಿರುತ್ತಾರೆ. ಇಷ್ಟರಿಂದ ಅವನು ಸುಖಿಯು, ಇವನು ದುಃಖಿಯು ಎಂದು ಹೇಳಲುಬರಲಾರದು.

ಒಬ್ಬ ಮನುಷ್ಯನು ಬಹುದಿವಸ ಬಾಳಿರಲಿಕ್ಕಿಲ್ಲ. ಅವನಿಗೆ ಮರಣವು ಬೇಗನೆ ಪ್ರಾಪ್ತವಾಗಿರಬಹುದು. ಇನ್ನೊಬ್ಬನು ದುಃಖದಲ್ಲಿ ತನ್ನ ಆಯುಷ್ಯವನ್ನು ಕಳೆದಿರಬಹುದು. ವೇದನೆಯು ಅವನನ್ನು ಪೀಡಿಸುತ್ತಿರಬಹುದು. ಆದರೆ ಇಂಥ ಆವುದೂ ಮನುಷ್ಯನ ಸದ್ಗುಣವನ್ನು ಮಸುಳಿಸಲಾರದು. ಅದು ಯಾವಾಗಲೂ ಅಚ್ಚಳಿಯದೆ ಅವನಲ್ಲಿ ಉಳಿಯುತ್ತದೆ. ಅದು ಯಾವಾಗಲೂ ಅವನಲ್ಲಿ ಪ್ರಕಾಶಮಾನವಾಗಿ ಬೆಳಗುತ್ತಿದೆ.

ಸದ್ಗುಣವು ನಮ್ಮ ಆಚರಣೆಯಲ್ಲಿಯೇ ಇರುತ್ತದೆ. ಅದು ನಮ್ಮ ಆಶೆ ಆಕಾಂಕ್ಷೆಗಳಲ್ಲಿಯೇ ಒಡಮೂಡಿಕೊಂಡಿರುತ್ತದೆ. ಅವುಗಳೊಳಗಿಂದ ಅದು ಪ್ರಸ್ಫುರಿಸುತ್ತದೆ.

ಸದ್ಗುಣದ ತೇಜಸ್ಸು ಯಾವಾಗಲೂ ಹೊಳೆಯುವಂತಹದು. ಬಡತನವು ಅದನ್ನು ಕಳೆಯಲಾರದು. ಅಪಪ್ರಚಾರವು ಅದನ್ನು ಮಸುಳಿಸಲಾರದು. ವಿರೋಧಿಗಳು ಅದನ್ನು ಬಾಧಿಸಲಾರರು. ಮೋಡಗಳು ಸೂರ್ಯನನ್ನು ಕವಿದು ಕತ್ತಲೆಗವಿಸಿದರೂ ಅವು ಸೂರ್ಯನನ್ನು ಏನೂ ಬಾಧಿಸಲಾರವು. ಹಾಗೆಯೇ ಸದ್ಗುಣಿಯಾದವನನ್ನು ಯಾವದೂ ಕುಂದಿಸಲಾರದು. ಅವನು ಯಾವಾಗಲೂ ಪ್ರಕಾಶಮಾನನಾಗಿ ಬೆಳಗುತ್ತಾನೆ.

ಕೆಡುಕನ ಸುತ್ತಲೂ ವೈಭವವು ಮೆರೆಯುತ್ತಿರಬಹುದು. ಸಿರಿವಂತಿಕೆಯು ಅವನ ಮನೆಯಲ್ಲಿ ತುಂಬಿ ತುಳುಕುತ್ತಿರಬಹುದು. ಆದರೆ ಇವು ಬಾಹ್ಯ ಆವರಣಗಳು ಮಾತ್ರ. ಅವು ನಿಜವಸ್ತುಗಳಲ್ಲ. ಇವುಗಳೊಳ

ಗಿಂದ ಕೆಡುಕನ ಹೃದಯವನ್ನು ನಿರೀಕ್ಷಿಸಿದಲ್ಲಿ ಅದರಲ್ಲಿ ಒಂದು ಕಪ್ಪು ಕಲೆ ಇದ್ದುದು ತೋರಿಬರುವದು. ಆ ಕಲೆಯು ವಿಷವು. ಆ ವಿಷವು ಅವನನ್ನು ಯಾವಾಗಲೂ ಬಾಧಿಸುತ್ತಿರುತ್ತದೆ. ಅದರಿಂದ ಅವನು ಒಳಗೊಳಗೆ ಯಾವಾಗಲೂ ಸಂತಪಿಸುತ್ತಿರುತ್ತಾನೆ

ಆದರೆ ಸದ್ಗುಣಗಳಿಂದ ಉತ್ತಮನೆನಿಸಿಕೊಂಡವನನ್ನು ನೀವು ನಿರೀಕ್ಷಿಸಿದಲ್ಲಿ ಅವನಲ್ಲಿ ಒಂದು ಸೌಂದರ್ಯ ಅಥವಾ ಗಾಂಭೀರ್ಯವಿರುತ್ತದೆ. ಅದರಿಂದ ಅವನ ಬಗ್ಗೆ ನಿಮ್ಮಲ್ಲಿ ಒಂದು ಬಗೆಯ ಆದರ ಮತ್ತು ಪ್ರೀತಿಗಳು ಉಂಟಾಗುತ್ತವೆ. ಅವನಲ್ಲಿ ಏನೋ ಒಂದು ದೈವೀ ಶಕ್ತಿಯು ಇದ್ದಂತೆ ನಿಮಗೆ ಭಾಸವಾಗುತ್ತದೆ. ಅವನನ್ನು ನೋಡಿ ನಾವು ಧನ್ಯರಾದೆವೆಂದು ನಿಮಗನಿಸುವದು. ಅದುವೇ ಆತ್ಮತೇಜ, ಲಿಂಗದ ಕಲೆಯು. ಅದು ದೈವೀಶಕ್ತಿಯಾಗಿರುತ್ತದೆ. ಆ ಶಕ್ತಿಯು ನಿಮ್ಮ ಮೇಲೆ ಮಂತ್ರ ಹಾಕಿದಂತಾಗುತ್ತದೆ. ಅದರಲ್ಲಿ ಇಂಥ ಒಂದು ಬಲವು, ಅಥವಾ ಆಕರ್ಷಕ ಶಕ್ತಿಯು ಇರುತ್ತದೆ. ಅದು ನಿಮ್ಮನ್ನು ಎಳೆದು ಬಿಡುತ್ತದೆ ಆದರೆ ಅದು ಭೀತಿಯ ಮೂಲಕವಲ್ಲ. ಅದರಲ್ಲಿ ಬಲಾತ್ಕಾರವೆಂಬುದೇ ಇರುವದಿಲ್ಲ. ಅದೊಂದು ಬಲವಾದ ಮೋಹಕ ಶಕ್ತಿಯು. ಆದರ ರೀತಿಯನ್ನು ಹೇಳಲು ಬರಲಾರದು. ಆ ಶಕ್ತಿಯು ಉಚ್ಚತಮ ವಾತಾವರಣದಲ್ಲಿರುವಂತಹದು. ಅದೇ ಲಿಂಗವೆಂದು ನಾವು ಹೇಳಬಹುದು. ಈ ಲಿಂಗವು ನಿಮ್ಮಲ್ಲಿ ತೋರಿದಲ್ಲಿ ನಿಮಗೆ ವಿಶ್ವವೆಲ್ಲ ಲಿಂಗಮಯವಾಗಿ ತೋರುವಂತೆ ಅದು ಮಾಡುತ್ತದೆ. ಹೀಗೆ ಕಾಣುವವನೇ ಲಿಂಗಿಯು, ಲಿಂಗವಂತನು, ಶಿವಾನುಭವಿಯು. ಶಿವ ಎಂದರೆ ಪರಮಾತ್ಮ. ಅಂಥ ಪರಮಾತ್ಮನನ್ನು ತನ್ನೊಳಗು ಮಾಡಿಕೊಂಡು ವ್ಯವಹರಿಸುವವನೇ ಶಿವಾನುಭವಿಯು. ಇಂಥವನನ್ನು ಕೆಡುಕರು ಬಾಧಿಸಲಾರರು. ಅವರು ಅವನ ಸನ್ನಿಹದಲ್ಲಿ ಬಂದಲ್ಲಿ ಆ ವೇಳೆಯು ಪೂರ್ತಿಗಾದರೂ ಅವರು ಅವನಂತೆಯೇ ಆಗುವರು. ಇಲ್ಲವೆ ಹಾಗೆ ಆಗಬೇಕೆಂಬ ಅಪೇಕ್ಷೆಯಾದರೂ ಅವರಲ್ಲಿ ಹುಟ್ಟುತ್ತದೆ.

ಕೆಡುಕರು ಹೆರವರಿಗೆ ಕೆಡುಕು ಮಾಡಿ ತಾವು ಸುಖಿಗಳಾಗಬೇಕೆಂದು ಅಪೇಕ್ಷಿಸುತ್ತಾರೆ. ಇಂಥವರು ವೈಭವದಲ್ಲಿ ಇರಬಹುದು. ಆದರೆ ಅವರಿಗೆ—ನೀವು ಸುಖಿಯಾಗಿರುವಿರೋ ಎಂದು ಕೇಳಿದಲ್ಲಿ, ಅವರು ಅಹು

ದೆಂದು ಹೇಳುವದು ಶಕ್ಯವಲ್ಲ. ಅವರ ಸದಸದ್ವಿಚಾರವು ಹಾಗೆ ಅವರನ್ನು ಅನ್ನಗೊಡಲಾರದು. ಅವರು ಒಳಒಳಗೆ ತಾಪಬಡುತ್ತಿರುತ್ತಾರೆ. ಆದ್ದರಿಂದ ಅವರು ತಮ್ಮ ಕೆಡುಕುತನಕ್ಕೆ ನ್ಯಾಯದ ಹೊದಿಕೆಯನ್ನು ತೊಡಿಸಲು ಪ್ರಯತ್ನಿಸುತ್ತಾರೆ. ಅವರಿಗೆ ಯಾರಾದರೂ ನೀವು ಮೋಸ, ಕಳವು, ಬಲುಮೆ, ಇವುಗಳಿಂದ ಹಣ ಗಳಿಸಿದ್ದೀರಿ. ಆದರೆ ಪ್ರಾಮಾಣಿಕತನದಿಂದ ನೀವು ಆ ಹಣ ಗಳಿಸಿದ್ದರೆ, ಅದು ನಿಮಗೆ ನೆಟ್ಟಗನಿಸುತ್ತಿತ್ತೋ ಇಲ್ಲವೋ ಎಂದು ಕೇಳಿದರೆ, ಅದಕ್ಕೆ ಅವರು ಹೌದೆಂದು ಕೂಡಲೆ ಅನ್ನದೆ ಇರಲಾರರು.

ಬಹುಜನ ಧಾರ್ಮಿಕ ಪುರುಷರು ಮತ್ತು ರಾಜಕೀಯ ಪುರುಷರು ಕೆಲವೊಂದು ತತ್ವಕ್ಕಾಗಿ ಹಿಂಸೆಗೆ ಒಳಗಾಗುವದುಂಟು. ಇದು ಇತಿಹಾಸದಲ್ಲಿ ಕಂಡುಬರುತ್ತದೆ. ಅವರನ್ನು ಇದಿರಾಳಿಗಳು ಸೆರೆಮನೆಯಲ್ಲಿ ಹಾಕಿ ಕ್ರೂರತನದಿಂದ ಪೀಡಿಸಬಹುದು. ಪೀಡಿಸುವಲ್ಲಿ ಆ ಇದಿರಾಳಿಗೆ ಎಷ್ಟು ಸಂತೋಷವೋ ಅದಕ್ಕೂ ಹೆಚ್ಚು ಸಂತೋಷವು ಪೀಡಿಗೊಳಗಾದ ಅವನಿಗೆ ಆದುದು ಕಂಡು ಬರುತ್ತದೆ. ಅವನಲ್ಲಿ ನ್ಯಾಯವಾದ ತತ್ವಕ್ಕೋಸ್ಕರ ಪೀಡೆಗೊಳಗಾಗಿದ್ದೇನೆಂಬ ಸಂತೋಷವು ಇರುತ್ತದೆ. ಆ ಹಿಂಸೆಯು ಅವನಿಗೆ ಆನಂದವೆನಿಸುತ್ತವೆ. ಅಥವಾ ಒಬ್ಬ ಮನುಷ್ಯನು ಬಡತನದಲ್ಲಿರಬಹುದು. ಆದರೆ ಅವನಲ್ಲಿರುವ ಸದ್ಗುಣವು ಆ ಬಡತನದ ಕಷ್ಟಗಳನ್ನು ಆನಂದದಿಂದ ಸಹಿಸುವಂತೆ ಮಾಡುತ್ತದೆ. ಹೇಗೆ ಕೆಲವೊಂದು ವಸ್ತುವು ಎಂಥದಿದ್ದರೂ ಅದನ್ನು ತನ್ನಂತೆ ಮಾಡಿಕೊಳ್ಳುವ ಗುಣವು ಅಗ್ನಿಯಲ್ಲಿ ಉಂಟೋ ಹಾಗೆ ಸದ್ಗುಣವು ಎಲ್ಲವನ್ನು ಕಾಂತಿಮಯವಾಗಿ ಮಾಡುತ್ತದೆ.

ಆದರೆ ಯಾವದು ಚಂಚಲವೂ ನಶ್ವರವೂ ಇರುತ್ತದೋ ಅದು ಒಮ್ಮೆ ಏಳುತ್ತದೆ, ಮತ್ತೊಮ್ಮೆ ಬೀಳುತ್ತದೆ. ಹೀಗೆ ಆದರಲ್ಲಿ ಅದಲು ಬದಲುಗಳಾಗುತ್ತವೆ. ಆದರೆ ದೇವ ಅಥವಾ ಲಿಂಗಾಂಶವಿದ್ದಲ್ಲಿ ಇಂಥ ಅದಲು ಬದಲುಗಳು ಆಗಲಾರವು. ಹೀಗೆ ಬದಲುಗಳಾಗದೆ ಯಾವದು ಇರುವದೋ ಅದು ಲಿಂಗವಿದ್ದುದರ ಚಿನ್ಹವಾಗಿದೆ. ಸದ್ಗುಣವಾದರೂ ಹೀಗೆಯೋ ಇದೆ. ಆದರಲ್ಲಿ ಬದಲುಗಳೆಂಬುವು ಇರುವದಿಲ್ಲ. ಅದು ಶಾಶ್ವತವಾದುದು. ತನಗೆ ಒಪ್ಪಿಸಿದ ಕೆಲಸವು ಕಠಿಣವಿದ್ದರೆ ಅದರಿಂದ

ಅದು ಹಿಂದೆಗೆಯುವದಿಲ್ಲ. ಒಂದು ವೇಳೆ ಅದು ಹಗುರಾಗಿದ್ದರೆ ಅದಕ್ಕೆ ಸಂತೋಷವೂ ಇಲ್ಲ. ಅದು ಸಿರಿಯಲ್ಲಿ ಹಿಗ್ಗುವದಿಲ್ಲ, ಬಡತನದಲ್ಲಿ ದುಃಖಿಸುವದಿಲ್ಲ. ಬೇನೆ ಬಂದಾಗ ಅದು ನರಳುವದಿಲ್ಲ. ಬಲಿಷ್ಠನಾದಾಗ ಬಲುವೆ ಮಾಡುವದಿಲ್ಲ. ಹೀಗೆ ಅದರಲ್ಲಿ ಯಾವಾಗಲೂ ಸಮತಾಭಾವವಿರುತ್ತದೆ.

ಮನುಷ್ಯನು ತನ್ನ ಆಚರಣೆಗಳಿಗೋಸ್ಕರ ಕೆಲವು ನಿಯಮಗಳನ್ನು ಇಟ್ಟುಕೊಂಡಿರಬಹುದು. ಆದರೆ ಆ ನಿಯಮಗಳಂತೆ ನಡೆಯಲು ಅವನಿಗೆ ಒಂದುವೇಳೆ ಸಾಧ್ಯವಾಗಲಿಕ್ಕಿಲ್ಲ. ಆದರೆ ಆ ನಿಯಮಗಳನ್ನು ಆಚರಣೆಯಲ್ಲಿ ತರಲು ಅವಶ್ಯವಾದ ಸುಪ್ರಸಂಗಗಳು ಅವನಿಗೆ ಒಂದಿಲ್ಲ ಒಂದು ದಿನ ಅಕಸ್ಮಾತಾಗಿ ಉಂಟಾಗಬಹುದು. ಆಗ ಅವನು ಅವುಗಳ ಪೂರ್ಣ ಉಪಯೋಗ ಮಾಡಿಕೊಳ್ಳುವನು.

ಉತ್ತಮ ರೀತಿಯಿಂದಿರುವದು ಯಾವಾಗಲೂ ಸಾಹಸದ ಕಾರ್ಯವು. ಹಾಗೆಯೇ ಜೀವನದ ಉಚ್ಚ ಮಾರ್ಗದಲ್ಲಿರುವದೂ ಕೂಡ ಧೈರ್ಯದ ಕೆಲಸವು. ತಾನು ಇಚ್ಛಿಸಿದ ಶ್ರೇಷ್ಠ ಕಾರ್ಯಗಳು ಅವನಿಗೆ ಒಂದು ವೇಳೆ ಸಾಧ್ಯವಾಗಿರಲಿಕ್ಕಿಲ್ಲ. ಅವುಗಳಲ್ಲಿ ಅವನು ಅಪಯಶಸ್ಸನ್ನು ಸಹ ಹೊಂದಿರಬಹುದು. ಆದರೂ ಅವನ ಉಚ್ಚ ಬಯಕೆಗಳು ಮತ್ತು ಉಚ್ಚ ಪ್ರಯತ್ನಗಳು ಮಾತ್ರ ಅವನ ಯೋಗ್ಯತೆಯನ್ನು ಕಡಿಮೆ ಮಾಡಲಾರವು. ಅಂದರೆ ಶ್ರೇಷ್ಠ ಮನೋವೃತ್ತಿಗಳು ಮತ್ತು ಉಚ್ಚ ಅಭಿಲಾಷೆಗಳು ಇವುಗಳಿಗೂ ಕೂಡ ಜೀವಿತದಲ್ಲಿ ಬೆಲೆ ಅಥವಾ ಸ್ಥಾನವು ಇದೆ ಎಂದು ಹೇಳುವದೇ ನಮ್ಮ ಅಭಿಪ್ರಾಯವು.

ನಾವು ಕೈಕೊಂಡ ಮಹತ್ವದ ಕಾರ್ಯಗಳು ತಪ್ಪು ದಾರಿಯಿಂದ ಸಾಗಿ ಅವು ಕೈಗೂಡಿರಲಿಕ್ಕಿಲ್ಲ. ಆದರಿಂದ ನಾವು ಅಪಹಾಸ್ಯಕ್ಕೆ ಸಹ ಗುರಿಯಾಗಿರಬಹುದು. ಆದರೆ ಇಂಥ ಅಪಹಾಸ್ಯಕ್ಕೆ ನಾವು ಕುಂದಬಾರದು. ಯೋಗ್ಯ ಕಾರ್ಯದಲ್ಲಿ ನಮ್ಮ ಜೀವಹೋದರೂ ಚಿಂತೆ ಇಲ್ಲ. ಅದನ್ನು ನಾವು ಗಣಿಸಕೂಡದು. ಅಂಥ ಕಾರ್ಯದಲ್ಲಿ ನಾವು ಹಣ ಗಳಿಸಲಿ ಅಥವಾ ಹಣ ಹೋಗಲಿ, ನಮಗೆ ಅದು ದೊರಕಲಿ ಅಥವಾ ದೊರಕದಿರಲಿ, ಯಾವಾಗಲೂ ಒಂದೇ ಮನಸ್ಸಿನವರಾಗಿರಬೇಕು. ಅಂದರೆ ಸಮಾಧಾನ ವೃತ್ತಿಯುಳ್ಳವರಾಗಿರಬೇಕು.

ನಮ್ಮ ಹತ್ತಿರವಿದ್ದುದನ್ನು ಎರಡನೆಯುವರಿಗೆ ಅವಶ್ಯವಾಗಿ ನಾವು ದಾನಮಾಡಬೇಕು. ನಾವು ಹೀಗೆ ದಾನಮಾಡಿದ್ದರ ಬೆಲೆಯು ನಾವು ಕೊಟ್ಟ ರಕಮಿನ ಮೇಲೆ ಅವಲಂಬಿಸಿರುವದಿಲ್ಲ. ಅಥವಾ ಅದರ ತೂಕದ ಮೇಲೆ ಅವಲಂಬಿಸಿರುವದಿಲ್ಲ. ಅದರೆ ಅದನ್ನು ಸ್ವೀಕರಿಸಿದವನಿಗೆ ಅದ ರಿಂದ ನಿಜವಾದ ಉಪಯೋಗವಾಯಿತೋ ಹೇಗೆ ಎಂಬುದರ ಮೇಲೆ ಅವಲಂಬಿಸಿರುತ್ತದೆ. ಅದು ಅವನಿಗೆ ಒಂದುವೇಳೆ ಉಪಯೋಗವಾದಲ್ಲಿ ಅವನು ನಿಮ್ಮ ವಿಷಯುವಾಗಿ ಯಾವಾಗಲೂ ಆದರ ಭಾವವುಳ್ಳವನಾ ಗುತ್ತಾನೆ. ಯಾಕಂದರೆ ಅದು ಸತ್ಪಾತ್ರದಾನವಾಗಿರುವದು. ಅದ್ದರಿಂದ ನಾವು ಮಾಡಬೇಕಾದುದನ್ನೆಲ್ಲ ಸದಸದ್ವಿಚಾರ ಬುದ್ಧಿಯುಳ್ಳವರಾಗಿ ಯಾವದು ಸಮವಾಗಿರುತ್ತದೋ ಅದನ್ನೇ ಮಾಡಬೇಕು. ಅದನ್ನು ಜನರಿಗೆ ತೋರಿಸುವದಕ್ಕೋಸ್ಕರ ಮಾಡಬಾರದು. ಅಂದರೆ ಅದರಲ್ಲಿ ವೈಭವ ಅಥವಾ ತೋರಿಕೆ ಎಂಬುದು ಏನೂ ಇರಬಾರದು.

ನಾವು ಭೋಜನ ಮಾಡುವಲ್ಲಿ ಬಾಯುಸವಿಗೆ ಭುಂಜಿಸಬಾರದು. ನಮ್ಮ ಶರೀರಕ್ಕೆ ಎಷ್ಟು ಬೇಕೋ ಅಷ್ಟನ್ನೇ ಭುಂಜಿಸಬೇಕು. ನಮ್ಮ ಮಿತ್ರರೊಡನೆ ಆನಂದದಿಂದಿರಬೇಕು. ಶತ್ರುಗಳು ಇದ್ದರೂ ಕೂಡ ಅವರ ಕೂಡ ಮೃದುವಾಗಿ ವರ್ತಿಸಬೇಕು. ಯಾವನಾದರೊಬ್ಬನಿಗೆ ಏನಾದರೂ ಬೇಕಾಗಿದ್ದರೆ ಅದು ನಮಗೆ ತಿಳಿದಕೂಡಲೆ ಅವನಿಗೆ ಕೊಡಬೇಕು. ಅವನು ಬೇಡುವದರ ಹಾದಿಯನ್ನು ಸಹ ನೋಡಬಾರದು.

ಇಡೀ ಜಗತ್ತೇ ನಮ್ಮ ದೇಶವೆಂದು ತಿಳಿಯಬೇಕು. ನಾವು ನುಡಿಯುವ ಶಬ್ದಗಳನ್ನು ಮತ್ತು ಮಾಡುವ ಕಾರ್ಯಗಳನ್ನು ನಮ್ಮ ಮನಸ್ಸಾಕ್ಷಿಯಾಗಿ ಮಾಡಬೇಕೇ ಹೊರತು ಜನರು ನೋಡಿ ಶ್ಲಾಘಿಸ ಬೇಕೆಂದು ಮಾಡಬಾರದು.

ನಾವು ಉತ್ತಮ ಗ್ರಂಥಗಳನ್ನು ಓದುತ್ತಲೇ ನಮ್ಮ ಆಯುಷ್ಯ ವನ್ನು ಕಳೆದೆವು ಮತ್ತು ಸದಸದ್ವಿಚಾರ ಬುದ್ಧಿಗೆ ಸರಿದೋರಿದ್ದನ್ನೇ ಮಾಡಿದೆವು ಎಂಬ ಸಂತೋಷವಿರಬೇಕು. ಈ ಸಂತೋಷವುಳ್ಳವರಾಗಿ ನಾವು ಮರಣ ಹೊಂದಿದರೆ ಅದೇ ನಮಗೆ ಮುಂದೆ ದೊರಕಬಹು ದಾದ ನಿತ್ಯ ಸುಖವು ಎಂದು ತಿಳಿಯಬೇಕು. ನಾವು ಹೆರವರ ಸ್ವಾತಂ ತ್ರ್ಯಕ್ಕೆ ಭಂಗ ತರಕೂಡದು. ಹಾಗೆಯೇ ನಮ್ಮದನ್ನು ನಾವು ಹೋಗ

ಲಾಡಿಸಿಕೊಳ್ಳಬಾರದು. ನಮ್ಮ ವಿಚಾರಗಳನ್ನು ಪ್ರಕಟ ಮಾಡುವಲ್ಲಿ ಮತ್ತು ನಡೆಗಳನ್ನು ನಡೆಯುವಲ್ಲಿ ಗೌಪ್ಯವೆಂಬುದಿರಬಾರದು. ಯಾಕಂದರೆ ಇವುಗಳನ್ನು ನೋಡುವವನು ಪರಮಾತ್ಮನೊಬ್ಬನಿದ್ದಾನೆ. ಅವನಿಗೆ ಅಗೋಚರವಾದುದು ಯಾವುದೂ ಇಲ್ಲ. ಅಂದ ಬಳಿಕ ನಾವು ನಮ್ಮ ಕಾರ್ಯಗಳನ್ನು ಏಕೆ ಗುಪ್ತವಾಗಿ ಇಟ್ಟುಕೊಳ್ಳಬೇಕು?

ಸದ್ಗುಣಿಯು ಮೇಲಿನ ಆಚರಣೆಯಂತೆ ನಡೆಯುತ್ತಾನೆ. ಇಂಥವನಿಗೆ ಕೇಡಿಲ್ಲ, ಸಾವಿಲ್ಲ. ಅವನು ಯಾವಾಗಲೂ ಸುಖದಲ್ಲಿರುತ್ತಾನೆ. ಅವನೇ ಪ್ರಪಂಚವನ್ನು ಗೆದ್ದವನು, ಸಮಾಜ ಪೋಷಕನು. ಇಂಥವರ ನೆರವು ನಮ್ಮ ನಾಡಿಗೆ ಈ ಕಾಲದಲ್ಲಿ ಅವಶ್ಯವಾಗಿ ಬೇಕು.

---

# ಲಿಂಗವಂತರು ಮತ್ತು ವಿಧಾಯಕ ಕಾರ್ಯಗಳ ಅವಶ್ಯಕತೆ.

(ಲೇಖಕರು:— ಶ್ರೀ. ಅನ್ನದಾನೀಶ್ವರ ವಿರಕ್ತಮಠ.)

---

(೧)

## ೧. ಲಿಂಗವಂತರು ಯಾರು?

ಲಿಂಗವಂತರು ವ್ಯಾವಹಾರಿಕ ವೇದಾಂತಿಗಳು. ವ್ಯವಹಾರದಲ್ಲಿ ಇಳಿಯದ ವೇದಾಂತವು ಶುಷ್ಕವು. ಲಿಂಗವು ವ್ಯಾವಹಾರಿಕ ವೇದಾಂತದ ಪ್ರತೀಕವು. ವೇದಾಂತವು ಲೋಕದ ಬಳಕೆಯಲ್ಲಿ ಬಂದರೆ ಕಲ್ಯಾಣ ಮಾಡುತ್ತದೆಂದೇ ಲಿಂಗವು ಮೌನವಾಗಿ ಬೋಧಿಸುತ್ತದೆ. ಜ್ಞಾನವಿಲ್ಲದ ಕ್ರಿಯೆ ಕುರುಡು. ಕ್ರಿಯೆಯಿಲ್ಲದ ಜ್ಞಾನ ಹೆಳವ. ಜ್ಞಾನ-ಕ್ರಿಯಾ ಸಾಮರಸ್ಯದ ಚಿನ್ಹವೇ ಲಿಂಗವು. ಈ ಮಾತು ಶಿವಶರಣರ ವಚನ ಸಾಹಿತ್ಯದಿಂದ ತಿಳಿಯುತ್ತದೆ. ಶರಣ-ಶರಣೆಯರೂ ಅವರ ಅನುಯಾಯಿಗಳೂ ಹಿಂದಕ್ಕೆ ಅರುಹುಮಯವಾದ ಕಲ್ಯಾಣದ ಕ್ರಿಯೆಗಳನ್ನು ಮಾಡಿ ಲೋಕಕಲ್ಯಾಣ ಮಾಡಿ ಹೋಗಿದ್ದಾರೆ. ಆತ್ಮಜ್ಞಾನದಿಂದ

ಜಗತ್ಕಲ್ಯಾಣ ಮಾಡಿದವನೇ ಶರಣ-ಶರಣೆಯರು. ಅವರೇ ನಿಜ ಲಿಂಗವಂತರು. ಉಳಿದವರು ವೇಷಧಾರಿಗಳು.

### (೨) ಕ್ರಿಯೆಯೆಂದರೇನು?

ಶರಣರ ವಚನಧರ್ಮದ ರೀತ್ಯಾ ಕ್ರಿಯೆಯೆಂದರೆ ಕರ್ಮವಲ್ಲ. ಕರ್ಮವು ನಿರ್ಮಳವಾದದ್ದೇ ಕ್ರಿಯೆಯು. ಕ್ರಿಯೆಯು ಸದಾಚಾರವು. ಜ್ಞಾನವಿಲ್ಲದ್ದು ಕ್ರಿಯೆಯಲ್ಲ. ಜ್ಞಾನಸಹಿತವಾದದ್ದೇ, ಜ್ಞಾನದಿಂದ ಪ್ರೇರಿತವಾದದ್ದೇ ಕ್ರಿಯೆಯು. ಕ್ರಿಯೆಯು ಆಚಾರವು. ಕ್ರಿಯೆಯೆಂದರೆ ಕಾಯಕವು. ಕ್ರಿಯೆಯೆಂದರೆ ನೀತಿಯು. ಕ್ರಿಯೆಯೆಂದರೆ ನೀತಿಯಿಂದ ಧನ ಸಂಪಾದಿಸುವದು. ಕ್ರಿಯೆಯೆಂದರೆ ಸಕಲ ಜೀವಾತ್ಮರಿಗೆ ಲೇಸನೇ ಬಯಸುವದು ಮತ್ತು ಮಾಡುವದು. ಕ್ರಿಯೆಯೆಂದರೆ ನೀತಿಯಿಂದ ಸಂಪಾದಿಸಿದ ಧನವನ್ನು ಗುರುಲಿಂಗಜಂಗಮರಿಗೆ, ಜ್ಞಾನಿಗಳಿಗೆ, ಲೋಕಕಲ್ಯಾಣ ಮಾಡುವ ಜ್ಞಾನಿಗಳಿಗೆ, ತ್ಯಾಗ ಮಾಡುವದು. ಕ್ರಿಯೆಯೆಂದರೆ ನಾನು ಲೋಕದ ಸೇವಕನೆಂಬ ಭಾವನೆಯಿಂದ ವರ್ತಿಸುವದು. ಕ್ರಿಯೆಯೆಂದರೆ ವ್ಯವಹಾರದಲ್ಲಿ ಸಭ್ಯತೆಯಿಂದ ನಡೆಯುವದು. ಕ್ರಿಯೆಯೆಂದರೆ ಆರೋಗ್ಯದಿಂದ ದೇಹವನ್ನು ರಕ್ಷಿಸಿಕೊಳ್ಳುವದು. ಕ್ರಿಯೆಯೆಂಧರೆ ಹಿತವಾದದ್ದನ್ನು ಮಿತವಾಗಿ ಸೇವಿಸುವದು. ಕ್ರಿಯೆಯೆಂದರೆ ಆಲಸ್ಯತನವಿಲ್ಲದಿರುವದು. ಕ್ರಿಯೆಯೆಂದರೆ ತಕ್ಕ ಕಾಲದಲ್ಲಿ ಗಾಢ ನಿದ್ರೆಯನ್ನು ಮಾಡುವದು. ಕ್ರಿಯೆಯೆಂದರೆ ನಸುಕಿನಲ್ಲಿ ಏಳುವದು. ಕ್ರಿಯೆಯೆಂದರೆ ಹಿತವಚನಗಳನ್ನೂ ಸತ್ಯವಚನಗಳನ್ನೂ ನುಡಿಯುವದು. ಇಲ್ಲಿಯ ವರೆಗೆ ಹೇಳಿದ ಕ್ರಿಯೆಯು ಜ್ಞಾನಿಗಳಿಂದ ಮಾತ್ರ ಮಾಡಲಿಕ್ಕೆ ಸಾಧ್ಯವಿದೆ. ಅಜ್ಞಾನಿಯು ಈ ಕ್ರಿಯೆಯನ್ನು ಮಾಡಲಿಕ್ಕೆ ಸಾಧ್ಯವಿದೆ. ಅಜ್ಞಾನಿಯು ಈ ಕ್ರಿಯೆಯನ್ನು ಮಾಡಲಿಕ್ಕೆ ಸಮರ್ಥನೇ? ಇಲ್ಲವೇ ಇಲ್ಲ.

### (೩) ಜ್ಞಾನವೆಂದರೇನು?

ವಚನಧರ್ಮದ ದೃಷ್ಟಿಯಿಂದ ಪಿಂಡಾಂಡ ಮತ್ತು ಬ್ರಹ್ಮಾಂಡಗಳೆರಡೂ ಬ್ರಹ್ಮ ಅಥವಾ ಶಿವಮಯವೆಂದು ತಿಳಿದು ಸದಾನಂದಮಯವಾಗಿ ಲೀಲೆಯಿಂದ ಜೀವಿಸುವದೇ ಜ್ಞಾನವು. "ನಾನು ಬ್ರಹ್ಮ" ಎಂದು ಹೇಳುವದು ವೇದಾಂತವು. ಇದು ಸಂಕುಚಿತವು. "ಸರ್ವವೂ

ಬ್ರಹ್ಮ” ಎಂದು ಹೇಳುವದು ಶರಣರ ವೇದಾಂತವು. ಇದು ವ್ಯಾಪಕವು. ಶರಣರ ಜ್ಞಾನವು ಸರ್ವಾತ್ಮ ಭಾವನೆಯು. ಇಂಥ ಜ್ಞಾನವು ಶಾಂತಿಸ್ಥಾಪನೆಯ ಶಕ್ತಿಯುಳ್ಳದ್ದು. ಇದು ಯುದ್ಧಗಳನ್ನು ನಿಲ್ಲಿಸುತ್ತದೆ. ಮನಸ್ಸಿನ, ಬುದ್ಧಿಭಾವನೆಗಳ, ಜೀವಾತ್ಮನ ಶಕ್ತಿಯನ್ನು ವಿಕಾಸಗೊಳಿಸುವದು ಈ ಜ್ಞಾನವು. ದೇಹದಿಂದ ಸದಾಚಾರವನ್ನೂ, ಮನಸ್ಸಿನಿಂದ ಮಹಾನುಭಾವವನ್ನೂ, ಆತ್ಮದಿಂದ ಅರುಹನ್ನೂ ಹೊರಸೂಸುವಂತೆ ಮಾಡುವದೇ ಶರಣರ ವಚನಧರ್ಮದ ಮಹಾಜ್ಞಾನವು. ಜಗತ್ತಿನಲ್ಲಿ ಉಚ್ಚನೀಚ ಭಾವನೆಯನ್ನು ಹೊಡೆದುಹಾಕಿ ಸಮತೆಯನ್ನು ಸ್ಥಾಪಿಸುವದೀ ಜ್ಞಾನವು. ಸ್ವಾತಂತ್ರ್ಯ, ಸಮಾನತೆ, ಬಂಧುಪ್ರೀತಿಗಳನ್ನು ವರ್ಧಿಸುವದೀ ಜ್ಞಾನವು. ಈ ಜ್ಞಾನವು ನಿರ್ವಿಕಾರ ಶಾಂತಿಮಯವು. ಶರಣರ ಜ್ಞಾನವು ಜನರನ್ನು ಒಂದುಗೂಡಿಸುತ್ತದೆ. ಜಾತಿಭೇದದ ಕೋಟೆಯನ್ನು ಒಡೆದು ಸಕಲ ಜಾತಿಯವರನ್ನೂ ಉದ್ಧರಿಸುತ್ತದೆ. ಜಗದ ಅಜ್ಞಾನವನ್ನು ಕಳೆದು ಸುಬುದ್ಧಿಯನ್ನು ಕೊಡುತ್ತದೆ. ಜನರಿಗೆ ಸಹಕಾರ ತತ್ವದ ಮಹತ್ವವನ್ನು ತೋರಿ ಸಂಘಟಿತ ಕಾರ್ಯಗಳನ್ನು ಮಾಡಿಸುತ್ತದೆ. ಜನರು ಬಡತನ ಕಳೆದುಕೊಳ್ಳುವಂತೆ ಉದ್ಯೋಗಗಳನ್ನು ಕೊಡುತ್ತದೆ. ಶ್ರಮಗೌರವ ಮತ್ತು ಆತ್ಮಗೌರವದ ನಿಜ ತತ್ವಗಳನ್ನು ಪ್ರಸಾರ ಮಾಡುತ್ತದೆ. ಆಡಂಬರವಿಲ್ಲದ ನಿಷ್ಕಪಟ ಸರಲ ಜೀವನದ ಅರಿವು ಉಂಟಾಗುವಂತೆ ಮಾಡಿ ಜೀವಾತ್ಮನ ಹೋರಾಟದಲ್ಲಿ ಜಯವನ್ನು ಕೊಡುತ್ತದೆ. ಸಮಾಜದಲ್ಲಿ ದುಡ್ಡು ಸರಿಯಾಗಿ ಸ್ವಸಂತೋಷಪೂರ್ವಕವಾಗಿ ಹಂಚಲ್ಪಡುವಂತೆ ಮಾಡುತ್ತದೆ. ದಬ್ಬಾಳಿಕೆ, ಸುಲಿಗೆ, ಹಿಂಸೆಗಳನ್ನು ನಿಲ್ಲಿಸಿ, ಅಹಿಂಸಾ ಧರ್ಮದ ಪ್ರಭಾವವನ್ನು ಬೀರುತ್ತದೆ. ಸಾರಾಂಶ, ಇಲ್ಲಿಯ ವರೆಗೆ ಹೇಳಿದ ಶರಣರ ಜ್ಞಾನವು ಕ್ರಿಯೆಯಿಂದ ಕೂಡಿಯೇ ಇರುತ್ತದೆಂಬುದು ಅತ್ಯಂತ ಮಹತ್ವದ ಮಾತು. ಇಷ್ಟೇ ಅಲ್ಲ. ಜ್ಞಾನವಿರುವದು ಕ್ರಿಯೆಗಾಗಿಯೇ ವಿನಃ ಜ್ಞಾನಕ್ಕಾಗಿ ಅಲ್ಲ ಆದ್ದರಿಂದಲೇ ಚಿತ್ಕಲಾ ಚೈತನ್ಯವೇ ಲಿಂಗವೆಂದು ವಚನದಲ್ಲಿ ಹೇಳಿರುವರು. ಅದು ಒಳಗಿನಿಂದ ಹೊರಗೆ ಪ್ರಕಾಶವಾಗುವದು. ಇಂಥ ಜ್ಞಾನಕ್ರಿಯಾಸಾಮರಸ್ಯವು ಶರಣ ಧರ್ಮದ ಜೀವಾಳವು. ಇದಕ್ಕೇನೇ ಮಹಾತ್ಮಾ ಗಾಂಧಿಯವರು ವಿಧಾಯಕ ಕಾರ್ಯ ಎಂದು ಹೇಳಿರುವರು.

## (೪) ವಿಧಾಯಕ ಕಾರ್ಯದ ಅವಶ್ಯಕತೆ.

ಶರಣರಂಥ ನಿಜಲಿಂಗವಂತರಿಗೆ ವಿಧಾಯಕ ಕಾರ್ಯದ ಅವಶ್ಯಕತೆಯನ್ನು ತಿಳಿಸುವದು ಅವಶ್ಯವಿಲ್ಲ. ಆದರೆ ಇಂದಿನ ಲಿಂಗವಂತರಾದ ನಾವು ವೇಷಧಾರಿಗಳಾಗಿದ್ದೇವೆ. ಭಕ್ತ-ಮಹೇಶ ಎಂಬ ಭೇದಬುದ್ಧಿಯೇ ನಮ್ಮ ಆಚಾರವಾಗಿದೆ. ಭೇದಭಾವನೆಯಿಂದ ಮೂರು ಸಾರೆ ಲಿಂಗ ಪೂಜೆ ಮಾಡಿ ದೊಡ್ಡವರೆನಿಸಿಕೊಳ್ಳುವದೇ ನಮ್ಮ ಜ್ಞಾನವಾಗಿದೆ. ಪಕ್ಕಾ ಮಡಿ, ಶೀಲದ ಮಡಿ ಎಂಬ ಭೇದ ಮಾಡಿ ಒಳಗೆ ಕುಳಿತು ಗುಪ್ತವಾಗಿ ವೆಗ್ಗಳವಾಗಿ ಉಂಡು ತೇಗುವದೇ ನಮ್ಮ ಕ್ರಿಯೆಯಾಗಿದೆ. ಒಳಪಂಗಡಗಳ ಏಕೀಕರಣ ಮಾಡದಿರುವದೇ ನಮ್ಮ ಸಹಕಾರ ತತ್ವವಾಗಿದೆ. ಬಡತನ, ಅಜ್ಞಾನ, ನಿರುದ್ಯೋಗ, ರೋಗ, ಜಾತೀಯತೆ, ಸುಲಿಗೆ ಉಚ್ಚನೀಚ ಭಾವನೆ, ಇತ್ಯಾದಿಗಳನ್ನು ನಿಲ್ಲಿಸಲಿಕ್ಕೆ ಯತ್ನಿಸದೇ ಸುಮ್ಮನೆ ಕಾಲಕಳೆಯುವದೇ ನಮ್ಮ ಧರ್ಮವಾಗಿದೆ. ಅರ್ಥವಿಲ್ಲದ ಲಿಂಗಧರಿಸಿ ಭಾವಿಕರ ಅರ್ಥ ಸೆಳೆಯುವದೇ ನಮ್ಮ ಗುರುತ್ವವಾಗಿದೆ. ಲಿಂಗ, ವಿಭೂತಿ, ರುದ್ರಾಕ್ಷಿ, ಕಾವಿ, ಕಪನಿ, ದಂಡಗಳೇ ನಮ್ಮ ಸ್ವಾಮಿತ್ವದ ಗುರುತುಗಳಾಗಿ ಬಿಟ್ಟಿವೆ. ಲಿಂಗ, ಭಸ್ಮ, ರುದ್ರಾಕ್ಷಿ, ಪಾದೋದಕಗಳನ್ನು ಕುರಿತು ಶಾಸ್ತ್ರಿಗಳಿಂದ ಪುರಾಣ ಹೇಳಿಸುವದೇ ಸ್ವಾಮಿಗಳ ಘನಕರ್ತವ್ಯವಾಗಿ ಬಿಟ್ಟಿದೆ. ಸಮಾಜ ಸೇವೆಯ ಅರಿವಿಲ್ಲದೇ ಹೇಗಾದರೂ ದುಡ್ಡುಗಳಿಸಿ ಚೈನಿಯಿಂದ ಇರುವದೇ ನಮ್ಮ ಕಾಯಕವಾಗಿ ಬಿಟ್ಟಿದೆ. ಶರಣರ ವಚನದಲ್ಲಿ ಹೇಳಬೇಕೆಂದರೆ ನಾವು ಲಿಂಗವಿದ್ದು ಭವಿಗಳಾಗಿದ್ದೇವೆ. ನಮಗಿಂತಲೂ ಶ್ರೇಷ್ಠ ಲಿಂಗವಂತರೆಂದರೆ ವಿಧಾಯಕ ಕಾರ್ಯ ಮಾಡುವ ಮಹಾತ್ಮಾ ಗಾಂಧಿಯವರ ಅನುಯಾಯಿಗಳೇ ಸರಿ ಎಂದು ಹೇಳುವ ಕಾಲವೀಗ ಪ್ರಾಪ್ತವಾಗಿದೆ.

ವಿಧಾಯಕ ಕಾರ್ಯದಿಂದ ಕಾಂಗ್ರೆಸ್ಸಿಗೆ ಶ್ರೇಷ್ಠ ಸ್ಥಾನ ಸಿಕ್ಕಿದೆ. ವಿಧಾಯಕ ಕಾರ್ಯದಿಂದ ಸ್ವಾತಂತ್ರ್ಯ ಸಿಕ್ಕಿದೆ. ಸ್ವಾತಂತ್ರ್ಯ ಉಳಿಯುವದೂ ವಿಧಾಯಕ ಕಾರ್ಯದಿಂದಲೇ. ವಿಧಾಯಕ ಕಾರ್ಯದಿಂದ ಸರಕಾರವು ಜನಪ್ರಿಯವಾಗಬಲ್ಲುದು. ವಿಧಾಯಕ ಕಾರ್ಯದಿಂದಲೇ ನೈತಿಕ ಬಲವು ಬೆಳೆಯುವದು. ವಿಧಾಯಕ ಕಾರ್ಯವಿಲ್ಲದೇ ಸರ್ವೋದಯ ಸಮಾಜ ರಚನೆ ಶಕ್ಯವಿಲ್ಲ. ವಿಧಾಯಕ ಕಾರ್ಯವಿಲ್ಲದ ಅರ

ವಿಂದರ ಜ್ಞಾನಕ್ಕೆ ಕಿಮ್ಮತ್ತಿಲ್ಲ. ವಿಧಾಯಕ ಕಾರ್ಯವಿಲ್ಲದ ಕವಿಯ ಕಲ್ಪನೆಗೆ ಮಹತ್ವವಿಲ್ಲವೆಂದು ಪೂಜ್ಯ ಗಾಂಧಿಯವರು ಹೇಳಿದ್ದಾರೆ. ವಿಧಾಯಕ ಕಾರ್ಯಗಳಿಲ್ಲದಿದ್ದರೆ ವಿಘಾತುಕ ಯುದ್ಧಗಳಾಗುತ್ತವೆಂಬ ಮಾತಿಗೆ ಯುರೋಪದ ಇತಿಹಾಸವೇ ಸಾಕ್ಷಿ.

ವಿಧಾಯಕ ಕಾರ್ಯದಿಂದಲೇ ಸಾಹಿತ್ಯ, ಸಂಸ್ಕೃತಿ, ತತ್ವ, ಕಲೆ, ಧರ್ಮಗಳು ಉಳಿಯಬಲ್ಲವು. ಬೆಳೆಯಬಲ್ಲವು. ವಿಧಾಯಕ ಕಾರ್ಯದಿಂದಲೇ ವಿಜ್ಞಾನದಿಂದ ಜಗತ್ತಿಗೆ ಸಹಾಯವಾಗಬಲ್ಲುದು. ಒಟ್ಟಾರೆ ಜಗತ್ತಿನ ಉದ್ಧಾರವು ವಿಧಾಯಕ ಕಾರ್ಯದಲ್ಲಿಯೇ ಇದೆಯೆಂದು ಹೇಳಿದರೆ ಅತಿಶಯೋಕ್ತಿಯಲ್ಲ.

ಆದಕಾರಣ ಲಿಂಗವಂತರೆನಿಸಿಕೊಳ್ಳುವ ನಾವು ವಿಧಾಯಕ ಕಾರ್ಯಗಳಿಂದ ನಿಜಲಿಂಗಾಂಗಿಗಳಾಗಬಲ್ಲೆವು. ಶರಣರಾಗಬಲ್ಲೆವು. ಶರಣರಾಗದ ವಿನಃ ನಮ್ಮ ವೈಯ್ಯಕ್ತಿಕ ಮೋಕ್ಷವೂ ಇಲ್ಲ. ಸಮಾಜಕಲ್ಯಾಣವೂ ಇಲ್ಲ.

## (೨)

## ಸತ್ಯತತ್ವಾಭಿಮಾನಿಗಳಾಗಿರಿ! ಜಗತ್ತಿನ ನಾಗರಿಕರಾಗಿರಿ!!

### ತರುಣರಿಗೆ ತಿರುಳಿನ ಮಾತು!!!

### ತಾರುಣ್ಯಜೀವನ

ತಾರುಣ್ಯ ಜೀವನವು ಧನ್ಯಜೀವನವು. ಉತ್ಸಾಹ, ಧೈರ್ಯ, ಬುದ್ಧಿ, ಶಕ್ತಿ, ಈ ಶ್ರೇಷ್ಠ ದೈವೀ ಶಕ್ತಿಗಳು ಅರಳುವ ಸಮಯವೇ ತಾರುಣ್ಯವು. ತಾರುಣ್ಯವು ದಿವ್ಯ ಜೀವನದ ಹೂವು. ಈ ಹೂವು ಅರಳಿ ಸುಗಂಧವನ್ನು ಬೀರಿದರೆ ಜಗತ್ತಿನ ಎಲ್ಲ ಜೀವಾತ್ಮರುಗಳಿಗೆ ಆನಂದವುಂಟಾಗುವದು. ಗತವೈಭವದ ಸಂಸ್ಕೃತಿಸಾರವನ್ನು ಹೀರಿಕೊಂಡು ವಿಜ್ಞಾನದ ಜೀವಕಳೆಯನ್ನು ಹೊಂದಿ, ಉಜ್ವಲ ಭವಿತವ್ಯವನ್ನು ನಿರ್ಮಾಣಮಾಡುವ ಮಂಗಲ ಪ್ರಭಾತಕಾಲವೇ ತರುಣ್ಯವೆಂದು ಹೇಳಬಹುದು. ತಾರುಣ್ಯದ ಉತ್ಸಾಹ, ಜ್ಞಾನ, ವಿಜ್ಞಾನ ಶಕ್ತಿಗಳುಳ್ಳ ವೃದ್ಧರೂ ಈ

ಕಾರ್ಯ ಮಾಡಬಲ್ಲರು. ಆದರೆ ತಾರುಣ್ಯದ ತೇಜಸ್ಸ-ಓಜಸ್ಸಗಳು ಅವರಿಗೆ ಸ್ಫೂರ್ತಿಯ ಸೆಲೆಯನ್ನೂ, ಹರ್ಷ ನಿರ್ಭರತೆಯನ್ನೂ, ಅನಿಷ್ಟದಲ್ಲಿ ಇಷ್ಟವನ್ನು ಇಚ್ಛಿಸುವ ಭಾವದ ಕೆಚ್ಚನ್ನೂ ಸ್ಥಿರವಾಗಿ ಕೊಡಲಾರವು. ಮಹಾ ವಿಭೂತಿಗಳಲ್ಲಿ ಅತ್ಯಲ್ಪ ಜನರು ಈ ಮಾತಿಗೆ ಅಪವಾದವಾಗಿದ್ದರೂ ಅವರ ದೃಷ್ಟಾಂತವು ಸಾರ್ವತ್ರಿಕ ನೇಮವಾಗಲಾರದು.

## ಗಂಡಾಂತರ ನಿಶಾನೆ.

ತಾರುಣ್ಯವು ಗಂಡಾಂತರದ ನಿಶಾನೆಯೂ ಅಹುದು. ಜೀವನವನ್ನೇ ನಾಶಮಾಡುವ ಅನಿಷ್ಟ ಸಂಸ್ಕಾರಗಳಿಗೂ ಪರಿಣಾಮಗಳಿಗೂ ಒಳಗಾಗುವ ಕಾಲವೇ ತಾರುಣ್ಯವು. ತನ್ನ ಹಿತವು ಎಲ್ಲಿದೆಯೆಂಬುದನ್ನರಿಯದೇ ಪೂರ್ವಾಪರ ವಿಚಾರ ವಿಮರ್ಶೆಯಿಲ್ಲದೇ ಕಾರ್ಯದಲ್ಲಿ ದುಡುಕಿ ಕಷ್ಟಗಳಿಗೆ ಗುರಿಯಾಗುವ ವೇಳೆಯೂ ಇದೇ. ತಾರುಣ್ಯದಲ್ಲಿ ಕೆಟ್ಟ ರೂಢಿಗಳೂ, ಚಟಗಳೂ, ಸಂಸ್ಕಾರಗಳೂ, ಒಮ್ಮೆ ಹೃದಯದ ಗದ್ದುಗೆಯನ್ನು ಹಿಡಿದುಕೊಂಡು ರಾಕ್ಷಸೀ ಆಳಿಕೆಯನ್ನು ನಡಿಸಲಿಕ್ಕೆ ಹತ್ತಿದರೆ ಅಂಥ ಜೀವನವು ಹೀನ ಪಶು ಜೀವನಕಿಂತಲೂ ಕಡೆಯಾಗಿ ನಾನಾ ಚಿಂತೆಸಂತಾಪಗಳಿಗೆ ಗುರಿಯಾಗಿ ದುಃಖದಲ್ಲಿ ಪ್ರಾಣ ಬಿಡಬೇಕಾಗುವದು.

## ಸದುಪಯೋಗದಿಂದ ಸಿದ್ಧಿ.

ತಾರುಣ್ಯದ ಸದುಪಯೋಗದಿಂದ ಪರಮಾನಂದ ಸಿದ್ಧಿಯಾಗುವದರಲ್ಲಿ ಸಂದೇಹವೇ ಇಲ್ಲ. ಈ ಸೃಷ್ಟಿಯು ಪರಮೇಶ್ವರನ ಲೀಲಾ ವಿನೋದದ ಮಹಾ ಮನೆಯು. ಇದಕ್ಕೆ ಪ್ರತಿ ವರ್ಷಕ್ಕೊಮ್ಮೆ ಹೊಸ ಜನ್ಮ, ಹೊಸ ಕಳೆ, ಹೊಸ ಹರ್ಷಗಳೇ ಪ್ರಾಪ್ತವಾಗುತ್ತವೆ. ಆದರೆ ಮಾನವ ಜೀವನದಲ್ಲಿ ತಾರುಣ್ಯವು ಒಮ್ಮೆಯೇ ಪ್ರಾಪ್ತವಾಗುತ್ತದೆ. ಕಾರಣ ಶಾಶ್ವತ ತಾರುಣ್ಯ ಉಂಟಾಗುವಂತೆ ನಮ್ಮ ಜೀವನದಲ್ಲಿ ಪ್ರಕೃತಿಮಾತೆಯ ಬೋಧೆಯನ್ನು ಅಳವಡಿಸಿ ನಡೆಯಬೇಕಾಗುವದು. ವಿಶ್ವ ಚೈತನ್ಯ ಶಕ್ತಿಯಿಂದ ಸೃಷ್ಟಿಗೆ ಹೊಸ ಹೊಸ ಸೆಲೆ; ಹರ್ಷದ ಸೆಲೆ; ಆ ದಿವ್ಯ ಚೈತನ್ಯ ಶಕ್ತಿಯ ವಾಹನಗಳು ನಮ್ಮ ತನುಕರಣೇಂದ್ರಿಯ ಜೀವಾತ್ಮಗಳೆಲ್ಲ. ಆದರೆ ಹಾಗೆ ಆಗುವಂತೆ ಕಲ್ಯಾಣದ ಅನುಭವ ಮಾರ್ಗವನ್ನು ಹಿಡಿದರೆ ನಾವು ಯಾವಾಗಲೂ ತರುಣರೇ ಸರಿ. ವೃದ್ಧಾಪ್ಯದ ಆಟವು ಸಾಗಲಾರದು.

" ದುಡಿ! ದುಡಿ! " ಇದೇ ಪ್ರಕೃತಿಯ ಸಂದೇಶ. ಒಂದು ಗಿಡದ ಎಲೆಯೂ, ಹುಲ್ಲಿನ ಕಡ್ಡಿಯೂ ಅಹರ್ನಿಶ ಇದೇ ಕಾಯಕದ ಸಂದೇಶವನ್ನೇ ಮೌನವಾಗಿ ಕಾರ್ಯಮೂಲಕ ಕೊಡುತ್ತವೆ. ಈ ಸಹಜ ಕಾಯಕ ತತ್ವಾನುಸರಣೆಯು ನಮ್ಮ ತರುಣ ಜೀವನವನ್ನು ಉಪಯೋಗವುಳ್ಳವಾಗುವಂತೆ ಮಾರ್ಪಡಿಸುವದು.

ನೇಗಿಲಯೋಗಿಯಿಂದ ನಾವು ಪಾಠ ಕಲಿಯತಕ್ಕದ್ದಿದೆ. ಬಿತ್ತುವ ಹಂಗಾಮಿನಲ್ಲಿ ಬೀಜ ಬಿತ್ತಿದರೆ ಯೋಗ್ಯಕಾಲದಲ್ಲಿ ಬೆಳೆ ಬರುವಂತೆ ತಾರುಣ್ಯವೆಂಬ ಬಿತ್ತುವ ಹಂಗಾಮಿನಲ್ಲಿ ಆದರ್ಶ ಶಿಕ್ಷಕನ ಸದುಪದೇಶವೆಂಬ ಬೀಜ ಬಿತ್ತಿದರೆ ತನಗೂ ಜಗತ್ತಿಗೂ ಮೋಕ್ಷ ಮತ್ತು ಕಲ್ಯಾಣಗಳು ಪ್ರಾಪ್ತವಾಗುತ್ತವೆ. ಬೇವಿನ ಬೀಜ ಬಿತ್ತಿದರೆ ಮಾವಿನ ಹಣ್ಣು ದೊರೆಯಲಾರದು. ಕರ್ಮಕ್ಕೆ ತಕ್ಕ ಫಲ! ಸದ್ವಿಚಾರ, ಸದುಚ್ಚಾರ, ಸದಾಚರಣೆಗಳಿಂದ ಪರಮಾನಂದವೇ ಫಲ. ಆಲಸ್ಯತನವೆಂಬ ವೈರಿಯನ್ನು ಓಡಿಸಿ, ಶರೀರ, ಮನ, ಆತ್ಮಗಳ ಶಕ್ತಿಗಳನ್ನು ಅರಳಿಸಿಕೊಂಡು ವೇಳೆಯ ಸದುಪಯೋಗದಿಂದ ಪವಿತ್ರ ಆಧ್ಯಾತ್ಮಿಕ ಮತ್ತು ಭೌತಿಕ ಜ್ಞಾನ ವಿಜ್ಞಾನಗಳನ್ನು ಗಳಿಸಿಕೊಂಡರೆ ಮುಂದೆ ಬೆಳಸಿ ಬೆಳಗಿಸಿದರೆ ಅಂದರೆ ಜಗತ್ಕಲ್ಯಾಣದಲ್ಲಿ ವಿನಿಯೋಗಿಸಿದರೆ ಅದೇ ಧನ್ಯ, ತಾರುಣ್ಯ ಜೀವನ; ದಿವ್ಯ ಜೀವನ; ತಾರುಣ್ಯವೆಂಬ ವಸಂತ ಕಾಲದಲ್ಲಿ ಮೇಲಿನಂತೆ ಮಾಡದಿದ್ದರೆ ಮುಪ್ಪು ಎಂಬ ಚಳಿಗಾಲದಲ್ಲಿ ನಾಶವಾಗಬೇಕಾಗುವದು.

## ಇತರ ಸಾಧನಗಳು.

ಒಂದು ರಾಷ್ಟ್ರದ ನಾಗರಿಕನಾಗುವದಕ್ಕಿಂತ ಜಗತ್ತಿನ ನಾಗರಿಕನಾಗುವದು ಮೇಲು. ಒಂದುಮತದ, ಒಂದು ತತ್ವದ, ಒಂದು ಸಂಸ್ಕೃತಿಯ, ಒಂದು ಶಿಕ್ಷಣದ, ಒಂದು ಕಲೆಯ, ಒಂದು ಸಾಹಿತ್ಯದ ಅಭಿಮಾನ ತಾಳುವದಕ್ಕಿಂತ ಸತ್ಯ ತತ್ವದ ಅಭಿಮಾನ ತಾಳುವದು ಮೇಲು. ಸತ್ಯ ತತ್ವವು ಪೂರ್ವದಲ್ಲಿಯೂ ಇರಬಹುದು. ಅದು ಪಾಶ್ಚಾತ್ಯ ರಾಷ್ಟ್ರಗಳಲ್ಲಿಯೂ ಇರಬಹುದು. ವಿಶ್ವದ ಮಾನವರಾಗೋಣ, ವಿಶ್ವದ ಮಾನವತೆಯನ್ನು ಸಾಧಿಸೋಣ. ಹೀಗಾಗಬೇಕಾದರೆ ನಮ್ಮ ಧರ್ಮ, ಸಂಸ್ಕೃತಿ ಸಾಹಿತ್ಯ ಮುಂತಾದವುಗಳಲ್ಲಿಯ ಸಾರವನ್ನು ಮೊದಲು ಗ್ರಹಿಸೋಣ.

ಪ್ರಗತಿ ಶೀಲರಾಗಿ ಸ್ವೀಕರ ಗ್ರಹಿಸೋಣ. ಸಮಾನತೆ, ಸ್ವಾತಂತ್ರ್ಯ, ಬಂಧು ಭಾವನೆಗಳನ್ನು ಕೊಡುವ ಬೇಕಾದ ತತ್ವಗಳನ್ನು ಸ್ವೀಕರಿಸೋಣ. ಭಾರತದಲ್ಲಿದ್ದು ವಿಶ್ವದ ನಾಗರಿಕರಾಗಲಿಕ್ಕೆ ಶಕ್ಯವಿದೆ. ಸತ್ಯತತ್ವಾಭಿಮಾನಿಯಾಗಿ ಜಗತ್ತಿನ ಧರ್ಮಗಳನ್ನು ಪರಿಶೀಲಿಸಲಿಕ್ಕೆ ಬರುವದು.

ಈ ಉನ್ನತ ಮನೋಭಾವ ಬರಬೇಕಾದರೆ ಮಹಾನುಭಾವರ ಸಂಗ ಬೇಕು. ಸತ್ಯತತ್ವಾಭಿಮಾನದಿಂದ ಧರ್ಮದ ಅಭ್ಯಾಸ ನಡಿಸೋಣ. ಉನ್ನತಿಯಾಗುವಂತೆ ಮನರಂಜನೆ ಮಾಡಿಕೊಳ್ಳೋಣ. ವಿಜ್ಞಾನ ತತ್ವಜ್ಞಾನಗಳ ದಾಂಪತ್ಯವೇ ನಮ್ಮ ಕಾರ್ಯಗಳ ಉಸಿರಾಗಿರಲಿ. ದೇಹಬಲ, ಶೀಲಬಲಗಳನ್ನು ಜನಸೇವೆಯಲ್ಲಿ ಸವಿಸೋಣ. ಉದ್ಯೋಗ ಗೌರವ, ಸೇವೆ, ಶಾಂತಿ, ಸಮಾನತೆ, ಅಭ್ಯಾಸ ಇವುಗಳಿಂದ ಸಮಾಜಸೇವೆ ಮಾಡೋಣ. ಜಾಗತಿಕ ಸಮಾಜ ರಚನೆಗೆ ಸಹಾಯಕರಾಗೋಣ. ಇದೆಲ್ಲಕ್ಕೂ ಪರಮೇಶ್ವರನ ಕಾರುಣ್ಯ ಇರಲಿ. ಶರಣರ, ಮಹಾನುಭಾವರ, ಮಹಾತ್ಮರ ಆದರ್ಶ ಕಣ್ಣು ಮುಂದೆ ಇರಲಿ.

---

## ಅಷ್ಟಾವರಣ.

(ಲೇಃ– ಶ್ರೀ ಜ. ಪ ಚನ್ನಬಸವರಾಜ ದೇಶಕೇಂದ್ರ ಸ್ವಾಮಿಗಳವರು,
ಶ್ರೀ ನಿಡುಮಾಮಿಡಿ ಜಗದ್ಗುರು ಶ್ರೀಶೈಲ
ಸೂರ್ಯಸಿಂಹಾಸನ ಗೂಳೂರು)

---

ಭವ ಬೇಗೆಯು ನಂದಿಸದೆ, ಭವತೃಷೆಯು ಹಿಂಗಿಸದೆ, ಭವಭಾಷೆಯು ಭಂಗಿಸದೆ, ವೇದನ ನಿರ್ವೇದನವಾಗಿಸದೆ, ಹರಣ ಶಿವಹರಣವಾಗಿಸದೆ, ಕರಣ ಕೊರಡು ಕೊನರಿಸದೆ ಪಾದೋದಕ ಪಾವನೋದಕ ವಾಗುವ ದೇನಯ್ಯ ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ ವಾಸ ಕುಮಾರೇಶ್ವರ?

ಹಸಿವು ಹಿಂಗಿಸದೆ, ಹುಸಿಯು ಹುದುಗಿಸದೆ, ಪುಸಿಯು ಪರಮಾರ್ಥಗೊಳಿಸದೆ, ಮಾನಸಿಕ ಪ್ರಸನ್ನತೆಯು ಪ್ರಸಾದಿಸದೆ, ನಿತತೃಪ್ತಿಯನ್ನೈದಿಸದೆ, ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವೆಂತಹುದಯ್ಯ ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶವಾಸ ಕುಮಾರೇಶ್ವರ.

ಮನ ಕೋಕಿಲೆಯೆ, ಈ ಸಂಸಾರ ವಸಂತೋದಯಕೆ ಮರುಳಾಗಿ ಕುಹೂ ಕುಹೂ ಎಂದು ಕೂಗದಿರು. ಮಾರವರ್ಣನೆಯ ಮಾಡದಿರು. ಮರ್ತ್ಯ ಸುಖಾಭಾಸಕೆ ಬಾಯ್ನೀರು ಬಿಡದಿರು. ಮಹಾದೇವನ ನೆನಹಿಂದ ಹೊರಗಾಗದಿರು. ಈ ಕಲುಷ ಕರ್ಮವನು ಸೃಷ್ಟಿ ಸೌಂದರ್ಯದ ಪ್ರತಿನಿಧಿಯಾದ ಪ್ರಾಕೃತ ಕೋಕಿಲೆಗೆ ಬಿಟ್ಟುಬಿಡು. ನಿನ್ನ ಸೃಷ್ಟಿಯೆ ಬೇರೆ. ನಿನ್ನ ದಿವ್ಯ ಸೌಂದರ್ಯದ ವಸಂತೋದಯವೆ ಬೇರೆ. ನಿನ್ನ ಆರಾಧ್ಯ ಮೂರ್ತಿ ಮಾರನಲ್ಲ. ಮಾರಹರ. ಇದೊ ಕೇಳು, ನಿನ್ನ ಆ ದಿವ್ಯಸೃಷ್ಟಿ ಸೌಂದರ್ಯ ವಿವರವ. ಭಕ್ತನ ಅಂಗವೆ ಚಿದ್ಭೂಮಿ. ಪಾದೋದಕವೆ ಪರಮಾರ್ಥವೃಷ್ಟಿ. ಭಕ್ತಿ ಯೌವ್ವನೋದಯವೆ ವಸಂತೋದಯ. ಗುರುವೆ ಮಾಮರ. ಲಿಂಗ ಜಂಗಮರೆ ಚಿಗುರು. ಈ ಚಿಗುರನು ಪ್ರಸಾದವಾಗಿ ಸೇವಿಸು. ಭಸ್ಮದ ಬೆಳಗೆ ಬೆಳದಿಂಗಳು. ಎಲೋ ಕೋಗಿಲೆಯೆ ನಿನ್ನ ಆ ಚಿದಕ್ಷಿಗಳೆ ರುದ್ರಾಕ್ಷಿಗಳು. ನಿಟ್ಟಿಸು ನಿಜ ಸೌಂದರ್ಯವ. ಓಂಕಾರವೆ ನಿನ್ನ ನಿಜವಾದ ಕೂಗು. ತೆರೆ ಕಣ್ಣ; ತೋರು ಕೊರಳು. ಎಲ್ಲಿ? ಒಮ್ಮೆ ಆ ಓಂಕಾರನಾದವನು ಮಂಜುಳವಾಗಿ ಮಾಡು. ಕೈಗೂಡುವದು ಕೋರಿಕೆ. ಕೊನೆಗೂಡುವುದು ನಿನ್ನ ಬಯಕೆ. ಕೃತಾರ್ಥವಾಗುವುದು ನಿನ್ನ ಕೊರಳು. ಪರಮಾರ್ಥವಪ್ಪುದು ನಿನ್ನ ಬಾಳು. ಇದು ಕಾರಣ ಮಾರನ ಮನೆ ತ್ಯಜಿಸು. ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶವಾಸ ಕುಮಾರೇಶ್ವರನ ಅಷ್ಟಾವರಣಾಂಗ ಮಾಮನೆಯಲಿ ವಾಸಿಸು. ಆಗ ಪರಪುಟ್ಟನೆಂಬುದು ಸಾರ್ಥಗವಪ್ಪುದು ಮನವೆ.

## ಪಂಚಾಚಾರ.

ಅಷ್ಟಾವರಣ ಅಂಗವಾದರೆ ಪಂಚಾಚಾರಗಳೆ ಪಂಚಪ್ರಾಣಗಳು ನೋಡಾ ಲಿಂಗಭಕ್ತನಿಗೆ. ಪ್ರಾಣಗಳ ಪರಿತ್ಯಜಿಸಿ ಬದುಕುವ ಪರಿಯಿನ್ನೆಂತು ಹೇಳಾ! ಚರಾಚರ ಪ್ರಾಣಿಗಳೆ ಲಿಂಗಜಂಗಮಗಳು. ಈ ಲಿಂಗ ಜಂಗಮದಲ್ಲಿ ಆದರಾಭಿಮಾನವುಳ್ಳಡೆ ಲಿಂಗಾಚಾರ. ಸಹಜ ಮತ್ತು ಸರಳ ವೃತ್ತಿಯಿಂದ ಸತ್ಯ ಮತ್ತು ಶುದ್ಧ ಕಾಯಕಗಳಿಂದ ವರ್ತಿಸುವುದೇ ಸದಾಚಾರ. ಸಂತರನ್ನು ಶಿವಶರಣರನ್ನು ಸರ್ವಜನ ಸೇವಾನಿರತರನ್ನು ಶಿವಾಂಶಕರೆಂದು ಭಾವಿಸುವುದೇ ಶಿವಾಚಾರ. ಗುಣಗ್ರಾಹಿಯಾಗಿ ಗಣ್ಯರಾದ ಶ್ರೀಗುರು ಲಿಂಗಜಂಗಮರ ನಿರ್ನಿಮಿತ್ತ ನಿಂದೆ

ಯನು ಸಹಿಸದಿರುವುದೆ ಗಣಾಚಾರ. ಜಾತಿಸೂತಕಗಳನಳಿಸಿ ಕುಲಗೋತ್ರಗಳ ತ್ಯಜಿಸಿ ಶ್ರೀಗುರು ಲಿಂಗ ಜಂಗಮ ಸಂಗ ಶುಶ್ರೂಷೆಗಳಿಂದಾಚರಿಸುವುದೆ ಭೃತ್ಯಾಚಾರ. ಈ ಪಂಚಾಚಾರಗಳನಾಚರಿಸುವವನೆ ಪಂಚಪ್ರಾಣವಂತನು. ಪರಮ ಲಿಂಗವಂತನು ಕಾಣಾ ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶವಾಸ ಕುಮಾರೇಶ್ವರ.

ಹಂಸವೆ, ಜೀವಹಂಸವೆ, ರಾಜಹಂಸವೆ, ಇದೇನು ನಿನ್ನ ಪರಿಭವ? ಇಂತೇಕೆ ಬಕನಂತೆ ಬಳಲುವೆ? ಏತಕ್ಕೆ ಕಿರಿಕೊಳಕ್ಕೆಳಸುವೆ? ನಿನ್ನ ತಾವದಲಿ ನೀನಾಡಬಾರದೆ? ನಿನ್ನೊಡೆಯನೊಡಗೂಡಬಾರದೆ? ಇದೇನು, ಪಂಚಾಚಾರವೆಂಬ ಸ್ವಚ್ಛ ಸರೋವರದಲ್ಲಾಡದೆ ಈ ಪ್ರಪಂಚಾಚಾರ ಕೊಳಕು ಕೊಳದಲ್ಲಿ ಅಲೆದಾಡುತಿಹೆ. ಪ್ರಪಂಚ ಪರಮಾರ್ಥಗಳೆಂಬ ನೀರಕ್ಷೀರ ವಿವೇಚನೆಯು ಕಳೆದುಕೊಂಡ ಪರಿಯಿದೇನು ಹೇಳಾ! ಹಂಸಕ್ಷೀರ ನ್ಯಾಯವು ನಿನ್ನ ಧರ್ಮವಲ್ಲವೆ ಹೇಳಾ! ಪ್ರಪಂಚಾಚಾರ ನೀರನು ಬೇರ್ಪಡಿಸಿ ಪರಮಾರ್ಥ ಪಂಚಾಚಾರ ಕ್ಷೀರವನು ಪಾನಮಾಡಬಾರದೆ? ಅಮೃತವನುಂಡು ಅಮರನಾಗಬಾರದೆ? 'ಹಂಸೋ ನಾಮ ಸದಾಶಿವಃ' ಎಂಬುದನು ಮರೆತೆಯಾ? ಸೋಹಂ ದಾಸೋಹಂ ಎಂದೋದದೆ 'ಅಹಂ ಸಃ' ಎಂದೋದಿ ಕೆಡುವ ಕೇಡಿದೇನು ಹೇಳಾ! ಶ್ರೀ ನಿಡುಮಾಮಿಡಿ ಶ್ರೀಗಿರಿ ಶೂನ್ಯ ಸಿಂಹಾಸನಾಧೀಶವಾಸ ಕುಮಾರೇಶ್ವರ ಈ ಜೀವ ಹಂಸನ ಹಂ-ಭಾವವನು ಸದ್ಭಾವವಾಗಿಸಿ ಸಂರಕ್ಷಿಸು ಕೃಪೆಗೈದು.

(ಮುಂಬಪ್ಪುದು)

---

# ಕಣ್ಣಪ್ಪ ಚರಿತಮ್.

(ಅನುವಾದಕಃ— ಶ್ರೀಯುತ ವೆಂಕಟರಾಯಾಚಾರ್ಯ ಸುರತ್ಕಲ್
ದಕ್ಷಿಣ ಕನ್ನಡ ಜಿಲ್ಲೆ.)

[ ಅಯೋಧ್ಯೆಯ 'ಸಂಸ್ಕೃತ, ಕಾರ್ಯಾಲಯದಿಂದ ಪ್ರಕಟವಾದ ರುಕ್ಮಾಂಗದ ಚಂಪೂ ಎಂಬ ಸಂಗ್ರಹಾತ್ಮಕದಲ್ಲಿದ್ದುದರ ಅನುವಾದವಿದು. ಆದರ ಕವಿಗಳು (ತ್ರಿಚಿನಾಪಳ್ಳಿ) ತಮಿಳನಾಡವರು. ಅದು ಕಾರಣ, ಅಲ್ಲಿಯಂತೆ ವೀರಶೈವ ಪಂಥದ ಅರುವತ್ತು ಮೂರು ಪುರಾತನರಲೊಬ್ಬನಾದ ಕಣ್ಣಪ್ಪನ ಚರಿತೆಯನ್ನು— ಹರಿಹರನ ಕೃತಿ (ಸಾಹಿತ್ಯ ಚಿತ್ರಗಳು ಶ್ರೀ. ಗುಂಡಪ್ಪ) ಗಿಂತ ವಿಶೇಷತರವಿದ್ದುದರಿಂದ—ಇಲ್ಲಿ ಅನುವದಿಸಿದೆ. ]

ಸುವರ್ಣ ಮುಖರೀ ನದಿಯ ದಡದಲ್ಲಿ ವೇಣು ಪರ್ವತವು ಇದೆ. ಅದರ ತಪ್ಪಲ ಗೋಧಪುರದಲ್ಲಿ ನಾಗನೆಂಬ ಬೇಡನು ಇದ್ದನು. ಅವನಿಗೆ ದತ್ತಾ ಎಂಬ ಹೆಂಡತಿ.

ಬಹುಕಾಲ ಮಕ್ಕಳಾಗದಿರಲು, ಪಕ್ಕಣದ ಕೊನೆಗಿರುವ ವಲ್ಲೀದೇವಿಗೆ ಹರಕೆ ಹೊತ್ತು ಆ ದೇವೀ ಪ್ರಸಾದದಿಂದ 'ಧೀರ'ನೆಂಬ ಮಗನನ್ನು ಪಡೆದನು. ಆ ಬಾಲಕಗೆ 'ಗಾಢ' 'ನಾಣ'ರೆಂಬೀರ್ವರು ಗೆಳೆಯರು. ಒಮ್ಮೆ ಈ ಮೂವರು ಒಟ್ಟಿಗೆ ಬೇಟೆಗಾಗಿ ಕಾಡಿಗೆ ಹೋದರು. ಅಲ್ಲಿ ಒಂದು ಜಿಂಕೆಯ ಬೆನ್ನಟ್ಟಲು, ಅದು ಆ ಕಾಡಿನಲ್ಲಿ ಅಡಗಿತು.

ಇತ್ತ ಧೀರನಿಗೆ ಬಾಯಾರಿಕೆಯಾಗಿ, ಗಾಢನೊಂದಿಗೆ ಬಳಿಯ ಸುವರ್ಣಮುಖರೀ ಹೊಳೆಗೆ ಹೋದನು. (ನಾಣನನ್ನು ಬೇಟೆಗಾಗಿ ನಿಲ್ಲಿಸಿದ್ದರು) ಶ್ರೀ ಕಾಳಹಸ್ತೀಶ್ವರ ಬಳಿಯಾ ಹೊಳೆ ನೀರು ಕುಡಿದು ತಟದಲ್ಲಿ ತಿರುಗಾಡುತ್ತಾ ಆ ಗಿರಿ ಶಿಖರದಲ್ಲಿದ್ದ ನಾಗಕನ್ಯೆಯರ ರಾಗಯುಕ್ತ ಪದ್ಯ ಕೇಳಿ ಹಿಂಬಾಲಿಸಿ ಹೋಗಿ ಶ್ರೀದೇವನನ್ನು ಕಂಡನು.

ಧೀರಃ— (ಲಿಂಗದ ತಲೆಯಲ್ಲಿ ಹೂವನ್ನು ಕಂಡು) ಇದಾರು ಪೂಜಿಸಿದುದು ?

ಗಾಥಃ – ನಾನು ಹಿಂದೊಮ್ಮೆ ನಿನ್ನ ತಂದೆಯೊಂದಿಗೆ ಬೇಟೆಗೆ ಬಂದಾಗ ನೋಡಿದ್ದೆನು—ಮೂರೆಳೆಯ ನೂಲನ್ನು ಎಡಹೆಗಲಲ್ಲಿ ಹಾಕಿಕೊಂಡ ಅದೋರ್ವನು ದಿನಾಲೂ ಇಲ್ಲಿಗೆ ಬಂದು ಈ ನದಿಯ ನೀರಿಂದ ಲಿಂಗ ತೊಳೆದು ಹೂವೇರಿಸಿ ಅನ್ನ ಪಾತ್ರೆಯನ್ನು ಮುಂದಿಟ್ಟು ಅದೇನೋ ಗುಣುಗುಟ್ಟುತ್ತಾ ಬಳುಗೈಯನ್ನು ದೇವನಿಗೆ ತೋರಿಸಿ ಆ ಪಾತ್ರೆಕೊಂಡು ಮನೆಗೆ ಹೋಗುತ್ತಿದ್ದನು. ಹಾಗೂ ಇದೊಂದು ದೊಡ್ಡ ದೈವವು, ನಿನ್ನ ನೆಳಲನ್ನೂ ಸಹಿಸದು. ಆ ಕಾರಣ ಅದರ ಗೋಜಿ ಬೇಡ, ನಮ್ಮ ಮನೆಗೆ ಹೋಗುವಾ.

ಧೀರಃ— ಈ ದೈವವು ಕಾಡಾಡಿಗಳಾದ ನಮ್ಮಗಳಿಗೆ ಅಗತ್ಯವಿದ್ದುದು. ಇದರ ಪೂಜೆ ನನಗೆ ಮೆಚ್ಚಿದೆ. ನಾನು ಊರಿಗೆ ಬಾರೆನು, ಎನ್ನುತ್ತಾ ಅಲ್ಲೇ ತಂಗಿದನು.

ಅತ್ತ ಗಾಥನು ನಾರ್ಣನೊಂದಿಗೆ ಊರಿಗೆ ಹೋಗಿ ಇದನ್ನೆಲ್ಲಾ ಅವನ ತಂದೆಗೆ ತಿಳುಹಲು, ನಾಗನು ತನ್ನ ಮಗನಲ್ಲಿ ವಿರಸನಾದನು.

ಇತ್ತ ಧೀರನು ಲಿಂಗದೊಡನೆ— ಈ ಭಯಂಕರ ಕಾಡಿನಲ್ಲಿ ಒಬ್ಬಂಟಿಗನಾಗಿ, ಅದಾರೂ ಸೇವಕರಿಲ್ಲದೆ, ಹೇಗೆ ಜೀವಿಸುವೆ? ಈ ನಾನು ನಿನ್ನ ಚಾಕರಿಗಿರುವೆನು— ಎನ್ನುತ್ತಾ ಕಾಡಿನ ಮೃಗಗಳನ್ನು ಕೊಂದು ಆ ಮಾಂಸವನ್ನು ಬೇಯಿಸಿ ಮೊದಲಾಗಿ ತಾನು ರುಚಿನೋಡಿ ಒಳ್ಳಿತಾದುದನ್ನು ಬಾಳೆ ಯೆಲೆಯಲ್ಲಿ ಬಡಿಸುತ್ತಿದ್ದನು. ಹಾಗೂ ಮೆಟ್ಟು ತೊಟ್ಟ ಕಡೆಗಾಲಿಂದ ಲಿಂಗದ ತಲೆಯ ನಿರ್ಮಾಲ್ಯವನ್ನು ಹೋಗಿಸಿ ಬಾಯಿ ಮುಕ್ಕಳಿಸಿದ ನೀರಿಂದ ತೊಳೆದು ತನ್ನ ತಲೆಯ ಹೂವಿಟ್ಟು ಆ ಬೆಯಿಸಿ (ತಿಂದುಳಿದ) ಮಾಂಸವನ್ನು ಲಿಂಗಕ್ಕೆ ಬಾಯೆಗ್ಗಿಡುತ್ತಿದ್ದನು.

ಲಿಂಗವು ಅದನ್ನು ತಿನ್ನುವುದೇ? ಆ ಭಕ್ತನಿಗೆ ಬಾಣದಿಂದ ಚುಚ್ಚಿದಂತೆ ಮನಃಖೇದವಾಯಿತು.— ಇಗೋ, ಅನೇಕ ಮೃಗ ಪಕ್ಷಿಗಳ ಮಾಂಸವಿದು, ಕೊಳ್ಳು. ಹಾಗೂ ನೀನು ಉಣ್ಣುವುದೇ ಇಲ್ಲವಾದರೆ ಇದೇ ಬೆಟ್ಟತುದಿಯಿಂದ ಕೆಳಕ್ಕೆ ಧುಮುಕುವೆ- ಎಂಬಿತ್ಯಾದಿ ಬೊಬ್ಬಿಟ್ಟನು.

ದೇವನು ಭಕ್ತಾಧೀನನಷ್ಟೆ! ಆ ದೇವನು ಅದನ್ನು ತಿಂದನು. ಇದು ಒಳ್ಳಿತಾಗಿದೆಯೋ? ಎಂದು ಪ್ರಶ್ನಿಸಲು ಹೌದೆಂಬಂತೆ ದೇವನ

ತಲೆಯುಲುಗಾಡಿತು. ಆ ಭಕ್ತನ ಪಾದಪ್ರಹಾರವನ್ನು ತನ್ನ ಮಗನಾದ ಷಣ್ಮುಖನ ಆಟದಂತೆಯೂ, ಬಾಯ್ನೀರನ್ನು ಗಂಗೋದಕವೆಂದೂ, ತಲೆ ಹೂವನ್ನು ಹೇಮಪುಷ್ಪದಂತೆಯೂ ಆಹಾರವನ್ನು ಹವಿಸ್ಸೆಂದೂ ದೇವನು ಬಗೆದನು. ಧೀರನು ರಾತ್ರಿಯಲ್ಲಿ ಧನುರ್ಧಾರಿಯಾಗಿ ದೇವನ ಕಾವ ಲಿದ್ದನು. ಹಗಲು ಮಾಂಸಕ್ಕಾಗಿ ಕಾಡಿಗೆ ಹೋಗುವನು.

ಇತ್ತ 'ಶಿವಕೋಶ'ನೆಂದು ಹೆಸರುಳ್ಳ ಶಿವಬ್ರಾಹ್ಮಣನು ದೇವಳ ದಲ್ಲಿ ಇದೆಲ್ಲಾ ಕಂಡು ಹೊಟ್ಟೆಬಡಿಯುತ್ತಾ— ಇದನ್ನು ಮಾಡಿದವಗೆ ಇದರಂತೆ ಯಮನು ಶಿಕ್ಷಿಸಲಿ, ಎಂದು ಶಪಿಸುತ್ತಾ ಸಂಪ್ರೋಕ್ಷಣಾದಿ ಪೂಜೆ ಮಾಡಿ ಮನೆಗೆ ಹೋದನು. ಧೀರನೂ ಆ ರಾತ್ರೆಗೆ ಬಂದು ಪೂರ್ವೋಕ್ತ ಪೂಜೆ ಮಾಡಿದನು. ಹೀಗೆ ಹಗಲು ಬ್ರಾಹ್ಮಣ ಪೂಜೆ, ರಾತ್ರಿ ಬೇಡನ ಉಪಚಾರವಿದ್ದು ಆರು ದಿನಗಳು ಕಳೆದುವು.

ಆ ಮೇಲೊಮ್ಮೆ ಬ್ರಾಹ್ಮಣನು ಬಂದು ಕೋಪಗೊಂಡು ಪ್ರತಿದಿನವು ಹೀಗೆ ಆದಾರು ಮಾಡುವರು? ಇರಲಿ, ನಾಳೆ ಅವನನ್ನು ಕೊಲ್ಲು ವೆನು— ಎಂದು ಪ್ರತಿಜ್ಞೆಗೈದು ಮನೆಗೆ ಹೋದನು.

ಆ ರಾತ್ರೆ ಬ್ರಾಹ್ಮಣಗೆ ಕನಸಿನಲ್ಲಿ ದೇವನು ಬಂದು—ಧೀರನೆಂಬ ಬೇಡೊಬ್ಬನು ನನ್ನ ಭಕ್ತನು. ಅವನಲ್ಲಿ ನನಗೆ ಬಹಳ ಪ್ರೀತಿಯಿದೆ. ಹಾಗೂ ಅವನ ಧೀರಭಕ್ತಿಯನ್ನು ನಾಳೆ ನಿನಗೆ ತೋರಿಸುವೆನು ಎಂದು ಹೇಳಿ ಕಾಣದಾದನು.

ಮರುದಿನ ಬ್ರಾಹ್ಮಣನು ನಿತ್ಯದಂತೆ ದೇವರನ್ನು ಪೂಜಿಸಿ, ಅಲ್ಲೇ ಒಂದೆಡೆ ಅಡಗಿದನು. ರಾತ್ರಿಗೆ ಧೀರನು ಬಂದು ದೇವನ ಎಡಗಣ್ಣಲ್ಲಿ ನೆತ್ತರು ನೋಡಿ ದೇವನಿಗೆ ಕಣ್ಣು ರೋಗವಿದೆ, ಎಂದು ತನ್ನ ಕಣ್ಣು ಕಿತ್ತು ಅಲ್ಲಿಗೆ ಜೋಡಿಸಿದನು. ತಿರುಗಿ ಬಲಗಣ್ಣೂ ಹಾಗಾಗಲು ತನ್ನ ಉಳಿದೊಂದು ಕಣ್ಣನ್ನು ಕೀಳಲುಜ್ಜುಗಿಸುತ್ತಾ ಎರಡೂ ಕಣ್ಣು ಕಳ ಕೊಂಡರೆ ಕಾಣುವುದೆಂತೆಂದು ಬಗೆದು ದೇವನ ಕಣ್ಣಿಗೆ ಕಾಲ ಹೆಬ್ಬೆರ ಳನ್ನು ಒತ್ತಿಟ್ಟನು. .. .......

ಇನ್ನು ಕಥಾಪೂರ್ತಿಯನ್ನು ವಾಚಕರು ಇತರತ್ರ ತಿಳಿದುಕೊಳ್ಳ ಬೇಕೆಂದು ವಿನಂತಿಸುವೆವು.

---

## ಆರ್ಯ- ದ್ರಾವಿಡ-ಶಿವಶರಣ ಸಂಸ್ಕೃತಿಗಳ ತಾರತಮ್ಯ.

# ಆರ್ಯ ಸಂಸ್ಕೃತಿ.

( ಲೇಃ— ವೇ॥ ಪುರಾಣಿಕ ಬುದ್ಧಯ್ಯ ಸ್ವಾಮಿಗಳು. )

ಆರ್ಯರು ಇಲ್ಲಿಗೆ ವಾಯುವ್ಯದಿಕ್ಕಿನಿಂದ ಬರುವಾಗ್ಗೆ ಸಂಗಡ ತಮ್ಮ ಪವಿತ್ರಗ್ರಂಥಗಳಾದ ವೇದಗಳನ್ನು ತಂದರೆಂಬುವದು ಎಲ್ಲರ ಮನಗಂಡ ಮಾತಾಗಿದೆ. ಇವು ಋಗ್, ಯಜುಸ್, ಸಾಮ ಮತ್ತು ಅಥರ್ವಣ ಎಂದು ನಾಲ್ಕು ಇದ್ದು ಇವುಗಳೊಳಗಿನ ಮೊದಲನೆಯದಾದ ಋಗ್ವೇದವೇ ಎಲ್ಲಕ್ಕೂ ಹಳೆಯದೆಂದು ಬಲ್ಲವರು ಹೇಳುವರು. ಬಂಗಾಲದಲ್ಲಿಯ ಸಂತಾಳರೂ ಮಧ್ಯಪ್ರಾಂತದಲ್ಲಿಯ ಗೊಂಡರೂ ನೀಲಗಿರಿಯ ಪರ್ವತದಲ್ಲಿಯ ತೋಡಾಜನರೂ ಮತ್ತು ಸಾತಪುಡಾದಲ್ಲಿಯ ಭಿಲ್ಲರೂ ಮೊದಲಾದವರು ಈಗ್ಯೂ ಇಷ್ಟು ಕಾಡು ಸ್ಥಿತಿಯಲ್ಲಿರುವದನ್ನು ನಾವು ಕಾಣುತ್ತೇವೆ. ಅಂದಮೇಲೆ ಆರ್ಯರ ಪ್ರವೇಶದಕಾಲಕ್ಕೆ ಘೋರಾರಣ್ಯಗಳಲ್ಲಿಯೂ ಮತ್ತು ಗುಡ್ಡಗಾಡು ಪ್ರಾಂತಗಳಲ್ಲಿಯೂ ಗುಂಪು ಗುಂಪಾಗಿ ತಿರುಗಾಡುವ ಕಪ್ಪು ಬಣ್ಣದ ಕೀಳು ಕಾಡು ಜನರೇ ಇವರ ಕಣ್ಣಿಗೆ ಮೊದಲು ಕಂಡದ್ದರಲ್ಲಿ ಏನೂ ಆಶ್ಚರ್ಯವಿಲ್ಲ. ಈ ಕಾಡು ಜನರ ಮತ್ತು ಆಗಿನ ಆರ್ಯರ ಆಹಾರವು ಮಾಂಸವೇ. ಆದದ್ದರಿಂದಲೂ ಇದರ ಸಂಪಾದನೆಗಾಗಿ ಉಭಯತರ ವೃತ್ತಿಯು ಒಂದೇಯಾಗಿದ್ದುದರಿಂದಲೂ ಮತ್ತು ಬಟ್ಟೆಬರಿಗಳು ಒಂದೇ ಮಾದರಿಯವುಗಳಾದದ್ದರಿಂದಲೂ ಇವರಲ್ಲಿ ಎಳ್ಳಷ್ಟು ಭೇದ ತೋರದಿದ್ದರೂ ಕಾಡುಜನರು ಕಪ್ಪು ಮತ್ತು ಗಿಡ್ಡರಿದ್ದು ಆರ್ಯರು ತಾವು ಎತ್ತರ ನಿಲುವಿಕೆಯುಳ್ಳವರೂ ಮತ್ತು ಕೆಂಪು ಬಣ್ಣದವರೂ ಆದ್ದರಿಂದ ಶ್ರೇಷ್ಠರೆಂದು ಭಾವಿಸಿಕೊಂಡಿದ್ದರು. ತಮ್ಮ ಸ್ತ್ರೀಯರನ್ನು ಸಂಗಡ ತಂದಿದ್ದರಿಂದ ಈ ಕಾಡು ಜನರ ಕೂಡ ಅನೇಕ ವರ್ಷ ಬಾಳುವೆ ಮಾಡಿದರೂ ಅವರ ಕೂಡ ಇವರು ಶರೀರ ಸಂಬಂಧ ಮಾಡಲಿಲ್ಲ.

ಇವರ ಸತ್ಯತೆಗಾಗಿ ಅನೇಕ ಉದಾಹರಣೆಗಳನ್ನು ಕೊಡಬಹುದು. ಆದರೆ ಒಂದೆರಡನ್ನಷ್ಟೇ ಇಲ್ಲಿ ಉದಹರಿಸುತ್ತೇವೆ. (೧) ರಾವಣನ ತಂಗಿಯಾದ ಶೂರ್ಪನಖಿಯು ತನ್ನನ್ನು ಲಗ್ನ ಮಾಡಿಕೋ ಎಂದು ಬಿನ್ನ

ವಿಸಲು ಅವರು ಆದಕ್ಕೆ ಒಡಂಬಡದೆ ಆ ಅಬಲೆಯ ಮೂಗು ಮೊಲೆಗಳನ್ನು ಕೊಯ್ದು ಬಿಟ್ಟರಂತೆ. (೨) ರಾವಣನು ಸ್ವಾಭಾವಿಕವಾಗಿ ಸಿಟ್ಟಿನಿಂದ ಸೀತಾದೇವಿಯನ್ನು ಅಪಹರಿಸಿ ತನ್ನ ಅಧೀನದಲ್ಲಿಟ್ಟಿದ್ದರೂ ಅಸಹಾಯ್ಯಳಾದ ಆ ಅಬಲೆಯನ್ನು ಬಲತ್ಕಾರದಿಂದ ಭ್ರಷ್ಟಗೊಳಿಸಲಿಲ್ಲ. ಈ ಎರಡೂ ಸಂಗತಿಗಳನ್ನು ಆರ್ಯರ ಗ್ರಂಥವಾದ ರಾಮಾಯಣದಲ್ಲಿಯೇ ವಾಚಕರು ಕಾಣಬಹುದು. ಇದರಿಂದ ಓದುಗರಿಗೆ ರಾಮಾಯಣ ಗ್ರಂಥದ ನಿರ್ಮಾಣಕಾಲಕ್ಕೂ ತಮ್ಮಷ್ಟಕ್ಕೆ ತಾವೇ ಶ್ರೇಷ್ಠರೆಂದೆಂದುಕೊಳ್ಳುವ ಆರ್ಯರ ಕಾಡು ಸ್ಥಿತಿಯು ಭಾರತದ ಗುಡ್ಡಗಾಡದಲ್ಲಿ ವಾಸಿಸುವ ಜನರಿಗಿಂತಲೂ ಬಲು ಕೀಳ ತರಗತಿಯದಿತ್ತೆಂದು ಅನಿಸದೆ ಇರಲಾರದು. ಆಕ್ರಮಣ ಮಾಡುತ್ತ ಆರ್ಯರು ಮುಂದಕ್ಕೆ ಸಾಗಿ ಬರುತ್ತಿರಲಾಗಿ ಅವರಿಗೆ ಭಾರತದ ಮೂಲನಿವಾಸಿಗಳಾದ ದ್ರಾವಿಡ ಜನಾಂಗದವರ ಸಂಸರ್ಗವು ಮತ್ತು ಸಹವಾಸವು ಹೆಚ್ಚಿಗೆ ಆಗಹತ್ತಿತು. ಇದೀಗ ದ್ರಾವಿಡರ ಸಂಸ್ಕೃತಿಯನ್ನು, ಅವರು ಆರಾಧಿಸುವ ದೇವತೆಗಳನ್ನು, ಅವರ ಸಂಸ್ಕಾರ ಮತ್ತು ಪೂಜಾದಿಗಳ ರೀತಿಯನ್ನು ಮತ್ತು ನೈಷ್ಠಿಕ ಭಕ್ತಿಯನ್ನು ಆರ್ಯರು ಕಂಡು ಬೆರಗಾಗಿ ಅವರಿಗೆ ಆರ್ಯರು ಶರಣುಬರತೊಡಗಿದರು. ಈ ಕಾರ್ಯವು ಮೊಟ್ಟಮೊದಲು ವಿಜಾಪುರ ಜಿಲ್ಹೆಯೊಳಗಿನ ಮಹಾಕೂಟದಲ್ಲಿ ಆಗಿರಬಹುದೆಂದು ನಮ್ಮ ತಿಳುವಳಿಕೆಯಿದೆ. ಬರಬರುತ್ತ ಆರ್ಯರು ತಾವು ಪೂಜಿಸುವ ನೈಸರ್ಗಿಕ ವಸ್ತುಗಳಾದ ಸೂರ್ಯಚಂದ್ರ, ವರುಣ, ವಾಯು, ಅಗ್ನಿ, ಇಂದ್ರ ಮುಂತಾದವುಗಳು ದ್ರಾವಿಡರ ಆರಾಧ್ಯ ವಸ್ತುಗಳಿಗಿಂತಲೂ ಕೀಳೆಂದು ತಿಳಕೊಂಡದ್ದನ್ನು ಅರಿತು, ಅವರ ಉನ್ನತಿಯ ಸಲುವಾಗಿ ದ್ರಾವಿಡರು ಮುಂದು ಬಂದು ಬೋಧೆ ಮಾಡತೊಡಗಿದರು.

ಹೀಗೆ ದ್ರಾವಿಡರು ಆರ್ಯರಿಗೆ (೧) ಕಾಮಿಕ (೨) ಯೋಗಜ (೩) ಅಚಿಂತ್ಯ (೪) ಕಾರಣ (೫) ಅಜಿತ (೬) ದೀಪ್ತ (೭) ಸೂಕ್ಷ್ಮ (೯) ಅಂಶುಮಾನ (೧೦) ಸುಪ್ರಭೇದ (೧೧) ವಿಜಯ (೧೨) ನಿಶ್ವಾಸ (೧೩) ಸ್ವಾಯಂಭುವ (೧೪) ಅನಲ (೧೫) ವೀರ (೧೬) ರೌರವ (೧೭) ಮಕುಟ (೧೮) ವಿಮಲ (೧೯) ಚಂದ್ರಜ್ಞಾನ (೨೦) ಬಿಂಬ (೨೧) ಲಲಿತ (೨೨) ಪ್ರೋದ್ಗೀತ (೨೩) ಸಿದ್ಧ (೨) ಸಂತಾನ (೨೫) ಸರ್ವೋಕ್ತ (೨೬) ಪರಮೇಶ್ವರ (೨೭) ಕಿರಣ (೨೮) ವಾತುಲವೆಂಬ ಶೈವಾಗಮಗಳಿಂದ

ಸಂಸ್ಕೃತ ಭಾಷೆಯಿಂದ ತಮ್ಮ ಅತಿಗೂಢವಾದ ತತ್ವಗಳನ್ನು ತಿಳಿಹೇಳಿ ಮನಗಾಣಿಸಿದರು. ಈ ಶೈವಾಗಮಗಳ ಪ್ರಭಾವವು ಉಪನಿಷತ್ಕಾರರ ಮೇಲೆಯೂ ಬಿದ್ದಿತು. ಇವರು, ವೇದಗಳು ದೇವರ ಶ್ವಾಸಗಳಾಗಿದ್ದರೆ ಶೈವಾಗಮಗಳು ಅವನ ಸ್ಪಷ್ಟವಾದ ಶಬ್ದಗಳೆಂದು ನಂಬಹತ್ತಿದರು, ಮತ್ತು ಶಬ್ದಕಲ್ಪದ್ರುಮದಲ್ಲಿ "ಶಿವೋಕ್ತಶಾಸ್ತ್ರ"ವೆಂದು ಶೈವಾಗಮಗಳಿಗೆ ಹೇಳಿದಂತೆ ಮಾನ್ಯ ಮಾಡತೊಡಗಿದರು. ಇವಕ್ಕೆ ತಂತ್ರವೆಂದು ಹೇಳುವದರಿಂದ ಇವುಗಳ ಆಧಾರದಿಂದ ಋಷಿಗಳು "ಗಾಯತ್ರಿಮಂತ್ರ"ದ ಜಪದ ಹಾದಿಗಳನ್ನು ಮತ್ತು ಲಿಂಗ ಪ್ರತಿಷ್ಠೆಯ ಮಾರ್ಗವನ್ನು ಅರಿತುಕೊಂಡರು. ಈ ರೀತಿಯಾಗಿ ಈ ೨೮ ದಿವ್ಯ ಶೈವಾಗಮಗಳ ಪ್ರಭಾವದಿಂದ ಪಾರಾಶ, ದೇವಲ, ಅಗಸ್ತ್ಯ, ವಿಶ್ವಾಮಿತ್ರ, ಉಪಮನ್ಯು, ಮಾರ್ಕಂಡೇಯ, ದಧೀಚಿ, ವಾಲ್ಮಿಕಿ, ಗೌತಮ, ಗಾರ್ಗ್ಯ, ಕೌಂಡಿಣ್ಯ, ಜಮದಗ್ನಿ, ಅತ್ರಿ, ವಸಿಷ್ಠ, ದ್ರೋಣ, ಭಾರದ್ವಾಜ, ಕಣಾದ, ದುರ್ವಾಸ, ಭಾಸ್ಕರ, ಸೂತ, ಮಾಂಡವ್ಯ, ಭಾಂಡಕ, ಶೃಂಗ ಮುಂತಾದ ಮುನಿಶ್ರೇಷ್ಠರೂ ಬ್ರಹ್ಮರ್ಷಿಗಳೂ ಮತ್ತು ರಾಜರ್ಷಿಗಳೂ ಈಶ ಮಂತ್ರವಾದ ಪಂಚಾಕ್ಷರಿ ಮಂತ್ರವನ್ನು ಜಪಿಸುತ್ತ ರುದ್ರಾಕ್ಷಿಗಳನ್ನು ಧರಿಸಿ, ಸರ್ವಾವಯವಗಳಲ್ಲಿ ಸಿತಭಸ್ಮವನ್ನು ಧರಿಸಿ ಪರಮ ಶೈವರೆಂದೆನಿಸಿ ದೇಶಮಧ್ಯದಲ್ಲಿ ಮೆರೆಯಹತ್ತಿದರು.

ಈ ಶೈವ ಸಾಮ್ರಾಜದ ವೈಭವವನ್ನು ಓದುಗರು ಮಹಾಭಾರತದಲ್ಲಿ ಸ್ಪಷ್ಟವಾಗಿ ಕಾಣಬಹುದು. ಅದು ಹೇಗೆಂದರೆ— ಭಾರತ ಶಬ್ದವು ಭರತದ ಸಾಮಾನ್ಯ ರೂಪವಾಗಿರುವದು. ಭರತವೆಂಬುದು ಶಿವನ ಸಹಸ್ರನಾಮಗಳೊಳಗಿನ ಒಂದು ನಾಮವಾಗಿರುವದು. ಅಂದ ಮೇಲೆ ಭರತದೇಶವೆಂದರೆ ಶಿವನ ದೇಶವೆಂದಾಗುವದು. ಇದು ಅಲ್ಲದೆ ಕೃಷ್ಣನು ಮಹಾ ಶಿವಭಕ್ತನಾಗಿದ್ದನು. ಈತನಿಗೆ ಉಪಮನ್ಯು ಋಷಿಗಳ ಕಡೆಯಿಂದ ಶೈವೋಪದೇಶವಾಗಿತ್ತೆಂದು ಕೂರ್ಮ ಪುರಾಣದ ಸಂಧಿ ೨೫ ಶ್ಲೋಕ ೪೬ ರಿಂದ ೪೮ ರ ವರೆಗೆ ಹೇಳಿದೆ. ಕೃಷ್ಣನಿಗೆ ಶೈವಾಗಮಗಳ ಸಂಪೂರ್ಣಜ್ಞಾನವಾಗಿದ್ದರಿಂದಲೇ ಆತನು ಅರ್ಜುನನಿಗೆ ಗೀತೆಯನ್ನು ಬೋಧಿಸಲು ಸಮರ್ಥನಾದನು. ಅಲ್ಲದೆ ಪಾರಮೇಶ್ವರಾಗಮದೊಳಗಿನ ಕೆಲವು ಶ್ಲೋಕಗಳನ್ನೇ ಇದ್ದಕ್ಕೆ ಇದ್ದ ಹಾಗೇ ಗೀತೆಯಲ್ಲಿ ಎತ್ತಿತೆಗೆದುಕೊಂಡಿರುವನು. ಮತ್ತು ಕೆಲವು ಶ್ಲೋಕಗಳ ಭಾವವನ್ನು ಹಾಗು

ಕೆಲವು ಶ್ಲೋಕಗಳೊಳಗಿನ ಶಬ್ದಗಳನ್ನು ತೆಗೆದುಕೊಂಡಿರುವನು. ಇದನ್ನು ಕ್ರಿ. ಶ. ೧೯೨೩ ರಲ್ಲಿ ಮದ್ರಾಸದೊಳಗೆ ಜರಗಿದ ವಿಶ್ವಧರ್ಮದ ಸಮ್ಮೇಳನದ ೨ ನೇ ಅಧಿವೇಶನದಲ್ಲಿ ಲಿಂಗೈಕ್ಯರಾದ ಶ್ರೀಮಾನ್ ಸಿದ್ಧರಾಮಪ್ಪ ದುಂಡಪ್ಪ ಪಾವಟೆ ಬಿ. ಎ. ಎಲ್. ಎಲ್. ಬಿ. ಹಾಯಕೋರ್ಟ ವಕೀಲ ಇವರು ಶೈವಾಗಮ ಪ್ರಕಾಶ ವೀರಶೈವರ ತತ್ವಜ್ಞಾನವೆಂಬ ಲೇಖವನ್ನು ಇಂಗ್ಲಿಷಿನಲ್ಲಿ ಬರೆದು ಓದಿದ್ದನ್ನು ಕ್ರಿ. ಶ. ೧೯೨೭ ರಲ್ಲಿ ಲಿಂಗೈಕ್ಯರಾದ ಶ್ರೀಮಾನ್ ವೀರಪ್ಪ ಬಸಪ್ಪ ಬಿಳಿಅಂಗಡಿ ಬಿ ಎ. ಎಲ್. ಎಲ್. ಬಿ. ವಕೀಲ ಹುಬ್ಬಳ್ಳಿ ಇವರು ಮುದ್ರಿಸಿರುವರು. ಅದರ ಪರಿಶಿಷ್ಟ ಅ. ಬ. ಕ. ಗಳಲ್ಲಿ ಮೇಲಿನ ಅಭಿಪ್ರಾಯದ ಶಕ್ಯತೆಯನ್ನು ಕಾಣಬಹುದು. ಒಟ್ಟಿಗೆ ಗೀತೆಗೆ ಶಿವಾಗಮಗಳೇ ಆಧಾರವೆಂಬದನ್ನು ವಾಚಕರು ಕಾಣಬಹುದು ಇದೇ ಗೀತೆಯನ್ನು ಶ್ರೀ ಶಂಕರಾಚಾರ್ಯರಿಂದ ಎಲ್ಲ ಭಾಷ್ಯಕಾರರು ಪ್ರಸ್ಥಾನತ್ರಯದೊಳಗೆ ಸೇರಿಸಿಕೊಂಡು ತಮ್ಮ ತಮ್ಮ ಭಾಷ್ಯ ಬರೆದದ್ದರಿಂದ ಅವರೆಲ್ಲರಿಗೂ ಶಿವಾಗಮಗಳು ಮಾನ್ಯವಾಗಿರುವವು.

## ದ್ರಾವಿಡ ಸಂಸ್ಕೃತಿ

ಇದೇ ರೀತಿಯಾಗಿ ೧ ನೇ ಶತಮಾನದಲ್ಲಿ ಆಗಿಹೋಗಿ ಕವಿಕುಲ ಚಕ್ರವರ್ತಿಯಾದ ಕಾಳಿದಾಸನು ತನ್ನ ರಘುವಂಶ ಕಾವ್ಯದಲ್ಲಿಯೂ, ೨ ನೇ ಶತಮಾನದಲ್ಲಿ ಇದ್ದ ಹಾರಿತ ಋಷಿಯು ತನ್ನ ಗ್ರಂಥದಲ್ಲಿಯೂ ೪ ನೇ ಶತಮಾನದಲ್ಲಿ ಬೆಳಕಿಗೆ ಬಂದ ಭಾರವಿ ಕವಿಯು ತನ್ನ ಕಿರಾತಾರ್ಜುನ ಕಾವ್ಯದಲ್ಲಿಯೂ ೧೪ ನೇ ಶತಮಾನದ ಮಧ್ಯದಲ್ಲಿ ಇದ್ದ ಸಾಯಣಮಾಧವನು ತನ್ನ ಜೈಮಿನಿ ನ್ಯಾಯಮಾಲಾ, ಸೂತಸಂಹಿತೆಯ ಟೀಕೆ ಮತ್ತು ತತ್ವಪ್ರಕಾಶ ಗ್ರಂಥಗಳಲ್ಲಿಯೂ ಮತ್ತು ೧೬ ನೇ ಶತಮಾನದ ಮಧ್ಯಕ್ಕೆ ಇದ್ದ ಅಪ್ಪಯ್ಯದೀಕ್ಷಿತನು ತನ್ನ ಶಿವತತ್ವ ವಿವೇಕವೆಂಬ ಗ್ರಂಥದಲ್ಲಿಯೂ ಈ ೨೮ ತಂತ್ರಗಳೆಂದೆನಿಸುವ ಶೈವಾಗಮಗಳ ಹೆಸರುಗಳನ್ನು ಮತ್ತು ಅವುಗಳೊಳಗಿನ ಆಧಾರಗಳನ್ನು ತೆಗೆದುಕೊಂಡದ್ದು ವಾಚಕರು ಕಾಣಬಹುದು. ಇವರಂತೆ ಇಲ್ಲಿಯವರೆಗೆ ಯಾರಾದರೂ ತಮ್ಮ ಧರ್ಮಗಳು ಅತಿ ಶ್ರೇಷ್ಠವೆಂದೂ ಮತ್ತು ಬಹಳೇ ಪ್ರಾಚೀನದವುಗಳೆಂದೂ ಜಗತ್ತಿಗೆ ಸಿದ್ಧಮಾಡಿ ತೋರಿಸಬೇಕಾಗಿದ್ದರೆ ಅವರೆಲ್ಲರು ನಾಲ್ಕುವೇದ, ೨೮ ಶೈವಾಗಮ ಮತ್ತು ಉಪ

ನಿಷತ್ತುಗಳ ಆಧಾರಗಳನ್ನು ಕೊಟ್ಟು ಸಿದ್ಧಮಾಡಿ ತೋರಿಸುವ ವಾಡಿಕೆಯಾಗಿತ್ತು. ಆದರೆ ಇತ್ತೀಚಿಗೆ ಸುಮಾರು ೨೦-೨೫ ವರ್ಷಗಳ ಪೂರ್ವದಲ್ಲಿ ಹರಪ್ಪ ಮತ್ತು ಮೊಹಂಜೋದಾರೊ ಇವುಗಳಲ್ಲಿ ಹೊರಟ ಭೂಶೋಧನೆಗಳಿಂದ ಈ ಸಂಸ್ಕೃತಿಯು ವೇದಗಳಿಗಿಂತಲೂ ಒಂದು ಸಾವಿರ ವರುಷ ಮುಂಚಿನದೆಂದು ಧ್ಯಾನಾಸಕ್ತನಾಗಿ ಕೂತ ಶಿವನ ವಿಗ್ರಹದಿಂದಲೂ ಶಕ್ತಿಯ ವಿಗ್ರಹದಿಂದಲೂ ಮತ್ತು ಲಿಂಗರೂಪ ವಿಗ್ರಹದಿಂದಲೂ, ಆ ಶಿವನು ಲಿಂಗರೂಪ ವಿಗ್ರಹದಿಂದ ಪೂಜಿಸಲ್ಪಡುತ್ತಿದ್ದನೆಂತಲೂ ಇದು ಆರ್ಯರ ಸಂಸ್ಕೃತಿಯಾಗಿರದೆ ಕೇವಲ ದ್ರಾವಿಡರ ಸಂಸ್ಕೃತಿಯೆಂದೂ ಹಲವು ಪಾಶ್ಚಾತ್ಯ ಮತ್ತು ಪೌರಸ್ತ್ಯ ಪಂಡಿತರು ದೊಡ್ಡ ಗ್ರಂಥಗಳನ್ನು ಬರೆದು ಸಿದ್ಧಮಾಡಿ ತೋರಿಸಿರುವರು. ಮತ್ತು ದ್ರಾವಿಡರ ನಾಗರಿಕತೆ ಯೋಗಾಭ್ಯಾಸದ ಲಕ್ಷಣ ಹಾಗು ಭಕ್ತಿ ಮುಂತಾದವುಗಳ ಪ್ರಾಬಲ್ಯವು ಆಗಿರಬಹುದೆಂದು ತೋರಿಸಿರುವರು. ಈ ವಿದ್ವಾಂಸರು ಹೇಳುವಂತೆ ಹರಪ್ಪ ಮತ್ತು ಮೊಹಂಜೋದಾರೋಗಳೊಳಗಿನ ಸಂಸ್ಕೃತಿಯು ಆರ್ಯರಿಗೆ ಹೊಸದಲ್ಲದೆ ಇದು ಆಗಮಿಕಜ್ಞರಿಗೇನು ಹೊಸದಲ್ಲ. ಶೈವಾಗಮಗಳಲ್ಲಿ ಇದಕ್ಕೂ ಹೆಚ್ಚಿನ ಸಂಸ್ಕೃತಿಯು ಬೆಳಕು ಕಂಡು ಬರುವದರಿಂದ ಬಹಳವಾದರೆ ಈ ಆಗಮ ಸಂಸ್ಕೃತಿಯು ಇದರ ತರುವಾಯದ್ದೆಂದು ಮನ್ನಿಸಲು ಅಡ್ಡಿಯಿಲ್ಲ. ಆದರೂ ಈ ಆಗಮ ಸಂಸ್ಕೃತಿಯು ಹರಪ ಮತ್ತು ಮೊಹಂಜೋದಾರೋಗಳ ಸಂಸ್ಕೃತಿಯ ಬಲಗೈಯಂತೆ ಇರುವದೆಂದು ಹೇಳಲು ಯಾವ ಅಭ್ಯಂತರವಿಲ್ಲ.

ಇಷ್ಟು ಮನವರಿಕೆಯಾದರೂ, ಇನ್ನೂ, ಮೇಲೆ ವಿವರಿಸಿದ ಎಲ್ಲ ಸಂಸ್ಕೃತಿಗಳು ತಮ್ಮ ನಾಲ್ಕು ವೇದಗಳಲ್ಲಿವೆಯೆಂದೂ ಮತ್ತು ಇನ್ನು ಮುಂದೆ ಬರುವ ಎಲ್ಲ ಸುಧಾರಣೆಗಳು ಆ ವೇದಗಳಲ್ಲಿಯೇ ಅಡಕವಾಗಿರುವವೆಂದೂ ಹಟಾತ್ತಾಗಿ ಹೇಳುವ ಹಲವು ವೇದಾಭಿಮಾನಿಗಳು ಭರತಖಂಡದಲ್ಲಿಯೇ ಇರುವರು. ಕುಸ್ತಿಗಡಿಯು ತಾನು ಬಿದ್ದರೂ ತನ್ನ ಮೀಸೆಗೆ ಮಣ್ಣು ಎಲ್ಲಿ ಹತ್ತಿದೆ ಎಂದು ಕೇಳುವವನಂತೆ ಈ ಹಟಮಾರಿಗಳ ಹೇಳಿಕೆ ಇರುವದು. ಇದು ಅವರ ಮೊಂಡತನವೋ ಅಥವಾ ಅವರ ಮೆಂದುವಿನ ಒಂದು ಪ್ರಕಾರದ ರೋಗವೋ ಹೇಳಲಿಕ್ಕೆ ಬರುವಂತೆ ಇಲ್ಲ. ಮೇಲೆ ಹೇಳಿದ ಹರಪ್ಪ ಮೊಹಂಜೋದಾರೋಗಳ ಸಂಸ್ಕೃತಿಗೂ ಮತ್ತು ಶೈವಾಗಮಗಳಲ್ಲಿ ಹೇಳಿರುವ ಸಂಸ್ಕೃ

ತಿಗೂ ಮಧ್ಯದಲ್ಲಿ ಒಂದು ಸಂಸ್ಕೃತಿ ಇರಬಹುದು. ಅದುವೇ ಸ್ವಯಂಭು ಗಳಾದ ಶ್ರೀಶೈಲ ಮಲ್ಲಿಕಾರ್ಜುನ ಮೊದಲಾದ ೧೨ ಜ್ಯೋತಿರ್ಲಿಂಗ ಗಳೂ ಮತ್ತು ಕಾಶೀವಿಶಾಲಾಕ್ಷಿ ಮೊದಲಾದ ೯ ಶಕ್ತಿಗಳೂ ಆಗಬಹುದು. ಇದಕ್ಕೆ ಈಶ್ವರ ಸಂಸ್ಕೃತಿಯೆಂದರೂ ಅಡ್ಡಿ ತೋರುವದಿಲ್ಲ. ಹರಪ್ಪ ಮತ್ತು ಮೊಹಂಜೋದಾರೋಗಳ ಸಂಸ್ಕೃತಿಗಳೇ ಎಲ್ಲಕ್ಕೂ ಮೊದಲಿನವುಗಳೆಂದು ಹೇಳಲಿಕ್ಕೆ ಬಾರದು. ಅವು ಆ ಕಾಲಕ್ಕೆ ಅಷ್ಟು ಪ್ರಸಿದ್ಧಿಗೆ ಬರಬೇಕಾದರೆ ಮತ್ತು ಅವುಗಳ ಸ್ವರೂಪವೂ ಆ ಬಗೆ ಇರಬೇಕಾದರೆ ಇದಕ್ಕಾವರೂ ಹಿಂದೆ ವಿಶಿಷ್ಟವಾದ ಒಂದು ಬಗೆಯ ಸಂಸ್ಕೃತಿಯು ಇದ್ದೇ ತೀರಬೇಕಾಗಿದೆ. ಈ ಸಂಸ್ಕೃತಿಯು ಎಷ್ಟೋ ಕಾಲದ ವರೆಗೆ ಪ್ರಚಾರದಲ್ಲಿ ಇದ್ದದರಿಂದಲೇ ಆ ಸಂಸ್ಕೃತಿಯು ಪ್ರಾದುರ್ಭವಿಸಲು ಎಡೆ ಉಂಟಾಗಿರಬಹುದು. ಅಂಥ ಸಂಸ್ಕೃತಿಯು ಯಾವದೆಂಬದನ್ನು ಕಂಡು ಹಿಡಿಯುವದೇ ಈ ನಮ್ಮ ಲೇಖನದ ಮುಖ್ಯ ಗುರಿಯಾಗಿದೆ. ಇದಕ್ಕೆ ಕೆಲವು ಮಟ್ಟಿಗೆ ಉಪಲಬ್ಧವಿದ್ದ ಗ್ರಂಥಗಳ ಆಧಾರವೂ ದೊರೆಯು ವದು. ಅವುಗಳಲ್ಲಿ ಈ ಕಲ್ಪನೆಯು ಅಸ್ಪಷ್ಟವಾಗಿ ತೋರಿದರೂ ಅದರ ಸಂಪೂರ್ಣ ಜ್ಞಾನವು ವಚನ ವಾಙ್ಮಯದಿಂದ ಉಂಟಾಗುವದರಲ್ಲಿ ತಿಲ ಮಾತ್ರ ಸಂಶಯವಿಲ್ಲ. ಮತ್ತು ಮತ್ತು ಶಿವಶರಣರು ಎಷ್ಟು ಆಳ ವಾಗಿ ಅಭ್ಯಾಸ ಮಾಡಿ ಅಂತರ್ಜ್ಞಾನದಿಂದ ಇವನ್ನು ಕಂಡು ಹಿಡಿದಿ ರುವರೆಂಬದು ವಾಚಕ ಮಹಾಶಯರಿಗೆ ಗೊತ್ತಾಗುವದು. ಅಲ್ಲದೆ ಶಿವಶರಣರ ಅಲೌಕಿಕ ಕ್ರಾಂತಿಯು ಉದ್ದೇಶವೂ ಮತ್ತು ಅದರ ಹಿನ್ನೆ ಲೆಯಾದ ಮಾನವರ ಉದ್ಧಾರದ ಕಳಕಳಿಯೂ ಗೊತ್ತಾಗುವವು.

ಕಾಲಿದಾಸನು ತನ್ನ ರಘುವಂಶ ಕಾವ್ಯದ ೧ನೆಯ ಸರ್ಗದಲ್ಲಿ "ವಾಗರ್ಥಾವಿವಸಂಪೃಕ್ತೌ। ವಾಗರ್ಥಪ್ರತಿಪತ್ತಯೇ॥ ಜಗತಃ ಪಿತರೌ ವಂದೇ। ಪಾರ್ವತೀ ಪರಮೇಶ್ವರೌ॥" ಎಂಬ ಸ್ತೋತ್ರ ಶ್ಲೋಕದಲ್ಲಿ "ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ॥" ಎಂದರೆ ಜಗ ತ್ತಿನ ತಾಯಿ ತಂದೆಗಳಾದ ಪಾರ್ವತೀ ಪರಮೇಶ್ವರರೆಂದು ನಮಿಸಿ ಹೇಳುವದರಿಂದಲೂ ಹಾರಪ್ಪ ಮೋಹಂಜೋದಾಸಗಳಲ್ಲಿ ಹೇಳಿರುವ ಶಿವಶಕ್ತಿಗಳಿಗೆ ಪಾರ್ವತಿಪರಮೇಶ್ವರರೆಂದು ಅನ್ನುವದರಿಂದಲೂ, ಈ ಪಾರ್ವತಿಯು ಪರ್ವತರಾಜನ ಮಗಳಾದ್ದರಿಂದ ಇವಳಿಗೆ ಗಿರಜೆ, ಅಗಜೆ ಮೊದಲಾದ ಸಮಾನ ಅರ್ಥದ ಹೆಸರುಗಳಿರುವದರಿಂದಲೂ "ಅಸ್ತಿತ್ಯ

ತ್ತರಸ್ಯಾಂ ದಿಶಿ ದೇವತಾತ್ಮಾ ಹಿಮಾಲಯೋ ನಾಮ ನಗಾಧಿರಾಜಃ ಎಂದು ಅದೇ ಕವಿಯು ಕುಮಾರ ಸಂಭವ ಕಾವ್ಯದಲ್ಲಿ ಹಿಮಾಲಯವು ದೇವತೆಗಳ ವಾಸಸ್ಥಾನವು ಇರುವದೆಂದು ಹೇಳುವದರಿಂದಲೂ ಮತ್ತು ಈ ಪರ್ವತವು ಹರಪ್ಪ ಮತ್ತು ಮೋಹಂಜೋದಾರಗಳ ಆಚೆಯಲ್ಲಿರುವದರಿಂದಲೂ—ಈ ಎಲ್ಲ ಕಾರಣಗಳ ಮೂಲಕ ಪಾರ್ವತಿ ಪರಮೇಶ್ವರರು ಶಿವಶಕ್ತಿಗಳಿಂತಲೂ ಪೂರ್ವದವರೆಂದು ನಂಬಲು ಅವಕಾಶವುಂಟಾಗುತ್ತದೆ. ಇದು ಮದನಾರಿ ಅಲ್ಲಮ ಪ್ರಭುದೇವನು "ಬ್ರಹ್ಮ, ವಿಷ್ಣು, ಬ್ರಹ್ಮ, ದುದ್ರ, ಈಶ್ವರ, ಸದಾಶಿವ, ಪರಮೆಶ್ವರರೆಂಬ ಸಂದಣಿ ತಲೆದೋರದ ಮುನ್ನ, ಅಲ್ಲಿಂದತ್ತತ್ತ ಬಯಲವೇ ಸ್ವರೂಪವಾಗಿತ್ತು. ಆ ಸ್ವರೂಪಿನ ಘನವನುಪಮಿಸಬಾರದು, ನೋಡಬಾರದು, ಬೆಳಕು, ಕೂಡಬಾರದು ಮೂರುತಿ ಅಖಂಡ ಅಪ್ರತಿಮ ಗುಹೇಶ್ವರ ಲಿಂಗದ ಬೆಳಗಿನ ಮೂಲವ ಲಿಂಗ ಸಂಗಿಗಳಲ್ಲದೆ ಮಿಕ್ಕಿನ ಅಂಗವಿಕಾರಿಗಳೆತ್ತ ಬಲ್ಲರೈ ಗುಹೇಶ್ವರ" ಎಂದು ತನ್ನ ವಚನದಲ್ಲಿ ಈ ಪರಮೇಶ್ವರನ ಹೆಸರನ್ನು ಹೇಳಿರುವದು ಕಾಲಿದಾಸನ ಮಾತಿಗೆ ಪುಷ್ಟಿ ಕೊಡುತ್ತದೆ. ಅಲ್ಲದೆ ಈ ವಚನದಲ್ಲಿ (೧) ಬ್ರಹ್ಮ (೨) ವಿಷ್ಣು (೩) ರುದ್ರ (೪) ಈಶ್ವರ (೫) ಸದಾಶಿವ, (೬) ಪರಮೇಶ್ವರ (೭) ಬಯಲು (೮) ಗುಹೇಶ್ವರ ಲಿಂಗವೆಂದು ಹೀಗೆ ಪ್ರಗತಿಯ ೮ ಮೆಟ್ಟಲು (Planes) ಗಳನ್ನು ಹೇಳಿ ಶಿವನ ಮೆಟ್ಟಲು ೫ನೇದೆಂದು ಹೇಳಿ ೭-೮ ಮೆಟ್ಟಲುಗಳು ಲಿಂಗಾಂಗಿಗಳಿಗೆ ಗೊತ್ತಾಗುವದೆಂದು ಹೇಳಬೇಕಾದರೆ ಈ ಎರಡು ಮೆಟ್ಟಲುಗಳು ಶಿವಶರಣ ವಚನಗಳಲ್ಲಿಯೇ—ಉಕ್ತವಾಗಿರಬೇಕಲ್ಲದೆ ಬೇರೆ ಕಡೆ ದೊರೆಯಲು ಸಾಧ್ಯವೇ ಇಲ್ಲ.

## ಶಿವಶರಣರ ಸಂಸ್ಕೃತಿ.

ಈ ಒಂದೇ ವಚನದಿಂದ ಪ್ರಗತಿಯ ಏರಿಕೆಯ ಮತ್ತು ಇಳಿಕೆಯ ಎರಡು ಮಗ್ಗಲುಗಳು ಗೊತ್ತಾಗುತ್ತಿದ್ದರೂ ಇಳಿಕೆಯ ಮೆಟ್ಟಲುಗಳ ಪುಷ್ಟಿಯ ಸಲುವಾಗಿ ಅವರದೇ ಇನ್ನೊಂದು ವಚನ ಕೊಡಬಹುದು. ಅದು ಹೀಗಿದೆ "ಮಾರಿ ಬಲಿದು ಮಾರಿ ಕಲ್ಲಾದಂತೆ ಶೂನ್ಯವೇ ಸ್ವಯಂಭೂ ಆಗಿತ್ತು ಆ ಸ್ವಯಂಭುಲಿಂಗದಿಂದ ಆಯಿತ್ತು ಮೂರ್ತಿ; ಆ ಮೂರ್ತಿಯಿಂದಾಯಿತ್ತು ವಿಶ್ವೋತ್ಪತ್ತಿ; ಆ ವಿಶ್ವೋತ್ಪತ್ತಿಯಿಂದಾಯಿತ್ತು ಸಂಸಾರ; ಆ ಸಂಸಾರದಿಂದಾಯಿತ್ತು ಮರವೆ; ಮರವೆ ಎಂಬ

ಮಹಾ ಮಾಯೆ ವಿಶ್ವವ ಮುಸುಕಿದಲ್ಲಿ ನಾ ಬಲ್ಲೆ ನೀ ಬಲ್ಲೆನೆಂಬ ಅರುಹಿರಿಯರೆಲ್ಲ ತಾಮಸಕ್ಕೊಳಗಾಗಿ ಮೀನಕೇತನ ಬಲೆಯಲ್ಲಿ ಶಿಲುಕಿ ಮಾಯೆಯ ಬಾಯ ತುತ್ತಾದರಲ್ಲ ಗುಹೇಶ್ವರಾ." ಇದರ ವಿಸ್ತಾರವನ್ನು ಇದಕ್ಕೂ ಹೆಚ್ಚಿಗೆ ಈ ರೀತಿ ಮಾಡಬಹುದು. ಪಾರ್ವತಿಪರಮೇಶ್ವರರ ಅನೇಕ ಲೀಲೆಗಳಲ್ಲಿ ಅರ್ಧನಾರೀಶ ಮತ್ತು ನಟರಾಜ ಮುಂತಾದ ಲೀಲೆಗಳು ಬಹಳ ಪ್ರಸಿದ್ಧ ಇರುವವು ೫ನೇ ಹಂತದಲ್ಲಿರುವ ಸದಾಶಿವನಿಗೆ ಸಹಸ್ರನಾಮಗಳಿರುವವು. ಅವುಗಳಲ್ಲಿ ಅತನಿಗೆ ದಿಗಂಬರವೆಂಬುದೊಂದು ನಾಮವದೆ, ಈ ನಾಮವು ನೇಗೆಯ ಕಲೆಯು ಪ್ರಚಾರವಾಗಿ ವಸ್ತ್ರಗಳು ಉಂಟಾದ ಮೇಲೆ ಶಿವನಿಗೆ ಬಂದಿರುವದು. ಈ ನಾಮವೇ ಜೈನ ಬಂಧುಗಳ ದೇವರ ಹೆಸರಾಗಿದೆ. ಇವರಲ್ಲಿ ಆ ದೇವರಿಗೆ ಶ್ವೇತ ವಸ್ತ್ರವನ್ನು ಧರಿಸುವವರೇ ಶ್ವೇತಾಂಬರರೆಂದೆನಿಸುವರು. ಈ ಜೈನರ ದೇವರ ಹೆಸರು ಹೀಗಾದ ಮೇಲೆ ಈ ಶಿವನ ವಾಹನವಾದ ನಂದಿಯೇ ವೃಷಭನಾಗಿ ಆದಿ ತೀರ್ಥಂಕರನೆನಿಸಿ ಆ ಧರ್ಮವನ್ನು ಪ್ರಸಾರಗೊಳಿಸಿದನು. ಈ ತರುವಾಯ ನಾಲ್ಕನೆಯ ಮೆಟ್ಟಿಲದ ಈಶ್ವರ ನಾಮವು "ಈಶ್ವರಃ ಸರ್ವಭೂತಾನಾಂ ಹೃದ್ದೇಶೇ ತಿಷ್ಠತಿ ಅರ್ಜುನ" ಎಂಬ ಗೀತೋಕ್ತಿಯಂತೆ ಕೆಳಗಿನ ಸ್ಥಾನದಲ್ಲಿ ಉಳಿಯಬೇಕಾಯಿತು. ವಿಷ್ಣುವಿಗೆ ಪೀತಾಂಬರವೆಂಬ ನಾಮವು ಬರಬೇಕಾದರೆ ವಸ್ತ್ರಕ್ಕೆ ಹಳದಿ ಬಣ್ಣ ಕೊಟ್ಟು ಆ ವಸ್ತ್ರವನ್ನು ಇವನಿಗೆ ಉಡಿಸಿದ ಮೇಲೆ ಬಂದಿರಬಹುದು. ಹೀಗೆ ಮೇಲಿನ ವಚನದಲ್ಲಿ ಹೇಳಿರುವಂತೆ ಬ್ರಹ್ಮವೇ ಮೊದಲಿನ ಮೆಟ್ಟಿಲವಾಗುವದು. ಇದನ್ನೆಲ್ಲ ನೋಡಲಾಗಿ ಇದರಿಂದ ೭ನೆಯ ೮ನೆಯ ಮೆಟ್ಟಿಲುಗಳು ಎಷ್ಟು ದೂರ ಅವೆ ಎಂಬುವದು ಹೊಳೆಯದೆ ಇರದು. ೫ನೇ ಮತ್ತು ೬ನೇ ಮೆಟ್ಟಿಲುಗಳೊಳಗಿನ ಶಿವ ಮತ್ತು ಪರಮೇಶ್ವರ ಎಂಬ ಎರಡೂ ವಿಗ್ರಹಗಳನ್ನು ಶೈವರು ಲಿಂಗರೂಪದಿಂದ ಪೂಜಿಸುವದುಂಟು. ಈ ಲಿಂಗ ಪೂಜೆಯು ಎರಡು ವಿಧವಾಗಿರುವದು. ಮಣ್ಣಿನಿಂದ ಮಾಡಿದ ಲಿಂಗಕ್ಕೆ ಆಹ್ವಾನ ವಿಸರ್ಜನೆ ಇರುವದರಿಂದ ಅದು ಪಾರ್ಥಿವ ಲಿಂಗವೆನಿಸುವದು. ಕಲ್ಲಿನಿಂದ ಮಾಡಿದ ಲಿಂಗಕ್ಕೆ ಆಹ್ವಾನ ಮತ್ತು ಪ್ರಾಣಪ್ರತಿಷ್ಠೆ ಮೊದಲಾದವುಗಳು ಇರುವದರಿಂದ ಅದು ಸ್ಥಾವರಲಿಂಗವೆನಿಸುವದು. ಈ ಎರಡೂ ಲಿಂಗಪೂಜೆಗಳಲ್ಲಿ ಸೇವ್ಯಸೇವಕಭಾವವು ಜಾಗ್ರತವಿರುವದರಿಂದ ಈ ಲಿಂಗಪೂಜೆಯು ವೀರಶೈ

ವರಿಗೆ ವಿರುದ್ಧವೆನಿಸುವದು. ಇದನ್ನು ಶ್ರೀ ಅಲ್ಲಮಪ್ರಭುದೇವನು ತನ್ನ ವಚನದಲ್ಲಿ "ಸೃಷ್ಟಿಗೆ ಹುಟ್ಟಿದ ಶಿಲೆ, ಕಲ್ಲುಕುಟುಕಂಗೆ ಹುಟ್ಟಿದ ಮೂರ್ತಿ, ಮಂತ್ರಕ್ಕೆ ಲಿಂಗವಾಯಿತ್ತಲ್ಲ. ಈ ಮೂವರಿಗೆ ಹುಟ್ಟಿದ ಮಗನ ಲಿಂಗವೆಂದು ಪೂಜಿಸುವ ಅಚ್ಚ ವ್ರತಗಳಿಗೇನೆಂಬೆ ಗುಹೇಶ್ವರ" ಎಂದು ಸ್ಪಷ್ಟವಾಗಿ ಅಲ್ಲಗಳೆದಿರುವನು. ೭ನೆಯ ೮ನೆಯ ಮೆಟ್ಟಲುಗಳಾದ ಬೈಲು ಮತ್ತು ಮಹೇಶ್ವರ ಲಿಂಗದಲ್ಲಿ ಮೇಲೆ ಹೇಳಿರುವ ಯಾವ ತೊಡಕುಗಳು ಇರುವದಿಲ್ಲ. ಆಹ್ವಾನ ವಿಸರ್ಜನ ಇಲ್ಲದರಿಂದಲೂ ಮತ್ತು ಪೂಜಿಸುವವರಲ್ಲಿ ಪೂಜ್ಯ ಪೂಜಕಭಾವವು ಉದಯವಾಗುವ ಸಂಭವವಿಲ್ಲದ್ದರಿಂದಲೂ ಮತ್ತು ಅದು ಸದ್ಗುರುವಿನ ಹಸ್ತಮಸ್ತಕ ಸಂಯೋಗವಾಗಿ ಉಂಟಾಗುವದರಿಂದಲೂ ಅದು ಪೂಜಕನ ಸ್ವರೂಪವೇ ಆಗಿರುವದು. ಈ ಬೈಲಲಿಂಗಕ್ಕೆ ಅಣ್ಣ ಬಸವಣ್ಣನು "ಕಾಳಿ ಕಣ್‌ಕಾಣದ ಮುನ್ನ"ವೆಂದು ತನ್ನ ವಚನದಲ್ಲಿ ಹೇಳಿರುವನು, "ಈ ಗುಹೇಶ್ವರ ಲಿಂಗದ ಬೆಳಗಿನ ಮೂಲವು ಲಿಂಗಸಂಗಿಗಳಲ್ಲದೆ ಮಿಕ್ಕಿನ ಅಂಗವಿಕಾರಂಗಳೆತ್ತ ಬಲ್ಲರೈ ಗುಹೇಶ್ವರ" ಎಂದು ಶ್ರೀ ಪ್ರಭುದೇವರು ಹೇಳುವಂತೆ, ಲಿಂಗೈಕ್ಯರಾದ ಮೈಲಾರದ ಬಸವಲಿಂಗ ಶಿವಶರಣರು "ಕರಶಿರ ಸಂಯೋಗದೊಳಂ । ಪರಮೇಷ್ಟಲಿಂಗ ಮೊಗೆದು ಸರ್ವಾಂಗದೊಳಂ ॥ ಪರಿಪೂರ್ಣವಾದ ಭೇದವ । ವರಶ್ರುತಿತಾವರಿಯೈ ಬಸವಪ್ರಭುವೇ ॥ ಎಂದು ಆ ಲಿಂಗಿಗಳು ನಂಬಿರುವ ಶ್ರುತಿಗಳಿಗೆ ಇದರ ಮರ್ಮವು ತಿಳಿಯದೆಂದು ಹೇಳುವರು. ಈ ಬೈಲು ಲಿಂಗದ ನಿಜಸ್ವರೂಪವನ್ನು ವೀರಶೈವರು ನಮಸ್ಕಾರ ಮಾಡುವ ಮಂತ್ರದಿಂದ ಅರಿಯಬಹುದು. ಅದು ಹೀಗಿದೆ:-

"ಓಂ ಪೀಠಸ್ಯ ಧರಿತ್ರಿ ಜಲಧರ ಕಲಶಂ ಲಿಂಗ ಮಾಕಾಶ ಮೂರ್ತಿಂ ನಕ್ಷತ್ರಂ ಪುಷ್ಪಮಾಲಾಗ್ರಹಣಂ ಗಣಕುಸುಮಂ । ನೇತ್ರಂ ಚಂದ್ರಾರ್ಕ ವಹ್ನಿಃ ಕುಕ್ಷೌಸಪ್ತಸಮುದ್ರಂ ಭುಜಗಿರಿ ಶಿಖರಂ ಸಪ್ತ ಪಾತಾಳ ಪಾದಂ ವೇದಂ ವಕ್ತ್ರಂ ಶಾಸ್ತ್ರಂ ಷಡಂಗಂ ದಶದಿಶ ವಸನಂ ದಿವ್ಯ ಲಿಂಗಾಯ ನಮಃ ॥ ಇಂಥ ಬ್ರಹ್ಮಾಂಡಮಯವಾದ ಲಿಂಗವನ್ನು ಬಸವಣ್ಣನು ತನ್ನ ವಚನದಲ್ಲಿ "ಜಗದಗಲ ಮುಗಿಲಗಲ ಆಕಾಶದಿಂದತ್ತತ್ತ ನಿಮ್ಮ ಶ್ರೀಮುಕುಟ; ಪಾತಾಳದಿಂದ ಅತ್ತತ್ತ ನಿಮ್ಮ ಶ್ರೀಚರಣ ಘನಕ್ಕೆ ಘನವಾದ ವಸ್ತುವೆನ್ನ ಕರಸ್ಥಲಕ್ಕೆ ಚುಳುಕಾದಿರೈ" ಎಂದು ಸಮಷ್ಟಿಯು ವ್ಯಷ್ಟಿಯಾದದ್ದನ್ನು ಹೇಳುವನು. ಇದನ್ನೇ ನಿಜಗುಣಶಿವಯೋಗಿಯು

ತನ್ನ ಕೈವಲ್ಯಪದ್ಧತಿಯ ಶಿವಯೋಗ ಪ್ರಕರಣದಲ್ಲಿ "ಪರತರ ಶಿವಲಿಂಗ ವೆಳಿಸಿ ನಿನಗಾಗಿ ಕರಕಂಜದೊಳು ಕಾಣಿಸಿತು ಯೋಗಿ ಯಜಿಸು" ಎಂದು ಗುರುಕೊಡುವ ಇಷ್ಟಲಿಂಗದ ಸ್ವರೂಪವನ್ನು ಹೇಳಿರುವನು. ಈ ಇಷ್ಟಲಿಂಗವು ಕ್ರಮವಾಗಿ ಬರುವ ರೀತಿಯನ್ನು ತೋಂಟದಾರ್ಯನು ತನ್ನ ವಚನದಲ್ಲಿ "ಬಯಲ ಮೂರ್ತಿಯ ಮಾಡಿ ಎನ್ನ ಕರಸ್ಥಲಕ್ಕೆ ಕೊಟ್ಟನಯ್ಯ ಶ್ರೀಗುರುವು. ಬಯಲ ಮೂರ್ತಿಯ ಅಮೂರ್ತಿ ಮಾಡಿ ಎನ್ನ ಪ್ರಾಣದೊಳಗಿರಿಸಿದನಯ್ಯಾ ಶ್ರೀಗುರುವು. ಬಯಲ ಬಯಲನೇ ಬಯಸಿ ಬಯಲೆಂದೆನಿಸಿ ಎನ್ನ ಭಾವದಲ್ಲಿ ಇರಿಸಿದನಯ್ಯಾ ಶ್ರೀಗುರುವು. ಇದುಕಾರಣ ಎನ್ನ ಕರಸ್ಥಲ ಮನಸ್ಥಲ ಭಾವಸ್ಥಲದಲ್ಲಿ ಧರಿಸಿ ನಾನು ಅಂಗಲಿಂಗ ಸಂಬಂಧಿಯಾದೆನಯ್ಯಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ" ಎಂದು ಬಹು ಮಾರ್ಮಿಕವಾಗಿ ಹೇಳಿರುವನು. ನೋಡು ವವರಿಗೆ ವೀರಶೈವರು ಪೂಜಿಸುವ ಲಿಂಗವು ಮತ್ತು ಅಲಿಂಗಿಗಳು ಪೂಜಿಸುವ ಸ್ಥಾವರಲಿಂಗವು ಒಂದೇ ಎಂದು ಕಂಡರೂ ಮೇಲಿನ ಎಲ್ಲ ವಿವರಣೆಯಿಂದ ಈ ಎರಡು ಸಂಸ್ಕೃತಿಗಳು ತೀರ ಭಿನ್ನವಾಗಿಯೇ ಇರುವವು.

ಕಾರಣವಿಲ್ಲದೆ ಕಾರ್ಯದ ಉತ್ಪತ್ತಿಯಾಗಲಾರದೆಂಬ ನ್ಯಾಯ ದಂತೆ ಇಷ್ಟಲಿಂಗದಂಥ ಸುಲಭೋಪಾಯದಿಂದ ಎಲ್ಲ ಮಾನವರು ಸ್ವಾಭಾ ವಿಕವಾಗಿ ಬಯಸುವ ಲಿಂಗಾಂಗ ಸಾಮರಸ್ಯ-ಶಿವಜೀವೈಕ್ಯ-ಬ್ರಹ್ಮಾಂ ಡದಲ್ಲಿ ಪಿಂಡಾಂಡ ಸಮರಸವೆಂಬ ಉರಿಕರ್ಪುರದಂತೆ ಸಹಜವಾಗಿ ನಿರ್ವಯಲಾಗುವ ಶ್ರೇಷ್ಠವಾದ ಸಾಧನಮಾರ್ಗವನ್ನು ಶಿವಶರಣರು ತಮ್ಮ ದಿವ್ಯಜ್ಞಾನದಿಂದ ಕಂಡು ಹಿಡಿಯಲಿಕ್ಕೆ ಬಲವತ್ತರವಾದ ಹಲವು ಕಾರಣಗಳಿರಬಹುದು. ಆದರೆ ಅವುಗಳಲ್ಲಿ ಮುಖ್ಯವಾದದ್ದು ಇದು ಆಗಬಹುದು. ಭರತಖಂಡದ ತುಂಬೆಲ್ಲ ಎಲ್ಲಿ ನೋಡಿದತ್ತ ಶೈವ ಸಾಮ್ರಾಜ್ಯದ ದುಂದುಭಿಯ ನಾದವು ಮೊಳಗುತ್ತಿರಲು ಕಾಲಾನು ಗುಣವಾಗಿ ಅವರಲ್ಲಿ ಕಾಪಾಲಿಕರು ಪಾಶುಪತರು ಕಾಳಾಮುಖರು ಮೊದಲಾದ ಹಲವು ಪಂಗಡಗಳು ಉತ್ಪನ್ನವಾಗಿ ಶಿವಸಾಮ್ರಾಜ್ಯದ ತಳಹದಿಯು ಕೆಲಮಟ್ಟಿಗೆ ಸಡಲಿತು. ಬರಬರುತ್ತ ಇವರಲ್ಲಿ ಆಚಾರ ಶೀಲ ಮತ್ತು ಸಂಸ್ಕಾರ ಮುಂತಾದ ಒಳಭೇದದಿಂದ (೧) ಅನಾದಿ ಶೈವ (೨) ಆದಿಶೈವ (೩) ಅನುಶೈವ (೪) ಮಹಾಶೈವ (೫) ಯೋಗ

ಶೈವ (೬) ಜ್ಞಾನಶೈವ (೭) ಮತ್ತು ವೀರಶೈವವೆಂಬ ಏಳು ಪಂಗಡಗಳು ಉಂಟಾದವು. ಈ ವೀರಶೈವರಲ್ಲಿ ನವವಿಧ ಭಕ್ತಿಯು ಕಡೆಯದಾದ ಆತ್ಮಾರ್ಪಣದ ಮಬ್ಬಿನಲ್ಲಿ ಚೆಂಗಳೆಯೆಂಬ ಶಿವಶರಣೆಯು ಮಗನನ್ನು ಕೊಂದು ಬಾಣಸವ ಮಾಡಿ ಶಿವರೂಪಿ ಜಂಗಮನನ್ನು ತೃಪ್ತಿಪಡಿಸಿದಳು. ಇದರಂತೆ ನಿಂಬಕ್ಕನೆಂಬ ಶಿವಶರಣೆಯೂ ಮಾಡಿದಳು. ಪೋಕ ಜಂಗಮ ಬಂದು ಮದವಳಿಗೆಯ ಶ್ರೀಕರದ ಮುಡಿಗಟ್ಟು ಕೊಯಿದು ಕೊಡೆಂದು ಬೇಡಲು ಅದನ್ನು ಒಬ್ಬ ಶಿವಶರಣನು ಜಂಗಮನ ಸಲುವಾಗಿ ಮಾಡಿ ತೋರಿಸಿದನು. ಹೀಗೆ ವೀರಶೈವರಲ್ಲಿ ಭಕ್ತಿಯು ನಿಮಿತ್ಯದಿಂದ ಸುತ್ತಲೂ ಇಂಥ ವೀರವೃತ್ತಿಯ ಕಾರ್ಯಗಳು ನಡೆದವು. ಇಂಥ ಸುಸಂಧಿಯನ್ನು ಸಾಧಿಸಿ ಶಿವದೀಕ್ಷೆಯನ್ನು ಹೊಂದಿದ ಶೈವರಲ್ಲಿ ಚಾತುರ್ವರ್ಣಗಳು ಇರಕೂಡದೆಂಬ ತತ್ವವನ್ನು ಮಾರ್ಪಡಿಸಿ ಬೇರೆ ರೀತಿಯಾಗಿ ಉಪಯೋಗಿಸುತ್ತಲೂ ಮತ್ತು ಶಿವಭಕ್ತಿಯ ಅನುಕರಣವನ್ನು ಮಾಡುತ್ತಲೂ ಹಾಳಾದ ಹಂಪಿಯೊಳಗಿಂದ ಕಲ್ಲು ಮಣ್ಣನ್ನು ತೆಗೆದುಕೊಂಡು ಬೇರೊಂದು ಕಟ್ಟಡವನ್ನು ಕಟ್ಟಿಕೊಳ್ಳುವನಂತೆ ೧೧ ನೆಯ ಶತಮಾನದಲ್ಲಿ ಶ್ರೀ ರಾಮಾನುಜಾಚಾರ್ಯನು ವೈಷ್ಣವ ಪಂಥವನ್ನು ತೆಗೆದನು. ಹೀಗೆ ಶೈವರಲ್ಲಿಯ ಅನೈಕ್ಯ ಮತ್ತು ವೈಷ್ಣವರ ಆಕ್ರಮಣವು ಹೆಚ್ಚಾದ್ದನ್ನು ಕಂಡು ೧೨ನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ಬಸವಾದಿ ಪ್ರಮಥರು ಕ್ರಾಂತಿಯನ್ನು ಹೂಡಿದರು.

ಈ ಕಲ್ಯಾಣದ ಕ್ರಾಂತಿಯ ಆಂದೋಲನದಲ್ಲಿ ೫೬ ದೇಶದ ಶೈವರು ಬಂದು ಕೂಡಹತ್ತಿದರು. ಕೇದಾರ ಖಂಡದಲ್ಲಿ ಹೇಳಿರುವ ಕೇದಾರೇಶ್ವರ ಲಿಂಗದ ಶಿವಭಕ್ತರೂ ಸ್ಕಂದ ಪುರಾಣಾಂತರ್ಗತವಾದ ಮಾಹೇಶ್ವರ ಖಂಡದಲ್ಲಿ ಉಕ್ತವಾದ ಮಾಹೇಶ್ವರರೂ ತಮಿಳ, ಆಂಧ್ರ, ಕಾಶ್ಮೀರ, ನೇಪಾಳ ಮತ್ತು ಭೂತಾನ ಮುಂದಾದ ಸ್ಥಾನದ ಶಿವಭಕ್ತರೂ ವಿಶೇಷವಾಗಿ ಬಂದು ನೆರೆದರು. ಇವರಲ್ಲಿ ಸೌರಾಷ್ಟ್ರದ ಆದಯ್ಯನಂಥ ಧನಿಕರೂ ಉಡುತಡಿಯ ಅಕ್ಕಮಹಾದೇವಿಯಂಥ ವೈರಾಗ್ಯಶೀಲರಾದ ಶಿವಶರಣೆಯರೂ ಏಕಾಂತದ ರಾಮಯ್ಯನಂಥ ಕುಂತಲದೇಶದ ಶೈವರೂ ಸೊಲ್ಲಾಪುರದ ಸಿದ್ಧರಾಮನಂಥ ಯೋಗಿ ಸಾಮ್ರಾಟರೂ ಹಿಪ್ಪರಗಿಯ ಮಡಿವಾಳ ಮಾಚಿತಂದೆಯಂಥ ಮನದ ಮೈಲಿಗೆಯನ್ನು ತೊಳೆಯುವವರೂ, ದಕ್ಷಿಣದ ಸಕಲೇಶ ಮಾದರಸರಂಥ ರಾಜರೂ ಕಾಶ್ಮೀರದ

ರಾಜಪುತ್ರಿಯಾದ ಬೊಂತಾದೇವಿಯಂಥ ಕುಮಾರಿಯರೂ ಕೇರಳದ ಅರಸನಾದ ಚಾರಮ ಗಂಧರಾಜರೂ ಪಟ್ಟದಕಲ್ಲು ಮತ್ತು ಐಹೊಳ್ಳಿಗಳ ಅರಸರಾದ ಅನುಮಿಷ ಮತ್ತು ಮಲ್ಲರಸರಂಥ ಶೂರ ರಾಜರೂ ಕೂಡಿದ್ದರು. ಹೀಗೆ ಒಟ್ಟು ೭೭೦ ಶೈವಾಗಮಗಳ ತತ್ವಜ್ಞಾನಿಗಳೇ ಕೂಡಿಕೆನಂಡು ಶ್ರೀಮದನಾದಿ ಅಲ್ಲಮ ಪ್ರಭುದೇವನ ಅಧ್ಯಕ್ಷತೆಯಲ್ಲಿ ಶಿವಾನುಭವ ಮಂಟಪದೊಳಗೆ ನೆರೆದು ಅಧ್ಯಾತ್ಮಿಕ ಜ್ಞಾನದ ವಿಚಾರ ಮಾಡುತ್ತಿದ್ದರು. ಈ ಶಿವಾನುಭವ ಮಂಟಪದಲ್ಲಿ ಗೊತ್ತಾದ ನಿರ್ಣಯಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ ಅವುಗಳನ್ನು ತೀವ್ರವೇ ದೇಶದ ಮಧ್ಯದಲ್ಲಿ ಹರಡಿ ಜನರ ಉದ್ಧಾರ ಮಾಡಲು ನಿರಪೇಕ್ಷ ಬುದ್ಧಿಯಿಂದ ಸ್ವಯಂಸೇವಕರಂತೆ ಕೆಲಸ ಮಾಡಲು ಸುಮಾರು ೨ ಲಕ್ಷ ಜನರು ಬೇಕಾಗಬಹುದೆಂದು ಊಹಿಸಿ ಬಸವಣ್ಣನು ಜಂಗಮರನ್ನು ಕಲೆಹಾಕುತ್ತಿದ್ದನು. ಈ ಸಂಕಲ್ಪಕ್ಕೆ ೩ ಸಾವಿರ ಜಂಗಮರ ಕೊರತೆಯುಂಟಾದ್ದರಿಂದ ಬಸವಣ್ಣನು ಕೋರಿಸೆಟ್ಟಿಯ ವೇಷದಿಂದ ಕಾಶ್ಮೀರಕ್ಕೆ ಹೋಗಿ ಅಲ್ಲಿ ಆ ದೇಶದ ಅರಸನ ಆಶ್ರಯದಲ್ಲಿದ್ದ ೩ ಸಾವಿರ ಜಂಗಮರನ್ನು ಗುಪ್ತವಾಗಿ ಕರೆದುಕೊಂಡು ಬಂದನು. ಈ ಸುದ್ದಿಯನ್ನು ಕೇಳಿ ಕಾಶ್ಮೀರದ ಅರಸನು ಬಸವಣ್ಣನು ದಂಡಾಧೀಶನೂ ಮುಖ್ಯಮಂತ್ರಿಯೂ ಇದ್ದದ್ದನ್ನು ಅರಿತು ಕಲ್ಯಾಣಕ್ಕೆ ದಂಡೆತ್ತಿ ಬಂದನು. ಕಲ್ಯಾಣದಲ್ಲಿ ಭಕ್ತಿಸಾಮ್ರಾಟನಾದ ಬಸವಣ್ಣನನ್ನು ಕಂಡಾಕ್ಷಣವೇ ತನಗೆ ಏರಿದ ಅರಸನ ಪಿತ್ತವು ಕೆಳಗೆ ಇಳಿದು ಬಸವಣ್ಣನ ಸಮ್ಮುಖದಲ್ಲಿ ಸುಮ್ಮನೆ ನಿಂತುಕೊಂಡನು. ಕೆಲವು ನಿಮಿಷಗಳ ಮೇಲೆ ಮನವುಬ್ಬಿ ವೈರಾಗ್ಯ ಉತ್ಪನ್ನವಾಗಿ ರಾಜವೈಭವದ ಮೋಹವನ್ನು ಬಿಟ್ಟು ಕಲ್ಯಾಣದಲ್ಲಿ ನಿಂತು ಬಸವಣ್ಣನ ದಾಸೋಹಕ್ಕೆ ತನ್ನ ಅಲ್ಪ ಸೇವೆಯನ್ನು ಸಲ್ಲಿಸುವ ನಿಮಿತ್ಯ ಕಟ್ಟಿಗೆ ಮಾರುವ ಕಾಯಕವನ್ನು ಕೈಕೊಂಡು ಮೋಳಿಗೆಯ ಮಾರಯ್ಯನಾಗಿ ನಿಂತುಬಿಟ್ಟನು. ಇವನ ಕಾಯಕಕ್ಕೆ ಇವನ ಮಡದಿಯಾದ ಮಹಾದೇವಿಯೂ ನಿಂತುಬಿಟ್ಟಳು. ಹೀಗೆ ಉಭಯತರು ದಾಸೋಹ ಮಾಡುತ್ತಿರಲು ಜ್ಞಾನೋದಯವಾಗಿ ಇವರಿರ್ವರೂ ವಚನಗಳನ್ನು ಬರೆದರು. ಮತ್ತು ಕಲ್ಯಾಣದ ಕ್ರಾಂತಿಯು ಮುಗಿದಮೇಲೆ ಆ ಸೀಮೆಯಲ್ಲಿ ಬೈಲಾದರು.

---

ವೆಂತಿರ್ದುದೆಂವಡೆ ದರ್ಶನ ಸ್ಪರ್ಶನ ಧಾರಣ ಅರ್ಚನ ದಾನ ಜಪಂಗಳ ವಿಧಾನ ಫಲಂಗಳಂ ತಿಳಿದು ನಿರ್ವ್ಯೋಕ್ಷ್ಮಿ ಮಂತ್ರಗಳಿಂದ ಅಭಿಮಂತ್ರಿಸಿ, ಅರ್ಚನ ಕ್ರಮವಿಡಿದು ದ್ವಾದಶ ಬೀಜ ದ್ವಾದಶ ಪ್ರಣವ ಪಂಚ ಪಂಚಾಕ್ಷರೀ ಮಂತ್ರಸ್ಮರಣೆಗಳಿಂದ ಶಿರಶಿಖಿ ಮೂರ್ಧ್ನಿಲಲಾಟ ಕರ್ಣಂಗಳು ಕಂಠ ಬಾಹು ಗಳು ಮಣಿಬಂಧಂಗಳು ಕುಕ್ಷ ಬಾಹುದ್ವಯ ಯಜ್ಞೋಪವೀತಗಳೆಂಬ ಚತು ರ್ದಶ ಸ್ಥಾನಂಗಳಲ್ಲಿ ಚತುರ್ದಶ ಮುಖದ ಪರಿಯಂತರವು ರುದ್ರಾಕ್ಷಿಗಳ ಚತುರ್ದಶ ನಾಮಾವಳಿ ಸ್ಮರಣೆಯಿಂ ಚತುರ್ದಶ ಭುವನ ರಕ್ಷಣ್ಯಕ್ಕೋಸ್ಕರ ರುದ್ರಾಕ್ಷ ಧಾರಣವಂ ಮಾಡಿ ತಾನೆ ರುದ್ರನಾಗಿನಿಂದನದೆಂತೆಂದೊಡೆ, ಶ್ಲೋ॥ ರುದ್ರಾಕ್ಷ ವಲಯಾ ದೇವಿ ರುದ್ರಾಕ್ಷಂ ರುದ್ರಮೇವಚ । ಯತ್ಫಲಂ ಕೋಟಿ ಗುಣಿತಂ । ತತ್ಫಲಂ ರುದಾಕ್ಷಧಾರಣಂ ॥ ಇದುಕಾರಣ ತಾವೇ ರುದ್ರಕ್ಷ ನಾಗಿ ನಿಂದ ಘನವೇದ್ಯ ಶರಣನ ಚರಣಕ್ಕೆ ನಮೋ ನಮೋ ಎಂಬೆ ಕಾಣಾ ಮದ್ಗುರು ಬಸವಲಿಂಗಪ್ರಭುವೇ.

---

## ರುದ್ರಾಕ್ಷಿ ಧಾರಣ ಸ್ಥಲಗಳು

(೧) ಶಿಖಿಯಲ್ಲಿ ಒಂದು, ತಲೆ ಬಳಸಿ ಮೂವತ್ತಾರು, ಕಂಠದಲ್ಲಿ ಮೂವತ್ತೆರಡು, ಎದೆಯಲ್ಲಿ ಐವತ್ತಾರು, ಎರಡು ತೋಳುಗಳಲ್ಲಿ ಹದಿನಾರು ಹದಿನಾರು, ಎರಡು ಮುಂಗೈಗಳಲ್ಲಿ ಹನ್ನೆರಡು ಹನ್ನೆರಡು, ಎರಡು ಕಿವಿಗಳಲ್ಲಿ ಒಂದೊಂದು, ಯಜ್ಞೋಪವೀತ ನೂರಾ ಎಂಟು ಇಂತಿಷ್ಟು ಮೇಲೆ ಹೇಳಿದ ಸ್ಥಾನಂಗಳಲ್ಲಿ ರುದ್ರಾಕ್ಷಿ 'ರುಕ್ಷ ಬೀಜಾಯ ಭೂತಿ ಸಂಭೂತಿಹೇತವೇ ನೇತ್ರ ತ್ರಯಾಯ ರುದ್ರಾಯ ನಮೋ ಲೋಕಹಿತಾರ್ಥಿನೇ' ಎಂದು ರುದ್ರಾಕ್ಷಿಯ ಧರಿಸಿಕೊಂಬುವದು.

(೨) ರುದ್ರಾಕ್ಷಿಯ ಧರಿಸುವ ಭೇದವೆಂತೆಂದರೆ:— ಶಿಖಾ ಸ್ಥಾನದಲ್ಲಿ ಏಕ ಮುಖವುಳ್ಳಂಥ ಒಂದು ರುದ್ರಾಕ್ಷಿಯ ಓಂ ಸದಾಶಿವಾಯ ನಮಃ ಎಂಬ ಮಂತ್ರದಿಂದ ಧಾರಣವ ಮಾಡುವದು. ಮಸ್ತಕಗಳಲ್ಲಿ ಎರಡು ಮುಖ ಮೂರು ಮುಖ ಹನ್ನೆರಡು ಮುಖವುಳ್ಳಂಥ ಮೂರು ರುದ್ರಾಕ್ಷಿಗಳ ಓಂ ವಹ್ನಿ ಸೋಮಃ ಸೂರ್ಯಾದಿ ರೂಪಾಯ ನಮಃ ಎಂಬ ಮಂತ್ರದಿಂದ ಧಾರ ಣವ ಮಾಡುವದು. ಶಿರವಂ ಬಳಿಸಿ ಹನ್ನೊಂದು ಮುಖಂಗಳನುಳ್ಳಂಥಾ

ಮೂವತ್ತಾರು ರುದ್ರಾಕ್ಷಿಗಳ ಓಂ ಷಟ್ ತ್ರಿಂಶತ್ತತ್ವಾತ್ಮಕಾಯ ಪರಶಿವಾಯ ನಮಃ ಎಂಬ ಮಂತ್ರದಿಂದ ಧಾರಣವ ಮಾಡುವದು. ಕರ್ಣಯುಗಳದಲ್ಲಿ ಐದು ಮುಖದ ಏಳು ಮುಖದ ಹತ್ತು ಮುಖದ ರುದ್ರಾಕ್ಷಿಗಳನೊಂದೊಂದು, ಓಂ ಸೋಮಾಯ ನಮಃ ಎಂಬ ಮಂತ್ರದಿಂದ ಧಾರಣಮಾಡುವದು. ಕಂಠ ಸ್ಥಾನದಲ್ಲಿ ಎಂಟು ಮುಖ ಆರು ಮುಖವನುಳ್ಳಂಥಾ ಮೂವತ್ತೆರಡು ರುದ್ರಾಕ್ಷಿಗಳ ಓಂ ತ್ರೈಲೋಕ್ಯ ತ್ರ್ಯಂಬಕ ಕಾಲಾಂತಕ ಶಿವಾಯನಮಃ ಎಂಬ ಮಂತ್ರದಿಂದ ಧಾರಣವ ಮಾಡುವದು. ಉರ ಸ್ಥಾನದಲ್ಲಿ ಚತುರ್ಮುಖವನುಳ್ಳಂಥಾ ಐವತ್ತಾರು ರುದ್ರಾಕ್ಷಿಗಳ ಓಂ ಶ್ರೀಕಂಠಾದಿ ಮೂರ್ತ್ಯಾತ್ಮಕಾಯ ಸರ್ವಜ್ಞಾಯ ನಮಃ ಎಂಬ ಮಂತ್ರದಿಂದ ಧಾರಣವ ಮಾಡುವದಯ್ಯ. ಬಾಹುದ್ವಯದಲ್ಲಿ ಹದಿಮೂರು ಮುಖಗಳುಳ್ಳಂಥಾ ಷೋಡಶ ರುದ್ರಾಕ್ಷಿಗಳ ಓಂ ಸುಖಾಸನಾದಿ ಷೋಡಶ ಮೂರ್ತ್ಯಾತ್ಮಕಾಯ ಶ್ರೀಕಂಠಾಯನಮಃ ಎಂಬ ಮಂತ್ರದಿಂದ ಬಲದೋಳಿನಲ್ಲಿ ಧಾರಣವ ಮಾಡುವದು. ಓಂ ಶ್ರೀ ಸೋಮ ಕಳಾತ್ಮಕಾಯ ಶ್ರೀ ಸೋಮನಾಥಾಯ ಎಂಬ ಮಂತ್ರದಿಂದ ಎಡದೋಳಿನಲ್ಲಿ ಧಾರಣವ ಮಾಡುವದಯ್ಯ. ಮುಂಗೈ ಎರಡರಲ್ಲಿ ಒಂಭತ್ತು ಮುಖವನುಳ್ಳಂಥಾ ಹನ್ನೆರಡು ರುದ್ರಾಕ್ಷಿಗಳ ಓಂ ದ್ವಾದಶ ಆದಿತ್ಯಾದಿರೂಪಾಯ ಶ್ರೀ ಮಹಾದೇವಾಯ ನಮಃ ಎಂಬ ಮಂತ್ರದಿಂದ ಬಲದ ಮುಂಗೈಯ್ಯಲ್ಲಿ ಧಾರಣವ ಮಾಡುವದು. ವಕ್ಷಸ್ಥಳದಲ್ಲಿ ಯಜ್ಞೋಪವೀತವಾಗಿ ಹದಿನಾಲ್ಕು ಮುಖವನುಳ್ಳಂಥಾ ನೂರಾಎಂಟು ರುದ್ರಾಕ್ಷಿಗಳ, ಓಂ ಶತ ರುದ್ರವಿದ್ಯಾಸ್ವರಾತ್ಮಕಾಯ ಶ್ರೀ ವಿಶ್ವೇಶ್ವರಾಯ ನಮಃ ಎಂಬ ಮಂತ್ರದಿಂದ ಧಾರಣವ ಮಾಡುವದು. ಇಂತೀ ಸ್ಥಾನಂಗಳ ಮುಖಮಂತ್ರಗಳ ಭೇದವರಿತು ಶ್ರೀ ರುದ್ರಾಕ್ಷಿಯ ಧರಿಸಿದ ಶರಣ ತಾನೆ ಸಾಕ್ಷಾತ್ ಶಿವನಲ್ಲದೆ ಬೇರಿಲ್ಲವಯ್ಯ ಅಖಂಡೇಶ್ವರಾ.

(೩) ಘನಕ್ಕೆ ಘನಮಹಿಮೆಯ ಪಡೆವರೆ ಶ್ರೀ ರುದ್ರಾಕ್ಷಿಯನೆ ಧರಿಸುವದು. ಇದುಕಾರಣ ಪಶ್ಚಿಮದಲ್ಲಿ ಒಂದು ಶಿಖಿಯಲ್ಲಿ ಮೂರು ಶಿರದಲ್ಲಿ ಮೂವತ್ತಾರು ಗಳದಲ್ಲಿ ಮೂವತ್ತೆರಡು ಕರ್ಣದ್ವಯದಲ್ಲಿ ಎರಡು ಹಾರದಲ್ಲಿ ನೂರೆಂಟು ತೋಳುಗಳಲ್ಲಿ ಹದಿನಾರು ಹದಿನಾರು ಕರಗಳಲ್ಲಿ ಹನ್ನೆರಡು ಹನ್ನೆರಡು ಉರದಲ್ಲಿ ಐವತ್ತು ಜಪದಲ್ಲಿ ಇಪ್ಪತ್ತೆಂಟು ಈ ಕ್ರಮವನರಿತು ರುದ್ರಾಕ್ಷಿಯ ಧರಿಸಿದಾತನೇ ರುದ್ರನು, ಆತನೇ ಸದ್ಯನ್ಮುಕ್ತನು. ಅತನೇ

ಇಹಲೋಕ ಪರಲೋಕ ಪೂಜ್ಯನು. ಆತನ ದರ್ಶನ ಸ್ಪರ್ಶನದಿಂದ ತಾನು ನಿತ್ಯ ಮುಕ್ತನಹೆನಯ್ಯ ಉರಿಲಿಂಗಪೆದ್ದಿ ಪ್ರಿಯವಿಶ್ವೇಶ್ವರಾ.

(೪) ಏಕಮುಖ್ಯ ರುದ್ರಾಕ್ಷಿಯ ಒಂದನೇ ಪಶ್ಚಿಮದಲ್ಲಿ ಧರಿಸುವದಯ್ಯ. ದ್ವಿ ತ್ರಿ ದ್ವಾದಶ ಮುಖದ ಮೂರು ಮಣಿಯ ಮೂರ್ಧ್ನಲ್ಲಿ ಧರಿಸುವದಯ್ಯ. ಏಕಾದಶ ಮುಖದ ಮೂವತ್ತಾರು ಮಣಿಯ ಶಿರವ ಬಳಸಿ ಧರಿಸುವದಯ್ಯ. ಐದೇಳು ಹತ್ತು ಮುಖದ ರುದ್ರಾಕ್ಷಿಯ ಒಂದೊಂದು ದ್ವಿ ಕರ್ಣದಲ್ಲಿ ಧರಿಸುವದಯ್ಯ ಷಡಷ್ಟ ಮುಖದ ರುದ್ರಾಕ್ಷಿಯ ದ್ವಾತ್ರಿಂಶ ಕಂಠದಲ್ಲಿ ಧರಿಸುವದಯ್ಯ. ಚತುರ್ಮುಖದ ರುದ್ರಾಕ್ಷಿಯ ಪಂಚಾಶತ್ ಉರಮಾಲೆಯಾಗಿ ಧರಿಸುವದಯ್ಯ. ತ್ರಿದಶ ಮುಖದ ರುದ್ರಾಕ್ಷಿಯ ದ್ವಾತ್ರಿಂಶತ್ ಉರು ಬಾಹುಗಳಲ್ಲಿ ಧರಿಸುವದಯ್ಯ. ನವ ಮುಖದ ರುದ್ರಾಕ್ಷಿಯ ಚತುರ್ವಿಂಶಕ ದ್ವಿ ಮಣಿಬಂಧದಲ್ಲಿ ಧರಿಸುವದಯ್ಯ. ಚತುರ್ದಶ ಮುಖದ ರುದ್ರಾಕ್ಷಿಯ ಅಷ್ಟೋತ್ತರ ಶತವ ಯಜ್ಞೋಪವೀತವಾಗಿ ಧರಿಸುವದಯ್ಯ. ಇಂತರಿವು ರುದ್ರಾಕ್ಷಿ ಧರಿಸಿದ ಶಿವಮಹೇಶ್ವರನ ಹಜ್ಜೆ ಹಜ್ಜೆಗೆ ಅಶ್ವಮೇಧಯ ಫಲ ತಪ್ಪದಯ್ಯ ಸೌರಾಷ್ಟ್ರ ಸೋಮೇಶ್ವರಾ.

---

## ರುದ್ರಾಕ್ಷಿ ಧಾರಣಯುಕ್ತನಾದ ಬಳಿಕ ವರ್ತನೆ

(೧) ಹಸ್ತ ಕಡಗ ಕೈಗಧಿಕ ನೋಡಾ, ಕೊಡಬಹುದು ಕೊಳಲಾಗದು ಬಾಹು ಬಳೆ ತೋಳಿಂಗಧಿಕ, ಪರವಧುವನಪ್ಪಲಾಗದು. ಕರ್ಣಕುಂಡಲ, ಕಿವಿಗಧಿಕ ನೋಡಾ, ಶಿವನಿಂದೆಯ ಕೇಳಲಾಗದು. ಕಂಠಮಾಲೆ ಕೊರಳಿಗಧಿಕ ನೋಡಾ, ಅನ್ಯ ದೈವಕ್ಕೆರಗಲಾಗದು. ಆಗಳೂ ನಿಮ್ಮುವ ನೆನೆದು ಕೂಡಲ ಸಂಗಮದೇವಾ ನಿಮ್ಮುವನು ಪೂಜಿಸಿ ಸದಾ ಸನ್ನಿಹಿತನಾಗಿಪ್ಪನು ಲಿಂಗ ಶಿಖಾಮಣಿಯಯ್ಯ.

---

## ರುದ್ರಾಕ್ಷಿಯ ಮಹತ್ವ

ಬ್ರಾಹ್ಮಣ ಮೂರ್ಖ ಪಂಡಿತ ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ಥ ಯತಿ ಯಾದಡಾಗಲಿ, ಶ್ರೀ ರುದ್ರಾಕ್ಷಿಯನೊಲಿದು ಧರಿಸುವುದು ಕಾಣಿರಣ್ಣಾ. ಮತ್ತೆ ಜಪಕಾಲ ತಪಕಾಲದಲ್ಲಿ ದೇವಪೂಜೆಯಲ್ಲಿ ಶ್ರೀ ರುದ್ರಾಕ್ಷಿಯನೊಲಿದು

ಧರಿಸುವುದು ಕಾಣಿರಣ್ಣಾ. ಈ ಶ್ರೀ ಮಹಾರುದ್ರಾಕ್ಷಿಯ ಧರಿಸಿದ ಮಹಾತ್ಮನು ಹಜ್ಜೆ ಹಜ್ಜೆಗೆ ಅಶ್ವಮೇಧ ಶತಯಾಗದ ಫಲವ ಪಡೆದು ಬಳಿಕ ನಿಜ ಗುರು ಸ್ವತಂತ್ರ ನಮ್ಮ ಲಿಂಗೇಶ್ವರನ ಕೂಡಿ ಸುಖವಿಹನು ಕಾಣಿರಣ್ಣಾ.

---

ಶಿವಾನುಭವ ಶಬ್ದಕೋಶದಲ್ಲಿ ರುದ್ರಾಕ್ಷಿಯ ವಿಷಯವಾಗಿ ಹೇಳಿದ ವಿವರಣೆಯು ಉಪಯುಕ್ತವಾಗಿದ್ದು ಅದು ಕೆಳಗಿನಂತೆ ಇದೆ.

## ರುದ್ರಾಕ್ಷಿಗಳು

ರುದ್ರಾಕ್ಷಿಗಳು ಪರಶಿವನ ಜ್ಞಾನಚಕ್ಷುವಿನಿಂದ ಉದಯವಾದುವೆಂದು ತಿಳಿಯಲ್ಪಡುತ್ತವೆ. ಅವು ಶಿವಾನುಭವದ ಅರಿಕೆಯನ್ನು ಮಾಡಿಕೊಡುವ ತತ್ವಚಿಂತಾಮಣಿಗಳು ಮತ್ತು ರುದ್ರನ ಮುದ್ರೆಗಳು ಎಂದು ಭಾವಿಸಬೇಕು. ಭಕ್ತನು ಜಪದ ರೀತಿಗಳನ್ನು ಮೊದಲು ತಿಳಿಯಬೇಕು. ಇವುಗಳನ್ನು ತಿಳಿದು ಮಂತ್ರಸ್ಮರಣೆಯಿಂದ ರುದ್ರಾಕ್ಷಿಗಳನ್ನು ಆಯಾ ಸ್ಥಾನಗಳಲ್ಲಿ ಧರಿಸಿಕೊಂಡು ತಾನೇ ರುದ್ರನಾಗಿ ಲಿಂಗವನ್ನು ಪೂಜಿಸಬೇಕು. ವಿಭೂತಿ ರುದ್ರಾಕ್ಷಿಗಳನ್ನು ಧರಿಸಿಕೊಂಡು ಶಿವಲಿಂಗಾರ್ಚನೆಯನ್ನು ಮಾಡಿ, ಪಂಚಾಕ್ಷರಿಯನ್ನು ವಿಧಾನಪೂರ್ವಕ ಜಪಿಸುವದೇ ವೀರಶೈವನ ಮುಖ್ಯ ಆಚರಣೆಯಾಗಿದೆ.

## ರುದ್ರಾಕ್ಷಿ ಧಾರಣ ಸ್ಥಾನಗಳು

ಪಶ್ಚಿಮ ಚಕ್ರದಲ್ಲಿ ೧, ಶಿಖಿಯಲ್ಲಿ ಅಥವಾ ಮುರ್ಧ್ನಿಯಲ್ಲಿ ೩, ಶಿರವನ್ನು ಬಳಸಿ ೩೬, ಪ್ರತಿಯೊಂದು ಕರ್ಣದಲ್ಲಿ ಒಂದೊಂದು, ಕಂಠದಲ್ಲಿ ೩೨, ಉರ ಅಥವಾ ಎದೆಯಲ್ಲಿ ೫೬, ಎರಡು ತೋಳುಗಳಲ್ಲಿ ೧೬, ೧೬, ಎರಡು ಮುಂಗೈಗಳಲ್ಲಿ ೧೨, ೧೨, ವಕ್ಷಸ್ಥಳದಲ್ಲಿ ಹಾರ ಅಥವಾ ಯಜ್ಞೋಪವೀತವಾಗಿ ೧೦೮, ಈ ಪ್ರಕಾರ ರುದ್ರಾಕ್ಷಿಗಳನ್ನು ಭಕ್ತನು ಧರಿಸಬೇಕು. ಈ ರುದ್ರಾಕ್ಷಿಗಳು ಬೇರೆ ಬೇರೆ ಮುಖದವುಗಳಿದ್ದು ಅವುಗಳನ್ನು ಬೇರೆ ಬೇರೆ ವಿಶಿಷ್ಟ ಸ್ಥಾನಗಳಲ್ಲಿ ಧರಿಸಬೇಕೆಂದು ನಿಯಮಗಳಿವೆ. ಹಸ್ತದಲ್ಲಿ ಧರಿಸಿದಲ್ಲಿ ದಾನ ಕೊಡಬಹುದು. ಆದರೆ ದಾನ ತೆಗೆದುಕೊಳ್ಳಬಾರದು. ಬಾಹುವಿನಲ್ಲಿದ್ದರೆ ಪರವಧೂ ಸಂಗವನ್ನು ಮಾಡಕೂಡದು. ಉರದಲ್ಲಿದ್ದರೆ ಅನ್ಯದೈವಕ್ಕೆರಗ ಬಾರದು. ಹೀಗೆ ರುದ್ರಾಕ್ಷಿಧಾರಣವಾದ ಬಳಿಕ ಉಚ್ಚ ನೈತಿಕಾಚರಣೆಯು

ಳ್ಳವನಾಗಿರಬೇಕು. ಜಪಕಾಲದಲ್ಲಿ, ತಪಸ್ಸಿನ ಕಾಲದಲ್ಲಿ ಮತ್ತು ದೇವ ಪೂಜೆಯಲ್ಲಿ ರುದ್ರಾಕ್ಷಿಗಳನ್ನು ಧರಿಸಬೇಕು. ಹೀಗೆ ಭಕ್ತನು ರುದ್ರಾಕ್ಷಿಯನ್ನರಿದು ಆಚರಿಸಬೇಕು.

## ರುದ್ರಾಕ್ಷಿಯ ವಿಧಗಳು

೧೪ ಮುಖಗಳ ವರೆಗೆ ರುದ್ರಾಕ್ಷಿಗಳಿರುತ್ತವೆ. ಏಕಮುಖ ರುದ್ರಾಕ್ಷಿಯು ಪರಶಿವಗೆ, ೨ ಮುಖವುಳ್ಳ ರುದ್ರಾಕ್ಷಿಯು ಈಶಾನಗೆ, ೩ ಮುಖವುಳ್ಳ ರುದ್ರಾಕ್ಷಿಯು ಅಗ್ನಿಗೆ, ೪ ಮುಖವುಳ್ಳ ರುದ್ರಾಕ್ಷಿಯು ಬ್ರಹ್ಮನಿಗೆ, ೫ ಮುಖವುಳ್ಳ ರುದ್ರಾಕ್ಷಿಯು ಸದಾಶಿವನಿಗೆ, ೬ ಮುಖವುಳ್ಳ ರುದ್ರಾಕ್ಷಿಯು ಷಣ್ಮುಖನಿಗೆ, ೭ ಮುಖವುಳ್ಳ ರುದ್ರಾಕ್ಷಿಯು ಅನಂತನಿಗೆ, ೮ ಮುಖವುಳ್ಳ ರುದ್ರಾಕ್ಷಿಯು ವಿಘ್ನೇಶ್ವರನಿಗೆ, ೯ ಮುಖವುಳ್ಳ ರುದ್ರಾಕ್ಷಿಯು ಭೈರವನಿಗೆ, ೧೦ ಮುಖವುಳ್ಳ ರುದ್ರಾಕ್ಷಿಯು ಮಾಧವನಿಗೆ, ೧೧ ಮುಖವುಳ್ಳ ರುದಾಕ್ಷಿಯು ಏಕಾದಶ ರುದ್ರರಿಗೆ, ೧೨ ಮುಖವುಳ್ಳ ರುದ್ರಾಕ್ಷಿಯು ದ್ವಾದಿಶಾದಿತ್ಯರಿಗೆ, ೧೩ ಮುಖವುಳ್ಳ ರುದ್ರಾಕ್ಷಿಯು ಮಹೇಶ್ವರನಿಗೆ, ೧೪ ಮುಖವುಳ್ಳ ರುದ್ರಾಕ್ಷಿಯು ಚತುರ್ದಶ ಮನುಗಳಿಗೆ ಸಂಬಂಧಪಡುತ್ತವೆ.

ಶಿಖಾಸ್ಥಾದದಲ್ಲಿ ಏಕಮುಖ ರುದ್ರಾಕ್ಷಿಯನ್ನು, ಮಸ್ತಕದಲ್ಲಿ, ೨ ಮುಖ, ೩ ಮುಖ ಮತ್ತು ೧೨ ಮುಖಗಳುಳ್ಳ ಮೂರು ರುದ್ರಾಕ್ಷಿಗಳನ್ನು, ೧೧ ಮುಖವುಳ್ಳ ರುದಾಕ್ಷಿಗಳನ್ನು ಶಿರವಸ್ಸು ಬಳಸಿ, ೫ ಮುಖ ೭ ಮುಖ ಅಥವಾ ೧೦ ಮುಖಗಳುಳ್ಳ ರುದ್ರಾಕ್ಷಿಗಳನ್ನು ಕರ್ಣದಲ್ಲಿ, ಕಂಠದಲ್ಲಿ ೮ ಮುಖಗಳುಳ್ಳ ರುದ್ರಾಕ್ಷಿಗಳನ್ನು, ೬ ಮುಖಗಳುಳ್ಳ ರುದ್ರಾಕ್ಷಿಗಳನ್ನು ೪ ಮುಖಗಳುಳ್ಳ ರುದ್ರಾಕ್ಷಿಗಳನ್ನು ಉರದಲ್ಲಿ, ೧೩ ಮುಖಗಳುಳ್ಳ ರುದ್ರಾಕ್ಷಿಗಳನ್ನು ಬಾಹುವಿನಲ್ಲಿ, ೯ ಮುಖಗಳುಳ್ಳ ರುದ್ರಾಕ್ಷಿಗಳನ್ನು ಮುಂಗೈಯಲ್ಲಿ, ೧೪ ಮುಖಗಳುಳ್ಳ ರುದ್ರಾಕ್ಷಿಗಳನ್ನು ವಕ್ಷಸ್ಥಳದಲ್ಲಿ, ಧರಿಸುವದೆಂದು ವಚನಕಾರರು ಹೇಳುತ್ತಾರೆ.

## ಚಿದ್ರುದ್ರಾಕ್ಷಿ

ಚಿದ್ರುದ್ರಾಕ್ಷಿಗಳೆಂತಲೂ ಇದ್ದು ಅವುಗಳ ವಿವರಣೆಯನ್ನು ಮಂತ್ರ ಈ ವಿಷಯದಲ್ಲಿ ವಾಚಕರು ನೋಡತಕ್ಕದ್ದು.



# ಮಂತ್ರ

## ಪಂಚಾಕ್ಷರಿ

(೧) ಕರಿಯಂಜುವದು ಅಂಕುಶಕ್ಕೆ. ಗಿರಿಯಂಜುವದು ವಜ್ರಕ್ಕೆ. ತಮಂಧವಂಜುವದು ಜ್ಯೋತಿಗೆ. ಕಾನನವಂಜುವದು ಬೇಗೆಗೆ. ಪಂಚಮಹಾ ಪಾತಕವಂಜುವದು ಕೂಡಲ ಸಂಗಯ್ಯ ನಿಮ್ಮ ನಾಮಕ್ಕೆ.

(೨) ಅಕಟಕಟಾ ಬೆಡಗು ಬಿನ್ನಾಣವೆಂದೇನೋ ? ಓಂ ನಮಃ ಶಿವಾಯ, ಓಂ ನಮಃಶಿವಾಯ ಎಂಬುದೇ ಮಂತ್ರ. ಓಂ ನಮಃಶಿವಾಯ, ಓಂ ನಮಃಶಿವಾಯ ಎಂಬುದೇ ತಂತ್ರ. ನಮ್ಮ ಕೂಡಲ ಸಂಗಮದೇವರ ನೆನೆವುದೇ ಮಂತ್ರವು.

(೩) ಎನ್ನ ಭವಬಂಧನ ದುರಿತಂಗಳ ಗೆಲುವಡೆ ಓಂ ನಮ:ಶಿವಾಯ ಶರಣೆಂದಡೆ ಸಾಲದೇ? ಜಯಜಯಶಂಕರ, ಹರಹರಶಂಕರ, ಶಿವಶಿವ ಶಂಕರ ಶರಣೆನುತಿರ್ದೆನು. ಎನ್ನ ಪಾತಕಕೋಟಿ ಪರಿಹರ ಕೂಡಲ ಸಂಗಯ್ಯ ಶರಣೆನುತಿದ್ದೇನೆ.

(೪) ವಿಷಯದ ಪಿತ್ತ ತಲೆಗೇರಿದಲ್ಲಿ, ವಿವೇಕವೆಂಬ ದೃಷ್ಟಿ ನಷ್ಟವಾಗಿ ಪಶುಪತಿಯ ನೆನಹುಗೆಟ್ಟು ಮತಿಮಂದವಾದಲ್ಲಿ ಮಂತ್ರದ ನೆನಹುಂಟೇ ಹೇಳಾ ರಾಮನಾಥಾ?

(೫) ಅಗ್ರಜನಾಗಲಿ ಅಂತ್ಯಜನಾಗಲಿ, ಮೂರ್ಖನಾಗಲಿ, ಪಂಡಿತನಾಗಲಿ ಜಪಿಸುವದು ಪಂಚಾಕ್ಷರೀ ಮಂತ್ರವ. ಜಪದಿಂದ ರುದ್ರನಪ್ಪುದು ತಪ್ಪದು. ಅದೆಂತೆಂದೊಡೆ, ಲೈಂಗ್ಯೇ: – ಅಗ್ರಜೋ ಅಂತ್ಯಜೋಪಿ ವಾ ಮೂರ್ಖೋ ವಾ ಪಂಡಿತೋಪಿ ವಾ । ಜಪೇತ್ಪಂಚಾಕ್ಷರೀ ಮಂತ್ರಂ ಸ ರುದ್ರೋ ನಾತ್ರ ಸಂಶಯಃ ॥ ಎಂದುದಾಗಿ ಇದಕ್ಕೆ ಶಪಥವ ಮಾಡಿದೆನು ಉರಿಲಿಂಗಪೆದ್ದಿ ಪ್ರಿಯವಿಶ್ವೇಶ್ವರಾ.

(೬) ಸದ್ಗುರುವಿನ ದೆಶೆಯಿಂದ ಆವನೋರ್ವನ ಕಿವಿಯಲ್ಲಿ ಬ್ರಹ್ಮೋಪದೇಶವ ಹೇಳಲ್ಪಟ್ಟಿತ್ತು, ಆ ಶಬ್ದವೇ ಬೀಜವೆನಿಸಿಕೊಂಡಿತ್ತಯ್ಯ. ಅದು ಆವುದಯ್ಯ ಎಂದೊಡೆ, ಶ್ರೀ ಗುರುವಿನ ದೆಸೆಯಿಂದ ಪಡೆದ ಶಿವ ಮಂತ್ರಾಕ್ಷರವೇ ಬೀಜವೆನಿಸಿಕೊಂಡಿತ್ತಯ್ಯ. ಅಂತಾ ಪ್ರಾಣಿಯೇ ಜ್ಞಾನಕಾಯ

ನೆನಿಸಿಕೊಂಡಿತ್ತಯ್ಯ. ಶಿವಮಂತ್ರೋಪದೇಶವಿಲ್ಲದಾತನು ಪ್ರಕೃತಿಕಾಯ ನೆನಿಸಿಕೊಂಬನಯ್ಯ. ಪ್ರಕೃತಿಕಾಯವೆಂದಡೆ ಅಜ್ಞಾನಿ ಎಂದು ಹೇಳಲ್ಪಡು ತ್ತಿಪ್ಪುದಯ್ಯ. ಇದು ಕಾರಣ ಪ್ರಕೃತಿ ಕಾಯ ಜ್ಞಾನ ಕಾಯವೆಂದು ಎರಡು ಭೇದವಾಗಿಪ್ಪುದಯ್ಯ. ಶಿವಮಂತ್ರ ದೀಕ್ಷೋಪದೇಶವಾಗಲಾಗಿ ಪ್ರಕೃತಿ ಕಾಯ ಹೋಗಿ ಜ್ಞಾನಕಾಯವಾಗಿಪ್ಪುದು ತಪ್ಪದಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.

(೭) ಶ್ರೀ ಮಹಾ ಪಂಚಾಕ್ಷರಿಯೇ ಸರ್ವಮಂತ್ರವೆಲ್ಲಕ್ಕೆಯೂ ಉತ್ಪತ್ತಿ ಸ್ಥಿತಿಲಯಸ್ಥಾನ-ಸರ್ವಕಾರಣವೆಲ್ಲಕ್ಕೆಯೂ ಮೂಲವು ಶ್ರೀಪಂಚಾ ಕ್ಷರಿ. ಅದೆಂತೆಂದೊಡೆ, ಕಾಮಿಕಾಗಮೆ. ಸಪ್ತಕೋಟಿ ಮಹಾಮಂತ್ರ। ಉಪಮಂತ್ರಾಸ್ತು ಅನೇಕಥಾ। ಪಂಚಾಕ್ಷರ್ಯಾಂ ಪ್ರಲೀಯಂತೆ ಪುನ ಸ್ತ್ವತ್ರ ವಿನಿರ್ಗತಾಃ॥ ತಸ್ಮಾನ್ವೇದಾಶ್ಚ ಶಾಸ್ತ್ರಾಣಿ ಮಂತ್ರ ಪಂಚಾಕ್ಷರೀ ತಥಾ॥ ಎಂದುದಾಗಿ, ಇದು ಕಾರಣ ಶ್ರೀ ಪಂಚಾಕ್ಷರಿಯುಳ್ಳ ಸದ್ಭಕ್ತನೇ ವೇದವಿತ್ತು, ಆ ಸದ್ಭಕ್ತನೇ ಶಾಸ್ತ್ರವಾನ್, ಆ ಮಹಾಮಹಿಮನೇ ಪುರಾ ಣಿಕನು, ಆ ಮಹಾಪುರುಷನೇ ಆಗಮಿಕನು, ಆ ಮಹಾಮಹಿಮನೇ ಸರ್ವ ಜ್ಞನಯ್ಯ ಉರಿಲಿಂಗಪೆದ್ದಿ ಪ್ರಿಯವಿಶ್ವೇಶ್ವರಾ.

(೮) ಶಿವನಲ್ಲದೆ ಬೇರೆ ದೇವರಿಲ್ಲ ನೋಡಾ ಎನಗೆ. ಶಿವಮಂತ್ರ ವಲ್ಲದೆ ಬೇರೆ ಮಂತ್ರವಿಲ್ಲ ನೋಡಾ ಎನಗೆ. ಇದು ಕಾರಣ ಓಂ ನಮಶ್ಶಿ ವಾಯ, ಓಂ ನಮಶ್ಶಿವಾಯ ಎಂಬ ಷಡಕ್ಷರ ಮಂತ್ರವನೇ ಜಪಿಸುತಿ ರ್ದ್ದೆನು ಕಾಣಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ.

(೯) ಮನದ ಪ್ರಾಣರೂಪವಾದ ಚಿತ್ತೇ ಮಂತ್ರವಲ್ಲದೆ ಬೇರೆ ಮಂತ್ರಂಗಳುಂಟೇ ಅಯ್ಯ? ಸರ್ವಮಂತ್ರವೂತೆ ಪಂಚಾಕ್ಷರಿಯೇ ತಾನಾಗಿ ಕಪಿಲ ಸಿದ್ಧ ಮಲ್ಲಿಕಾರ್ಜುನಂಗೆ ಅಂಗವಾದ ಚಿತ್ತೇ ಪ್ರಣಮಮೂಲವಾದ ಮಂತ್ರವಯ್ಯ.

(೧೦) ಏಳುಕೋಟಿ ಮಹಾಮಂತ್ರ. ಉಪಮಂತ್ರಗಳಿಗೆ ಲೆಕ್ಕವಿಲ್ಲ. ಚಿತ್ತವ್ಯಾಕುಲನಾಗಿ ಭ್ರಮಿಸದಿರಾ ಎಲೆ ಮನವೇ. ಶಿವ ಶಿವಾ, ಶಿವ ಶಿವಾ, ಶಿವ ಶಿವಾ, ಶಿವ ಶಿವಾ, ಶಿವ ಶಿವಾ ನಮೋ ನಮೋ, ಶಿವ ಶಿವಾ, ಶಿವ ಶಿವಾ, ಶಿವ ಶಿವಾ, ಶಿವ ಶಿವಾ, ಶಿವ ಶಿವಾ ಶರಣೆಂದರೆ ಸಾಲದೇ? ಅದೆಂ

ತೆಂದೊಡೆ, ಶಿವೇತಿ ಮಂಗಳಂ ನಾಮಂ, ಯಸ್ಯವಾಃ ಚ್ಯಂ ಪ್ರವರ್ತತೆ ಭಸ್ಮ ಭವಂತು ತಸ್ಯಾಶು,| ಮಹಾಪಾತಕ ಕೋಟಯಃ ॥ ಇಂತೆಂಬುದಾಗಿ ಎನಗ ದೇಮಂತ್ರ ಎನಗದೇ ತಂತ್ರ, ಎನಗದೇ ಗತಿ. ಮತಿ ಚೈತನ್ಯವಯ್ಯಾ ಸದ್ಗುರು ಚನ್ನಮಲ್ಲಿಕಾರ್ಜುನಯ್ಯಾ ತೋರಿದ ಎನಗದೇ ಸಹಜ ಮಂತ್ರ.

(೧೧) ಓಂಕಾರವೆಂಬ ವೃಕ್ಷದಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದವೆಂಬ ನಾಲ್ಕು ಶಾಖೆಗಳು, ಅನಂತವೈ ವೇದಂ ಗಳೆಂಬ ಉಪಶಾಖೆಗಳು. ಶಾಸ್ತ್ರಂಗಳೆಂಬ ಅಂಕುರಪಲ್ಲವ, ಪುರಾಣಗಳೆಂಬ ಪುಷ್ಪ, ಆಗಮಗಳೆಂಬ ಕಾಯಿ ಬಲಿದು, ಶ್ರೀ ಪಂಚಾಕ್ಷರಿ ಎಂಬ ಮಧು ರಸ ಪಣ್ಣಾಳು ಅಗಣಿತ ಫಲವನು ಅನಂತಕಾಲ ಭೋಗಿಸಲು ಮತ್ತಂ ಜಿಹ್ವೆಯೊಳಗೆ ಬಂದಿರಲು ಭೋಗಿಸಿ ಸುಖಿಯಹುದಲ್ಲದೆ ಇತರ ವಿದ್ಯಂಗ ಳೆಂಬ ಸಸಿಯ ಸಾಕಿ ಸಲಹಲುಂಟೇ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ?

(೧೨) ಶಿವ ಶಿವಾ ಎಂಬುದು ಭವದುರಿತ ದೋಟಿ ಕಂಡಯ್ಯಾ. ಹರಹರಾ ಎಂಬುದು ಹರಣದ ತೊಡಕಿನ ಮರಣ ಪರಿಹರಿಸುವದು ನೋಡಾ. ಇದು ಕಾರಣ ನಡೆವುತ್ತಡಿವುತ್ತ ಸರ್ವಾವಸ್ಥೆಯಲ್ಲಿಯೂ ಓಂ ನಮಃಶಿವಾಯ ಓಂ ನಮಃಶಿವಾಯ ಓಂ ನಮಃಶಿವಾಯ ಎಂಬ ಪ್ರಣವ ಪಂಚಾಕ್ಷರಿಯನೆ ಸ್ಮರಿಸುತ್ತಿರ್ದನು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

(೧೩) ತಿಳಿಯದೆ ಜಪಿಸಿದ ಮಂತ್ರ ನಿಷ್ಫಲವಾದುದು ನೋಡಾ ಗುರುವೇ. ಪ್ರಣವ ಪಲ್ಲವಗಳರಿದು ಜಪಿಸುವದದು ಫಲ ನೋಡಾ ಗುರುವೇ. ಇದರಂದವ ತೋರಿದ ಎನ್ನ ಗುರು ಚನ್ನಬಸವ ನೋಡಾ, ಗುರುವೇ ಕಪಿಲ ಸಿದ್ಧ ಮಲ್ಲಿಕಾರ್ಜುನ ಗುರುವೇ.

(೧೪) ಪಂಚಾಕ್ಷರವೆಂಬುವದು ಶಿವನ ಪಂಚಾವಸ್ಥೆ ನೋಡಾ. ಪಂ ಚಾಕ್ಷರವೆಂಬುವದು ಪಂಚಾಚಾರ ಫಲದಾಯಕ ನೋಡಾ. ಪಂಚಾಕ್ಷರ ವೆಂಬುವದು ಪಂಚಮುಖ ಪಂಚಮುಖಿ ಮಹಾದೇವಿ ಕಪಿಲಸಿದ್ಧಮಲ್ಲಿ ಕಾರ್ಜುನನ ಪ್ರಸನ್ನತೆ ನೋಡಾ.

---

# ಪ್ರಗತಿ ಮಾರ್ಗ ಜೀವನ

## ವಿದ್ಯಾರ್ಥಿಗಳಿಗೂ ವಾಚನಾಲಯಗಳಿಗೂ ಉಪಯುಕ್ತವಾದ ಗ್ರಂಥ.

ಮನುಷ್ಯನಿಗೆ ಅವನ ಜೀವನದಲ್ಲಿ ನೈತಿಕ, ಬೌದ್ಧಿಕ, ವ್ಯಾವಹಾರಿಕ ಪ್ರಗತಿಗಳಿಗೆ ಒಳ್ಳೇ ವಿಚಾರಗಳು ಅವಶ್ಯಕವಿದ್ದು, ಅಂಥ ವಿಚಾರಗಳನ್ನು ಒದಗಿಸಿಕೊಡುವ ಗ್ರಂಥವು ಇದಾಗಿರುತ್ತದೆ.

ಬೆಲೆ— ೦—೧೪—೦

ಹಿತಚಿಂತಕ ಪ್ರಿಂ. ಪ್ರೆಸ್
ವಿಜಾಪುರ.

**BOOK-POST.** R. N. B. 2554

*From,*
Shivanubhava
Office
Bijapur

ಶ್ರೀ. ರಾ॥ ರಾ॥

ಚನ್ನಮಲ್ಲಪ್ಪ ಸಿದ್ದಪ್ಪ ಬಡೇವಿ
ಪೋ. ಬನಹಟ್ಟಿ
ವ್ಹಾಯಾ-ಕುಡಚಿ ಸ್ಟೇಶನ್




ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ [illegible] ಜ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು, ವಿಜಾಪುರ ವಾರ್ಡ [illegible] ಮನೆ ನಂ. [illegible] ರಲ್ಲಿರುವ ತಮ್ಮ ಹಿತಚಿಂತಕ ಮುದ್ರಣ [illegible] ದಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.



# ಶಿವಾನುಭವ

ಸಂಪುಟ ೨೩ | [ ಸಂಚಿಕೆ ೧೧



ಅಗಸ್ಟ ೧೯೪೯

ವಿಜಾಪುರ.

# ವಿಷಯಗಳು.







# ಶಿವಾನುಭವ

| ವರ್ಷ ೨೩ | ಅಗಸ್ಟ ೧೯೪೯ | ಸಂಚಿಕೆ ೧೧ |
|---|---|---|



## ಸ್ವಾತಂತ್ರ್ಯ ಕಂದನ ಕೂಗು.

### ಸಹಕಾರ.

॥ಕಂದ॥ ಪ್ರೇಮದ ಪುಂಜವೆ ತಾಯಿಯು । ಪ್ರೇಮವೆ
ಕರುಣಾಸುಧಾಸಮುದ್ರಂ ಭದ್ರಂ ॥
ಪ್ರೇಮವದೈಕ್ಯದ ರಹಸ್ಯಂ । ಪ್ರೇಮವೆ ನಿಸ್ವಾರ್ಥ ನಿಜಗುಣಾ
ಲಂಕಾರಂ ॥೧॥

ಪ್ರೇಮದ ಶಿಶು ಸಹಕಾರಂ । ಗ್ರಾಮಗ್ರಾಮಕೆ ಜನಿಸುತ
ವಿವಿಧೋದ್ಯೋಗಂ ॥
ಪ್ರೇಮದೆ ತೋರುತ್ತಿರುತಿರೆ । ನಾವದೆ ಸಹಕಾರ ಸಂಘವೆನಿಪುವು
ನೋಡೈ ॥೨॥

ಸಹಕಾರವೆ ಸರ್ವತ್ರಂ । ಸಹಕಾರಂ ಸಾಧಿಕರಣ ಸಾಫಲ್ಯಂ ಕೇಳ್ ॥
ಸಹಕಾರದೆ ಸೌರಾಜ್ಯಂ । ಸುಹಿತಾಕಾರದೆ ಮೆರೆವುದು ಭರದಿಂ
ಭುವಿಯೊಳ್ ॥೩॥

ಸಂಘಕೆ ವ್ಯಕ್ತಿಯು ಸಹಾಯಂ । ಸಂಘದ ಸಂತತ ಸಹಾಯ
ವ್ಯಕ್ತಿಗಿರುತಿರಲ್ ॥
ಸಂಘೋತ್ತೇಜಕ ದ್ರವ್ಯಂ । ಸಂಘೋಷಿಸುತಂ ಕುಣಿವುದು
ಗ್ರಾಮಾಂತರದೊಳ್ ॥೪॥

ಸಂಘದ ಸಂಸ್ಕೃತಿಯಿಂದಂ । ಸಂಘದ ವ್ಯವಹಾರ ರೀತಿನೀತಿಗಳೊದಗುಂ॥
ಸಂಘದೆ ಸಹಕರಿಸುತ್ತಿರೆ । ಮಂಗಲ ಶ್ರೀ ಲಕ್ಷ್ಮಿ ತನ್ನ ಕರಪಿಡಿದಿರಳೇ ॥೫॥

## ಕರ್ತವ್ಯ.

ಸ್ವಾತಂತ್ರ್ಯತೆಯೇ ಶಸ್ತ್ರಂ ॥ ಸ್ವಾತಂತ್ರ್ಯತೆಯೇ ಪದವಮಲ ಸುಜ್ಞಾನಂ ಕೇಳ್ ॥
ಸ್ವಾತಂತ್ರ್ಯತೆಯೇ ದೇಶವ ॥ ಪೂತಂಗೆಯ್ಯಲ್ ಪಚಿತ್ರ ಸಾಧನವಲ್ತೇ ॥೧॥

ಶ್ರಮಜೀವಿತವೇ ಜೀವನ । ಶ್ರಮಜೀವಿತವೇ ಸ್ವದೇಶ ಕಲ್ಯಾಣಂ ಕೇಳ್॥
ಶ್ರಮವೇ ಲೋಕಕೆ ಪಾವನ । ಶ್ರಮದೀಕ್ರಮದಿಂ ಕೆಲಸವ ಮಾಳ್ಪುದು ಸತತಂ ॥೨॥

ದುಡಿತವೆಯೊಡಲದ ಕೊಡುಗೈ । ದುಡಿತವೆಯುಡುಪುತೊಡುಪುಗಳ ಸಿಂಗಾರಂ ಕೇಳ್ ॥
ದುಡಿತವೆ ದುಡ್ಡಿನ ತಾಯ್ಕೆ । ದುಡಿತವೆ ಬಡತನಕೆ ಭಾಣವೆಂಬುದು ನೈಜಂ ॥೩॥

ಇರಿವೆಯ ಗುಣಮುಮನ್ ಪರಿಕಿಸೆ । ಕಿರಿಜೀವಿಯೆನಿಸಿದೊಡಮದರೊಳು ಸಹಕಾರಂ ॥
ವರಸಂಘಟನಾಶಕ್ತಿಯು । ನಿರುತಂ ನಿಜಸಾಹಸಗುಣದೋರುವ ದಯ್ಯಾ ॥೪॥

ದೇಶದೊಳೆಲ್ಲರ್ ದುಡಿಯಲು । ಪಾಶುಪತಾಸ್ತ್ರಂ ಸ್ವದೇಶದಾರಿದ್ರ್ಯಕ್ಕೆ ॥
ಈಶಾನುಗ್ರಹಮಿರುತಿರೆ । ಸಂಶೋಭಿತರಾಷ್ಟ್ರಮೆನಿಪುದೈ ಜಯಹಿಂದಂ ॥೫॥

## ವಾಚನಾಲಯ.

ಓದಲು ದೈನಿಕಪತ್ರವ । ಹೃದಯದೆಯೊದಗುತಿರುವ ವಿವಿಧ ವಿಷಯ ಜ್ಞಾನಂ ॥
ಚದುರರೆ ದೇಶದ ಧೋರಣ । ಮುದದಿಂದೀಕ್ಷಿಸಿ ನುಡಿಯಲು ನಡೆಯಲು ಬರ್ಕುಂ ॥೧॥

ಮಾಸಿಕ ಪತ್ರಿಕೆಯೋದಲು । ರಸಿಕರು ರಚಿಸಿದ ನವರಸ ಸ್ವಾದಂ
ಭೇದಂ ॥
ವಶವೈಭಾಷಾರತ್ನಂ । ಉಸುರಲು ಶಕ್ಯಂ ನವೀನ ವಿಷಯೋದ್ಭಾವಂ॥೨॥

ಬರೆದಿಹ ಭಾಷಾಗ್ರಂಥವ । ಅರಿತರಿತು ವಿವೇಚಿಸೆ ವಿಷಯಾನು
ಕ್ರಮುವುಂ ॥
ಒರೆಯಲ್ ಬರ್ಕುಂ ಕವಿಗಳ । ಪರಿರಂಜಿಪ ಕನ್ನಡ ನುಡಿಗುಡಿಸಿದ
ತೊಡಹಂ ॥೩॥

ಉದ್ಯಮಗದ್ಯಗಳೋದಲ್ । ಸದ್ಯದ ಸ್ಥಿತಿಗತಿಗನುಸರಿಸಿರ್ದನಿತರೊಳಂ ॥
ಉದ್ದೀಪನದುದ್ಯೋಗವ । ಸದ್ದಿಲ್ಲದೆ ಸಾಗಿಪುದದು ದೇಶೋದ್ಧಾರಂ ॥೪॥

ನೀತಿಯ ಕತೆಗಳನೋದುತ । ಭೂತದಯಾದಿ ಸಕಲ ಸುಗುಣಾವಳಿಯಂ॥
ಆತುರದಿಂದನುಕರಿಸುತ । ಭೂತಳದೊಳ್ ಬಾಂಧವನೆನಿಪಾತಂ
ಧನ್ಯಂ ॥೫॥

## ಮಾನವಧರ್ಮ.

ಮಾನವ ಧರ್ಮವ ನಿರುಕಿಸೆ । ಮಾನವ ಧರ್ಮವೆ ವಿಶಾಲ ಭೃತ್ಯಾ
ಚಾರಂ ॥
ಮಾನವ ಧರ್ಮಜ್ಞಾನಿಯು ॥ ಮಾನವ ಧರ್ಮಾಭಿಮಾನಿ ತಾನಿರೆ
ಧನ್ಯಂ ॥೧॥

ದಯೆಯೇ ಧರ್ಮದ ಬೀಜಂ । ದಯೆಯಿಲ್ಲದ ಧರ್ಮದಾವುದೈ
ಧಾರುಣಿಯೊಳ್ ॥
ದಯೆಯೇ ಬೇಕೈ ಮನುಜಗೆ । ದಯೆಯೇ ಧರ್ಮಕ್ಕೆ ಮೂಲವೆಂದು
ಬಸವಂ ॥೨॥

ಸತ್ಯಾಸತ್ಯತೆಯರಿದುಂ । ಸತ್ಯದ ನಡೆನುಡಿಯಿರುತಿರೆ ಸತ್ಯಾಚಾರಂ ॥
ನಿತ್ಯಾನಿತ್ಯವ ತಿಳಿದುಂ । ನಿತ್ಯದೆ ನೇಮದಿ ನಡೆವುದು ನಿತ್ಯಾಚಾರಂ ॥೩॥
ಪ್ರೇಮವು ಪೆಚ್ಚಲು ಭಕ್ತಿಯು । ಪ್ರೇಮಾವಾಸದ ಹೃದಯವೆ ಭಕ್ತಿಯ
ಬೀಡೈ ॥
ಪ್ರೇಮಂಬಡುತಿರೆ ದೇಶಕೆ । ನಾಮಂಬಡೆವಂ ಸ್ವದೇಶ ಭಕ್ತಂ
ಯುಕ್ತಂ ॥೪॥

ಆತ್ಮಾನಾತ್ಮವ ನೋಡಲ್ । ಆತ್ಮೈಕಂ ತನುವನೇಕ ತೋರ್ಪವು
ಜಗದೊಳ್ ॥
ಆತ್ಮಜ್ಞಾನಿದ ನರಿತುಂ । ಸ್ವಾತ್ಮನ ಸರಿಗಾಣುವ ಸಲೆ ಸಕಲಾತ್ಮಗಳಂ ॥೫॥

## ನೀತಿಧರ್ಮ.

ಜಾತಿಜಾತಿಯು ಕಳೆವರ್ । ಪ್ರೀತಿಗೆ ಪಾತ್ರರ್ ಸದಮಲ ಶಿವಶರಣರ್
ಕೇಳ್ ॥
ಪತಿತರ ಪಾವನಗೈವರ್ । ನೀತಿಯು ನೈಜವನರಿಪರು ಸೇವ್ಯರ್
ಭಾವ್ಯರ್ ॥೧॥

ಬಂಧುತ್ವಂ ಮಾನವರೊಳ್ । ವಿಶ್ವತ್ವಂ ರಾಷ್ಟ್ರಮುಕುಟ ಸೌಂದರ್ಯ
ದೊಳಂ ।
ಭಂದತ್ವಂ ತಾಯ್ನುಡಿಯೊಳ್ । ವಂದ್ಯತ್ವಂ ಮಾನವ ಕುಲವರ್ಗದೊ
ಳೆಲ್ಲರ್ ॥೨॥

ವರ್ಣಾಶ್ರಮಗಳನೆಲ್ಲವ । ವರ್ಣಿಪ ವೈಷಮ್ಯ ಕುಟಿಲ ತತ್ವಾನೀಕಂ ॥
ಜೀರ್ಣದುವು ಬಸವಂಗಂ । ಚೂರ್ಣದುವು ವಿಶ್ವಧರ್ಮ ತತ್ವಾಸ್ತ್ರ
ಗಳಿಂ ॥೩॥

ಬಸವನ ತತ್ವಗಳೆಲ್ಲಂ । ವಸುಧೆಗೆ ಮೋಡದೊಳಡಗಿದ ರವಿಯಂತಿರ್ಕುಂ।
ಅಶಮಾಕ್ಷನ ದಯದಿಂದಂ । ಪಸರಿಪವೈಗಡ ಪವಾಡ ಪುರುಷರ
ಕರದಿಂ ॥೪॥

ಗಾಂಧೀ ತತ್ವಗಳೆಲ್ಲಂ । ಒಂದುಂ ಬಿಡದಲೆ ಬಸವನ ತತ್ವದೊಳಿರ್ಕುಂ ।
ಬಂಧುರ ಬಸವನ ತತ್ವಕೆ । ಇಂದಿನ ಜಾತಿಯು ವಿಷಮತೆ
ಭಾರಂದೂರಂ ॥೫॥

## ಆರೋಗ್ಯ.

ಆರೋಗ್ಯಮೆಯಾನಂದಂ । ಆರೋಗ್ಯದೆ ಸಕಲ ಸಹಾಯ ಸಂಪದ
ಮಕ್ಕುಂ ।।
ಆರೋಗ್ಯಂ ಸೌಖ್ಯಾಕರ । ಆರೋಗ್ಯವನನುಸರಿಪದುದೆಲ್ಲರ್ ಬಲ್ಲರ್ ॥೧॥

ನಿರುತದೆ ನಿಯಮದೆಯಾಡಲ್ । ತರುಳರಿ ಬೆಳೆಯುದು ಶರೀರ ಶಕ್ತಿಯು
ಸತತಂ ॥
ಪರಿಪರಿಯಾಟವನಾಡಲ್ । ತರುಣತ್ರಾಣಬರುವುದು ನಿಜದಿಂ
ಭುಜದಿಂ ॥೨॥

ಬಲವಂತರವಶಜಗವೈ । ಬಲಹೀನ ಮನುಜನಬಾಳ್ವೆ ಬಲುಕಷ್ಟತವಂ ॥
ಬಲವೇ ಸರ್ವಕೆ ಸಾಧನ । ಬಲವಂ ಛಲದಿಂ ಪಡೆಯಲು ಸಾಧ್ಯಂ
ವೇದ್ಯಂ ॥೩॥

ಗರಡೀ ಸಾಧನೆಗೃಹಗಳ್ । ಇರುತಿರೆ ನೇಮದಿ ನಿರುತದಿಸಾಧನೆ
ಗೆಯ್ಯಲ್ ॥
ಭರದಿಂ ಬೆಳೆವುದು ಬಲವೈ । ಗರಡೀಗೃಹಗಳ ರಚಿಸುದು ಗ್ರಾಮಾಂತರ
ದೊಳ್ ॥೪॥

ವ್ಯಾಯಾಮದೆಯುತ್ಸಾಹಂ ॥ ವ್ಯಾಯಾಮದೆ ತಾಪಡೆಯುತ ದೀರ್ಘಾ
ಯುಷ್ಯಂ ॥
ವ್ಯಾಯಾಮದೆ ಬೌದ್ಧಿಕ ಬಲ । ವ್ಯಾಯಾಮದ ಶಾಲೆಗಳರಿ
ಸುಸ್ಥಿತಿಯುಕ್ತಂ ॥೫॥

## ಗೃಹಸೇನಾದಳ.

ಗೃಹಸೇನಾದಳದಿಂದಂ । ಬಹಕಠಿಣ ಪ್ರಸಂಗಗಳನು ದಾಟಲು ಶಕ್ಯಂ ॥
ಇಹ ಸಾರ್ವಜನಿಕ ಸಂಸ್ಥೆಗೆ । ಸಹಕಾರವ ನೀಡುವದದು ಯೋಗ್ಯಂ
ಶ್ಲಾಘ್ಯಂ ॥೧॥

ಗೃಹರಕ್ಷದಳ ರಚನೆಯು । ಗೃಹಣೀಯ ಗ್ರಾಹ್ಯವೆಂಬುದುಚಿತಂ
ಖಚಿತಂ ॥
ಸಹಕರಿಸುತೆ ಪ್ರತಿಗ್ರಾಮದೆ । ಗೃಹರಕ್ಷಕದಳ ನಿಯೋಜಿಸುವದತಿ
ತ್ವರೆಯಿಂ ॥೨॥

ಅಂತರರಾಷ್ಟ್ರದ ರಕ್ಷಣೆ । ಆಂತರಿಕ ತರುಣರ ಶಕುತಿಸಾಹಸದಿಂದಂ ।
ಸಂತತ ತರುಣರಿ ಹೊಣೆಯೈ । ಇಂತಿದನರಿತುಂ ಶಕುತಿಯ
ವರ್ಧಿಸಲೆಂಬೆಂ ॥೩॥

ಸೇನಾಶಿಕ್ಷಣ ನಡೆಯಲ್ । ತಾನೇ ಮುಂಬರಿದುದಲ್ತೆ ತರುಣರತಂಡಂ ॥
ಹಾನಿಯುಂಯಿಲ್ಲವು ದೇಶಕೆ । ಜಾನಿಸಿನೋಡಲು ಬಲಾಢ್ಯ ರಾಷ್ಟ್ರ
ವೆನಿಸಿಪುದೈ ॥೪॥

ದೇಶದ ಸಂರಕ್ಷಣೆಗಂ । ದೇಶವಿದೇಶಗಳ ಶಾಂತಿಸೌಹಾರ್ದಕ್ಕಂ ॥
ದೇಶೀ ಸೈನ್ಯದ ಕೆಳಗಂ । ವೈಶೇಷಿಕ ಗೃಹದಳಗಳ ರಚನೆಯು
ಯೋಗ್ಯಂ ॥೫॥

## ಶಿಕ್ಷಣ.

ಜಗದೀರಾಷ್ಟ್ರಗಳೆಲ್ಲಂ । ಸುಗಮದೆ ಸಕ್ತೀಸುಶಿಕ್ಷಣವಪೊಂದುತ್ತಂ ॥
ಸೊಗಸಿನ ಮಧ್ಯವು ಶಿಕ್ಷಣ । ವಗಲದೆ ಮುಗಿಯಲು ಮಿಗಿಲಾದ
ಶಿಕ್ಷಣವಡೆಗುಂ ॥೧॥

ರಶಿಯಾ ಶಿಕ್ಷಣ ಕ್ರಮವಂ । ವಿಶದೀಕರಿಸಿದ ನವಯುಗಕಾಮುತರಿಂದಂ ॥
ಕುಶಲಮತಿಗಳದನೀಕ್ಷಿಸಿ । ಉಸುರುವದೈ ಭಾರತಕಿದರೊಳು
ರಂಜಿಪುದಂ ॥೨॥

ಶಿಕ್ಷಣ ಸಮಿತಿಯು ಕಾರ್ಯದೆ । ಸಾಕ್ಷರತಾ ಪ್ರಸರಣವನು
ಮಾಳ್ಪುದು ಬೇಗಂ ॥
ಈಕ್ಷಿಸೆ ಭಾವೀರಾಷ್ಟ್ರಕೆ । ಶಿಕ್ಷಣ ವೀವುದು ಸುಧಾರಿಸಿದ ರಾಷ್ಟ್ರದ
ವೋಲ್ ॥ ೩ ॥

ಪ್ರೌಢರ ಶಿಕ್ಷಣ ಕೊಡುವುದು । ಪ್ರೌಢರದೇಶೇವಿದೆಂಬ ತತ್ವವನರಿತು ॥
ಪ್ರೌಢರ್ ಜ್ಞಾನಿಗಳಾಗಲ್ । ರೂಢಿಗೆ ಪ್ರೌಢತೆ ಪಡೆವುದು ನಮ್ಮೀ
ದೇಶಂ ॥ ೪ ॥

ಶಿಕ್ಷಣ ಶಾಸ್ತ್ರದ ಕ್ರಮವಂ । ದಕ್ಷತೆಯಿಂ ವಹಿಸಿ ಪೂರ್ಣಗೈಯುವ
ಮನುಜಂ ।
ರಕ್ಷಕನವನೀತಳದೊಳ್ । ಅಕ್ಷಯ ಸುಖದಾತಪೂತನವನೇ ಧನ್ಯಂ ॥೫॥

## ವೈಜ್ಞಾನಿಕ ಶಿಕ್ಷಣ.

ಪರದೇಶದ ಸತ್ಕಲೆಗಳ । ಪರಿವಿಡಿದೀಕ್ಷಿಸಿ ತದೀಯ ವಿಷಯಜ್ಞಾನಂ ॥
ವರವಿದ್ಯಾರ್ಥಿಗೆಯೊದಗಲು । ಸರಕಾರೀವೇತನಸಿಗುವದು ಬಹು
ಯೋಗ್ಯಂ ॥೧॥

ವೈಜ್ಞಾನಿಕ ಶಿಕ್ಷಣವುಂ । ಪ್ರಜ್ಞಾನೋತ್ತೀರ್ಣ ವಿಶ್ವವಿದ್ಯಾಧರರಿಂ ॥
ವಿಜ್ಞಾನೋನ್ನತಿಗಾಗಿಯೆ । ಜಿಜ್ಞಾಸು ಸಮಾಜಕೆ ಕೊಡುವದು ಕಡು
ಜವದಿಂ ॥೨॥
ಪ್ರಾಯೋಗಿಕ ಶಾಲೆಗಳಂ । ಆಯಾ ಪ್ರಾಂತದೊಳ್ ಸಮನಿಸೆ ಸಂಶೋಧ
ಕರಿಂ ॥
ಆಯಾಸಂಬಡುತಿರುತಿರೆ । ಸೋಯಿಸ್ಕರವೈ ನವೀನ ವ್ಯವಸಾಯುಕ್ಕಂ ॥೨॥
ನಾವಿನ್ಯತೆ ನವಯುಗದೊಳ್ । ನಾವಿನ್ಯತೆ ನವ ಜಗದೊಳು ತೋರಲು
ಬೇಕೈ ॥
ನಾವಿನ್ಯತೆ ನವಜೀವಂ । ನಾವಿನ್ಯತೆಗಿರುವದು ಬೆಲೆ ಬೇಕಾದಷ್ಟೈ ॥೪॥
ಜಗದುಪಯುಕ್ತ ಪದಾರ್ಥವ । ಸುಗಮದೆಗೆಯ್ಯುತೆ ಜಗಕೆ ಪೂರೈಸು
ತಿರಲ್ ॥
ಜಗದಿಂಬೊರೆವುದು ದ್ರವ್ಯಂ । ಜಗದಾರಾಷ್ಟ್ರ ಸಹಕಾರ ಸಹಜದೆದೊ
ರೆಗುಂ ॥೫॥

## ತ್ಯಾಗ

ಮನಸಿನ ಬಯಕೆಯ ತೀರ್ಚುತ । ತನಗಾವ ಕೊರತೆಯಾಗದಂತಿರೆ
ಭೋಗಂ ॥
ವಿನಯಗುಣಂದೋರುತ್ತಂ । ಘನತೆಯ ಸತ್ಪಾತ್ರದಾನ ಮಾಳ್ಪುದೆ
ತ್ಯಾಗಂ ॥೧॥
ಭೋಗ ತ್ಯಾಗದೊಳಿರುತುಂ । ತ್ಯಾಗಿಯೆನಿಸುವಂ ಸ್ವದೇಶ ಭಕ್ತವಿರಕ್ತಂ ॥
ಸೋಗಿನ ಭಕ್ತರ ಬೇಡೈ । ಈಗಿನ ಕಾಲಕ್ಕೆ ಸ್ವದೇಶ ಘಾತಕರವರೀ ॥೨॥
ಎಣಿಸಲ್ ಕರ್ಣನ ಪೋಲ್ವಂ । ಉಣಿಸಂತಣಿಸಂಸಕಾಲದೊಳ್ ಶಿರ
ಸಂಗೀ ॥
ಗುಣಲಿಂಗಪ ದೇಸಾಯರ್ । ಖಣಿಯುವರೊಳ್ ವೀರಶೈವ ವಿದ್ಯಾರ್ಥಿ
ಗಳ್ಗೈ ॥೩॥
ತನು ಮನ ಧನದ ನಿರಾಶಿಕ । ಮುನಿಯು ಮಹಾತ್ಮಾಜಿ ಗಾಂಧಿ ಯೌಗಿಕ
ತ್ಯಾಗೀ ॥
ಅನುಪಮ ಜೀವಿಯು ಜಗದೊಳ್ । ಘನವಂತಂ ತಾನೆನಿಸುತ ಕೀರ್ತಿಯ
ಪಡೆದಂ ॥೪॥

ತ್ಯಾಗವು ಜನಪದ ಹಿತವೈ । ತ್ಯಾಗವು ದೇಶದ ಸುಕಾಮಧೇನುಂ ಭಾನುಂ ॥
ತ್ಯಾಗವು ಚಿಂತಾಮಣಿಯೈ ॥ ತ್ಯಾಗಗುಣವನನುಕರಿಪುದು ದೇಶೋದ್ಧಾರೀ ॥೫॥

## ಸೇವೆ.

ಸೇವೆಯೇ ದೇಶದ ಶಕ್ತಿಯು । ಸೇವೆಯೇ ದೇಶದ ಸುಲಲಿತ ಸಂಘಟನೆಯು ಕೇಳ್ ॥
ಸೇವೆಯೇ ದೇಶದ ಭದ್ರತೆ । ಸೇವಾಧರ್ಮಾಚರಿಸುವದೇ ಯೋಗ್ಯಂ ಭಾಗ್ಯಂ ॥೧॥
ಶಿವಶರಣರ ಕಾಯಕವಂ । ವಿವರಿಸಿ ನೋಡೆಯುಡಗಿಪುದು ಸೇವಾಧರ್ಮಂ ॥
ಅವನೀ ಜಗಕಿದಗತ್ಯಂ । ಅವರಿವರೆನ್ನದೆ ಹಿಡಿವುದು ಸತ್ಕಾಯಕವಂ ॥೨॥
ಸೇವೆಗೆ ಸ್ಪರ್ಧೆ ಬೇಕೈ । ಸೇವೆಯೊಳಿದು ಮೇಲು ಕೀಳು ಭಾವಂ ಬೇಡೈ॥
ಸೇವೆಗೆ ಹೇಯುವು ದೂರಂ । ಸೇವಾಭಕ್ತಿಯೊಳಿರವನ ಕಾವಂ ದೇವಂ ॥೩॥
ಭಂಗಿಯು ಕೆಲಸವ ಮಾಳ್ಪಂ। ಮಂಗಲಮಯ ಕಾಯಕದವನೆಂಬೀಭಾವಂ॥
ತುಂಗ ಶ್ರೀ ಮಾತೆಯುತಾಂ । ಪಿಂಗದೆ ಮಲಮೂತ್ರವ ಬಳಿದಿರುವುದು ಸುಳ್ಳೇಂ ।೪॥
ಬಿಜ್ಜಳ ರಾಜ್ಯದ ಬಸವನು । ಸಜ್ಜಾದುಜ್ಜಗ ಸುಮಂತ್ರಿಪದವಿದ್ದೊಡೆಯುಂ ॥
ಕಜ್ಜವನೆಸಗುತ ಹರಳನ । ಉಜ್ವಲ ಪಾದುಕೆಗಳನವಧರಿಸಿದ ಶಿರದೆಡೆಳ್ ॥೫॥

## ಸ್ತ್ರೀ ಶಿಕ್ಷಣ

ತಾಯಿಯು ಗರ್ಭವ ತಾಳ್ದೊಡೆ । ತಾಯಿಯು ಸೋಸುವ ಪರಿಪರಿ ಕಷ್ಟಾದಿಗಳಂ ॥
ಬಾಯಿಂಪೇಳಲಸಾಧ್ಯಂ । ತಾಯಿಯು ತಾಳ್ಮೆಯು ಸಲಹುವ ದೇವನೆ ಬಲ್ಲಂ ॥೧॥
ಎಮ್ಮಗಳ ರಕ್ಷಿಪ ತಾಯಿಯು । ಗಮ್ಮನೆ ತಿನ್ನಬೇಕಾದ ಪದಾರ್ಥ ತಿನ್ನಲು ಬಹುದೇ ॥
ಎಮ್ಮಯ ತನ್ನಾರೋಗ್ಯದ । ಕಮ್ಮಗೆ ಬೇಯಿಸಿದಡಿಗೆಯುವುಣ್ಣುವಳಲ್ತೇ ॥೨॥

ಆರೋಗ್ಯವೇ ಮಕ್ಕಳಿಗಂ । ಸೇರುತ ಸತತಂಶರೀರ ದೃಢತರವಾಗಲ್ ॥
ಪೊರೆವಾ ತಾಯಿಯು ಹರ್ಷಂ । ತೋರುವವೈ ತಾಂ ಪಡೆದಿಹ ಶಿಕ್ಷಣದಿಂದ ॥೩॥

ಸ್ತ್ರೀ ಶಿಕ್ಷಣವೆ ರಾಷ್ಟ್ರದ । ಸಂಶೋಭಿತ ಸದನದ ತಳಹದಿಯಾಗಿಹುದೈ ॥
ಸ್ತ್ರೀ ಶಿಕ್ಷಣ ಕೊಡದಿರ್ದೊಡೆ। ನಾಶವು ನಮ್ಮೀ ಸ್ವದೇಶ ಸಾಮ್ರಾಜ್ಯಕ್ಕಂ॥೪॥

ಗೃಹಶಿಕ್ಷಣವನ್ನೀಯುಲು । ಬಹು ಹೆಚ್ಚನುಕೂಲ ಕಲಿತ ತಾಯಿಗಳಿಂದಂ॥
ಸಹವಾಸದ ಫಲದಿಂದಂ । ಸಹಜ ಜ್ಞಾನಪ್ರಸಾರವುಂಟಾಗುವದೈ ||೪॥

## ಶಿಶು ಶಾಲೆ.

ಶಿಶುಸಂಗೋಪನ ಶಾಲೆಗ । ಳೆಸೆವುತ ಸತ್ಫಲವನೀವುತ ಜನ್ಮಸ್ಥಲದೊಳ್ ॥
ಕುಶಲತೆ ಸಂವರ್ಧಿಸುತಂ । ಜಸವಡೆಯುಲಿ ಬುದ್ಧಿ ಬಲಗುಣಾದಿಗಳಿಂದಂ ॥೧॥

ಎಲ್ಲ ಗ್ರಾಮದ ಶಿಶುಗಳ್ । ಸಲ್ಲಲಿತ ಕಳಾವಿಳಾಸ ಮುಖದಿಂ ಸುಖದಿಂ||
ಚಲ್ಲಾಟವನಾಡುತ್ತಂ । ಉಲ್ಲಾಸಂದೋರುತಿಹುದು ನೈಸರ್ಗಿಕವೈ ॥೨॥

ಮೂರೇ ವರುಷದ ಬುದ್ಧಿಯು ನೂರರವರೆಗಿರುತಿರುವದು ಗಾದೆಯುಮಾತೈ ।
ಹಿರಿಯರಿದನರಿತು ಶಿಶುಗಳ। ಸರಸರ ಶಾಲೆಗೆ ಕಳಿಸುದು ಧರ್ಮಂ ಮರ್ಮಂ ||೩||

ನೈತಿಕ ಶಿಕ್ಷಣ ಶಿಶುವಿಗೆ । ಜಾತಿಯು ವಿಷಮತೆಯು ಗಾಳಿ ಬಡಿಯದ ತೆರದಿಂ ॥
ಆತಿಹ ಮಾನವ ಧರ್ಮದ । ನೀತಿಯು ತತ್ವದ ಸುಬೀಜ ಬಿತ್ತುದೆ ಲೇಸಂ ॥೪॥

ಲಾಲನೆ ಪಾಲನೆಗೈವುತ । ಚಾಲಕರಾಯಾ ಸಮಯದಿ ಪೋಷಣೆವೀಯಲ್ ॥
ಸೌಲಭ್ಯದ ಶಿಕ್ಷಣದಿಂ । ಬಾಲಕಲೀಲಾವಿನೋದ ವಿಕಸಿತಮಕ್ಕುಂ ॥೫॥

## ಒಕ್ಕಲತನ

ಮಾನವ ದುಡಿವದು ಕೊಟ್ಟೆಗೆ । ಇನಿತಲ್ಲದೆ ಗೇಣು ಬಟ್ಟೆಗೆಂಬುದು ಲೋಕಂ ॥
ಗೇನಿಸೆ ನಾವೀನುಡಿಯ ಂ । ಘನತರ ಸಾಧುಗಳೈಸೆ ಮೇಳೀ ಲಾಳೀ ॥೧||

ಮೇಳಿಯೊಕ್ಕಲತನಕ್ಕೈ । ಲಾಳಿಯ ನೇಗಿಯು ಕೆಲಸಕೆಯೆಂಬುವ ಮಾತಂ ॥
ಸುಳಿಯುಲು ಹೊಳಿಯುಲು ತಿಳಿಯುಲು । ಇಳೆಗೀ ವ್ಯವಸಾಯು ಮೇಲು ಯೆಂಬುದು ಸಿದ್ಧಂ ॥೨॥

ದೇಶದ ಜನಸಂಖ್ಯೆಯುವಂ । ಸಂಶೋಧಿಸಲದು ಸರಸರ ಬೆಳೆದಿಹುದಲ್ತೇ ॥
ದೇಶಾಹಾರ ಸುಪೂರ್ತೆಗೆ । ಕೃಷಿಕೋದ್ಯೋಗಾಭಿವೃದ್ಧಿಯಾಗಲೆ ಬೇಕೈ ॥೩॥

ನೀರಾವರಿ ಸುಕ್ಷೇತ್ರಂ । ತೋರುವ ಯೋಜನೆ ತ್ವರಿತದಿ ನಡೆಯಲಿ ನಾಡೊಳ್ ॥
ಹಾಕುತ ದುಡಿಯೇ ನೆಲದೊಳ್ । ಬೀರುವೆವೈ ಸಕಲ ಧಾನ್ಯವೆಂಬರ್ ರೈತರ್ ॥೪॥

ದೇಹದ ಬೇವರವ ಸುರಿಸುತ । ದೇಹಾಹಾರೋಪಯುಕ್ತ ಧಾನ್ಯವನೆಲ್ಲಂ ॥
ಸಾಹಸದಿಂ ಬೆಳೆಪೊಂದುತ । ಗೇಹಾಗೇಹದ ಹಗೆಗಳ ತುಂಬುವ ರೈತಂ ॥೫॥

## ನೇಕಾರಿಕೆ.

ಹೊಟ್ಟೆಯು ಬಟ್ಟೆಯು ಕೆಟ್ಟೊಡೆ । ಕಟ್ಟಡವಿಯು ಬಟ್ಟೆ ಸಿಗದೊಡಗಸನ ಬಟ್ಟೇಂ ॥
ಕೆಟ್ಟೊಡೆ ತಾಳ್ವುದು ಲೋಕಂ । ಉಟ್ಟೇ ಬಟ್ಟೆಯು ಹರಿಯುಲು ಸೈರಿಪುದುಂಟೇ ॥೧॥

ಬಟ್ಟೆಯೆ ಭೂಷಣ ದೇಹಕೆ । ಬಟ್ಟೆಯುವಾರೋಗ್ಯತೆಯನು ಕಾಯ್ವುದು ಸತತಂ ॥
ಬಟ್ಟೆಯು ವಿವಿಧೋದ್ಯಮವಂ । ಬಟ್ಟೆಯು ವಿವಿಧಾಧಿಕಾರ ಸೂಚಿಸುದಲ್ತೇ ॥೨॥

ಖಾದೀ ಬಟ್ಟೆಯ ಧರಿಸಲು । ಮೋದಿಸಿಯೊಳು ಸತ್ಯ ಶಾಂತ್ಯ ಹಿಂಸಾ ಗುಣಗಳ್ ।
ಮುದದಿಂ ಸೂಚಿಪ ತೆರದಿಂ । ಸದಮಲ ಹೃದಯದ ಜನಾಂಗ ತೋರುವದಲ್ತೇ ॥೩॥
ನೇಗಿಲು ಕಾಯಕ ಮಾಳ್ಪಗೆ । ಆಗುವ ಕುಂದಕೊರತೆಗಳನವಲೋಕಿಸುತಂ ।
ಬೇಗನೆ ತತ್ಪರಿಹಾರವೆ । ಕೈಗಾಣಿಸುತಂ ಪೊರೆವುದು ಜನತಾಧೀಶಂ ॥೪॥
ಬಟ್ಟೆಯ ವ್ಯವಸಾಯಕ್ಕಂ । ತಟ್ಟನೆ ಕೊಡುವದು ಸಹಾಯ ಸರಕಾರ ವ್ರತಾಂ ॥
ದಿಟ್ಟಿಸಿ ಮುಗ್ಗದ ಸಂಖ್ಯೆಯೆ । ಗಟ್ಟಿಸಿನೇಮವೆ ಸಾಕು ಸತತಂ ವಿತತಂ ॥೫॥

## ವ್ಯಾಪಾರ.

ಸ್ಥಲಕಾಲ ಪರಿಸ್ಥಿತಿಗನು । ಕೂಲದ ವಿಧವಿಧ ಫಲಗಳ ಬೆಳೆ ಬರುತಿರ್ಕುಂ ॥
ಕಾಳಿನ ವಿನಿಮಯ ಮಾಡಲು । ಆಳರಸರ ನಾಣ್ಯಗಳವು ಮಧ್ಯಸ್ತಿಕೆಯೈ ॥೧॥
ಪರದೇಶದ ವ್ಯವಹಾರಂ । ಜರಗುವದೈಯುವರವರಾಗರಜಿನ ತೆರದಿಂ ॥
ಪರರಾಷ್ಟ್ರದ ಸಹಕಾರದೆ । ಸರಕಿನ ವಿನಿಮಯ ನಡೆವುದು ನಾಣ್ಯದ ಹೊರತುಂ ॥೨॥
ಪರಿಪರಿ ವ್ಯವಹಾರಕ್ಕಂ । ಬರುಕೊಡುತಿರುತಿಹಯೊಡವೆಗೆ ಬೇಡಿಕೆ ಬಹಳೈ ॥
ಭರದಿಂ ಮನವಂ ಸೆಳೆಯುವ । ಮಿರುಗುವ ವಸ್ತ್ರವಡವೆಗಳು ಮಾರುವದೈಸೆ ॥೩॥
ದೇಶೋತ್ಪಾದನೆ ಬೆಳೆಯಲ್ । ವಾಸಿಪ ಜನತಾ ಸಮೂಹ ಸಕಲೋದ್ಯಮದೊಳ್ ॥
ಸೋಸುತಕಷ್ಟವ ದುಡಿಯಲು । ವಾಸಿಪಳೈ ಲಕ್ಷ್ಮಿ ತಮ್ಮ ದೇಶದೊಳೆಲ್ಲಂ ॥೪॥
ವ್ಯಾಪಾರದ ಸಾಧನದಿಂ । ಸೋಪಾನವನೇರಿ ಶಿಖರ ಮುಟ್ಟುವ ತೆರದಿಂ ।
ದ್ವೀಪಾಂತರದಿಹ ದ್ರವ್ಯವ । ಪೋಪ ವಿಮಾನದ ಬಲದೊಳು ತರುವದು ಸುಲಭಂ ॥೫॥

## ಆಧುನಿಕ ಸಾಧನ.

ಮಾನವಕೋಟಿಗೆ ಮೀರಿದ ।ನಾನಾವಿಧ ಯಂತ್ರ ತಂತ್ರ ಸಾಧನದಿಂದಂ।
ಜ್ಞಾನಜ್ಯೋತಿಯ ಬಲದಿಂ । ಮಾನವನೈಚ್ಛಿಕ ಪದಾರ್ಥ ಪುಟ್ಟಿಸ
ಲಕ್ಷ್ಯಂ ॥ ॥

ಒಕ್ಕಲತನ ನೇಕಾರಿಕೆ । ಉಕ್ಕಿನ ಕಬ್ಬಿಣ ಸಹಾಯ ಸಾಹಿತ್ಯಗಳಿಂ ॥
ಗಕ್ಕನೆ ಗೈವರು ಸಹಜದೆ । ತಕ್ಕಾಧುನಿಕ ತರತರದ ಸಾಧನದಿಂದಂ ॥೨॥
ಆಕಾಶದ ವಾಣಿ ನಿನಾದಂ । ಆಕಾಶದ ಯಾನ ಯಂತ್ರದುಪಯುಕ್ತಂ
ಮೇಣ್ ॥

ಪ್ರಾಕಾಶಿಪ ಸೀನೇಮಾ । ಸಾಕಾಗುತೆ ಸೇವೆ ಮಾಳ್ಪನೈ
ದೇಶದೊಳಂ ॥೩॥

ಪೂರ್ವದ ಯುದ್ಧದ ಸಾಧನ । ಉರ್ವಿಯೊಳುಳಿದಿಲ್ಲವೆಂಬ ಸಂಗತಿ
ಯರಿತುಂ ॥

ಸಾರ್ವತ್ರಿಕ ಜಗವೀಗಲ । ಪೂರ್ವ ವಿಚಿತ್ರಾಯುಧಗಳ ಸಂಗ್ರಹ
ಕೆಡೆಯ್ಕೆ ॥೪॥

ಯಾಂತ್ರಿಕ ಯುಗದೀಕಾಲದೆ । ಯಂತ್ರಾಭ್ಯಾಸವ ನೆಸಗುತ ಮುಂದರಿ
ಯುತ್ತಂ ॥

ಯಂತ್ರದೆ ಕುಶಲರು ತಾವ್ಸಪ್ಪ । ತಂತ್ರ್ಯರೆನಿಸುತ್ತ ಮೆರೆವುದು
ಯೋಗ್ಯಂ ಭಾಗ್ಯಂ ॥೫॥

## ಶಕ್ತಿ.

ಭೌತಿಕ ಬಲವೇ ಬಲವೈ । ಭೌತಿಕ ಬಲವನತಿಗಳೆವ ಬಲವಿಲ್ಲೆನುತಂ ॥
ಭೌತಿಕ ಶಾಸ್ತ್ರವ ಬಲ್ಲರ್ । ನೈತಿಕಶಕ್ತಿಯ ನೆಲೆಯನರಿಯದೆಗಳ
ಹುವರ್ ॥೧॥

ನೈತಿಕಶಕ್ತಿ ಸಹಾಸದಿ । ನೈತಿಕಬಲವುಂ ಬೆಳೆಸಿದ ಗಾಂಧಿ ಮಹಾತ್ಮಂ ॥
ಜಾತಿಯ ಪಂಗಡ ಮುರಿಯುತ । ನೀತಿಯ ಬಲದಿಂ ಸ್ವರಾಜ್ಯ ಸಂಪದ
ವಡೆದಂ ॥೨॥

ಯುದ್ಧದ ಸಾಮಗ್ರಿಗಳಂ । ಬುದ್ಧಿಯ ಕುಶಲತೆಯ ತೋರ್ಪಪೊಸತರ
ದಿಂದಂ ॥

ಬೌದ್ಧಿಕ ಶಕ್ತಿಯ ಬೆಳೆಸುತ । ಸಿದ್ಧಂಗೊಳಿಸಲು ಸ್ವದೇಶ ರಕ್ಷಣೆ
ಯುಕ್ಕಂ ॥೩॥

ಯುದ್ಧೋಪಕರಣಗಳಿಂದಂ । ಯುದ್ಧ ಪ್ರಾವಿಣ್ಯತೆಯು ಪಡೆವುದೇಲೇಸಂ॥
ಯುದ್ಧವ ಮಾಡದಿದ್ದೊಡೆಯುಂ । ಸದ್ಯದ ರಾಷ್ಟ್ರಗಳ ಸಮಶಕ್ತಿಯು
ಬೇಕೈ ॥೪॥

ದೇಶದ ಸೇನಾ ಸಂಖ್ಯೆಯು । ಸೂಸುತ ಸಿದ್ಧವಿರುತಿರಲು ಪೊಳದೇಶಕ್ಕಂ॥
ಕುಶಲತೆ ತಲೆದೋರುತ್ತಂ । ಎಸೆವವು ಸರ್ವೋದ್ಯಮಗಳು ದೇಶ
ದೊಳಿಲ್ಲಂ ॥೫॥

## ಗ್ರಾಮಸುಧಾರಣೆ.

ಆಯಾಗ್ರಾಮದ ಪ್ರಗತಿಯು । ಕಾಯಾವಾಚಾ ಮನದೊಳು ಮಾಳ್ಪುದು
ಮುಂದಾಳ್ ।
ಆಯಾಜನಪದನುತ್ಸವ ॥ ನೀಯುಲು ನಿರುತಂ ಸಕಲ ಸುಧಾರಣೆ
ಯುಕ್ತಂ ॥೧॥

ಮುಂದಾಳ್ಗಳ ಮುಂಜಾಗ್ರತೆ । ಯಿಂದಾಯಾಕಾರ್ಯಗಳನು
ಕೈಕೊಳ್ಪುಸುದೈ ॥
ಒಂದೊಂದಂ ಕಡೆಗೆಯ್ಯಲು । ಮುಂದಾಗಿರುತಿಹ ಮಹಾನುಭಾವರೆ
ಯೋಗ್ಯಂ ॥೨॥

ತರುಣರ ಸಂಘವ ನಿರ್ಮಿಸಿ । ಅರುಣೋದಯದೊಳು ಪ್ರಭಾತ
ಪೇರಿಯ ಲೇಸಂ ॥
ತರುಳರ ಪ್ರಗತಿಯ ಪದಗಳ । ನೆರೆಹಾಡುತ್ತಂ ಜಯಜಯಕಾರಂಗೆ
ಯ್ಯಲ್ ॥೩॥

ಪಂಚರ ಸಮಿತಿಯು ಕೂಡುತ । ಮಿಂಚಿದ ಗ್ರಾಮದ ಸುಧಾರಣೆಯ
ಸೂಚಿಸುತಂ ॥
ವಂಚನೆಯನ್ನೋಡಿಸುತಂ । ಕೆಂಚರ ನಾಮವನಳಿಪುದು
ನಾಗರಿಕತೆಯಿಂ ॥೪॥

ಶೀಘ್ರದೆ ಸತ್ಕ್ರಿಯೆ ಪಿಡಿಯುತ । ಸ್ವಗ್ರಾಮೋದ್ಧಾರ ಕಾರ್ಯ
ಕೈಕೊಳ್ಪುಸುದೈ ॥
ಕುಗ್ರಾಮಪೆಸರನಳಿಸುತ । ಸುಗ್ರಾಮ ಸುಧಾರಣೆಯನು
ಕೈಗೂಡಿಸಿರೈ ॥೫॥

## ಸದ್ಭಾವ.

ಜಗಳಕೆ ಮೂಲಂ ಮತ್ಸರ । ನೆಗಳಲ್ ಜಗಳೇಯುವರೊಳು ದ್ವೇಷಾ
ಸೂಯಂ ||
ನಿಗಳಾಗುತ ಪೋಗಲ್ಕಂ । ಅಗಣಿತ ಹಾನಿಯು ಸ್ವದೇಶ
ಸರಕಾರಕ್ಕಂ ||೧|

ಜನತಾ ಮತ್ಸರ ಪೋಗಲು । ಅನುಪಮ ಪ್ರೇಮಾದರ ಸಮತಾ
ಭಾವಂಮೇಣ್ ॥
ವಿನಯ ಶಾಂತಿಗುಣಂಗಳು । ಅನುದಿನ ಕರ್ತವ್ಯ ನಿಷ್ಠೆಪರಹಿತ
ಸಾಧ್ಯಂ ॥೨॥

ಭಾವಂ ಶುದ್ಧಿರೆ ಭಾಗ್ಯಕೆ । ಅವುದುಮೆಮಗಾಕೊರತೆಯುದೆಂಬೀಮಾತಂ ॥
ಅವಗಾಹನೆಯೊಳಿರುತಿರೆ ॥ ಭಾವವೆ ಸದ್ಭಾವವಾಗಿ ಶೋಭಿಸು
ತಿರ್ಕುಂ ||೩||

ತೋರುವ ವಿಶ್ವವನೆಲ್ಲಂ । ಊರೆಂದೆನಿಸುವ ದೃಢತರಭಾವಂ ಬೆಳೆಯುಲ್ ||
ಭಾರತದೇಶವನೆಲ್ಲಂ । ಮಿರುಗುವ ನಮ್ಮಮನೆಯನೆ ಭಾವಿಸ
ಲಕ್ಕಂ ॥೪॥

ಆಶಾಪಾಶವ ಕಡಿದುಂ । ಸಾಸಿರ ಮುಖದೊಳು ಹರಿಯುವ ಮನಮಂ
ತಡೆದುಂ ||
ಅಸಮಾಕ್ಷನ ದಯೆಪಡೆದುಂ । ವಸುಧೆಯು ಬೇಗಿನ ಮಹಾತ್ಮರ
ನೆನೆಯ್ಕೆ ॥೫॥

## ಮತದಾನ.

ಆರಿಸೆ ದೇಶದ ಸುಸ್ಥಿತಿ । ಶಾಸನ ಸಮಿತಿಯ ರಚನೆಯ ತತ್ವಮೆಯುಕ್ತಂ ॥
ಪೋಷಿಪ ಮತದಾನಂ । ಶಾಸನಸಭೆ ಸಂಘಟನೆಯೆವಿತ್ತಂ ಸತ್ಯಂ ॥೧॥

ಹಿಂದುಸ್ತಾನದ ದೇಶದೆ । ಮುಂದಾಳಿನ ಮೇಷಹಾಕಿ ಜರಗಿದ
ಸಭೆಯೊಳ್ ॥
ಗಾಂಧಿಯು ತತ್ವವ ಹೇಳುವ । ಒಂದುಂ ತಾನನು ಸರಿಸದ ಮಾನವ
ನರಿಯೈ ॥೨॥

ಬೆಳ್ಳಗೆ ಕಂಡುದುದೆಲ್ಲಂ । ಬೆಳ್ಳನೆ ಚಪ್ಪಾಳೆ ಹೊಡೆದು ಹಾಲೆನಬೇಡೈ ॥
ಬೆಳ್ಳಿತು ಸುಣ್ಣದ ನೀರಂ । ಗಳ್ಳನೆ ಕುಡಿಯೆ ಪರಿಣಾಮವೇನಾ
ಗುವದೈ ॥೩॥

ಮತದಾನದ ಪದ್ಧತಿಯೊಳ್ । ಅತಿ ಸೂಕ್ಷ್ಮವಿಚಾರ ಮಾಡಿ ಹೋಟವ
ಹಾಕೈ ॥
ಮತದಾನದೆ ಭಿಡೆಬೇಡೈ । ಮತವೇ ಜೀವವು ಪ್ರಜಾಪ್ರಭುತ್ವ
ದೊಳಲ್ಲೇಂ ॥೪॥

ಜಾತಿವಿಜಾತಿಯು ನೋಡದೆ । ಚಾತುರತೆಯು ಬುದ್ಧಿಬಲದ ಪ್ರಜೆಗಳ
ಹಿತದಾ ॥
ಕೃತಿಗಳ ಕಡೆಗಾಣಿಪನಂ । ಮತಿವಂತನನಾರಿಸುವದು ನ್ಯಾಯುವು
ನೋಡೈ ॥೫॥

## ಕಾಯಕ ವೈಶಿಷ್ಟ್ಯ.

ಮುದದಿಂದುದಯದೆಯೋಳುತ । ಸದಮಲಹೃದಯದೆ ಹಿಡಿದಿಹ
ಸತ್ಕಾಯಕದಿಂ ॥
ದೊದಗಿದಹಾಗದ ಹಣದಿಂ । ಪದುಳದಿ ಪಂಚಪ್ರಸಾದ ಪಡೆವರ್
ಶರಣರ್ ॥೧॥

ಶರಣರು ಸತ್ಕಾಯಕದಿಂ । ಬರುತಿರ್ದಚಿಕ್ಕೊತ್ತಿದದರದಾಧನದಿಂದಂ ॥
ದೊರಕಿಸಿ ಪಂಚಪದಾರ್ಥವ । ಹರಭಕ್ತರೊಡನೆ ಪ್ರಸಾದ ಸೇವಿಸುತಿರು
ವರ್ ॥೨॥

ಕಾಯಾಕಷ್ಟವ ಪಡುತಂ । ಸಾಯುವ ಹೆದರಿಕೆ ಹಿಡಿಯದೆ ಕಾಯಕ
ಗೈವರ್ ॥
ಕಾಯಾವಾಚಾಮನದಿಂ । ಮಾಯಾರಹಿತರೆನಿಸುತ್ತ ನಡೆವರ್
ನುಡಿವರ್ ॥೩॥

ಹಿಂದಿನದಿನದಾಗಳಿಕೆಯು । ಇಂದದು ತಂಗಳವೆನಿಪುದೆಂಬೀಭಾವಂ ॥
ಕುಂದದೆ ಕಡೆಗಾಣಿಸುತಂ । ಅಂದಂದಿಗೆ ಲೋಕಸೇವೆ ಸಾಗಿಸು
ತಿರುವರ್ ॥೪॥

ಆಶೆಗೆ ರೋಷವು ತಾಯಿಯು ॥ ಆಶಾರೋಷಾರಹಿತರು ಪಶುಪತಿಭಕ್ತರ್॥
ಭೂಷಣರೈ ಭೂತಳದೊಳ್ । ವಿಷಯಾಸಕ್ತರಿವರನನು ಕರಿಪುದು
ಯುಕ್ತಂ ॥೫॥

## ವಿಶ್ವಾಸ.

ಸರಕಾರದ ನೌಕರಿಯೊಳ್ । ಸೇರುತ ಸಮತಾಗುಣವನು ಮೀರುತ
ಕೆಲಬರ್ ॥
ಮರೆಯೊಳ್ ಲಂಚವ ತಿನ್ನುತ ॥ ಪರಿಪರಿ ಪಾರ್ಟಿವ ಧರಿಸುತ ವಂಚಿ
ಸುತಿರುವರ್ ॥೧॥

ವಂಚಿಸುತಿರುವೀಜನತೆಯು ।ವಂಚನೆಗುಣತೊರೆಯುತ ಸದ್ವರ್ತನವಂ॥
ಮಿಂಚಿಸುತಂ ನಡೆಯುತಿರಲ್ । ಲಂಚಿನ ಗುಣವಳಿದು ದೇಶದುನ್ನತಿ
ಯುಕ್ಕುಂ ॥೨॥

ವಿಶ್ವಾಸಂ ವ್ಯವಸಾಯದೆ । ವಿಶ್ವಾಷಂ ಹಿರಿಯರಾಜ್ಞೆ ವಚನಂಗಳೊಳಂ ॥
ವಿಶ್ವಾಸದೆ ಫಲಸಿಗುವದು । ವಿಶ್ವಾಸಂ ರಾಜ್ಯನೀತಿ ಶಾಸನ ಸಭೆ
ಯೊಳ್ ॥೩॥

ನನ್ನವರೆಂಬೀಭಾವಂ । ತನ್ನೊಳು ತಾನಂಕುರಿಸುತ ಮರವಾಗುತಿರಲ್ ॥
ಸನ್ನುತ ಪ್ರೇಮದ ಫಲಗಳ । ತಿನ್ನುತ ತನಿರಸವನೀಂಟಿ ತಣಿಪುದು
ದೇಶಂ ॥೪॥

ಭಾರತಮಾತೆಯ ಪ್ರೇಮದೆ । ಸಾರುವೆನೈ ಸರ್ವಜನಕೆ ಸ್ವಾತಂತ್ರತೆಯಾ॥
ಸ್ವಾರಸ್ಯದ ಸವಿಸುಖಮಂ । ಜಾರುತ ಬೀಳುತ ತುತೂರಿ ಸ್ವರದಿಂ
ಭರದಿಂ ॥೫॥

ಕಂದನ ಕೂಗನು ಕೇಳುತ।ಬಂಧುರ ಹಿಂದೂಜನನಿಗೆ ವಂದನೆಗೆಯ್ದುಂ ॥
ಮುಂದಿನ ಮಾರ್ಗವ ಪಿಡಿಯುತ। ಹಿಂದಾಗದೆ ಮುಂದರಿಯಿರಿ
ಯಿಂದಿನ ಜಗದೊಳ್ ॥೬॥

# ಲಿಂಗವಂತ ಸಮಾಜವು ಕೈಕೊಳ್ಳತಕ್ಕ ವಿಧಾಯಕ ಕಾರ್ಯಗಳು.

(ಲೇಖಕರು:— ಶ್ರೀ. ಅನ್ನದಾನೀಶ್ವರ ವಿರಕ್ತಮಠ.)

## (೧) ಒಳಪಂಗಡಗಳ ಏಕೀಕರಣ.

ಲಿಂಗವಂತ ಸಮಾಜದ ಧಾರ್ಮಿಕ ವಿಭೂತಿಗಳು ಒಳಪಂಗಡಗಳ ಏಕೀಕರಣ ಮಾಡಿರುವರು. ಇಷ್ಟೇಅಲ್ಲ, ಜಾತೀಯತೆಯ ನಿರ್ಮೂಲನ ಮಾಡಿ ವಿಶಾಲ ತಳಹದಿಯ ಮೇಲೆ ಸಿದ್ಧಾಂತ ಕಟ್ಟಿ ಪ್ರಚಾರ ಮಾಡಿರುವರು. ಶರಣರ ವಚನ, ಸರ್ವಜ್ಞ ವಚನಗಳಲ್ಲಿ ಜಾತೀಯತೆಗೆ ಸ್ಥಾನವಿಲ್ಲ. ನಮ್ಮ ಧರ್ಮಗ್ರಂಥಗಳು ಜಾತೀಯತೆಯನ್ನು ಖಂಡಿಸುತ್ತವೆ. ಜಾತಿಯ ಬಂಧನಗಳು ಭಯಂಕರ ಬಿಗಿಯಾಗಿದ್ದ ಕಾಲದಲ್ಲಿಯೇ ಅಣ್ಣಬಸವಣ್ಣನು ಜಾತೀಯತೆಯ ನಿರ್ಮೂಲನ ಮಾಡಲಿಕ್ಕೆ ಹೆಣಗಾಡಿ ಹೋರಾಡಿ ಕೊನೆಗೆ ಅದಕ್ಕಾಗಿಯೇ ಪ್ರಾಣಾರ್ಪಣ ಮಾಡಬೇಕಾಯಿತು. ಈಗಿನ ವಾತಾವರಣವು ರಾಷ್ಟ್ರೀಯತೆಯ ವಾತಾವರಣವು. ಹಿಂದುಸ್ತಾನದ ಸ್ವತಂತ್ರ ಸರಕಾರವು ಜಾತೀಯತೆಯ ನಿರ್ಮೂಲನಕ್ಕೆ ಬಹು ಮಹತ್ವಕೊಡುತ್ತದೆ. ವಿಶಾಲ ವಿಚಾರಗಳು ಜನರ ಮನಸ್ಸಿನಲ್ಲಿ ಮೂಡಲಿಕ್ಕೆ ಪ್ರಾರಂಭವಾಗಿವೆ. ಪರಿಸ್ಥಿತಿಯು ಹೀಗಿರಲು ಲಿಂಗವಂತ ಸಮಾಜಕ್ಕೆ ಒಳಪಂಗಡಗಳ ಏಕೀಕರಣ ಮಾಡಲಿಕ್ಕೆ ಅಡ್ಡಿಯೇನಿರುವದು? ಶರಣರಿಗೂ ಶರಣರ ವಚನಗಳಿಗೂ ಸ್ವತಂತ್ರ ಸರಕಾರಕ್ಕೂ ಆಧುನಿಕ ಪ್ರಗತಿಯ ವಿಚಾರಗಳಿಗೂ ಮಹತ್ವಕೊಡುವ ಮನೋವೃತ್ತಿಯು ಲಿಂಗವಂತ ಸಮಾಜದಲ್ಲಿ ಬೆಳೆಯುತ್ತಹೋದರೆ ಆ ಪ್ರಮಾಣದಲ್ಲಿ ಏಕೀಕರಣವಾಗುವದು ಸುಲಭವಾಗುತ್ತಹೋಗುತ್ತದೆ. ಇಂಥ ಉದಾರ ವ್ಯಾಪಕ ಮನೋವೃತ್ತಿಯು ಲಿಂಗವಂತ ಸಮಾಜದ ಕೆಲವು ಜನರಲ್ಲಿ ಕಂಡುಬರುವದಿಲ್ಲ. ಇಂಥ ಜನರ ಮನೋವೃತ್ತಿಯೇ ಏಕೀಕರಣಕ್ಕೂ ಜಾತೀಯತಾ ನಿರ್ಮೂಲನಕ್ಕೂ ದೊಡ್ಡ ವೈರಿಯಾಗಿದೆ. ಅವರ ಮನೋವೃತ್ತಿಯು ಬದಲಾಗುವ ಪರಿಯೆಂತು? ಶರಣರ ತತ್ವಗಳನ್ನೂ ರಾಷ್ಟ್ರೀಯ ವಿಚಾರಗಳನ್ನೂ ಜೋರಿನಿಂದ ಪ್ರಚಾರ ಮಾಡಿ ಎಲ್ಲ ಒಳಪಂಗಡದವರಿಗೂ ಸಮಾನ ಹಕ್ಕುಗಳನ್ನು ಕೊಡುತ್ತ ಬಂಧು

ಪ್ರೀತಿಯುನ್ನು ನೆಲೆಗೊಳಿಸುತ್ತ ಹೋಗುವದೇ ದಿವ್ಯೋಪಾಯವೆಂದು ಹೇಳಬಹುದು. ಲಿಂಗವಂತ ಸಮಾಜದಲ್ಲಿ ಆಧುನಿಕ ವಿದ್ಯಾವಿಭೂಷಿತ ಜನರಿರುವರು. ಪ್ರಗತಿಪರ ವಿಚಾರಗಳ ತರುಣರಿರುವರು. ರಾಷ್ಟ್ರೀಯ ವಿಚಾರಗಳ ಜನರು ಇರುವರು. ಪ್ರಗತಿಶೀಲ ಸಾಹಿತಿಗಳು ಇರುವರು. ಶರಣರ ತತ್ವಗಳನ್ನು ಪ್ರೀತಿಸುವ ಜನರು ಇರುವರು. ಜಾತೀಯುತಾ ನಿರ್ಮೂಲನಕ್ಕಾಗಿಯೇ ಜಂಗಮರ ಸಮೂಹವು ಏರ್ಪಟ್ಟಿರುವದು. ಇವರೆಲ್ಲರೂ ಕೂಡಿ ನಿರ್ಣಯ ಮಾಡಿದರೆ ಏಕೀಕರಣವು ಸುಲಭವಾಗಿ ಸಾಧ್ಯವಾಗುವದು. ಸಾಮಾಜಿಕ ಸಂಘಟನೆಗೂ ಏಕರಾಷ್ಟ್ರೀಯುತೆಗೂ ಪೋಷಕವಾಗುವ ಸಹಭೋಜನ, ಶರೀರಸಂಬಂಧಗಳನ್ನು ಲಿಂಗವಂತ ಸಮಾಜದಲ್ಲಿ ಪ್ರಚಾರ ಮಾಡುವದೇ ಏಕೀಕರಣದ ಮುಖ್ಯ ಸಾಧನವಾಗಿರುವದು. ವಿರಕ್ತ ಸ್ವಾಮಿಗಳು ಇತ್ತ ಲಕ್ಷಗೊಟ್ಟು ಕಾರ್ಯ ಮಾಡಹತ್ತಿದರೆ ಒಳಪಂಗಡಗಳ ಏಕೀಕರಣವು ಅತ್ಯಂತ ಸುಲಭವಾಗುತ್ತದೆ. ವಿರಕ್ತಸ್ವಾಮಿಗಳು ಆಧುನಿಕ ದೃಷ್ಟಿಯುನ್ನು ಸರಿಯಾಗಿ ಅರ್ಥ ಮಾಡಿಕೊಂಡು ಪರಿಸ್ಥಿತಿಗೆ ಹೊಂದಿ ನಡೆಯದಿದ್ದರೆ ಸ್ವಾಮಿ ರಾಮತೀರ್ಥರು ಹೇಳಿದಂತೆ "ಬದಲಾಗಿರಿ; ಇಲ್ಲದಿದ್ದರೆ ಮರಣ ಹೊಂದಿರಿ" ಎನ್ನುವ ಗತಿಯು ತಪ್ಪಿದ್ದಲ್ಲ. ಜನಸಾಮಾನ್ಯರೊಡನೆ ಸಮಾನಭಾವದಿಂದ ಕೂಡಿ ನಡೆಯುವ ಸಾಮಾಜಿಕ ದೃಷ್ಟಿ ಬಂದರೆ ಅಥವಾ ಯತ್ನ ಮಾಡಿ ತಂದುಕೊಂಡರೆ ವಿರಕ್ತ ಸ್ವಾಮಿಗಳು ನಮ್ಮ ಮುಂದಾಳುಗಳಾಗಿ ಮಾರ್ಗದರ್ಶನ ಮಾಡಬಲ್ಲರು. ವಿಚಾರ ಕ್ರಾಂತಿಯಾಗದಿದ್ದರೆ ಆಚಾರ ಕ್ರಾಂತಿಯಿಲ್ಲ. ಕಾರಣ ವಿರಕ್ತ ಸ್ವಾಮಿಗಳೂ ಪಟ್ಟದ ದೇವರೂ ವಿಚಾರಗಳಲ್ಲಿ ಕ್ರಾಂತಿಯುನ್ನುಂಟುಮಾಡಿಕೊಳ್ಳಲಿಕ್ಕೆ ತಯಾರಾಗಬೇಕು 'ನಾ ಹೆಚ್ಚು' ಎನ್ನುವ ಭಾವ ಪಲ್ಲಟವಾಗದಿದ್ದರೆ ಏಕೀಕರಣವಾಗುವದೇ ಇಲ್ಲ. ಈ ಭಾವ ಪಲ್ಲಟ ಅಥವಾ ಹೃದಯ ಪರಿವರ್ತನೆಯುನ್ನೇ ಈಗಿನ ಜನಾಂಗವೂ ಒಳಪಂಗಡದ ಜನರೂ ನಿರೀಕ್ಷಿಸುತ್ತ ಕುಳಿತಿರುವರು.

ಲಿಂಗವಂತ ಸಮಾಜದಲ್ಲಿ ಹಡಪದವರು, ಮಡಿವಾಳರು, ಸಾದರು, ಡೋಹರರು, ಸಮಗಾರರು, ಮುಂತಾದ ಅನೇಕ ಒಳಪಂಗಡಗಳಿವೆ. ಇವರ ಮನೆಗಳಿಗೆ ಜಂಗಮರು ಸಹ ಊಟಕ್ಕೆ ಹೋಗುವದಿಲ್ಲ. ಇವರ

ಏಕೀಕರಣ ಮಾಡಲಿಕ್ಕೇನೇ ಉಂಟಾದ ಜಂಗಮತತ್ವವು ಈಗಿನ ಜಂಗಮರಲ್ಲಿ ಮಾಯವಾಗಿರುವದು ಅತ್ಯಂತ ಶೋಚನೀಯವು. ಸಾದರೀ ಮೊದಲಾದವರು ತಮ್ಮ ಪ್ರತ್ಯೇಕ ಗುರುಗಳನ್ನೇ ಮಾಡಿಕೊಳ್ಳಲಿಕೆ ಇದೇ ಕಾರಣವು. ಪುತ್ರವರ್ಗ ಮತ್ತು ಶಿಷ್ಯವರ್ಗ ಎಂಬ ಭೇದ ಮಾಡದೇ ಯೋಗ್ಯರನ್ನು ಮಠಗಳಿಗೆ ಆರಿಸುತ್ತ ಸ್ವಾಮಿಗಳನ್ನು ಮಾಡುತ್ತ ನಡೆದರೆ ಅವರು ಒಳಪಂಗಡಗಳ ಏಕೀಕರಣವನ್ನು ಮಾಡಲಿಕ್ಕೆ ಮುಂದೆ ಬರುವರು. ಜಾತಿ ಸೂತಕವಿಲ್ಲ ಲಿಂಗವಂತರಿಗೆ! ಅನ್ಯರ ಒಂದು ಅನ್ನದ ಅಗುಳು ಹೊಟ್ಟೆಯಲ್ಲಿ ಹೋದರೆ ಆತ್ಮನು ಅಪವಿತ್ರನಾಗುವನೇ? ಅನ್ಯರ ಕನ್ನೆಯನ್ನು ಲಗ್ನವಾದರೆ ಧರ್ಮ ಕೆಡುವದೇ? ಧರ್ಮವೆಂದರೆ ಜಾತಿಯೇ? ಜಾತಿಯ ನಿರಸನವೇ ನಿಜಧರ್ಮವು. ಜಾತಿಗೂ ಧರ್ಮಕ್ಕೂ ಯಾವ ಸಂಬಂಧವೂ ಇಲ್ಲ. ಬಸವಣ್ಣನು ಡೋಹರ ಕಕ್ಕಯ್ಯ, ಮಾದರ ಚನ್ನಯ್ಯ, ಹಡಪದ ಅಪ್ಪಣ್ಣ ಮುಂತಾದ ಒಳಪಂಗಡದವರ ಕೂಡ ಸಮರಸ ಮಾಡಲಿಲ್ಲವೇ? ಬ್ರಾಹ್ಮಣನಾಗಿದ್ದ ಮಧುವಯ್ಯನು ಸಮಗಾರನಾಗಿದ್ದ ಹರಳಯ್ಯನ ಮಗನಿಗೆ ತನ್ನ ಮಗಳನ್ನು ಕೊಟ್ಟು ಲಗ್ನ ಮಾಡಲಿಲ್ಲವೇ?

ಎಲ್ಲ ಒಳಪಂಗಡಗಳಲ್ಲಿ ಏಕೀಕರಣವಾಗಲೆಂದೇ ಲಿಂಗವಂತರಲ್ಲಿ ಕರುಣ ಪ್ರಸಾದ ಸೇವನೆಯ ಕ್ರಮವು ಇರುವದು. ಭಕ್ತ, ಮಹೇಶ ಎಂಬ ಭೇದವು ಈ ಕ್ರಮದಿಂದ ಹೊಡೆದೋಡಿಸಲ್ಪಟ್ಟು ಎಲ್ಲರೂ ಸಮಾನರೆಂಬ ಭಾವನೆಯು ಬಲಿಯಲೆಂದೇ ಸಿದ್ಧಾಂತವಿರುವದು.

ಲಿಂಗವಂತರಲ್ಲಿ ವರ್ಣಾಶ್ರಮಗಳಿಲ್ಲ, ಎಂದ ಮೇಲೆ ಜಾತಿಭೇದಗಳು ಎಲ್ಲಿಂದ ಬರಬೇಕು? ಆಧ್ಯಾತ್ಮಿಕತೆಯನ್ನು ಬಿಟ್ಟು ಕರ್ಮಠತನವನ್ನು ಎಂದು ಲಿಂಗವಂತ ಸಮಾಜವು ಹಿಡಿಯಿತೋ ಅಂದೇ ಅದು ಅವನತಿಯ ಮಾರ್ಗದಲ್ಲಿ ನಡೆಯಲಿಕ್ಕೆ ಪ್ರಾರಂಭವಾದಂತಾಯಿತು. ಅವನತಿಯ ಬೇರುಗಳು ವರ್ಣಾಶ್ರಮದ ಹೃದಯವಿಲ್ಲದ ಕರ್ಮಠತನದಲ್ಲಿಯೇ ಇವೆಯೆಂಬುದು ಸೂರ್ಯ ಪ್ರಕಾಶದಷ್ಟು ಸ್ವಚ್ಛವಿದ್ದರೂ ಕೆಲವರು ಲಿಂಗವಂತರಲ್ಲಿ ಪುನಃ ವರ್ಣಾಶ್ರಮ ಸ್ಥಾಪಿಸಲಿಕ್ಕೆ ಹಂಬಲಿಸುತ್ತಿರುವದು ಹುಚ್ಚುತನವು. ವಿಶ್ವಬಂಧುತ್ವದ ಅಶೋಕ ಚಕ್ರವು ಮೆರೆಯುತ್ತಿರುವ ನಮ್ಮ ರಾಷ್ಟ್ರದಲ್ಲಿ, ವರ್ಣಾಶ್ರಮನಿರಸನಮಾಡಿದ

ಬುದ್ಧನ ತತ್ವಕ್ಕೆ ಮನ್ನಣೆಯಿದ್ದ ನಮ್ಮ ರಾಷ್ಟ್ರದಲ್ಲಿ, ಇವರ ಪ್ರಯತ್ನವು ಎಂದೂ ಯಶಸ್ವಿಯಾಗುವದೇ ಇಲ್ಲ. ಮಹಾತ್ಮಾ ಗಾಂಧಿಯವರು ವರ್ಣಾಶ್ರಮಗಳ ದೋಷಗಳನ್ನು ಹೊಡೆದೋಡಿಸಲಿಕ್ಕೇನೇ ಅಸ್ಪೃಶ್ಯರಿಗೆ ಹರಿಜನರೆಂಬ ಹೆಸರನ್ನು ಕೊಟ್ಟಿರುವರು. ವರ್ಣಾಶ್ರಮದ ದೋಷಗಳನ್ನು ಕಳೆಯಲಿಕ್ಕೆ ಪ್ರಯತ್ನಿಸಿದರೆ ವರ್ಣಾಶ್ರಮ ಸ್ಥಾಪಿಸಲಿಕ್ಕೆ ಹೆಣಗಾಡಿದಂತಾಗಲಿಲ್ಲ.

ಹಡಪದವರು, ಮಡಿವಾಳರು, ಡೋಹರೀ ಮುಂತಾದ ಒಳಪಂಗಡದ ಜನರು ತಾವು ಮಾಡುವ ಉದ್ಯೋಗಗಳನ್ನು ಬಿಟ್ಟರೆ ಏಕೀಕರಣ ಮಾಡುತ್ತೇವೆಂದು ಕೆಲವರು ಅನ್ನುವದುಂಟು. ಇದು ಒಂದು ಕುಂಟು ನೆವವೇ ಸರಿ. ಬೇರೆ ಲಾಭದಾಯಕ ಉದ್ಯೋಗಗಳನ್ನು ಅವರಿಗೆ ಕೊಡುವದು ಶಕ್ಯವಿಲ್ಲದಿದ್ದಾಗ, ಈಗ ಮಾಡುವ ಉದ್ಯೋಗಗಳನ್ನು ಬಿಡಿಸಲಿಕ್ಕೆ ಯತ್ನಿಸುವದೆಂದರೆ ಮೂರ್ಖತನವೇ ಸರಿ. ಅವರ ಉದ್ಯೋಗಗಳಲ್ಲಿ ಸುಧಾರಣೆ ಮಾಡುವದು ಮಾತ್ರ ಅವಶ್ಯವಿದೆ. ಅವರಿಗೆ ಶಿಸ್ತಿನಿಂದ, ಸ್ವಚ್ಛತೆಯಿಂದ, ಉದ್ಯೋಗ ಮಾಡಲಿಕ್ಕೆ ಕಲಿಸುವದು ಅಗತ್ಯವಿದೆ. ಲಿಂಗವಂತ ತತ್ವಕ್ಕನುಸರಿಸಿ ಯಾವ ಉದ್ಯೋಗವೂ ಹೀನವಲ್ಲ. ಎಲ್ಲವೂ ಸಮಾನವಾಗಿವೆ. ಬೇಕಾದ ಉದ್ಯೋಗ ಮಾಡಿದರೂ ಲಿಂಗಭಾವನೆ ಅಥವಾ ಆಧ್ಯಾತ್ಮಿಕ ದೃಷ್ಟಿಯ ಬಂಧು ಭಾವ ಇದ್ದರೆ ತೀರಿತು.

ಲಿಂಗವಂತ ಸಂಸ್ಕೃತಿಯನ್ನು ಉಳಿಸಬೇಕೆಂಬ ಇಚ್ಛೆಯುಳ್ಳವರೆಲ್ಲರೂ ಒಳಪಂಗಡಗಳ ಏಕೀಕರಣವನ್ನು ಮೊದಲು ಮಾಡಬೇಕು. ಒಳಪಂಗಡಗಳ ಜನರ ಅಶಾಂತಿ ಎಂಬ ಉರಿಯು ಇಡೀ ಸಮಾಜವನ್ನೇ ಸುಡದೇ ಬಿಡಲಿಕ್ಕಿಲ್ಲ. ಲಿಂಗವಂತರು ಎಷ್ಟೇ ಹಿಂಸೆ ಕೊಟ್ಟರೂ ಲಿಂಗವಂತ ಸಂಸ್ಕೃತಿಗೆ ಅಂಟಿಕೊಂಡಿರುವ ಆ ಜನರು ನಮ್ಮ ಸಮಾಜಕ್ಕೆ ಬಹಳ ಉಪಕಾರ ಮಾಡಿರುವರು. ಈ ದೃಷ್ಟಿಯಿಂದಾದರೂ ಅವರ ಕೂಡ ಸಮರಸ ಮಾಡಬಾರದೇ? ಅಯ್ಯನವರು, ಬಣಜಿಗರು, ಪಂಚಮಶೀಲದವರು ತಾವು ಹೆಚ್ಚು ಎಂಬ ಹುಚ್ಚು ಕಲ್ಪನೆಯನ್ನು ಕಿತ್ತೊಗೆಯದಿದ್ದರೆ ಒತ್ತಾಯದಿಂದ ಪರಿಸ್ಥಿತಿಯು ಕಿತ್ತೊಗೆಯುತ್ತದೆ. ಪ್ರಕೃತಿಯ ನೇಮವೇ ಅಂಥಾದ್ದು.

ಏಕರಾಷ್ಟ್ರೀಯತೆ, ಅಂತರ ರಾಷ್ಟ್ರೀಯತೆ, ವಿಶ್ವಬಂಧುತ್ವ, ಮಾನವ ಧರ್ಮ, ಜಾಗತಿಕ ಏಕ ಸರಕಾರ, ಇತ್ಯಾದಿ ಜಗದ್ವ್ಯಾಪಕ ಈಶ್ವರೀಯ ಸೂತ್ರಗಳು ಬಳಿಕೆಯಲ್ಲಿ ಬರುತ್ತಿರುವಾಗ ಲಿಂಗವಂತರು ತಮ್ಮೊಳಗೆ ನೂರಾರು ಭೇದ ಮಾಡಿಕೊಂಡು ಕೂಡ್ರುವದು ಅತ್ಯಂತ ವಿಘಾತುಕವೂ ವಿಶ್ವಶಾಂತಿಗೆ ಕಂಟಕವೂ ಆಗಿದೆ.

ಹಳೆಯ ಗೊಡ್ಡು ವಿಚಾರಗಳ ಸನಾತನಿ ಸ್ವಾಮಿಗಳೂ ಶಾಸ್ತ್ರಿಗಳೂ ಯೋಗ್ಯದಾರಿಗೆ ಬಾರದಿದ್ದರೆ ಅವರನ್ನು ಹಿಂದೆ ಸರಿಸಿ ಜಗತ್ತಿನ ಪ್ರಗತಿಯು ನಾಗಾಲೋಟದಿಂದ ಓಡಲಿಕ್ಕೆ ತಯಾರಾಗುವದು. ಒಳಪಂಗಡಗಳ ಏಕೀಕರಣಕ್ಕೆ ವಿರೋಧಿಸುವದೆಂದರೆ ಹೊಟ್ಟೆಯು ಉಳಿದ ದೇಹದ ಎಲ್ಲ ಅವಯವಗಳನ್ನು ಧಿಕ್ಕರಿಸಿ ಸತ್ತಂತೆಯೇ ಸರಿ.

ಆದ ಕಾರಣ ಲಿಂಗವಂತ ಸಮಾಜವು ಈ ಎಲ್ಲ ಅಂಶಗಳನ್ನು ವಿಚಾರಿಸಿ ಜಾಗ್ರತೆಯಾಗಿ ಏಕೀಕರಣದಂಥ ಮಹತ್ವದ ವಿಧಾಯಕ ಕಾರ್ಯ ಕೈಕೊಳ್ಳಲಿ !

---

# ನನ್ನ ಹಿಮಾಲಯದ ಯಾತ್ರೆಯು.

( ಲೇಖಕರು: – ಶ್ರೀಶಿವಯೋಗಿಗಳು ಸುಕ್ಷೇತ್ರ ಬಂಥನಾಳ. )

ಹಿಮಾಲಯವು ಹಿಂದುಗಳ ಪವಿತ್ರ ಸ್ಥಾನವೆಂದೂ ಯೋಗಿಗಳ ಯೋಗ ಭೂಮಿಯೆಂದೂ ತಪಸ್ವಿಗಳ ತಪೋವನವೆಂದೂ ಆರಣ್ಯಕ ( ಉಪನಿಷತ್ತುಗಳನ್ನು ) ಬರೆದ ಋಷಿಗಳ ಜ್ಞಾನ ಮಂದಿರವೆಂದೂ ವೈದಿಕರ ಯಜ್ಞ ಶಾಲೆಯೆಂದೂ ಬಹು ಪ್ರಾಚೀನ ಕಾಲದಿಂದ ಪ್ರಸಿದ್ಧವಾಗಿರುವದು ಸರ್ವಶ್ರುತವದೇಯಷ್ಟೇ. ಅಂಥ ಮಂಗಲಮಯ ಭೂಮಿಯನ್ನು ಒಮ್ಮೆ ಕಾಣಬೇಕು, ಅಲ್ಲಿರುವ ಮುನಿ-ಋಷಿ ತಪಸ್ವಿ-ಜ್ಞಾನಿ ಯೋಗಿಗಳನ್ನು ಕಂಡು ಶಕ್ಯವೆನಿಸಿದರೆ ಯೌಗಿಕ ಆಧ್ಯಾತ್ಮಿಕ ವಿಷಯವಾಗಿ ವಿಚಾರವಿನಿಮಯ ಮಾಡಿಕೊಂಡು ಬರಬೇಕೆಂಬ ಕೂತುಹಲವು ಬಹು ದಿವಸಗಳಿಂದಲೂ ನನ್ನಲ್ಲಿತ್ತು. ಅದರಂತೆ ರೂಢಿಗನುಸರಿಸಿ ಒಂದು

ಧ್ಯೇಯವನ್ನಿಟ್ಟುಕೊಂಡು ಹೊರಡಬೇಕೆಂದು ನಿಶ್ಚಯಿಸಿ ದ್ವಾದಶ ಜ್ಯೋತಿರ್ಲಿಂಗಗಳಲ್ಲಿಯೇ ಅತ್ಯಂತ ಕಠಿಣ ಹಾಗೂ ದೂರಿನ ಪ್ರವಾಸವಾದ ಬರ್ಫಮಯವಾಗಿರುವ ಕೇದಾರನಾಥನ ದರ್ಶನದ ಗುರಿಯನ್ನಿಟ್ಟುಕೊಂಡು ಕೆಲವು ಸಹಕಾರಿ ಸಂಗಡಿಗರೊಡನೆ ದಿನಾಂಕ ೨೨-೪-೪೯ ನೇ ದಿವಸ ಹಿಮಾಲಯದ ಯಾತ್ರೆಗೆ ಹೊರಟದ್ದಾಯಿತು

ಮುಂಬೈಯಲ್ಲಿ ದಿನಾಂಕ ೨೩ ಕ್ಕೆ ಜಗದ್ವಿಖ್ಯಾತ ತತ್ವಜ್ಞರಾದ ಸರ್ ರಾಧಾಕೃಷ್ಣನ್‌ರ ಅಧ್ಯಕ್ಷತೆಯಲ್ಲಿ ಸರ್ವ ಧರ್ಮ ಪರಿಷತ್ತು ಕೂಡುವದೆಂದು ಗೊತ್ತಾದ್ದರಿಂದ ದಾದರಕ್ಕೆ ಇಳಿದೆವು. ವಾಕ್ಪಟ ಧ್ವನಿ ನಿರ್ದೇಶಿಕರಾದ ಶಾಂತೇಶ ಪಾಟೀಲ ಎಮ್. ಎಸ್. ಸಿ. ಅವರು ನಮ್ಮನ್ನು ಸ್ಟೇಶನಿನಲ್ಲಿ ಸ್ವಾಗತಿಸಿ ತಮ್ಮ ಅತಿಥಿಗಳಾಗಿಟ್ಟುಕೊಂಡು ಸರ್ವಧರ್ಮ ಪರಿಷತ್ತಿಗೆ ನನ್ನನ್ನು ಕರ್ನಾಟಕ ಪ್ರತಿನಿಧಿಯನ್ನಾಗಿಯೇ ಮಾಡಿ ಕರಕೊಂಡು ಹೋದರು. ಅಲ್ಲಿ ಶ್ರೀಯುತ ಮುನಶಿ, ಡಾ|| ಮುಕರ್ಜಿ, ರಾಜಾಮಹಾರಾಜ ಗವ್ಹರ್ನರ ಮುಂಬೈ, ಸರ್ ರಾಧಾಕೃಷ್ಣನ ಮೊದಲಾದವರ ಸರ್ವಧರ್ಮಗಳಲ್ಲಿ ಸೌಹಾರ್ದತೆಯು ಬೆಳೆಸುವ ಭಾಷಣಗಳನ್ನು ಕೇಳಿದ್ದಾಯಿತು. ಮರುದಿನ ಕರ್ನಾಟಕ ಸಂಘದವರ ಆಗ್ರಹದ ಮೇರೆಗೆ ಅಲ್ಲಿಗೆ ಹೋಗಿ ಭೆಟ್ಟಿಕೊಟ್ಟು ಬಂದದ್ದಾಯಿತು. ಶಾಂತೇಶ ಪಾಟೀಲರ ಆಗ್ರಹದ ಮೇರೆಗೆ ದಿನಾಂಕ ೨೫ ಕ್ಕೆ ಮುಂಬೈಯಿಂದ ವಿಮಾನ ಮಾರ್ಗವಾಗಿ ಸೌರಾಷ್ಟ್ರ ಸೋಮನಾಥನ ದರ್ಶನಕ್ಕೆ ಹೋದವರಾದೆವು. ಸಮುದ್ರ ತೀರದ ಪ್ರಭಾಸ ಪಟ್ಟಣದಲ್ಲಿ ದ್ವಾದಶ ಜ್ಯೋತಿರ್ಲಿಂಗಗಳ ಪೈಕಿ ಒಂದಾದ ಸೋಮನಾಥನ ದೇವಾಲಯವಿದೆ. ಮೊದಲಿನ ಸೋಮನಾಥ ಲಿಂಗವು ಅಂತರದಲ್ಲಿತ್ತೆಂದು ಹೇಳುತ್ತಾರೆ. ಆದರೆ ಘಜನಿ ಮಹಮ್ಮದನು ಬಂದು ಒಡೆದು ಅದರ ಬುಡದಲ್ಲಿರುವ ೧೮ ಕೋಟಿ ಬೆಲೆಬಾಳುವ ಮುತ್ತು ರತ್ನಗಳನ್ನು ತಕ್ಕೊಂಡು ಹೋದನೆಂದು ಹೇಳುತ್ತಾರೆ. ಅಂದಿನಿಂದ ಸಮುದ್ರ ತೀರದಲ್ಲಿರುವ ಸೋಮನಾಥನ ಮಂದಿರವು ಹಾಳಾಗಿಯೇ ಇದೆ. ಇಂದೂರ ರಾಣಿ ಅಹಿಲ್ಯಾಬಾಯಿಯು ಹೊಸದೊಂದು ಗುಡಿ ಕಟ್ಟಿಸಿ ಮ್ಲೇಂಛರಿಗೆ ಅಂಜಿ ಬಾಗಿಲ ಕಪಾಟಗಳ ಹಿಂದೆ ದ್ವಾರ ಮಾಡಿ ನೆಲಮನೆಯಲ್ಲಿ ಸೋಮನಾಥನ ಹೆಸರಿನಿಂದ ಹೊಸದಾದ ಲಿಂಗವನ್ನು ಸ್ಥಾಪಿಸಿದ್ದಾಳೆ. ಆ ದೇವಾಲಯದ ವ್ಯವಸ್ಥೆಯು ಈಗ ಅಷ್ಟು ಚನ್ನಾಗಿಲ್ಲ. ಹೊಲಸಿನಿಂದ ತುಂಬಿದೆ. ವರ್ಷಕ್ಕೆ ನಾಲ್ಕು ಸಾವಿರ

ಸಂಬಳ ತಿನ್ನುವ ಪೂಜಾರಿಗಳಿಗೆ ಹೀಗೆ ಅಸ್ವಚ್ಛತೆ ಇಡಬಾರದಾಗಿಯೂ ಹೇಳಿದ್ದಾಯಿತು. ದೇವಾಲಯವೇ ಮಲಿನವಾಗಿರುವಾಗ ಊರು ಸ್ವಚ್ಛವಾಗಿರಲು ಸಾಧ್ಯವೇ ? ಪಟ್ಟಣವು ದುರ್ಗಂಧಮಯವಾಗಿದ್ದು ಅಲ್ಲಿಯ ಎಲ್ಲ ಜನರು ಯಾತ್ರಿಕರ ಮೇಲೆಯೇ ಉಪಜೀವಿಸುವವರಾಗಿದ್ದಾರೆ.

ಸೌರಾಷ್ಟ್ರ ಸೋಮನಾಥಪುರದಿಂದ ಹಿಮಾಲಯಕ್ಕೆ ಹೋಗುವದರ ಸಲುವಾಗಿ ರೇಲ್ವೆ ಮಾರ್ಗದಿಂದ ನೇರವಾಗಿ ದಿಲ್ಲಿಗೆ ಬಂದೆವು. ಸ್ಟೇಶನಿನಲ್ಲಿಯೇ ಅಲ್ಲಿಯ ದೊಡ್ಡ ಆಫೀಸರರಾದ ವಿಜಯಪುರದ ಸಿ. ಪಿ. ಹಳಕಟ್ಟಿಯವರು ನಮ್ಮೆಲ್ಲರನ್ನು ಸ್ವಾಗತಿಸಿ ತಮ್ಮ ಅತಿಥಿಗಳನ್ನಾಗಿಟ್ಟುಕೊಂಡು ದಿಲ್ಲಿಯಲ್ಲಿಯ ಹಳೆ ಹೊಸದಾಗಿರುವ ಎಲ್ಲ ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸಿದವರಾದರು. ಆದರೆ ಮಹಾತ್ಮಾ ಗಾಂಧಿಯವರ ಕೊಲೆಯಾದ ಸ್ಥಾನವನ್ನೂ ಅಲ್ಲಿ ಬರೆದ ಹೇ ರಾಮಾ ಎಂಬ ಅಕ್ಷರಗಳನ್ನು ನೋಡಿದ ಕೂಡಲೇ ನನಗೆ ಬಹು ಕಳವಳವಾಯಿತು. ಅಲ್ಲಿಂದ ಹರದ್ವಾರಕ್ಕೆ ಹೋದೆವು.

ದಾರಿಯಲ್ಲಿ ಗಂಗಾನದಿಯ ಕಾಲುವೆಗಳಿಂದ ಉತ್ತರ ಹಿಂದುಸ್ತಾನದ ಬಹುಭಾಗವು ಹಸರು ಬೆಳೆಗಳಿಂದ ಶೋಭಿಸುವದನ್ನು ಕಂಡೆವು. ನಿಜವಾಗಿ ಹರದ್ವಾರವು ಹಿಮಾಲಯ ಪರ್ವತದ ಪ್ರವೇಶದ್ವಾರವೇ ಆಗಿರುವದು. ಯಾತ್ರಿಕರ ಹಿಮಾಲಯದ ಪ್ರವಾಸವು ಇಲ್ಲಿಂದಲೇ ಪ್ರಾರಂಭವಾಗುವದು. ಹಾಗೂ ಕೇದಾರವು ಇಲ್ಲಿಂದಾ ೧೮೦ ಮೈಲು ದೂರಾಗಿರುವದು. ಹರದ್ವಾರದಲ್ಲಿ ಬ್ರಹ್ಮ ಕುಂಡ ಸತಿ ಕುಂಡ ದಕ್ಷಪ್ರಜಾಪತಿ ಮಂದಿರ ಮೊದಲಾದವುಗಳನ್ನು ನೋಡಿಕೊಂಡು ಹೃಷೀಕೇಶಕ್ಕೆ ಹೋದೆವು. ಮಧ್ಯದಲ್ಲಿ ಸತ್ಯನಾರಾಯಣನ ದರ್ಶನವು ಆಯಿತು.

ಹೃಷೀಕೇಶದಿಂದ ೨ ಮೈಲಿನ ಮೇಲೆ ಇರುವ ಮುನಿಕೇತನದಲ್ಲಿ ಸ್ವಾಮಿ ಶಿವಾನಂದರ ಆನಂದ ಕುಟೀರದಲ್ಲಿ ಮುಕ್ಕಾಮು ಮಾಡಿದೆವು. ಶಿವಾನಂದ ಸರಸ್ವತಿಯವರು ಯೋಗ ವೇದಾಂತ ಸಿದ್ಧಾಂತ ಯಜ್ಞ ಭಜನೆ, ಕೀರ್ತನೆ ಪ್ರಾಥಮಿಕಶಾಲೆ ವೈದ್ಯಕೀಶಾಲೆ ಇಂಗ್ಲಿಷಶಾಲೆ ಮೊದಲಾದ ಎಲ್ಲ ಕಲೆಗಳ ಶಿಕ್ಷಣವನ್ನು ಕೊಡುತ್ತಾರೆ. ಎರಡುನೂರದ ವರೆಗೂ ಸಾಧಕರಿದ್ದಾರೆ. ಶಿವಾನಂದ ಸ್ವಾಮಿಜಿಯವರ ಸಂಪಾದಕತ್ವದಲ್ಲಿ ದಿ ಡಿವಾಯಿನ್

ಲಾಯಿಫ್ (ಸಾತ್ವಿಕ ಜೀವನ) ವೆಂಬ ಇಂಗ್ಲಿಷ ಮಾಸಪತ್ರಿಕೆಯು ಹೊರಡುತ್ತದೆ. ಸ್ವಾಮಿಜಿಯವರು ಬಹು ಸರಳ ಹೃದಯರೂ ಶಾಂತರೂ ವಿದ್ಯಾವಂತರೂ ಅನುಭವಿಗಳೂ ಆಗಿದ್ದಾರೆ. ಅವರು ಮೊದಲು ಮದ್ರಾಸದಲ್ಲಿ ಪದವೀಧರ ಡಾಕ್ಟರರಿದ್ದು ಈ ೨೫ ವರ್ಷಗಳಿಂದ ಸನ್ಯಾಸಿಗಳಾಗಿ ಹಿಮಾಲಯದಲ್ಲಿದ್ದಾರೆ. ಅವರು ನನ್ನನ್ನು ಬಹು ಪ್ರೀತಿಸಿದರು. ಒಮ್ಮೆ ಪ್ರವಚನ ಮಾಡಬೇಕಾಗಿಯೂ ಆಗ್ರಹಪಟ್ಟದ್ದರಿಂದ ಎಲ್ಲ ಧರ್ಮಗಳ ಧ್ಯೇಯ ಒಂದೇ ಎಂಬ ವಿಷಯದ ಮೇಲೆ ಕನ್ನಡದಲ್ಲಿ ಪ್ರವಚನವನ್ನು ಮಾಡಿದೆನು. ಆ ಸಂಸ್ಥೆಯ ಸೆಕ್ರೆಟರಿಯವರಾದ ಸಚ್ಚಿದಾನಂದ ಮೂರ್ತಿಗಳು ಅದನ್ನು ಇಂಗ್ಲಿಷದಲ್ಲಿ ಭಾಷಾಂತರ ಮಾಡಿ ಎಲ್ಲರಿಗೂ ಹೇಳಿದರು. ಅಲ್ಲಿಯ ಎಲ್ಲ ವ್ಯವಹಾರವು ಇಂಗ್ಲಿಷದಲ್ಲಿಯೇ ನಡೆಯುವದಲ್ಲದೆ ಎಲ್ಲರೂ ಇಂಗ್ಲಿಷ ಮಾತಾಡುವವರೇ ಇರುವರು.

ಶಿವಾನಂದ ಕುಟೀರದಲ್ಲಿ ೫ ದಿವಸಗಳಿದ್ದು ಅವರ ಕೂಡ ಯೋಗಿಕ ವೇದಾಂತ ವಿಷಯವಾಗಿ ವಿಚಾರವಿನಿಮಯ ಮಾಡಿಕೊಂಡು ೪೦ ಮೈಲು ಅಂತರದಲ್ಲಿರುವ ದೇವಪ್ರಯಾಗಕ್ಕೆ ಮೋಟಾರ ಮಾರ್ಗವಾಗಿ ಹೋದೆವು. ಅಲ್ಲಿ ಭಗಿರಥಿ ಹಾಗು ಅಲಕನಂದಾ ನದಿಗಳ ಸಂಗಮವಾಗಿದೆ. ಇಲ್ಲಿಂದಲೇ ಈ ನದಿಯು ಮುಂದೆ ಗಂಗಾನದಿಯೆಂಬ ಅಭಿದಾನದಿಂದ ಹರಿಯುವದು. ಇಲ್ಲಿ ರಾಮನು ತಪಸ್ಸ ಮಾಡಿರುವನೆಂದು ಹೇಳುವರು. ಹಾಗೂ ರಘುಪತಿ ಮಂದಿರವು ಇರುವದು. ಇಲ್ಲಿಂದಲೇ ನಾವುಗಳೆಲ್ಲ ಕಾಲಿನ ಮಾರ್ಗವಾಗಿ ಕೇದಾರಕ್ಕೆ ಹೊರಟದ್ದಾಯಿತು. ಅಶಕ್ತರನ್ನು ಕೂಡ್ರಿಸಿಕೊಂಡು ಹೋಗಲು ಇಲ್ಲಿಯೇ ದಂಡಿ ಖಂಡಿ ಕೂಲಿಯವರು ದೊರೆಯುತ್ತಿರುವದರಿಂದಲೂ ರಜಿಸ್ಟರ ಆಫೀಸುಗಳು ಇಲ್ಲಿಯೇ ಇದ್ದದರಿಂದಲೂ ನಾವು ದಂಡಿ ಖಂಡಿ ಸಾಮಾನು ಹೊರಲು ಕೂಲಿಯವರನ್ನೂ ರಜಿಸ್ಟರ ಮಾಡಿಸಿಕೊಂಡು ಹೊರಟೆವು.

ನದಿಯ ದಂಡೆಯ ಹಿಡಿದು ಕೇವಲ ಕಾಲು ಮಾರ್ಗವಾಗಿಯೇ ಹೋಗಬೇಕಾಗುವದು. ಒಂದು ಬದಿ ಆಳವಾದ ತಗ್ಗಿನಲ್ಲಿ ನದಿಯು ಹರಿಯುವದು. ಮತ್ತೊಂದು ಬದಿಗೆ ಆಕಾಶ ಮುಟ್ಟುವಷ್ಟು ಎತ್ತರವಾದ ಪರ್ವತ ಕಾಣುವದು. ಇವುಗಳನ್ನು ನೋಡುತ್ತ ಹೋಗುವ ಪ್ರವಾಸಿಕನಿಗೆ ತಾನು ಹೊಸದೊಂದು ಜಗತ್ತಿನಲ್ಲಿ ಹೋಗುತ್ತಿರುವಂತೆ

ಭಾಸವಾಗುತ್ತಿರುತ್ತದೆ ಮತ್ತು ಭಯವು ಬರುತ್ತದೆ. ಎಚ್ಚರಿಕೆ ಇಲ್ಲದೆ ನಡೆದರೆ ನದಿಪಾಲಾಗುವಷ್ಟು ದಾರಿಯು ಒಂದೊಂದು ಕಡೆ ಸಂಣದಾಗಿರುತ್ತದೆ. ೪–೫ ಮೈಲುಗಳಿಗೊಂದು ಚಟ್ಟಿ ಅಂದರೆ ಪಾಂಥಸ್ಥರು ಇಳಿದುಕೊಳ್ಳಲಿಕ್ಕೆ ಹುಲ್ಲಿನ ಹಂಚಿನ ಚಪ್ಪರಗಳಿರುತ್ತವೆ. ಅಲ್ಲಿ ಊಟಕ್ಕೆ ಬೇಕಾಗುವ ಹಿಟ್ಟು, ಅಕ್ಕಿ, ಸಕ್ಕರೆ ಮೊದಲಾದ ಎಲ್ಲ ಸಾಮಾನುಗಳು ಮಾರಾಟಕ್ಕೆ ಸಿಗುತ್ತವೆ. ಆದರೆ ಬೆಲೆಯು ಮಾತ್ರ ಇಲ್ಲಿಯು ಇಮ್ಮಡಿಯಾಗಿರುತ್ತದೆ. ಅಡಿಗೆ ಮಾಡಿಕೊಳ್ಳಲು ಪಾತ್ರೆಗಳು ಸಿಗುತ್ತವೆ. ನಾವು ದಾರಿಯಲ್ಲಿ ಸಹಸ್ರಕಮಲೇಶ್ವರ, ಅಗಸ್ತ್ಯಮುನಿ, ಬಾಲಕೇದಾರನಾಥ, ಶ್ರೀನಗರ, ಗುಪ್ತಕಾಶಿ ಇಲ್ಲಿಂದ ಓಖಿಮಠವು ಒಂದುವರೆ ಮೈಲಿನಲ್ಲಿದೆ. ಮತ್ತು ಗೌರೀಕುಂಡ ಇಲ್ಲಿ ಬಿಸಿ ನೀರಿನ ಶಲೆ ಇರುತ್ತದೆ. ಅಲ್ಲಿ ಯಾತ್ರಿಕರು ಸ್ನಾನ ಮಾಡುತ್ತಾರೆ. ಇವುಗಳನ್ನೆಲ್ಲ ನೋಡಿ ತೀರ್ಥಗಳಲ್ಲಿ ಸ್ನಾನ ಮಾಡಿ ಮುಂದೆ ಬಹು ಕಡಿದಾದ ಬರ್ಫದ ಬಂಡೆಗಳಿಂದ ಕೂಡಿದ ಕಠಿಣ ಮಾರ್ಗದಿಂದ ನಡೆದು, ಮೇ ದಿನಾಂಕ ೧೬ ಮುಂಜಾನೆ ೯ ಕ್ಕೆ ಕೇದಾರ ಪುರಿಯನ್ನು ಮುಟ್ಟಿದೆವು. ಕೂಡಲೇ ಕೇದಾರನಾಥನ ದರ್ಶನವನ್ನು ಮಾಡಿದೆವು.

ಈವಾಗ ಕೇದಾರನಾಥನ ಪೂಜೆಯನ್ನು ಮಾಡುತ್ತಿರುವ ಬಳ್ಳಾರಿ ಜಿಲ್ಹೆಯ ಸದಾಶಿವಲಿಂಗ ಎಂಬವರು ನಮ್ಮೆಲ್ಲರನ್ನು ಅತ್ಯಾದರದಿಂದ ಸ್ವಾಗತಿಸಿ ನೇಪಾಲ ಮಹಾರಾಜರ ಬಂಗ್ಲೆಯಲ್ಲಿರಲು ನಮಗೆ ವ್ಯವಸ್ಥೆ ಮಾಡಿದರು. ಅಲ್ಲಿ ಅತಿ ಛಳಿ ಇರುವದು. ಕೇದಾರನಾಥನ ದೇವಾಲಯದ ಹಿಂದೆಯೇ ಪೂರ್ಣ ಹಿಮಾಚ್ಛಾದಿತ ಪರ್ವತವಿರುವದರಿಂದ ಮೇ ತಿಂಗಳ ಮಧ್ಯಾನ್ಹದಲ್ಲಿಯೂ ಕೂಡ ಮಹಾ ಛಳಿಯಾಗುವದು. ಅಲ್ಲಿಯವರು ಯಾವಾಗಲೂ ಉಂಣೆ ಬಟ್ಟೆಗಳನ್ನೇ ಧರಿಸುತ್ತಾರೆ. ಪೂಜಾರಿಗಳೂ ಕೂಡ ಪೂಜೆ ಮಾಡುವಾಗಲೂ ಮೈತುಂಬ ಉಂಣೆಯ ಬಟ್ಟೆಯನ್ನು ಧರಿಸಿಯೇ ಇರುತ್ತಾರೆ. ಹಾಗು ಯಾರೂ ಬಟ್ಟೆಯನ್ನು ತೆಗೆಯಬಾರದೆಂದು ಆರೋಗ್ಯಖಾತೆಯವರು ಉಪದೇಶ ಮಾಡುತ್ತಾರೆ. ನಾವು ಮಾತ್ರ ರೂಢಿಯಂತೆ ಬಟ್ಟೆ ತೆಗೆದು ಸ್ನಾನ ಪೂಜಾ ಪ್ರಸಾದಗಳನ್ನು ಮಾಡಿದೆವು. ಆದರೆ ಛಳಿಯಿಂದ ಮಾತ್ರ ಬಹು ನಡುಗಿದೆವು.

ಕೇದಾರನಾಥನು ಲಿಂಗಾಕಾರವಾಗಿರದೆ ಒಂದು ದೊಡ್ಡ ಕರೀ ಬಂಡೆಯಂತೆ ಇರುವನು. ಪ್ರದಕ್ಷಿಣೆ ಹಾಕುವಷ್ಟು ಸ್ಥಾನಬಿಟ್ಟು ಗರ್ಭ

ಗುಡಿತುಂಬೆಲ್ಲ ಕೇದಾರನಾಥನೇ ಇರುವನು. ಮುಂದಿನ ಸಭಾಮಂಟ ಪದಲ್ಲಿ ಪಾಂಡವರು ಕೃಷ್ಣ ಷಣ್ಮುಖ ಮಾರುತಿ ವಶಿಷ್ಠ ಆಗಸ್ತ್ಯ ಪರು ಶುರಾಮ ಭೈರವ ಮೊದಲಾದವರ ಮೂರ್ತಿಗಳಿರುತ್ತವೆ. ಆದರೆ ವೀರ ಶೈವರ ಪಂಚಾಚಾರ್ಯರಲ್ಲಿ ಒಬ್ಬರಾದಂಥ ಕೇದಾರ ಲಿಂಗೋದ್ಭವ ರೆಂದು ಹೇಳುವ ಏಕೋರಾಮರ ಮೂರ್ತಿಯು ಅಲ್ಲಿ ಇಲ್ಲದಿರುವದು ವಿಚಾರಣೀಯ ವಿಷಯವಾಗಿರುತ್ತದೆ. ಇಷ್ಟೇ ಅಲ್ಲ, ಆ ಭಾಗದಲ್ಲಿ ಏಕೋರಾಮನೆಂಬ ಹೆಸರಿನವರು ಇದ್ದಂತೆ ತೋರಲಿಲ್ಲ. ಆದರೆ ಶಂಕ ರಾಚಾರ್ಯರ ಕುರುಹುಗಳನ್ನು ಮಾತ್ರ ಹೇಳುತ್ತಾರೆ.

ಕೇದಾರನಾಥ, ಗುಪ್ತ ಕಾಶಿಯಲ್ಲಿ ವಿಶ್ವನಾಥ, ಓಖೀ ಮಠದಲ್ಲಿ ಓಂಕಾರೇಶ್ವರ, ತುಂಗನಾಥ ಈ ನಾಲ್ಕು ಮೂರ್ತಿಗಳ ಪೂಜೆಯು ವೀರ ಶೈವರವೆಂದು ಹೇಳುತ್ತಾರೆ. ಆದರೆ ಅಲ್ಲಿ ವೀರಶೈವರ ವಸ್ತಿಯೇ ಇಲ್ಲ. ಇತ್ತಿನವರು ಅಲ್ಲಿ ಪೂಜೆ ಮಾಡುತ್ತಾರೆ. ಅವರು ಅಲ್ಲಿ ವೀರಶೈವ ಅಥವಾ ಲಿಂಗಾಯತರೆಂದು ಹೇಳದೆ ಬ್ರಾಹ್ಮಣರೆಂದು ಹೇಳಿಕೊಳ್ಳುತ್ತಾರೆ. ಅಲ್ಲದೆ ಜನಿವಾರ ಕೂಡ ಹಾಕುತ್ತಾರೆ. ಈಗಿದ್ದ ಪೂಜಾರಿ ಸದಾಶಿವ ಲಿಂಗರು ತಾವು ಹಾಕಿದ ಜನಿವಾರವನ್ನು ನಮಗೆ ತೋರಿಸಿದರು.

ಈ ಲಿಂಗಗಳ ಪೂಜಾ ಮಾಡುತ್ತಿರುವವರಿಗೆ ಓಖೀ ಮಠದಲ್ಲಿರುವ ರಾವಲ್ ಗದ್ದಿಗೆಯು ದೊರೆಯುತ್ತಿದೆ. ಅದರಂತೆ ಈ ಮೊದಲು ಪೂಜೆ ಮಾಡುತ್ತಿರುವ ಜಯಲಿಂಗ ಸ್ವಾಮಿಗಳಿಗೆ ಈಗ ರಾವಲ್ ಗದ್ದಿಗೆಯು ದೊರೆಯುತ್ತಿದ್ದು, ಅವರು ಸಪತ್ನೀಕರೂ ಸಂತಾನವಂತರೂ ಆಗಿದ್ದಾರೆ. ಇವರೇ ನಮ್ಮ ಪಂಚಾಚಾರ್ಯರಲ್ಲಿ ಒಬ್ಬರಾದ ಕೇದಾರ ಪೀಠದವರು. ಇವರೇ ಈವರೆಗೂ ಕೇದಾರನಾಥನ ಉತ್ಪನ್ನ ಹಾಗೂ ಕೇದಾರನಾ ಥನ ಜಹಾಗೀರ ಹಳ್ಳಿಗಳ ಉತ್ಪನ್ನವನ್ನು ಉಪಭೋಗಿಸುತ್ತಿದ್ದರು. ಆದರೆ ಈ ವರ್ಷದಿಂದ ಸರಕಾರದವರು ಜಯಲಿಂಗ ಸ್ವಾಮಿಗಳ ಒಪ್ಪಿ ಗೆಯಿಂದ ಸರ್ವ ಉತ್ಪನ್ನವನ್ನು ತಮ್ಮ ಸ್ವಾಧೀನ ತೆಗೆದುಕೊಂಡು ಟ್ರಸ್ಟ ಮಾಡಿದ್ದಾರೆ. ಈಗಿನ ರಾವಲ್ ಜಯಲಿಂಗ ಸ್ವಾಮಿಗಳಿಗೆ ತಿಂಗಳಿಗೆ ೧೨೦ ರೂಪಾಯಿ ಸಂಬಳ ಕೊಡುತ್ತಾರೆ, ಈ ಸಂಗತಿಯನ್ನೆಲ್ಲ ಸದಾಶಿವ ಲಿಂಗ ಪೂಜಾರಿಗಳು ನಮಗೆ ತಿಳಿಸಿದ್ದಲ್ಲದೆ ಕೇದಾರ ಪೀಠದ ವ್ಯಾಜ್ಯವು ಇನ್ನೂ ನಡೆದದೆ ಎಂದು ಹೇಳಿದರು.

ನಾನು ನಿಶ್ಚಯ ಮಾಡಿಕೊಂಡು ಹೊರಟಂತೆ ಹಿಮಾಲಯದಲಿ ತೂರ್ಯಾತೀತ ಅವಸ್ಥೆಯಲ್ಲಿರುವ ಶೇಷಧಾರಿಯಲ್ಲಿ ರಾಮಕೃಷ್ಣಯತಿಗಳನ್ನು, ಸತ್ಸಂಗಾಶ್ರಮದಲ್ಲಿಯ ರಾಮಸುಖದಾಸಜಿಯವರನ್ನು, ಸ್ವರ್ಗಾಶ್ರಮದಲ್ಲಿಯ ಜೀವದಯಾಲ ಗೋವಿಂದಜಿಯವರನ್ನು, ಆನಂದ ಕುಟೀರದಲ್ಲಿಯ ಶಿವಾನಂದ ಸರಸ್ವತಿಯವರನ್ನು, ಋಷಿಕುಲದಲ್ಲಿರುವ ತಪಸ್ವಿಗಳನ್ನು, ಗೋರಖಪುರದಲ್ಲಿ ಶಿವಕುಮಾರ ಶಾಸ್ತ್ರಿಗಳನ್ನು, ಮುಂಬೈಯಲ್ಲಿ ಯೋಗಿಕ ಹೆಲ್ಥ ಸೆಂಟರದ ಅಧ್ಯಕ್ಷರಾದ ಭೂಷಣರನ್ನು ಕಂಡು ಅವರ ಕೂಡ ಯೋಗಿಕ ವೇದಾಂತ ವಿಷಯವಾಗಿ ಮಾತನಾಡಿ ಅವರ ಅನುಭವನ್ನು ನಾನು ತಿಳಿದ-ಕೊಂಡು ನನ್ನ ಅನುಭವವನ್ನು ಅವರಿಗೆ ತಿಳಿಸಿ ಕೆಲವರ ಕೂಡ ವಿರುದ್ಧವಾಗಿಯೂ ವಿವಾದ ಮಾಡಿ ಬಂದದ್ದಾಗಿರುವದು.

ಹಿಮಾಲಯ ಕಾಶಿ ಪ್ರಯಾಗರಾಜ ಮೊದಲಾದ ಎಲ್ಲ ಕ್ಷೇತ್ರ ತೀರ್ಥಗಳಲ್ಲಿ ಸತ್ಪುರುಷರಕ್ಕಿಂತ ಮಿಥ್ಯಾಚಾರಿಗಳೇ ವಿಶೇಷವಾಗಿದ್ದಾರೆ. ದುಡ್ಡಿಗಾಗಿಯೇ ದೊಡ್ಡ ಸಾಧುಗಳಂತೆ ನಟನೆ ಮಾಡುವವರು ಅಧಿಕರಾಗಿದ್ದಾರೆ. ದುಡ್ಡು ಕೊಡದಿದ್ದರೆ ಅಡ್ಡತಿಡ್ಡ ಬೈದಾದರೂ ರೊಕ್ಕ ಬಿಡಿಸುವಷ್ಟು ಚಪಲರೂ ಇದ್ದಾರೆ. ಆದರೆ ಯಾತ್ರಿಕರು ಅವರ ಟೀಕೆ ಟಿಪ್ಪಣಿ ಬೆದರಿಕೆಗಳಿಗೆ ಬಗ್ಗದೆ ತಮ್ಮ ಶಕ್ತಿಗನುಸರಿಸಿ ಅವಯವ ಹೀನರಿಗೆ ರೋಗಿಗಳಿಗೆ ಸಹಾಯ ಮಾಡಬೇಕಲ್ಲದೆ, ಅಲ್ಲಿಯ ಪರೋಪಜೀವಿಗಳ ದಾಕ್ಷಿಣ್ಯಕ್ಕೊಳಗಾಗಿ ಇದ್ದ ದುಡ್ಡು ಕಳೆದುಕೊಂಡು, ದೊಡ್ಡ ಸಂಕಟಕ್ಕೀಗಾಗಬಾರದಾಗಿ ಯಾತ್ರಾರ್ಥಿಗಳಿಗೆಲ್ಲ ಆಗ್ರಹದ ಸೂಚನೆ.

ಹಿಮಾಲಯದ ಜನರು ಬಹು ರೂಪವಂತರು. ಕಪ್ಪು ಜನರೇ ಅತ್ತ ಕಾಣುವದಿಲ್ಲ. ವಿನಯಶಾಲಿಗಳೂ ಹಿಂದೀ ಭಾಷೆಯನ್ನಾಡಿದರೂ ಸಂಸ್ಕೃತ ಶಬ್ದಗಳು ಹೆಚ್ಚು ಮಿಶ್ರಮಾಡಿ ಮಾತಾಡುವರು. ಯಾವಾಗಲೂ ಉಣ್ಣೇ ಬಟ್ಟೆಗಳನ್ನೇ ಧರಿಸಿರುವರು. ಹೆಣ್ಣು ಮಕ್ಕಳು ಕಂಬಳಿಗಳನ್ನುಟ್ಟು ಉಣ್ಣೆಯ ಅಂಗಿಗಳನ್ನು ಹಾಕುವರು. ಜನರೆಲ್ಲ ಬಡವರಾಗಿದ್ದು ವಿಶೇಷ ಜನರು ಪರೋಪಜೀವಿಗಳಾಗಿದ್ದಾರೆ. ವೇದದಲ್ಲಿ ಋಷಿಗಳು ಅಗ್ನಿ ಹೋತ್ರಕ್ಕೆ ಮಹತ್ವ ಕೊಟ್ಟಿದ್ದರ ಕಾರಣವೇನಂದರೆ ಅಲ್ಲಿ ಛಳಿ ವಿಶೇಷವಾಗಿರುವದರಿಂದ ಯಾವಾಗಲೂ ಅಗ್ನಿಯ ಅವಶ್ಯಕತೆ ಇರುವದು. ಅದಕ್ಕಾಗಿಯೇ ಅಗ್ನಿಹೋತ್ರಿಯು ಶ್ರೇಷ್ಠವೆಂದು ಹೇಳಿರುವರು.

ಒಟ್ಟಿನ ಮೇಲೆ ಹಿಮಾಲಯದ ಯಾತ್ರೆಯು ಸನ್ಯಾಸಿಗೆ ಹಾಗೂ ಸಂಪತ್ತುಳ್ಳವನಿಗೆ ಮಾತ್ರ ಅನುಕೂಲವು. ಮಧ್ಯಸ್ಥರಿಗೆ ತೊಂದರೆ ಎನಿಸಿದರೂ ಭಾರತೀಯನು ಬದುಕಿರುವಾಗ ಒಮ್ಮೆಯಾದರೂ ಯಾತ್ರೆ ಮಾಡುವದು ಅವಶ್ಯಕವಾದುದು. ಯೋಗ್ಯ ರೀತಿಯ ವ್ಯವಸ್ಥೆಯಿಂದ ಹೊರಟರೆ ಅಷ್ಟೇನು ತೊಂದರೆಯಾಗುವದಿಲ್ಲ. ಆದರೆ ಬಹು ಜನರು ಕೇವಲ ದೇವರ ಮೇಲೆಯೇ ಹೊರೆ ಹಾಕಿ ಊಟ ಉಡಿಗೆಗಳ ಯಾವ ವ್ಯವಸ್ಥೆ ಇಲ್ಲದೆ ಹೊರಟು ಬಹು ಕಷ್ಟಕ್ಕೀಡಾಗುವರಲ್ಲದೆ ಜೀವವನ್ನು ಕೂಡ ಕಳೆದುಕೊಳ್ಳುತ್ತಿರುತ್ತಾರೆ. ಪ್ರಯುಕ್ತ ಮೇಲ್ಕಾಣಿಸಿದ ಎಲ್ಲ ಸಂಗತಿಗಳನ್ನು ಪರ್ಯಾಲೋಚಿಸಿ ಯಾತ್ರಿಕರು ಯಾತ್ರೆ ಮಾಡಬೇಕಾಗಿ ಪುನಃ ಮತ್ತೊಮ್ಮೆ ಸೂಚಿಸಿ ನನ್ನ ಲೇಖವನ್ನು ಪೂರೈಸುತ್ತೇನೆ.

---

## ಬಸವಣ್ಣನವರ ಸಂಸಾರ.

(ಲೇಖಕಃ— ಶ್ರೀಯುತ ಸಿಂಪಿ ಲಿಂಗಣ್ಣ ಹಲಸಂಗಿ)

---

### ಸಂಸಾರವೆಂದರೆ?

ಅರಸನಿರಲಿ, ಆಳು ಇರಲಿ; ಬಡವನಿರಲಿ, ಶ್ರೀಮಂತನಿರಲಿ; ಹೆಂಗಸಿರಲಿ-ಗಂಡಸಿರಲಿ-ಯಾರೇ ಇದ್ದರೂ ಅವರಿಗೆ ತಣಿಯುವದ ಕ್ಕೊಂದು ಸ್ಥಳ; ಒಡಲಿಗಿಷ್ಟು ಅನ್ನ; ಹೊದೆಯಲಿಕ್ಕೆ ಬಟ್ಟೆ ಬೇಕು. ಆಮೇಲೆ ಮನೆಗಾಗಿ ಮನೆಯುವಳು; ಅನ್ನ ಬಟ್ಟೆಗಳಿಗಾಗಿ ಉದ್ಯೋಗ ಬೇಕು. ಮನೆಯುವಳು ಬೇಕೆಂದರೆ ಮಕ್ಕಳಿಗೆ ಸ್ವಾಗತವಿರಬೇಕು. ಹೀಗೆ ಸಂಸಾರವೆಂದರೆ ಉದ್ಯೋಗದಿಂದ ಅರ್ಥ, ಹೆಂಡರು ಮಕ್ಕಳಿಗಾಗಿ ಕಾಮ, ಅವು ಅಂದಗೊಳ್ಳುವುದಕ್ಕೆ ಬುದ್ಧಿಸಂಸ್ಕಾರವೆಂದರೆ ಧರ್ಮ, ಈ ಮೂರನ್ನು ನಡೆಸಿಕೊಂಡು ಹೋಗುವುದಕ್ಕೆ ಮೇಲ್ವಿಚಾರಕನಂತೆ ಮೋಕ್ಷ, ಇವು ಅನಿವಾರ್ಯ. ಇವೆಲ್ಲ ಅನುಕೂಲಿಸಿ ಸಾಧಿಸುತ್ತಿದ್ದರೆ ಮಾತ್ರ ಅವು ಪುರುಷಾರ್ಥಗಳೆನ್ನಿಸಿಕೊಳ್ಳುವವು. ಅವುಗಳನ್ನು ಸಾಧಿಸುವುದೇ ಪೌರುಷವು. ಈ ಪೌರುಷವುಳ್ಳವನನ್ನೇ ಪುರುಷೋತ್ತಮನು ಕೈಕೊಟ್ಟು ಮೇಲಕ್ಕೆತ್ತುತ್ತಾನೆ. ಧರ್ಮಾರ್ಥ ಕಾಮಮೋಕ್ಷಗಳೇ ಮಾರ್ಪಟ್ಟು ಜ್ಞಾನಶಕ್ತಿ ಸಮನ್ವಯ ಸಿದ್ಧಿಗಳಾಗಿ ಪುರುಷೋತ್ತಮನು ಮಾರ್ಗ

ದಲ್ಲಿ ಮುಂದುವರಿಸುವವೆಂದು ಹೇಳಬಹುದು. ಇದೇ ಮಾತನ್ನು "ಮೃತ್ಯುಲೋಕವೆಂಬುದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲ್ಲುವವನು ಅಲ್ಲಿಯೂ ಸಲ್ಲುವನು" ಎಂದು ಶರಣರ ಮಾತಿನಲ್ಲಿ ಹೇಳಬಹುದಾಗಿದೆ. ಇಲ್ಲಿ ಸಲ್ಲುವವನಾಗಬೇಕಾದರೆ ಉಪಜೀವನಾರ್ಥವಾಗಿ ಉದ್ಯೋಗ ಕೈಕೊಂಡಿರಬೇಕು; ಮನೆ ಹಾಗೂ ಮನೆಯುವಳನ್ನು ಕಟ್ಟಿಕೊಂಡಿರಬೇಕು. ಉಪಜೀವನವನ್ನೂ, ಕೌಟುಂಬಿಕ ಜೀವನವನ್ನೂ ನಿಸ್ತರಿಸಿಕೊಂಡು ಹೋಗುವುದಕ್ಕೊಂದು ಧರ್ಮವೂ, ಇವೆಲ್ಲವನ್ನೂ ನೆಲೆಗಾಣಿಸುವ ಮೋಕ್ಷವೂ ಅನಿವಾರ್ಯವೆಂದು ತಿಳಿದಂತಾಯಿತು. ಸಂಸಾರವೆಂದರೆ ಇದೇ!

## ಉಪಜೀವನದ ಆಧಾರ.

ಉಪಜೀವನಾರ್ಥವಾಗಿ ಒಂದು ಉದ್ಯೋಗ ಬೇಕು. ಉದ್ಯೋಗವೆಂದರೆ ಶರೀರವನ್ನು ದಣಿಸುವ ಕೆಲಸ. ಅದು ಕಾಯಕವೆನಿಸುತ್ತದೆ. ಕಾಯಾಪೋಷಣೆಯು ಕಾಯಕಷ್ಟದಿಂದ ಪ್ರಾಪ್ತವಾದ ಅರ್ಥದಿಂದಲೇ ಆಗತಕ್ಕದ್ದು. ಕಾಯಕಗಳಲ್ಲಿ ಹಿರಿದು-ಕಿರಿದೆಂಬ ಭೇದಗಳಿಲ್ಲವೆನ್ನುವುದು-ಶ್ರೇಷ್ಠಪದವಿಯ ಉದ್ಯೋಗ ಕೈಕೊಂಡವನು ಉಳಿದವರನ್ನು ಸಂತಯಿಸುವ ಸಲುವಾಗಿ ನುಡಿಯುವ ಬಣ್ಣದ ಮಾತು ಅಲ್ಲ. "ಕೃಷಿಕೃತ್ಯ ಕಾಯಕದಿಂದಾದೊಡೇನು? ತನು ಮನ ಬಳಲಿಸಿ ತಂದು ದಾಸೋಹವ ಮಾಡುವ ಪರಮಸದ್ಭಕ್ತನ ಪಾದವ ತೋರಯ್ಯ ಎನಗೆ" ಎಂದು ಹಾರಯಿಸಿ ಬಸವಣ್ಣನವರು ಯಾವ ಕಾಯಕವೂ ಕೀಳಲ್ಲವೆಂದೂ, ಅಂಥ ಕಾಯಕದಿಂದ ದಾಸೋಹ ನಡಿಸುವ ಸದ್ಭಕ್ತನು ಪೂಜ್ಯನೆಂದೂ ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. "ದೇವಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ ನಿಮ್ಮಾಣೆ, ನಿಮ್ಮ ಪುರಾತನರಾಣೆ. ತಲೆದಂಡ, ತಲೆದಂಡ, ಕೂಡಲಸಂಗಮದೇವಾ, ಭಕ್ತರಲ್ಲಿ ಕುಲವ ನರಸಿದರೆ ನಿಮ್ಮ ರಾಣಿವಾಸದಾಣೆ." ಎಂದು ಆಣೆ ಮಾಡಿ ಎಲ್ಲ ಕಾಯಕಗಳೂ ಸಮಾನವೆಂದೂ, ನಿಮ್ಮ ಕಾಯಕ ಯಾವುದೆಂದು ಕೇಳಿದರೆ ಸಹ ಆ ಅಭೇದಬುದ್ಧಿಗೆ ಭಂಗಬರುವದೆಂದೂ ಸಾರಿದ್ದಾರೆ.

ಬಸವಣ್ಣನವರು ವಹಿಸಿಕೊಂಡ ಅಮಾತ್ಯಕಾಯಕವು ಗೌರವದ ಉದ್ಯೋಗವೋ ಮತಪ್ರಚಾರಕ್ಕಾಗಿ ಅನುವಾಗುವ ಅಧಿಕಾರಸಂಪಾದನೆಯೋ ಎಂಬ ಸಂಶಯಕ್ಕೆ ಈಡಾಗುವವರುಂಟು. ಆದರೆ ಅವರು

ಕಾಯದ ಕಳವಳಕ್ಕಾಗಿ ಕಾಯಯ್ಯ ಅನ್ನುವವರೂ ಇಲ್ಲ; ಜೀವನೋಪಾಯಕ್ಕಾಗಿ ಈಯಯ್ಯ ಅನ್ನುವವರೂ ಅಲ್ಲ. ಆದ್ದರಿಂದ ಅವರ ಕಾಯಕವು ಬರಿಯ ತಮ್ಮ ಶರೀರ ಪೋಷಣದ ಸಾಧನಮಾತ್ರವಲ್ಲವೆಂದಂತಾಯ್ತು. ಹಾಗಾದರೆ ಅವರು ಹೆಂಡಿರು ಮಕ್ಕಳನ್ನು ಸಲಹುವ ಉಪಾಯವೆಂದು ಕಾಯಕವನ್ನು ಕಟ್ಟಿಕೊಂಡಿದ್ದರೋ? ಹಾಗೂ ಇರಲಿಲ್ಲ. "ಹೊತ್ತಾರೆ ಎದ್ದು, ಕಣ್ಣ ಹೊಸೆವುತ್ತ, ಎನ್ನ ಒಡಲಿಂಗೆ, ಎನ್ನ ಒಡವೆಗೆ, ಎನ್ನ ಮಡದಿಮಕ್ಕಳಿಗೆಂದು ಕುದಿದೆನಾದರೆ, ಎನ್ನ ಮನಕ್ಕೆ ಮನವೇ ಸಾಕ್ಷಿ." ಅಷ್ಟೇ ಏಕೆ— ಮಂತ್ರಿಪದದಲ್ಲಿದ್ದುಕೊಂಡು ನುಡಿಯುವ ಚಾಣಕರಾಯನ ಮಾತುಗಳಿವಲ್ಲ. "ಹೊಲೆಹೊಲೆಯರ ಮನೆಯ ಹೊಕ್ಕಾದರೆಯೂ ಸಲೆ ಕೈಕೂಲಿಯ ಮಾಡಿದರೆಯೂ .....ಎನ್ನೊಡಲವಸರಕ್ಕೆ ಕುದಿದೆನಾದರೆ ತಲೆದಂಡ" ಎಂದು ಕೂಡಲಸಂಗಮದೇವ ಸಾಕ್ಷಿಯಾಗಿ ನುಡಿದಿದ್ದಾರೆ. ಹಾಗಾದರೆ ಈ ದುಡಿಮೆ ಏಕೆ? ಗಳಿಕೆ ಏಕೆ? ''ನಾನು ಆರಂಬ ಮಾಡುವೆನಯ್ಯ ಗುರುಪೂಜೆಗೆಂದು. ನಾನು ಬೆವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು. ನಾನು ಪರಸೇವೆಯ ಮಾಡುವೆನಯ್ಯ ಜಂಗಮ ದಾಸೋಹಕ್ಕೆಂದು. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದು ಕ್ರಿಯೆ ಮಾಡೆನು. ನಿಮ್ಮ ಸೊಮ್ಮು ನಿಮಗೆ ಸಲಿಸುವೆನು. ನಿಮ್ಮ ನಿಲವಿಂಗೆ ಕುದಿವೆನು" ಎಂದು ಕೂಡಲಸಂಗಮದೇವನಿಗೆ ಮಾತುಕೊಟ್ಟಿದ್ದಾರೆ.

ಧಾರ್ಮಿಕ ಕ್ರಿಯೆಗಳಾದ ಲಿಂಗಪೂಜೆ, ಗುರುದರ್ಶನ ಇವು ಸಹ ಕಾಯಕದ ಹಿರಿಮೆಗೆ ಸರಿಗಟ್ಟಲಾರವೆಂದೇ ಅವರ ಮತ. "ಕಾಯಕದಲ್ಲಿ ನಿರತನಾದರೆ ಲಿಂಗಪೂಜೆಯನಾದರೂ ಮರೆಯಬೇಕು; ಗುರುದರ್ಶನವಾದರೂ ತೊರೆಯಬೇಕು" ಎನ್ನುವ ನೀತಿಯು ಅವರಿಗೆ ಶಿರಸಾಮಾನ್ಯವೇ ಸರಿ. ಲಿಂಗಪೂಜೆಯನ್ನು ಮರೆದು, ಗುರುದರ್ಶನವನ್ನು ತೊರೆದು ಕಾಯಕಮಾಡಿ ಬಂಗಾರದ ಮನೆ ಕಟ್ಟಿಸಿದರೇ? ತಿಂಗಳೊಂದದಕ್ಕೆ ಸಾವಿರ ಹೊನ್ನು ಗಳಿಸಿದರೂ ಅದೆಲ್ಲ ಜಂಗಮದಾಸೋಹಕ್ಕಾಗಿಯೇ ವಿನಿಯೋಗವಾಗಬೇಕಾಗಿರುತ್ತದೆ. "ತನುವ ಬೇಡಿದರೀವೆ; ಮನವ ಬೇಡಿದರೀವೆ; ಧನವ ಬೇಡಿದರೀವೆ. ಬೇಡು ಬೇಡೆಲೆ ಹಂದೆ. ಕಣ್ಣ ಬೇಡಿದಡೀವೆ; ತಲೆಯ ಬೇಡಿದಡೀವೆ. ಕೂಡಲ ಸಂಗಮದೇವಾ ನಿಮಗಿತ್ತು ಶುದ್ಧನಾಗಿಪ್ಪೆ" ಎಂದು ಬೇಡುಗರನ್ನು ಆಹ್ವಾನಿಸಿದ್ದಾರೆ. ಬೇಡುವವನು ಯಾವ ರೂಪದಲ್ಲಿ ಬಂದರೂ ಅವನು ಕೂಡಲ ಸಂಗನೇ

ಎಂದು ಸಂಗನಬಸವನು ತಿಳಿಯಬಲ್ಲವನಾಗಿದ್ದರೆ ಆಶ್ಚರ್ಯವೇನು ? ಕಳ್ಳನು ಕದಿಯಲು ಬಂದರೂ ಕೂಡಲಸಂಗನು ನಡೆಯಿಸಿದ ಕಾಯಕವೆಂದೇ ಗುರುತಿಸುವ ಕಣ್ಣು ಬಸವಣ್ಣನ ಭಕ್ತ ಹೃದಯಕ್ಕಿತ್ತು, ಕದಿಯಬಂದವನು ಕೂಡಲಸಂಗನೆಂದೂ, ಕದಿಯುವುದು ಅವನ ಕಾಯಕವೆಂದೂ ತಿಳಿದಷ್ಟಕ್ಕೆ ಮುಗಿಯಲಿಲ್ಲ; ತನ್ನೊಡವೆಯನ್ನು ತಾನೊಯ್ಯಲು ಬಂದಿದ್ದಾನೆಂದು ಭಾವಿಸಿದವನು ಬಂದವನು ಕಳ್ಳನೆನ್ನುವುದಾದರೆ—ಅವನು ಕಳ್ಳನಲ್ಲ; ಬಲುಗಳ್ಳ; ತಾನು ಕಳ್ಳನೆಂದು ಉದ್ಘೋಷಿಸಿದ್ದಾನೆ. ಕದಿಯಬಂದ ಕಳ್ಳನು ಆಭರಣಗಳನ್ನು ಅಪಹರಿಸುವುದಕ್ಕೆಂದು ನೀಲಾಂಬಿಕೆಯ ಕೊರಳಿಗೆ ಕೈಹಾಕಿದಾಗ ಆಕೆ ನಿದ್ದೆಗಣ್ಣಿನಲ್ಲಿ ಅಸವಿಸಿಕೊಂಡಿದ್ದರಿಂದ ಪತಿಗೆ ಎಚ್ಚರಿಕೆಯಾಯ್ತು; ತನಗೆ ಕೈತಗುಲದಂತೆ ಬಂದವನಿಗೂ ಕೈತಗುಲಿ ನೋವಾಗಿರಬೇಕೆಂದು ಭಾವಿಸಿ— "ಒಡನಿರ್ದ ಸತಿಯೆಂದು ನೆಚ್ಚಿರ್ದೆನಯ್ಯಾ. ಕೈವಿಡಿದ ಸಜ್ಜನೆಯೆಂದು ನಂಬಿರ್ದೆನಯ್ಯ. ಆಯ್ಯೋ, ನಮ್ಮಯ್ಯನ ಕೈನೊಂದಿತು. ತೆಗೆದುಕೊಡಾ ಎಲೆ ಚಂಡಾಲಗಿತ್ತಿ. ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದರೆ ಕೂಡಲಸಂಗಮದೇವನಲ್ಲದೆ ಮತ್ತಾರೂ ಅಲ್ಲ" ಎಂದು ಹೇಳಿ ಆ ಆಭರಣಗಳನ್ನೆಲ್ಲ ತೆಗೆಸಿಕೊಟ್ಟರು.

ಇನ್ನೊಂದು ಪ್ರಸಂಗದಲ್ಲಿ ಪುಂಡರು ತುಡುಕಿ ಎಳೆಗಂದಿಗಳಾದ ಹಸುಗಳನ್ನು ಅಟ್ಟಿಕೊಂಡು ಹೋದಾಗ-"ಅಲ್ಲಿಯುಂಬುವನೂ ಸಂಗನೇ. ಇಲ್ಲಿ ಉಂಬುವನೂ ಸಂಗನೇ" ಎಂದು ಭಾವಿಸಿ ಕರುಗಳನ್ನೊಯ್ದು ಆಕಳುಗಳ ಬಳಿಯಲ್ಲಿ ಬಿಟ್ಟುಬರಲು ಹೇಳುತ್ತಾರೆ. ಹೀಗೆ ಗಳಿಸುವುದರಲ್ಲಿ ದಿವ್ಯಭಾವನೆ ತಳೆದರೆ ಸಾಕಾಗದೆಂದು ಅದನ್ನು ವ್ಯಯಗೊಳಿಸುವುದರಲ್ಲಿಯೂ ದಿವ್ಯಭಾವನೆ ತಳೆಯುತ್ತಿದ್ದರೆಂದು ಕಂಡುಬರುತ್ತದೆ. ಅವರು ಕಾಯಕವೆಂದು ತಾವಾಗಿಯೇ ಆರಿಸಿಕೊಂಡಿದ್ದರೆ, ಕೃಷಿ-ಕೈಕೂಲಿಗಳನ್ನು ಸಹ ಆರಿಸಿಕೊಳ್ಳಬಹುದಾಗಿತ್ತು. ಆದರೆ ಅವರ ಉಪಾಸ್ಯದೇವತೆಯಾದ ಕೂಡಲಸಂಗಮದೇವರ ಅಂತರ್ನಿರ್ದೇಶದಿಂದ ವಹಿಸಿಕೊಳ್ಳಬೇಕಾಗಿ ಬಂದುದರಿಂದ ಮಂತ್ರಿಕಾಯಕವನ್ನು ಅನಿವಾರ್ಯವಾಗಿ ಮಾಡುತ್ತಿದ್ದರು.

## ಮನೆ-ಮನೆಯವಳು.

ಮನೆ ಅಚ್ಚುಕಟ್ಟಾಗುವುದಕ್ಕೆ ಮೊದಲು ಮನ ಅಚ್ಚುಕಟ್ಟಾಗಿರಬೇಕಾಗುತ್ತದೆ; ಮನೆ ಹಸನಾಗುವುದಕ್ಕೆ ಮನ ಹಸನಾಗಿರಬೇಕಾಗಿ

ರುತ್ತದೆ. ಮನೆಯ ಅಧಿದೇವತೆ ಗಂಡುಸಲ್ಲ; ಹೆಂಗಸು. ಗಂಡನಲ್ಲ ಹೆಂಡತಿ. ಮನೆಗೆ ಒಡತಿ ಮನೆಯುವಳು. ಅವಳೇ ಗೃಹಕ್ಕೆ ಲಕ್ಷ್ಮೀ; ಗೃಹ ಲಕ್ಷ್ಮಿ! ಗೃಹಲಕ್ಷ್ಮಿಯು ಬಡವೆಯಾಗಿರಬಹುದಾದರೂ ಮನೆಗೆ ಒಡತಿ ಆಕೆಯೇ. "ಮನೆ ನೋಡಾ ಬಡವರದು; ಮನ ನೋಡಾ ದಿವ್ಯ" ಮನವು ದಿವ್ಯವಾಗಿದ್ದರೆ ಮನೆ ದರಿದ್ರವಾಗಿರಲಾರದು; ಮನೆಯೂ ದಿವ್ಯವೇ ಆಗಿರುತ್ತದೆ. ಸಂಶಯವಿಲ್ಲ. ಮನೆಯು ಮನೆಯುವಳಿಂದ ದಿವ್ಯಗೊಳ್ಳುತ್ತದೆ; ಮನೆಯುವಳ ಸತ್ ಗುಣವು ಮನದ ದಿವ್ಯತೆಯಿಂದ ಪ್ರಾಪ್ತವಾಗುತ್ತದೆ. ಮನಕ್ಕೆ ಸಂಸ್ಕಾರವಾಗುವುದು ಪುರುಷನಿಂದ, ಪತಿಯಿಂದ. ಬಸವಣ್ಣನವರು ಸತಿಗೆ ಪತಿ, ಪ್ರಜೆಗಳಿಗೆ ಮಂತ್ರಿ, ಶರಣವೃಂದಕ್ಕೆ ಶ್ರೇಷ್ಠ ಎನಿಸಿದ್ದರೂ ಅವರು ಕೂಡಲಸಂಗನಿಗೆ ಶಿಶುವಾಗಿದ್ದರು. ಅಂತೆಯೇ ಅವರು ಸಂಗನಬಸವನೆಂದು ಹೇಳಿಕೊಳ್ಳುತ್ತಿದ್ದರು. ಹಾಗೆ ಹೇಳಿಕೊಳ್ಳುವುದರಲ್ಲಿ ಅವರಿಗೆ ಅತಿಶಯವಾದ ಅಭಿಮಾನವೆನಿಸುತ್ತಿತ್ತು. "ಇವನಾರಿವನಾರಿವನಾರೆಂದೆನಿಸದಿರಯ್ಯ; ಇವ ನಮ್ಮವ, ಇವ ನಮ್ಮವ ಎಂದೆನಿಸಯ್ಯ." ಎಂದು ಅವರು ಅಭೀಪ್ಸೆ ಪಡುತ್ತಿದ್ದರು. ಆ ಅಭೀಪ್ಸೆಯು ಸಾರ್ಥಕವೂ ಆಗಿತ್ತೆನ್ನುವಂತಿದೆ. ಪರಮಾತ್ಮನ ಶಿಶುವೆಂದರೆ ಜನಸಾಮಾನ್ಯಕ್ಕೆ ತಂದೆಯೇ ಸರಿ. ಮಗು ಮಾನವನ ತಂದೆಯೆನ್ನುವ ಮಹಾವಾಕ್ಯದ ಅರ್ಥವಿಲ್ಲಿ ಸ್ಪಷ್ಟವಾಗಿ ಗೋಚರಿಸುವಂತಿದೆ. ಲೌಕಿಕ ಸಂಪತ್ತಿನಂತೆ ಆಧ್ಯಾತ್ಮಿಕ ಸಂಪತ್ತನ್ನೂ ಕೊಡಕೊಳ್ಳಲು ಬರುವಂಥ ವಸ್ತುವೆಂಬ ಮಾತು ಕೇಳಿ ಬಹಳ ದಿನ ಆಗಿದೆ. ಗಂಡನು ಗಳಿಸಿ ತಂದ ಲೌಕಿಕ ಸಂಪತ್ತಿನಲ್ಲಿ ಜೀವನದ ಜೊತೆಗಾರ್ತಿಯೆನಿಸುವ ಅರ್ಧಾಂಗಿಯಾದ ಸತಿಯು ಪಾಲುಗಾರ್ತಿಯಾಗುವಂತೆ, ಆತ್ಮಸಂಪತ್ತಿಗೂ ಸತಿಯು ಪಾಲುಗಾರ್ತಿಯೆನ್ನುವುದಕ್ಕೆ ವಿಪುಲವಾದ ಉದಾಹರಣೆಗಳನ್ನು ನಾವು ಗಮನಿಸಬೇಕಾಗುತ್ತದೆ. ಭೃತ್ಯನು ತನ್ನನ್ನು ಸೇವಿಸುವಂತೆ ಭೂಪತಿಯು ಜಗದೀಶ್ವರನ ತೊತ್ತಿನ ತೊತ್ತಿನ ಮರಿದೊತ್ತಾದರೆ, ಮುಂಡೆ ಬೋಳಿಸಿದ ಗಂಡುದೊತ್ತಾದರೆ, ವೈರಿಗಳಾದ ಅರಸರು ಸಹ ಬಂದು ತಲೆವಾಗುತ್ತಿರುವಾಗ ಉಳಿದ ಜನರು ಎಷ್ಟರವರು? ಅಂಥವನಿಗೆ ಹೆಂಡತಿ ಸಹಧರ್ಮಿಣಿ ಆಗಲಾರಳೇ? ಮನೆ ಕೈಲಾಸವಾಗಲಾರದೇ? ಮನೆ ಬಳಗ ಶಿವನ ಸಭೆ ಆಗಲಾರದೇ?

(ಮುಂದುವರಿಯುವದು.)

---

# ವೆಲ್ಲಗೊಂಡದ ಮಹಾದೇವಯ್ಯ.

ಆಂಧ್ರದೇಶದಲ್ಲಿ ವೆಲ್ಲಗೊಂಡವೆಂಬ ಗ್ರಾಮವಿದೆ. ಅದು ಈಗ ನೆಲ್ಲೂರು ಜಿಲ್ಲೆಯಲ್ಲಿದ್ದು ಅದಕ್ಕೆ 'ವೆಲಿಗಂಡ್ಲ' ಎಂಬ ಹೆಸರಿದೆ. ಹಿಂದಿನ ಕಾಲದಲ್ಲಿ ಈ ಭಾಗದಲ್ಲಿ ಅನೇಕ ಶಿವಶರಣರು ಆಗಿ ಹೋಗಿದ್ದಾರೆ. ತಂಗಟೂರು ಮಾರಯ್ಯನ ಚರಿತ್ರೆಯನ್ನು ನಾವು ಶಿವಶರಣರ ಚರಿತ್ರೆಗಳು ಭಾಗ ೨ ಇದರಲ್ಲಿ ಬರೆದಿದ್ದು ಅವನಾದರೂ ಇದೇ ಜಿಲ್ಲೆಯವನು. ಈ ಜಿಲ್ಲೆಯಲ್ಲಿರುವ ವೆಲ್ಲಗೊಂಡವೆಂಬ ಪುರದಲ್ಲಿ ಮಹಾದೇವಯ್ಯನೆಂಬ ಶಿವಶರಣನು ವಾಸವಾಗಿದ್ದನು.

ಮಹಾದೇವಯ್ಯನು ಮಲ್ಲಿಕಾರ್ಜುನ ಪಂಡಿತಾರಾಧ್ಯನು ಪಾನುಗಲ್ಲಿನಲ್ಲಿ ಇದ್ದಾನೆಂಬ ವಾರ್ತೆಯನ್ನು ಕೇಳಿ ಅವನಲ್ಲಿಗೆ ಬಂದು ಅವನಿಂದ ದೀಕ್ಷೆಯನ್ನು ಹೊಂದಿ ಅವನ ಸೇವೆಯಲ್ಲಿರಹತ್ತಿದನು.

ಈ ಕಾಲದಲ್ಲಿ ಪಂಡಿತಾರಾಧ್ಯನಲ್ಲಿ ೬೦ ಜನ ಶಿಷ್ಯರು ಅವನ ಸೇವೆಯನ್ನು ಮಾಡುತ್ತಾ ಇದ್ದರು. ಅವರು ಅವನಿಗೆ ಬೇಕಾಗುವ ಪೂಜೋಪಕರಣಗಳನ್ನು ಒದಗಿಸುತ್ತ ಅವನ ಬೋಧೆಯನ್ನು ಕೇಳುತ್ತ ಅವನಲ್ಲಿಯೇ ವಾಸ ಮಾಡುತ್ತಿದ್ದರು. ಈ ಶಿಷ್ಯರಲ್ಲಿ ವೆಲ್ಲಗೊಂಡದ ಮಹಾದೇವಯ್ಯನು ಬಹಳ ವಿದ್ವಾಂಸನೂ ಶಿವಾನುಭವಿಯೂ ಎಂದು ಹೆಸರಾಗಿದ್ದನು.

ಹೀಗಿರಲು ಮಲ್ಲಿಕಾರ್ಜುನ ಪಂಡಿತಾರಾಧ್ಯನ ಸೇವೆಗಳು ವ್ಯವಸ್ಥಿತವಾಗಿ ನಡೆಯುದ್ದರಿಂದ ಪಂಡಿತಾರಾಧ್ಯನು ಒಬ್ಬೊಬ್ಬರು ಇಂಥ ಒಂದೊಂದು ಸೇವೆಯನ್ನು ಮಾಡಬೇಕೆಂದು ಎಲ್ಲರಿಗೂ ಒಪ್ಪಿಸಿಕೊಟ್ಟನು. ಅವರಲ್ಲಿ ವೆಲ್ಲಗೊಂಡದ ಮಹಾದೇವಯ್ಯನು ಸೂರ್ಯೋದಯಕ್ಕೆ ಮುನ್ನವೇ ಎದ್ದು ಪತ್ರಿಪುಷ್ಪಗಳನ್ನು ಎತ್ತಿಕೊಂಡು ಪಂಡಿತಾರಾಧ್ಯನಿಗೆ ಒಪ್ಪಿಸುವ ಕೆಲಸವು ಅವನಿಗೆ ಬಂದಿತು. ಆ ಪ್ರಕಾರ ಮಹಾದೇವಯ್ಯನು ದಿನಾಲು ಈ ಕಾರ್ಯಮಾಡುತ್ತ ಬಂದನು.

ಹೀಗಿರಲು ಒಂದುದಿನ ಅವನಿಗೆ ಏಳಲು ಸ್ವಲ್ಪ ತಡವಾಯಿತು. ಆಗ ಸೂರ್ಯನ ಮುಂಬೆಳಗು ಆಕಾಶದಲ್ಲಿ ಹೆಚ್ಚುತ್ತ ಇದ್ದಿತು. ಅದನ್ನು ಮಹಾದೇವಯ್ಯನು ನೋಡಿ ಅವಸರದಿಂದ ಪುಷ್ಪಗಳಿದ್ದಲ್ಲಿಗೆ

ಹೋಗಿ ಅವುಗಳನ್ನು ಎತ್ತಿ ಮರಳುವಾಗ ತಾನು ಆಯ್ದುಕೊಂಡ ಪುಷ್ಪಕ್ಕೆ ತನ್ನ ಪಾದವು ಅಕಸ್ಮಾತ್ತಾಗಿ ಸೋಂಕಿತು. ಅದು ಮಹಾದೇವಯ್ಯನಿಗೆ ತಿಳಿಯಲು ಆ ಪುಷ್ಪವು ಅವನಿಗೆ ಒಂದು ಉಗ್ರ ಚೇಳು ಹೊಡೆದಂತೆ ಆಯಿತು. ಕಾಲು ಕೆಂಡವನ್ನು ಮುಟ್ಟಿದಂತೆ ಆಗಿ ಅದು ಅವನಿಗೆ ತೀವ್ರ-ವೇದನೆಯನ್ನುಂಟುಮಾಡಿತು. ಆಗ ಅವನು ಕಂದಿ ಕುಂದಿ ಮೂರ್ಛೆಹೋಗಿ ಕೆಲಹೊತ್ತಿನ ಮೇಲೆ ಮೂರ್ಛೆ ತಿಳಿದೆದ್ದು,— ತಾನು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವೇನೆಂಬುದನ್ನು ವಿಚಾರ ಮಾಡಿಕೊಂಡು ಪುಷ್ಪಮುಟ್ಟಿದ ಪಾದವನ್ನು ಕಡಿದುಹಾಕುವದೇ ತನಗೆ ಯೋಗ್ಯ ಶಿಕ್ಷೆ ಎಂದು ತಿಳಿದು ಆ ಪಾದವನ್ನೇ ಅವನು ಕತ್ತರಿಸಿ ಹಾಕಿಬಿಟ್ಟನು!

ಮಹಾದೇವಯ್ಯನು ಹೀಗೆ ಮಾಡಿಕೊಂಡಿದ್ದು ಪಂಡಿತಾರಾಧ್ಯನಿಗೆ ತಿಳಿಯಿತು. ಅವನು ಗಾಬರಿಯಾಗಿ ಕೂಡಲೆ ಶಿಷ್ಯನಿದ್ದಲ್ಲಿಗೆ ಹೋಗಿ ನೋಡಲು ಅಲ್ಲಿ ರಕ್ತದ ಒಂದು ಹನಿಯಾದರೂ ಹೊರಗೆ ಬಿದ್ದಿದ್ದಿಲ್ಲ! ಅದನ್ನು ನೋಡಿ ಪಂಡಿತಾರಾಧ್ಯನು ಚೋದ್ಯಬಡುತ್ತ ಈ ಮಹಾದೇವಯ್ಯನು ನಿಜವಾದ ಶರಣನೆಂದು ತಿಳಿದು ಅಲ್ಲಿ ಕಡಿದುಬಿದ್ದ ಪಾದವನ್ನು ತಂದು ಕಡಿದ ಸ್ಥಳಕ್ಕೆ ಹತ್ತಿಸಿ ಮಜ್ಜನೋದಕವನ್ನು ತಳಿದು ಪಂಚಾಕ್ಷರೀ ಮಂತ್ರಸ್ಮರಣೆಯನ್ನು ಮಾಡಿದನು. ಆಗ ಆ ಪಾದವು ಸಂದಿಲ್ಲದಂತೆ ಕೂಡಲೆ ಸ್ಥಿರವಾಗಿ ಮೊದಲಿನ ಸ್ಥಳಕ್ಕೆ ಹತ್ತಿ ಬಿಟ್ಟಿತು. ಹೀಗಾದ ಕೂಡಲೆ ಮಹಾದೇವಯ್ಯನು ತನ್ನ ಗುರುವಿಗೆ ಎರಗಲು ಭಕ್ತರೆಲ್ಲರೂ ಅವನು ಮಹಾತ್ಮನೆಂದು ಅವನನ್ನು ಅತ್ಯಂತವಾಗಿ ಸ್ತುತಿಸುವವರಾದರು.

---

## ಗುರುಭಕ್ತ.

ಆಂಧ್ರದೇಶದಲ್ಲಿ ಅಮರಗುಂಡವೆಂಬ ಪ್ರಸಿದ್ಧ ಕ್ಷೇತ್ರವಿದೆ. ಅಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಕೆಲವು ಕಾಲ ವಾಸವಾಗಿದ್ದನು. ಅವನು ಇದ್ದಲ್ಲಿ ಯಾವಾಗಲೂ ಬಹುಜನರು ನೆರೆದು ಅವನಿಂದ ಧರ್ಮೋಪದೇಶವನ್ನು ಹೊಂದಿ ಹೋಗುತ್ತಿದ್ದರು. ಹೀಗೆ ಅಮರಗುಂಡದಲ್ಲಿ ಅವನು ಇರುವಾಗ್ಗೆ ಗುರುಭಕ್ತನೆಂಬವನು ಅಲ್ಲಿಗೆ ಬಂದು ದೀಕ್ಷೆಯನ್ನು ಹೊಂದಿ ಅವನ ಸೇವೆಯನ್ನು ಮಾಡುತ್ತಾ ಇದ್ದನು. ಅವನು

ತನ್ನ ಸೇವೆಯಲ್ಲಿ ಗುರುವಿಗೋಸ್ಕರ ಅತ್ಯಂತ ಭಕ್ತಿಯನ್ನು ತಾಳಿದವನಾಗಿ ಅವನ ಆಜ್ಞೆಯನ್ನು ಎಷ್ಟು ಮಾತ್ರವೂ ಮೀರುತ್ತಿರಲಿಲ್ಲ. ಗುರುವಿಲ್ಲದೆ ಮುಕ್ತಿ ಎಂಬುದಿಲ್ಲ, ಗುರುವೇ ಚತುರ್ವಿಧಪದ ಭೋಗವನ್ನು ಕೊಡುವಂಥವನು, ಎಂಬ ಆಗಮವಾಕ್ಯವಿದ್ದು ಅವನು ಅದನ್ನು ಮೀರದೆ ಪಾಲಿಸುವವನಾಗಿದ್ದನು. ಅವನ್ನು ಮಲ್ಲಿಕಾರ್ಜುನ ಪಂಡಿತಾರಾಧ್ಯನು ಅರಿತು ಅವನಿಗೆ ಮಿಗಿಲಾದ ಮನ್ನಣೆಯನ್ನು ಕೊಡುತ್ತ ಬಂದನು.

ಮಲ್ಲಿಕಾರ್ಜುನ ಪಂಡಿತಾರಾಧ್ಯನು ಎಲ್ಲರಿಗಿಂತಲೂ ಹೆಚ್ಚು ಈ ಗುರುಭಕ್ತನನ್ನು ಪ್ರೀತಿಸುತ್ತಾನೆಂದು ಅವನ ಶಿಷ್ಯರಿಗೆ ತಿಳಿಯಿತು. ಅದಕ್ಕೆ ಅವರು ಅವನಿಗೋಸ್ಕರ ಅತ್ಯಂತ ಮಾತ್ಸರ್ಯಬುದ್ಧಿಯನ್ನು ತಾಳಿದವರಾದರು. ಈ ಗುರುಭಕ್ತನು ಎಲ್ಲಿಯೋ ಒಬ್ಬ ಅಧಮನು, ಅವನ ಜಾತಿ ಗೋತ್ರ ಸೂತ್ರಗಳಾವವೂ ತಿಳಿದಿಲ್ಲ, ಇಂಥವನು ಪಂಡಿತಾರಾಧ್ಯನು ಆದರಿಸುತ್ತಾನಲ್ಲಾ, ಎಂದು ಅವನಿಗೋಸ್ಕರ ಅಸಹ್ಯಪಡಹತ್ತಿದರು.

ಇದನ್ನು ಪಂಡಿತಾರಾಧ್ಯನು ತಿಳಿದು, ಗುರುಭಕ್ತನ ಮಹಿಮೆ ಎಷ್ಟಿದೆಂಬುದು ಇವರಿಗೆ ಗೊತ್ತಿಲ್ಲ, ಇದನ್ನು ಇವರಿಗೆ ತೋರಿಸಬೇಕೆಂದು ಇಚ್ಛಿಸಿ ಎಲ್ಲರೂ ಸಮೀಪದಲ್ಲಿ ಕುಳಿತಿರುವಾಗ ಗುರುಭಕ್ತನನ್ನು ಮುಂದೆ ಕರೆದು–ಎಲೋ, ನೀನು ನನ್ನ ಈ ಪಟ್ಟೆಮಂಚವನ್ನೇರಿ ಕುಳಿತುಕೋ ಎಂದು ಹೇಳಿದನು. ಆಗ ಗುರುಭಕ್ತನು ಗುರುವಿಗೆರಗಿ ಪಟ್ಟೆಮಂಚವನ್ನೇರಿ ಕುಳಿತುಕೊಂಡನು. ಆಮೇಲೆ ಸ್ವಲ್ಪ ಹೊತ್ತಿನ ಮೇಲೆ ಪಂಡಿತಾರಾಧ್ಯನು— ಕೆಳಗಿಳಿದು ಬಾ ಎಂದು ಅನ್ನಲು ಅವನು ಹಾಗೆಯೇ ಕೆಳಗಿಳಿದು ಬಂದನು.

ಅವನು ಹೀಗೆ ಮಾಡಿದ್ದನ್ನು ಅಲ್ಲಿದ್ದ ಶಿಷ್ಯರು ನೋಡಿ ಅವರು — ಗುರುವಿನಿದಿರಿನಲ್ಲಿ ಶಿಷ್ಯನು ಎಂದೂ ಮಂಚವನೇರಬಾರದು, ಏರಿ ಕುಳಿತಲ್ಲಿ ಅವನಿಗೆ ನರಕ ಪ್ರಾಪ್ತಿ ಇದೆ, ಎಂಬ ಆಗಮವಾಕ್ಯವಿದೆ. ಆದರೆ ಇವನು ಮಂಚವನ್ನೇರಿದನು, ಇವನು ಮಹಾ ನೀಚನು. ?ವನಲ್ಲಿ ಗುರುಭಕ್ತಿ ಎಂಬುದು ಎಳ್ಳಷ್ಟೂ ಇಲ್ಲ. ಈತನು ಗುರುದ್ರೋಹಿಯು, ಎಂದು ಆರ್ಭಟಿಸುತ್ತ ಅವನ ಮೇಲೇರಿ ಬರಹತ್ತಿದರು.

ಇದನ್ನು ಮಲ್ಲಿಕಾರ್ಜುನ ಪಂಡಿತಾರಾಧ್ಯನು ನೋಡಿ ಅವರಿಗೆ— ಈತನು ಗುರುಭಕ್ತಿ ಹೀನನೆಂದೆನ್ನುತ್ತೀರಿ. ನೀವು ಗುರುಭಕ್ತಿಯುಳ್ಳವರು. ಆದರೆ ನಾನು ಇನ್ನೊಮ್ಮೆ ಪರೀಕ್ಷೆಮಾಡುವೆನು ಎಂದು ನುಡಿದು ಅಲ್ಲಿ ಒಂದು ಶೂಲವನ್ನು ತರಿಸಿ ಅಲ್ಲಿ ನಡಿಸಿ ಶಿಷ್ಯರಿಗೆ ಗುರುವಿನೆದುರು ಉನ್ನತಾಸನ ಗದ್ದುಗೆಯೊಲ್ಲೆವೆಂದೆನ್ನುವಿರಲ್ಲಾ, ಇದರೆ ಈಗ ನಿಮ್ಮಲ್ಲಿ ಯಾರು ಈ ಶೂಲದ ಮೇಲೇರುವಿರಿ, ಎಂದು ಕೇಳಲು ಅವರು ಗಾಬರಿ ಯಾಗಿ ಒಬ್ಬೊಬ್ಬರ ಮುಖವನ್ನು ನೋಡುತ್ತ—ನಾನು ಒಲ್ಲೆ, ನೀನು ಒಲ್ಲೆ ಎಂದು ನುಡಿಯುಹತ್ತಿದರು. ಆಗ ಅವರು—ಮುನ್ನ ಗುರುಗ ದ್ದುಗೆಯನ್ನೇರಿದವನೇ ಏರಲಿ, ಎಂದು ಅಂದರು. ಅವರು ಹೀಗಂದುದಕ್ಕೆ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಗುರುಭಕ್ತನನ್ನು ಮುಂದೆ ಕರೆದು— ಇದರ ಮೇಲೇರು ಎಂದು ಹೇಳಲು ಅವನು ತತ್‌ಕ್ಷಣವೇ ಹಾಗೆಯೇ ಏರಲಾಗಿ ಶೂಲದ ಮೊನೆಯು ಅವನ ತಲೆಯಲ್ಲಿ ಮೂಡಿ ಹೊರಬಿ ದ್ದಿತು. ಅದನ್ನು ಎಲ್ಲ ಶಿಷ್ಯರೂ ನೋಡಿ ಚಕಿತರಾಗಿ ಅವನನ್ನು ಕೀರ್ತಿ ಸಹತ್ತಿದರು. ಆ ಮೇಲೆ ಪಂಡಿತಾರಾಧ್ಯನು ಗುರುಭಕ್ತನಿಗೆ— ಇನ್ನು ಮೇಲೆ ಕೆಳಗಿಳಿದು ಬಾ, ಎಂದು ಅನ್ನಲು, ಅವನು ಹಾಗೆಯೇ ಕೆಳ ಗಿಳಿದು ಗುರುವಿಗೆ ವಂದಿಸಿ ನಿಲ್ಲಲು ಅವನ ಶರೀರದಲ್ಲಿ ರಕ್ತವು ಅಣು ಮಾತ್ರವೂ ಹೊರಬಿದ್ದಿದ್ದಿಲ್ಲ. ಅಲ್ಲಿ ನೆರೆದಿದ್ದ ಶರಣಾಳಿ ಇದನ್ನು ನೋಡಿ- ಭಾಪು, ಭಾಪು, ಎಂದು ಅವನನ್ನು ಸ್ತುತಿಸುವವರಾದರು. ಶಿವನು ಆಗ ಮೆಚ್ಚಿ ಪ್ರತ್ಯಕ್ಷನಾಗಿ ಗುರುಭಕ್ತನಿಗೆ— ನೀನು ಕೈಲಾಸಕ್ಕೆ ಬಾ ಎಂದೆನ್ನಲು ಅವನು— ನಾನು ನನ್ನ ಗುರುಸ್ವಾಮಿಯನ್ನು ಬಿಟ್ಟು ಬರಲಾರೆನು. ಗುರುವಿದ್ದುದೇ ಕೈಲಾಸವೆಂದು ಉತ್ತರ ಕೊಟ್ಟನು.

ಈಪ್ರಕಾರ ಗುರುಭಕ್ತನು ತನ್ನ ಗುರುವಿನ ಶುಶ್ರೂಷೆಯನ್ನು ಏಕ ನಿಷ್ಠೆಯಿಂದ ಮಾಡುತ್ತ ಬರಲು, ಮತ್ತೊಂದು ದಿನ ಬೇರೊಂದು ಘಟನೆ ಯುಂಟಾಯಿತು. ಗುರುವಿನ ಶರೀರಮಾತ್ರವಲ್ಲದೆ ಗುರುವಿಗೆ ಸಂಬಂ ಧಿಸಿದ ಜೀನಸುಗಳು, ಅಂದರೆ ಆತನ ಹೊದಿಕೆಗಳು, ವಸ್ತ್ರ, ಅರಿವೆ ಮೊದಲಾದವುಗಳು ಸಹ ಪವಿತ್ರವಾದವುಗಳೆಂಬ ಭಾವನೆಯು ಅವ ನಲ್ಲಿ ದಿನೇ ದಿನೇ ಬಲಿಯುಹತ್ತಿತು. ಅವುಗಳನ್ನು ಸಹ ಅವನು ಆದ ರಿಸಿ ಅವುಗಳಿಗೆ ಮನ್ನಣೆ ಕೊಡುವವನಾದನು. ಹಿಂದೂ ಸಂಸ್ಕೃತಿಗೆ

ಇದು ಹೊರತಾದುದಲ್ಲ. ಇದಕ್ಕೋಸ್ಕರವೇ ಅವರು ತಮ್ಮ ಸ್ವಾಮಿಗಳ ಪಾದುಕೆಗಳನ್ನೂ ಹಿಡಿಯುವ ಚಿತ್ರ ಮೊದಲಾದವುಗಳನ್ನೂ ಬೇರೆ ತೆಗೆದಿಟ್ಟು ಅವುಗಳನ್ನು ಪೂಜಿಸುವದು ಕಂಡುಬರುತ್ತದೆ.

ಹೀಗಿರಲು ಒಂದು ದಿವಸ ಗುರುಭಕ್ತನು ಗುರುವಿನ ಗೃಹದಿಂದ ಹೊರಗೆ ಹೋಗುತ್ತಿರುವಾಗ ಗುರುವಿನ ಪಾದರಕ್ಷೆಗಳ ಮೇಲೆ ಅವನ ಪಾದವು ಅಕಸ್ಮಾತ್ತಾಗಿ ಬಿದ್ದಿತು. ಇದು ಅವನಿಗೆ ತಿಳಿದಕೂಡಲೆ ತಾನು ಬಹು ದೊಡ್ಡ ಪಾಪವನ್ನು ಮಾಡಿದೆನೆಂದು ಅವನಿಗೆ ಎನಿಸಿತು. ಈ ಪ್ರಮಾದವು ತನ್ನ ಕಾಲಿನ ಮೂಲಕ ಆದುದೆಂದು ಅವನಿಗೆ ತಿಳಿದು ಇಂಥ ಕಾಲು ಇರಬಾರದೆಂದು ಅವನು ಅದನ್ನು ಖಂಡಿಸಿ ದೂರ ಬಿಸಾಟಿಬಿಟ್ಟನು. ಆದರೆ ಆ ಪಾದದಿಂದ ಒಂದು ಹನಿ ರಕ್ತವಾದರೂ ಹೊರಬೀಳಲಿಲ್ಲ. ಈ ಸಂಗತಿಯು ಪಂಡಿತಾರಾಧ್ಯನಿಗೆ ತಿಳಿಯಿತು. ಅವನು ಕೂಡಲೆ ತನ್ನ ಶಿಷ್ಯನಿದ್ದಲ್ಲಿಗೆ ಬಂದು ಬಿಸಾಟಿ ಬಿದ್ದ ಪಾದವನ್ನು ತಂದು ಅದನ್ನು ಅವನ ಕಾಲಿಗೆ ಹಚ್ಚಲಾಗಿ ಅದು ಅದರೊಡನೆ ಏಕರೂಪವಾಯಿತು. ಇದನ್ನು ಇತರ ಭಕ್ತರು ನೋಡಿ ಈ ಗುರುಭಕ್ತನು ಮಹಾಮಹಿಮನು ಎಂದು ಅವನಿಗೋಸ್ಕರ ಅತ್ಯಂತ ಆದರಭಾವವನ್ನು ತಾಳುವವರಾದರು.

ಈಪ್ರಕಾರ ಗುರುಭಕ್ತನು ತನ್ನ ಗುರುವಿನ ಶುಶ್ರೂಷೆಯನ್ನು ಮಾಡುತ್ತ ಗುರುಭಕ್ತಿಭಾವನೆಯಿಂದ ಕೂಡಿಕೊಂಡವನಾಗಿ ಕಡೆಗೆ ತನ್ನ ಇಷ್ಟಲಿಂಗವಾದ ಗೌರೀಶ್ವರನನ್ನು ಅರ್ಚಿಸುತ್ತ ತನ್ನ ಗುರುವಿನಲ್ಲಿಯೇ ಲಯವಾದನು.

---

# ಮಲ್ಲಿಕಾರ್ಜುನ ಪಂಡಿತಾರಾಧ್ಯ.

ಮಲ್ಲಿಕಾರ್ಜುನ ಪಂಡಿತಾರಾಧ್ಯನು ಪಂಚಪೀಠಾಧಿಪತಿಯೂ ಶ್ರೀಶೈಲಸಿಂಹಾಸನ ಸ್ಥಾಪಕನೂ ಆಗಿರುವನೆಂದು ಬಹುಜನರ ತಿಳಿವಳಿಕೆ ಇದೆ. ವೀರಶೈವ ಗ್ರಂಥಗಳಲ್ಲಿ ದೊರೆಯುವ ಅವನ ಚರಿತ್ರೆಯು ಕೆಳಗಿನಂತೆ ಇದೆ.

ಈಗ ಮದ್ರಾಸ ಇಲಾಖೆಯಲ್ಲಿರುವ ಕಾಕಿನಾಡ ಜಿಲ್ಲೆಯಲ್ಲಿ ದ್ರಾಕ್ಷಾರಾಮವೆಂಬ ಪ್ರಸಿದ್ಧ ಕ್ಷೇತ್ರವಿರುತ್ತದೆ. ಅದು ಗೋದಾವರೀ ನದೀ ಮುಖದ್ವಾರ ಪ್ರದೇಶದಲ್ಲಿರುತ್ತದೆ. ಅದು ಬಹು ರಮಣೀಯ ಪ್ರದೇಶವು. ಇಲ್ಲಿ ಗೋದಾವರೀ ನದಿಯು ಏಳು ಶಾಖೆಗಳಾಗಿ ಹರಿಯುತ್ತ ಸಮುದ್ರದಲ್ಲಿ ಕೂಡಿರುವದರಿಂದ ಅದಕ್ಕೆ ಇಲ್ಲಿ 'ಸಪ್ತಗೋದಾವರೀ' ಎಂಬ ಹೆಸರಿದೆ. ಈ ಪ್ರದೇಶವೆಲ್ಲ ವೃಕ್ಷಗಳಿಂದಾಚ್ಛಾದಿತವಾಗಿ ಬಹು ಸುಂದರವಾಗಿ ಕಂಗೊಳಿಸುತ್ತದೆ. ದ್ರಾಕ್ಷಾರಾಮ ದೇವಸ್ಥಾನವು ಬಹು ಪುರಾತನ ಕಾಲದ್ದಿದೆ. ಇಲ್ಲಿ ಭೀಮೇಶ್ವರಲಿಂಗವು ನೆಲಸಿದೆ. ಇದು ಹಿಂದುಸ್ಥಾನದ ಎಲ್ಲ ಲಿಂಗಗಳಲ್ಲಿ ಅತ್ಯಂತ ಅದ್ಭುತವಾದದ್ದು. ಅದು ೬೦ ಅಡಿ ಎತ್ತರವಾಗಿದ್ದು ಅದನ್ನು ಪ್ರೇಕ್ಷಕರು ನೋಡಿದ ಕೂಡಲೆ ಅವರನ್ನು ಬೆರಗುಗೊಳಿಸುವಂತಹದಿರುತ್ತದೆ.

ಅದು ಬಸವೇಶ್ವರನ ಕಾಲ, ಅಂದರೆ ೧೨ ನೇ ಶತಮಾನವು. ಆಗ ಈ ದೇವಾಲಯದ ಪೌರೋಹಿತ್ಯವನ್ನು ಭೀಮನ ಪಂಡಿತನೆಂಬುವನು ಮಾಡುತ್ತಿದ್ದನು. [೧] ಅವನ ಹೆಂಡತಿಯು ಹೆಸರು ಗೌರಾಂಬಿಕೆ. ಇವರಿಗೆ ಮಕ್ಕಳಿರಲಿಲ್ಲ. ಆದ್ದರಿಂದ ಅವರು ಪುತ್ರಾಪೇಕ್ಷಿಗಳಾಗಿ ಶ್ರೀಶೈಲ ಮಲ್ಲಿಕಾರ್ಜುನನ ಸೇವೆಯಲ್ಲಿರುತ್ತಿದ್ದರು. ಈ ಮಲ್ಲಿಕಾರ್ಜುನನೇ ಭೀಮನ ಪಂಡಿತನಿಗೆ ಕುಲದೈವತವಾಗಿತ್ತು. ಹೀಗಿರಲು ಕೆಲವು ದಿವಸಗಳಾದಮೇಲೆ ಈಶ ಸಂಕಲ್ಪದ ಮೇರೆಗೆ ಅವರಿಗೆ ಒಬ್ಬ ಮಗನು ಜನಿಸಿದನು. ಅವನು ಶ್ರೀ ಶೈಲ ಮಲ್ಲಿಕಾರ್ಜುನನನ್ನು ಸೇವಿಸಿದ್ದರ ಫಲವಾಗಿ ಜನಿಸಿದವನೆಂದು ತಿಳಿದು, ತಾಯಿ ತಂದೆಗಳು ಅವನಿಗೆ ಮಲ್ಲಿಕಾರ್ಜುನನೆಂಬ ಹೆಸರಿಟ್ಟರು.

---

(೧) ಕೆಲವು ಗ್ರಂಥಗಳಲ್ಲಿ ದ್ರಾಕ್ಷಾರಾಮದ ಬದಲು ವರಾಳಪುರ ಅಥವಾ ವರಲಾಪುರ ಎಂಬ ಹೆಸರಿದೆ.

ಭೀಮನ ಪಂಡಿತನು ತನ್ನ ಹೆಸರಿಗೆ ಅನ್ವರ್ಥಕವಾಗಿ ವೇದಶಾಸ್ತ್ರ ಪುರಾಣಗಳನ್ನು ಬಲ್ಲವನಾಗಿ ಅತ್ಯಂತ ಪಾಂಡಿತ್ಯವನ್ನು ಹೊಂದಿದ್ದನು. ಅವನ ಮಗನಾದ ಮಲ್ಲಿಕಾರ್ಜುನನಾದರೂ ಕುಶಲಮತಿಯಾಗಿದ್ದರಿಂದ ಅವನಿಗೆ ಬ್ರಾಹ್ಮಣರಿಗೆ ಉಚಿತವಾದ ವೇದಾಧ್ಯಯನ ಮೊದಲಾದವುಗ ಳನ್ನು ತಂದೆಯು ಚನ್ನಾಗಿ ಮಾಡಿಸಿದನು. ಮಲ್ಲಿಕಾರ್ಜುನನು ಸ್ವಲ್ಪ ದಿವಸಗಳಲ್ಲಿಯೇ ಅವುಗಳಲ್ಲಿ ಪಾರಂಗತನಾದನು.

ಆದರೆ ಈ ಕಾಲದಲ್ಲಿ ಹೊಸ ಧಾರ್ಮಿಕ ವಾತಾವರಣವು ಈ ನಾಡಿನಲ್ಲಿ ಉಂಟಾಗಿತ್ತು. ಕೃಷ್ಣೆಯ ದಂಡೆಯ ಮೇಲೆ ಇರುವ ವಿಜಯ ವಾಟಿಕಾ ಎಂದರೆ ಈಗಿನ ಬೆಜವಾಡದಲ್ಲಿ ಶ್ರೀಪತಿ ಪಂಡಿತಾರಾಧ್ಯನು ಈ ಮೊದಲು ಜನಿಸಿ ಈ ನಾಡಿನಲ್ಲೆಲ್ಲ ವೀರಶೈವ ತತ್ವ ಪ್ರಸಾರಕಾರ್ಯ ಗಳನ್ನು ನಡಿಸಿದ್ದನು. ಇದರಿಂದ ಇಲ್ಲಿ ವಿದ್ವಾಂಸರಾದ ಬಹು ಜನರು ಉಂಟಾಗಿದ್ದರು. ದ್ರಾಕ್ಷಾರಾಮ ಕ್ಷೇತ್ರದ ಸಮೀಪದಲ್ಲಿ ಕೋಟಿಪಲ್ಲಿ ಎಂಬ ಪುಣ್ಯಸ್ಥಳವು ಇದ್ದು ಅಲ್ಲಿಯ ಮಠಾಧಿಕಾರಿಯು ಕೋಟಿಪಲ್ಯಾ ರಾಧ್ಯ ಎಂಬವನಾಗಿದ್ದನು. ಆತನ ಗುರುವು ಅವಾಂತರಾರ್ಯನು. ಈ ಗ್ರಾಮವು ಗೌತಮ ಗೋದಾವರಿ ಎಂಬ ಹೆಸರುಳ್ಳ ಗೋದಾ ವರೀ ಶಾಖೆಯ ಮೇಲಿದ್ದು ಅದು ರಾಜಮಹೇಂದ್ರಿ ಮತ್ತು ಸಮೀ ಪದ ಬಂದರ ಸ್ಥಾನವಾದ ಕೊರಿಂಗಾ ಈ ಎರಡು ಪಟ್ಟಣಗಳ ಮಧ್ಯ ದಲ್ಲಿದೆ ಆಂಧ್ರವೀರಶೈವರ ಪ್ರಕಾರ ವೀರಶೈವರಲ್ಲಿ ಆರಾಧ್ಯತ್ರಯ ರೆಂಬವರಿದ್ದಾರೆ. ಅವರು ಉದ್ಭಟ, ವೇಮನಾರಾಧ್ಯ ಮತ್ತು ಕೋಟಿ ಪಲ್ಯಾರಾಧ್ಯ × ಎಂಬವರು. ಇದರಿಂದ ಕೋಟಿಪಲ್ಯಾರಾಧ್ಯನ ಮಹ ತ್ವವೆಷ್ಟಿದೆಂಬುದು ತಿಳಿದು ಬರುತ್ತದೆ. ಈತನೇ ಮಲ್ಲಿಕಾರ್ಜುನನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟನು.

ಮಲ್ಲಿಕಾರ್ಜುನನು ವೀರಶೈವ ದೀಕ್ಷೆಯನ್ನು ಹೊಂದಿದ ಬಳಿಕ ಅವನು ಅದರ ನಿಜಾಂಶವನ್ನು ತಿಳಿದುಕೊಂಡವನಾಗಿ ಅದರಂತೆ ಆಚ ರಿಸುತ್ತ ನಾಡಿನಲ್ಲಿ ಅತ್ಯಂತ ಖ್ಯಾತಿಯನ್ನು ಪಡೆದನು. ಅವನು ಎಲ್ಲ ಶಾಸ್ತ್ರಗಳಲ್ಲಿ ಪಾಂಡಿತ್ಯವನ್ನು ಹೊಂದಿದ್ದರಿಂದ ಅವನನ್ನು ಮಲ್ಲಿಕಾ

---

× ಒಮ್ಮೊಮ್ಮೆ ವಿಶ್ವಾರಾಧ್ಯ ಎಂತಲೂ ಉಂಟು.

ರ್ಜುನ ಪಂಡಿತಾರಾಧ್ಯನೆಂದು ಜನರು ಕರೆಯುತ್ತಿದರು. ಪಂಡಿತಾ ರಾಧ್ಯನೆಂಬ ಸಂಕ್ಷಿಪ್ತ ಹೆಸರಿನಿಂದಲೂ ಸಹ ಅವನನ್ನು ಕರೆಯುವ ದುಂಟು.

ಪಂಡಿತಾರಾಧ್ಯನು ವೀರಶೈವ ದೀಕ್ಷೆಯನ್ನು ಹೊಂದಿದ ಬಳಿಕ ಅವನು ಗೃಹಸ್ಥಾಶ್ರಮವನ್ನು ಹೊಂದಿ ಶರ್ಯಾತಿರಾಯನ ಮಗಳನ್ನು ಮದುವೆಯಾದನು.

ದ್ರಾಕ್ಷಾರಾಮ ಕ್ಷೇತ್ರವು ಅತ್ಯಂತ ಮಹತ್ವದ ಕ್ಷೇತ್ರವಾದುದ ರಿಂದ ಬಹುಜನ ಪಂಡಿತರು ಅಲ್ಲಿ ನೆರೆಯುತ್ತಾ ಇದ್ದರು. ಅವರು ಮಲ್ಲಿಕಾರ್ಜುನ ಪಂಡಿತಾರಾಧ್ಯನಿಂದ ವೀರಶೈವ ಮತತತ್ವಗಳನ್ನು ತಿಳಿದುಕೊಳ್ಳುವವರಾದರು. ಅವರಲ್ಲಿ ಅನೇಕರು ಅವನ ಶಿಷ್ಯತ್ವವನ್ನು ವಹಿಸಿ, ಅವನಲ್ಲಿ ಇರಲಿಕ್ಕೆ ಪ್ರಾರಂಭಿಸಿದರು. ಅವರು ಪಂಡಿತಾರಾ ಧ್ಯನಿಗೆ ಸಹಾಯಕರಾಗಿ ಜನರಲ್ಲಿ ಮತತತ್ವಬೋಧೆ ಮಾಡುವವರಾ ದರು. ಅವರಲ್ಲಿ ದೇವಯ್ಯ, ರೇವಯ್ಯ, ಧವಳೇಶ ಮಲ್ಲಯ್ಯ, ರೇಚಯ್ಯ, ವೆಲ್ಲಗೊಂಡ ಮಹಾದೇವಯ್ಯ, ರೇಮಯ್ಯ, ದೊನಮಯ್ಯ, ಗುರುಭಕ್ತ, ಇವರು ಅತ್ಯಂತ ಮಹತ್ವದ ಸ್ಥಾನವನ್ನು ಹೊಂದಿದರು.

ಇದೇ ಕಾಲದಲ್ಲಿ ಕರ್ನಾಟಕದಲ್ಲಿ ಬಸವೇಶ್ವರ ಮೊದಲಾದ ಶಿವಶರಣರು ಉದ್ಭವಿಸಿ ಇಲ್ಲಿ ಒಂದು ಮಹತ್ತರ ಕ್ರಾಂತಿಯನ್ನು ಮಾಡು ವದರಲ್ಲಿ ತೊಡಗಿದವರಾಗಿದ್ದರು. ಅವರು ಕಲ್ಯಾಣಪಟ್ಟಣದಲ್ಲಿ ಸೇರಿ ಶಿವಾ ನುಭವ ಮಂಟಪದ ಮೂಲಕ ಎಲ್ಲ ಕಡೆಗಿದ್ದ ಶಿವಶರಣರನ್ನು ಆಕ ರ್ಷಿಸಿ ಹೇಗೆ ಕರ್ನಾಟಕದಲ್ಲಿ ಕಾರ್ಯ ಮಾಡಿದರೋ, ಹಾಗೆಯೇ ಕರ್ನಾಟಕದ ಪೂರ್ವ ಭಾಗದಲ್ಲಿದ್ದ ಆಂಧ್ರದೇಶದಲ್ಲಿ ಪಂಡಿತಾರಾಧ್ಯನು ಉತ್ಪನ್ನನಾಗಿ ಈ ಪ್ರಾಂತದಲ್ಲಿ ಒಂದು ಮಹತ್ವದ ಧಾರ್ಮಿಕ ಆಂದೋ ಲನವನ್ನು ಪ್ರಾರಂಭಿಸಿದನು. ಆಗ ಬಹು ಜನ ವಿದ್ವಾಂಸರು ಅವನ ಲ್ಲಿಗೆ ಬಂದು ಅವನಿಂದ ಪ್ರೇರಿತರಾಗಿ ನಾಡಿನಲ್ಲಿ ಸಂಚರಿಸುತ್ತ ವೀರ ಶೈವ ಧರ್ಮದ ಪ್ರಕಾಶವನ್ನು ಬೀರುವವರಾದರು. ಇವರ ಧಾರ್ಮಿಕ ಚಳವಳಿಯ ಕೇಂದ್ರವು ಮುಖ್ಯವಾಗಿ ದ್ರಾಕ್ಷಾರಾಮ ಕ್ಷೇತ್ರವಾಗಿತ್ತು. ಇಲ್ಲವೆ ಇದೇ ಸಪ್ತ ಗೋದಾವರೀ ಪ್ರದೇಶದಲ್ಲಿರುವ ಅನುರಗುಂಡ ಎಂಬ

ಸ್ಥಾನವಾದರೂ ಅವೆರಡೂ ಕೇಂದ್ರ ಸ್ಥಳವಾಗಿತ್ತು. ಮಲ್ಲಿಕಾರ್ಜುನ ಪಂಡಿತಾರಾಧ್ಯನು ಈ ಎರಡೂ ಗ್ರಾಮಗಳಲ್ಲಿ ವಾಸಮಾಡಿಕೊಂಡಿದ್ದನೆಂಬುದು ಅವನ ಚರಿತ್ರೆಯಿಂದ ತಿಳಿದುಬರುತ್ತದೆ.

ಪಂಡಿತಾರಾಧ್ಯನು ತನ್ನ ಧಾರ್ಮಿಕ ಚಳವಳಿಯ ಆರಂಭಕಾಲದಲ್ಲಿಯೇ ಕಲ್ಯಾಣದಲ್ಲಿ ಶಿವಶರಣರು ನಡಿಸಿದ ಧಾರ್ಮಿಕ ಪ್ರಯತ್ನಗಳನ್ನು ತಿಳಿದುಕೊಂಡಿದ್ದನೆಂದು ತೋರುತ್ತದೆ. ಹಿಂದಿನ ಕಾಲದಲ್ಲಿ ಅನೇಕ ಕಾರಣಗಳ ಮೂಲಕ ಆಂಧ್ರ ಮತ್ತು ಕರ್ನಾಟಕಗಳಲ್ಲಿ ಪರಸ್ಪರ ನಿಕಟ ಸಂಬಂಧವಿದ್ದದರಿಂದ ಒಂದು ಪ್ರಾಂತದ ಆಂದೋಲನಗಳು ಮತ್ತೊಂದು ಪ್ರಾಂತದವರಿಗೆ ಕೂಡಲೆ ತಿಳಿದುಬರುತ್ತಿದ್ದವು. ಆದ್ದರಿಂದ ಬಸವೇಶ್ವರನ ಪ್ರಯತ್ನಗಳು ಪಂಡಿತಾರಾಧ್ಯನಿಗೆ ಮತ್ತು ಪಂಡಿತಾರಾಧ್ಯನ ಪ್ರಯತ್ನಗಳು ಬಸವೇಶ್ವರನಿಗೆ ಅವಗತವಾಗುತ್ತಿದ್ದವೆಂದು ತೋರುತ್ತದೆ. ಒಂದು ದಿವಸ ಪಂಡಿತಾರಾಧ್ಯನು ಬಸವೇಶ್ವರನ ವಚನಗಳನ್ನು ತಾನಿದ್ದ ಕ್ಷೇತ್ರದಲ್ಲಿ ಕೆಲವರು ಪಠಿಸುತ್ತಿದ್ದುದನ್ನು ತಿಳಿದು ಅವುಗಳನ್ನು ತಾನೂ ಪರಿಶೀಲಿಸುವವನಾದನು. ಇದರಿಂದ ಅವನಿಗೆ ಕನ್ನಡದ ಜ್ಞಾನವಾಗಿರಬೇಕು. ಇದರಿಂದ ಬಸವೇಶ್ವರನ ವಿಷಯವಾಗಿ ಅವನಲ್ಲಿ ಭಕ್ತಿಯು ಬಲಿಯಲು ಶಿವಾಧಿಕ್ಯವೆಂಬ ಕಾವ್ಯವನ್ನು ಬರೆದು ಅದನ್ನು ಬಸವೇಶ್ವರನ ಕಡೆಗೆ ಕಳಿಸಿದನು. ಬಸವೇಶ್ವರನು ಅದನ್ನು ನೋಡಿ ಪ್ರೀತನಾಗಿ ಪಂಡಿತಾರಾಧ್ಯನ ಸ್ತೋತ್ರ ಪದಗಳನ್ನು ಕನ್ನಡದಲ್ಲಿ ರಚಿಸಿ ಒಂದು ವಿಭೂತಿಯ ಪೆಟ್ಟಿಗೆಯಲ್ಲಿ ಇಟ್ಟು ಭಸ್ಮವನ್ನು ಅದರಲ್ಲಿ ತುಂಬಿ ತಿರುಗಿ ಕಳುಹಿಸಲು ಪಂಡಿತಾರಾಧ್ಯನು ಅವುಗಳನ್ನು ಪಠನ ಮಾಡಿದ ಕೂಡಲೆ ಅವನಿಗೆ ಕನ್ನಡ ಭಾಷೆಯು ಸರಸಾಗಿ ತಾನಾಗಿಯೇ ಬರಹತ್ತಿತು. ಆ ಮೇಲೆ ಅವನು ತಾನೂ ಬಸವ ಸ್ತೋತ್ರವೆಂದು ಕನ್ನಡದಲ್ಲಿ ಪದ್ಯಗಳನ್ನು ರಚಿಸಿ ಬಸವೇಶ್ವರನಿಗೆ ಕಳಿಸಿದನು.

ಈ ಐತಿಹ್ಯದಿಂದ ಸಮಕಾಲೀನರಾದ ಬಸವೇಶ್ವರ ಮತ್ತು ಪಂಡಿತಾರಾಧ್ಯ ಇವರಲ್ಲಿ ಪ್ರತ್ಯಕ್ಷ ಸಂಬಂಧವಿರದಿದ್ದರೂ ಪರೋಕ್ಷವಾದರೂ ಪರಸ್ಪರರನ್ನು ಅವರು ತಿಳದುಕೊಂಡು ತಮ್ಮ ತಮ್ಮ ಪ್ರದೇಶಗಳಲ್ಲಿ ಧಾರ್ಮಿಕ ಚಳವಳಿಯನ್ನು ನಡಿಸುತ್ತಿದ್ದರೆಂದು ಅನುಮಾನಮಾಡಲು ಯಾವ ಪ್ರತ್ಯವಾಯವಿಲ್ಲ.

ಪಂಡಿತಾರಾಧ್ಯನು ಪಂಡಿತನಾಗಿದ್ದು ಕೆಲವು ಗ್ರಂಥಗಳನ್ನು ಬರೆದಿದ್ದು ಅವನ ಚರಿತ್ರೆಯಿಂದ ತಿಳಿದುಬರುತ್ತದೆ. ಅವನು ಸಂಸ್ಕೃತ, ತೆಲಗು, ಕನ್ನಡ, ಬಲ್ಲವನಾಗಿದ್ದು ಈ ಮೂರೂ ಭಾಷೆಗಳಲ್ಲಿ ಗ್ರಂಥಗಳನ್ನು ರಚಿಸಿದ್ದಾನೆ. ಅವನು ತೆಲುಗಿನಲ್ಲಿ ಶಿವಸ್ತೋತ್ರವನ್ನೂ ಕನ್ನಡದಲ್ಲಿ ಶಿವಾಧಿಕ್ಯವನ್ನೂ ಕನ್ನಡ ಮತ್ತು ಸಂಸ್ಕೃತಗಳಲ್ಲಿ ಬಸವಸ್ತೋತ್ರವನ್ನೂ ಬರೆದಿರುವದಲ್ಲದೆ ಭೀಮೇಶ್ವರ ಗದ್ಯ ಮತ್ತು ಶಿವತತ್ವಸಾರ ಎಂಬ ಉದ್ಗ್ರಂಥಗಳನ್ನು ಬರೆದಿದ್ದಾನೆ. ಅವನು ಇನ್ನೂ ಅನೇಕ ಗ್ರಂಥಗಳನ್ನು ಬರೆದಿರಬಹುದು. ಆದರೆ ಅವಾವೆಂಬುದು ನಮಗೆ ತಿಳಿದುಬಂದಿಲ್ಲ.

ಬಸವಾದಿ ಪ್ರಮಥರ ತತ್ವವಿಚಾರಗಳು ಮತ್ತು ಸಂಸ್ಕೃತಿಯು ವೀರಶೈವರಾದ ಆಂಧ್ರರ ಮೇಲೆ ಎಷ್ಟರ ಮಟ್ಟಿಗೆ ಪರಿಣಾಮ ಮಾಡಿದವೆಂಬುದು ಈ ವರೆಗೆ ಪ್ರಕಟವಾದ ಸಂಗತಿಗಳಿಂದ ನಿಶ್ಚಿತವಾಗಿ ಹೇಳಲು ಬರಲಾರದು. ಆಂಧ್ರ ವೀರಶೈವ ವಾಙ್ಮಯವು ಪ್ರಕಟವಾದ ಮೇಲೆ ಇದರ ಸ್ವರೂಪು ಚನ್ನಾಗಿ ತಿಳಿದುಬರಬಹುದು. ಆದರೂ ಆಂಧ್ರ ವೀರಶೈವರು ಕರ್ನಾಟಕ ಶಿವಶರಣರಿಂದ ಪ್ರೇರಿತರಾಗಿದ್ದರೆಂಬುದು ಕೆಳಗಿನ ಸಂಗತಿಯಿಂದ ಸ್ಪಷ್ಟವಾಗುತ್ತದೆ.

ಆಂಧ್ರವೀರಶೈವರು ರೇವಣಸಿದ್ಧ, ಮರುಳಸಿದ್ಧ ಮತ್ತು ಏಕೋರಾಮಸಿದ್ಧ ಎಂಬವರು ಸಿದ್ಧತ್ರಯರು ಎಂದೂ ಶ್ರೀಪತಿ ಪಂಡಿತ, ಮಂಚಣ್ಣ ಪಂಡಿತ, ಮಲ್ಲಿಕಾರ್ಜುನ ಪಂಡಿತ ಎಂಬವರು ಪಂಡಿತತ್ರಯರೆಂದೂ ಉದ್ಭಟ, ವೇಮನಾರಾಧ್ಯ, ಕೋಟಿಪಲ್ಯಾರಾಧ್ಯ (ವಿಶ್ವಾರಾಧ್ಯ ರೆಂತಲೂ ಹೇಳುವದುಂಟು) ಎಂಬವರು ಆರಾಧ್ಯತ್ರಯರೆಂತಲೂ ಮಾಯಿದೇವ, ಭಾಸ್ಕರ ಮತ್ತು ನೀಲಕಂಠ ಇವರು ಆಚಾರ್ಯತ್ರಯರೆಂತಲೂ, ಬಸವರಸ, ಬಾಚರಸ, ಸಕಲೇಶ ಮಾದರಸ ಇವರು ರಾಜತ್ರಯರೆಂತಲೂ ರೇವಣಸಿದ್ಧ, ಮರುಳುಸಿದ್ಧ, ಏಕೋರಾಮಸಿದ್ಧ ಇವರು ಗುರುಪರಂಪರೆಯವರೆಂತಲೂ ಹೇಳುವದುಂಟು. ಇವರೆಲ್ಲರನ್ನು ಆಂಧ್ರ ವೀರಶೈವರು ಅತ್ಯಂತ ಭಕ್ತಿಭಾವದಿಂದ ಎಂದಿನಿಂದಲೂ ಕಾಣುತ್ತ ಬಂದಿದ್ದಾರೆ. ಇವರಲ್ಲಿ ಬಹು ಜನರು ಕರ್ನಾಟಕದ ಶಿವಶರಣರೂ ಗ್ರಂಥಕಾರರೂ ಇದ್ದಾರೆ. ಇದರಿಂದ ಕರ್ನಾಟಕದ ಶರಣರ ಪ್ರಭಾವವು ಆಂಧ್ರ ವೀರಶೈವರ ಮೇಲೆ ಇದ್ದದು ಸ್ಪಷ್ಟವಾಗಿ ತೋರಿಬರುತ್ತದೆ.

೧೯೨೯ ರಲ್ಲಿ ಪಂಡಿತ ಚಿದಿರೆಮಠದ ವೀರಭದ್ರ ಶರ್ಮರು (ಹಿಂದುಗಡೆ ಕಾಶೀವಿಶ್ವೇಶ್ವರ ಜಗದ್ಗುರು ಸಿಂಹಾಸನ ಪೀಠಸ್ಥರು) "ಆಂಧ್ರವೀರಶೈವರು" ಎಂಬ ವಿಸ್ತಾರವಾದ ಲೇಖವನ್ನು ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸಿದ್ದು ಅದರಮೇಲಿಂದ ಆಂಧ್ರ ದೇಶದ ಹೈದ್ರಾಬಾದ ಸಂಸ್ಥಾನದಲ್ಲಿ ಸಂಗರೆಡ್ಡಿ, ಮಹಬೂಬನಗರ, ನಿಜಾಮಾಬಾದ, ನಲ್ಲಗೊಂಡ, ಅತ್ರಾಫಬಲ್ದಾ, ಒರಂಗಲ್ಲ, ಮೆದಕ್, ಕರೀಂನಗರ ಈ ಜಿಲ್ಲೆಗಳಲ್ಲಿಯೂ ಮದ್ರಾಸ ಇಲಾಖೆಯಲ್ಲಿ ಕೃಷ್ಣಾ, ಗುಂಟೂರು, ಗೋದಾವರೀ, ವಿಶಾಖಪಟ್ಟಣಂ, ಗಂಜಾಂ, ನೆಲ್ಲೂರು, ಕಡಪಾ, ಕರ್ನೂಲ, ಅನಂತಪುರಂ, ಜಿಲ್ಲೆಗಳಲ್ಲಿಯೂ ವಿಶೇಷವಾಗಿ ವಾಸಿಸುತ್ತಿದ್ದುದು ತಿಳಿದುಬರುತ್ತದೆಂದು ಬರೆದಿದ್ದಾರೆ. ನಾವು ಈ ವರೆಗೆ ಪ್ರಸಿದ್ಧ ಮಾಡಿದ ಆಂಧ್ರ ಶಿವಶರಣರು ಈ ಪ್ರದೇಶದವರೇ ಇದ್ದಾರೆ. ಅವರಲ್ಲಿ ಶ್ರೀಪತಿ ಪಂಡಿತ, ಮೇಮನಾರಾಧ್ಯ, ಮಲ್ಲಿಕಾರ್ಜುನ ಪಂಡಿತಾರಾಧ್ಯ ಮತ್ತು ಪಾಲ್ಕುರಿಕೆ ಸೋಮನಾಥ ಇವರು ದೊಡ್ಡ ವಿದ್ವಾಂಸರಾಗಿ ಶಿವಶರಣರ ತತ್ವಗಳನ್ನು ಈ ಭಾಗಗಳಲ್ಲಿದ್ದ ಅನೇಕ ಜಾತಿಯವರು, ಉದಾಹರಣಾರ್ಥವಾಗಿ ಬಣಜಿಗರು, ಶೀಲವಂತರು (ಇವರು ನೆಯ್ಗೆಯುವರು), ಗಾಣಿಗರು, ದೇವಾಂಗರು, ಕರ್ಣಿಭಕ್ತರು, ವೀರಮುಷ್ಟಿಯುವರು, ಹೊಲೆಯ ಜಂಗಮರು, ಜಂಗಮರು ಹೀಗೆ ಅನೇಕ ಪಂಗಡಗಳು ವೀರಶೈವ ಧರ್ಮದ ಮೇರೆಗೆ ಈಗಲೂ ಪಾಲಿಸುತ್ತ ಇವೆ. ಒಟ್ಟಿಗೆ ಬಸವೇಶ್ವರನ ಸಮಕಾಲೀನನಾಗಿ ಆಂಧ್ರ ದೇಶದಲ್ಲಿ ಪ್ರಖ್ಯಾತಿಗೆ ಬಂದ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಕರ್ನಾಟಕದ ಶಿವಶರಣರಿಂದ ಪ್ರೇರಿತನಾಗಿ ಆಂಧ್ರ ದೇಶದಲ್ಲಿ ವೀರಶೈವ ಧರ್ಮದ ಪ್ರಚಾರ ಮಾಡಿರಬೇಕೆಂದು ಹೇಳುವದೇ ನಮ್ಮ ಮುಖ್ಯ ಅಭಿಪ್ರಾಯವಾಗಿದೆ.

ಆದರೆ ಪಂಡಿತಾರಾಧ್ಯ ಮೊದಲಾದ ಮಹನೀಯರು ಆರಂಭದಲ್ಲಿ ವೇದೋಪನಿಷದ್ಗ್ರಂಥಗಳನ್ನೋದಿ ವಿದ್ವಾಂಸರಾಗಿ ಬ್ರಾಹ್ಮಣ ಧರ್ಮಕ್ಕೆ ಒಲಿದವರಾಗಿದ್ದರೆಂಬುದು ಅವರ ಚರಿತ್ರೆಗಳಿಂದ ಕಂಡು ಬರುತ್ತದೆ. ಮಲ್ಲಿಕಾರ್ಜುನ ಪಂಡಿತಾರಾಧ್ಯನು ಆರಂಭದಲ್ಲಿ ಬಸವೇಶ್ವರನಲ್ಲಿ "ಭಕ್ತಿಮೀದಿ ವಲಪು ಬ್ರಾಹ್ಮ್ಯಂಬುತೋ ಬೊತ್ತು ಬಾಯಲೇನು ನೇನು ಬಸವಲಿಂಗ" ಎಂದರೆ ಭಕ್ತಿಯಲ್ಲಿರುವ ಲಾಲಸೆಯನ್ನು ಬ್ರಾಹ್ಮ್ಯದ

ಲ್ಲಿರುವ ಭಾಗವನ್ನೂ ನಾನು ಬಿಡಲಾರೆನೆಂದು ಹೇಳಿಕೊಂಡಿದ್ದಾನೆ. ಇವನು ಶ್ರೌತ ಸ್ಮಾರ್ತ ಕರ್ಮಾನುಷ್ಠಾನ ನಿಷ್ಠೆಯುಳ್ಳವನಾದರೂ ಬಸವೇಶ್ವರನಲ್ಲಿ ಅಖಂಡ ಭಕ್ತಿಯುತನಾಗಿದ್ದುದು ನಿಸ್ಸಂಶಯವು. ಆಂಧ್ರ ವೀರಶೈವರು ಲಗ್ನಪತ್ರಿಕೆ ಬರೆಯುವಾಗ "ಶ್ರೀ ಮತ್ಕಲ್ಯಾಣ ಬಸವೇಶ್ವರಾಂಶ ಸಂಭೂತರಾದ" ಎಂಬ ಶಬ್ದಗಳನ್ನು ಈಗಲೂ ಉಪಯೋಗಿಸುವದುಂಟು. ಹೀಗೆ ಆಂಧ್ರ ಸಂಸ್ಕೃತಿಯ ಮೇಲೆ ಶಿವ ಶರಣರು ಬಹಳ ಪರಿಣಾಮ ಮಾಡಿದ್ದಾರೆ.

ಮಲ್ಲಿಕಾರ್ಜುನ ಪಂಡಿತಾರಾಧ್ಯನು ಸಾಮಾನ್ಯವಾಗಿ ದ್ರಾಕ್ಷಾ ರಾಮಕ್ಷೇತ್ರದಲ್ಲಿ ಇರುತ್ತಿದ್ದರೂ ಈ ಸಪ್ತ ಗೋದಾವರೀ ಪ್ರದೇಶಕ್ಕೆ ಸಮೀಪವಾಗಿರುವ ಅಮರಗುಂಡವೆಂಬ ಬೇರೊಂದು ಪುಣ್ಯಸ್ಥಳವನ್ನು ಆಯ್ದು ಅಲ್ಲಿಯೂ ಕೂಡ ವಾಸಿಸುತ್ತಿದ್ದನು. ಈ ಸ್ಥಳದಲ್ಲಿ ಮಲ್ಲಿಕಾ ರ್ಜುನನೆಂಬ ಪ್ರಸಿದ್ಧ ದೇವಾಲಯವಿರುತ್ತದೆ. ಕೆಲವು ಶಿವಶರಣರು 'ಅಮರಗುಂಡ ಮಲ್ಲಿಕಾರ್ಜುನ' ಎಂಬ ಅಂಕಿತದಿಂದ ವಚನಗಳನ್ನು ರಚಿ ಸಿದ್ದಾರೆ. ಈ ಸ್ಥಳದಲ್ಲಿ ಪಂಡಿರಾರಾಧ್ಯನ ಶಿಷ್ಯತ್ವವನ್ನು ವಹಿಸಿ ಬಹು ಜನರು ಅಲ್ಲಿಯೂ ವಾಸಮಾಡುವವರಾಗಿದ್ದರು.

ಈ ಪ್ರಕಾರ ಮಲ್ಲಿಕಾರ್ಜುನ ಪಂಡಿತಾರಾಧ್ಯನು ನಾಡಿನ ಜನ ರಲ್ಲಿ ಪೂಜ್ಯಸ್ಥಾನವನ್ನು ಹೊಂದ ಹತ್ತಲು ಅವನು ದೇಶದಲ್ಲಿಯ ವಿದ್ವಾಂಸರನ್ನು ಕಾಣಬೇಕೆಂದು ಬಯಸಿ ಮದುರೆಯ ವರೆಗೆ ಪ್ರವಾಸ ಮಾಡಿ ಅನೇಕ ಶಿವಶರಣರನ್ನು ಕಾಣುವವನಾದನು. ಇವರಲ್ಲಿ ಪಾಲ್ಕು ರಿಕೆಯಲ್ಲಿದ್ದ ಬೆಲ್ದೇವೀ ವೇಮನಾರಾಧ್ಯ, ಅನಂತಪುರ ಜಿಲ್ಲೆಯಲ್ಲಿರುವ ಕದಿರಿಯ ರೇಮಯ್ಯ, ಇವರು ಮುಖ್ಯರಾಗಿದ್ದರು. ಅಲ್ಲದೆ ಬಹುಜನರು ತನ್ನಿಂದ ದೀಕ್ಷೆಯನ್ನು ಹೊಂದಬೇಕೆಂದು ಬಯಸಿಬರಲು ಅವರಿಗೆ ಅವನು ದೀಕ್ಷೆಯನ್ನು ಕೊಡುತ್ತ ಸಂಚರಿಸಿದನು. ಪಂಡಿತಾರಾಧ್ಯನು ದೀಕ್ಷೆಯನ್ನು ಕೊಟ್ಟವರಲ್ಲಿ ಸೂರಂಬೆಯು ಬಹು ಪ್ರಸಿದ್ಧಳಾಗಿದ್ದಾಳೆ. ಇವಳು ಪೊರಾಂ ಡಲವೆಂಬ ಪಟ್ಟಣದಲ್ಲಿ ವಾಸಮಾಡುತ್ತಿದ್ದಳು. ಅವಳು ಪಂಡಿತಾರಾಧ್ಯನ ಶಿಷ್ಯಳಾಗಿ ಭಕ್ತಜಂಗಮರು ಯಾವ ಜಾತಿಯವರಿದ್ದರೂ ಅವರನ್ನು ಆದರಿಸಿ, ಅವರೊಡನೆ ಪ್ರಸಾದಸೇವನೆಯನ್ನು ಮಾಡುವಳು. ಅವಳು ಬ್ರಾಹ್ಮಣಳು. ಆದ್ದರಿಂದ ಆಕೆಯು ಹಾಗೆ ಆಚರಿಸುತ್ತಿದ್ದುದನ್ನು ಪಟ್ಟಣ

ದಲ್ಲಿಯ ಬ್ರಾಹ್ಮಣರು ನೋಡಿ ಅರಸನ ಕಡೆಗೆ ಹೋಗಿ ದೂರು ಹೇಳಿದರು. ಅದಕ್ಕೆ ಅರಸನು ಅಂತ್ಯಜರಾರಾದರೂ ಆಕೆಯ ಮನೆಯನ್ನು ಪ್ರವೇಶ ಮಾಡಿದಲ್ಲಿ ತನಗೆ ಕೂಡಲೆ ತಿಳಿಸಬೇಕೆಂದು ಹೇಳಲು ಬ್ರಾಹ್ಮಣರು ಅವಳು ಹಾಗೆ ಮಾಡುತ್ತಿರುವದನ್ನು ಕಾಯುತ್ತಲೇ ಇದ್ದರು. ಹೀಗಿರಲು ಒಂದು ದಿವಸ ಒಬ್ಬ ಅಂತ್ಯಜನು ಅಂಗದ ಮೇಲೆ ಲಿಂಗ ರುದ್ರಾಕ್ಷಿಗಳನ್ನು ಧರಿಸಿಕೊಂಡು ಅವಳ ಮನೆಯನ್ನು ಪ್ರವೇಶಿಸಲು ಕೂಡಲೆ ಬ್ರಾಹ್ಮಣರು ಇದನ್ನು ಅರಸನಿಗೆ ತಿಳಿಸಿದರು. ಅರಸನು ತತ್‌ಕ್ಷಣವೇ ಬಂದು ಮನೆಯನ್ನು ನಿರೀಕ್ಷಿಸಲಾಗಿ ಅಲ್ಲಿ ಯಾರು ಇಲ್ಲದ್ದನ್ನು ಕಂಡು ಮನೆಗೆ ಬಂದವನು ಅಂತ್ಯಜನಲ್ಲ, ಅಂತ್ಯಜನ ವೇಷವನ್ನು ಧಾರಣಮಾಡಿದ ಪರಮಾತ್ಮನಿರಬೇಕೆಂದು ಅವನೂ ಜನರೂ ತಿಳಿದು ಸೂರಂಬೆಯನ್ನು ಸ್ತುತಿಸುತ್ತ ತಿರುಗಿಹೋಗುವವರಾದರು

ಶ್ರೀಶೈಲದಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿಷ್ಯನು ದೇವಣ್ಣನೆಂಬಾತನು ಇದ್ದು ಅವನು ಪ್ರತಿನಿತ್ಯ ಲಿಂಗಕ್ಕೆ ತನ್ನ ಎರಡು ಕಣ್ಣುಗಳನ್ನು ಸಮರ್ಪಿಸಿ ಶ್ರೀಮಲ್ಲಿಕಾರ್ಜುನ ಸ್ವಾಮಿಯಿಂದ ಪುನಃ ಕಣ್ಣುಗಳನ್ನು ಪಡೆದುಕೊಂಡು ಅತ್ಯಧಿಕವಾದ ಮಹಿಮೆಯನ್ನು ಹೊಂದಿದ್ದನು. ಮಲ್ಲಿಕಾರ್ಜುನ ಪಂಡಿತಾರಾಧ್ಯನು ಅಲ್ಲಿಯೇ ಅವನನ್ನೂ ಅಲ್ಲಿದ್ದ ತನ್ನ ಇತರ ಭಕ್ತರನ್ನೂ ಕಂಡು ಅವರಿಗೆ ಪ್ರಸಾದಿಸ್ಥಲದ ಅನುಸಂಧಾನವನ್ನು ಬೋಧಿಸಿ ಅವರನ್ನು ತನ್ನ ಶಿಷ್ಯರನ್ನಾಗಿ ಮಾಡಿಕೊಂಡನು.

ಅಲ್ಲಿಂದ ಅವನು ಪಾಲ್ಕುರಿಕೆಯಲ್ಲಿ ವೇಮನಾರ್ಯನನ್ನು ಕಂಡು ತಿರುಗಿ ದ್ರಾಕ್ಷಾರಾಮ ಕ್ಷೇತ್ರಕ್ಕೆ ಬಂದನು. ಈ ಪ್ರವಾಸದಲ್ಲಿ ಪಂಡಿತಾರಾಧ್ಯನ ಕೀರ್ತಿಯು ಆಂಧ್ರ ದೇಶದಲ್ಲೆಲ್ಲ ಅತ್ಯಂತವಾಗಿ ಪಸರಿಸಿತು. ಮತ್ತು ಅವನ ಶಿಷ್ಯ ಸಮುದಾಯವೂ ಬಹು ಹೆಚ್ಚಾಗಿ ಬೆಳೆಯಿತು. ಈ ಶಿಷ್ಯರಲ್ಲಿ ಅನೇಕರು ಶಿವಯೋಗವನ್ನು ಸಾಧಿಸಿದವರಾಗಿ ಮಹಾತ್ಮೆಗಳನ್ನು ಮಾಡುವಷ್ಟು ಧಾರ್ಮಿಕ ಉಚ್ಚ ಪ್ರಭಾವವನ್ನು ಪಡೆದವರಾಗಿದ್ದರು. ಮಲ್ಲಿಕಾರ್ಜುನ ಪಂಡಿತಾರಾಧ್ಯನು ಆಗಿಂದಾಗ್ಗೆ ಶಿಷ್ಯರಿಗೆ ಬೋಧಿಸುವದಕ್ಕೆ ಅಥವಾ ಪರವಾದಿಗಳ ಕೂಡ ವಾಗ್ವಾದ ಮಾಡುವುದಕ್ಕೆ ಹೋಗುವ ಪ್ರಸಂಗಗಳು ಬರುತ್ತಿದ್ದು ಆಗ ಅವನೊಡನೆ ಈ ಶಿಷ್ಯ ಸಂದೋಹವು ಹೋಗಿ ಅವನ ಕಾರ್ಯಗಳಲ್ಲಿ ಸಹಾಯ ಮಾಡುತ್ತ ಬರುವದು.

ಹೀಗಿರುವಲ್ಲಿ ಕೃಷ್ಣಾ ಜಿಲ್ಲೆಯಲ್ಲಿ ಚಂದವ್ರೋಲು ಎಂಬ ಗ್ರಾಮವಿದೆ. ಇದಕ್ಕೆ ಚಂದ್ರವ್ರೋಲು ೧ ಎಂತಲೂ ಹೆಸರು ಇದೆ. ಇದರ ಹಿಂದಿನ ಕಾಲದ ಹೆಸರು ಧನದಪುರವೆಂದು ಇದ್ದಂತೆ ತೋರುತ್ತದೆ. ಇಲ್ಲಿ ವೆಲನಾಡ ಚೋಳನೆಂಬ ರಾಜನು ಆಳುತ್ತಿದ್ದನು. ಅವನು ಬೌದ್ಧ ಧರ್ಮವನ್ನು ಪಾಲಿಸುತ್ತಿದ್ದು ಬೌದ್ಧಾಚಾರ್ಯನೆಂಬುದು ಅವನ ಗುರುವಿನ ಹೆಸರಾಗಿತ್ತು. ಈ ಬೌದ್ಧಾಚಾರ್ಯನು ಬೌದ್ಧ ಧರ್ಮವೇ ಸತ್ಯವಾದುದೆಂದು ಸಾರುತ್ತಾ ಇದ್ದನು. ಪಂಡಿತಾರಾಧ್ಯನು ಆಗ ಇದೇ ಗ್ರಾಮದಲ್ಲಿ ಇರುತ್ತಿದ್ದನು. ದೊರೆಯು ಅವನ ಸದಾಚಾರ ಸಂಪತ್ತಿಯನ್ನೂ ಶಿವಭಕ್ತಿಯನ್ನೂ ವಾಕ್ಸಿದ್ಧಿಯನ್ನೂ ನೋಡಿ ಅವನನ್ನು ಪ್ರೀತಿಸುವವನಾದನು. ಇದು ಬೌದ್ಧಾಚಾರ್ಯನಿಗೆ ತಿಳಿದು ದೊರೆಗೆ-ನಿನಗೆ ಯಾರು ಗುರುಗಳೋ ಅವರೇ ಲೋಕಕ್ಕೆಲ್ಲ ಗುರುಗಳು. ಇತರರು ನಿನಗೆ ಗುರುವಾಗಲಾರರು. ಈ ಶೈವನಿಗೆ ಪಂಡಿತನೆಂಬ ಹೆಸರೂ ಗುರುತ್ವವೂ ಸಲ್ಲಲಾರವು. ಎಲೆ ಭೂಪತಿಯೇ, ನನಗೂ ಪಂಡಿತಾರಾಧ್ಯನಿಗೂ ವಾದ ನಡೆಯಲಿ. ನಾನು ಇವನನ್ನು ಸೋಲಿಸಿ ಬಿಡುವೆನೆಂದು ಹೇಳಿದನು.

ಆಗ ಅರಸನು ಎಲ್ಲ ಮತಸ್ಥರನ್ನು ಅಂದರೆ ವೇದವಾದಿಗಳು, ಪಾಂಚರಾತ್ರರು, ಜಿನ ಮತದವರು, ಮಾಯಾವಾದಿಗಳು, ಆಗಮಿಕರು ಹೀಗೆ ಎಲ್ಲರನ್ನು ಬರಮಾಡಿಕೊಂಡು ಸಭೆಗೆ ಮಲ್ಲಿಕಾರ್ಜುನ ಪಂಡಿತಾರಾಧ್ಯನನ್ನೂ ಕರೆಕಳಿಸಿದನು. ಅರಸನ ಅಪ್ಪಣೆಯಂತೆ ಅವನೂ ಸಭೆಗೆ ಬರುವವನಾದನು. ಆಗ ಅಲ್ಲಿ ನೆರೆದ ಅನೇಕ ಮತಸ್ಥರೊಡನೆ ವಾದವಿವಾದಗಳು ನಡೆದು ಕಡೆಗೆ ಪಂಡಿತಾರಾಧ್ಯನು ಶಿವನೇ ದೈವವು, ಅವನ ಹೊರ್ತು ಜಗತ್ತಿನಲ್ಲಿ ಬೇರೊಬ್ಬರಿಲ್ಲ, ಅವನು ಸರ್ವವ್ಯಾಪಿಯು, ಎಂಬುದನ್ನು ಸಿದ್ಧ ಮಾಡಿ ತೋರಿಸಿದನು. ಆಗ ಅರಸನು ಅವನನ್ನು ಅತ್ಯಂತವಾಗಿ ಸನ್ಮಾನಿಸಿ ಕಳಿಸಿಕೊಟ್ಟನು. ಈ ಪ್ರಕಾರ ಪಂಡಿತಾರಾಧ್ಯನು ಬೌದ್ಧಾಚಾರ್ಯನನ್ನು ಸೋಲಿಸಿ ದ್ರಾಕ್ಷಾರಾಮ ಕ್ಷೇತ್ರಕ್ಕೆ ತಿರುಗಿ ಬಂದನು.

ವೆಲ್ನಾಡ ಚೋಳನಲ್ಲಿ ಬೌದ್ಧರು ತಮ್ಮ ಗುರುವಿಗೆ ರಾಜನ ಆಸ್ಥಾನದಲ್ಲಿ ಸೋಲುಂಟಾಗಲು ಅವರು ಪಟ್ಟಣದಲ್ಲಿ ಮಲ್ಲಿಕಾರ್ಜುನ ದೇವಾಲಯವಿದ್ದು ಅದರ ಮುಂದಿನ ದೀಪ ಮಾಲೆಯ ಕಂಭವನ್ನು ಸಿಟ್ಟಿನಿಂದ

---

(೧) ಸನದವ್ರೋಲು ಎಂತಲೂ ಹೇಳುವದುಂಟು.

ಕಿತ್ತು, ಪೂಜಾರಿಯನ್ನು ಕೊಂದು, ಹೊಟ್ಟೆಯನ್ನು ಸೀಳಿ, ಸಮುದ್ರ ಮಧ್ಯದಲ್ಲಿದ್ದ ಬೌದ್ಧಾಲಯದ ಮುಂದೆ ನಡಿಸಿದರು. ಈ ಆಲಯವು ಕೃಷ್ಣಾನದಿಯು ಸಮುದ್ರಕ್ಕೆ ಕೂಡುವ ಸ್ಥಳದಲ್ಲಿ ದೀವೀಖಂಡವೆಂಬ ದ್ವೀಪವು ಈಗಲೂ ಇದ್ದು ಅಲ್ಲಿ ಇದ್ದಿರಬಹುದಾಗಿ ತೋರುತ್ತದೆ. ಮಲ್ಲಿಕಾರ್ಜುನ ದೇವಾಲಯವು ಚಂದವೋಲು ಗ್ರಾಮಕ್ಕೆ ಸಮೀಪವಿರುವ ಕಾಕುಳ ಕ್ಷೇತ್ರದಲ್ಲಿ ಈಗಲೂ ಉಂಟು.

ಬೌದ್ಧರು ಈ ರೀತಿ ಮಾಡಿದ್ದು ಪಂಡಿತಾರಾಧ್ಯನಿಗೆ ತಿಳಿಯಲು ಅವನ ಶಿಷ್ಯನಾದ ರೇವಯ್ಯ ದೇವನು ಕೆಲವು ಭಕ್ತರನೊಡಗೊಂಡು ಬೌದ್ಧಾಲಯವಿದ್ದ ಸ್ಥಳಕ್ಕೆ ಹೋಗಿ ಅಲ್ಲಿಗೆ ಬಂದಿದ್ದ ಬೌದ್ಧಾಚಾರ್ಯನನ್ನು ಕೊಂದು ಶಿವಾಲಯದ ಪೂಜಾರಿಯನ್ನು ಕೊಂದುಹಾಕಿದಂತೆ ಅವನ ಹೊಟ್ಟೆಯನ್ನು ಸೀಳಿ ದೀಪಸ್ತಂಭವನ್ನು ಕಿತ್ತು ಶಿವಾಲಯದ ಮುಂದೆ ನಡಿಸಿದನು. ಇದು ವೆಲ್ನಾಡ ಚೋಳನಿಗೆ ತಿಳಿಯಲು ಅವನು ತನ್ನ ಗುರುವನ್ನು ಕೊಂದವರಾರೆಂದು ಕೇಳಲು ರೇವಯ್ಯನು ತಾನೇ ಕೊಂದೆನೆಂದು ಹೇಳಿದನು. ಆಗ ಅರಸನು ಅವನ ಕಣ್ಣುಗಳನ್ನು ಕಿತ್ತಿಸಲು ಅಲ್ಲಿದ್ದ ಭಕ್ತರು ಅವುಗಳಿಗೆ ಭಸ್ಮವನ್ನು ತಳೆದು ವಿಭೂತಿಯನ್ನು ತೋರಿಸಲು ಅವು ತಿರುಗಿ ಬಂದವು. ಹೀಗಾದುದನ್ನು ಚೋಳನು ನೋಡಿ ಪುನ: ಕಣ್ಣುಗಳನ್ನು ತೆಗೆಯಿಸಲು ಅವು ಪುನಃ ಮೂಡಿ ಮತ್ತೆ ಮತ್ತೆ ಬರುತ್ತಿರಲು ರೇವಯ್ಯನು ಇನ್ನು ಪುನ: ಕಣ್ಣುಗಳು ಬಂದರೆ, ಶಿವನೇ ನಿನ್ನ ಗಣಂಗಳಾಣೆ ಎಂದೆನ್ನಲು ಕಣ್ಣುಗಳು ಬರುವದು ನಿಂತವು. ಆ ಮೇಲೆ ಅವನು ದ್ರಾಕ್ಷಾರಾಮಕ್ಷೇತ್ರಕ್ಕೆ ಬಂದನು.

ಆದರೆ ವೆಲ್ನಾಡ ಚೋಳನು ಇದರ ತರುವಾಯ ಬಹಳ ದಿವಸ ಬಾಳಲಿಲ್ಲ. ಅವನ ಶರೀರಕ್ಕೆ ಹುಣ್ಣುಗಳುಂಟಾಗಿ ಅವುಗಳ ವೇದನೆಯಲ್ಲಿ ಪರಿತಪಿಸುತ್ತ ಅವನು ಮರಣಹೊಂದಿದನು.

ಈ ಸಂಗತಿಯು ಒದಗಿದ ಬಳಿಕ ಪಂಡಿತಾರಾಧ್ಯನು ಅಮರಗುಂಡ ಕ್ಷೇತ್ರಸ್ಥಾನದಲ್ಲಿ ತನ್ನ ಶಿಷ್ಯರೊಡನೆ ಬಂದು ನಿಂತನು. ಆಗ ಅವನ ಶಿಷ್ಯರಲ್ಲಿ ಗುರುಭಕ್ತನೆಂಬವನು ಅಗಾಧವಾದ ಗುರುಭಕ್ತಿಯನ್ನು ತೋರಿಸಿ ಅವನ ಅಪ್ಪಣೆಯಂತೆ ಶೂಲವನ್ನೇರಿದನು. ಆದರೆ ಅವನ ಪ್ರಾಣವು ಹೋಗಲಿಲ್ಲ. ಮುಂದೊಂದು ದಿನ ತನ್ನ ಸ್ವಾಮಿಯ ಪಾದುಕೆಗಳಿಗೆ ತನ್ನ ಪಾದವು

ತಾಕಲು ತನ್ನ ಕಾಲನ್ನು ಸಹ ಕಡಿದುಕೊಂಡನು. ಆದರೆ ಅವನಿಗೆ ಯಾವ ಅಪಾಯವೂ ಆಗಲಿಲ್ಲ. (ಹಿಂದೆ ಗುರುಭಕ್ತನಚರಿತ್ರೆಯನ್ನು ನೋಡಿರಿ.)

ಮಲ್ಲಿಕಾರ್ಜುನ ಪಂಡಿತಾರಾಧ್ಯನು ಈ ಪ್ರಕಾರ ಆಂಧ್ರದೇಶದಲ್ಲಿ ಧರ್ಮಪ್ರಚಾರ ಮಾಡುತ್ತಿರುವಾಗ ಬಸವೇಶ್ವರನು ಕಲ್ಯಾಣ ಪಟ್ಟಣದಲ್ಲಿ ನಡಿಸಿದ ಮಹತ್ತರ ಕಾರ್ಯಗಳನ್ನು ತಿಳಿದವನಾಗಿ ಅವನನ್ನು ಪ್ರತ್ಯಕ್ಷ ಕಾಣಬೇಕೆಂಬ ಲವಲವಿಕೆಯು ಅವನಲ್ಲಿ ಉಂಟಾಯಿತು. ಅವನು ಅಮರ ಗುಂಡ ಕ್ಷೇತ್ರದಿಂದ ತನ್ನ ಶಿಷ್ಯಸಮುದಾಯದೊಡನೆ ಹೊರಟು ಮೊದಲು ದ್ರಾಕ್ಷಾರಾಮಕ್ಕೆ ಬಂದನು. ಅಲ್ಲಿಂದ ಅವನು ಮುಂದೆ ನಡುಗೂಡು ಎಂಬ ಗ್ರಾಮಕ್ಕೆ ಬಂದನು. ಅದು ನಡಿಗುಡೆಂ ಎಂದು ಕೃಷ್ಣಾ ಜಿಲ್ಹೆಯಲ್ಲಿ ಒಂದು ಗ್ರಾಮವಿದೆ. ಅಲ್ಲಿ ವೀರಚಾಕಿದೇವ ಎಂಬ ತನ್ನ ಶಿಷ್ಯನಲ್ಲಿ ಕೆಲವು ದಿವಸ ಕಳೆದನು. ಈ ಚಾಕಿದೇವನ ವೃತ್ತಾಂತವು ನಮಗೆ ತಿಳಿದು ಬಂದಿಲ್ಲ. ಆದರೆ ಅವನ ಹೆಸರು ಗಣಸಹಸ್ರದಲ್ಲಿ ಇರುತ್ತದೆ. ಆದ್ದರಿಂದ ಅವನು ಈ ಕಾಲದಲ್ಲಿ ಒಬ್ಬ ಪ್ರಸಿದ್ಧ ಶಿವಶರಣನಾಗಿರಬಹುದೆಂದು ತೋರುತ್ತದೆ.

ಮುಂದೆ ಅವನು ನಡುಗೂಡಿನಿಂದ ಹೊರಟು ಈಗ ಮಹಬೂಬ ನಗರ ಜಿಲ್ಲೆಯಲ್ಲಿರುವ ಪಾನುಗಲ್ಲಿಗೆ ಬಂದನು. ಈ ಪಾನುಗಲ್ಲು ಶ್ರೀಶೈಲ ಪ್ರಾಂತಕ್ಕೆ ಸಮೀಪವಾಗಿಯೇ ಇರುತ್ತದೆ. ಇದು ಆ ಕಾಲದಲ್ಲಿ ಪ್ರಸಿದ್ಧ ಸ್ಥಳವೆನಿಸಿಕೊಂಡಿತ್ತು. ಇಲ್ಲಿ ಉದಯ ಭೂಪಾಲನೆಂಬ ರಾಜನು ರಾಜ್ಯ ವಾಳುತ್ತಿದ್ದನು. ಆದರೆ ಅವನು ಶಿವಭಕ್ತರಿಗೆ ವಿರೋಧಿಯಾಗಿ ಆಚರಿಸು ತ್ತಿದ್ದನು. ಅವನಲ್ಲಿ ಗೋವಿಂದ ಪೆಗ್ಗಡೆ ಎಂಬವನು ಉಚ್ಚ ಅಧಿಕಾರ ಸ್ಥಾನದಲ್ಲಿ ಕೆಲಸ ಮಾಡುತ್ತಿದ್ದು ಅವನು ಬಾಹ್ಯದಲ್ಲಿ ವಿಷ್ಣುಭಕ್ತನಂತೆ ನಟಿಸಿದರೂ ಕೇವಲ ಶಿವಭಕ್ತನಾಗಿ ಪಂಡಿತಾರಾಧ್ಯನ ಶಿಷ್ಯತ್ವವನ್ನು ವಹಿ ಸಿದವನಾಗಿದ್ದನು. ಆದ್ದರಿಂದ ಪಂಡಿತಾರಾಧ್ಯನು ತನ್ನ ಗ್ರಾಮಕ್ಕೆ ಬರಲು ಅವನನ್ನು ಅವನು ಬಹು ಸಂಭ್ರಮದಿಂದ ಇದಿರ್ಗೊಂಡು ಸತ್ಕರಿಸಿದನು. ಆಗ ಬಹು ಜನ ಭಕ್ತರೂ ಜಂಗಮರೂ ಈ ಗ್ರಾಮಕ್ಕೆ ಬರಲು, ಪಂಡಿತಾ ರಾಧ್ಯನ ಪೂಜಾರ್ಚನಾದಿಗಳು ಬಹು ಸಂಭ್ರಮದಿಂದ ಗ್ರಾಮದಲ್ಲಿ ನಡೆದವು.

ಹೀಗೆ ಪಾನುಗಲ್ಲಿನಲ್ಲಿ ಸಂಭ್ರಮದಿಂದ ಕಾರ್ಯಗಳು ನಡೆದಿರುತ್ತಿರಲು ನೆಲ್ಲೂರು ಜಿಲ್ಲೆಯಲ್ಲಿ ವೆಲ್ಲಗೊಂಡ ಅಥವಾ ವೆಲಿಗಂಡ್ಲಾ ಎಂಬ ಗ್ರಾಮ ವಿದ್ದು ಅಲ್ಲಿ ಮಹಾದೇವನೆಂಬ ಶರಣನು ವಾಸಮಾಡಿಕೊಂಡು ಇರುತ್ತಿದ್ದನು.

ಸ್ವರೂಪವನ್ನು ತಿಳಿಯಲು ಬಹು ಸಹಾಯಕವಾಗಿರುವ ಗ್ರಂಥಗಳು "ವಚನಶಾಸ್ತ್ರಸಾರ ಭಾಗ ೧, ಭಾಗ ೨ ಮತ್ತು ಭಾಗ ೩ ಪೂರ್ವಾರ್ಧ" ಇವು ಇದ್ದು ಈ ಮಾಲಿಕೆಯು ಇನ್ನೂ ಪೂರ್ತಿಯಾಗಿಲ್ಲ. ೩ ನೇ ಭಾಗದ ಉತ್ತರಾರ್ಧವನ್ನು ಪ್ರಕಟಿಸುವದು ಇನ್ನೂ ಉಳಿದದ್ದರಿಂದ ಇದನ್ನು ತೀವ್ರವಾಗಿ ಮುಗಿಸುವ ಉದ್ದಿಶ್ಯವಾಗಿ ನಾವು ಈ ಗ್ರಂಥದ ಕಡೆಯ ಭಾಗದ ಮುದ್ರಣವನ್ನು ಕೈಕೊಂಡಿದ್ದೇವೆ. ಅಷ್ಟಾವರಣಗಳಲ್ಲಿ ಬಹು ಮಹತ್ವದ ಆವರಣಗಳಾದ ಪಾದೋದಕ, ಪ್ರಸಾದ, ರುದ್ರಾಕ್ಷಿ, ಮಂತ್ರ, ವಿಭೂತಿ ಇವುಗಳಲ್ಲಿ ಅಡಕವಾಗಿರುವ ಮಹತ್ವದ ತತ್ವಗಳ ನಿರೂಪಣೆಗಳು ಈ ಕಡೆಯ ಗ್ರಂಥದಲ್ಲಿ ಬರುವವು. ಇದು ಮುಗಿದ ಬಳಿಕ ಪಂಚಾಚಾರ್ಯರು ಮತ್ತು ಅವರ ಕಾಲದಲ್ಲಿ ಆಗಿಹೋದ ಮಹಾಪುರುಷರು, ಅನಂತರ ಬಸವ ಮತ್ತು ಅವನ ಕಾಲದಲ್ಲಿದ್ದ ಶಿವಶರಣರು ಇವರ ಚರಿತ್ರೆಗಳನ್ನು ಸಂಶೋಧಿಸಿ ಅವುಗಳನ್ನು ಕ್ರಮವಾಗಿ ಪ್ರಕಟಿಸುತ್ತ ಹೋಗುವೆವು.

ಈಗ ನಾವು ಕೈಕೊಂಡಿರುವ ಅಷ್ಟಾವರಣಗಳ ವಿವೇಚನೆಗಳು ಸಾಮಾನ್ಯ ಜನರಿಗೆ ತಿಳಿಯದೆ ಹೋಗಿ ಅವು ಓದಲು ಅವರಿಗೆ ಬೇಸರಿಕೆಯನ್ನುಂಟುಮಾಡಬಹುದು. ಆದರೆ ಇದಕ್ಕೋಸ್ಕರ ಈ ಗ್ರಂಥವನ್ನು ನಾವು ಪ್ರಕಟಮಾಡದೆ ನಿಲ್ಲಿಸಿಬಿಟ್ಟರೆ ವೀರಶೈವಸಂಸ್ಕೃತಿಯ ಒಂದು ಮಹತ್ವದ ಭಾಗವು ಅಪ್ರಕಾಶಿತವಾಗಿ ಹಾಗೆಯೇ ಮುಂದೆ ಉಳಿಯಬಹುದೆಂದು ನಮಗೆ ತೋರುತ್ತದೆ. ಆದ್ದರಿಂದ ಈ ಕಾರ್ಯವನ್ನು ನಾವು ಈಗ ಮುಂದುವರಿಸಿದ್ದೇವೆ.

ಈ ಕಾರ್ಯಗಳನ್ನಲ್ಲದೆ ಶಿವಾನುಭವ ಪತ್ರಿಕೆಯನ್ನು ಮುಖ್ಯ ಆಧಾರವಾಗಿಟ್ಟುಕೊಂಡು ಸಣ್ಣ ಸಣ್ಣ ಪುಸ್ತಕಗಳನ್ನು ಹೊರಪಡಿಸಬೇಕೆಂದು ನಿಶ್ಚಯಿಸಿದ್ದೇವೆ. ಸ್ವಲ್ಪ ದಿವಸಗಳಲ್ಲಿಯೇ ನಾವು ಶಿವಾನುಭವದ ಸ್ವರೂಪ ಮತ್ತು ಬಸವೇಶ್ವರ ಮತ್ತು ಮಹಾದೇವಿಯಕ್ಕ ಇವರ ಚರಿತ್ರೆಗಳು ಇವುಗಳನ್ನೊಳಕೊಂಡ ಮೂರು ಗ್ರಂಥಗಳನ್ನು ಸ್ವತಂತ್ರವಾಗಿಯೇ ಮುದ್ರಿಸುವೆವು. ಇವು ಸಾಮಾನ್ಯ ಜನರಿಗೆ ಉಪಯುಕ್ತವಾಗಬಹುದೆಂದು ನಾವು ಭಾವಿಸಿದ್ದೇವೆ.

K ४७०७

ಈ ಗ್ರಂಥಗಳನ್ನಲ್ಲದೆ ಶಿವಾನುಭವದ ಆಳವಾದ ತತ್ವಗಳ ವಿವೇಚನೆ ಇರುವಂಥ ಲೇಖಗಳನ್ನು ನಾವು ಪತ್ರಿಕೆಯಲ್ಲಿ ಯಾವಾಗಲೂ ಪ್ರಕಟಿಸುತ್ತ ಹೋಗುವೆವು ಅವಾದರೂ ನಮ್ಮ ವಾಚಕರಿಗೆ ಉಪಯುಕ್ತವುಳ್ಳವುಗಳಾಗಬಹುದೆಂದು ತಿಳಿದಿದ್ದೇವೆ.

ಈ ವಿಧವಾಗಿ ೨೨ ವರ್ಷಗಳಿಂದಲೂ ಶಿವಾನುಭವ ಪತ್ರಿಕೆಯು ಕಾರ್ಯ ಮಾಡುತ್ತ ಬಂದಿದೆ. ಈ ಅವಧಿಯಲ್ಲಿ ಮುದ್ರಣದ ಅನೇಕ ತೊಂದರೆಗಳು ಅದಕ್ಕೆ ಬಂದರೂ ಅವುಗಳನ್ನು ನಾವು ಎದುರಿಸುತ್ತ ಬಂದಿದ್ದೇವೆ. ಸರಕಾರದ ನಿರ್ಬಂಧನೆಗಳು ಅದರ ಪ್ರಗತಿಗೆ ಬಹಳ ತಡೆಯನ್ನುಂಟು ಮಾಡುತ್ತಲಿವೆ. ಇದರಿಂದ ಪತ್ರಿಕೆಯಲ್ಲಿ ಅನೇಕ ಕುಂದು ಕೊರತೆಗಳಿರುವವೆಂಬುದನ್ನು ನಾವು ಬಲ್ಲೆವು. ಆದರೆ ಈ ಸ್ಥಿತಿಯು ಬಹಳ ದಿವಸ ಉಳಿಯಲಿಕ್ಕಿಲ್ಲ ಮತ್ತು ನಾಡಿನಲ್ಲಿ ಗ್ರಂಥ ಪ್ರಕಾಶಕರಿಗೆ ಉತ್ತಮ ದಿನಗಳು ಉದಯಿಸುವವು ಎಂದು ಹಾರೈಸಿ ನಮ್ಮ ಈ ಕಾರ್ಯದಲ್ಲಿ ತೊಡಗುವೆವು.

ಶಿವಾನುಭವ ಪತ್ರಿಕೆಯು ಕೇವಲ ಸಾಮಾನ್ಯ ವಾಚಕರ ಸಹಾನುಭೂತಿಯಿಂದಲೇ ನಡಿದಿದೆ. ಅದಕ್ಕೆ ವೀರಶೈವ ಸಮಾಜದಲ್ಲಿರುವ ಧನವಂತರ ಧಾರ್ಮಿಕವರ್ಗದವರ ಮತ್ತು ಸುಶಿಕ್ಷಿತರ ನೆರವು ಸಾಕಷ್ಟು ಇರುವದಿಲ್ಲ. ಅವರು ಇನ್ನುಮೇಲಾದರೂ ಈ ಪತ್ರಿಕೆಯು ಈ ವರೆಗೆ ಅವ್ಯಾಹತವಾಗಿ ನಡಿಸುತ್ತ ಬಂದ ಕಾರ್ಯಗಳನ್ನು ಲಕ್ಷಿಸಿ ಅವರು ಪತ್ರಿಕೆಗೆ ಸಹಾಯ ಮಾಡುವರೆಂದು ಅವರಿಗೆ ನಮ್ಮ ಸವಿನಯ ವಿನಂತಿ ಇದೆ.

ಫ. ಗು. ಹಳಕಟ್ಟಿ
ಸಂಪಾದಕ

# ವೀರಶೈವ ಧರ್ಮ ಮತ್ತು ಅದ್ವೈತ ಧರ್ಮ

(ಬರೆಹಗಾರರು—ಸ. ದ. ನಾಯಕ, ಎಮ್. ಎ. ಎಸ್. ಟಿ. ಸಿ ಹಾವೇರಿ)

ವೀರಶೈವರ ಮತ್ತು ಅದ್ವೈತಿಗಳ ತತ್ವಗಳಲ್ಲಿ ಸಾಮ್ಯತೆ ಇದ್ದರೂ ಕೆಲವು ಭಿನ್ನತೆಗಳನ್ನು ನಾವು ಕಾಣಬಹುದು. ಈ ಎರಡೂ ಪಂಥಾಭಿಮಾನಿಗಳು ಶಿವನೇ ಸರ್ವೋತ್ತಮನೆಂದೂ ಶಿವನೊಬ್ಬನೇ ದೇವರೆಂದೂ ಭಾವಿಸುತ್ತಾರೆ; ವಿಭೂತಿ ರುದ್ರಾಕ್ಷಿಗಳನ್ನು ಧರಿಸುತ್ತಾರೆ; ಶಿವಯೋಗವೇ ಮುಕ್ತಿಯೆಂದು ನಂಬುತ್ತಾರೆ. ಇನ್ನೂ ಕೆಲವು ವಿಷಯಗಳಲ್ಲಿ ಸ್ವಲ್ಪ ಸಾಮ್ಯತೆ ಕಂಡರೂ ಕೂಲಂಕಷವಾಗಿ ವಿಚಾರ ಮಾಡಿದರೆ ಎರಡೂ ಧರ್ಮಗಳ ನಡುವಿರುವ ಭಿನ್ನತ್ವವು ತಾನೇ ಹೊಳೆಯುವದು.

ಅದ್ವೈತಿಗಳಂತೆ ವೀರಶೈವರು ಈ ವಿಶ್ವವನ್ನು ಸಂಪೂರ್ಣವಾಗಿ ಸುಳ್ಳೆಂದು ನಂಬುವದಿಲ್ಲ. ವೀರಶೈವರಿಗೆ ಪ್ರಾರಂಭದಲ್ಲಿ ಈ ಜಗತ್ತಿನ ಅಸ್ತಿತ್ವದ ಬಗ್ಗೆ ನಿಜತ್ವದ ಕಲ್ಪನೆ ಬಂದರೂ ಕಾಯಕವೇ ಕೈಲಾಸ ಎಂದೂಹಿಸಿ ಕರ್ಮಮಾರ್ಗಾವಲಂಬಿಗಳಾದನಂತರ ಕರ್ಮ ಮಾರ್ಗದ ಪರಿಪಕ್ವದ ಫಲವಾಗಿ ವಿಶ್ವದ ಅನಸ್ತಿತ್ವದ ಕಲ್ಪನೆ ಬರತೊಡಗುವದು. ವೀರಶೈವರು ಪ್ರಾರಂಭದಲ್ಲಿ ಈ ಜಗತ್ತು ನಿಜವೆಂದು ತಿಳಿದು ನಡೆಯುತ್ತಾರೆ. ಹಿಂದುಗಡೆ ಜಗತ್ತಿನ ಕ್ಷಣಿಕತೆಯು ಅನುಭವವಾಗುವದು. ಹೀಗೆ ಕರ್ಮಮಾರ್ಗದಿಂದ ಪ್ರಾರಂಭವಾದ ವೀರಶೈವ ಧರ್ಮವು ಜ್ಞಾನಮಾರ್ಗದಲ್ಲಿ ಕೊನೆಗೊಳ್ಳುವದು ಮತ್ತು ಆ ಜ್ಞಾನದ ಪರಿಣಾಮವಾಗಿ ಕಾಯಕವೇ ಕೈಲಾಸವೆಂದು ಭಾವಿಸಿದ್ದ ವೀರಶೈವನು ಕೈಲಾಸವೇ ತಾನಾಗಿ ಹೋಗುವನು. ಅಲ್ಲಮಪ್ರಭುಗಳಂತಹ ಗುರುಗಳು ನಮಗೆ ಹೇಳಿರುವದು ಇದನ್ನೇ. ಕೇವಲ ಕರ್ಮಮಾರ್ಗ ನಿರತರಾದ ಬಸವಣ್ಣನವರಿಗೆ ಜ್ಞಾನಮಾರ್ಗದ ಹಿರಿಮೆಯನ್ನು ಹೇಳಿಕೊಟ್ಟರು. ಭಕ್ತಿ ಜ್ಞಾನಗಳೆರಡರದೂ ಬೆಳವಣಿಗೆಯನ್ನು ಪಡೆದ ಅಕ್ಕಮಹಾದೇವಿಯನ್ನು ಶ್ರೀಶೈಲಕ್ಕೆ ಕಳುಹಿಸಿ ಅವಳು ಶಿವನಲ್ಲಿ ಬಯಲಾಗಬೇಕೆಂದು ಉಪದೇಶಿಸಿದರು. ಭಕ್ತಿ ಇಲ್ಲದ ಜ್ಞಾನಿಗೆ ಭಕ್ತಿಯನ್ನೂ, ಜ್ಞಾನವಿಲ್ಲದ ಭಕ್ತನಿಗೆ ಜ್ಞಾನ

ವನ್ನೂ ಬೋಧಿಸುವ ಧರ್ಮವಿದು. ಅದ್ವೈತಿಗಳು ಮಾತ್ರ ಜ್ಞಾನ ಮಾರ್ಗವೊಂದನ್ನೇ ಅವಲಂಬಿಸುವರು. ನಾನೇ ಶಿವನೆಂದು ಅವರು ಸಾರಿದರೆ ಶಿವನ ಸತಿಯು ನಾನೇ ಎಂದು ವೀರಶೈವನು ಅನ್ನುತ್ತಾನೆ. ದಾಸಭಾವಕ್ಕೆ ಅದ್ವೈತದಲ್ಲಿ ಮಹತ್ವದ ಸ್ಥಾನವಿಲ್ಲ.

ಅದ್ವೈತ ಪಂಥದಲ್ಲಿ ಮಾಯೆಯನ್ನು ಗೆದ್ದು ಮುಕ್ತಿಯನ್ನು ಪಡೆಯು ಬೇಕೆಂಬ ವಿಚಾರವಿದೆ. ಜ್ಞಾನದಿಂದ ಜೀವನ್ಮುಕ್ತನಾದ ಯೋಗಿಯು ತನ್ನ ದೇಹವನ್ನು ತ್ಯಜಿಸಿ ಕೈಲಾಸಕ್ಕೆ ಹೋಗುವನೆಂದು ಅವರ ನಂಬುಗೆ. ಆದರೆ ವೀರಶೈವರು ಕೈಲಾಸವನ್ನು ಸೇರಲು ಬಯಸದೆ ಈ ಲೋಕ ದಲ್ಲಿಯೇ ಕೈಲಾಸವನ್ನು ಕಟ್ಟಲು ಹವಣಿಸುತ್ತಾರೆ. ಶರಣರ ಸೇವೆಯೇ ಅವರಿಗೆ ಪರಶಿವ ಸೇವೆ; ಶರಣನೇ ಅವರ ಲೋಕದ ಶಿವನು; ಅವ ರಿರುವ ಸ್ಥಳವೇ ಕೈಲಾಸ ಅಥವಾ ಶಿವಲೋಕವು; ಮತ್ತು ಮಾಯೆ ಯನ್ನು ಗೆಲ್ಲುವ ಗೊಡವೆಗೆ ವೀರಶೈವರು ಹೋಗುವದಿಲ್ಲ. ವೀರಶೈವರು ಶಕ್ತಿ ವಿಶಿಷ್ಟಾದ್ವೈತಿಗಳು. ಅವರು ಶಿವನ ಪತ್ನಿಯಾದ ಪಾರ್ವತೀದೇವಿಯೇ ಮಾಯೆಯೆಂದೂ ಮತ್ತು ಶಿವನು ಮಾಯೆಯ ಅಥವಾ ತನ್ನ ಶಕ್ತಿಯ ಸಹಾಯದಿಂದ ಈ ವಿಶ್ವವನ್ನು ರಚಿಸುವನೆಂದೂ ಭಾವಿಸುತ್ತಾರೆ. ಅವರು ಪಾರ್ವತಿ ಅಥವಾ ಮಾಯೆ ಅಥವಾ ಶಿವನ ಶಕ್ತಿಯನ್ನು ಬಿಟ್ಟು ಶಿವ ನೊಬ್ಬನನ್ನೇ ಪೂಜಿಸುವದಿಲ್ಲ. ಶಿವನನ್ನೂ ಮತ್ತು ಅವನ ಜೊತೆಗೆ ಅವನ ಶಕ್ತಿಯನ್ನೂ ಪೂಜಿಸುವರು. ಆದರೆ ಈ ಶಕ್ತಿಯು ಶಿವನಲ್ಲಿಯೇ ಅಡಗಿದೆ ಎಂದು ಅವರ ಮತವು ಅವರಿಗೆ ಸೂಚಿಸುತ್ತದೆ; ಹೀಗಾಗಿ ಅವರ ಮತವು ಶಕ್ತಿ ವಿಶಿಷ್ಟಾದ್ವೈತ ಮತವೆಂದು ಹೇಳಬಹುದು. ಶಿವನ ಮತ್ತು ಅವನ ಶಕ್ತಿಯಾದ ಪಾರ್ವತಿಯ ಏಕರೂಪತೆಯ ಭಾವನೆಯೇ ಅವರ ಅದ್ವೈತ.

ಆದರೆ ಅದ್ವೈತಿಗಳ ಅದ್ವೈತ ಬೇರೆಯಾಗಿದೆ. ಅವರು ಈಶ್ವರನು ಮಾಯೆಯ ಸಹಾಯದಿಂದ ಸೃಷ್ಟಿಯನ್ನು ನಿರ್ಮಿಸಿದರೂ ತಾನು ಆ ಶಕ್ತಿಯೊಡನೆ ಬೆರೆಯದೆ ದೂರವಾಗಿ ನಿಂತಿರುವನೆಂದು ತಿಳಿಯುತ್ತಾರೆ. ಮಾಯೆಯೇ ಪರವಸ್ತುವಾದ ಶಿವನ ದಾಸಿಯೆಂದು ಅವರ ನಂಬುಗೆ. ಈ ಮಾಯೆಯ ಪರದೆಯು ಹರಿದಾಗ ಶಿವನ ದರ್ಶನವಾಗುವದೆಂದು ಅವರ ಮತ. ಆದರೆ ತಾನೇ ಈಶ್ವರನೆಂದು ಅದ್ವೈತಿಯು ತಿಳಿಯು

ತ್ತಾನೆ. ವೀರಶೈವರ ಹಾಗೆ ಶಿವಯೋಗವೇ ಮುಕ್ತಿಯೆಂದು ತಿಳಿಯದೆ ಮಾಯೆಯನ್ನು ಗೆದ್ದು ಈಶ್ವರನ ಲೋಕಕ್ಕೆ ಹೋಗುವದು ಮುಕ್ತಿಯೆಂದು ಅವರ ತಿಳುವಳಿಕೆ. ಅದ್ವೈತಿಗಳೇನು ಕೇವಲ ಜ್ಞಾನ ಮಾರ್ಗಿಗಳಲ್ಲ; ಕೈಲಾಸವನ್ನು ಪಡೆಯಬೇಕಾದರೆ ಯಜ್ಞ-ಯಾಗಾದಿಗಳನ್ನು ಮಾಡಬೇಕು. ಇಂತಹ ಪುಣ್ಯಮಯವಾದ ಕರ್ಮಗಳಿಂದ ಚಿತ್ತವು ಶುದ್ಧವಾಗಿ ಜಗತ್ತಿನ ಮಿಥ್ಯತ್ವವು ಹೊಳೆಯುವದು. ಜ್ಞಾನಿಯಾದವನಿಗೆ ಕರ್ಮಗಳ ಅವಶ್ಯಕತೆ ಇಲ್ಲವೆಂದು ಅದ್ವೈತಿಗಳು ಭಾವಿಸಿದರೆ ಕರ್ಮಯಾಗದವನು ಎಂದೂ ಜ್ಞಾನಿಯಾಗಲಾರನೆಂದೂ ಮತ್ತು ಜ್ಞಾನಿಯಾದವನು ಕೂಡ ಪ್ರವೃತ್ತಿ ಮಾರ್ಗವನ್ನವಲಂಬಿಸಿ ಎಲ್ಲರನ್ನು ಉದ್ಧರಿಸಿ ಶಿವತತ್ವದ ಮಹತ್ವವನ್ನು ಎಲ್ಲರಿಗೆ ಉಪದೇಶಿಸಿ ಈ ಲೋಕವೇ ಕೈಲಾಸವಾಗುವಂತೆ ಮಾಡಬೇಕು ಎಂದು ವೀರಶೈವರ ವಿಚಾರ. ಇದಕ್ಕೆ ಅಲ್ಲಮಪ್ರಭುಗಳು, ಚೆನ್ನಬಸವಣ್ಣನವರು ಮತ್ತು ಮಗ್ಗೆಯ ಮಾಯಿದೇವ ಮೊದಲಾದ ಜ್ಞಾನಿಗಳು ಸಾಕ್ಷಿಯಾಗಿದ್ದಾರೆ. ಅದ್ವೈತವು ಒಪ್ಪಿಕೊಂಡ ಚಾತುರ್ವರ್ಣಗಳನ್ನೂ ಮತ್ತು ಯಜ್ಞ-ಯಾಗಾದಿಗಳಿಂದಾಗಬಹುದಾದ ಹಿಂಸೆಯ ತತ್ವವನ್ನೂ ವೀರಶೈವರು ವಿರೋಧಿಸುತ್ತಾರೆ. ಸಮತೆಯು ಅವರ ಧರ್ಮದ ತಿರುಳು. ಇದರ ಮೇಲಿಂದ ಅದ್ವೈತಮತವು ದೋಷಗಳಿಂದ ತುಂಬಿರುವದಾಗಿ ನಾವು ಭಾವಿಸುವ ಅವಶ್ಯಕತೆ ಇಲ್ಲ. ಜೀವ ಪರಮಾತ್ಮರ ಸಂಬಂಧ ದೇಹ ಜೀವರ ಸಂಬಂಧದ ಜ್ಞಾನವನ್ನು ಮೊದಲು ಮಾಡಿಕೊಂಡು ನಂತರ ಫಲಾಪೇಕ್ಷೆಯನ್ನು ತೊರೆದು ಕರ್ಮ ಮಾಡುವನು. "ಶರೀರ ಯಾತ್ರಾಪಿ ನ ಚ ಪ್ರಸಿದ್ಧ್ಯೇದ ಕರ್ಮಣಃ" ಎಂದು ಗೀತೆಯು ಹೇಳಿದಂತೆ ಅದ್ವೈತಿಯಾದರೂ ಕರ್ಮ ಸನ್ಯಾಸ ಮಾಡಿ ಜೀವಿಸಲಾರನು. ಜ್ಞಾನಿಯಾಗಿ ಕರ್ಮ ಮಾಡುವದೇ ಅದ್ವೈತಿಗೆ ಇಷ್ಟ; ಅಜ್ಞಾನಿಯಾಗಿ ಕರ್ಮ ಸನ್ಯಾಸವನ್ನೆಂದಿಗೂ ಮಾಡನು. ವೀರಶೈವನಂತೆ ಅದ್ವೈತಿಯೂ ಕರ್ಮಪ್ರಿಯನು. ಭಕ್ತರಾದ ವೀರಶೈವ ಜ್ಞಾನಿಗಳೂ ಸಿಗುವಂತೆ ಭಕ್ತರಾದ ಅದ್ವೈತ ಜ್ಞಾನಿಗಳೂ ಸಿಗುತ್ತಾರೆ. ಗುರಿ ಒಂದೇ ಹಾದಿ ಬೇರೆಯಷ್ಟೇ. "ಕರ್ಮಜ್ಯಾಯೋ ಹ್ಯಕರ್ಮಣಃ" ಎಂದರೆ ಅಕರ್ಮಕ್ಕಿಂತ ಕರ್ಮವೇ ಶ್ರೇಷ್ಠವೆಂದು ಅದ್ವೈತಿಯೂ ನಂಬುತ್ತಾನೆ.

ಇನ್ನು ಕೊನೆಯದಾಗಿ ಇಷ್ಟ ದೇವತೆಯ ವಿಚಾರ ಮಾಡೋಣ. ವೀರಶೈವರಿಗೆ ಇಷ್ಟದೇವತೆಯ ಅವಶ್ಯಕತೆ ಇಲ್ಲ. ಅವರು ಇಷ್ಟ ಲಿಂಗೋಪ

ದೇಶವನ್ನು ಪಡೆದು ಲಿಂಗ ಜೀವಿಗಳಾಗಿ ಬದುಕಿ ಲಿಂಗೈಕ್ಯರಾದ ಮಹನೀಯರನ್ನಾಗಲೀ ಮಹಿಳೆಯರನ್ನಾಗಲೀ ಆದರ್ಶವೆಂದು ಭಾವಿಸುತ್ತಾರೆ. ಇಷ್ಟಲಿಂಗವನ್ನು ಆಕಸ್ಮಾತ್ತಾಗಿ ಕಳೆದುಕೊಂಡು ಅದನ್ನು ತಿರುಗಿ ಪಡೆಯದೆ ಕಡುತರವಾದ ನೋವಿನಿಂದ ಜೀವತ್ಯಾಗ ಮಾಡಿದ ಅನೇಕ ಲಿಂಗ ಜೀವಿಗಳಾದ ಶರಣರ ಇತಿಹಾಸವನ್ನು ನಾವು ಕೇಳುತ್ತೇವೆ. ಲಿಂಗವು ಈಶ್ವರನ ಪ್ರತಿನಿಧಿ ಲಿಂಗ ಪೂಜೆಯು ಮೂರ್ತಿ ಪೂಜೆಯಲ್ಲ. ಲಿಂಗವು ಈಶ್ವರನ ಅಥವಾ ಪರಶಿವನ ಮೂರ್ತಿ ಅಲ್ಲ. ಅದು ವೀರಶೈವರಿಗೆ ಇಡೀ ವಿಶ್ವದ ಕಲ್ಪನೆ ತಂದುಕೊಡುವ ಪರಶಿವನ ಪ್ರತಿನಿಧಿ. ಅದು ವೀರಶೈವನ ಧ್ವಜ. ಆದರೆ ಇಂತಹ ಕಲ್ಪನೆಗೆ ಅದ್ವೈತಿಯಲ್ಲಿ ಎಡೆ ಇಲ್ಲ. ಅವನು ಶುದ್ಧ ಮೂರ್ತಿಪೂಜಕನು. ಅಂದರೆ ಆ ಪರಮಾತ್ಮನ ಅವತಾರಗಳೆಂದು ತಿಳಿಯಲ್ಪಟ್ಟ ದೈವಿಕ ವ್ಯಕ್ತಿಗಳನ್ನು ತನ್ನ ಇಷ್ಟದೇವತೆಯೆಂದು ಪೂಜಿಸುತ್ತಾನೆ. ಪರಶಿವನ ಲಿಂಗವನ್ನು ಅದ್ವೈತಿಯು ಪೂಜಿಸಿದರೂ ಆ ಲಿಂಗವು ಪರಶಿವನ ಮೂರ್ತಿಯೆಂದೂ ಆ ಲಿಂಗದಲ್ಲಿ ಈಶ್ವರನೇ ಅಡಗಿರುವನೆಂದೂ ಅವನ ಭಾವನೆ. ಶರಣಸತಿ ಲಿಂಗಪತಿ ಎಂದು ವೀರಶೈವನು ಭಾವಿಸಿದರೆ ಅದ್ವೈತಿಯು ತಾನೇ ದೇವರೆಂದು ಭಾವಿಸಿಕೊಂಡು ಜೀವನ್ಮುಕ್ತಾವಸ್ಥೆಯನ್ನು ಪಡೆಯುವನು. ಆದರೆ ಅದ್ವೈತಿಯು ವೀರಶೈವನ ಹಾಗೆ ಶಿವನೊಬ್ಬನನ್ನೇ ತನ್ನ ಯೋಗದ ಗುರಿಯೆಂದು ತಿಳಿದುಕೊಳ್ಳದೆ ಬೇರೆ ಬೇರೆ ಇಷ್ಟದೇವತೆಗಳನ್ನು ಅವನು ಮಾಡಿಕೊಳ್ಳಬಹುದು. ಶಿವನ ಮತ್ತು ವಿಷ್ಣುವಿನ ಮೂರ್ತಿ ಪೂಜೆಯನ್ನಲ್ಲದೆ ಈ ಇಬ್ಬರು ದೇವತೆಗಳ, ಅದೇಕೆ ಅನೇಕ ಸ್ತ್ರೀ ದೇವತೆಗಳ ಪೂಜೆಯನ್ನೂ ಅದ್ವೈತಿಯು ಮಾಡುತ್ತಾನೆ. ಪುರಾಣಗಳಲ್ಲಿ ಹೇಳಿದ ಎಲ್ಲ ದೇವತೆಗಳ ಪೂಜೆಗೆ ಬಹಳ ಸಂತೋಷದಿಂದ ಅವನು ಮುಂದುವರಿಯುತ್ತಾನೆ. ವೀರಶೈವ ಧರ್ಮಕ್ಕನುಸರಿಸಿ ಶಿವನ ಹೊರತಾಗಿ ಅನ್ಯ ದೈವವನ್ನು ಭಜಿಸುವದು ಹಾದರ. ಆದರೂ ವೀರಶೈವನು ಕೂಡ ಅದ್ವೈತಿಯಂತೆ, 'ದೇವರೊಬ್ಬ ನಾಮ ಹಲವು' ಎಂದು ನಂಬುತ್ತಾನೆ.

ಹೀಗೆ ಅದ್ವೈತ ಧರ್ಮದಲ್ಲಿ ವೀರಶೈವ ಧರ್ಮವು ಒಪ್ಪದ ಕೆಲವು ತತ್ವಗಳಿದ್ದರೂ ಎರಡೂ ಧರ್ಮಗಳಲ್ಲಿ ಅಜಗಜಾಂತರವಾದ ಅಂತರವಿದೆ ಎಂದು ಹೇಳಲು ಬರುವಂತಿಲ್ಲ. ಬಸವಣ್ಣನವರಾಗಲಿ, ಶಂಕರಾಚಾರ್ಯ

ರಾಗಲಿ ಒಮ್ಮೆ ಹಿಂದೂ ಸಂಸ್ಕೃತಿಗೆ ಬಂದಿದ್ದ ಕೊಡಲಿಯ ಪೆಟ್ಟನ್ನು ನಿವಾರಿಸಿದರು. ಈ ಎರಡೂ ಪಂಥಗಳು ಭಾರತ ಸಂಸ್ಕೃತಿಯನ್ನು ಬೆಳಿಸಿವೆ ಎಂದು ಇತಿಹಾಸವು ಹೇಳುತ್ತದೆ. ಆದರೆ ವಿಶ್ವಧರ್ಮದ ತತ್ವಗಳನ್ನು ಮಾತ್ರ ವೀರಶೈವ ಧರ್ಮದಲ್ಲಿ ನಾವು ಹೆಚ್ಚಾಗಿ ಕಾಣಬಹುದು; ಇದಲ್ಲದೆ ಇದು ಧರ್ಮದ ಹಾಗೂ ಸಾಹಿತ್ಯದ ಹೀಗೆ ಎರಡೂ ತರಹದ ಕ್ರಾಂತಿಗಳನ್ನು ಮಾಡಿತು. ವೀರಶೈವ ಮತವು ಹರ ಅಥವಾ ಶಿವನೊಬ್ಬನೇ ದೇವರು ಎಂದು ಪ್ರತಿಪಾದಿಸಿದರೆ ಅದ್ವೈತ ಮತವು ಹರಿ-ಹರರಲ್ಲಿ ಭೇದವಿಲ್ಲೆಂದು ಸಾರುತ್ತದೆ. ಹೀಗೆ ವಿಶ್ವಧರ್ಮದ ತತ್ವಗಳು ಅಡಗಿಕೊಂಡಿದ್ದ ಧರ್ಮಗಳು ಮಾನವ ಜಾತಿಯ ಕಲ್ಯಾಣಕ್ಕೆ ಸಾಧನವಾಗಬಹುದೆಂದು ಈ ಎರಡೂ ಪಂಥಗಳ ಬೆಳವಣಿಗೆಯು ಇತಿಹಾಸದಿಂದ ಹೊಳೆಯದಿರದು. ವೀರಶೈವ ಧರ್ಮವು ಸಾಮಾಜಿಕ ದೋಷಗಳನ್ನು ದೂರಮಾಡಿವ ಸಮತೆಯ ಧರ್ಮವಾಗಿದೆ.

---

## ನೂರೊಂದರ ಸಾರ.

(ಲೇಖಕ:— ಶ್ರೀಯುತ ಸಿ. ನಾ. ಮಹಾಂತಣ್ಣವರ ನಿವೃತ್ತ ಅಸಿ. ಡೆ. ಎಜ್ಯುಕೇಶನಲ್ಲ ಇನಸ್ಪೆಕ್ಟರರು ಮು. ಹುನ್ನೂರು ಸಂ. ಜಮಖಂಡಿ.)

ಚಿಕ್ಕವನಿದ್ದಾಗ ಮರಾಠಿಗರ ಇತಿಹಾಸವನ್ನೋದಿದ ನನಗೆ, ಇಂದಿಗೊಂದೆರಡು ವರ್ಷಗಳ ಹಿಂದೆ, (ಸತ್+ಆರ್ಯ) ಸಾತಾರೆ ಛತ್ರಪತಿಯ ಆಳಿಕೆಯೂ ಆ ಅರಸನ ಪಂಚಪ್ರಧಾನರ ಕಾರಭಾರವೂ ಅವರ ರಾಜ್ಯವಿಸ್ತಾರವೂ ಭಾವದಲ್ಲಿ ಬಿಂಬಿಸಿ, ಪಂಚಪ್ರಧಾನರಲ್ಲಿ ಮುಖ್ಯಮಂತ್ರಿ ಪದವಾದ ಪುಣ್ಯಪುರಿಯ (ಪುಣೆಯ) ಪ್ರವಾಸ ಮಾಡಬೇಕೆಂಬ ಹಂಬಲವುಂಟಾಗಿ, ನಾನು, ಕೂಡಚಿಯ ಸ್ಟೇಶನಕ್ಕೆ ಹೋಗಿ ರೇಲಗಾಡಿಯ ಪ್ರವಾಸ ಮಾಡುತ್ತ, ಮುಖ್ಯಾಮುಖ್ಯ ಸ್ಟೇಶನಗಳನ್ನು ನೋಡುತ್ತ, ಪುಣೆ ಸ್ಟೇಶನಕ್ಕೆ ಬಂದು, ಅಲ್ಲಿಯ ಜನದಟ್ಟಣೆಯ ಇಕ್ಕಟ್ಟಿನೊಳು ಇಳಿದು, ಸ್ಟೆಶನದ ಹೊರಗೆ ಬಂದು, ತರತರದ ಮೋಟಾರ,

ಬಸ್, ಟಾಂಗಾ, ಸಾಯಕಲ್‌ಗಳ ಸಂದಣಿಯೊಳಗಿಂದ ಪಾರಾಗಿ, ರಾಷ್ಟ್ರೆಯುವರ ವಾಡೆಯುನ್ನು ನೋಡಲಿಚ್ಛಿಸಿ, ರಾಜಮಾರ್ಗದಲ್ಲಿ ರಾಜಿಸುವ ವಾಹನಗಳನ್ನೂ ಎಡಬಲದ ಸಣ್ಣ ರಸ್ತೆಗಳಲ್ಲಿ ಬರಹೋಗುವ ಜನಸಂದಣಿಯುನ್ನೂ ನೋಡುತ್ತ, ಕಾಲ್‌ಕುದುರೆಯಿಂದ ಸಾಗುತ್ತ, ೨-೩ ಫರ್ಲಾಂಗದ ಮೇಲೆ, ನಾಲ್ಕೈದು ರಸ್ತೆಗಳು ಕೂಡಿದ ಕೇಂದ್ರ ಸ್ಥಾನ, ಆ ಸ್ಥಾನದಲ್ಲಿ ವಿರಾಜಿಸುವ ರಾಜಪುತ್ಥಳಿ, ಆ ಪುತ್ಥಳಿಯು ಸುತ್ತಲಿನ ಹೂಗಿಡಗಳ ಕುಂಡಲಿ, ಆ ಕುಂಡಲಿಗಳ ಸುತ್ತು ಮುತ್ತು ಗೊತ್ತುಗೊಳಿಸುವ ಸಿಪಾಯಿಗಳ ಕೈಸೊನ್ನೆ, ಆ ಸೊನ್ನೆಗಳಿಗೊಳಗಾಗಿ ಗಮಿಸುವ, ತಟ್ಟನೆ ತಿರುಗುವ, ತರತರದ ವಾಹನ, ಆ ವಾಹನಗಳು ಭರದಿಂದ ಬಂದು ಮಂದಿಗಳ ಮೇಲೆ ಸಾಗುವವೋ ಏನೋ ಎಂಬ ಗಡಿಬಿಡಿಯಲ್ಲಿ ಹೌಹಾರಿದವನಂತೆ, ಕಣ್ಣು ಮನ ಕಿವಿ ಕಾಲುಗಳಿಂದ ಎಡ, ಬಲ, ಹಿಂದೆ, ಮುಂದೆ ಸಾಗುವ, ಸರಕ್ಕನೆ ಸರಿದು ಪಾರಾಗುವ ಜನಪರಿಮಿತಿಯ ಪಥವಿಡಿದು, ರಾಷ್ಟ್ರೆಯುವರ ರಹದಾರಿಗೆ ಪ್ರಕೃತಿ ಪ್ರಾಣಗಳನ್ನುಳಿಸಿಕೊಂಡು ದಂಗಾಗಿ ನಿಂತು, ಇಂಥ ಇಕ್ಕಟ್ಟಿನ ಪ್ರಸಂಗದಲ್ಲಿ ಕಾಲು ಕಣ್ಣು ಕಿವಿ ನಾಲಿಗೆಗಳ ಉಪಯೋಗವು, ಎಷ್ಟರಮಟ್ಟಿಗಿರುವದೆಂಬದನ್ನು ಸ್ಪಷ್ಟವಾಗಿ ಮನಗಂಡೆನು.

ನೇತ್ರಂಗಳೇ ಜಗಚ್ಚಕ್ಷುಗಳೆಂದು ಭಾವಿಸಿ, ಭರದಿಂದ ನಡೆದು, ರಾಷ್ಟ್ರೆಯುವರ ವಾಡೆಯೊಳು ಪೊಕ್ಕು ರಾಜರೀತಿಗಳಿಗನುಸಾರವಾದ ಎಲ್ಲ ಸದನಗಳ ಸವಿಸ್ತಾರಗಳನ್ನು ನೋಡಿ, ಮಹಾದ್ವಾರದ ಹೊರಗೆ ಬಂದು, ಸಮಯವನ್ನೀಕ್ಷಿಸಲು ಹಗಲಿನ ಹನ್ನೊಂದು ಹೊಡೆಯಲು ಸಮೀಪಿಸಿತ್ತು. ಆಗ ಆಚಾರಾದಿ ಕ್ರಿಯೆಗಳಿಗನುಸಾರವಾದ ಶಾಂತಿಸದನಗಳನ್ನು ನೋಡಬೇಕೆಂಬ ಕುತೂಹಲವುಂಟಾಗಲು, ಎಡಭಾಗಕ್ಕೆ ತಲೆಬಾಗಿಲದ ಶಿರೋಭಾಗದಲ್ಲಿ "ಶಿವಶರಣ ಸಿಂಪೀ ಶಿವಣ್ಣ" ನಾಮಾಂಕಿತವಾದ ಲಿಂಗಮುದ್ರೆಯುನೊಳಗೊಂಡ ಹಲಿಗೆಯು ಹುಲುಬಿತು. ಅಷ್ಟರಲ್ಲಿ ಹಣೆಯೊಳಗೆ ಅಣಿಯಾದ, ತಿಳುವಾದ ತ್ರಿಪುಂಡ್ರಧಾರಣ, ಕೊರಳಲ್ಲಿ ಕರಣಾದಿಗಳನ್ನು ಹರಣಮಾಡಿದ, ಪಂಚಮುಖಗಳ ರುದ್ರಾಕ್ಷಿಗಳ ಕಂಠಮಾಲೆ, ಕುತ್ತಿಗೆಯೊಳು ಹತ್ತೆಯಾಗಿ ಸುತ್ತಿರ್ಪ, ಶುಭ್ರಚ್ಛಾಯೆಯಿಂದ ಶೋಭಿಸುವ ಲಿಂಗಾಂಗವಸ್ತ್ರ, ಮುಖದಲ್ಲಿ ಷಡಕ್ಷರ ಮಂತ್ರದಿಂದೊಡಗೂಡಿದ ನಾಲಿಗೆಯ ನಲಿದಾಟದ ಶಿವಶರಣನು, ಬಾಗಿಲದ ಬಾಹ್ಯ

ದೊಳು ಭರದಿಂದ ಬಂದು ಕರಮುಗಿದು ಶಿರಬಾಗಿ ಶರಣೆಂದೊಡನೆ, ನಾನು ಮುಂಬರಿದು ಮುಡಿಯಾಂತು ಅವನಡಿಗಳಿಗೆ ಪೊಡಮಟ್ಟು ಶರಣಶರಣಾರ್ಥಿಗಳಿಂದೊಡಗೂಡಿ, ಹರ್ಷಗೊಂಡು ಹಸನ್ಮುಖಿಯಾಗಿ ಶರಣನ ಸರಸಸಲ್ಲಾಪಗಳನು ಆಲಿಸಲು ಅಣಿಯಾದೆನು.

ಅವರ ಹಿಂದಿಂದೆ ಒಳಸೇರಿ ಕರಪಾದ ಮುಖಪ್ರಕ್ಷಾಲನಂಗೈದು, ಮಜ್ಜನದ ಮನೆ, ಮಡಿಯುಡುಪು ತೊಡಪುಗಳ ಮನೆ, ಪಂಚಪ್ರಸಾದಗಳ ಸಿದ್ಧಗೊಳಿಸುವ ಶುದ್ಧಮನೆಗಳನು ದೂರದಿಂದೀಕ್ಷಿಸಿ, ಮೇಲುಪ್ಪರಿಗೆಗೆ ಹೋಗಿ ನೋಡಲು, ಕೆಳಗಿದ್ದ ತ್ರಿವಿಧಾಂಗಗಳನನುಕರಿಸುವ ತ್ರಿವಿಧದ ಕೋಣೆಗಳಂತೆ, ಸತ್ಕಾಯಕದ ಕೋಣೆ, ಶಿವಪೂಜೆಯ ಕೋಣೆ, ಶಿವಾನುಭವದ ಕೋಣೆಗಳ ನೋಡಿ, ತ್ರಿವಿಧಮುಖವಾದ ತ್ರಿವಿಧ ಲಿಂಗಗಳ ಕೋಣೆಗಳೆಂದೇ ಭಾವಿಸಿದೆನು. ನಂತರ ಶಿವಣ್ಣನ ಆಜ್ಞೆಗೊಳಗಾಗಿ ಮಜ್ಜನಂಗೈದು, ಮಡಿಯ ವಸ್ತ್ರವನುಟ್ಟು ಮೇಲುಪ್ಪರಿಗೆಯ ಹತ್ತಿ, ಶಿವಪೂಜೆ ಗೃಹದೊಳು ಹೊಕ್ಕು ನೋಡಲು, ಮೇಲುಗದ್ದಿಗೆಯೊಳು ಆಸನಂಬಲಿಸಿ, ಮುಸುಕಿನೊಳು ಪ್ರಾಣಲಿಂಗಾನುಸಂಧಾನದೊಳಿರ್ದ ಚರಜಂಗಮ ಮೂರ್ತಿಗೆ ಸದ್ದಿಲ್ಲದ ಸಾಷ್ಟಾಂಗವೆರಗಿ ಶರಣನೊಡನೆ ಸಂಕ್ಷಿಪ್ತ ಶಿವಪೂಜೆಗೈದು ಕುಳಿತುಕೊಳ್ಳುವಷ್ಟರಲ್ಲಿ ಸ್ವಾಮಿಗಳ ತ್ರಿವಿಧಲಿಂಗಪೂಜೆ, ತ್ರಿವಿಧಲಿಂಗಾರ್ಚನೆಗಳು ತೀರಿದ ಬಳಿಕ ಶರಣನು ನಿಜಜಂಗಮನಿಂದ ಪಾದಾರ್ಚನೆಯ ಅನುಜ್ಞೆಯ ಪಡೆದು ತ್ರಿವಿಧ ಪೂಜೆಗಳಿಗಿಂಬುಗೊಟ್ಟು ಉಭಯಸ್ಥಲದವರು ಪಾದೋದಕವ ಸ್ವೀಕರಿಸಿದ ಬಳಿಕ ನನಗೊದಗಿದ ಸಮಯಾನುಕೂಲದ ಸಚ್ಚಿದಾನಂದ ನಿತ್ಯ ಪರಿಪೂರ್ಣಮಯ ಪಾದೋದಕ ಪ್ರಸಾದಗಳ ಅನುವರಿತು ಮುದವಾಂತು ಸ್ವೀಕೃತ ಪಾದೋದಕ ಪ್ರಸಾದಿಯಾಗಿ ಸ್ವಾಮಿಗಳ ಕರುಣಾನಂದ ರಸಪ್ರಸಾದಗಳ ಮಹಿಮೆಗಳೊಳು ಮನವಮುಳುಗಿದವನಾದೆನು. ಬಳಿಕ ಶಿವಶರಣ ಶಿವಣ್ಣ, ನಿರಂಜನ ಪ್ರಣವ ಸ್ವರೂಪಿಗಳಾದ ಜಂಗಮ ಮೂರ್ತಿಗಳೊಡನೆ ಶಿವಾನುಭವ ಕೋಣೆಯೊಳು ಶಿವಜ್ಞಾನಾನುಭವಾನಂದ ಪೂರಿತ ಪ್ರವಚನಂಗಳನು ಶ್ರವಣ ಮನನ ನಿಧಿಧ್ಯಾನಗಳಿಂದೊಡಗೂಡಿ ಆನಂದಾಶ್ರುಭರಿತನಾದೆನಲ್ಲದೆ, ಅವರಾಡಿದ ಮಂತ್ರಗೋಪ್ಯದ ಪದ್ಯಗಳನು ಪ್ರಸಾದಿಗಳ ಹೃದಯದೊಳೊಡಮೂಡಿಸ ಬಯಸಿದೆನು.

ತ್ರಿವಿಧಮುಖ, ತ್ರಿವಿಧತಾಣ, ತ್ರಿವಿಧ ಕೋಣೆಗಳೊಳು ।
ತ್ರಿವಿಧಲಿಂಗಾರ್ಚನೆಗೆ ತ್ರಿವಿಧಪೂಜೆ ॥
ತ್ರಿವಿಧಲಿಂಗಾರ್ಪಣಕೆ, ತ್ರಿವಿಧ ಪ್ರಸಾದಕ್ಕೆ ।
ತ್ರಿವಿಧ ಪರಿಣಾಮಿಯೂ ತಾನಾದ ಶರಣ ॥ ೧ ॥

ಅಂಗಕಳೆ ಲಿಂಗದಲಿ, ಲಿಂಗಕಳೆ ಅಂಗದಲಿ ।
ಅಂಗಲಿಂಗವೆಂಬ ಉಭಯುವಳಿದು ॥
ಮಂಗಳ ಮಹಾಜ್ಞಾನದ ಬೆಳಗಿನ ಬೆಳಗಿನೊಳಗೆ ।
ಕಂಗಳೇ ಪ್ರಾಣವಾಗಿರುತಿರ್ದನು ॥ ೨ ॥

ಇದಕ್ಕನುಸರಿಸಿ ನಿ. ಶ್ರೀ. ಪ್ರಭುದೇವರುಸುರಿದ ಲಿಂಗಾಂಗ ಸಾಮರಸ್ಯದ ಸಾರವನೆ ಸರಗೊಳಿಸಿದ ಲಿಂಗಸೂತ್ರದ ಸುಖದ ಸುಗ್ಗಿಯುನು ಉಗ್ಗಡಿಸದೆ ಇರೆನು.

ನೇತ್ರದೇವೋ ನ ಚ ಪರಂ । ಎಂದುದಾಗಿ । ಪರಶಿವ ನೇತ್ರವು ಪರಶಿವ ಬ್ರಹ್ಮವು. ನೇತ್ರಂ ಸರ್ವಜ್ಞಮೇವಪುಃ । ಎಂದುದಾಗಿ । ನೇತ್ರವು ಲಿಂಗಕ್ಕೆ ದೇಹವು. ನೇತ್ರಮಧ್ಯೇ ಭವೇಲ್ಲಿಂಗಂ । ಎಂದುದಾಗಿ । ನೇತ್ರವು ಲಿಂಗವ ಹೆತ್ತ ತಾಯಿ. ನೇತ್ರಮಧ್ಯೇ ಭವೇಚ್ಚುಂಬಂ । ಎಂದುದಾಗಿ । ನೇತ್ರವು ಇಷ್ಟಲಿಂಗದ ರಾಣಿವಾಸವು. ದ್ವಿನೇತ್ರಂ ಕುಚಯೋರ್ಲಿಂಗಂ । ಎಂದುದಾಗಿ ನೇತ್ರಗಳು ಪ್ರಾಣಲಿಂಗ ಹಸ್ತಂಗಳಿಗೆ ಹಿಡಿವ ಮೊಲೆಗಳು । ಎಂದುದಾಗಿ । ಚಕ್ಷುಸ್ಯಶಿವಪುಷ್ಪಂಚ । ಎಂದುದಾಗಿ । ನೇತ್ರಗಳು ಲಿಂಗಕ್ಕೆ ಅವಿರಳಪುಷ್ಪ. ಲಿಂಗಜ್ಯೋತಿಶ್ಚ ನೇತ್ರಯೋಃ । ಎಂದುದಾಗಿ । ನೇತ್ರವು ಲಿಂಗಕ್ಕೆ ಅಖಂಡ ದೀಪವು. ಲಿಂಗಾಭಿಷೇಕ ಚಕ್ಷುಸ್ಯ । ಎಂದುದಾಗಿ । ನೇತ್ರಗಳು ಲಿಂಗಕ್ಕೆ ಅಭಿಷೇಕ ಮಾಡುವ ಕಲಶಂಗಳು. ಲಿಂಗಸ್ಯ ಸಾಯಕಂ ನೇತ್ರಂ । ಎಂದುದಾಗಿ। ನೇತ್ರವು ಲಿಂಗವನೊಳಗು ಮಾಡಿಕೊಳ್ಳಲಿಕ್ಕೆ ಹಾಕುವ ಬಾಣವು. ಚಕ್ಷುರ್ಲಿಂಗಸ್ಯ ಚಕ್ಷುಷಿ । ಎಂದುದಾಗಿ । ನೇತ್ರವು ಲಿಂಗಮೂರ್ತಿಗಳಾದ ತ್ರಿನೇತ್ರಂಗಳಿಗಲ್ಲದೆ, ಮತ್ತೊಬ್ಬರಿಗೆ ಸಲ್ಲವು. ಇದು ಗುಹ್ಯಕ್ಕೆ ಗುಹ್ಯ. ಗೋಪ್ಯಕ್ಕೆ ಗೋಪ್ಯ. ರಹಸ್ಯಕ್ಕೆ ರಹಸ್ಯ. ಈ ನೇತ್ರ ಮಹಿಮೆಯುನು ಗುಹೇಶ್ವರನೇ ಬಲ್ಲನಲ್ಲದೆ ಕಣ್ಣಗೆಟ್ಟಣ್ಣಗಳೆತ್ತ ಬಲ್ಲರು ನೋಡಾ ॥ ೧ ॥

ವಿಶ್ವತೋ ಚಕ್ಷು ಖುತಂ। ಎಂದುದಾಗಿ । ಜಗವೆಲ್ಲ ನೇತ್ರಂಗಳಾಗಿಪ್ಪವು. ಜಗವೆಲ್ಲ ನೇತ್ರಂಗಳಾದರೆ, ನೇತ್ರದೊಳಗೆ ಉತ್ತಮ, ಮಧ್ಯಮ, ಕನಿಷ್ಠಂಗಳು ಏಕಾದವು? ಎಂದರೆ—ಜಗನ್ನೇತ್ರಕ್ಕೆ ಪ್ರಕಾಶವಾಗಿ, ತನ್ನನ್ನೇ ತೋರದೆ ಇದ್ದಂಥ ಜ್ಯೋತಿರ್ಲಿಂಗವನು ನೋಡಿದ ನೇತ್ರವು ಅಂಗನೇತ್ರವು. ಅದೇ ಉತ್ತಮ. ಖಗಮೃಗಫಣಿಕೀಟಕ ನೇತ್ರಗಳು ಉಭಯ ಕರ್ಮಕ್ಕೊಳಗು ಇಲ್ಲವಾಗಿ ದೃಷ್ಟದೋಷವಿಲ್ಲ. ಅದು ಮಧ್ಯಮ. ಅಪಾತ್ರಜೀವಿಗಳಾದ ಭವಿಗಳ ನೇತ್ರಂಗಳು ಉಭಯ ಕರ್ಮಕ್ಕೆ ಅನುಕೂಲವಾದ ಕಾರಣ, ಚರ್ಮಚಕ್ಷುವೆಂದೂ ತನ್ನ ತಾಸರಿಯದ ಗಾಢಾಂಧಕಾರವೆಂದೂ ಹೀನಗಳೆಂದೂ ವಿಷನೇತ್ರವೆಂದೂ ಮನ್ಮಥನ ಕೈಗೆ ಸಿಕ್ಕ ನೀಲೋತ್ಪಲ ಬಾಣವೆಂದೂ ತಾಮಸಾಗ್ನಿಯೆಂದೂ ನೇತ್ರೇಂದ್ರಿಯವೆಂದೂ ಶಿವಲಾಂಛನಧಾರಿಗಳ ಕೆಡಿಸುವ ಮಹಾಪಾತಕ ದೃಷ್ಟಿಗಳೆಂದೂ ವಿಷಘಾಳಿಯೆಂದೂ ಹೇಳಲ್ಪಟ್ಟಿವೆ. ಇದನರಿದು ಶಿವಭಕ್ತರು ಲಿಂಗವಿಲ್ಲದವರನ್ನು ನೋಡುವದಿಲ್ಲ. ಅವರು ನೋಡುವಂತೆ ಶಿವಾರ್ಚನೆ ಶಿವಾರ್ಪಣವ ಮಾಡುವದಿಲ್ಲ. ಅವರ ಮಹಾಪಾತಕಂಗಳು ತಮ್ಮನ್ನು ಸೋಂಕೇವೆಂದು ಮೇರುಗಿರಿಯ ಹಿಡಿದು, ಅಘೋರಾಸ್ತ್ರದಲ್ಲಿ ದಹಿಸಿ, ಗುಹೇಶ್ವರ ಲಿಂಗವನು ಕೂಡುವರು ॥ ೨ ॥

ಕರಕಮಲದಲ್ಲಿರ್ದ ಇಷ್ಟಲಿಂಗದ ಗರ್ಭದೊಳು ತನ್ನಂಗವನಡಗಿಸಿ ಎರಡು ನೇತ್ರಗಳೊಂದಾದ ಲಲಾಟನೇತ್ರವೆಂಬ ನಿಟಿಲಾಕ್ಷದಲ್ಲಿ ನಿರಂಗವಾದ ಇಷ್ಟಲಿಂಗವನೊಳಗೊಂಡುದೀಗ ಲಿಂಗಾಂಗವು. ಆ ಇಷ್ಟಲಿಂಗವು ನೇತ್ರದರ್ಪಣದಲ್ಲಿ ಪ್ರತಿಬಿಂಬವಾಗಿ ಮನೋನೇತ್ರಕ್ಕೆ ಒಂದೆರಡಾಗಿ ಕಾಣಲ್ಪಟ್ಟಿತ್ತುದೀಗ ಪ್ರಾಣಲಿಂಗವು. ಆ ಪ್ರಾಣಲಿಂಗ ಹಸ್ತಂಗಳೆಂಬೆರಡರಲ್ಲಿ ನೇತ್ರದ್ವಯವೆಂಬ ನಿರಂಗಕುಚಗಳೆರಡನು ಹಿಡಿದುದೀಗ ಲಿಂಗಾಂಗವು. ರೂಪುರೇಖೆ ವಿಲಾಸ ವಿಭ್ರಮಕಳೆ ಲಾವಣ್ಯಸ್ವರೂಪವಾದ ಪರಬ್ರಹ್ಮಮೂರ್ತಿಯ ಮುದ್ದು ಮುಖದ ಆಧಾರದಲ್ಲಿ ಹುಟ್ಟಿದ ಓಂಕಾರ ಪ್ರಣಮನಾದಾಮೃತವ ತಾ ಚುಂಬನವ ಮಾಡಲಿಕ್ಕೆ ಚಿಚ್ಛಕ್ತಿರೂಪವಪ್ಪ ತನ್ನ ಮುದ್ದು ಮುಖದ ಆಧಾರದಲ್ಲಿ ಹುಟ್ಟಿದ ನಕಾರಾದಿ ಪಂಚಪ್ರಣಮಂಗಳು. ಆ ಪಂಚಬ್ರಹ್ಮವ ತಾನೇಕೀಕರಿಸಲು ಅದುವೇ ಲಿಂಗಾಂಗ ಸಂಗ ಸಮರಸವು. ಇದು ಶರಣಸತಿ ಲಿಂಗಪತಿನ್ಯಾಯವು. ಇದು ತ್ರಿತನು ತ್ರಿವಿಧ ಲಿಂಗಕ್ಕೆ ಅರ್ಪಿಸುವ ಕ್ರಮವು. ತನ್ನಲ್ಲಿ ನನ್ನ

ತೋರಿ, ನನ್ನಲ್ಲಿ ತನ್ನ ತೋರಿದುದಾಗಿ, ನಾನು ನೀನೆಂಬುದಿಲ್ಲ. ನೀನು ನಾನೆಂಬುದಿಲ್ಲ. ತಾನಾದುದು. ಬಯಲು ಬಯಲು ಕೂಡಿದ ಹಾಗೆ ಮಾತು ಮಾತು ಕಲಿತ ಲಿಂಗೈಕ್ಯವು. ಗುಹ್ಯಕ್ಕೆ ಗುಹ್ಯ. ಗೋಪ್ಯಕ್ಕೆ ಗೋಪ್ಯ. ರಹಸ್ಯಕ್ಕೆ ರಹಸ್ಯವಿದಂ ಗುಹೇಶ್ವರ ಬಲ್ಲನಲ್ಲದೆ ಕಣ್ಣಗೆಟ್ಟ ಅಣ್ಣಗಳು ಇದನೆತ್ತ ಬಲ್ಲರು ನೋಡಾ ॥೩॥

ಎರಡು ನೇತ್ರಗಳೊಂದಾದ ಫಾಲನೇತ್ರವು ಇಷ್ಟಲಿಂಗಗೋಳಕಕ್ಕೆ ಕೂಟ, ಒಂದು ಲಿಂಗ ಎರಡಾದ ಪ್ರಾಣಲಿಂಗ ಹಸ್ತಂಗಳಿಗೆ, ಎರಡು ನೇತ್ರಂಗಳೆಂಬ ನಿರಂಗ ಕುಚಗಳೆರಡು, ಗುಪ್ತಗಣ್ಣು ಒಂದು, ಈ ತ್ರಿವಿಧವೇ ತ್ರಿಕೂಟವೆಂಬ ಹೆಸರಾಯಿತ್ತು. ತ್ರಿಕೂಟ ಶಾಂಭವಪುರ ಮಧ್ಯದಲ್ಲಿ ಜ್ಯೋತಿರ್ಲಿಂಗವು ತಾನು ಏಕಸಮರಸವಾದ ಬಳಿಕ ತನುತ್ರಯ ವಿಕಾರವ ಹೊದ್ದಲಾಗದು. ಹೊದ್ದಿದೊಡೆ ಮೊಸಲೊಗರವ ನಾಯಿ ಮುಟ್ಟಿದಂತಾಯಿತ್ತು. ಆ ಆತ್ಮ ಪದಾರ್ಥವು ಲಿಂಗಕ್ಕೆ ಸಲ್ಲದು. ಆವರು ಮಾಡುವ ಉಪಚಾರಂಗಳು ಲಿಂಗಕ್ಕೆ ಸಲ್ಲವು. ಅವರ ತೆರನೆಂತಾಯಿತ್ತೆಂದಡೆ ಜನ್ಮ ದರಿದ್ರನು ನಿಕ್ಷೇಪವ ಕಂಡು ಹೋಗಲಾಡಿಸಿ ದಿಗಿಲು ಬಿದ್ದು ಸತ್ತಂತಾಯಿತ್ತು. ಅಂತಹ ದುರ್ಭಾಗ್ಯನ ದುರ್ಮರಣವ ಕಂಡು, ನಮ್ಮ ಶರಣರು ತನುತ್ರಯ ವಿಕಾರ ಹೊದ್ದದೆ ಲಿಂಗ ನಿಕ್ಷೇಪದಲ್ಲಿ ನಿರ್ವಯಲರಾಗಿ ಮನ್ಮಥನ ರತಿಯೆಂಬ ನರಕದಲ್ಲಿ ಬೀಳದೆ ಅಕ್ಷಯ ಸುಖವಾದರು ಗುಹೇಶ್ವರ ಲಿಂಗದಲ್ಲಿ ॥೪॥

ಸ್ಥೂಲದೇಹ ಸುಖ ಹೊಂದಿದವರು ಸೂಕರನ ಹಾಗೆ, ಸೂಕ್ಷ್ಮದೇಹ ಸುಖ ಹೊಂದಿದವರು ಗಜದ ಹಾಗೆ, ಕಾರಣದೇಹದಲ್ಲಿ ಹೊಂದಿದವರು ರಾಜಹಂಸನ ಹಾಗೆ. ಅದೆಂತೆಂದೊಡೆ ಸ್ಥೂಲದೇಹವು ಮಾಂಸಸ್ವರೂಪವು, ಆ ದೇಹಕ್ಕೆ ಬಿಂದು ಮಾತ್ರ ಸುಖವು, ಪರ್ವತದಷ್ಟು ದುಃಖವು. ಪಂಚಭೂತಸಂಗಿಯಾದ ಕಾರಣ ಸೂಕ್ಷ್ಮದೇಹವು ದಿವ್ಯಾಮೃತ ಸ್ವರೂಪವು. ಆ ದೇಹಕ್ಕೆ ಬಿಂದು ಮಾತ್ರ ದುಃಖವು. ಪರ್ವತದಷ್ಟು ಸುಖವು, ಆತ್ಮಸಂಗಿಯಾದ ಕಾರಣ. ಕಾರಣದೇಹವು ದಿವ್ಯ ಸದಾಮೃತ ಪುಷ್ಪ ಗಂಧ ಸ್ವರೂಪ. ಆ ದೇಹಕ್ಕೆ ದುಃಖವಿಲ್ಲದ ಸುಖವು ಲಿಂಗಸಂಗಿಯಾದ ಕಾರಣ. ಇಂತಪ್ಪ ಲಿಂಗಸಂಗದಿಂದ ಅಖಂಡ ಸುಖ ತಾನಾಗಬೇಕಾದಡೆ ಪಿಂಡಾದಿ ಜ್ಞಾನ ಶೂನ್ಯಾಂತವಾದ ನೂರೊಂದು ಸ್ಥಲಗಳ ಕರತಳಾಮಳಕವಾಗಿ ತಿಳಿದು ಮೇಲಾದ ಜ್ಞಾನಶೂನ್ಯ ಸ್ಥಲದಲ್ಲಿ ನಿಂದು ಪಿಂಡ

ಜ್ಞಾನ ಸ್ಥಲಂಗಳ ಮಾರ್ಗವ ತಪ್ಪದೆ ನಡೆಯಲ್ಕೆ ಲಿಂಗಸಂಗಿಯಾಗಿ ಪಂಚಭೂತ ವಿಕಾರ ಪರ್ವತಕ್ಕೆ ವಜ್ರಾಯುಧನಾದನು ಶರಣನು. ಆತ್ಮ ಸಂಗಿಯಾಗಿ ನಡೆಯಲ್ಕೆ ಆ ಪಂಚಭೂತ ವಿಕಾರ ಪರ್ವತಕ್ಕೆ ಕಷ್ಟಾಯು ಧನಾಗಿ ನಿಂದರು ಮುನಿಗಳು. ದೇಹಸಂಗಿಯಾಗಿ ನಡೆಯಲ್ಕೆ ಆ ಪಂಚ ಭೂತವಿಕಾರಕ್ಕೆ ಬೆಂಡಾಯುಧವಾಗಿ ನಿಂದರು ನರಸುರರುಗಳು. ನಿಮ್ಮ ಶರಣರು ಲಿಂಗಸಂಗದಿಂದ ಅಂಗಗುಣ ವಿಕಾರವೆಂಬ ಸಮುದ್ರವ ದಾಟು ವರು. ಶರಣರಲ್ಲದವರು ಎಷ್ಟು ಓದಿದರೂ ಎಷ್ಟು ಕೇಳಿದರೂ ದೇಹ ಗುಣ ವಿಕಾರವೆಂಬ ಇರವಿನ ಮೂತ್ರದಲ್ಲಿ ಪ್ರಳಯವಾಗುವರು ಗುಹೇ ಶ್ವರನರಿಯದೆ ॥ ೫ ॥

ಅವನಿಯಪ್ಪಗ್ನಿ ಮಾರುತ ವ್ಯೋಮ ಆತ್ಮರೆಂಬಿವನಳಿದು, ಚಿತ್ಪೃಥ್ವಿ, ಚಿಜ್ಜಲ, ಚಿದಗ್ನಿ, ಚಿತ್ಪವನ, ಚಿದ್ವ್ಯೋಮ, ಚಿದಾತ್ಮರೆಂದೆನಿಸಿ, ಚಿದಂ ಗನಾಗಿ ಚಿಲ್ಲಿಂಗಗಳ ಅನುಸಂಧಾನದಿಂದಪಗುವ ದೃಢವಾದ ಲಿಂಗಾಂಗ ಸಾಮರಸ್ಯದ ಕುರುಹು ಇದು.

ಜನ್ಮಾಂತರ ಶರೀರಗಳನ್ನುಂಟುಮಾಡುವ ವಾಸನೆ, ಕರ್ಮ, ವಿದ್ಯೆ ಗಳಲಿ ವಾಸನೆಯನು ಓಡಿಸುವ, ಕರ್ಮವನು ಮರ್ದಿಸುವ ವಿದ್ಯೆಯನು ಹದ್ದುಪಾರು ಮಾಡುವ ಹುಟ್ಟುಸಾವುಗಳನತಿಗಳೆವ ನಿಜಲಿಂಗಾಂಗ ಸಾಮರಸ್ಯದ ರಹಸ್ಯವಿದು.

ಎಡಗಣ್ಣಿನೊಳಗಾದ ಪಾರಮಾರ್ಥಿಕ ಪಥಕ್ಕೆ ಸಹಾಯಕಾರಿ ಯಾದ, ಮಿಥ್ಯ ಸಂಸಾರಸಾಗರದ ಸ್ವಯ ನೋಟ, ಬಲಗಣ್ಣಿನೊಳಗಾದ ಪಾರಮಾರ್ಥಿಕ ಪ್ರಪಂಚದ ನಿತ್ಯ ಸುಧಾಸಾಗರದ ಚರನೋಟ, ಈ ಉಭಯ ನೋಟನೊಳಗೊಂಡ ತ್ರಿಕೂಟವಾದ ಪರನೋಟವೆಂದೆನಿಸಿದ ಮಹಾಕೂಟದ ಮಹಿಮೆಯನರಿದ ಜಾಣನು, ಲೌಕಿಕ ಪಾರಮಾರ್ಥವೆ ರಡನು ಮಾಣದೆ ಸಾಗಿಸುವ ಸನ್ಮಾರ್ಗದ ಸದಾನಂದವಿದು.

ಎರಡೆಂಭತ್ತು ಕೋಟಿ ವಚನಂಗಳೊಳಡಗಿಸಿದ, ೨೧೬ ಲಿಂಗ ಸಕೀ ಲಂಗಳು, ಇನ್ನೂರಾಹದಿನಾರರೊಳಡಗಿದ ನೂರೊಂದು ಸ್ಥಲಗಳು, ನೂರೊಂದರೊಳು ಅಡಕಾದ ಷಟ್‌ಸ್ಥಲಂಗಳು, ಷಟ್‌ಸ್ಥಲಗಳನೊ ಳಗೊಂಡ ಮೂರಾದ ನಿಃಕಲ, ನಿಶ್ಶೂನ್ಯ, ನಿರಂಜನಲಿಂಗ, ಸ್ಥಲಗಳು

ಈ ಮೂರರ ಮೂರಿದ ನೂರರ ಮೇಲೆ ಒಂದಾದ ಜ್ಞಾನ ಶೂನ್ಯಸ್ಥಲದ ಸಂಧಾನದ ಸುಧೆಯಿದು.

ಆಚಾರಲಿಂಗದ ಗಾತ್ರ, ಗುರುಲಿಂಗದ ಗೋತ್ರ, ಶಿವಲಿಂಗದ ಕ್ಷೇತ್ರ, ಜಂಗಮಲಿಂಗದ ಸೂತ್ರ, ಪ್ರಸಾದಲಿಂಗದ ಸ್ತೋತ್ರ, ಮಹಾಲಿಂಗದ ನೇತ್ರ ಪ್ರಕಾಶವನೊಳಗೊಂಡ ಮಹಾಪ್ರಕಾಶದ ಕಿರಣಂಗಳಾದ ನೂರೊಂದರ ಪರಿಚರಿತ, ನೂರೊಂದರೊಳು ನುರಿತ, ನೂರೊಂದರೊಳು ಬೆರೆತ, ನೂರೊಂದರ ಸಾರಸುಖ ಸಾಮ್ರಾಜ್ಯವಿದು.

---

# ಅಸ್ಪೃಶ್ಯತಾ ನಿರ್ಮೂಲನ.

(ಬರೆದವರು:– ಶ್ರೀ. ಅನ್ನದಾನೀಶ್ವರ ವಿರಕ್ತಮಠ ಮು. ರಾಣೇಬಿನ್ನೂರ.)

ಬನವಸಿ ಮಧುಕೇಶ್ವರ ದೇವಸ್ಥಾನದಲ್ಲಿ ಬ್ರಾಹ್ಮಣರಲ್ಲದ ಇತರ ಸವರ್ಣಿಗಳಾಗಲಿ, ಅತಿವರ್ಣಾಶ್ರಮದ ಷಟ್‌ಸ್ಥಲ ಸಿದ್ಧಾಂತಿಗಳಾದ ಲಿಂಗಾಂಗಿಗಳಾಗಲಿ ಒಳಗೆ ಹೋಗಕೂಡದೆನ್ನುವ ಕಾಲವೊಂದು ಇತ್ತು. ಆಗ ಕೋರ್ಟು ಕಚೇರಿಗಳಲ್ಲಿ ನ್ಯಾಯಾಧೀಶರು ಸಹ ದೇವರ ಗುಡಿಗಳಲ್ಲಿ ಪ್ರವೇಶಮಾಡಕೂಡದೆಂದು ನಿರ್ಣಯ ಕೊಡುತ್ತಿದ್ದರು. ಬನವಾಸಿಯೊಂದೇ ಅಲ್ಲ; ಇತರ ಪ್ರಸಿದ್ಧ ದೇವಾಲಯಗಳಲ್ಲಿಯೂ ಇದೇ ಪರಿಸ್ಥಿತಿಯು ಇತ್ತು.

ಆದರೆ ಈಗ ಕಾಲಪರಿಸ್ಥಿತಿ ಪಲ್ಲಟವಾಗಿ ಹೋಯಿತು. ಬ್ರಾಹ್ಮಣರಲ್ಲದ ಸವರ್ಣಿಗಳಾಗಲಿ, ವರ್ಣಾಶ್ರಮ ಮೀರಿದ ಲಿಂಗಾಂಗಿಗಳಾಗಲಿ ಅಸ್ಪೃಶ್ಯರೆಂದು ವರ್ಣಾಶ್ರಮಿಗಳಿಂದ ಕರೆಯಲ್ಪಡುತ್ತಿದ್ದವರಾಗಲಿ ಅನಿರ್ಬಂಧವಾಗಿ ದೇವಾಲಯಗಳಲ್ಲಿ ಸ್ವತಂತ್ರವಾಗಿ ಪ್ರವೇಶವಾಗಬಹುದು. ಈ ಬಗ್ಗೆ ಕಾಯಿದೆ ಮಂಡಲದಲ್ಲಿ ಮಸೂದೆ ಕೂಡಾ ಪಾಸಾಗಿ ಹೋಯಿತು.

ಈ ಮಸೂದೆಯು ಮುಂಬೈ ಅಸೆಂಬ್ಲಿಯಲ್ಲಿ ಬಂದಾಗ ಪುಣೆಯ ವರ್ಣಾಶ್ರಮ ಸ್ವರಾಜ್ಯ ಸಂಘದವರು ವಿರೋಧಮಾಡಲು ಶಿಷ್ಟಮಂಡಲ ತೆಗೆದುಕೊಂಡು ಹೋದ ಕೆಲಸವನ್ನು ವರ್ತಮಾನ ಪತ್ರಗಳಿಂದ ತಿಳಿದಿರಬ

ಹುದು. ವರ್ಣಾಶ್ರಮವಾದಿಗಳಿಗೆ ಈ ಮಸೂದೆಯಿಂದ ವಜ್ರಾಘಾತವಾಗಬಹುದಲ್ಲವೇ? ಯಾವ ಕಷ್ಟವಿಲ್ಲದೆ ಅನಾಯಾಸವಾಗಿ ಶ್ರೇಷ್ಠತ್ವ ಸಿಕ್ಕರೆ ಒಲ್ಲೆನೆನ್ನುವವರಾರು? ಸಾವಿರಾರು ವರ್ಷಗಳಿಂದ ಅಸ್ಪೃಶ್ಯರೇ ಮುಂತಾದ ಹಿಂದುಳಿದವರನ್ನು ದಾಸ್ಯ ಪಂಕದಲ್ಲಿ ತುಳಿದು ಯಾವ ಯೋಗ್ಯತೆಯೂ ಇಲ್ಲದೆ ಕೇವಲ ಜನ್ಮದಿಂದ, ಜಾತಿಯಿಂದ ಅಧಿಕಾರ, ಧನ, ಪ್ರತಿಷ್ಠೆಗಳನ್ನು ಅನುಭವಿಸಿದವರು ಈ ಮಸೂದೆಯನ್ನು ಧಿಕ್ಕರಿಸುವದು ಸ್ವಾಭಾವಿಕವಾಗಿದೆ. ಹಾಗಾದರೆ ಮಸೂದೆಯು ಉಪಯೋಗವಿಲ್ಲವೇ? ಅಸ್ಪೃಶ್ಯರಿಗೆ ನಾಗರಿಕ ಹಕ್ಕುಗಳನ್ನು ಕೊಡುತ್ತಾರಾದ್ದರಿಂದ ಮಸೂದೆಯು ಸ್ವಾಗತಾರ್ಹವಾಗಿಯೇ ಇದೆ. ಆದರೆ ಅಸ್ಪೃಶ್ಯತೆಯ ನಿರ್ಮೂಲನವನ್ನೇ ಮಾಡುವ ಯೋಜನೆಯನ್ನ ಇನ್ನು ಜನತಾ ಸರಕಾರವು ಕೈಕೊಳ್ಳಬೇಕು.

ರೋಗದ ಮೂಲ ಕಾರಣವನ್ನು ಕಂಡು ಹಿಡಿದು ಅದನ್ನು ನಿವಾರಿಸುವದೇ ರೋಗ ನಿವಾರಣೆಯ ಮುಖ್ಯೋಪಾಯವಲ್ಲವೇ? ಅಸ್ಪೃಶ್ಯತೆಯು ಎತರಿಂದ ಹುಟ್ಟಿದೆ? ವರ್ಣಾಶ್ರಮ ಪದ್ಧತಿಯಿಂದ. ವರ್ಣಾಶ್ರಮದ ಕಲ್ಪನೆಯು ಇರುವ ವರೆಗೆ ಅಸ್ಪೃಶ್ಯತೆಯು ಇರತಕ್ಕದ್ದೇ ಆಗಿದೆ. ವರ್ಣಾಶ್ರಮದ ಸಂತಾನವಾಗಿರುವ ಈ ಅಸ್ಪೃಶ್ಯತೆಯನ್ನು ನಿರ್ಮೂಲನ ಮಾಡಲೇಬೇಕು.

## ಉಪಾಯ.

ಮನುಸ್ಮೃತಿಯಲ್ಲಿಯ ವರ್ಣಾಶ್ರಮ ಪದ್ಧತಿಯನ್ನೇ ತೆಗೆದು ಹಾಕುವದು ಮೊದಲನೇ ಉಪಾಯ. ಈಗಿನ ಹಿಂದೂ ಲಾ ಎಂಬ ಕಾಯಿದೆ ಪುಸ್ತಕವನ್ನು ಬದಲಾವಣೆ ಮಾಡಲಿಕ್ಕೆ ಬೇಕು. ಪ್ರತಿಯೊಂದು ಹಳ್ಳಿಯಲ್ಲಿ ಊರ ಹೊರಗಿರುವ ಹೊಲಗೇರಿಗಳು ಹೋಗಿ ಊರೊಳಗೆ ಆದಿ ಹಿಂದುಗಳು ಇರುವಂತಾಗಬೇಕು. ಅವರೊಡನೆ ಸಹ ಭೋಜನ ಮತ್ತು ಶರೀರ ಸಂಬಂಧಗಳು ಸ್ವತಂತ್ರವಾಗಿ ನಡೆಯಲಿಕ್ಕೆ ಬೇಕು. ಇದಕ್ಕೆ ವಿರೋಧವಾಗಿರುವ ಧರ್ಮಶಾಸ್ತ್ರಗಳನ್ನು ಬದಲಿಸಲಿಕ್ಕೆ ಬೇಕು. ಅಸ್ಪೃಶ್ಯ ಎಂಬ ಹೆಸರು ಹೋಗಿ ಅವರು ಒಂದು ಸಮಾನತೆಯ ಸಮಾಜದಲ್ಲಿ ಬಂದು ಉಚ್ಚ ಸಂಸ್ಕೃತಿಯಲ್ಲಿ ಬಾಳುವಂತಾಗುವ ವರೆಗೆ ಅಸ್ಪೃಶ್ಯತಾ ನಿರ್ಮೂಲನವಾಗುವದೇ ಇಲ್ಲ. ಲಿಂಗಾಂಗ ಸಾಮರಸ್ಯ

ಸಂಸ್ಕೃತಿಯು ಅಂಥ ಉಚ್ಚ ಸಂಸ್ಕೃತಿಯು. ಆ ಸಂಸ್ಕೃತಿಗನುಸರಿಸಿ ಒಂದು ಸಮಾನತೆಯ ಸಮಾಜವೂ ಇದೆ. ಆ ಸಮಾಜವು ಸಮಾನ ಹಕ್ಕು ಬಾಧ್ಯತೆಗಳನ್ನೂ ಕೊಡಬಲ್ಲದು. ೮೦೦ ವರ್ಷಗಳ ಹಿಂದೆಯೇ ಲಿಂಗಾಂಗ ಸಾಮರಸ್ಯ ಸಂಸ್ಕೃತಿಯ ಮೂರ್ತಿಮಂತ ಪ್ರತಿನಿಧಿಯಾಗಿದ್ದ ಬಸವಣ್ಣನು ಅಸ್ಪೃಶ್ಯತೆಯ ನಿರ್ಮೂಲನವನ್ನು ಮಾಡಿ ಜಗತ್ತಿಗೆ ದಾರಿ ತೋರಿ ಹೋಗಿರುವನು.

## ಐತಿಹಾಸಿಕ ಸಂಗತಿ.

ಅಸ್ಪೃಶ್ಯತಾ ನಿರ್ಮೂಲನ ಮಾಡುವ ಕಾರ್ಯದಲ್ಲಿಯೇ ಬಸವಣ್ಣನು ತನ್ನ ಪ್ರಾಣಾರ್ಪಣೆ ಮಾಡಿರುವ ಐತಿಹಾಸಿಕ ಘಟನೆಯನ್ನು ನೋಡಿದರೆ ಈಗ ಹರಿಜನರೆಂದು ಕರೆಯಲ್ಪಡುವ ಆದಿ ಹಿಂದುಗಳು ಅಂಥ ಅದ್ವಿತೀಯ ಸ್ವಾರ್ಥತ್ಯಾಗಿಯ ಕಡೆಗೆ ದೃಷ್ಟಿಹೊರಳಿಸಿ ಅವನ ಸಂಸ್ಕೃತಿಗೆ ಸ್ವಾಗತ ಮಾಡಲೇಬೇಕೆಂಬುದು ಸ್ಪಷ್ಟವಿದೆ.

ಮನುಷ್ಯನಿಗೆ ಅಸ್ಪೃಶ್ಯನೆಂದು ಬಸವಣ್ಣನು ಎಂದೂ ಅನ್ನಲಿಲ್ಲ. ನಾಸ್ತಿಕರಿಗೂ, ಅಸಭ್ಯರಿಗೂ, ಲಿಂಗಾಂಗ ಸಾಮರಸ್ಯ ಸಂಸ್ಕೃತಿಗೆ ವಿರೋಧಕರಾಗಿದ್ದ ಎಲ್ಲ ಅಜ್ಞಾನಿಗಳಿಗೂ, ಭವದಲ್ಲಿ ಬಿದ್ದು ಹೊರಳಾಡುವವರಿಗೂ ಭವಿ ಎಂಬ ಹೆಸರನ್ನು ಮಾತ್ರ ಕೊಟ್ಟಿರುವನು. ಆದರೆ ದ್ವೇಷಭಾವನೆ ಮಾತ್ರ ಅವನ ಕನಸಿನಲ್ಲಿ ಸಹ ಇದ್ದಿಲ್ಲ. "ಎಲವೋ ಪಾಪಕರ್ಮವ ಮಾಡಿದವನೇ ಒಮ್ಮೆ ಶರಣೆನ್ನೇ ವೋ." ಎಂದು ಅನುಕಂಪನೆಯಿಂದ ಅವನು ಪಾಪಿಗಳನ್ನು ಸಹ ಕರೆದಿರುವನು. ದಯವೇ ಧರ್ಮದ ಮೂಲವೆಂದು ಹೇಳಿ, ದಯವಿಲ್ಲದ ವರ್ಣಾಶ್ರಮ ಪದ್ಧತಿಯನ್ನು ಮಾತ್ರ ತಿರಸ್ಕರಿಸಿರುವನು. ಒಮ್ಮೆ ಅಸ್ಪೃಶ್ಯನು ಅವನ ಸಮಾಜದ ಸಂಸ್ಕೃತಿಯಲ್ಲಿ ಬಂದರೆ ಅವನು ಅಸ್ಪೃಶ್ಯನೂ ಅಲ್ಲ ಭವಿಯೂ ಅಲ್ಲ. ಬ್ರಾಹ್ಮಣನು ಬಂದರೆ ಅವನು ಬ್ರಾಹ್ಮಣನೂ ಅಲ್ಲ ಭವಿಯೂ ಅಲ್ಲ. ಎಲ್ಲರಿಗೂ ಸಮಾಜದಲ್ಲಿ ಸಮಾನ ಹಕ್ಕುಗಳನ್ನು ಕೊಟ್ಟಿರುವನು.

ಎಲ್ಲ ವರ್ಣ, ಕುಲ, ಜಾತಿ, ಗೋತ್ರ ಪಂಗಡಗಳನ್ನು ತೆಗೆದು ಹಾಕಿ ಜಗತ್ತಿನಲ್ಲಿ ಎರಡೇ ಭಾಗಗಳನ್ನು ಮಾಡಿರುವನು. ಒಂದು ಲಿಂಗಾಂಗ ಸಾಮರಸ್ಯ ಸಂಸ್ಕೃತಿ ಇನ್ನೊಂದು ಅದಕ್ಕೆ ವಿರೋಧವಾದದ್ದು.

## ಶ್ರೇಷ್ಠ ಪದ್ಧತಿ.

ಅಸ್ಪೃಶ್ಯತಾ ನಿರ್ಮೂಲನದ ಶ್ರೇಷ್ಠ ಪದ್ಧತಿಯೇ ಇಲ್ಲಿದೆ. ಮೂಢತನ, ಅಜ್ಞಾನ, ಕ್ರೂರತನ, ಅನಾಚಾರಗಳಲ್ಲಿ ಕೊಳೆಯುತ್ತಿದ್ದ ಅಸ್ಪೃಶ್ಯರಲ್ಲಿ—ಅವರ ಜೀವನದಲ್ಲಿ-ಅತ್ಯಾಶ್ಚರ್ಯಕರವಾದ ಕ್ರಾಂತಿಯನ್ನೇ ಬಸವಣ್ಣನು ಮಾಡಿದನು. ಅವರ ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ, ಜೀವನದಲ್ಲಿ ಮಹತ್ತರವಾದ ಕ್ರಾಂತಿಯು ಕಲ್ಯಾಣವನ್ನೇ ಉಂಟು ಮಾಡಿದನು. ಲಿಂಗಾಂಗ ಸಾಮರಸ್ಯ ಸಂಸ್ಕೃತಿಯು ಒಳಗಿನಿಂದ ಸುಧಾರಣೆಯನ್ನು ಪ್ರಾರಂಭಿಸಿ ಹೊರಗೆ ಜೀವನದಲ್ಲಿ ಕಲ್ಯಾಣಕರವಾದ ಬದಲಾವಣೆಯನ್ನೇ ಮಾಡಿದನು.

ಮನುಷ್ಯನ ಹೃದಯದಲ್ಲಿ ಪ್ರಾರಂಭವಾದ ಶುದ್ಧಿಯು ಅವನ ಆಚಾರದಲ್ಲಿಯೂ ಕುಟುಂಬದಲ್ಲಿಯೂ ಹರಡಿ ಇಡೀ ಸಮಾಜವನ್ನೇ ವ್ಯಾಪಿಸಿ ಶುದ್ಧೀಕರಿಸಿಬಿಡುವದು. ಇದೇ ನಿಜವಾದ ಶುದ್ಧೀ ಸಂಘಟನೆ. ಇಂಥ ಆದರ್ಶವಾದ ಶುದ್ಧಿಯನ್ನೇ ಬಸವಣ್ಣನು ಮಾಡಿದನು. ಮಾದರ ಚನ್ನಯ್ಯ, ಡೋಹರ ಕಕ್ಕಯ್ಯ, ಹೊಲೆಯರ ಶಿವನಾಗಮಯ್ಯ, ಸಮಗಾರ ಹರಳಯ್ಯ, ಕಲ್ಯಾಣಮ್ಮ ಮುಂತಾದ ಒಮ್ಮೆ ಅಸ್ಪೃಶ್ಯರಾಗಿದ್ದವರು ಬಸವನ ಪರುಷಹಸ್ತ ಸ್ಪರ್ಶದ ಬಲದಿಂದ ಮಹತ್ವಿಕರಾಗಿ ಶರಣರಾಗಿ ಪ್ರಜ್ವಲಿಸುತ್ತಿರುವ ವಚನ ಶಾಸ್ತ್ರಗಳನ್ನು ರಚಿಸಿ ದೈದೀಪ್ಯಮಾನರಾಗಿ ಹೋದರು ಇದನ್ನು ಯಾವ ಅವತಾರೀ ಪುರುಷರು ಮಹಾತ್ಮರು ಈ ರೀತಿಯಲ್ಲಿ ಮಾಡಿರುವರು?

ಒಮ್ಮೆ ವರ್ಣಾಶ್ರಮದ ಬೇಡಿಯು ಕಳಚಿಹೋದ ಮೇಲೆ, ಪಾರತಂತ್ರ್ಯದಿಂದ ಅಂತರಾತ್ಮನು ಸ್ವತಂತ್ರನಾದ ಮೇಲೆ, ಎಂಥ ಅದ್ಭುತ ಪರಿವರ್ತನೆಯಾಗುವದು ನೋಡಿರಿ.

ಆದಕಾರಣ ಬಸವನ ಕಡೆಗೇನೇ ನೋಡಿ ಅಸ್ಪೃಶ್ಯತಾ ನಿರ್ಮೂಲನ ಮಾಡಲಿಕ್ಕೆ ಎಲ್ಲರೂ ಯತ್ನಿಸಬೇಕು.

# ಹರಿಹರನ ರಗಳೆಗಳೊಳಗಿನ ಸಾಮಾಜಿಕ ಸಂಗತಿಗಳು.

(ಲೇಖಕರು — ಪ್ರೊ. ಕೆ. ಜಿ. ಕುಂದಣಗಾರ, ಎಂ. ಎ. ಬೆಳಗಾಂವ)

ಹರಿಹರನ ರಗಳೆಗಳು ಪುರಾತನ ಶಿವಭಕ್ತರ ಮತ್ತು ಶಿವಶರಣರ ಚರಿತ್ರೆಗಳು. ಆತನು ತನ್ನ ರಗಳೆಗಳನ್ನು ಬರೆಯುವ ಪೂರ್ವದಲ್ಲಿಯೇ ಆ ಚರಿತ್ರೆಗಳು ಎಲ್ಲರಿಗೂ ಪ್ರಿಯವಾಗಿದ್ದವು. ಅವುಗಳಿಗೂ ತನ್ನ ಚರಿತ್ರೆಗೂ ಶಿವಭಕ್ತಿ ಸಾಮಾನ್ಯವಾಗಿದ್ದುದರಿಂದ ಅವುಗಳನ್ನು ರಗಳೆಗಳ ರೂಪದಿಂದ ಹೇಳುವ ಮನಸ್ಸು ಮಾಡಿದ್ದಾನೆ ಹರಿಹರ ಕವಿ. ಮಹಾತ್ಮರುಗಳ ರೀತಿಯೇ ಬೇರೆ. ಅವರು ತಮ್ಮಷ್ಟಕ್ಕೆ ತಾವಿದ್ದುಕೊಂಡು ಐಹಿಕ ಆಮುಷ್ಮಿಕ ಸುಖ ಪಡೆದು ಮರೆಯಾಗಿ ಹೋಗುವ ಸ್ವಾರ್ಥಿಗಳಲ್ಲ. ತಮ್ಮಂತೆ ಎಲ್ಲರೂ ಭಕ್ತದೇಹಿಗಳಾಗಿ ನಿತ್ಯ ಸುಖಪಡೆಯಬೇಕೆಂಬ ಆಸೆಯುಳ್ಳ ಧರ್ಮಾತ್ಮರು. ಅಂತಹರು ಒಂದು ವಿಶಿಷ್ಟ ಜಾತಿಯವರಾಗಿರಬೇಕೆಂಬ ನಿಯಮವಿಲ್ಲ. ಅವರು ಬೌದ್ಧಭಿಕ್ಷುಗಳಾಗಿರಬಹುದು, ಜೈನತೀರ್ಥಂಕರರಾಗಿರಬಹುದು, ಭಕ್ತ ಭಂಡಾರಿ ಬಸವಣ್ಣನಂತಹರಾಗಿರಬಹುದು, ದ್ವೈತಮತದ ಪುರಂದರದಾಸ ಕನಕದಾಸರಂತಹರಾಗಿರಬಹುದು, ನಿತ್ಯಸುಖದ ಮಾರ್ಗ ತೋರಿಸುವ ಕಾರ್ಯ ಮಾಡುವವರು ಅವರು. ಜನರಿಗೆ ಹೀಗೆ ವರ್ತಿಸಿರಿ ಎಂದು ಅವರು ಬೋಧಿಸುವವರಲ್ಲ; ವಾದಕ್ಕೆಂದು ಯಾವಾಗಲೂ ಟೊಂಕಕಟ್ಟುವವರಲ್ಲ. ಜನರು ಅವರನ್ನು ಹಿಂಬಾಲಿಸಲಿ ಅಥವಾ ಹಿಂಬಾಲಿಸದಿರಲಿ! ಅವರನ್ನು ನೋಡಿ ಆನಂದಪಡುವ ಅಥವಾ ವ್ಯಸನಾಧೀನರಾಗುವ ಅವಸ್ಥೆ ಅವರದಲ್ಲ. ತಾವು ತಮ್ಮ ಮಾರ್ಗಕ್ರಮಿಸುತ್ತಿರುವಾಗ ಮನವಾರೆ ಅನುಭವಿಸಿದ ಸುಖದುಃಖದ ಅನುಭವ ಮತ್ತು ಪಟ್ಟ ಆನಂದ ಅವರ ಅಂತಃಕರಣವನ್ನು ಆವರಿಸಿ, ಬುದ್ಧಿಯನ್ನು ತೀಕ್ಷ್ಣಗೊಳಿಸಿ, ಭಾವಗಳನ್ನು ಉದ್ದೀಪಿಸಿ, ಪರಿಪಕ್ವವಾದ ವಿಚಾರಗಳನ್ನು ರೂಪುಗೊಳಿಸಿ ನಾಲಗೆಯಿಂದ ಹೊರಹೊರಡಿಸಿದಾಗ ಅವರ ಆ ಮಾತುಗಳಲ್ಲಿ ಸತ್ಯ ತುಂಬಾ ತುಂಬಿರುತ್ತದೆ; ಸೌಂದರ್ಯ ಉಕ್ಕೇರುತ್ತಿರುತ್ತದೆ; ಸೊಬಗು ತಾನೇ ಒಡಮೂ

ಡುತ್ತದೆ; ಬೆಡಗು ನಟಿಸುತ್ತದೆ; ಭಾವ ನಲಿಯುತ್ತದೆ; ರಸ ಹರಿಯುತ್ತದೆ. ಅವರ ಮಾತುಗಳು ಕೃತಕವಲ್ಲ; ಅದರಿಂದ ಅವುಗಳಲ್ಲಿ ಆಡಂಬರವಿಲ್ಲ; ಪಂಡಿತರು ಹೇಳಿಂದು ಪ್ರೇರಿಸದಿರುವುದರಿಂದ ಸಂಪ್ರದಾಯವಿಲ್ಲ; ಪ್ರಸಿದ್ಧಿಯ ಆಸೆಯಿಲ್ಲ; ಇವೆಲ್ಲ ಕಾರಣಗಳಿಂದ ಊಹೆಯಿಲ್ಲ, ಬಲುಮೆಯಿಲ್ಲ. ಅವರ ಮಾತುಗಳು ಗದ್ಯರೂಪವಾಗಿರಬಹುದು, ಪದ್ಯರೂಪವಾಗಿರಬಹುದು. ಅವುಗಳಲ್ಲಿ ಸ್ವಾಭಾವಿಕತೆಯಿದೆ. ಅಲ್ಲಿ ಕಾವ್ಯದೇವಿ ಒನಪು-ಒಯ್ಯಾರಗಳಿಂದ ನಲಿಯುತ್ತಾಳೆ. ಇದನ್ನೇ ಪ್ರಸಾದವಾಣಿಯೆಂದು ಹೇಳುವುದು. ಹರಿಹರನು ಪುರಾತನರಂತಹ ಶಿವಭಕ್ತನು, ಪಂಪಾವಿರೂಪಾಕ್ಷಭಕ್ತನು; ಪುರಾತನರ ಸಂಬಂಧಿ, ಬಾಣನ ಸುತನು, ಸಾಮವೇದಿಗಳವನು, ಮಳೆಯರಾಜನ ಕಂದನು, ಆದಯ್ಯನವನು, ಚನ್ನನ ಸುತನು, ಏಕಾಂತರಾಮ ತಂದೆಯ ಶಿಶು, ಅಯ್ಯಡಿಯರ ಭೃತ್ಯನು. ಭಕ್ತರು ಪ್ರಪಂಚಬಿಟ್ಟು ಸನ್ಯಾಸವನ್ನು ಸ್ವೀಕರಿಸಿದ ವನವಾಸಿಗಳಲ್ಲ. ಪ್ರಪಂಚದಲ್ಲಿ ಪಾರಮಾರ್ಥ ಕಂಡವರು. ಕಮಲದೆಲೆಗಳಂತೆ ಪ್ರಪಂಚದಲ್ಲಿದ್ದು ಅದರಿಂದ ಅಲಿಪ್ತರು. ಆದರೂ ಪ್ರಪಂಚದೊಳಗಿನ ತಮ್ಮ ಅನುಭವಗಳನ್ನು ಮುಚ್ಚು ಮರೆಯಿಲ್ಲದೆ ತಮ್ಮ ಮಾತುಗಳಲ್ಲಿ ಒಡಮೂಡಿಸುವರು. ಹರಿಹರನು ಅವರಲ್ಲಿ ಒಬ್ಬನಾಗಿರುವುದರಿಂದ ತನ್ನ ರಗಳೆಗಳಲ್ಲಿ ತಾನು ಕಂಡ, ಕೇಳಿದ, ಅನುಭವಿಸಿದ ಸಂಗತಿಗಳನ್ನು ವಿಶದವಾಗಿ ಹೇಳಿಬಿಟ್ಟಿದ್ದಾನೆ. ಅವುಗಳನ್ನು ನಿರೂಪಿಸುವಾಗ ರಾ॥ ಬ॥ ಹಳಕಟ್ಟಿಯವರು ಪ್ರಸಿದ್ಧಿಸಿದ ಹರಿಹರನ ರಗಳೆಗಳ ೧, ೨, ೪, ೫, ೬ ನೆಯ ಭಾಗಗಳನ್ನೂ ಮಹದೇವಿಯಕ್ಕನ ಮತ್ತು ಬಸವರಾಜದೇವರ ರಗಳೆಗಳನ್ನೂ ಗಮನಿಸಲಾಗಿದೆ. ಧಾರ್ಮಿಕ ಸಂಗತಿಗಳು ಸಾಮಾಜಿಕ ಸಂಗತಿಗಳಲ್ಲಿ ಅಡಕವಾಗುತ್ತಿರುವುದರಿಂದ ಅವುಗಳನ್ನೂ ಗಮನಿಸುವುದು ಇಲ್ಲಿ ಕ್ರಮಪ್ರಾಪ್ತವಾಗಿದೆ.

ಮಹಾತ್ಮರ ಮತ್ತು ವರಕವಿಗಳ ಮಾತುಗಳಲ್ಲಿ ರಸ್ಕಿನ್ನನು ಹೇಳಿರುವಂತೆ ನಮ್ಮ ವಿಚಾರಗಳನ್ನು ಕಂಡುಕೊಳ್ಳಲು ಪ್ರಯತ್ನಿಸದೆ ಅವರ ವಿಚಾರಗಳನ್ನೇ ತಿಳಿದುಕೊಳ್ಳಲು ಯತ್ನಿಸಿದರೆ ಅವರ ಮನೋವ್ಯಾಪಾರಗಳು ತಮ್ಮಿಂದ ತಾವೇ ತಿಳಿದುಬರುತ್ತವೆ. ಅವರು ಇದ್ದ ಕಾಲ, ಸಮಾಜದ ಘಟನೆ, ಸಮಾಜದೊಳಗಿನ ಜನರ ಆಚಾರವಿಚಾರ ಮುಂತಾದ

ವಿಷಯಗಳನ್ನು ಗಣನೆಗೆ ತಂದುಕೊಂಡು ಆ ಬಗ್ಗೆ ಅವರು ವ್ಯಕ್ತಗೊಳಿಸಿದ ವಿಚಾರಗಳನ್ನು ತಿಳಿದುಕೊಳ್ಳುವುದು ಅವಶ್ಯಕ. ಹಿಂದೂ ಸಮಾಜ ಘಟನೆಯಲ್ಲಿ ಮಹತ್ವದ ಬದಲಾವಣೆಗಳುಂಟಾಗಿಲ್ಲ. ಅವೇ ಹದಿನೆಂಟು ಜಾತಿಗಳಿವೆ. ಅವೇ ಧಾರ್ಮಿಕ ಭಾವನೆಗಳಿವೆ. ತಾವು ಅನುಸರಿಸುವ ಧಾರ್ಮಿಕ ಮಾರ್ಗ ಶ್ರೇಷ್ಠವೆಂಬ ಇತರ ಮಾರ್ಗಗಳು ಕನಿಷ್ಠವೆಂಬ ಅವರ ಕಲ್ಪನೆ ದೃಢಮೂಲವಾಗಿ ಹತ್ತೊಂಬತ್ತನೆಯ ಶತಮಾನದ ಅಂತ್ಯದ ವರೆಗೆ ನಡೆದು ಬಂದಿದೆ. ಆ ಕಾರಣದಿಂದಲೇ ಒಂದು ಮಾರ್ಗದವರನ್ನು ಮತ್ತೊಂದು ಮಾರ್ಗದವರು ತಿರಸ್ಕರಿಸುವುದು, ಧಾರ್ಮಿಕ ವಾದವಿವಾದಗಳಿಗೆ ಯಾವಾಗಲೂ ಸಿದ್ಧರಾಗಿರುವುದು ಮುಂತಾದ ಸಂಗತಿಗಳು ನಡೆದು ಬಂದಿವೆ. ಈ ಸಂದರ್ಭಗಳಲ್ಲಿ ಪವಾಡಗಳಿಗೆ ಶರಣು ಹೋದುದು ಕಂಡುಬರುತ್ತದೆ. ಅವುಗಳನ್ನು ಜನರು, ಪಂಡಿತರು, ಪಾಮರರು ಎಂಬ ಭೇದವಿಲ್ಲದೆ ನಂಬಿದ್ದಾರೆ, ನಂಬುತ್ತಿದ್ದಾರೆ. ಇಪ್ಪತ್ತನೆಯ ಶತಮಾನದಲ್ಲಿ ಪವಾಡಗಳನ್ನು ಜನರು ನಂಬದಿದ್ದರೂ ಯೋಗಸಾಮರ್ಥ್ಯದ ಅದ್ಭುತಗಳು ವೃತ್ತ ಪತ್ರಗಳಲ್ಲಿ ಪ್ರಕಟವಾಗುತ್ತಲಿವೆ. ಅವುಗಳನ್ನು ನಂಬಬೇಕೋ ನಂಬಬಾರದೋ ಎಂಬ ವಿಚಾರವನ್ನು ಬದಿಗಿಟ್ಟು ಹರಿಹರನು ಮಾತ್ರ ಅವುಗಳನ್ನು ನಂಬಿದ್ದನೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ. ಎಲ್ಲ ಭಕ್ತರನ್ನು ಶಿವನು ಕೈಲಾಸಕ್ಕೆ ಕರೆದುಕೊಂಡು ಹೋಗುವುದು, ಏಕಾಂತದ ರಾಮಿ ತಂದೆಗಳು ಕತ್ತರಿಸಿಕೊಂಡ ರುಂಡ ಏಳು ದಿನಗಳ ಮೇಲೆ ಮುಂಡಕ್ಕೆ ಅಂಟಿಕೊಂಡು ಅವರು ಮತ್ತೆ ಸಜೀವರಾಗುವುದು, ಬಸವಣ್ಣನವರ ಭಕ್ತಿ ಸಾಮರ್ಥ್ಯದಿಂದ ಕಳ್ಳರ ಕಕ್ಷದಲ್ಲಿರುವ ವೃಂತಫಲಗಳು ಲಿಂಗಗಳಾಗುವುದು ಮುಂತಾದವುಗಳು ಇಲ್ಲಿ ಉದಾಹರಣೆಗಳು. ಹರಿಹರಾಚಾರ್ಯರು ಇವುಗಳನ್ನು ಒಪ್ಪದಿದ್ದರೆ ತಮ್ಮ ರಗಳೆಗಳಲ್ಲಿ ಇವುಗಳನ್ನು ಸೇರಿಸದೆ ಈ ಅದ್ಭುತ ಕಾರ್ಯಗಳನ್ನು ಮತ್ತೊಂದು ರೀತಿಯಿಂದ ಹೇಳುತ್ತಿದ್ದರೋ ಏನೋ. ಅದ್ಭುತ ಕಾರ್ಯಗಳನ್ನು ನಂಬಿ ಈಗಲೂ ಜನರು ಸನ್ಯಾಸಿಗಳ ಮತ್ತು ಮಹಿಮರೆಂದು ತಾವು ನಂಬಿರುವವರ ಬೆನ್ನು ಹತ್ತುತ್ತಿರುವುದು ಅನುಭವದ ಮಾತಾಗಿದೆ.

ಸ್ವಾರ್ಥಿಗಳು ಭಕ್ತರ ಆಚರಣೆಗಳನ್ನು ವಿಪರೀತವಾಗಿ ತಿಳಿದುಕೊಂಡು ಅವರ ವೃತ್ತಿಯನ್ನು ಸ್ವಾರ್ಥಸಾಧನೆಗೆ ಉಪಯೋಗಿಸಿದ ಸಂಗ

ತಿಗಳು ರಗಳೆಗಳಲ್ಲಿ ಬಂದಿವೆ. ಕೇಶಿದಣ್ಣಾಯಕರ ರಗಳೆಯಲ್ಲಿ 'ಕೇಶಿರಾಜನು ನಿನಗೆ ವಂದಿಸುವುದಿಲ್ಲ; ಆತನ ಬೆರಳಿನಲ್ಲಿ ಗುರುಪಾದಮುದ್ರಿಕೆಯಿದೆ, ಆ ಉಂಗುರಕ್ಕೆ ಪೊಡೆವಡುತಿರ್ಪನು, ನಿಮ್ಮನೋಲೈಸುತಿರ್ದು ನಿಮಗೆ ಗರ್ವಿಸುತಿರ್ಪ' ಎಂದು ವಿಪ್ರರು ಪೆರ್ಮಾಡಿರಾಯನಿಗೆ ಚಾಡಿ ಹೇಳುತ್ತಾರೆ; ಕೆಂಭಾವಿ ಭೋಗಣ್ಣನಲ್ಲಿಯೂ ಇದೇ ದೂರು, ಬಸವಣ್ಣನವರು ಕಂಬಳಿಯ ನಾಗಿದೇವನ—ಹಿರಿಯ ಭಕ್ತನ—ಮನೆಯಲ್ಲಿ ಉಂಡರೆಂದು ದೂರು. ಈ ಭಕ್ತರೆಲ್ಲ ತಮ್ಮಕ್ಕಿಂತ ಹೆಚ್ಚು ಆದರಕ್ಕೆ ಪಾತ್ರರಾಗುತ್ತಿರುವರೆಂದು ಬ್ರಾಹ್ಮಣರ ಮಾತ್ಸರ. ಜನಾದರದ ಕಲ್ಪನೆ ಅವರಲ್ಲಿ ಬೇರೆಯಾಗಿತ್ತು. ಉದಾತ್ತಾನುದಾತ್ತ ಪದಪಾಳಿಕ್ರಮಗಳಿಗೆ ಸರಿಯಾಗಿ ವೇದಪಠನ, ಮುಷ್ಟಿಧಾರಣ, ಜನ್ನಿವಾರ, ತ್ರಿವ್ಯಸಮೂಹ, ಕರ್ಮಠವೃತ್ತಿ, ವಾದವಿವಾದಕ್ಕೆ ಯಾವಾಗಲೂ ಸಿದ್ಧರಾಗಿರುವುದು, ಅನ್ಯರನ್ನು ತುಚ್ಛರಾಗಿ ಕಾಣುವುದು, ಡಾಂಭಿಕತೆ ಇವೇ ಮುಂತಾದ ಲಕ್ಷಣಗಳಿಂದ ಅವರು ಜನರ ಕಣ್ಣು ಕುಕ್ಕಿಸಬೇಕೆನ್ನುವರು. ಹರಿಹರಾಚಾರ್ಯರಿಗೆ ಇವು ಒಪ್ಪಿಗೆಯಾಗಿಲ್ಲ. ಶಿವಭಕ್ತಿಯಲ್ಲಿ ಅವರ ದೃಢವಿಶ್ವಾಸ. ಆ ಭಕ್ತಿ ಶ್ವಪಚನಲ್ಲಿದ್ದರೆ ಅವನೇ ಶ್ರೇಷ್ಠ—'ದೇವನೊಲ್ದನ ಕುಲಂ ಸತ್ಕುಲಂ' ಶಿವಭಕ್ತಿಯಿಲ್ಲದವರು ಅವರ ಅಭಿಪ್ರಾಯದಂತೆ ಭವಿಗಳು. ಪಂಡಿತರು, ತಾರ್ಕಿಕರು, ಮಹಾವಾದಿಗಳು, ಆಕಾಶಗಾಮಿಗಳು ಆದ ಸಾಮವೇದಿಗಳು ತಮ್ಮ ಡಾಂಭಿಕತನವನ್ನು ಬಿಟ್ಟು, ಭಸ್ಮಧಾರಿಗಳಾಗಿ, ಶ್ವಪಚದೇವರಿಗೆ ಶರಣಾಗಿ, ಭವಿತನವನ್ನು ಕಳೆದುಕೊಂಡು ಗುರುಸಹಿತವಾಗಿ ಕೈಲಾಸಕ್ಕೆ ಹೋದರು.

ಶಿವಭಕ್ತರ ವೀರವೃತ್ತಿಯನ್ನೂ, ಆತ್ಮಾರ್ಪಣವನ್ನೂ, ಲೋಕಕಲ್ಯಾಣದ ಉದ್ದೇಶವನ್ನೂ ಕಣ್ಣಪ್ಪ ಸಾಮವೇದಿ, ಉಗ್ಘಟದೇವ, ಮಳೆಯರಾಜ, ಬಸವರಾಜದೇವ ಮುಂತಾದವರ ರಗಳೆಗಳಲ್ಲಿ ಕಾಣಬಹುದು. ತಮ್ಮ ವೀರವೃತ್ತಿಗನುಸರಿಸಿ ಅವರು ಜಾತಿಯನ್ನು ಮರೆಯುತ್ತಾರೆ. ಜೋಳರಾಯನು ಚನ್ನಯ್ಯನು ಶ್ರೇಷ್ಠ ಶಿವಭಕ್ತನೆಂದು ತಿಳಿದು ಆತನನ್ನು ಹುಡುಕಿಕೊಂಡು ಹೋದುದು ಸಾಮಾನ್ಯ ಸಂಗತಿಯೇ! ಶಿವಭಕ್ತರು ಪರಸ್ಪರವಾಗಿ ತೋರುವ ಅಭಿಮಾನಾದರಗಳೇ ಇದಕ್ಕೆ ಕಾರಣವೆಂದು ಹೇಳಬಹುದಲ್ಲವೆ! ಹರಿಹರನಾದರೂ ಬಸವಣ್ಣನನ್ನು ಎಷ್ಟು

ಪ್ರೀತಿಯಿಂದ ಸಂಬೋಧಿಸುತ್ತಾನೆ!— 'ಎಲೆ ಬಸವ, ಬಸವಣ್ಣ, ಬಸವಯ್ಯ, ಬಸವರಸ, ಬಸವರಾಜ, ಬಸವದೇವ' ಆತನ ಪ್ರೀತಿಯ ಉಕ್ಕೇರಿಕೆಯಲ್ಲಿ ಇದು ಸಾರಾಲಂಕಾರದ ಉದಾಹರಣೆಯಾಗುವುದಷ್ಟೇ! ಬಸವಣ್ಣನು ಶಿವಶರಣರ ಮೇಲಿನ ಪ್ರೀತಿಯಿಂದ ನಿತ್ಯ ಶಿವರಾತ್ರಿಯ ವ್ರತವನ್ನು ಸ್ವೀಕರಿಸಿ ಅವರನ್ನು ಸಂತೃಪ್ತಗೊಳಿಸಿ ಅವರು ಬೇಡಿದ ವಸ್ತುಗಳನ್ನು ಕೊಟ್ಟು ಆದರಿಸುತ್ತಾನೆ; ಕಿನ್ನರಯ್ಯನನ್ನು ನೀರುಳ್ಳಿಯ ಪಕ್ವಾನ್ನಗಳಿಂದ ತೃಪ್ತಿಗೊಳಿಸುತ್ತಾನೆ- ಆ ರಗಳೆಯಲ್ಲಿ ಲಿಂಗಪೂಜೆಯ ಸಂಭ್ರಮ ಅದ್ವಿತೀಯವಾಗಿದೆ. ಶಿವನಿಗೆ ಬೆಲ್ಲವತ್ತ—ದವನಗಳು ಬಹಳೇ ಪ್ರಿಯವಾದ ವಸ್ತುಗಳಾಗಿದ್ದರೂ ಅವು ರಗಳೆಗಳಲ್ಲಿ ಎರಡು ಸಲ ಮಾತ್ರ ಹೇಳಲಾಗಿರುವುದು ಆಶ್ಚರ್ಯಕರ. ಉಳಿದ ಹೂಗಳೂ ಕೇದಗೆ ಸಂಪಗೆಗಳೂ ತಿರುತಿರುಗಿ ಬಂದಿರುವುದರಿಂದ ಅವು ಮಾತ್ರ ಹರಿಹರನಿಗೆ ಬಹಳ ಪ್ರಿಯವಾಗಿದ್ದುವೆಂದು ಇಟ್ಟುಕೊಳ್ಳಬೇಕಾಗುತ್ತದೆ.

ಶಿವಪೂಜೆಗೂ ಉತ್ಸವಗಳಿಗೂ ಸಂಬಂಧಪಟ್ಟ ವಾದ್ಯಗಳಿವು— ಮೃದಂಗ, ಭೇರಿ, ಪಟಹ, ಶಂಖ, ಕಹಳೆ, ಗಿರುಘಟೆ, ಮುದ್ದಳೆ, ಕರಡಿ. ಅವುಜೆ, ತಾಳ, ಕೌಸಾಳ, ತಂಬಟೆ, ನಿಸ್ಸಾಳ, ಕಿನ್ನರಿ, ಮುರಜೆ, ಹಲಗೆ, ಮೇಳವಣೆ (ಮೇಳವಣೆ ಎಂಬುದು ಅವುದೋ ತಿಳಿಯುವುದಿಲ್ಲ. ಅದು ಕುಂಬರಗುಂಡನ ರಗಳೆಯಲ್ಲಿ ಬರುತ್ತದೆ) ಕಡೆಯ ವಾದ್ಯವೊಂದನ್ನು ಬಿಟ್ಟರೆ ಉಳಿದ ಎಲ್ಲ ವಾದ್ಯಗಳು ಈಗಲೂ ಕರ್ನಾಟಕದಲ್ಲಿವೆ. ಅವುಗಳಲ್ಲಿ ಕರಡೆ ಮುಖ್ಯವಾಗಿ ಶೈವರ ಮತ್ತು ವೀರಶೈವರ ವಾದ್ಯವಾಗಿದೆ. ಆವರ ಗುಗ್ಗಳದಲ್ಲಿ ಅದೇ ಮುಖ್ಯವಾದ್ಯ. ಅದರ ಹಿಂದೆ ಪುರಂತರೂ (ಪುರಾತನರು) ಜಂಗಮರೂ ಬರುತ್ತಾರೆ.

ಹರಿಹರನು ತನ್ನ ಕಾಲದ ಜಂಗಮರ ವೇಷವನ್ನು ವರ್ಣಿಸಿದ್ದಾನೆ. ಅದು ಹೀಗೆ:— ಅವರ ಮೈಮೇಲೆ ಸುವರ್ಣಪಳಿ (ಕಾವಿಯ ಬಟ್ಟೆ), ನೊಸಲೊಳಗೆ ವಿಭೂತಿ, ಕರದೊಳು, ತೋಳೊಳು, ಕಂಠದೊಳು, ಕಿವಿಯೊಳು, ಜಡೆಯೊಳು ರುದ್ರಾಕ್ಷಿ, ತಲೆಯ ಮೇಲೆ ಜಡೆ, ಕಾಲತೊಡರು (ಜಂಗ) ಘುಲುಘುಲುಕೆಂಬ ನಡೆ, ಉರಗೆಜ್ಜೆ, ಘನಘಂಟೆ. ಈಗಲೂ ಜಂಗಮರು ಇವುಗಳನ್ನು ಧರಿಸುತ್ತಾರೆ. ಇವು ಅವರಿಗೆ ದೀಕ್ಷೆಯಲ್ಲಿ ದೊರೆಯಬೇಕು.

ಶಿವದೀಕ್ಷೆ ರಗಳೆಗಳಲ್ಲಿ ಎರಡು ಸಲ ಹೇಳಲಾಗಿದೆ. ಒಮ್ಮೆ ಶ್ವಪಚ ದೇವರು ಸಾಮವೇದಿಗಳಿಗೆ ಕೊಟ್ಟ ದೀಕ್ಷೆ:—

ಹರನ ಶಶಿಧರನ ರೂಪಂ ಚಿತ್ರದೊಳಗಿರಿಸಿ
ಪಶುಪತಿಯ ಚರಣಮಂ ಮನದ ಕೈಯ್ಯೊಳಿಕ್ಕೊಟ್ಟು
ಸಾಮವೇದಿಗಳ ಮಸ್ತಕದಲ್ಲಿ ಹಸ್ತಮಂ
ಪ್ರೇಮದಿಂ ಶ್ವಪಚದೇವರ್ತಮ್ಮ ಹಸ್ತಮಂ
ತಂದಿಟ್ಟು ಕರ್ಣದೊಳ್ಪಂಚಾಕ್ಷರಿಯನರುಪಿ
ಮುಂದಿರ್ದ ಶಿವಲಿಂಗ ನಿಜಮೂರ್ತಿಯಂ ತಿಳುಪಿ
ಉಪದೇಶಮಂ ಶ್ವಪಚದೇವರೊಲವಿಂ ಮಾಡೆ,

ಮತ್ತೊಮ್ಮೆ ಬಸವರಾಜದೇವರ ರಗಳೆಯಲ್ಲಿ ವೃಷಭರಾಜನು ಬಸವಣ್ಣನಿಗೆ ಕೊಟ್ಟ ದೀಕ್ಷೆ ಅಲ್ಲಿ ಅದು ಹೀಗೆ ವರ್ಣಿಸಲಾಗಿದೆ; ವೃಷಭರಾಜನು ಸಂಗಮೇಶ್ವರನಾಜ್ಞೆಯಂತೆ ಬಸವಣ್ಣನ ಅಂಗೈಯಲ್ಲಿ ಸಂಗಮೇಶ್ವಲಿಂಗವನ್ನಿರಿಸಿ, ತನ್ನ ಮುಖವನ್ನು ಬಸವರಾಜನ ಮಸ್ತಕದ ಮೇಲಿರಿಸಿ, ಪಂಚಾಕ್ಷರಿಯ ಸಂಚವನರಿಪಿ, ಅಮೃತಮಯ ಲಾಲಾಜಲದಿಂದ ಅಭಿಷೇಕಮಾಡಿ, ಸತ್ಯೋಪದೇಶ ಮಾಡಿದನು. ಅದೇ ದೀಕ್ಷೆ ಬಸವ ಸಂಗರೆಂಬ ಮದುವಣಿಗರ ಮದುವೆಯೆಂದು ವರ್ಣಿಸಿ ಪಾರಮಾರ್ಥದಲ್ಲಿ ಪ್ರಪಂಚವನ್ನು ಕಂಡಿದ್ದಾನೆ.

ಹಳೆಯ ನಂಟರಲ್ಲಿ ಮದುವೆಯ ಸಂಬಂಧ ಬೆಳೆಸುವುದು ಕನ್ನಡಿಗರಲ್ಲಿ ಪುರಾತನ ಕಾಲದಿಂದ ನಡೆದುಬಂದ ರೂಢಿ. ಅಣ್ಣತಂಗಿಯರು ಅಥವಾ ಅಕ್ಕತಮ್ಮಂದಿರು ತಮ್ಮ ತಮ್ಮ ಗಂಡುಹೆಣ್ಣುಮಕ್ಕಳನ್ನು ಪರಸ್ಪರರಿಗೆ ಕೊಟ್ಟು ಮದುವೆ ಮಾಡುವುದು ಅವರವರ ಹಕ್ಕುಬಾಬು ಆಗಿನಿಂತಿದೆ. ಅದಕ್ಕಾಗಿ ಅವರು ಸತ್ಯಾಗ್ರಹವನ್ನೂ ಆಚರಿಸುವುದುಂಟು. ಇಂತಹದೊಂದು ಸಂದರ್ಭ ವೈಜಕ್ಕವ್ವೆಯ ರಗಳೆಯಲ್ಲಿ ಬಂದಿದೆ. ವೈಜಕ್ಕವ್ವೆಯ ಸೋದರತ್ತೆ (ಅವಳ ಮತ್ತು ಅವಳ ಅಣ್ಣನ ಹೆಸರುಗಳನ್ನು ಅಲ್ಲಿ ಹೇಳಿಲ್ಲ) ತನ್ನ ಮಗನಿಗೆ ಅವಳನ್ನು ಬೇಡಲು ಅಣ್ಣನು (ತನ್ನ ತಂಗಿ ಜೈನಳೆಂದು) ಒಪ್ಪದ ಕಾರಣ ಅವಳು ಉಪವಾಸದ ಸತ್ಯಾಗ್ರಹ ಹೂಡುತ್ತಾಳೆ. ಅವಳ ಅತ್ತಿಗೆ ತನ್ನ ಗಂಡನನ್ನು ಒಪ್ಪಿಸಿ ಮಗಳನ್ನು ಕೊಡಿಸುತ್ತಾಳೆ. ಇದರಿಂದ ಮತ್ತೊಂದು ಸಂಗತಿ ಸಿದ್ಧವಾಗುತ್ತದೆ.

ಅಂದು ಮಿಶ್ರವಿವಾಹಗಳಾಗುತ್ತಿದ್ದುವೆಂಬುದು. ಅರಸರಲ್ಲಿ ಇಂತಹ ವಿವಾಹಗಳಾಗುತ್ತಿದ್ದುದೇನೋ ನಿಜ. ಇತರರಲ್ಲಿಯೂ ಆ ರೂಢಿ ಇದ್ದುದನ್ನು ಈ ಉದಾಹರಣೆಯಿಂದ ಒಪ್ಪಬೇಕಾಗುತ್ತದೆ. ಅದಕ್ಕೆ ಪುಷ್ಟಿ ಕೊಡಲು ಆದಯ್ಯನು ( ಶೈವನು ) ಪದ್ಮಾವತಿಯನ್ನು ( ಜೈನಳನ್ನು ) ಮದುವೆಯಾದುದು ಮತ್ತೊಂದು ಉದಾಹರಣೆ. ಮದುವೆಗೆ ಸಂಬಂಧಪಟ್ಟ ಧಾರ್ಮಿಕವಿಧಿಗಳೂ ಸಿದ್ಧತೆಯೂ ಹೀಗೆ—ಮಂಟಪ, ನಿಬ್ಬಣಿಗರು, ಸುವಾಸಿನಿಯರು, ಆರತಿ, ಕೈದಾರೆ, ತೆರೆ, ಬಾಸಿಗ, ಮುಟ್ಟಕ್ಕಿ, ಜೀರಿಗೆ ಬೆಲ್ಲ, ಹಳಿಗೆವಟ್ಟಲು, ಉಂಗುರ-ಮುಡಿಕೆ ಮುಂ. ಇವು ಈಗಲೂ ಮದುವೆಯಲ್ಲಿವೆ. ಆ ತರುವಾಯ ಓಕಳಿ. ವಿನೋದ ಮುಂತಾದವುಗಗಳಿಂದ ಮದುವೆ ಮುಗಿಯುತ್ತದೆ.

ಸಾಮಾಜಿಕ ವಿನೋದಗಳಲ್ಲಿ ಓಕುಳಿಯೂ ಒಂದಾಗಿದ್ದಿತು. ಈಗ ಅದು ಹನುಮಂತದೇವರ ಓಕುಳಿಯಾಗಿ ಉಳಿದಿದೆ. ಅರಸರ ಜಲಕೇಳಿಗಳಲ್ಲಿ ಕವಿಗಳು ಓಕುಳಿಯನ್ನು ವರ್ಣಿಸಿದ್ದಾರೆ. ಅದರಲ್ಲಿ ಅರಸನೂ ರಾಣೀವಾಸದವರೂ ಸಹಭಾಗಿಗಳು. ಒಮ್ಮೊಮ್ಮೆ ಅರಸರು ತಮ್ಮ ಮನ ಬಂದಾಗ ಓಕುಳಿಯನ್ನು ಮಾಡಿಸಬಹುದಾಗಿದ್ದಿತಂತೆ. ಮತ್ತು ಅದಕ್ಕೆ ಆಸ್ಥಾನದೊಳಗಿನ ಎಲ್ಲ ಜನರನ್ನೂ ಸ್ತ್ರೀಯರನ್ನೂ ಕರೆಯಿಸುತ್ತಿದ್ದಂತೆ ಬಾಣಶರಣರ ಮಹಾತ್ಮೆಯಲ್ಲಿ ಹೇಳಿದೆ. ಎಲ್ಲರೂ ಸಿಂಗರಿಸಿಕೊಳ್ಳುವುದಕ್ಕೆ ಓಕುಳಿಯ ಕುಪ್ಪಸಗಳು ಅವರವರ ಕೈಗಳಲ್ಲಿ ' ನನೆಯ ಹರಿಗೆ, ಹೂವಿನಕಠಾರಿ, ಮೊನೆಯ ಮೊಗ್ಗೆಗಳ ಪಲ್ಲಣಿಗೆ, ಕೇದಗೆಯ ಸಣ್ಣೆಸಳ ಕೂರಲಗು, ಪಾದರಿಗಳ ಕುಂಚಳಿಕೆ' ಹೀಗೆ ಸಿಂಗಾರಾದ ಜನರೆಲ್ಲರೂ ಒಬ್ಬರ ಮೇಲೊಬ್ಬರು ' ಪರಿಮಳಜಲ ' ಸೂಸುತ್ತಿದ್ದರು. ಪುರುಷರು ನೀರು ಚಿಮ್ಮುವಾಗ ನೀರೆಯರು ಕೈಯೊಳಗಿನ ಹಸಿಕೋಲುಗಳಿಂದ ಅವನ್ನು ಹೊಯ್ಯುತ್ತಿದ್ದರು.

ಅರಸರಲ್ಲಿ ಕುದುರೆಯೇರಾಟದ ವಿನೋದ ಪ್ರೀತಿಯದಾಗಿದ್ದಿತು. ಮಾಳಿಯರಾಜನ ರಗಳೆಯಲ್ಲಿ ಅದು ವಿಸ್ತಾರವಾಗಿ ಬಂದಿದೆ. ಆತನು ತನ್ನ ಕುದುರೆಯನೇರಿ ಅದನ್ನು ತಿರುಪಿ, ನೂಂಕಿ, ಪರಿಸಬೀದಿಯೊಳ್ಪಟ್ಟು, ರಾಯರಾವುತರನ್ನು ಬೆನ್ನಟ್ಟಿ, ಮುಟ್ಟಿ, ಮಿಂಚನೇರಿದ ಮೇಘವಾಹನನಂತೆ ನಿಚ್ಚಟದ ರಾವುತರಂ ಲಚಣಂದೆಗೆದು, ಮುಂಗುಡಿಯ

ರಾವುತರಂ ಭಂಗಿಸಿ, ತನಗಿದಿರಂ ಕಾಣದೆ ನಿಂದಿರ್ದಂ ಇದಲ್ಲದೆ ಆರ ಸಮುಕ್ಕಳಿಗೆ 'ಮಲ್ಲ-ಮೇಷ-ಮಹಿಷ-ಕುಕ್ಕುಟ' ಮುಂ. ಸಕಲಯುದ್ಧವೂ 'ಗೀತ, ಗೀತರವ, ಗದ್ಯಪದ್ಯ ಸೇವ್ಯಕಾವ್ಯ, ವಾದ್ಯ, ನೃತ್ಯ, ನಾಟಕ, ಪ್ರಸಂಗ, ಮಹಾಪುರಾಣ, ನರ್ತಕ-ನರ್ತಕೀ ಲಾಸ್ಯ, ಮುಂ, ಗಳು ಮನೋರಂಜನೆಗಳಿಂದು ಓಹಿಲಯ್ಯನ ರಗಳೆಯಲ್ಲಿ ಬರುತ್ತವೆ.

ವಿನೋದಗಳು ಸಂಭ್ರಮವನ್ನುಂಟುಮಾಡುವಂತೆ ಊಟದ ವಿಷಯವೂ ಸಂಭ್ರಮಕ್ಕೆ ಕಾರಣವಾಗುವದು. ಹರಿಹರನು ಶಿವಭಕ್ತನಾಗಿರುವುದರಿಂದ ಊಟದ ಪದಾರ್ಥಗಳನ್ನೆಲ್ಲ ಶಿವಾರ್ಪಿತ ಮಾಡಿ ಅವುಗಳನ್ನು ಪ್ರಸಾದವೆಂದು ಸ್ವೀಕರಿಸುವ ಪದ್ಧತಿಯನ್ನು ಹೇಳುತ್ತಾನೆ. ಶಿವಭಕ್ತರಲ್ಲಿ ಬಡವರೂ ಸಿರಿವಂತರೂ ಇರುವಂತೆ ಅವರವರ ಸ್ಥಿತಿಯನ್ನನುಸರಿಸಿ ಅವರ ನೈವೇದ್ಯದ ಪದಾರ್ಥಗಳು. ಮಾತ್ರ ಕರ್ನಾಟಕಸ್ಥರು ಊಟದ ಸೊಗಸುಗಾರರೆಂಬುದನ್ನು ಮರೆಯಲಾಗದು. ಕನ್ನಡಿತಿಯರು ಸುಗೃಹಿಣಿಯರಾಗಿ ನಾನಾತರದ ಪದಾರ್ಥಗಳನ್ನು ಮಾಡಿ ತಮ್ಮ ತಮ್ಮ ಬಳಗದವರನ್ನೂ ಅತಿಥಿಗಳನ್ನು ತೃಪ್ತಿಗೊಳಿಸುವಲ್ಲಿ ಅವರ ಕೈ ಮೇಲು. ಆದುದರಿಂದಲೇ ಕನ್ನಡದಲ್ಲಿ ಸೂಪಶಾಸ್ತ್ರವನ್ನು ಕುರಿತು ಇಷ್ಟು ಗ್ರಂಥಗಳಾಗಿವೆ. 'ಬ್ರಾಹ್ಮಣೋ ಭೋಜನಪ್ರಿಯಃ' ಎಂಬ ಗಾದೆ ಪ್ರಚಾರಗೊಳ್ಳಲೂ ಇದೇ ಕಾರಣ. ಹರಿಹರನೂ ಅವನ ಅಳಿಯ ರಾಘವಾಂಕನೂ ಊಟದ ಸೊಗಸುಗಾರರಾಗಿರಲೇಬೇಕು. ಆದರಿಂದಲೇ ಅವರ ಕಾವ್ಯಗಳಲ್ಲಿ ಇಷ್ಟು ಮಿಷ್ಟಾನ್ನಗಳ ಹೆಸರುಗಳು ಬಂದಿವೆ. ಅವರು ಹೇಳಿದ ಪಕ್ವಾನ್ನಗಳಿವು; ಹಾಲವುಗು, ಹಾಲಲುಂಡೆ, ಮಂಡಿಗೆ, ತರಗ, ಪೂಷಣ. ಇಡ್ಡಲಿಗೆ, ಬೀಸುಹೂರಿಗೆ, ಅಣ್ಣೆಮಾಲು, ಪಾಯಸ, ಕಳವೆಯೋಗರ, ಶಾಕಪಾಕ (ನೈಜಕ್ಕನ್ವೆಯ ರಗಳೆ), ದೇವಾನ್ನ, ದಿವ್ಯಾನ್ನ, ಹಪ್ಪಳ, ಚೆಲುಪಾಲ ಘಟ್ಟಿ, ತುಪ್ಪ, ಕೆನೆಮೊಸರ್, ಸಕ್ಕರೆ (ಚನ್ನಯನ ರಗಳೆ), ಬೋನ, ಅಂಬಕಳ, ಉಪ್ಪುಕಾಯ್, ಕಪ್ಪುರದೋಗೆ ಶಾಕಪಾಕ (ಅದೇ ರಗಳೆ), ಬೋನ, ಓಗರ, ಗಾರಿಗೆ, ಹೂರಿಗೆ, ಲಡ್ಡಿಗೆ. ಘೃತಪೂರ, ಹಾಲೋಗರ, ಸೇವಗೆ, ಸರವಳಿಗೆ, ಮಣಿಸರವಳಿಗೆ, ಸಣ್ಣ ಸೇವಗೆ, ಸಣ್ಣ ಸರವಳಿಗೆ, ಮೇಲೋಗರ, ಪ(ರ)ಡಿ, ಮೊಸರೋಗರ, ಮಜ್ಜಿಗೆ, ಚೆನ್ನವಪ್ಪಳಿಗಳ ಮೇಲೋಗರ, (ಬಸವರಾಜದೇವರ ರಗಳೆ). ಈ ಪದಾರ್ಥಗಳನ್ನೆಲ್ಲ ಸಿರಿವಂತರು ಚಿನ್ನದ ಹರಿವಾಣ

ಗಳಲ್ಲಿ ಬಡಿಸಿ ರನ್ನದ ಅಡ್ಡಣಿಗೆಗಳ ಮೇಲೆ ಇಟ್ಟು ನೈವೇದ್ಯ ಮಾಡುತ್ತಿದ್ದರು. ಆದರಿಂದ ವೀರಶೈವರು ಅಡ್ಡಣಿಗೆಗಳ ಮೇಲೆ ಊಟ ಮಾಡುವುದು ಹೊಸ ಪದ್ಧತಿಯಲ್ಲ. ಹೋಗಹೋಗುತ್ತ ಇನ್ನೊಂದು ಸಂಗತಿಯನ್ನು ಇಲ್ಲಿ ಹೇಳಬಹುದು ವಿಭೂತಿ ಒಂದು ಆವರಣವಷ್ಟೇ| ಅಡಿಗೆ ಸಿದ್ಧವಾದ ಮೇಲೆ ಆ ಪಾತ್ರೆಯ ಹೊರಭಾಗವನ್ನು ಸ್ವಚ್ಛ ಮಾಡಿ ಅದಕ್ಕೆ ಭಸ್ಮೋದ್ಧೂಳನ ಮಾಡಿದ ಒಂದು ದೃಶ್ಯ ಸಾಮವೇದಿಗಳ ರಗಳೆಯಲ್ಲಿ ಬರುತ್ತದೆ. ಈ ಪದ್ಧತಿ ಈಗಲೂ ಕಂಡುಬರುತ್ತದೆ ಭಸ್ಮೋದ್ಧೂಳನ ಪಾತ್ರೆಗಳ ಮಟ್ಟಿಗಿಂದೆ ಸಜೀವಪ್ರಾಣಿಗಳ ಅಂದರೆ ಕುದರೆಯ ಹಣೆಯ ವರೆಗೆ ಬಂದುದು ಓಹಿಲಯ್ಯನ ರಗಳೆಯಲ್ಲಿ ದೊರೆಯುತ್ತದೆ. ಇರಲಿ. ಊಟವಾದ ಮೇಲೆ ವೀಳ್ಯ ಮೆಲ್ಲುವ ಪದ್ಧತಿ ಪೂರ್ವದಿಂದ ನಡೆದು ಬಂದಿದೆ.

ಊಟವಾದ ಮೇಲೆ ಪುರುಷರೂ ಸ್ತ್ರೀಯರೂ ಸಿಂಗಾರಾಗುತ್ತಿದ್ದರು. ಪುರುಷರ ಪ್ರಸಾಧನ-ಕ್ರಿಯೆ ಬೇರೆ, ಸ್ತ್ರೀಯರದು ಬೇರೆ. ಪುರುಷರು ತಮ್ಮ ತಲೆಗೂದಲುಗಳನ್ನು ಬಾಚಿಕೊಂಡು ತುರುಬುಕಟ್ಟಿಕೊಂಡು ಪಾದರಿ, ಮಲ್ಲಿಗೆ, ಮೊಲ್ಲೆ, ಜಾಜಿ, ಕೇದಗೆ, ಸಂಪಗೆ ಮೊದಲಾದ ಹೂಗಳನ್ನು ಮುಡಿಯುತ್ತಿದ್ದರು. ಪುರುಷರು ತಲೆಗೂದಲುಗಳನ್ನು ಕಾಯುವದಕ್ಕೆ ರಾಜನೀತಿಶಾಸ್ತ್ರದಲ್ಲಿ ಆಧಾರ ದೊರೆಯುತ್ತಿದೆಃ 'ನ ಪುನಃ ಶಿರೋಮುಂಡನಂ ಜಟಾಧಾರಣಂ ವಾ' ಎಂದು. ಆದುದರಿಂದ ಶಿರೋಮುಂಡನವಾಗಲಿ ಜಟಾಧಾರಣವಾಗಲಿ ಅಮಂಗಲವೆಂಬ ಭಾವನೆಯಿದ್ದಿತು. ಶಿರೋಭೂಷಣದ ತರುವಾಯ ಹರಿಹರನು ಹೇಳಿದ ಪುರುಷರ ಆಭರಣಗಳಿವು: ಲೇಪನದ್ರವ್ಯ, ಕರ್ಣಯುಗಳಕ್ಕೆ ರತ್ನಾವತಂಸ, ತೋರಹಾರ, ಪದಕ, ಬಾಹುಪೂರ, ತಿಲಕ, ಕಟಕ, ಕೇಯೂರ, ಕಂಕಣ, ಕರ್ಣಪೂರ, ಹೀರಾವಳಿ, ಹೊನ್ನ (ಕರಡಿಗೆಸಿಜ್ಜೆ) ಮುದ್ರಿಕೆ, ವಸ್ತ್ರಗಳಲ್ಲಿ ದುಕೂಲ, ಸಪುರ, ಬಿಳಿಯಂಬರ, ಸುವರ್ಣಪಳಿ, ಉತ್ತರಿಗೆ, ಚಿನಿ, ಮಹಾಚಿನಿ, ದೇವಾಂಗ, ಲಕ್ಷಾವಳಿ, ಹಂಸಾವಳಿ, ಗಜಾವಳಿ ಎಂಬುವು ಬೇರೆ ಬೇರೆ ಜಾತಿಗಳು. ಮಕ್ಕಳ ಆಭರಣಗಳಿವುಃ-ಅರಳೆಲೆ, ಮಾಗಾಯ್, ಬಳೆತೋಳ, ಹುಲಿಯುಗುರ್, ಉಡೆವಣೆ. ಸ್ತ್ರೀಯರ ಆಭರಣಗಳುಃ ಕರ್ಣಪೂರ, ಸೂಸಕ, ಹೊನ್ನೋಲೆ, ಮೂಕುತಿ, ನೇವಣ, ರತ್ನದಾಳೆ ತೋಳಬಂದಿ, ಹೊಂಗಡಗ, ಕಂಕಣ, ಅಂದುಗೆ, ಗೆಜ್ಜೆ, ನೇವುರ, ಚರ

ಣವುದ್ರಿಕೆ, ಮಣಿಮುದ್ರಿಕೆ, ಪೊಂಗೆಜ್ಜೆ, ಮುತ್ತಿನೋಲೆ, ಆಯ್ವೆದಾಳಿ, ಬಾಹುಪೂರ, ಹಸ್ತಕಟಕ, ಅಂಜನ, ತಿಲಕ, 'ಮೂಕುತಿ' ಯನ್ನು ಜೈನಬ್ರಾಹ್ಮಣ ಕವಿಗಳು ಹೇಳಿದಂತೆ ತೋರುವುದಿಲ್ಲ. ನಾಗವರ್ಮನು ಮಾತ್ರ 'ಗಂಡರ ಮೂಕುತಿಯೆನಿಸಿದ ಮಾಂಡಳಿಕರ ಮಂತ್ರಿ ಸಂಧಿ ವಿಗ್ರಹಿ ರಾಯಂ' ಎಂಬ ಪದ್ಯದಲ್ಲಿ ಈ ಆಭರಣವನ್ನು ಉಲ್ಲೇಖಿಸಿದ್ದಾನೆ. ಶಿಲಾಪ್ರತಿಮೆಗಳಲ್ಲಿ ಅದು ಕಂಡುಬರುವುದಿಲ್ಲ. ವರ್ಣಚಿತ್ರಗಳಲ್ಲಿಯೂ ಅದು ಚಿತ್ರಿಸಲಾಗಿಲ್ಲ. ಅಜಂತೆಯ ಗವಿಗಳೊಳಗಿನ ಚಿತ್ರಗಳಲ್ಲಿ ಅದು ಕಂಡುಬರುವುದಿಲ್ಲ. ಆ ಚಿತ್ರಗಳು ವಾಕಾಟಕರ ಆಶ್ರಯದಲ್ಲಿ ಚಿತ್ರಿತ ವಾದುವು. ವಾಕಾಟಕರು ಮಧ್ಯಹಿಂದುಸ್ತಾನದಲ್ಲಿ ಆಳುತ್ತಿದ್ದುದರಿಂದ ಆ ಭಾಗದಲ್ಲಿ 'ಮೂಕುತಿ' ಯಿರಲಿಲ್ಲವೆಂದು ಒಪ್ಪಿಕೊಳ್ಳಬಹುದು. ಆದುದರಿಂದ ಈ ಒಡವೆ ದಕ್ಷಿಣದೇಶದ್ದೇ ಆಗಿ ಅಲ್ಲಿಯೇ ಹೆಚ್ಚಾಗಿ ಪ್ರಚುರಗೊಂಡಿರಬೇಕು. ಕೆಳಗಣ ತರಗತಿಯ ಜನರು ಅದನ್ನು ಈಗಲೂ ಉಪಯೋಗಿಸುತ್ತಾರೆ. ಉಚ್ಚವರ್ಣದವರು ಅದನ್ನು ಉಪಯೋಗಿಸುತ್ತಿರಲಿಕ್ಕಿಲ್ಲವೆಂದು ಹೇಳಬಹುದೇ? ಅವರು ಈಗ ಉಪಯೋಗಿಸುತ್ತಿರುವ 'ಮುಖರೆ' ಮೂಗುತಿಯು ಹಾಗೆಯೇ ಇರುತ್ತದೆಂಬುದನ್ನು ಮರೆಯ ಲಾಗದು.

ಉಚ್ಚನೀಚವರ್ಣದವರಿಂದ ಅವರವರ ಉದ್ಯೋಗಾನುಸಾರವಾಗಿ ಹದಿನೆಂಟು ಜಾತಿಗಳಾದುದು ಸರಿಯಷ್ಟೇ! ಅದನ್ನು ಬ್ರಾಹ್ಮಣರ ವಿಷ ಯದಲ್ಲಿ 'ಅಷ್ಟಾದಶವರ್ಣದೊಳು ಶ್ರೇಷ್ಠ' ಎಂದಿದ್ದಾನೆ. (ಹಾವಿನ ಹಾಳ ಕಲ್ಲಯ್ಯನ ರಗಳೆ). ಅದನ್ನೇ ನಾವು ಹೊಲೆಯ ಹದಿನೆಂಟು ಜಾತಿ ಎಂದು ಹೇಳುತ್ತೇವೆ. ನಗರರಚನೆಯಲ್ಲಿ ಈ ಉದ್ಯೋಗಸ್ಥರು ತಮ್ಮ ತಮ್ಮ ಕೇರಿಗಳನ್ನು ಬೇರೆ ಬೇರೆ ಮಾಡಿಕೊಂಡಿರುತ್ತಿದ್ದರು. ಅದರ ಅವಶೇಷಗಳು ಈಗಲೂ ಕರ್ನಾಟಕದ ಊರುಗಳಲ್ಲಿ ಕಂಡುಬರುತ್ತವೆ. ಬ್ರಾಹ್ಮಣರ ಕೇರಿ (ಹಾರುವರ ಕೇರಿ), ಕುರುಬರೋಣಿ, ಉಪ್ಪರರೋಣಿ, ಕುಂಬರರೋಣಿ, ಸೆಟ್ಟಿಕೇರಿ, ಕಂಚುಗಾರರ ಓಣಿ, ಹೊಲೆಗೇರಿ ಮುಂತಾದ ಪ್ರಯೋಗಗಳು ಮಾತಿನಲ್ಲಿ ನಿಂತಿವೆ; ಅವು ಅರ್ಥಪೂರ್ಣವಾಗಿವೆ. ಬ್ರಾಹ್ಮಣರ ಓಣಿ ಅಗ್ರಹಾರವಾಗಿತ್ತು. 'ಅಗ್ರಹಾರ' ಎಂಬ ಪದವನ್ನು ಹರಿಹರನು ರಗಳೆಗಳಲ್ಲಿ ಮೂರುಸಲ ಉಪಯೋಗಿಸಿದ್ದಾನೆ. ಪ್ರತಿ

ಯೊಂದು ಓಣಿಗೆ ಒಬ್ಬ ಹೆಗ್ಗಡೆ-ಹಿರಿಯ-ಇರುತ್ತಿದ್ದನು. ಆತನಿಗೆ 'ಗೌಡ' ನೆಂಬ ಅರ್ಥಹೀನವಾದ ಹೆಸರೂ ಇರುತ್ತಿದ್ದಿತು. ಅದರ ಅವಶೇಷ 'ಬಡಿಗಿಗೌಡ' 'ಕುಂಬರಗೌಡ' ಎಂಬ ಪದಗಳಲ್ಲಿ ನಿಂತಿವೆ. 'ಹೆಗ್ಗಡೆ' ಪದವು ಉತ್ತರದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಸ್ಥಿರವಾಗಿ ನಿಂತು, ಈಗ ತನ್ನ ಅರ್ಥ ಕಳೆದುಕೊಂಡು ಅಡ್ಡ ಹೆಸರು ಆಗಿದೆ. ಗೌತುಗಳ್ ಎಂಬ ಪದವನ್ನು 'ಹೆಗ್ಗಡೆ' ಯೆಂಬರ್ಥದಿಂದ ಹಲಾಯುಧನ ರಗಳೆಯಲ್ಲಿ ಉಪಯೋಗಿಸಲಾಗಿದೆ. ಈ ಹದಿನೆಂಟು ಕಾಯಕಗಳಲ್ಲಿ ಹರಿಹರನು ಕೆಲವನ್ನು ಮಾತ್ರ ಹೇಳಿದ್ದಾನೆ. ಬಿದಿರಕಾಯಕ, ಹೊನ್ನಕಾಯಕ ಘಟಕಾಯಕ, ಗಣಕಕಾಯಕ, ಹುಲ್ಲಕಾಯಕ, ಕಂಬಿಕಾಯಕ, ವರ್ತಕಕಾಯಕ, ವಾದ್ಯಕಾಯಕ, ನೃತ್ಯಕಾಯಕ, ವಾರವನಿತೆಯರ ಕಾಯಕ, ಕುಂಬರಗುಂಡನ ರಗಳೆಯಲ್ಲಿ ಕುಂಬರರ ಎಲ್ಲ ಆಯುಧಗಳನ್ನು ಹರಿಹರನು ಈ ರೀತಿ ಹೇಳಿದ್ದಾನೆ ಚಟಿದಾಳಪಾತ್ರೆಯನ್ನು ತಿಗರಿಯ ಮೇಲಿಂದ ಕೊಯ್ದು ಬಿಡಿಸುವ ದಾರ, ದಂಡ, ಚಕ್ರ (ತಿಗರಿ), ಚಕ್ರದ ಮೊಳೆ, ಮೃತ್ತಿಕೆ, ಕಟಾಹ, ಪಿಡಿಗುಂಡು, ಕಲುವಲಗೆ. ವರ್ತಕರು ಪಸಾಯಿತರೂ ವಡ್ಡ ವ್ಯವಹಾರಿಗಳೂ ಆಗಿದ್ದರು. ಅವರವರ ವ್ಯವಹಾರದ ಇಂಗಿತ ಆದಯ್ಯನ ರಗಳೆಯಲ್ಲಿ ಹೇಳಲಾಗಿದೆ

'......ಬೇಹಾರಂಗಳ ತೆರನಂ
ಕೂಡಿದ ಮೊದಲಂ ಲಾಭದ ಪರಿಯಂ
ನೋಡಲು ಲೆಕ್ಕದ ಗಣಿತದ ಪರಿಯಂ
ಲೋಭದೊಳಿಪ್ಪುದು ಸದ್ವ್ಯಯವಾಗದು
ಲಾಭವರಿವುದು ಮರೆದಿರಲಾಗದು.

ಎಂಬ ವ್ಯವಹಾರದ ತತ್ವಗಳನ್ನು ತಂದೆ ಆದಯ್ಯನಿಗೆ ಕಲಿಸುತ್ತಾನೆ. ಸರಕುಗಳನ್ನು ಎತ್ತುಗಳ ಮೇಲೇರಿಸಿಕೊಂಡು ಹೋಗುವ ಪದ್ಧತಿಯನ್ನು 'ಸೊಗಯಿಪ ಖಂಡಂಗಳನೊಲಿದೊಪ್ಪಿಸಿ ಪಲವೆತ್ತಿನೊಳಂ ತೀವುತ್ತೋವುತೆ' ಎಂದು ಹೇಳಿದ್ದಾನೆ. ವರ್ತಕರು ತಾವು ತಂದ ಮತ್ತು ಹಿಂದಿನಿಂದ ತರಿಸಿಕೊಂಡ ಸರಕುಗಳನ್ನು ಅಂಗಡಿಯಲ್ಲಿ ಓರಣವಾಗಿ ರಚಿಸಿಟ್ಟುಕೊಂಡು ಬಂದ ಗ್ರಾಹಕರಿಗೆ ಮಾರಿ ತಮ್ಮ ಮೂಲಧನ ಮತ್ತು ಲಾಭಗಳನ್ನು ಕಾದುಕೊಳ್ಳುತ್ತಿದ್ದರು. ಗಣಕಕಾಯಕದವರು ತಮ್ಮದೇ ಒಂದು ಪಂಗಡವನ್ನು ಮಾಡಿಕೊಂಡು ಲಂಚಕ್ಕೆ ಅವಕಾಶವನ್ನಿಟ್ಟು

ಕೊಂಡಿದ್ದರು. 'ಎರೆವ ಲಂಚವನೀವ ( ಬಸವರಾಜದೇ. ೮ ) ಮತಸ್ಥರೂ ಲಂಚಕ್ಕೆ ಬಾಯಿತೆರೆಯುತ್ತಿದ್ದರೆಂಬಂಶವನ್ನು ಕೌಶಿಕನು ಮಹಾದೇವಿಯಕ್ಕನನ್ನು ಒಲಿಸಲು ಕಲುಮಠದ ಹುಲುಮಠದ ಮುಖ್ಯರ್ಗೆ ಲಂಚ' ಕೊಟ್ಟ ಸಂದರ್ಭದಲ್ಲಿ ತಿಳಿಸಿದ್ದಾನೆ. ಶರಣರು ವೇತನವನ್ನು ಹಣದ ರೂಪಿನಿಂದ ತೆಗೆದುಕೊಳ್ಳುತ್ತಿದ್ದರು. ಬಸವಣ್ಣನು ಆ ಕಾಯಕದಲ್ಲಿ ಶ್ರೇಷ್ಠನಾಗಿದ್ದುದರಿಂದ ಆತನಿಗೆ 'ಒಂದು ವರುಷಕ್ಕೆ ನೂರೊಂದು ಹೊನ್ನು' ಎಂದು ನಿಶ್ಚಿತವಾಗಿತ್ತು. ಒಕ್ಕಲಿಗರಲ್ಲಿ ಜೀತದ ಆಳುಗಳಿಗೆ ವರುಷದ ವೇತನವು ಈಗಲೂ ಕಟ್ಟುಮಾಡಲ್ಪಡುತ್ತದೆ, ತಿಂಗಳಿನದಲ್ಲ. ಕಂಬಿಕಾಯಕದವರು ದೂರ ಪ್ರವಾಸಗಳಲ್ಲಿ ಕಂಬಿಗಳನ್ನು ಉಪಯೋಗಿಸುತ್ತಿದ್ದರು. ನೀರು ತರಲೂ ಈಗಿನಂತೆ ಕಂಬಿಗಳನ್ನು ಉಪಯೋಗಿಸುತ್ತಿದ್ದರು—ಅಗ್ಘವಣಿಯ ಕಂಬಿ.

ಹರಿಹರನು ಸಂಗೀತನೃತ್ಯಪ್ರಿಯನು. ವಾದ್ಯಬಾರಿಸುವಲ್ಲಿಯೂ ಆತನು ಕೈಚಳಕ ತೋರಿಸಿದ್ದಾನೆ. ಪ್ರಭುದೇವರ ರಗಳೆ ಮುಂ. ಎಡೆಗಳಲ್ಲಿ ಅದು ಕಂಡುಬರುತ್ತಿದೆ. ಕುಂಬರ ಗುಂಡನ ರಗಳೆ, ಕಾರಿಕಾಲಮ್ಮೆಯ ರಗಳೆ ಇವೆರಡರಲ್ಲಿ ಶಂಕರನ ತಾಂಡವವಿದೆ.— ನೃತ್ಯಕ್ಕೆ ಸಂಬಂಧಪಟ್ಟ ಬೇರೆ ಬೇರೆ ಸ್ಥಾನಗಳು, ಮುದ್ರೆಗಳು, ಕರ-ಪಾದ ಮುಂತಾದ ಅಂಗೋಪಾಂಗ ವಿನ್ಯಾಸಗಳು, ಅಭಿನಯ, ಹೆಜ್ಜೆ ಮುಂತಾದ ಲಕ್ಷಣಗಳು ತಾಳಲಯಬದ್ಧವಾಗಿ ಅಲ್ಲಿ ಬರುತ್ತವೆ, ಕುಂಬರ ಗುಂಡನ ಮಡಕೆ ಬಾರಿಸುವಿಕೆಯ ತಾಳವನ್ನನುಸರಿಸಿ ಶಿವನು ಕುಣಿಯುವ ವರ್ಣನೆಯನ್ನು ಓದುವಾಗ ಓದುವವರೂ ಕೇಳುವವರೂ ಅದರಲ್ಲಿ ಮಗ್ನರಾಗಿ ತಾವೂ ಆ ನೃತ್ಯದಲ್ಲಿ ಅಪ್ರತ್ಯಕ್ಷವಾಗಿ ಸಹಭಾಗಿಗಳಾಗುವಂತೆ ಒಂದು ಸನ್ನಿವೇಶ ನಿರ್ಮಾಣವಾಗುತ್ತದೆ. ಆ ರಗಳೆಯ ಛಂದಸ್ಸೂ ನೃತ್ಯಕ್ಕೆ ಬಹಳೇ ಅನುಕೂಲವಾಗಿದೆ. ಆ ಕಾರಣದಿಂದಲೇ ವಿಶ್ವವೆಲ್ಲ ಶಿವತಾಂಡವದಲ್ಲಿ ತನ್ಮಯವಾಗಿ ಎಲ್ಲರೂ ಕುಣಿಯಹತ್ತುತ್ತಾರೆ. ಇದು ಸಹಾನುಭೂತಿಯ ಕ್ರಿಯೆಯಿರಬಹುದು. ಮಾತ್ರ ಅದನ್ನು ಹುಟ್ಟಿಸುವ ಸಾಮರ್ಥ್ಯ ಹರಿಹರನದು ಅಲ್ಲಿ ' ಹರಿಹರನೇ, ನೀನೇ ಧನ್ಯ! ನೀನೆ ವರಕವಿ! ' ಎಂಬ ಉದ್ಗಾರ ಎಲ್ಲರ ಬಾಯಿಂದ ಹೊರಡುತ್ತದೆ. ಶಿವಪೂಜೆಯಲ್ಲಿ ಮಗ್ನರಾದ ಶಿವಭಕ್ತರು ಭಕ್ತಿಯಿಂದ ಉತ್ಪನ್ನರಾಗಿ ತಮ್ಮ ತಮ್ಮ ರೀತಿಯಿಂದ ಕುಣಿಯುತ್ತಾರೆ. ಇದು ಅವರ ಭಕ್ತ್ಯಾನಂದದ ಪರಿಣಾಮ.

ಆನಂದದಲ್ಲಿ ಮಕ್ಕಳು ಚಪ್ಪಾಳೆ ತಟ್ಟಿ ಕುಣಿಯುವುದು ಅನುಭವದ ಮಾತು. ಆನಂದದಲ್ಲಿ ನಾವೂ ನಲಿಯುತ್ತೇವೆ. ಇಂತಹದೇ ಆ ಶಿವ ಭಕ್ತರ ನೃತ್ಯ. ಅದರಲ್ಲಿ ವಾದ್ಯಗಳಿಲ್ಲ, ತಾಳಲಯಗಳಿಲ್ಲ, ಸಾಗ್ರಸಂಗೀತವಿಲ್ಲ; ಮುದ್ರೆಗಳಿಲ್ಲ, ಅಭಿನಯವಿಲ್ಲ, ಅಂಗವಿನ್ಯಾಸಗಳಿಲ್ಲ, ಹೆಜ್ಜೆಗಳಿಲ್ಲ. ಮನದಲ್ಲಿ ತುಂಬಾ ತುಂಬಿದ ಭಕ್ತ್ಯಾನಂದದಲ್ಲಿ ನಲಿದು ಒಲಿದು, ತಾಗಿ ಬಾಗಿ, ಮಣಿದು ಕುಣಿದು ತೃಪ್ತರಾಗುತ್ತಾರೆ ಭಕ್ತರು. ಅದು ಅವರ ಪ್ರಾಕೃತ-ನೃತ್ಯ.

ವಚನಕಾರರು ನೀತಿಗೆ ಅಗ್ರಸ್ಥಾನ ಕೊಟ್ಟಿರುವಂತೆ ಹರಿಹರನೂ ಕೊಟ್ಟಿದ್ದಾನೆ. ಸತ್ಯ, ಸದಾಚಾರ, ಅಹಿಂಸೆ, ಬ್ರಹ್ಮಚರ್ಯ, ಪರೋಪಕಾರ, ಉದ್ಯೋಗ ಮುಂತಾದವುಗಳನ್ನು ಕವಿ ಸಂದರ್ಭಾನುಸಾರವಾಗಿ ಬೋಧಿಸಿದ್ದಾನೆ. ತಾನು ಬ್ರಹ್ಮಚಾರಿಯಾಗಿದ್ದರೂ ಸತಿ-ಪತಿಗಳ ಪರಸ್ಪರ ಪ್ರೇಮಾದರಭಕ್ತಿಗಳನ್ನು ವಿವರಿಸಿದ್ದಾನೆ. ಅವರಲ್ಲಿರುವ ಪ್ರೇಮದ ಕೋಮಲಭಾವಗಳನ್ನೂ ಆಡಿ ತೋರಿದ್ದಾನೆ. ಆದಯ್ಯನು ತಿರುಗಿ ಬಂದುದನ್ನು ನೋಡಿದಕೂಡಲೆ ಪದ್ಮಾವತಿ ನುಡಿದ ಮಾತು ಇದು.

ಎನ್ನಯ ನಿಧಿ ಬಂದುದೆ ಸುಧೆ ಬಂದುದೆ
ಎನ್ನಯ ಕರಿ ಬಂದುದೆ ಸಿರಿ ಬಂದುದೆ

ಇತ್ಯರ್ಥವೆಂದರೆ ಹರಿಹರನು ಕಣ್ಣು ಮುಚ್ಚಿಕೊಂಡ ಪ್ರಪಂಚಬಾಹಿರನಾದ ಶಿವಭಕ್ತನಲ್ಲ. ಆತನ ಭಕ್ತಿಯಲ್ಲಿ ಲೋಕಾನುಭವದ ಮಧುರ ಮೀಲನವಿದೆ.

ಕೊನೆಯದಾಗಿ ಶಕುನ–ಕನಸುಗಳ ಸಂದರ್ಭದಲ್ಲಿ ಹರಿಹರನ ಅಭಿಪ್ರಾಯವನ್ನು ಹೇಳಿ ನನ್ನ ರಗಳೆಯನ್ನು ಮುಗಿಸುತ್ತೇನೆ. ಶುಭಾಶುಭ ಶಕುನಗಳಿಗೆ ಕನಸುಗಳಿಗೆ ನಾವು ಗಮನ ಕೊಡುತ್ತೇವೆ. ಪಾಶ್ಚಾತ್ಯರೂ ಕೊಡುತ್ತಾರೆ. 'Coming evils cast their shadow' ಎಂಬ ಗಾದೆ ಅದಕ್ಕೆ ಆಧಾರ. ಇವೆರಡೂ ನಮ್ಮ ಮನಸ್ಸನ್ನು ಗಟ್ಟಿಯಾಗಿ ಹಿಡಿದುಕೊಂಡಿರುವುದರಿಂದ ಜ್ಯೋತಿಷಿಗಳ ಚಲ್ಲಾಟ ನಡೆದಿದೆ. ರಗಳೆಗಳಲ್ಲಿ ಕನಸುಗಳು ಬರುತ್ತವೆ. ಕಣ್ಣಪ್ಪನ ರಗಳೆಯಲ್ಲಿ 'ಬಲದ ಕಣ್ಪುರ್ಬು ವೈವರ್ಚಿ ಕೆತ್ತುತ್ತಮಿರೆ' ಎಂದೂ, ಮಹಾದೇವಿಯಕ್ಕನ ರಗಳೆಯಲ್ಲಿ 'ಕೌಶಿಕರಾಜ ಬಲದ ಭುಜಂ ಕೆತ್ತೆ' ಗಿರಿಸುತೆಯ ಮುಡಿ

ಯಿಂದಲೊಂದು ಹೂ ಸಡಿಲುತಿರೆ’ ಎಂದೂ ಆದಯ್ಯನ ರಗಳೆಯಲ್ಲಿ ‘ಸುರಹೊನ್ನೆಯು ಬಸದಿಯು ಜಿನನಳುತಿರೆ’ ‘ಒಡನೆದ್ದುವಾ ಬಾಗಿಲೊಳ್ಕಿಂಪಿರುವೆಗಳು’ ‘ನಿಡುಸರಂಗೊಂಡು ಕರೆದುವು ಪಗಲಬಳ್ಳುಗಳು’ ಎಂದೂ ಪ್ರಪಂಚದಲ್ಲಿ ನಡೆಯುವ ಸ್ವಾಭಾವಿಕ ಕಾರ್ಯಗಳನ್ನು ತಮ್ಮ ಭಾವನೆಗಳಿಗೆ ತಿರುಗಿಸಿಕೊಂಡು ಅವು ಶುಭಾಶುಭ ಶಕುನಗಳೆಂದು ಭಾವಿಸುವ ನಮ್ಮ ಪದ್ಧತಿ-ಪರಂಪರೆಗೂ ಕವಿ ಗಮನ ಕೊಟ್ಟಿದ್ದಾನೆ.

---

## ಶಿವಾನುಭವಕ್ಕೆ ಸಹಾಯ.

ಶ್ರೀಮಾನ್ ಡಿ. ಎಸ್. ಮಲ್ಲಪ್ಪನವರು ಎಮ್. ಎಲ್. ಸಿ ಮು. ತಿಪಟೂರು ಈ ಮಹನೀಯರು ಶಿವಾನುಭವ ಪತ್ರಿಕೆಗೆ ಸಹಾಯವೆಂದು ೫೦ ರೂಪಾಯಿಗಳನ್ನು ಮತ್ತು ಅದರ ಹೋದ ವರ್ಷದ ಮತ್ತು ಪ್ರಚಲಿತ ವರ್ಷದ ಚಂದಾ ಹಣವೆಂದು ೧೦ ರೂಪಾಗಳನ್ನು ಕಳಿಸಿದ್ದಾರೆ.

ಶ್ರೀಮಾನ್ ಗುರುಲಿಂಗಯ್ಯ ಲಿಂಗಾಧಾಳ ಮು. ಗದಗ ಈ ಮಹನೀಯರು ಶಿವಾನುಭವಕ್ಕೆ ಸಹಾಯಧನವೆಂದು ೧೫ ರೂಪಾಯಿಗಳನ್ನು ಕಳಿಸಿದ್ದಾರೆ.

ಶ್ರೀಮತಿ ವೀರವ್ವಾ ಕೋಂ ಅಡಿವೆಪ್ಪ ತುಪ್ಪದ ಇವರು ತಮ್ಮ ೮೫ನೇ ವರ್ಷದಲ್ಲಿ ಶಿವೈಕ್ಯರಾದ ಸ್ಮರಣಾರ್ಥವಾಗಿ ಇವರ ಮಕ್ಕಳಾದ ಶ್ರೀ. ಶಿವಪ್ಪ ಅಡಿವೆಪ್ಪ ತುಪ್ಪದ ಗದಗ ಇವರು ೫ ರೂ. ಕಳಿಸಿದ್ದು.

ವೇ. ಮೂ. ಘಿಸ್ಸದ ಶಿವಪ್ಪ ಸ್ವಾಮಿಗಳವರು ಕೊಳ್ಳೆಗಾಲ ಇವರಿಂದ ೫ ರೂ.

ಇವರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

— ಸಂಪಾದಕ.

ಇದು ಆಚಾರ ಲಿಂಗ ಮಿಶ್ರಾರ್ಪಣವು. ಇದೇ ರೀತಿಯಲ್ಲಿ ಗುರು ಲಿಂಗ ಮಿಶ್ರಾರ್ಪಣವು ೨೮೮ ತೆರ, ಶಿವಲಿಂಗ ಮಿಶ್ರಾರ್ಪಣವು ೨೮೮ ತೆರ, ಜಂಗಮಲಿಂಗ ಮಿಶ್ರಾರ್ಪಣವು ೨೮೮ ತೆರ, ಪ್ರಸಾದಲಿಂಗ ಮಿಶ್ರಾರ್ಪಣವು ೨೮೮ ತೆರ, ಮಹಾಲಿಂಗ ಮಿಶ್ರಾರ್ಪಣವು ೨೮೮ ತೆರ ಹೀಗೆ ೧೭೨೮ ತೆರ ನಾಯಿತು.

---

ಹೀಗೆ ಪ್ರಥಮದಲ್ಲಿ ನಿರೂಪಣವ ಪಾಲಿಸಿದ ಕಾಯಾರ್ಪಣವು, ದ್ವಿತೀಯದಲ್ಲಿ ಕರಣಾರ್ಪಣವು, ತೃತೀಯದಲ್ಲಿ ಭಾವಾರ್ಪಣವು ಈ ತ್ರಿವಿಧಾರ್ಪಣಂಗಳಲ್ಲಿ ಇಷ್ಟಲಿಂಗದೊಡನೆ ಕೂಡಿದ ಆಚಾರಾದಿ ಮಹಾಲಿಂಗಾಂತ್ಯವಾದ ಆರು ಲಿಂಗಗಳು ಅಂಗಸಂಬಂಧವಾದ ಷಡ್ವಿಧ ಪದಾರ್ಥಂಗಳನ್ನು ಷಡ್ವಿಧ ಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಡು ಪಸರಿಸಿ ಒಂದೊಂದಾರಾಗಿ ವಿಶಾಲತರವನ್ನೈದಿ ಮೂವತ್ತಾರು ಲಿಂಗಂಗಳಾಗಿ ಆ ಇಷ್ಟಲಿಂಗದೊಡನೆ ಕೂಡಿದ ಆಚಾರಾದಿ ಮಹಾಲಿಂಗಾಂತ್ಯವಾದ ಆರು ಲಿಂಗಂಗಳು ಅಂಗಸಂಬಂಧವಾದ ರೂಪು ಷಡ್ವಿಧ ಪದಾರ್ಥಂಗಳನ್ನು ಷಡ್ವಿಧ ಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಡು ಪಸರಿಸಿ ಒಂದೊಂದಾರಾಗಿ ವಿಶಾಲತರವನ್ನೈದಿ ಮೂವತ್ತಾರು ಲಿಂಗಂಗಳಾದ ಆ ಇಷ್ಟಲಿಂಗದೊಡನೆ ಕೂಡಿದ ಆಚಾರಾದಿ ಮಹಾಲಿಂಗಾಂತ್ಯವಾದ ಆರು ಲಿಂಗಗಳು ಅಂಗಸಂಬಂಧವಾದ ರೂಪು ಷಡ್ವಿಧ ಪದಾರ್ಥಂಗಳನ್ನು ಷಡ್ವಿಧ ಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಡು ಒಂದೊಂದಾರಾಗಿ ವಿಶಾಲತರವನ್ನೈದಿ ಇನ್ನೂರು ಹದಿನಾರು ಲಿಂಗಂಗಳಾಗಿ,

ಭಕ್ತೀಸಲಿಂಗ ಪ್ರಾಣಲಿಂಗದೊಡನೆ ಕೂಡಿದ ಮೂವತ್ತಾರು ಲಿಂಗಗಳು ಮನೋ ಸಂಬಂಧವಾದ ಮೂವತ್ತಾರು ಲಿಂಗಗಳು ಮನೋ ಸಂಬಂಧವಾದ ಮೂವತ್ತಾರು ರುಚಿ ಪದಾರ್ಥಂಗಳನ್ನು ಮೂವತ್ತಾರು ತೆರದ ಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಡು ಪಸರಿಸಿ ಒಂದೊಂದಾರಾಗಿ ವಿಶಾಲತರವನ್ನೈದಿ ಇನ್ನೂರು ಹದಿನಾರು ಲಿಂಗಂಗಳಾಗಿ,

ಭಕ್ತೀಸಲಿಂಗ ಭಾವಲಿಂಗದೊಡನೆ ಕೂಡಿದ ಮೂವತ್ತಾರು ಲಿಂಗಗಳು ಭಾವಸಂಬಂಧವಾದ ಮೂವತ್ತಾರು ತೃಪ್ತಿಪದಾರ್ಥಂಗಳನ್ನು ಮೂವ

ತ್ತಾರು ತೆರದ ಭಕ್ತಿಸಕೀಲಂಗಳಿಂದ ಸಮರ್ಪಿಸಿಕೊಂಡು ಪಸರಿಸಿ ಒಂದೊಂದಾರಾಗಿ ವಿಶಾಲತರವನ್ನೈದಿ ಇನ್ನೂರುಹದಿನಾರು ಲಿಂಗಂಗಳಾಗಿ,

ಹದಿನಾರೇ ಮೇಲಾಗಿ ಇನ್ನೂರೇ ಆದಿಯಾದ ಲಿಂಗಂಗಳು ೨೧೬ ತೆರದ ಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಡು ಪಸರಿಸಿ ಒಂದೊಂದಾರಾಗಿ ವಿಶಾಲತರವನ್ನೈದಿ ಇನ್ನೂರುಹದಿನಾರು ಲಿಂಗಂಗಳಾಗಿ,

ಹದಿನಾರೇ ಮೇಲಾಗಿ ಇನ್ನೂರೇ ಆದಿಯಾದ ಲಿಂಗಂಗಳು ೨೧೬ ತೆರದ ಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಡು ಪಸರಿಸಿ ಒಂದೊಂದಾರಾಗಿ ವಿಶಾಲತರವನ್ನೈದಿ ಪರಿಪೂರ್ಣವಾಗಿ ಪರಿಪೂರ್ಣಾಂಗ ಪರಿಪೂರ್ಣಲಿಂಗ ಸ್ವರೂಪವನ್ನು ತಾಳಿ ಆ ಪರಿಪೂರ್ಣಾಂಗ ಪರಿಪೂರ್ಣಲಿಂಗದಾಚರಣೆ ಎಂಬುದು ತಾನು ಪಿಂಡಾಂಡದಲ್ಲಿ ಪಿಂಡ ಬ್ರಹ್ಮಾಂಡವೆಂಬೆರಡರೊಳಗೆಲ್ಲವುಗಳು ಸನ್ನಿಹಿತವಾಗಿಪ್ಪವು.

---

## ಷಟ್ಕರಣ ವರ್ತನೆಯನ್ನು ನಷ್ಟಗೊಳಿಸುವುದು.

ಪರಿಪೂರ್ಣಾಂಗ ಪರಿಪೂರ್ಣ ಲಿಂಗದಾಚರಣೆ ಎಂಬುದು ತಾನು ಸರ್ವರಿಗೂ ವೇದ್ಯವಾದೀತೇ ಎಂಬಲ್ಲಿ ಕ್ರಿಯಾಬಾಹ್ಯರಾದ ವೇದಾಂತಿಗಳಿಗೆ ಜ್ಞಾನಬಾಹ್ಯರಾದ ಸಿದ್ಧಾಂತಿಗಳಿಗೆ ಜ್ಞಾನಕ್ರಿಯಾಬಾಹ್ಯರಾದ ಯೋಗಾಭ್ಯಾಸಿಗಳಿಗೆ ವೇದ್ಯವಾಗದು. ಇವರಿಗೆ ಷಟ್ಕರಣಂಗಳ ವರ್ತನೆ ನಷ್ಟವಾಗದ ಕಾರಣ ಸಾಧ್ಯವಾಗದು.

ಸುಚಿತ್ತ:— ಹೊನ್ನು, ಹೆಣ್ಣು, ಮಣ್ಣು, ಸಕಲಕರಣ ಸತಿಸುತಾದಿಗಳ ಮೇಲಣ ವ್ಯಾಮೋಹವೇ ಕುಚಿತ್ತ. ಇದನ್ನಳಿದು ಲಿಂಗಕರಣಂಗಳಾಗಿ ನಿರ್ಮೋಹಿಯಾಗಿರುವವೇ ಸುಚಿತ್ತ. ಇದು ಸ್ಥಿರಕರವಾಗಿ ಇಂಬುಗೊಂಡಾಗ ಪಂಚಾಚಾರ ಸ್ವರೂಪ ಆಚಾರ ಬ್ರಹ್ಮವು ಘ್ರಾಣೇಂದ್ರಿಯದಲ್ಲಿ ನೆಲೆಗೊಂಡು ಅಲ್ಲಿ ಬರುವ ಸುಗಂಧ ಪದಾರ್ಥವನರ್ಪಿಸಿಕೊಂಡು ಶರಣಂಗೆ ಸುಗಂಧ ಪದಾರ್ಥವ ಕರುಣಿಸಿಕೊಡುತ್ತಿಹುದು. ಆದರಿಂದ ಹೊರತಾಗಿ ಕುಚಿತ್ತವೆಂಬ ಕರಕಮಲಕ್ಕೆ ಪಂಚಾಚಾರ ಸ್ವರೂಪವಾದ

ಆಚಾರಲಿಂಗವು ಘ್ರಾಣೇಂದ್ರಿಯದಲ್ಲಿ ನೆಲೆಗೊಳ್ಳದು. ಅದು ನೆಲೆಗೊಳ್ಳ ದಿದ್ದರೆ ಅಲ್ಲಿ ಬರುವ ಸುಗಂಧ ಪ್ರಸಾದವರ್ಪಿತವಾಗದು. ಆ ಸುಗಂಧ ಪದಾರ್ಥವರ್ಪಿತವಾಗದಿದ್ದಲ್ಲಿ ಲಿಂಗಾರ್ಪಿತವಿಲ್ಲ. ಲಿಂಗಾರ್ಪಿತವಿಲ್ಲದಿದ್ದಲ್ಲಿ ಪ್ರಸಾದ ಸೇವನೆ ಇಲ್ಲ. ಪ್ರಸಾದ ಸೇವನೆ ಇಲ್ಲದಿದ್ದಲ್ಲಿ ಮುಕ್ತಿ ಇಲ್ಲ.

ಸುಬುದ್ಧಿ:— ಪರಧನ ಪರಸತಿ, ಪರದೈವ, ಪರನಿಂದೆ ಪರಹಿಂಸೆ ಎಂಬ ಪಂಚಮಹಾಪಾತಕಂಗಳೊಡನೆ ಕೂಡಿ ಚರಿಸುವುದೇ ಕುಬುದ್ಧಿ. ಅಂತಪ್ಪ ಕುಬುದ್ಧಿ ಎಂಬುದು ಕೆಟ್ಟು ಅಷ್ಟಾವರಣವ ಸಂಗವ ಮಾಡಿ ಕೊಂಡು ಪಂಚಾಚಾರವನ್ನೇ ಪ್ರಾಣವ ಮಾಡಿಕೊಂಡು ಏಕಲಿಂಗ ನಿಷ್ಠಾ ಪರವಾಗಿ ಆಚರಿಸುವುದೇ ಸುಬುದ್ಧಿ. ಅದು ಸ್ಥಿರತರವಾಗಿ ಇಂಬುಗೊಂಡಾಗ ಆ ಸುಬುದ್ಧಿ ಎಂಬ ಕರಕಮಲಕ್ಕೆ ಮಂತ್ರಮೂರ್ತಿಯಾದ ಗುರುಲಿಂಗವು ಸಂಬಂಧವಾಗಿ ಜಿಹ್ವೇಂದ್ರಿಯದಲ್ಲಿ ನೆಲೆಗೊಂಡು ಅಲ್ಲಿ ಬರುವ ಸುರಸ ಪದಾರ್ಥವ ಸಮರ್ಪಿಸಿಕೊಂಡು ಶರಣಂಗೆ ತನ್ನ ಸುರಸ ಪ್ರಸಾ ದವ ಕರುಣಿಸಿಕೊಡುತ್ತಿಹುದು. ಅವರಿಂದ ಹೊರತಾಗಿ ಕುಬುದ್ಧಿ ಎಂಬ ಕರಕಮಲಕ್ಕೆ ಮಂತ್ರಮೂರ್ತಿಯಾದ ಗುರುಲಿಂಗವು ಸಂಬಂಧ ವಾಗಲೊಲ್ಲದು. ಅದು ಸಂಬಂಧವಾಗಲೊಲ್ಲದಲ್ಲಿ ಅಲ್ಲಿ ಬರುವ ಸುರಸ ಪದಾರ್ಥವರ್ಪಿತವಾಗದು. ಆ ಪದಾರ್ಥವರ್ಪಿತವಾಗದಿದ್ದಲ್ಲಿ ಲಿಂಗಾರ್ಪಿತ ವಿಲ್ಲ. ಲಿಂಗಾರ್ಪಿತವಿಲ್ಲದಿದ್ದಲ್ಲಿ ಪ್ರಸಾದ ಸೇವನೆ ಇಲ್ಲ. ಆ ಪ್ರಸಾದ ಸೇವನೆ ಇಲ್ಲದಿದ್ದಲ್ಲಿ ಮುಕ್ತಿ ಮುನ್ನವೇ ಇಲ್ಲ.

ನಿರಹಂಕಾರ:— ತನುತ್ರಯ ಸಂಬಂಧವಾದ ರೂಪು ರುಚಿ ತೃಪ್ತಿ ಗಳನ್ನು ಲಿಂಗಾರ್ಪಿತ ವಿಹೀನವಾಗಿ ಜೀವಭಾವದಿಂದ ಭುಂಜಿಸಿ ದೇಹೋ ಹಂಮೆಂದು ಉಳಿವುದೇ ಅಹಂಕಾರ. ಅದು ನಷ್ಟವಾಗಿ ಹೋಗಿ ತನು ತ್ರಯ ಸಂಬಂಧವಾದ ರೂಪು ರುಚಿ ತೃಪ್ತಿಗಳನ್ನು ಇಷ್ಟ ಪ್ರಾಣ ಭಾವ ಲಿಂಗಮುಖದಿಂದು ಳುಮೆಯಾಗಿ ಬಂದ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವ ಪಡೆದನುಭವಿಸಿ ನಿರಹಂಭಾವಿಯಾಗಿರುವುದೇ ನಿರಹಂಕಾರ. ಅದು ತನ್ನಲ್ಲಿ ಸ್ಥಿರತರವಾಗಿ ಇಂಬುಗೊಂಡಾಗ ಆ ನಿರಹಂಕಾರವೆಂಬ ಕರಕಮಲಕ್ಕೆ ಪರಮಪ್ರಕಾಶ ಸ್ವರೂಪವಾದ ಶಿವಲಿಂಗಸಂಬಂಧವಾಗಿ ನೇತ್ರೇಂದ್ರಿಯ ದಲ್ಲಿ ನೆಲೆಗೊಂಡು ಅಲ್ಲಿ ಬರುವ ಸುರೂಪು ಪದಾರ್ಥವನರ್ಪಿಸಿಕೊಂಡ ಶರಣಂಗೆ ತನ್ನ ಸುರೂಪು ಪ್ರಸಾದವ ಕರುಣಿಸಿಕೊಡುತ್ತಿಹುದು. ಅದು

ರಿಂದ ಹೊರತಾಗಿ ಆ ಅಹಂಕಾರವೆಂಬ ಕರಕಮಲಕ್ಕೆ ಪರನುಪ್ರಕಾಶ ಸ್ವರೂಪವಾದ ಶಿವಲಿಂಗವು ಸಾಧ್ಯವಾಗದು. ನೇತ್ರೇಂದ್ರಿಯದಲ್ಲಿ ನೆಲೆ ಗೊಳ್ಳದು. ಅದು ನೆಲೆಗೊಳ್ಳದಿದ್ದಲ್ಲಿ ಅಲ್ಲಿ ಬರುವ ರೂಪುಪದಾರ್ಥವ ರ್ಪಿತವಾಗದು. ಆ ರೂಪು ಪದಾರ್ಥವರ್ಪಿತವಾಗದಿದ್ದಲ್ಲಿ ಲಿಂಗಾರ್ಪಿತವಿಲ್ಲ. ಆ ಲಿಂಗಾರ್ಪಿತವಾಗದಿದ್ದಲ್ಲಿ ಪ್ರಸಾದ ಸೇವನೆ ಇಲ್ಲ. ಆ ಪ್ರಸಾದ ಸೇವನೆ ಇಲ್ಲದಿದ್ದಲ್ಲಿ ಮುಕ್ತಿ ಮುನ್ನವೇ ಇಲ್ಲ.

ಸುಮನಃ— ಹೃದಯ ಕಮಲದ ಅಷ್ಟದಳಾಗ್ರಗತಿಯೊಡಗೂಡಿ ಸಂಚಲ ವ್ಯವಹಾರಿಯಾಗುವದೇ ಕುಮನ. ಅದು ನಷ್ಟವಾಗಿ ಹೋಗಿ ಸುಮನ ಊರ್ಧ್ವ ಮುಖವಾಗಿರುವ ಧರ್ಮ ಜ್ಞಾನ ವೈರಾಗ್ಯ ಐಶ್ವರ್ಯವೆಂಬ ಚತುರ್ದಳ ಕಮಲ ಸಿಂಹಾಸನದಲ್ಲಿ ನೆಲೆಗೊಂಡು ಅಚಲಾನಂದ ಪೂಜೆಯ ಕೈಕೊಂಡೊಪ್ಪುವ ಪರಮಾತ್ಮ ಲಿಂಗದಲ್ಲಿ ತನ್ನ ಮನವನ್ನು ಸ್ವಸ್ಥಿರವ ಮಾಡಿಕೊಂಡಿರುವುದೇ ಸುಮನ. ಅಂತಪ್ಪ ಸುಮನವೆಂಬ ಕರಕಮಲಕ್ಕೆ ಯಜನಸ್ವರೂಪವಾದ ಚರಲಿಂಗವು ಸಂಬಂಧವಾಗಿ ತ್ವಗಿಂದ್ರಿಯದಲ್ಲಿ ನೆಲೆ ಗೊಂಡು ಅಲ್ಲಿ ಬರುವ ಸುಸ್ಪರುಶನವೆಂಬ ಪದಾರ್ಥವನರ್ಪಿಸಿಕೊಂಡು ಶರಣಂಗೆ ಸುಸ್ಪರ್ಶನ ಪ್ರಸಾದವ ಕರುಣಿಸಿಕೊಡುತ್ತಿಹುದು. ಹಾಗಲ್ಲವ ಪಕ್ಷದಲ್ಲಿ ಕುಮನವೆಂಬ ಕರಕಮಲಕ್ಕೆ ಯಜನ ಸ್ವರೂಪವಾದ ಚರಲಿಂಗವು ಸಾಧ್ಯವಾಗದು. ಆ ಲಿಂಗವು ಸಂಬಂಧವಾಗದಿದ್ದಲ್ಲಿ ತ್ವಗಿಂದ್ರಿಯದಲ್ಲಿ ನೆಲೆ ಗೊಳ್ಳದು. ಅಲ್ಲಿ ನೆಲೆಗೊಳ್ಳದಿದ್ದಲ್ಲಿ ಅಲ್ಲಿ ಬರುವ ಸುಸ್ಪರ್ಶನ ಪದಾರ್ಥ ವರ್ಪಿತವಾಗದು. ಆ ಪದಾರ್ಥವರ್ಪಿತವಾಗದಿದ್ದಲ್ಲಿ ಲಿಂಗಾರ್ಪಿತವಿಲ್ಲ. ಆ ಲಿಂಗಾರ್ಪಿತವಾಗದಿದ್ದಲ್ಲಿ ಪ್ರಸಾದ ಸೇವನೆ ಇಲ್ಲ. ಆ ಪ್ರಸಾದ ಸೇವನೆ ಇಲ್ಲದಿದ್ದಲ್ಲಿ ಮುಕ್ತಿ ಮುನ್ನವೇ ಇಲ್ಲ.

ಸುಜ್ಞಾನಃ— ದೇಹವೇ ಸತಿಯಾಗಿಯೂ ಆತ್ಮನೇ ಪತಿಯಾಗಿಯೂ ಸಕಲಕರಣಂಗಳೇ ತನಯ ತೊತ್ತಾದಿಗಳಾಗಿಯೂ ಘಟಸಂಸಾರಿಯಾ ಗಿಯೂ ಆಚರಿಸುವದೇ ಅಜ್ಞಾನವು. ಅಂತಪ್ಪ ಅಜ್ಞಾನವು ನಷ್ಟವಾಗಿ ಹೋಗಿ ಶರಣನೇ ಸತಿಯಾಗಿಯೂ ಲಿಂಗವೇ ಪತಿಯಾಗಿಯೂ ಇಂದ್ರಿ ಯಂಗಳನೆಲ್ಲ ಲಿಂಗೇಂದ್ರಿಯಗಳಾಗಿಯೂ ಲಿಂಗಪ್ರಸಾದಿಯಾಗಿಯೂ ಅಳ ವಡಿಸಿಕೊಂಡು ಲಿಂಗಾಂಗಿ ಸಂಸಾರಿಯಾಗಿ ಆಚರಿಸುವುದೇ ಸುಜ್ಞಾನವು. ಅಂತಪ್ಪ ಸುಜ್ಞಾನವೆಂಬ ಕರಕಮಲವು ನೆಲೆಗೊಂಡಲ್ಲಿ, ಆ ಸುಜ್ಞಾನವೆಂಬ

ಕರಕಮಲಕ್ಕೆ ಈಳನ ಸ್ವರೂಪವಾದ ಪ್ರಸಾದಲಿಂಗವು ಸಂಬಂಧವಾಗಿ ಶ್ರೋತ್ರೇಂದ್ರಿಯದಲ್ಲಿ ನೆಲೆಗೊಂಡು ಅಲ್ಲಿ ಬರುವ ಶಬ್ದಪದಾರ್ಥವನರ್ಪಿಸಿಕೊಂಡು ಶರಣಂಗೆ ತನ್ನ ಸುಶಬ್ದಪ್ರಸಾದವ ಕರುಣಿಸಿಕೊಡುತ್ತಿಹುದು. ಹಾಗಲ್ಲದ ಪಕ್ಷದಲ್ಲಿ ಪ್ರಸಾದಲಿಂಗವು ಸಾಧ್ಯವಾಗದು. ಆ ಲಿಂಗವು ಸಂಬಂಧವಾಗಲೊಲ್ಲದಿದ್ದಲ್ಲಿ ಶ್ರೋತ್ರೇಂದ್ರಿಯದಲ್ಲಿ ನೆಲೆಗೊಳ್ಳದು. ನೆಲೆಗೊಳ್ಳದಿದ್ದಲ್ಲಿ ಅಲ್ಲಿ ಬರುವ ಶಬ್ದ ಪದಾರ್ಥವು. ಅರ್ಪಿತವಾಗದು. ಅದು ಅರ್ಪಿತವಾಗದಿದ್ದಲ್ಲಿ ಲಿಂಗಾರ್ಪಿತವಿಲ್ಲ. ಲಿಂಗಾರ್ಪಿತವಿಲ್ಲದಿದ್ದಲ್ಲಿ ಪ್ರಸಾದ ಸೇವನೆ ಇಲ್ಲ. ಪ್ರಸಾದ ಸೇವನೆ ಇಲ್ಲದಿದ್ದಲ್ಲಿ ಮುಕ್ತಿ ಮುನ್ನವೇ ಇಲ್ಲ.

ಸದ್ಭಾವಃ— ಷಡ್ವರ್ಗಂಗಳೊಡನೆ ಕೂಡಿಕೊಂಡು ಲಿಂಗಾಂಗವೆರಡಕ್ಕೆ ಭಿನ್ನವಿಟ್ಟುಕೊಂಡು ಲಿಂಗವ ಪೂಜಿಸಿ, ಫಲಪದಂಗಳ ಪಡೆದನುಭವಿಸಿ ಭವವನ್ನೈದಿ ಹೋಗುವಂತಹದೇ ದುರ್ಭಾವವು. ಅಂತಹ ದುರ್ಭಾವವೆಂಬ ಕರಕಮಲವು ಅಲ್ಲಿ ನಷ್ಟವಾಗಿ ಹೋಗಿ ಸದ್ಭಾವವು ಶಿಖಿಕರ್ಪುರ ಸಂಯೋಗವಾದ ಹಾಗೆ ಲಿಂಗದಲ್ಲಿ ತಾ ಕೂಡಿ ತನ್ನಲ್ಲಿ ಲಿಂಗವು ಕೂಡಿ ತಾನು, ಲಿಂಗ ಎಂಬ ಉಭಯ ಭಾವವಳಿದು ತಾನು ತಾನಾಗಿರುವದೇ ಸದ್ಭಾವವು. ಇಂತಪ್ಪ ಸದ್ಭಾವವೆಂಬ ಕರಕಮಲವು ನೆಲೆಗೊಂಡಲ್ಲಿ ಆ ಕರಕಮಲಕ್ಕೆ ಬೋಧಾ ಸ್ವರೂಪವಾದ ಮಹಾಲಿಂಗವು ಸಂಬಂಧವಾಗಿ ಹೃದಯೇಂದ್ರಿಯದಲ್ಲಿ ನೆಲೆಗೊಂಡು ಅಲ್ಲಿ ಬರುವ ಸುತೃಪ್ತಿ ಪದಾರ್ಥವ ಅರ್ಪಿಸಿಕೊಂಡು ಶರಣಂಗೆ ತನ್ನ ಪರಿಣಾಮ ಪ್ರಸಾದವನ್ನು ಕರುಣಿಸಿ ಕೊಡುತ್ತಿಹುದು. ಅದಲ್ಲದೆ ಆ ದುರ್ಭಾವವೆಂಬ ಕರಕಮಲಕ್ಕೆ ಬೋಧಾ ಸ್ವರೂಪವಾದ ಮಹಾಲಿಂಗವು ಸಂಬಂಧವಾಗಲೊಲ್ಲದು. ಆ ಮಹಾಲಿಂಗವು ಸಂಬಂಧವಾಗದಿದ್ದಲ್ಲಿ ಹೃದಯೇಂದ್ರಿಯದಲ್ಲಿ ನೆಲೆಗೊಳ್ಳದು. ನೆಲೆಗೊಳ್ಳದಿದ್ದಲ್ಲಿ ಸುತೃಪ್ತಿ ಪದಾರ್ಥವರ್ಪಿತವಾಗದು. ಆ ಪದಾರ್ಥವರ್ಪಿತವಾಗದಿದ್ದಲ್ಲಿ ಲಿಂಗಾರ್ಪಿತವಿಲ್ಲ. ಲಿಂಗಾರ್ಪಿತವಿಲ್ಲದಿದ್ದಲ್ಲಿ ಪ್ರಸಾದಸೇವನೆ ಎಂಬುದು ಇಲ್ಲ. ಇದು ಇಲ್ಲದಿದ್ದಲ್ಲಿ ಮುಕ್ತಿ ಮುನ್ನವೇ ಇಲ್ಲ.

ದುರ್ಭಾವವಳಿದು ಸದ್ಭಾವ ನೆಲೆಗೊಂಡಲ್ಲದೆ ಮಹಾಲಿಂಗ ಸಾಧ್ಯವಾಗದು. ಈ ಸುಚಿತ್ತಾದಿ ಸದ್ಭಾವಾಂತ್ಯವಾದ ಆರು ಕರಕಮಲಂಗಳು ಸ್ಥಿರತರವಾಗಿ ನೆಲೆಗೊಂಡಲ್ಲದೆ ಆಚಾರಾದಿ ಮಹಾಲಿಂಗಾಂತ್ಯವಾದ ಆರು

ಲಿಂಗಂಗಳ ಸಂಬಂಧತ್ವವು ಆಗದು. ಈ ಸಂಬಂಧತ್ವವಿಲ್ಲದೆ ಷಡ್ವಿಧ ಲಿಂಗಗಳ ಕೂಟಸ್ಥವಾಗದು.

ಷಡಿಂದ್ರಿಯಗಳಲ್ಲಿ ಕೂಟಸ್ಥವಾದಲ್ಲದೆ ಅಂಗ ಸಂಬಂಧವಾದ ರೂಪು ಷಡ್ವಿಧ ಪದಾರ್ಥಂಗಳನ್ನು ಇಷ್ಟಲಿಂಗದೊಡನೆ ಕೂಡಿದ ಆಚಾರಾದಿ ಷಡ್ವಿಧ ಲಿಂಗಂಗಳಿಗೆ ಷಡ್ವಿಧ ಭಕ್ತಿ ಸಕೀಲಂಗಳಿಂದೆ ಸಮರ್ಪಿಸುವ ಕಾಯಾರ್ಪಣದ ಮನೋ ಸಂಬಂಧವಾದ ಮೂವತ್ತಾರು ತೆರದ ರುಚಿ ಪದಾರ್ಥಂಗಳನ್ನು ಪ್ರಾಣಲಿಂಗದೊಡದೆ ಕೂಡಿದ ಮೂವತ್ತಾರು ಲಿಂಗಂಗಳಿಗೆ ಮೂವತ್ತಾರು ತೆರದ ಭಕ್ತಿ ಸಕೀಲಂಗಳಿಂದ ಸಮರ್ಪಿಸುವ ಕರಣಾರ್ಪಣದೊಳಗಣ ಮಧ್ಯಸ್ಥವಾದ ಮಿಶ್ರಾರ್ಪಣದ ಆತ್ಮತತ್ವ ಸಂಬಂಧವಾದ ಇನ್ನೂರು ಹದಿನಾರು ತೃಪ್ತಿ ಪದಾರ್ಥಂಗಳನ್ನು ಭಾವಲಿಂಗದೊಡನೆ ಕೂಡಿದ ಇನ್ನೂರು ಹದಿನಾರು ಲಿಂಗಂಗಳಿಗೆ ಇನ್ನೂರು ಹದಿನಾರು ತೆರದ ಭಕ್ತಿ ಸಕೀಲಂಗಳಿಂದ ಸಮರ್ಪಿಸುವ ಭಾವಾರ್ಪಣದ ಸಕೀಲವು ಆರಿಯಬಾರದು.

---

## ಷಟ್ ಚಕ್ರಗಳಲ್ಲಿ ಷಡ್ಲಿಂಗಗಳ ಉದ್ಭವವು.

ಆಧಾರಚಕ್ರದಲ್ಲಿ ಆಚಾರಲಿಂಗದ ಉದ್ಭವ:— ಕ್ರಿಯಾಶಕ್ತಿಯ ಮುಖದಿಂದ, ಕ್ರಿಯಾಶಕ್ತಿಯು ಎರಡು ತೆರನಾಗಿರ್ಪುದು. ಅದು ಹೇಗೆಂದರೆ, ಲೋಕದಾತ್ಮರುಗಳಿಗೆ ಅಸಿ, ಮಸಿ, ಕೃಷಿ, ವಾಣಿಜ್ಯ, ಯಾಚನ, ಗೋಪಾಲತ್ವವೆಂಬ ಷಟ್ ಕೃಷಿ ವ್ಯಾಪಾರಂಗಳ ಉಂಟುಮಾಡಿಕೊಡುತ್ತಿಹಳು. ಇತ್ತ ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವ ಶಿವಶರಣರುಗಳಿಗೆ ಗುರುಭಕ್ತಿ, ಲಿಂಗಪೂಜೆ, ಜಂಗಮದಾಸೋಹ, ಪಾದೋದಕ ಪ್ರಸಾದ ಸೇವನೆ ಮುಂತಾದ ಸತ್‌ಕೃತ್ಯವನ್ನುಂಟು ಮಾಡಿಕೊಡುತ್ತಿಹಳು.

ಕರ್ಮೇಂದ್ರಿಯಗಳ ನಿವೃತ್ತಿ:— ಮತ್ತಂತುಮಲ್ಲದೆ ವಾಗಾದಿ ಕರ್ಮೇಂದ್ರಿಯಂಗಳೈದು ಕ್ರಿಯಾಶಕ್ತಿ ಸ್ವರೂಪದಿಂದಿದ್ದಿತಾದ ಕಾರಣ ಆ ಕ್ರಿಯಾಶಕ್ತಿ ಸ್ವರೂಪವಾದ ವಾಗಾದಿ ಕರ್ಮೇಂದ್ರಿಯಂಗಳೊಳಗೆ ಶಿವಾ ಎಂಬುದೇ

ವಾಕ್ಕು, ಶಿವಾಚಾರವ ದೃಢವಿಡಿವುದೇ ಪಾಣಿ, ಗುರುಮಾರ್ಗಾಚಾರದಲ್ಲಿ ಆಚರಿಸುವುದೇ ಪಾದ, ಮಲತ್ರಯಂಗಳ ಬಿಡುವುದೇ ಪಾಯು, ಶಿವಾನುಭವಿಗಳ ಸತ್‌ಸಂಗದಲ್ಲಿ ಆನಂದಿಸುವುದೇ ಗುಹ್ಯ, ಈ ರೀತಿ ಕರ್ಮೇಂದ್ರಿಯಂಗಳೈದು ನಿವೃತ್ತಿಯಾದುದೇ ಕ್ರಿಯಾಶಕ್ತಿ,

ಪ್ರಾಣವಾಯುವಿನ ನಿವೃತ್ತಿ:— ಅಂತಪ್ಪ ಕ್ರಿಯಾಶಕ್ತಿಯ ಮುಖನದಿಂದ ಪ್ರಾಣವಾಯುವ ನಿಲಿಸಿ, ಪ್ರಾಣವಾಯುವೆಂಬುದು ತಾನು ಇಂದ್ರನೀಲವರ್ಣ, ಹೃದಯಸ್ಥಾನದಲ್ಲಿರ್ದು ಅಂಗುಷ್ಠದಿಂದ ವಾಲಾಗ್ರ ಪರಿಯಂತರ ಸತ್‌ಪ್ರಾಣಿಸಿಕೊಂಡು ಉಚ್ಛ್ವಾಸ ನಿಶ್ವಾಸಂಗೈಸಿ, ಅನ್ನವನು ಜೀರ್ಣ ಮಾಡಿಸುತ್ತಿಹುದು ಪ್ರಾಣವಾಯು. ಅಂತಪ್ಪ ಪ್ರಾಣವಾಯುವಿನ ಸ್ಥಾನ, ಧರ್ಮ, ಕರ್ಮ, ವರ್ಣಂಗಳನ್ನು ನಕಾರ ಮಂತ್ರದಿಂ ತಡೆದು,

ಜಾಗ್ರಾವಸ್ಥೆಯ ನಿವೃತ್ತಿ:— ಆಧಾರಚಕ್ರದ ಪಾಯುಸ್ಥಾನದಲ್ಲಿ ಚತುಃಕೋಣೆಯಾಕಾರದಿಂದೊಪ್ಪುವಂತಹದ್ದೇ ಆಧಾರ ಚಕ್ರವು. ಅದು ಕೆಂಪಿನ ದಾಸಿವಾಳದ ಹುವ್ವಿನೋಪಾದಿಯಲ್ಲಿ ಶ್ರೋಣಿತ ವರ್ಣದ ಕಾಂತಿಯಿಂದಿರುತ್ತಿಹುದು. ಅಂತಪ್ಪ ವರ್ಣದ ನಾಲ್ಕು ದಳದ ಆ ಚಕ್ರ ಸುತ್ತು ವಳಯದಲ್ಲಿ ನಾಲ್ಕೆಸಳುಗಳಿಂದೊಪ್ಪುತ್ತಿಹುದು. ಅಂತಪ್ಪ ನಾಲ್ಕೆಸಳುಗಳು ವ, ಶ, ಷ, ಸ ಎಂಬ ನಾಲ್ಕಕ್ಷರದ ವಕಾರಾದಿ ಸಕಾರಾಂತ್ಯವಾದ ಚತುರಕ್ಷರಂಗಳೇ ಆ ದಳಂಗಳಲ್ಲಿ ಜೀವನಾಕ್ಷರ ಸ್ವರೂಪಿನಿಂದ ಸಾಗಿರುತ್ತಿಹುದು. ಅಂತಪ್ಪ ನಾಲ್ಕಕ್ಷರದ ಅಧಿದೈವ ಬ್ರಹ್ಮನು. ಇಷ್ಟರೊಡನೆ ಕೂಡಿರುವಂತಾದ್ದೇ ಒಂದಾಧಾರ ಚಕ್ರವು. ಆ ಚಕ್ರಕ್ಕೆ ಅಜನೇ ಅಧಿಷ್ಠಾಯಿಕನಾಗಿಪ್ಪನು. ಅಜನೆಂಬ ಅಧಿದೇವತೆಯ ಜಾಗ್ರಾವಸ್ಥೆಯನ್ನು ಆತ್ಮನು ಲೋಚನಾಗ್ರ ಸ್ಥಾನಕ್ಕೆ ಬಂದಾಗ ಇಪ್ಪತ್ತೈದು ತತ್ವ ಸಮಷ್ಟಿಯಾಗಿ ನಿಂದು ಸ್ಥೂಲ ತನುವಿನ ಮರವೆಯೊಡನೆ ಕೂಡಿಕೊಂಡು ಎಚ್ಚರವುಳ್ಳಾತನಾಗಿ ದೃಶ್ಯವಾದ ಸಕಲೇಂದ್ರಿಯಂಗಳ ವ್ಯಾಪಾರದೊಡನೆ ಕೂಡಿ ಚರಿಸುವಂತಹದೇ ಜಾಗ್ರಾವಸ್ಥೆಯು. ಈ ಅವಸ್ಥೆಯು ಆ ಚಕ್ರದಲ್ಲಿ ಸಂಬಂಧವಾಗಿರುತ್ತಿಹುದು. ಅಂತಪ್ಪ ಅವಸ್ಥೆಯನ್ನು ನಕಾರವೆಂಬ ಬೀಜಾಕ್ಷರದಿಂ ಕಳಿದು, ಇವೆಲ್ಲ ಲೋಕದಾತ್ಮರುಗಳಲ್ಲಿ ಪೂರ್ವ ವಾಸನೆಯೊಡನೆ ಕೂಡಿಕೊಂಡು ಪ್ರಕೃತಿ ತತ್ವಂಗಳಾಗಿ ಸಕಲ ಜೀವರುಗಳನ್ನು ಜನ್ಮಾಂತರ ಗತಿಗಳೊಳಗೆ ತಂದು ಸಂಹರಿಸುವುದಕ್ಕೆ ಕಾರಣವಾಗಿರುತ್ತಿಹುದು.

ಆಧಾರ ಚಕ್ರವು ಮಂತ್ರಮಯವಾದ ವಿಧಃ— ಇತ್ತ ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವ ಶಿವಶರಣರುಗಳಿಗೆ ಇವೆಲ್ಲ ನಿವೃತ್ತಿಯಾಗಿ ಹೋಗಿ ನಕಾರ ಷಡಕ್ಷರ ಮಂತ್ರಸ್ವರೂಪವಾಗಿರುತ್ತಿಹುದು. ಅದು ಹೇಗೆಂದೊಡೆ, ಆ ಚಕ್ರವೇ ನಕಾರ ಪ್ರಣವ ಸ್ವರೂಪವಾದಲ್ಲಿ ಅಲ್ಲಿ ತೋರುವ ವರ್ಣವೇ ನಕಾರ ಪ್ರಣಮದೊಳಗಣ ಮಕಾರ ಪ್ರಣವು ಸ್ವರೂಪು. ಅಲ್ಲಿರುವ ದಳಂಗಳೇ ನಕಾರ ಪ್ರಣವದೊಳಗಣ ಶಿಕಾರ ಪ್ರಣವು ಸ್ವರೂಪು. ಆ ದಳಂಗಳಲ್ಲಿ ನ್ಯಾಸವಾಗಿರುವ ಅಕ್ಷರಂಗಳೇ ನಕಾರ ಮಂತ್ರದೊಳಗಣ ವಕಾರ ಪ್ರಣವು ಸ್ವರೂಪು. ಅಲ್ಲಿ ನೆಲಸಿರುವ ಅಧಿದೇವತೆಯೇ ನಕಾರ ಪ್ರಣಮದೊಳಗಣ ಯಕಾರ ಪ್ರಣವು. ಅಲ್ಲಿ ಸಂಬಂಧವಾಗಿರುವ ಅವಸ್ಥೆಯೇ ನಕಾರ ಪ್ರಣವದೊಳಗಣ ಓಂಕಾರ ಸ್ವರೂಪವಾಗಿ,

ಆಧಾರಚಕ್ರ ಸಂಬಂಧವಾದ ಷಡ್ವಿಧ ತತ್ವಗಳ ನಿವೃತ್ತಿಃ— ಆಧಾರ ಚಕ್ರ ಸಂಬಂಧವಾದ ಷಡ್ವಿಧ ತತ್ವಂಗಳೆಲ್ಲವೂ ನಿವೃತ್ತಿಯಾಗಿ ನಕಾರ ಮಂತ್ರ ಷಡಕ್ಷರಿಮಂತ್ರ ಸ್ವರೂಪವಾಗಿರ್ಪವೆಂದೇ ಅರಿದು, ಷಡ್ವಿಧ ವಿಚಾರ ವಿಡಿದು ಈ ನಕಾರ ಷಡಕ್ಷರೀಮಂತ್ರಸ್ವರೂಪವಾದ ಷಡ್ವಿಧ ತತ್ವಂಗಳೆಲ್ಲವೂ ನಕಾರಮಂತ್ರ ಮೂರ್ತಿಯಾದ ಆಚಾರಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯ ಭಾವವನ್ನೇ ತನ್ನ ಮನದೊಳಗೆ ಗ್ರಹಿಸಿ ಆ ವಿಚಾರದ ವಿಶಾಲ್ಯವು ತಾನೆಂತುಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ,

ನಕಾರ ಮಂತ್ರಮೂರ್ತಿಯಾದಆಚಾರಲಿಂಗಕ್ಕೆ ಆ ಚಕ್ರವೇ ಪ್ರಣವ ಪೀಠದ ಗದ್ದುಗೆಯಾಗಿ ಅಲ್ಲಿ ತೋರುವ ವರ್ಣವೇ ನಂದದ ಕುಂದದ ಸ್ವಯಂಜ್ಯೋತಿ ಪ್ರಕಾಶವಾಗಿ ಅಳವಟ್ಟಿಹುದೆರಡನೆಯ ವಿಚಾರವು.

ಅಲ್ಲಿರುವ ದಳಂ ಗಳೇ ಇಂಡೆ ದಂಡೆ ಕುಸುಮಾಲಂಕಾರಗಳಾಗಿ ಆ ದಳಂಗಳಲ್ಲಿ ನ್ಯಾಸವಾಗಿರುವ ಅಕ್ಷರಂಗಳೇ ನಕಾರ ಮಂತ್ರ ಮೂರ್ತಿಯಾದ ಆಚಾರಲಿಂಗವ ನೆನೆಹುದಕ್ಕೆ ನಾಂ, ನಾಂ, ನಾಂ ಎಂಬ ಮಂತ್ರಾಕ್ಷರಂಗಳಾಗಿ ಅಳವಟ್ಟುದೇ ನಾಲ್ಕನೆಯ ವಿಚಾರವು.

ಅಲ್ಲಿ ನೆಲಸಿರುವ ಅಧಿದೇವತೆಯೇ ಪೂಜಾರಿಯಾಗಿ ಅಲ್ಲಿ ಸಂಬಂಧವಾಗಿರುವ ಅವಸ್ಥೆಯೇ ಘನಲಿಂಗಾವಸ್ಥೆಯಾಗಳವಟ್ಟುದೇ ಆರನೆಯ ವಿಚಾರವು.

ಈ ರೀತಿಯಲ್ಲಿ ನಕಾರ ಷಡಕ್ಷರೀಮಂತ್ರ ಮೂರ್ತಿಸ್ವರೂಪವಾದ ಷಡ್ವಿಧ ತತ್ವಂಗಳೆಲ್ಲವೂ ನಕಾರ ಮಂತ್ರಮೂರ್ತಿಯಾದ ಆಚಾರಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯ ಭಾವವನ್ನು ತನ್ನ ಮನದೊಳಗೆ ಗ್ರಹಿಸಿ ಈ ಷಡ್ವಿಧ ವಿಚಾರವಿಡಿದು ಸದ್ಭಕ್ತಿಯಿಂದ ತ್ರಿವಿಧ ಪದಾರ್ಥಂಗಳ ಪಿಡಿದು ಭಕ್ತಿ ಗೃಹವನ್ನು ಕಟ್ಟಿ ತನು ಮನ ಧನಂಗಳನ್ನು ಗುರುಲಿಂಗಜಂಗಮಕ್ಕೆ ನಿರ್ವಂಚನೆಯಿಂದ ಸಮರ್ಪಣೆ ಮಾಡುವಂತಹದ್ದೇ ಸದ್ಭಕ್ತಿ.

ಅಂತಪ್ಪ ಭಕ್ತಿಯಿಂದೊಂದನೆಯ ತತ್ವದಾದಿಯೇ ಪೃಥ್ವೀತತ್ವ, ಆ ಪೃಥ್ವೀತತ್ವದ ಜನನಕ್ಕೆ ಮೂಲಾಧಾರ ಸ್ಥಾನವಾದ ಪಶ್ಚಿಮದಿಕ್ಕಿನ ಸದಾಶಿವಮೂರ್ತಿಗೆ ಹಿಂಭಾಗದಲ್ಲಿಪ್ಪುದೇ ಪಶ್ಚಿಮದಿಕ್ಕು, ಅಂತಪ್ಪ ದಿಕ್ಕಿನಲ್ಲಿ ತೋರುವ ಸದ್ಯೋಜಾತ ಮುಖವನ್ನರಿತು ಕರ್ಮಸಾದಾಖ್ಯ ಸ್ವರೂಪವಾದ ಸದ್ಯೋಜಾತ ಮುಖವು ತಾನೇ ಇಲ್ಲಿ ಶಿವಶರಣನ ಘ್ರಾಣೇಂದ್ರಿಯದಲ್ಲಿ ಆಚಾರಲಿಂಗ ಸ್ವರೂಪಿನಿಂದ ವಾಸವಾಗಿಪ್ಪುದೆಂದು ತಿಳಿದು,

ಪೃಥ್ವೀತತ್ವದ ನಿವೃತ್ತಿಃ—ಧರಣಿಯು ಕಠಿಣವನ್ನು ಅಸ್ಥಿ, ಮಾಂಸ, ತ್ವಚ, ನಾಡಿ, ರೋಮವೆಂಬ ಅಂಶ ಗುಣಗಳನ್ನು ಭಯಭಕ್ತಿಯಿಂದ ತಿಳಿದು ದಿಂಡುಡುಗೆಯ ಸುತ್ತಿಕೊಂಡು, ಪಾದವ ಜೋಡಿಸಿಕೊಂಡು ಹಸ್ತಾಂಜುಲಿಯುತನಾಗಿ ನಿಂದು ಸ್ವಾಮಿ ಏನನ್ನು ಮಾಡಲಿ ಎಂದು ಬೆಸಗೊಂಬ ಭೃತ್ಯಭಾವವನುಳ್ಳ ಸದ್ಭಕ್ತರುಗಳಿಗೆ ಪೃಥ್ವಂಶ ಗುಣಗಳು ನಷ್ಟವಾಗಿರ್ಪವೆಂದೇ ಅರಿತು, ತನುಗುಣನಾಸ್ತಿಯಾಗಿ, ಪೃಥ್ವೀ ಮದವೆತ್ತಿದಲ್ಲಿ ತನುಗುಣಭರಿತನಾಗಿ ವಸ್ತ್ರಾಭರಣಾನುಲೇಪನಾದಿ ತಾಂಬೂಲಮಂ ಬಯಸುತ್ತಿಹನೆಂಬ ಪೃಥ್ವಿಯ ಮದಗುಣವು ನಷ್ಟವಾಗಿ ಭಕ್ತಸ್ಥಲವನಂಗಂಗೊಂಡು ಇಷ್ಟರ ಸಾಧನದಿಂದ ಪೃಥ್ವಿಯ ಮದಗುಣ ಅಂಶಗುಣಂಗಳ ನಳಿದು ಚಿತ್‌ಪೃಥ್ವೀಸ್ವರೂಪಿನಿಂದ ಭಕ್ತಂಗಂಗವಾಗಲು ಅಂತಪ್ಪ ಪರಾತ್ಪರವಾದ ಸದ್ಭಕ್ತಿಸ್ಥಲವನೊಡಲಮಾಡಿಕೊಂಡು ಆಚರಿಸುವುದು ಸುಚಿತ್ತದ ನೆಲೆ, ಕುಚಿತ್ತವಳಿದು ಸುಚಿತ್ತವೆಂಬ ಕರಕಮಲಕ್ಕೆ ಪಂಚಾಚಾರ ಸ್ವರೂಪವಾದ ಆಚಾರ ಬ್ರಹ್ಮವು, ಎಂದು ನೆಲೆಗೊಂಬ ನಿಲುಕಡೆಯು.

# ಸ್ವಾಧಿಷ್ಠಾನ ಚಕ್ರದಲ್ಲಿ ಗುರುಲಿಂಗದ ಉದ್ಭವವು.

ಜ್ಞಾನಶಕ್ತಿಯ ಮಥನದಿಂದ, ಜ್ಞಾನಶಕ್ತಿಯು ಎರಡು ತೆರನಾಗಿರ್ಪುದು ಅದು ಹೇಗೆಂದರೆ— ಲೋಕದಾತ್ಮರುಗಳಿಗೆ ಗುರುವು ನರ, ಲಿಂಗವು ಶಿಲೆ, ಜಂಗಮವು ಮನುಜ, ಪಾದೋದಕ ನೀರು, ಪ್ರಸಾದ ಎಂಜಲು, ಎಂಬ ಅಜ್ಞಾನವನ್ನು ಪ್ರೇರಿಸಿ ಕೊಡುತ್ತಿಹಳು. ಇತ್ತ ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವ ಶಿವಶರಣರುಗಳಿಗೆ ನಿಃಕಲಬ್ರಹ್ಮದ ಸದ್ರೂಪವೇ ಗುರು, ಚಿದ್ರೂಪವೇ ಲಿಂಗ, ಆನಂದವೇ ಜಂಗಮ, ನಿತ್ಯತ್ವವೇ ಪ್ರಸಾದ, ಪರಿಪೂರ್ಣವೇ ಪಾದೋದಕವೆಂದರಿವ ಸುಜ್ಞಾನವನ್ನೇ ಪ್ರೇರಿಸಿ ಕೊಡುತ್ತಿಹಳು.

ಜ್ಞಾನೇಂದ್ರಿಯಗಳ ನಿವೃತ್ತಿಃ— ಮತ್ತಂತುಮಲ್ಲದೆ ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು ಜ್ಞಾನಶಕ್ತಿಯ ಸ್ವರೂಪೇಂದಿದ್ಧಿತಾದ ಕಾರಣ ಆ ಜ್ಞಾನಶಕ್ತಿಯ ಸ್ವರೂಪವಾದ ಶ್ರೋತ್ರಾದಿ ಜ್ಞಾನೇಂದ್ರಿಯಂಗಳೊಳಗೆ ಶ್ರೋತ್ರದಲ್ಲಿ ಶಿವಕಥೆ, ಆದ್ಯರ ವಚನವಲ್ಲದೆ ಅನ್ಯವಪ್ಪ ಮಾಯಾ ಕುಶಾಸ್ತ್ರ ಕುಭಾಷೆಗಳ ಕೇಳದಿಹುದು. ತ್ವಕ್ಕಿನಲ್ಲಿ ಶ್ರೀ ವಿಭೂತಿ ರುದ್ರಾಕ್ಷಿ ಶಿವಲಿಂಗ ಧಾರಣ ಅನ್ಯವಪ್ಪ ಮಾಯಾಚೋಹಂಗಳಂ ಧರಿಸದಿಹುದು. ನೇತ್ರದಲ್ಲಿ ಶಿವಲಿಂಗ ನಿರೀಕ್ಷಣೆಯಲ್ಲದೆ ಅನ್ಯವಪ್ಪ ಮಾಯಾ ಕುರೂಪುಗಳಂ ನೋಡದಿಹುದು. ಜಿಹ್ವೆಯಲ್ಲಿ ಶಿವಸುಖಪ್ರಸನ್ನೇತಿ ಪ್ರಸಾದದ ಸ್ವೀಕಾರವಲ್ಲದೆ ಅನ್ಯವಪ್ಪ ಮಾಯೋಚ್ಛಿಷ್ಟಂಗಳಂ ಭುಂಜಿಸದಿಹುದು. ಘ್ರಾಣದಲ್ಲಿ ಶಿವನಿರ್ಮಾಲ್ಯ ಗಂಧವಲ್ಲದೆ ಅನ್ಯವಪ್ಪ ಮಾಯಾ ದುರ್ವಾಸನೆಯಾಘ್ರಾಣಿಸದಿಹುದು. ಈ ರೀತಿಯಲ್ಲಿ ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು ನಿವೃತ್ತಿಯಾದುದೇ ಜ್ಞಾನಶಕ್ತಿ.

ಅಪಾನ ವಾಯುವಿನ ನಿವೃತ್ತಿ:— ಅಂತಪ್ಪ ಜ್ಞಾನಶಕ್ತಿಯ ಮಥನದಿಂದ ಅಪಾನ ವಾಯುವ ನಿಲ್ಲಿಸಿ, ಅಪಾನ ವಾಯುವೆಂಬುದು ತಾನು ಹರಿತವರ್ಣದಿಂದ ಗುದಸ್ಥಾನದಲ್ಲಿರ್ದು ಮಲಮೂತ್ರಂಗಳ ವಿಸರ್ಜನವಂ ಮಾಡಿಸಿ ಅಧೋ ದ್ವಾರವಂ ಬಲಿದು ಅನ್ನ ರಸವ್ಯಾಪ್ತಿಯಂ ಮಾಡಿಸುತ್ತಿಹುದು, ಎಂದು ಹೇಳಿಸಿಕೊಂಬುದೇ ಅಪಾನವಾಯು. ಇಂತಪ್ಪ ಅಪಾನ ವಾಯುವಿನ ಸ್ಥಾನ ಧರ್ಮ ಕರ್ಮ ವರ್ಣಂಗಳನ್ನು ತಡೆದು,

ಸುಷುಪ್ತಾವಸ್ಥೆಯ ನಿವೃತ್ತಿ:— ಸ್ವಾಧಿಷ್ಠಾನ ಚಕ್ರದ ಲಿಂಗಸ್ಥಾನ ದಲ್ಲಿ ಧನುರ್ಗತಿಯಾಕಾರದಿಂದೊಪ್ಪುವಂತಾದ್ದೇ ಸ್ವಾಧಿಷ್ಠಾನ ಚಕ್ರವು, ಅಂತೊಪ್ಪುವ ಚಕ್ರದ ವರ್ಣವು ಕರ್ಣಕಿಡುವ ನೀಲವರಳಿನ ಕಾಂತಿ ಯಿಂದಿರುತಿಹುದು. ಅಂತಪ್ಪ ವರ್ಣದ ಷಡ್ದಳ, ಆ ಚಕ್ರದ ಸುತ್ತುವಳಯ ದಲ್ಲಿ ಆರೆಸಳುಗಳಿಂದೊಪ್ಪುತಿಹುದು. ಅಂತಪ್ಪ ಆರೆಸಳುಗಳ ಬ ಭ ಮ ಯ ರ ಲ ವೆಂಬ ಷಡಕ್ಷರಂಗಳೇ ಆ ದಳಂಗಳಲ್ಲಿ ಜೀವನಾಕ್ಷರಸ್ವರೂಪಿನಿಂದ ನ್ಯಾಸವಾಗಿರುತಿಹವು. ಅಂತಪ್ಪಾರಕ್ಷರದ ಅಧಿದೈವ ಇಷ್ಟರೊಡನೆ ಕೂಡು ವಂತಾದ್ದೇ ಒಂದು ಸ್ವಾಧಿಷ್ಠಾನ ಚಕ್ರವು. ಆ ಚಕ್ರಕ್ಕೆ ನಾರಾಯ ಣನೇ ಅಧಿದೇವತೆಯಾಗಿರುತ್ತಿಹನು. ಅಂತಪ್ಪ ನಾರಾಯಣನೆಂಬ ಅಧಿ ದೇವತೆಯ ಸ್ವಪ್ನಾವಸ್ಥೆಯನ್ನು ಲೋಚನಾಗ್ರಸ್ಥಾನದಲ್ಲಿರ್ದ ಆತ್ಮನು ಗಳ ಸ್ಥಾನಕ್ಕೆ ಇಳಿದುಬಂದಾಗ ಹದಿನೇಳು ತತ್ವಸಮುವೇಷ್ಟಿಯಾಗಿ ನಿಂದು ಸ್ಥೂಲ ತನುವಿನ ಮರವೆಯೋ ಸೂಕ್ಷ್ಮತನುವಿನ ಅರುವಿನೊಳು ಕೂಡಿಕೊಂಡು ದೃಶ್ಯಾ ದೃಶ್ಯಮಾದ ಕಲ್ಪಿತರೂಪಿನ ಕಾಣಿಕೆಯಾಗಿರ್ಪ ಸುಖ ದುಃಖ ಮೋಹ ರೂಪಮಾದ ಕನಸ ಕಾಣುವುದೇ ಸ್ವಪ್ನಾವಸ್ಥೆ. ಆ ಅವಸ್ಥೆಯು ಆ ಚಕ್ರ ದಲ್ಲಿ ಸಂಬಂಧವಾಗಿಹುದು. ಅಂತಪ್ಪ ಅವಸ್ಥೆಯನ್ನು ಮಕಾರವೆಂಬ ಬೀಜಾ ಕ್ಷರದಿಂ ತಿಳಿದು ಇವೆಲ್ಲ ಲೋಕದಾತ್ಮರುಗಳಲ್ಲಿ ಪೂರ್ವವಾಸನೆಯೊಡನೆ ಕೂಡಿಕೊಂಡು ಪ್ರಕೃತಿ ತತ್ವಂಗಳಾಗಿ ಸಕಲ ಜೀವರುಗಳನ್ನು ಜನ್ಮ ಜನ್ಮಾಂತರ ಗತಿಗಳೊಳಗೆ ತಂದು ಸಂಹರಿಸುವುದಕ್ಕೆ ಕಾರಣವಾಗಿರುತ್ತಿಹವು.

ಸ್ವಾಧಿಷ್ಠಾನ ಚಕ್ರವು ಮಂತ್ರಮಯವಾದುದು:— ಇತ್ತ ಗುರುಕಾ ರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವಂತಹ ಶಿವ ಶರಣರುಗಳಿಗೆ ಅವೆಲ್ಲ ನಿವೃತ್ತಿಯಾಗಿ ಹೋಗಿರುತಿಹವು. ಅದು ಹೇಗೆಂ ದೊಡೆ, ಆ ಚಕ್ರವೇ ಮಕಾರ ಪ್ರಣಮ ಸ್ವರೂಪವಾದಲ್ಲಿ ಅಲ್ಲಿ ತೋರು ವಂತಹ ವರ್ಣವೇ ಮಕಾರ ಪ್ರಣಮದೊಳಗಣ ನಕಾರ ಪ್ರಣಮ ಸ್ವರೂಪು. ಅಲ್ಲಿರುವಂತಹ ದಳಗಳೇ ಮಕಾರ ಪ್ರಣಮದೊಳಗಣ ಶಿಕಾರ ಪ್ರಣಮ ಸ್ವರೂಪು. ಆ ದಳಂಗಳಲ್ಲಿ ನ್ಯಾಸವಾಗಿರುವಂತಹ ಅಕ್ಷರಂಗಳೇ ಮಕಾರ ಪ್ರಣಮದೊಳಗಣ ವಕಾರ ಪ್ರಣಮ ಸ್ವರೂಪು. ಅಲ್ಲಿ ನೆಲಸಿರುವಂತಹ ಅಧಿದೇವತೆಯೇ ಮಕಾರ ಪ್ರಣಮದೊಳಗಣ ಯಕಾರ ಪ್ರಣಮ ಸ್ವರೂಪು. ಅಲ್ಲಿ ಸಂಬಂಧವಾಗಿರುವಂತಹ ಅವಸ್ಥೆಯೇ ಮಕಾರ ಪ್ರಣಮದೊಳಗಣ ಓಂಕಾರ ಪ್ರಣಮ ಸ್ವರೂಪವಾಗಿ,

ಸ್ವಾಧಿಷ್ಠಾನ ಚಕ್ರಸಂಬಂಧವಾದ ಷಡ್ವಿಧ ತತ್ವಗಳ ನಿವೃತ್ತಿಃ— ಸ್ವಾಧಿಷ್ಠಾನ ಚಕ್ರದ ಸಂಬಂಧವಾದ ಷಡ್ವಿಧ ತತ್ವಂಗಳೆಲ್ಲವೂ ನಿವೃತ್ತಿಯಾಗಿ ಹೋಗಿ ಮಕಾರ ಷಡಕ್ಷರ ಮಂತ್ರಸ್ವರೂಪವಾಗಿರ್ಪವು. ಈ ಪ್ರಕಾರದಿಂದ ಪೇಳಲ್ಪಟ್ಟಂತಹ ಈ ಷಡ್ವಿಧ ವಿಚಾರವಿಡಿದು ಈ ಮಕಾರ ಷಡಕ್ಷರೀ ಮಂತ್ರಸ್ವರೂಪವಾದ ಷಡ್ವಿಧ ತತ್ವಂಗಳೆಲ್ಲವೂ ಮಕಾರಮಂತ್ರ ಮೂರ್ತಿಯಾದ ಗುರುಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯ ಭಾವವನ್ನು ತನ್ನ ಮನದೊಳಗೆ ಗ್ರಹಿಸಿ ವಿವೇಕದ ವೈಶಾಲ್ಯವು ತಾನೆಂತುಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ,

ಮಕಾರಮಂತ್ರ ಮೂರ್ತಿಯಾದ ಗುರುಲಿಂಗಕ್ಕೆ ಆ ಚಕ್ರವೇ ಪ್ರಣವ ಪೀಠದ ಗದ್ದುಗೆಯಾಗಿ ಅಲ್ಲಿ ತೋರುವ ವರ್ಣವೇ ನಂದದ ಕುಂದದ ಸ್ವಯಂಜ್ಯೋತಿ ಪ್ರಕಾಶವಾಗಿ ಅಳವಟ್ಟುದೇ ಎರಡನೇ ವಿಚಾರವು.

ಅಲ್ಲಿರುವಂತಹ ದಳಂಗಳೇ ಇಂಡೆ ದಂಡೆ ಕುಸುಮಾಲಂಕಾರಗಳಾಗಿ ಆ ದಳಂಗಳಲ್ಲಿ ನ್ಯಾಸವಾಗಿರುವಂತಹ ಅಕ್ಷರಂಗಳೇ ಮಕಾರ ಮಂತ್ರ ಮೂರ್ತಿಯಾದ ಗುರುಲಿಂಗವ ನೆನೆವುದಕ್ಕೆ ಮಾಂ, ಮಾಂ, ಮಾಂ ಎಂಬ ಮಂತ್ರಾಕ್ಷರಂಗಳಾಗಿ ಅಳವಟ್ಟುದೇ ನಾಲ್ಕನೆಯ ವಿಚಾರವು.

ಅಲ್ಲಿ ನೆಲಸಿರುವಂತಹ ಅಧಿದೇವತೆಯೇ ಮಹೇಶ್ವರನೆಂಬ ಪೂಜಾರಿಯಾಗಿ ಅಲ್ಲಿ ಸಂಬಂಧವಾಗಿರುವಂತಹ ಅವಸ್ಥೆಯೇ ಘನಲಿಂಗಾವಸ್ಥೆಯಾಗಿ ಅಳವಟ್ಟುದೇ ಆರನೆಯ ವಿಚಾರವು.

ಈ ರೀತಿಯಲ್ಲಿ ಮಕಾರ ಷಡಕ್ಷರೀ ಮಂತ್ರಸ್ವರೂಪವಾದ ಷಡ್ವಿಧ ತತ್ವಂಗಳೆಲ್ಲವೂ ಮಕಾರಮಂತ್ರ ಮೂರ್ತಿಯಾದ ಗುರುಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯ ಭಾವವನ್ನು ತನ್ನ ಮನದೊಳಗೆ ಗ್ರಹಿಸಿ ನೈಷ್ಠಿಕಾಭಕ್ತಿಯಿಂದ, ಶ್ರೀಗುರುಲಿಂಗಜಂಗಮವೇ ದೇವನಲ್ಲದೆ ಪರದೈವವಿಲ್ಲವೆಂಬೇಕೋಲಿಂಗನೈಷ್ಠೆಯ ಮುಂದುಗೊಂಡು ಆಚರಿಸುವಂತಾದ್ದೇ ನೈಷ್ಠಿಕಾಭಕ್ತಿ.

ಅಂತಪ್ಪ ಭಕ್ತಿಯಿಂದ ಎರಡನೆಯ ತತ್ವವೇ ಅಪ್ಪುತತ್ವ. ಆ ಅಪ್ಪು ತತ್ವದ ಜನ್ಮಕ್ಕೆ ಮೂಲಾಧಾರ ಸ್ಥಾನವಾದ ಉತ್ತರದಿಕ್ಕಿನ ಅ ಸದಾಶಿವಮೂರ್ತಿಗೆ ಎಡದ ಭಾಗದಲ್ಲಿಪ್ಪುದೇ ಉತ್ತರದಿಕ್ಕು. ಅಂತಪ್ಪ ದಿಕ್ಕಿನಲ್ಲಿ ತೋರುವ ವಾಮದೇವ ಮುಖವನರಿದು ಕರ್ಮಸಾದಾಖ್ಯ ಸ್ವರೂಪವಾದ ವಾಮದೇವ

ಮುಖವೆಂಬುದು ತಾನು ಇಲ್ಲಿ ಶಿವಶರಣನ ಜಿಹ್ವೇಂದ್ರಿಯದಲ್ಲಿ ಮಂತ್ರ ಮೂರ್ತಿಯಾದ ಗುರುಲಿಂಗ ಸ್ವರೂಪಿನಿಂದ ವಾಸವಾಗಿಪ್ಪುದೆಂದೇ ತಿಳಿದು,

ಅಪ್ಪು ತತ್ವದ ನಿವೃತ್ತಿಃ— ಅಪ್ಪು ತತ್ವದ ಮೃದುವನ್ನು ದೃಢವ್ರತ ದಿಂದ ತಿಳಿದು ತನುಮನಗುಣನಾಸ್ತಿಯಾಗಿ ದೃಢವಿಡಿದಂತಾವುದಾನೊಂದು ಶೀಲವ್ರತನಿಯಮಾಚಾರಂಗಳಲ್ಲಿ ಕೃತನಿಶ್ಚಯ ಬುದ್ಧಿಯ ಮುಂದುಗೊಂ ಡಾಚರಿಸುವಂತಹ ವೀರಮಾಹೇಶ್ವರರುಗಳಿಗೆ ಅಪ್ಪುವಿನಂಶ ಗುಣಂಗಳು ನಷ್ಟವಾಗಿರ್ಪವೆಂದೇ ಅರಿತು ಸಂಸಾರ ನಾಸ್ತಿಯಾಗಿ ಸಲಿಲ ಮದವೆತ್ತಿ ದಲ್ಲಿ ಸಂಸಾರ ಭರಿತನಾಗಿ ಮನೆಗೆ ಬೇಕು, ಎನಗೆ ಬೇಕು, ಮಕ್ಕಳಿಗೆ ಬೇಕೆ ನುತಿಹನೆಂಬ ಅಪ್ಪುವಿನ ಮದಗುಣವು ನಷ್ಟವಾಗಿ ಮಹೇಶ್ವರಸ್ಥಲವನಂ ಗಂಗೊಂಡುದೀಗ ಇಷ್ಟರ ಸಾಧನದಿಂದ ಅಪ್ಪುವಿನ ಮದಗುಣ ಅಂಶ ಗುಣಂಗಳಳಿದು ಚಿದಪ್ಪು ಸ್ವರೂಪಿನಿಂದ ಮಹೇಶ್ವರಂಗಂಗವಾಗಲಿಂತಪ್ಪ ಪರಾತ್ಪರವಾದ ಸದ್ವೀರ ಮಾಹೇಶ್ವರ ಸ್ಥಲವನೊಡಲ ಮಾಡಿಕೊಂಡಾಚ ರಿಸುವಂತಾದ್ದು ತಾನೇ ಸುಬುದ್ಧಿಯ ನೆಲೆ, ಕುಬುದ್ಧಿಯಳಿದು ಸುಬುದ್ಧಿಯ ನೆಲೆ ಎಂಬ ಕರಕಮಲಕ್ಕೆ ಮಂತ್ರಮೂರ್ತಿಯಾದ ಗುರುಲಿಂಗವು ಬಂದು ನೆಲೆಗೊಂಬಂತಹ ನಿಲುಕಡೆಯು.

---

## ಮಣಿಪೂರಕ ಚಕ್ರದಲ್ಲಿ ಶಿವಲಿಂಗದ ಉದ್ಭವವು.

ಇಚ್ಛಾಶಕ್ತಿಯ ಮಥನದಿಂದ, ಇಚ್ಛಾಶಕ್ತಿಯು ಎರಡು ತೆರನಾಗಿ ರ್ಪುದು, ಅದು ಹೇಗೆಂದೊಡೆ, ಲೋಕದಾತ್ಮರುಗಳಿಗೆ ಹುಸಿ, ಕಳವು, ಪರದಾರ, ಹಿಂಸೆ, ಅತಿಕಾಂಕ್ಷೆ ಎಂಬ ಪಂಚಮಹಾಪಾತಕಂಗಳ ಮೇಲ ಣಿಚ್ಛೆಯನ್ನುಂಟು ಮಾಡಿಕೊಡುತಿಹಳು. ಇತ್ತ ಗುರುಕಾರುಣ್ಯವ ಪಡೆದು ಲಿಂಗಾಂಗಸಂಬಂಧಿಗಳಾಗಿ ಆಚರಿಸುವಂತಹ ಶಿವಶರಣರುಗಳಿಗೆ ಪಂಚಾ ಚಾರದ ಮೇಲಣಿಚ್ಛೆಯನ್ನುಂಟು ಮಾಡಿಕೊಡುತಿಹಳು.

ಶಬ್ದಾದಿ ವಿಷಯುಗಳ ನಿವೃತ್ತಿಃ— ಮತ್ತಂತುಮಲ್ಲದೆ ಶಬ್ದಾದಿ ವಿಷ ಯಂಗಳೈದು ಇಚ್ಛಾಶಕ್ತಿಯ ಸ್ವರೂಪದಿಂದಿದ್ದಿತಾದ ಕಾರಣ ಆ ಇಚ್ಛಾ ಶಕ್ತಿಯ ಸ್ವರೂಪವಾದ ಶಬ್ದಾದಿ ವಿಷಯಂಗಳೊಳಗೆ, ಶಬ್ದ ಗುರು, ಸ್ಪರು

ಶನ ಲಿಂಗ, ರೂಪು ಶಿವಲಾಂಛನ, ರಸ ಶಿವಪ್ರಸಾದ ಸೇವನೆ, ಶಿವನಿರ್ಮಾಲ್ಯ ಗಂಧವಾಗಿ ಶಬ್ದಾದಿ ವಿಷಯಂಗಳೈದು ನಿವೃತ್ತಿಯಾದುದೇ ಇಚ್ಛಾಶಕ್ತಿ.

ವ್ಯಾನವಾಯು ನಿವೃತ್ತಿ:— ಅಂತಪ್ಪ ಇಚ್ಛಾಶಕ್ತಿಯ ಮಥನದಿಂದ ವ್ಯಾನವಾಯುವ ನಿಲಿಸಿ, ವ್ಯಾನವಾಯು ಗೋಕ್ಷೀರ ವರ್ಣ, ಸರ್ವಸಂಧಿಯಲ್ಲಿದ್ದು ನೀಡಿಕೊಂಡಿಹುದನು ಮುದುಡಿಕೊಂಡಿಹುದನು ಅನುಮಾಡಿಸಿ ಅನ್ನಪಾನವಂ ತುಂಬಿಸುತ್ತಿಹುದು, ಎಂದು ಹೇಳಿಕೊಂಬುವುದೇ ವ್ಯಾನವಾಯುವು. ಅಂತಪ್ಪ ವ್ಯಾನವಾಯುವಿನ ಸ್ಥಾನ ಧರ್ಮ ಕರ್ಮ ವರ್ಣಂಗಳಂ ಶಿಕಾರಮಂತ್ರದಿಂ ತಡೆದು,

ಸ್ವಪ್ನಾವಸ್ಥೆಯ ನಿವೃತ್ತಿ:— ಮಣಿಪೂರಕ ಚಕ್ರದ ಪೊಕ್ಕುಳ ಸ್ಥಾನದಲ್ಲಿ ಒಂದಾನೊಂದು ತ್ರಿಕೋಣೆಯಾಕಾರದಿಂದೊಪ್ಪುತಿಹುದೀ ಮಣಿಪೂರಕ ಚಕ್ರವು. ಅಂತಪ್ಪ ಚಕ್ರದ ಕುಂಕುಮ ವರ್ಣದ ಆ ಚಕ್ರವೆಂಬುದು ತಾನು ಒಂದಾನೊಂದು ಕಾಶ್ಮೀರ ವರ್ಣದ ಕಾಂತಿಯಿಂದಿರುತಿಹುದು. ಅಂತಪ್ಪ ವರ್ಣದ ದಳದ ಆ ಚಕ್ರದ ಸುತ್ತುವಳಯದಲ್ಲಿ ಹತ್ತೆಸಳುಗಳಿಂದೊಪ್ಪುತಿಹವು. ಅಂತಪ್ಪ ಹತ್ತೆಸಳುಗಳು ಡ ಢ ಣ - ತ ಥ ದ ಧ ನ- ಪ ಫ ಎಂಬ ದಶಾಕ್ಷರದ ಡಕಾರಾದಿ ಫಕಾರಾಂತ್ಯಮಾದ ಹತ್ತಕ್ಷರಂಗಳೇ ಆ ದಳಂಗಳಲ್ಲಿ ಜೀವನಾಕ್ಷರ ಸ್ವರೂಪಿನಿಂದ ನ್ಯಾಸವಾಗಿರುತಿಹವು. ಅಂತಪ್ಪ ಹತ್ತಕ್ಷರದ ಅಧಿದೈವ ರುದ್ರನು. ಇಷ್ಟರೊಡನೆ ಕೂಡಿಕೊಂಡಿರುವಂತಾದ್ದೊಂದು ಮಣಿಪೂರಕ ಚಕ್ರವು. ಆ ಚಕ್ರಕ್ಕೆ ಶ್ರೀ ರುದ್ರಮೂರ್ತಿಯೇ ಅಧಿಷ್ಠಾಯಕನಾಗಿರುತಿಹನು. ಅಂತಪ್ಪ ಶ್ರೀ ರುದ್ರಮೂರ್ತಿ ಎಂಬಧಿದೇವತೆಯ ಸುಷುಪ್ತಾವಸ್ಥೆಯನ್ನು ಗಳಸ್ಥಾನದಲ್ಲಿರ್ದಾತ್ಮನು ಹೃತ್ಕಮಲ ಕರ್ಣಿಕಾ ಕುಹರಕ್ಕಿಳಿದು ಬಂದಾಗ ಚಿತ್ತ, ಪ್ರಾಣವಾಯು, ಪ್ರಕೃತಿಯೆಂಬ ಮೂರು ತತ್ವಂಗಳೇ ಸಮವೇಷ್ಟಿಯಾಗಿ ನಿಂದು ಸ್ಥೂಲತನುವಿನ ಮರವೆಯೇ ಸೂಕ್ಷ್ಮ ತನುವಿನ ಅರಿವುಗಳೇನೂ ಇಲ್ಲದೊಂದಾನೊಂದು ಚರಣಾಯುಧನು ಪಿರಿದು ಮೆಯ್ಯುತಿರ್ಪ ಮರಿಗಳನೆಲ್ಲವನ್ನು ತನ್ನ ಪಕ್ಕದ ಮರೆಯಲ್ಲಡಗಿಸಿಕೊಂಡು ತಾನೊಂದೆಡೆಯಲ್ಲಿ ನಿದ್ರೆಗೆಯ್ವ ಹಾಗೆ ಬಾಹ್ಯಾಭ್ಯಂತರ ಸಂಬಂಧವಾದ ಸಕಲಕರಣಂಗಳನ್ನು ತನ್ನಲ್ಲಡಗಿಸಿಕೊಂಡು ತಾನು ಮಾಯಾನಂದ ಭೋಗದಲ್ಲಿ ಪರವಶವನೈದಿರುವುದೇ ಸುಷುಪ್ತ್ಯಾವಸ್ಥೆ. ಆ ಅವಸ್ಥೆ ಆ ಚಕ್ರದಲ್ಲಿ ಸಂಬಂಧವಾಗಿರುತಿಹುದು. ಅಂತಪ್ಪಾವಸ್ಥೆಯನ್ನು ಶಿಕಾರವೆಂಬ ಬೀಜಾಕ್ಷ

ರದಿಂ ತಿಳಿದು ಇವೆಲ್ಲ ಲೋಕದಾತ್ಮರುಗಳಲ್ಲಿ ಪೂರ್ವವಾಸನೆಯೊಡನೆ ಕೂಡಿಕೊಂಡು ಪ್ರಕೃತಿ ತತ್ವಂಗಳಾಗಿ ಸಕಲ ಜೀವಾತ್ಮರುಗಳನ್ನು ಜನ್ಮಾಂತರ ಗತಿಗಳೊಳಗೆ ತಂದು ಸಂಹರಿಸುವುದಕ್ಕೆ ಕಾರಣವಾಗಿರುತಿಹುದು.

ಮಣಿಪೂರಕ ಚಕ್ರವು ಮಂತ್ರಮಯುವಾದುದು:— ಇತ್ತ ಗುರುಕಾರುಣ್ಯವಂ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವಂತಹ ಶಿವ ಶರಣರುಗಳಿಗೆ ಅವೆಲ್ಲ ನಿವೃತ್ತಿಯಾಗಿ ಹೋಗಿ ಶಿಕಾರ ಷಡಕ್ಷರ ಸ್ವರೂಪವಾಗಿರುತ್ತಿಹುದು. ಅದು ಹೇಗೆಂದೊಡೆ, ಆ ಚಕ್ರವೇ ಶಿಕಾರ ಪ್ರಣವವಾದಲ್ಲಿ ಅಲ್ಲಿ ತೋರುವಂತಹ ವರ್ಣವೇ ಶಿಕಾರ ಪ್ರಣವದೊಳಗಣ ನಕಾರ ಪ್ರಣವ ಸ್ವರೂಪವು. ಅಲ್ಲಿರುವಂತಹ ದಳಂಗಳೇ ಶಿಕಾರ ಪ್ರಣವದೊಳಗಣ ಮಕಾರ ಪ್ರಣವ ಸ್ವರೂಪು. ಆ ದಳಂಗಳಲ್ಲಿ ನ್ಯಾಸವಾಗಿರುವ ಅಕ್ಷರಂಗಳೇ ಶಿಕಾರ ಪ್ರಣಮದೊಳಗಣ ವಕಾರ ಪ್ರಣವ ಸ್ವರೂಪು. ಅಲ್ಲಿ ನೆಲಸಿರುವಂತಹ ಅಧಿದೇವತೆಯೇ ಶಿಕಾರ ಮಂತ್ರದೊಳಗಣ ಯಕಾರ ಪ್ರಣವ ಸ್ವರೂಪು. ಅಲ್ಲಿ ಸಂಬಂಧವಾಗಿರುವಂತಹ ಅವಸ್ಥೆಯೇ ಶಿಕಾರ ಪ್ರಣಮದೊಳಗಣ ಓಂಕಾರ ಪ್ರಣವ ಸ್ವರೂಪು.

ಮಣಿಪೂರಕ ಚಕ್ರ ಸಂಬಂಧವಾದ ಷಡ್ವಿಧ ತತ್ವಗಳ ನಿವೃತ್ತಿ:— ಮಣಿಪೂರಕಚಕ್ರ ಸಂಬಂಧವಾದ ಷಡ್ವಿಧ ತತ್ವಂಗಳೆಲ್ಲವೂ ನಿವೃತ್ತಿಯಾಗಿ ಶಿಕಾರ ಷಡಕ್ಷರ ಮಂತ್ರ ಸ್ವರೂಪವಾಗಿರ್ಪವೆಂದೇ ತಿಳಿವುದು. ಈ ಪ್ರಕಾರದಿಂದ ಹೇಳಲ್ಪಟ್ಟೀ ಷಡ್ವಿಧ ವಿಚಾರವಿಡಿದು ಈ ಶಿಕಾರ ಷಡಕ್ಷರ ಮಂತ್ರ ಸ್ವರೂಪವಾದ ಷಡ್ವಿಧ ತತ್ವಂಗಳೆಲ್ಲವೂ ಶಿಕಾರ ಪ್ರಣವು ಮಂತ್ರಮೂರ್ತಿಯಾದ ಶಿವಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತ ನಿಶ್ಚಯ ಭಾವವನ್ನು ತನ್ನ ಮನದೊಳಗೆ ಗ್ರಹಿಸಿ ಎಂಬಲ್ಲಿ ಆ ವಿಚಾರದ ವೈಶಾಲ್ಯವು ತಾನೆಂತುಟೆಲೆ ಸ್ವಾಮಿ ಎಂದು ಬೆಸಗೊಂಡೊಡೆ,

ಶಿಕಾರ ಮಂತ್ರ ಮೂರ್ತಿಯಾದ ಶಿವಲಿಂಗಕ್ಕೆ ಆ ಚಕ್ರವೇ ಪ್ರಣವು ಪೀಠದ ಗದ್ದುಗೆಯಾಗಿಯೂ ಅಲ್ಲಿ ತೋರುವಂತಹ ವರ್ಣವೇ ನಂದದ ಕುಂದದ ಸ್ವಯಂಜ್ಯೋತಿ ಪ್ರಕಾಶವಾಗಿಯೂ ಅಳವಟ್ಟುದೇ ಎರಡನೆಯ ವಿಚಾರವು.

ಅಲ್ಲಿ ಇರುವಂತಹ ದಳಂಗಳೇ ಇಂಡೆ, ದಂಡೆ ಕುಸುಮಾಲಂಕಾರಗಳಾಗಿ ಆ ದಳಂಗಳಲ್ಲಿ ನ್ಯಾಸವಾಗಿರುವಂತಹ ಅಕ್ಷರಂಗಳೇ ಶಿಕಾರ ಮಂತ್ರಮೂರ್ತಿಯಾದ ಶಿವಲಿಂಗವ ನೆನೆಹುದಕ್ಕೆ ಶೀಂ, ಶೀಂ, ಶೀಂ ಎಂಬ ಮಂತ್ರಾಕ್ಷರಂಗಳಾಗಿ ಅಳವಟ್ಟುದೇ ನಾಲ್ಕನೆಯ ವಿಚಾರವು.

ಅಲ್ಲಿ ನೆಲಸಿರುವಂತಹ ಅಧಿದೇವತೆಯೇ ಪ್ರಸಾದಿ ಎಂಬ ಪೂಜಾರಿಯಾಗಿ ಅಲ್ಲಿ ಸಂಬಂಧವಾಗಿರುವಂತಹ ಅವಸ್ಥೆಯೇ ಘನಲಿಂಗಾವಸ್ಥೆಯಾಗಿ ಅಳವಟ್ಟುದೇ ಆರನೆಯ ವಿಚಾರವು.

ಈ ರೀತಿಯಲ್ಲಿ ಶಿಕಾರ ಷಡಕ್ಷರ ಮಂತ್ರಮೂರ್ತಿ ಸ್ವರೂಪವಾದ ಶಿವಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಹುದೆಂಬ ಕೃತ ನಿಶ್ಚಯ ಭಾವವನ್ನು ತನ್ನ ಮನದೊಳಗೆ ಗ್ರಹಿಸಿ ಅವಧಾನ ಭಕ್ತಿಯಿಂದ ಸರ್ವಾಚಾರ ಸಂಪತ್ತಿನಾಚರಣೆಯಲ್ಲಿ ಎಚ್ಚರಗುಂದದೆ ಅತ್ಯಂತ ಸುಯಿಧಾನಿಯಾಗಿ ಆಚರಿಸುವಂತಹದ್ದು ಅವಧಾನ ಭಕ್ತಿ. ತನುತ್ರಯ ಸಂಬಂಧವಾದ ರೂಪು, ರುಚಿ, ತೃಪ್ತಿಗಳನ್ನು ಇಷ್ಟ, ಪ್ರಾಣ, ಭಾವ ಲಿಂಗಗಳ ಮುಖದಿಂದ ಉಳುಮೆಯಾಗಿ ಬಂದ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದ ತ್ರಯಂಗಳ ಪಡೆದನುಭವಿಸುವಂತಾದ್ದು ಅವಧಾನ ಭಕ್ತಿ.

ಅಂತಪ್ಪ ಭಕ್ತಿಯಿಂದ ಮೂರನೆಯ ತತ್ವದಾದಿಯ ತಿಳಿದು ಮೂರನೆಯ ತತ್ವವೇ ಅಗ್ನಿತತ್ವ, ಆ ಅಗ್ನಿತತ್ವದ ಜನನಕ್ಕೆ ಮೂಲಾಧಾರ ಸ್ಥಾನವಾದ ದಕ್ಷಿಣ ದಿಕ್ಕಿನ ಸದಾಶಿವ ಮೂರ್ತಿಗೆ ಬಲದ ಭಾಗದಲ್ಲಿರುವಂತಾದ್ದೇ ದಕ್ಷಿಣ ದಿಕ್ಕು. ಅಂತಪ್ಪ ದಿಕ್ಕಿನಲ್ಲಿ ತೋರುವ ಅಘೋರಮುಖವನರಿದು ಮೂರ್ತಿ ಸಾದಾಖ್ಯ ಸ್ವರೂಪವಾದ ಅಘೋರ ಮುಖವು ತಾನೇ ಇಲ್ಲಿ ಶಿವಶರಣನ ನೇತ್ರೇಂದ್ರಿಯದಲ್ಲಿ ಪರಮಪ್ರಕಾಶ ಸ್ವರೂಪಮಾದ ಶಿವಲಿಂಗ ಸ್ವರೂಪಿನಿಂದ ವಾಸವಾಗಿಪ್ಪದೆಂದು ತಿಳಿವುದು.

ತೇಜಸ್ತತ್ವದ ನಿವೃತ್ತಿ :— ತೇಜಸ್ತತ್ವದುಷ್ಣವನ್ನು 'ಕ್ಷುಧಾ ತೃಷ್ಣಾಸ್ತಥಾ ನಿದ್ರಾ, ಆಲಸ್ಯಂ, ಸಂಗಮೇವಚ' ಎಂಬ ಅಂಶ ಗುಣಗಳನ್ನು ಶಿವಯೋಗದಿಂ ಕೆಡಿಸಿ, ಶಿವಧ್ಯಾನ, ಶಿವಪೂಜೆ, ಶಿವವ್ರತ, ಶಿವಲಿಂಗ ಧಾರಣವೆಂಬ ಶಿವಯೋಗ ಪಂಚಕವನುಳ್ಳ ಶಿವಪ್ರಸಾದಿಗಳಿಗೆ ಅಗ್ನಿಯ ಅಂಶಗುಣಂಗಳು ನಷ್ಟವಾಗಿಪ್ಪವೆಂದರಿದು ಕಾಮ್ಯನಾಸ್ತಿಯಾಗಿ ಪಾವಕ

*From,*
**Shivanubhava**
**Office**
**Bijapur.**

# BOOK-POST.

ಶ್ರೀ. ರಾಜ ರಾ||

**R. N. B. 2554**

ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ|| ಬ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ವಾರ್ಡ ೨ ಮನೆ ನಂ. ೧೩೬೮ ರಲ್ಲಿರುವ ತಮ್ಮ **ಹಿತಚಿಂತಕ ಪ್ರಿಂ. ಪ್ರೆಸ್ಸಿ**ನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

# ವಿಷಯುಗಳು.

# ಶಿವಾನುಭವ

| ವರ್ಷ ೨೩ | ಅಕ್ಟೋಬರ ೧೯೪೮ | ಸಂಚಿಕೆ ೧ |
|---|---|---|


## ಪತ್ರಿಕೆಯ ೨೩ ನೆಯ ವರ್ಷ.

ಇದೇ ಸಂಚಿಕೆಯಿಂದ ಶಿವಾನುಭವ ಪತ್ರಿಕೆಯ ೨೩ನೆಯ ವರ್ಷವು ಪ್ರಾರಂಭವಾಗುತ್ತದೆ. ಈ ದೀರ್ಘಕಾಲದಲ್ಲಿ ೨-೩ ಸಂಚಿಕೆಗಳು ಮಾತ್ರ ಅಪವಾದಾತ್ಮಕವಾಗಿ ನಿಲ್ಲಿಸಲ್ಪಟ್ಟು ಉಳಿದ ಕಾಲದಲ್ಲಿ ಅದು ಅಖಂಡವಾಗಿ ನಡಿಸಲ್ಪಡುತ್ತ ಬಂದಿದೆ. ಮಧ್ಯದಲ್ಲಿ ನಮ್ಮ ಶರೀರದಲ್ಲಿ ಹೆಚ್ಚಾಗಿ ಅಸ್ವಸ್ಥತೆಯುಂಟಾದ್ದರಿಂದ ಈ ಕೆಲವು ಸಂಚಿಕೆಗಳು ನಿಲ್ಲಿಸಲ್ಪಟ್ಟವು. ಈ ಪತ್ರಿಕೆಯ ಮೂಲಕ ಈ ವರೆಗೆ ಸುಮಾರು ೬೫-೭೦ ಮಹತ್ವದ ಗ್ರಂಥಗಳು ಪ್ರಕಟವಾಗಿವೆ. ಅವುಗಳ ಮಹತ್ವವನ್ನು ಕರ್ನಾಟಕಸ್ಥರು ಚನ್ನಾಗಿ ಅರಿತವರೇ ಆಗಿದ್ದಾರೆ ಅವುಗಳಲ್ಲಿ ಅನೇಕ ಗ್ರಂಥಗಳು ವಿಶ್ವವಿದ್ಯಾಲಯಗಳಲ್ಲಿ ಪಠ್ಯಪುಸ್ತಕಗಳಾಗಿ ಸಹ ನಿಯಮಿಸಲ್ಪಟ್ಟಿವೆ. ಅವುಗಳ ವಿವರಗಳನ್ನು ಇಲ್ಲಿ ಹೇಳುವದು ಅನವಶ್ಯವಾಗಿದೆ. ಈ ಪತ್ರಿಕೆಯ ಮೂಲಕವೇ ಒಂದು ಮಹತ್ವದ ವಾಙ್ಮಯವು ಕನ್ನಡ ಭಾಷೆಯಲ್ಲಿ ಪ್ರಕಟವಾಗಿರುತ್ತದೆ.

ಈಚೆಗೆ ನಾವು ವೀರಶೈವ ಸಮಾಜದ ಪೂರ್ವೇತಿಹಾಸದ ಮೇಲೆ ಪ್ರಕಾಶವನ್ನು ಕೆಡಹುವಂತಹ ಅನೇಕ ಶಿವಶರಣರ ಚರಿತ್ರೆಗಳನ್ನು ಸಂಗ್ರಹಿಸಿ ಪ್ರಕಟಿಸುತ್ತ ಬಂದಿದ್ದೇವೆ. ಈ ಚರಿತ್ರೆಗಳು ಎರಡು ಸ್ವತಂತ್ರ ಗ್ರಂಥಗಳಾಗಿ ಈಗ ಮುದ್ರಿಸಲ್ಪಟ್ಟಿರುತ್ತವೆ. ಈ ಕಾರ್ಯವನ್ನು ನಾವು ಇನ್ನೂ ಮುಂದುವರಿಸಬೇಕಾಗಿದೆ. ಆದರೆ ವೀರಶೈವ ವಚನ ವಾಙ್ಮಯದ ನಿಜ

# ವಿಷಯಗಳು.

# ಶಿವಾನುಭವ


| ವರ್ಷ ೨೩ | ಜನವರಿ ೧೯೪೯ | ಸಂಚಿಕೆ ೪ |
| --- | --- | --- |


## ವಿಶ್ವೋತ್ಪತ್ತಿ.


(ಲೇಖಕರು:- ರಾ|| ರಾ|| ಫ ಗು. ಹಳಕಟ್ಟಿ,
ಬಿ. ಎ ಎಲ್. ಎಲ್. ಬಿ ವಿಜಾಪುರ.)


ಶಿವಶರಣರು ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸುವಲ್ಲಿ ಈ ಸಿದ್ಧಾಂತವು ನೈಜವಾದ ಸೃಷ್ಟಿಯ ರೀತಿಗಳನ್ನು ಅನುಸರಿಸಿ ವಿಚಾರಕ್ಕೆ ಸರಿಪಡುವಂತೆ ಅದನ್ನು ಪ್ರಸ್ತಾಪಿಸಿದ್ದಾರೆ. ಅವರು ಷಟ್‌ಸ್ಥಲಗಳು, ಲಿಂಗಾನುಭವ, ಶಿವಯೋಗ, ಲೌಕಿಕ ಮತ್ತು ನೈತಿಕ ತತ್ವಗಳು, ಜಗದ್ರಚನೆ ಈ ಮೊದಲಾದ ಮಹತ್ವದ ವಿಷಯಗಳ ವಿವೇಚನೆಯಲ್ಲಿ ಆವುದು ಸುಸಂಬದ್ಧವೋ ಪ್ರಕೃತಿಯ ರೀತಿಗೆ ಅವಿರೋಧವೋ ಅದನ್ನೇ ಅನುಸರಿಸುತ್ತಿರುವದು ಕಂಡುಬರುತ್ತಿದೆ. ಆದ್ದರಿಂದ ಅವರ ವಿವೇಚನೆಯಲ್ಲಿ ಪ್ರಪಂಚ ಮತ್ತು ಪಾರಮಾರ್ಥ ಇವುಗಳಲ್ಲಿ ದ್ವೈವಿಧ್ಯವು ಇರುವದಿಲ್ಲ. ಅವುಗಳಲ್ಲಿ ಸಮ್ಮೇಳನವಿರುತ್ತವೆ. ಇದರಿಂದ ಅವರು ಪ್ರತಿಪಾದಿಸುವ ವಿಚಾರಗಳು ಗ್ರಾಹ್ಯವಾದವುಗಳೆಂಬ ತಿಳುವಳಿಕೆಯು ಕೂಡಲೆ ಉಂಟಾಗುತ್ತದೆ. ವಿಶ್ವೋತ್ಪತ್ತಿಯ ಬಗ್ಗೆ ಅವರಲ್ಲಿರುವ ವಿಚಾರಗಳು ಹೀಗೆಯೇ ಇರುತ್ತವೆ.

### ಜಗತ್ತು ಶಕ್ತಿಮಯವು.

ಆಧುನಿಕ ವೈಜ್ಞಾನಿಕ ಸಂಶೋಧಕರು ಪದಾರ್ಥಗಳ ಮೂಲರೂಪು ಹೇಗಿರುತ್ತದೆಂಬುದನ್ನು ಕುರಿತು ಬಹು ಪ್ರಯತ್ನಪೂರ್ವಕವಾಗಿ ಸಂಶೋಧಿಸುತ್ತಲಿದ್ದಾರೆ. ಅವರು ಪದಾರ್ಥಗಳ ಪೃಥಃಕರಣ ಮಾಡುತ್ತ ಮಾಡುತ್ತ ಅವುಗಳ ಅಣುಗಳ ವರೆಗೂ ಬಂದು ಅವುಗಳನ್ನು ವಿಭಾಗಿಸುವದು ಅಶಕ್ಯ

ವೆಂದು ನಂಬಿ ಇಂಥವು ವಿಶ್ವದಲ್ಲಿ ೯೦ ಮಾತ್ರ ಇರುತ್ತವೆಂತಲೂ ಅವು ಗಳ ಪರಸ್ಪರ ಮಿಶ್ರಣದಿಂದ ನಾನಾವಿಧ ಪದಾರ್ಥಗಳು ಉಂಟಾಗಿರು ತ್ತವೆಂತಲೂ ಈವರೆಗೆ ನಂಬಿದ್ದರು. ಆದರೆ ವೈಜ್ಞಾನಿಕರು ಈಗ ಈ ಅಣು ವನ್ನು ಸಹ ವಿಭಜನೆ ಮಾಡಲು ಶಕ್ಯವಿದೆ ಎಂತಲೂ ಕಂಡುಹಿಡಿದಿ ವರು. ಈ ಅಣುವು ಅತ್ಯಲ್ಪ ಪರಿಮಾಣವುಳ್ಳದಾದರೂ ಅದೊಂದು ಅಗಾ ಧವಾದ ವಿಶ್ವವೇ ಆಗಿದೆಂದು ಅವರಿಗೆ ತೋರಿಬಂದಿದೆ. ಈಗ ಅವರು ಅಣುವಿನ ಮೇಲೆ ಅನೇಕತರದ ಪ್ರಯೋಗಗಳನ್ನು ಮಾಡಿ ಅದನ್ನು ವಿಭ ಜಿಸಲು ಅದರಲ್ಲಿ ಎಂಥ ಅದ್ಭುತಶಕ್ತಿ ಇರುವದನ್ನು ಕೂಡ ಸಿದ್ಧಮಾಡಿ ತೋರಿಸಿದ್ದಾರೆ. ಅಣುವಿನಲ್ಲಿ ಹುಟ್ಟಿದ ಶಕ್ತಿಯಮೂಲಕವೇ ಅಮೇರಿಕ ನ್ನರು ಜಪಾನ ದೇಶದಲ್ಲಿಯ ಎರಡು ದೊಡ್ಡ ಪಟ್ಟಣಗಳನ್ನು ನಾಶಮಾಡಲು ಸಮರ್ಥರಾದರು. ಅಣುವಿನಲ್ಲಿ ಎವ ಈ ಶಕ್ತಿಯ ಸ್ವರೂಪ ಮತ್ತು ಅದರ ಅದ್ಭುತ ಸಾಮರ್ಥ್ಯ ಇವುಗಳ ಸಂಶೋಧನವು ಇನ್ನೂ ಅಪೂರ್ಣವಾಗಿ ದ್ದರೂ ಪದಾರ್ಥಗಳ ಮೂಲದಲ್ಲಿ ಆವುದೋ ಒಂದು ಮಹತ್ತರ ಶಕ್ತಿಯು ಇದೆ ಎಂಬ ತಿಳಿವಳಿಕೆಯು ದೃಢವಾಗುತ್ತ ನಡಿದಿದೆ. ಹೀಗೆ ವೈಜ್ಞಾನಿ ಕರು ದೃಶ್ಯದಿಂದ ಅದೃಶ್ಯದ ಕಡೆಗೆ ಗಮಿಸುತ್ತಲಿದ್ದುದು ಕಂಡುಬರುತ್ತದೆ. ಆದರೆ ಹಿಂದಿನ ಕಾಲದಲ್ಲಿ ಹಿಂದೂ ತತ್ವವೇತ್ತಿಗಳು ತಮ್ಮ ಅಂತರಂಗ ಜ್ಞಾನದಿಂದ ಮತ್ತು ಅಧ್ಯಾತ್ಮಿಕ ಸಾಮರ್ಥ್ಯದಿಂದ ವಿಶ್ವವು ಪ್ರಾಣಮ ಯವೂ ಶಕ್ತಿಮಯವೂ ಆಗಿರುವದೆಂಬುದನ್ನು ಹಿಂದೆ ಎಂದೋ ಕಂಡು ಹಿಡಿದಿರುವದು ಆಶ್ಚರ್ಯಕರವಾಗಿರುತ್ತದೆ! ಅವರ ಸಿದ್ಧಾಂತಗಳು ಆಧು ನಿಕ ವೈಜ್ಞಾನಿಕರ ಶೋಧಗಳ ಮೂಲಕ ಸತ್ಯವಾದವುಗಳೆಂಬುದು ಎಲ್ಲ ರಿಗೆ ಹೆಚ್ಚೆಚ್ಚಿಗೆ ಮನವರಿಕೆಯಾಗಹತ್ತಿರುತ್ತದೆ.

ಹಿಂದೂ ತತ್ವವೇತ್ತಿಗಳಲ್ಲಿ ವೇದಾಂತಿಗಳೆಂತಲೂ ಆಗಮಜ್ಞರೆಂತಲೂ ಎರಡು ವಿಭೇದಗಳನ್ನು ನಾವು ಮಾಡಬಹುದು. ಇವರಲ್ಲಿ ವೇದಾಂತಿ ಗಳು ಸತ್ವ, ರಜ, ತಮ ಈ ತ್ರಿಗುಣಗಳ ಕೆಲವೊಂದು ಪರಸ್ಪರ ಸಂಬಂಧದ ಮೂಲಕ ವಿವಿಧತೆಯುಳ್ಳ ಈ ವಿಶ್ವವು ಉಂಟಾಗಿದೆಂದು ಭಾವಿಸಿರುವರು. ಆದರೆ ಆಗಮಜ್ಞರು ವಿಶ್ವವು ಕೆಲವೊಂದು ಶಕ್ತಿಯ ಮೂಲಕ ಉಂಟಾ ಗಿದೆಂದು ಪ್ರತಿಪಾದಿಸುತ್ತ ಬಂದಿದ್ದಾರೆ. ಈ ಆಗಮಜ್ಞರಲ್ಲಿ ಅನೇಕ ಮತ ಭೇದಗಳಾಗಿದ್ದರೂ ಅವರಲ್ಲಿ ತಮಿಳು ದೇಶದ ದ್ರಾವಿಡರು ಮತ್ತು ಕರ್ನಾ ಟಕ ದೇಶದ ಶಿವಶರಣರು ಎಂಬ ಎರಡು ಮುಖ್ಯ ವಿಭಾಗಗಳನ್ನು ನಾವು

ಹುದಬಹುದು. ಈ ಉಭಯ ವರ್ಗದವರು ಪ್ರತಿಪಾದಿಸುವ ತತ್ವಗಳಲ್ಲಿ ಅತ್ಯಂತ ಸಾಮೀಪ್ಯತೆ ಇವೆ. ಆದರೂ ಅವು ಒಂದೇ ಇರವೆ ಶಿವಶರಣರು ಕೆಲವು ವಿಷಯಗಳಲ್ಲಿ ದ್ರಾವಿಡ ಆಗಮಜ್ಞರ ಮುಂದೆ ಹೋಗಿ ಅವರ ವಿಚಾರಗಳನ್ನು ಪೂರ್ಣಗೊಳಿಸಿದ್ದು ಕಂಡುಬರುತ್ತವೆ. ಈ ಶಿವಶರಣರು ವಿಶ್ವವು ಹೇಗೆ ಉಂಟಾಗಿದೆಂಬುದನ್ನು ಕುರಿತು ಬಹು ಆಳವಾಗಿ ವಿಚಾರ ಮಾಡಿದ್ದಾರೆ. ಅವರು ಈ ವಿಚಾರಗಳನ್ನು ತಮ್ಮ ಷಟ್‌ಸ್ಥಲ ಸಿದ್ಧಾಂತದಲ್ಲಿ ನಿರೂಪಿಸುತ್ತ ಅವುಗಳನ್ನು ಆಧಾರವಾಗಿಟ್ಟುಕೊಂಡು ಲಿಂಗಾಂಗಸಾಮರಸ್ಯದ ರೀತಿಗಳನ್ನು ವಿಶದಪಡಿಸಿದ್ದಾರೆ. ಅವರು ಬೋಧಿಸುವ ನಡೆವಳಿಗಳು ಹಿಂದೂಧರ್ಮಶಾಸ್ತ್ರದಲ್ಲಿ ಹೊಸ ಮಾದರಿಯವಾಗಿರುತ್ತವೆ.

ಈ ಬೋಧೆಗಳನ್ನು ಬಸವಾದಿಪ್ರಮಥರು ಶಿವಾನುಭವ ಮಂಟಪದಲ್ಲಿ ಕ್ರಮಗೊಳಿಸಿ ಪಂಡಿತ ಪಾಮರರಿಗೆಲ್ಲ ತಿಳಿಯುವಂತೆ ತಮ್ಮ ವಚನಗಳಲ್ಲಿ ನಿರೂಪಿಸಿದ್ದಾರೆ.

## ಪರಶಿವ.

ವಚನಕಾರರು ತಮ್ಮ ವಚನಗಳಲ್ಲಿ ವಿಶ್ವವು ತೆರೆಗಳ ಹೊಯ್ದಾಟಗಳೇನೂ ಇಲ್ಲದೆ ಪ್ರಶಾಂತವಾದ ಸ್ತಬ್ಧವಾದ ಸ್ಥಿತಿಯಲ್ಲಿ ಸಮುದ್ರವು ಹೇಗೆ ಇರುತ್ತದೋ ಹಾಗೆ ಮೊದಲು ಇದ್ದು ಅದು ಸರ್ವವ್ಯಾಪಿಯೂ ಶೂನ್ಯವೂ ಆಗಿ ಎಲ್ಲೆಲ್ಲಿಯೂ ಹಬ್ಬುಗೊಂಡಿತ್ತೆಂದು ಅಭಿಪ್ರಾಯಪಟ್ಟಿದ್ದಾರೆ. ಆಗ ಬ್ರಹ್ಮ ವಿಷ್ಣು ರುದ್ರರು, ಚತುರ್ದಶ ಲೋಕಗಳು, ಪಂಚಭೂತಗಳು ಇವಾವೂ ಇಲ್ಲದೆ ಪರಮಾತ್ಮನೊಬ್ಬನೇ ಸರ್ವ ಶೂನ್ಯನಿರಾಲಂಬ ಸ್ಥಿತಿಯಲ್ಲಿದ್ದನು. ಈ ಸ್ಥಿತಿಯಲ್ಲಿರುವ ಪರಮಾತ್ಮನಿಗೆ ಪರಬ್ರಹ್ಮ, ಶಿವತತ್ವ, ಪರಶಿವ, ಇದೇ ಮೊದಲಾದ ಹೆಸರುಗಳು ವಚನಗಳಲ್ಲಿರುತ್ತವೆ.

## ಮೂಲಚಿತ್ತು.

ಪರಶಿವನು ಈ ಸ್ಥಿತಿಯಲ್ಲಿರುವಾಗ ಅವುದೋ ಒಂದು ಕಾರಣದಿಂದ ವಿಶ್ವವನ್ನುಂಟುಮಾಡಬೇಕೆಂಬ ಲವಲವಿಕೆಯು ಅವನಲ್ಲಿ ಉಂಟಾಗಲು ಈ ಬಯಕೆ ಅಥವಾ ನೆನಹು ಆ ಜಗತ್ತಿಗೆ ಕಾರಣವಾಗಿ ಪರಿಣಮಿಸಿತು. ಆಗ ಪ್ರಶಾಂತವಾದ ಸಮುದ್ರದಲ್ಲಿ ತೆರೆಗಳು ಮೂಡಿದಾಗ ಅದು ಕಣ್ಣಿಗೆ ಹೇಗೆ ತೋರುತ್ತದೋ ಹಾಗೆ ಈ ದೃಶ್ಯ ಜಗತ್ತು ತೋರಹತ್ತುತ್ತದೆ.

ಪರಬ್ರಹ್ಮ ವಸ್ತುವಿನಲ್ಲಿ ಮೊದಲು ಚಿತ್‌ಶಕ್ತಿ ಉಂಟಾಗಲು ಈ ಘೋದ್ಘಾಟವೇ ಕಾರಣವು. ಈ ಚಿತ್‌ಶಕ್ತಿಯು ಜಗತ್ತಿನ ಆವಿರ್ಭಾವಕ್ಕೆ ಮೂಲವಾಗಿರುತ್ತದೆ. ಇದಕ್ಕೆ ಮೂಲಚಿತ್ತು ಎಂತಲೂ ಹೇಳುವದುಂಟು.

## ನಾದಬಿಂದುಕಲೆಗಳು

ಈ ಚಿತ್‌ಶಕ್ತಿಯಲ್ಲಿ ಅಥವಾ ಮೂಲಚಿತ್ತಿನಲ್ಲಿ ಪದಾರ್ಥಗಳ ಅಸ್ತಿತ್ವಕ್ಕೆ ಕಾರಣಗಳಾದ ನಾದ ಬಿಂದು ಕಲೆಗಳೆಂಬುವು ಉಂಟಾಗುತ್ತವೆ. ಇವುಗಳೇ ಪದಾರ್ಥಗಳಿಗೆ ಮೂಲವಾಗಿರುತ್ತವೆ.

ನಾದವೆಂದರೆ ಒಂದು ಬಗೆಯ ಅಲುಗಾಡುವಿಕೆ. ಈ ಅಲುಗಾಡುವಿಕೆಯೇ ಬಿಂದುವನ್ನು ಉಂಟುಮಾಡುತ್ತದೆ. ಬಿಂದುವು ಪೆಟ್ಟಿಗೆ ಸ್ಥೂಲತರವಾದದ್ದು. ನಾದದ ತೆರೆಗಳು ಅಥವಾ ಚಲನೆಗಳು ಈ ಬಿಂದುವಿಗೆ ಸಂಬಂಧಿಸಿಕೊಂಡು ಅದರ ಸುತ್ತಲೂ ಅತಿ ಶೀಘ್ರಗತಿಯಿಂದ ಹೊಯ್ದಾಡುತ್ತಿರುತ್ತವೆ. ನಾದವನ್ನು ಬಿಟ್ಟು ಬಿಂದುವು ಉಂಟಾಗಲಾರದು. ಹೀಗೆ ಇವೆರಡೂ ಪರಸ್ಪರ ಸಂಬಂಧಿಸಲು ಅವುಗಳಲ್ಲಿ ಕಲೆ ಎಂಬುದು ತಲೆದೋರುತ್ತದೆ. ಪದಾರ್ಥಗಳ ವ್ಯವಹಾರ ಮತ್ತು ಗುಣಗಳು ಈ ಕಲೆಯ ಮೇಲೆ ಅವಲಂಬಿಸಿರುತ್ತವೆ. ಮನುಷ್ಯನ ಸ್ವಭಾವ ರೀತಿ ನಡೆಗಳು ಸಹ ಅವನಲ್ಲಿ ಒಂದು ಬಗೆಯ ಕಳೆಯು ಇದ್ದುದರ ಪರಿಣಾಮವಾಗಿವೆ.

## ಮಹಾಲಿಂಗ.

ಈ ಪ್ರಕಾರ ಉತ್ಪನ್ನವಾದ ನಾದ ಬಿಂದು ಕಲೆಗಳು ಸ್ವತಂತ್ರವಾಗಿ ವ್ಯವಹರಿಸಲಾರವು. ಅವುಗಳಿಗೆ ಒಂದು ಆಶ್ರಯವು ಅವಶ್ಯವಾದುದು. ಈ ಆಶ್ರಯವು ಅವುದೆಂದರೆ ಪರಮಾತ್ಮನಲ್ಲಿ ಮೊದಲು ಒಡಮೂಡಿದ ಚಿತ್‌ಶಕ್ತಿ ಅಥವಾ ಮೂಲಚಿತ್ತೇ ಇದೆ.' ಈ ಚಿತ್‌ಶಕ್ತಿಯನ್ನು ಇವು ತಮ್ಮ ಅವಲಂಬನವಾಗಿ ಇಟ್ಟುಕೊಂಡು ದೃಶ್ಯ ಜಗತ್ತಿಗೆ ಕಾರಣವಾಗುತ್ತವೆ. ಈ ನಾಲ್ಕೂ ಆರಂಭಸ್ಥಿತಿಯಲ್ಲಿ ಕಣ್ಣಿಗೆ ತೋರದ ಚಿತ್‌ಸ್ವರೂಪಿನಲ್ಲಿ ಇರುವದರಿಂದ ಅವುಗಳಿಗೆ ಚಿನ್ನಾದ, ಚಿದ್ಬಿಂದು, ಚಿತ್ಕಲೆ, ಎಂಬ ಹೆಸರುಗಳಿವೆ. ಇವು ಪರಮಾತ್ಮನ ಮೂಲ ಚಿತ್ತುವಿನೊಡನೆ ಕೂಡಿದ ಕೂಡಲೆ ಈ ನಾಲ್ಕೂ ಜಗತ್ಸೃಷ್ಟಿಗೆ ಕಾರಣವಾಗುತ್ತವೆ. ಈ ನಾಲ್ಕೂ 'ಗಟ್ಟಿಗೊಂಡು' 'ಗೋಳಕಾಕಾರ ಮಹಾಲಿಂಗ'ವೆನಿಸಿಕೊಳ್ಳುವವೆಂದು ವಚನಕಾರರು ವರ್ಣಿಸುತ್ತಾರೆ. ಈ ಮಹಾಲಿಂಗವು ಸರ್ವವ್ಯಾಪಿಯೂ ಸರ್ವ

ಚೈತನ್ಯಾತ್ಮಕವೂ ಆಗಿದ್ದು, ಅದು ಅಣುವಿಗೆ ಅಣುವಾಗಿಯೂ ಮಹತ್ತಿಗೆ ಮಹತ್ತಾಗಿಯೂ ಜಗತ್ತಿನ ಒಳಹೊರಗೆಲ್ಲ ಎಲ್ಲೆಡೆಯಲ್ಲಿಯೂ ವ್ಯಾಪಿಸಿರುತ್ತದೆ.

ಮಹಾಲಿಂಗವು ಜಗತ್ತಿನಲ್ಲಿರುವ ಎಲ್ಲ ವಸ್ತುಗಳು ಉಗಮಹೊಂದಲು ಸ್ಥಾನವಾಗಿರುತ್ತದೆ. ಮಹಾಲಿಂಗದೊಳಗಿಂದಲೇ ಪದಾರ್ಥಗಳ ಮೂಲ ರೂಪಗಳೆಲ್ಲ ಹೊರಹೊರಟು ವಿಶ್ವದಲ್ಲೆಲ್ಲ ಪಸರಿಸುತ್ತವೆ. ಇವಲ್ಲಿ ಈ ಪದಾರ್ಥಗಳು ಮೊದಲು ಬೀಜರೂಪವಾಗಿರುತ್ತವೆ. ಬೀಜದೊಳಗೆ ವಿಶಾಲವಾದ ಮರವು ಹೇಗೆ ಅಡಗಿರುತ್ತದೆಯೋ ಹಾಗೆಯೇ ಅವೆಲ್ಲವೂ ಮಹಾಲಿಂಗದಲ್ಲಿ ಅಡಗಿರುತ್ತವೆ. ಅವು ಕಣ್ಣಿಗೆ ಕಾಣದಿದ್ದರೂ ಅವು ಶಕ್ತಿರೂಪಾಗಿ ಅದರಲ್ಲಿ ವಾಸಿಸುತ್ತವೆ.

ಮಹಾಲಿಂಗವು ಸಂಪೂರ್ಣ ಚೈತನ್ಯಾತ್ಮಕವು. ಚೈತನ್ಯಕ್ಕೆ ಹೇಗೆ ಆಧಾರವು ಅವಶ್ಯವಾದುದೋ ಹಾಗೆ ಈ ಮಹಾಲಿಂಗಕ್ಕೆ ಪರಶಿವನು ಮೂಲ ಚಿತ್ತು ಆಧಾರವಾಗಿರುತ್ತದೆ. ಆದ್ದರಿಂದ ಷಟ್‌ಸ್ಥಲದಲ್ಲಿ ಮಹಾಲಿಂಗಕ್ಕೆ ಉಚ್ಚಸ್ಥಾನವಿದೆ. ಕೆಳಗಿನ ಸ್ಥಲಗಳೆಲ್ಲವೂ ಕಡೆಗೆ ಮಹಾಲಿಂಗದಲ್ಲಿಯೇ ಅಡಗುವವು.

## ಓಂಕಾರ ಪ್ರಣವವು.

ಮಹಾಲಿಂಗವು ಓಂಕಾರ ಪ್ರಣವ ರೂಪವಾಗಿರುತ್ತದೆ. ಓಂಕಾರದಿಂದಲೇ ಅದು ನಿರ್ದೇಶಿಸಲ್ಪಡುತ್ತದೆ. ಹಿಂದೂ ಧರ್ಮಶಾಸ್ತ್ರದಲ್ಲಿ ಈ ಪ್ರಣವದ ಮಹಿಮೆಯು ಅತ್ಯುನ್ನತವಾಗಿರುತ್ತದೆ. ಅದು ಜಗತ್ತಿನ ತುಂಬೆಲ್ಲ ಪಸರಿಸಿರುತ್ತದೆ. ಅದು ಮಾನವನ ಕಿವಿಗೆ ಹತ್ತದಿದ್ದರೂ ಅದರ ಘೋಷಣೆಯು ವಿಶ್ವದಲ್ಲಿ ತುಂಬಿರುತ್ತದೆ.

## ಅ, ಉ, ಮಾಕ್ಷರಗಳು.

ಓಂಕಾರವು ಅ, ಉ, ಮ, ಎಂಬ ಮೂರು ಅಕ್ಷರಗಳ ಸಂಗಮದಿಂದ ಉಂಟಾಗಿದ್ದು ಈ ಅಕಾರವು ನಾದವೆಂತಲೂ, ಉಕಾರವು ಬಿಂದುವೆಂತಲೂ, ಮಕಾರವು ಕಲೆ ಎಂತಲೂ ಭಾವಿಸಲ್ಪಟ್ಟಿರುತ್ತವೆ. ಈ ಅ, ಉ, ಮ, ಅಕ್ಷರಗಳು ಬೀಜರೂಪವಾದ ಪ್ರಣಮಾಕ್ಷರಗಳೆಂತಲೂ ಹೇಳಲ್ಪಡುತ್ತವೆ.

ಮಹಾಲಿಂಗವು ಅತ್ಯಂತ ಪ್ರಕಾಶಮಾನವಾದುದು. ಅದರ ಪ್ರಕಾಶವು ವಿಶ್ವದಲ್ಲೆಲ್ಲ ಪಸರಿಸಿರುತ್ತದೆ. ಆದರೆ ಅದು ಸಾಮಾನ್ಯ ಮನು

ಸ್ಯನ ದೃಷ್ಟಿಗೆ ತೋರುವದಿಲ್ಲ. ಅವರ್‍ನೂ ಉಚ್ಚ ಸ್ಥಿತಿಯನ್ನು ಹೊಂದಿದವರಿಗೆ ಮಾತ್ರ ಅದು ಗೋಚರವಾಗುತ್ತದೆ. ಅದು ಚರ್ಮಚಕ್ಷುವಿಗೆ ಗೋಚರವಾಗದೆ, ದಿವ್ಯ ಚಕ್ಷುವುಳ್ಳವನಿಗೆ ಮಾತ್ರ ಗೋಚರವಾಗುತ್ತದೆ.

## ಶೂನ್ಯಲಿಂಗಗಳು.

ಒಂದು ಕಡೆ ಮಹಾಲಿಂಗ ಮತ್ತು ಬೇರೊಂದು ಕಡೆ ಪರಮಾತ್ಮನ ಅವ್ಯಕ್ತ ಮೂಲ ಸ್ವರೂಪ ಇವುಗಳ ಮಧ್ಯದಲ್ಲಿ ವಚನಕಾರರು ಪುನಃ ಮೂರು ಪರಿಸ್ಥಿತಿಗಳು ವಿಶ್ವದಲ್ಲಿ ಇರುತ್ತವೆಂದು ಹೇಳುತ್ತಾರೆ. ಅಂದರೆ ಪರಮಾತ್ಮ ಅಥವಾ ಪರಶಿವ ಇವನಿಗೆ ಮಹಾಲಿಂಗದ ಪ್ರತ್ಯಕ್ಷ ಸಂಬಂಧವಿರದೆ ಅವುಗಳ ಮಧ್ಯದಲ್ಲಿ ಮಹಾಲಿಂಗಕ್ಕಿಂತಲೂ ಸೂಕ್ಷ್ಮತರವಾದ ಬೇರೆ ಮೂರು ಸ್ಥಿತಿಗಳಿದ್ದು ಅವು ಮಹಾಲಿಂಗದ ಮೊದಲು ಉಂಟಾಗುತ್ತವೆ. ಅವು ಸರ್ವಶೂನ್ಯನಿರಾಲಂಬ, ಶೂನ್ಯಲಿಂಗ ಮತ್ತು ನಿಃಕಲಲಿಂಗ ಎಂಬವುಗಳಿರುತ್ತವೆ. ಇವು ಮಹಾಲಿಂಗಕ್ಕಿಂತಲೂ ಸೂಕ್ಷ್ಮವೂ ಮೇಲ್ಲಿನ ತರಗತಿಯವೂ ಇರುತ್ತವೆ. ಈ ಮೂರು ವಿಧಗಳನ್ನು ವಚನಕಾರರು ತಮ್ಮ ವಚನಗಳಲ್ಲಿ ಉಲ್ಲೇಖಿಸುತ್ತಾರೆ. ಅವು ಮನುಷ್ಯನಲ್ಲಿಯೂ ವಾಸಮಾಡುತ್ತವೆ. ಮನುಷ್ಯನ ಲಲಾಟದಲ್ಲಿ ಆಜ್ಞಾಚಕ್ರವಿದ್ದು ಅದು ಮಹಾಲಿಂಗದ ಸ್ಥಾನವು. ಅದಕ್ಕೂ ಮೇಲಿನದಾದ ಸಹಸ್ರದಳ ಕಮಲವಿದ್ದ ಬ್ರಹ್ಮಸ್ಥಾನದಲ್ಲಿ ನಿಃಕಲಲಿಂಗವು, ಅದಕ್ಕೂ ಆಚೆಯದಾದ ಶಿಖಾಚಕ್ರದಲ್ಲಿ ಶೂನ್ಯಲಿಂಗವು ಅದಕ್ಕೂ ಆಚೆಯದಾದ ಪಶ್ಚಿಮ ಚಕ್ರದಲ್ಲಿ ಸರ್ವಶೂನ್ಯ ನಿರಂಜನಲಿಂಗವು ಹೀಗೆ ಇವುಗಳು ಅನುಕ್ರಮವಾಗಿ ವಾಸಮಾಡುತ್ತವೆ.

## ಬ, ಸ, ವ ಅಕ್ಷರಗಳು.

ಈ ಶೂನ್ಯಲಿಂಗಗಳಿಗೂ ಕೂಡ ಹೇಗೆ ಮಹಾಲಿಂಗಕ್ಕೆ ಅ, ಉ, ಮ ಎಂಬ ಪ್ರಣಮಾಕ್ಷರಗಳಿರುತ್ತವೆಯೋ, ಹಾಗೆಯೇ ಇವುಗಳಿಗೆ ಪ್ರಣಮಾಕ್ಷರಗಳಿದ್ದು ಅವುಗಳು ಅನುಕ್ರಮವಾಗಿ ಬ, ಸ, ವ ಎಂದಿರುತ್ತವೆ. ಬ, ಸ, ವ ಪ್ರಣಮಾಕ್ಷರಗಳು, ಅ, ಉ, ಮ. ಪ್ರಣಮಾಕ್ಷರಗಳಿಗಿಂತಲೂ ಅತ್ಯಂತ ಸೂಕ್ಷ್ಮವಾದವುಗಳು. ಅವರು ಈ ಸೂಕ್ಷ್ಮ ಸ್ಥಲಗಳಲ್ಲಿರುವ ಲಿಂಗಗಳನ್ನು ಬಾಂ, ಸಾಂ, ವಾಂ ಎಂದು ತಮ್ಮ ಜಪಗಳಲ್ಲಿ ಧ್ಯಾನಿಸುವುದುಂಟು.

ಬ, ಸ, ವ ಈ ಪ್ರಣವಗಳು ಕಲ್ಯಾಣಪಟ್ಟಣದಲ್ಲಿ ಮಂತ್ರಿಪದಾರೂಢನಾಗಿದ್ದ ಬಸವೇಶ್ವರನನ್ನು ನಿರ್ದೇಶಿಸುವುದಿಲ್ಲ. 'ಬಸವ' ಇದು 'ವೃಷಭ' ಈ ಶಬ್ದದ ತದ್ಭವವಾಗಿದ್ದು ಈ ಶಬ್ದವು ಪುರಾತನಕಾಲದಿಂದಲೂ ರೂಢಿಯಲ್ಲಿದೆ. 'ಬಸವ' ಈ ಹೆಸರಿದ್ದ ಅನೇಕ ಬಸವರು ಕಲ್ಯಾಣದ ಬಸವೇಶ್ವರನಕಿಂತಲೂ ಮೊದಲು ಆಗಿಹೋಗಿರುವದು ಶಿಲಾಶಾಸನಗಳಿಂದ ತಿಳಿದುಬರುತ್ತದೆ. ವೃಷಭ ಅಥವಾ ನಂದಿ ಈತನು ಶಿವಪುರಾಣಗಳ ಪ್ರಕಾರ ಧರ್ಮಸ್ವರೂಪನಾಗಿದ್ದು ಪರಶಿವನೊಡನೆ ಅವನ ಪ್ರತ್ಯಕ್ಷ ಸಂಬಂಧವಿದ್ದು ಆತನು ಆತನಿದ್ದಲ್ಲಿಯೇ ಯಾವಾಗಲೂ ಇರುತ್ತಾನೆ. ಆದ್ದರಿಂದ ಶಿವಶಾಸ್ತ್ರಜ್ಞರು ಬ, ಸ, ವ ಈ ಅಕ್ಷರಗಳನ್ನು ಅ, ಉ, ಮ ಕಿಂತಲೂ ಅತ್ಯಂತ ಸೂಕ್ಷ್ಮತರವಾದ ಪ್ರಣವಗಳೆಂದು ಹೇಳುವ ಉದ್ದೇಶ್ಯವಾಗಿ ಅವರು ಈ ಅಕ್ಷರಗಳನ್ನು ಈ ಪ್ರಕಾರ ಉಪಯೋಗಿಸುತ್ತ ಬಂದಿದ್ದಾರೆ.

## ಆಧುನಿಕ ವೈಜ್ಞಾನಿಕರ ಶೋಧಗಳು.

ಈ ಪ್ರಕಾರ ವಿಶ್ವದಲ್ಲಿಯ ವಸ್ತುಗಳು ನಾದ ಬಿಂದು ಕಲೆಗಳ ಮೂಲಕ ಆದವೆಂಬುದನ್ನು ವಚನಕಾರರು ಕಂಡುಹಿಡಿದಿದ್ದು, ಈ ವಸ್ತುಗಳ ಅಂಂಭವ ಮೂಲ ದ್ರವ್ಯವನ್ನು ಪಾಶ್ಚಿಮಾತ್ಯ ಶಾಸ್ತ್ರಜ್ಞರು ಹೇಳುವ 'ಅಣು' ಎಂದು ಕರೆಯಬಹುದು. ಇದನ್ನು ಆಧುನಿಕ ವೈಜ್ಞಾನಿಕರು 'ಆಟಮ' ಎಂದು ಕರೆಯುತ್ತಾರೆ. ಇದರ ಆಚೆಗಿನ ವಸ್ತುವು ಆವುದೂ ಇಲ್ಲ, ಇದು ಅವಿಭಾಜ್ಯ ಎಂದು ಅವರು ಮೊದಲು ತಿಳಿಯುತ್ತಿದ್ದ. ಈಚೆಗೆ ಈ 'ಆ್ಯಟಮ'ವನ್ನು ಅವರು ಒಡೆಯಲು ಸಮರ್ಥರಾಗಲು ಅದರಿಂದ ಒಂದು ಅದ್ಭುತ ಶಕ್ತಿಯು ಉಂಟಾಗುತ್ತದೆಂಬುದನ್ನು ಅವರು ಪ್ರಯೋಗದಿಂದ ಸಿದ್ಧಮಾಡಿ ತೋರಿಸಿದ್ದಾರೆ. ಈ ಶಕ್ತಿಯ ನಿಜಸ್ವರೂಪ ಆವುದೆಂಬುದನ್ನು ಅವರು ಇನ್ನೂ ಸಂಶೋಧಿಸುತ್ತಲಿದ್ದಾರೆ. ಅವರ ಅಭಿಪ್ರಾಯದ ಪ್ರಕಾರ 'ಆಟಮ'ಕ್ಕೆ ಒಂದು 'ನ್ಯೂಕ್ಲಿಯಸ' ಎಂಬ ಸ್ಥಿರವಾದ ಕಾಂಡವಿದೆ. ಅದರಲ್ಲಿ 'ಪ್ರೋಟಾನ್' ಮತ್ತು 'ಎಲೆಕ್ಟ್ರಾನ್' ಎಂಬವುಗಳು ಯಾವಾಗಲೂ ಚಲಿಸುತ್ತಿರುತ್ತವೆ. ಇದೆರಡಲ್ಲದೆ 'ಪೋಜಿಟ್ರಾನ್' ಎಂಬವುಗಳು ಅವುಗಳೊಡನೆ ಇದ್ದು ಈ ಎರಡು ಮತ್ತು ಹಿಂದೆ ಹೇಳಿದ ಎರಡು ಹೀಗೆ ನಾಲ್ಕರಿಂದ ಸೃಷ್ಟಿಯಲ್ಲಿಯ ಪದಾರ್ಥಗಳುಂಟಾಗಿವೆಂದು ಅವರ ಈಚೆಗಿನ ಶೋಧವಾಗಿರುತ್ತದೆ. ಇವುಗಳಲ್ಲಿ ಕೆಲವುಗಳನ್ನು ನಾವು

ನಾದ, ಬಿಂದು, ಕಳೆ, ಮತ್ತು ಮೂಲಚಿತ್ತು ಇವುಗಳಿಗೆ ಹೋಲಿಸಿ ನುಡಿಯಬಹುದು. ಆದರೆ ಇವೆಲ್ಲವುಗಳ ನಿಜಸ್ವರೂಪು ಗೊತ್ತಾಗದ ಹೊರತು ವೈಜ್ಞಾನಿಕರು ಕಂಡು ಹಿಡಿದಿರುವ ಈ ವಸ್ತುಗಳು ವಚನಕಾರರ ಯಾವ ವಸ್ತುಗಳಿಗೆ ಸಮಾನಾರ್ಥವುಳ್ಳವುಗಳೆಂಬವನ್ನು ಹೇಳುವದು ಕಠಿಣವಿದೆ. ಆದರೆ ನಾದ, ಬಿಂದು, ಕಳೆ ಮತ್ತು ಮೂಲಚಿತ್ತು ಇವುಗಳಿಂದಾದ ವಸ್ತುವನ್ನು ಅರಿತ ಕೂಡಲೆ ಮನುಷ್ಯನಲ್ಲಿ ಒಂದು ಅದ್ಭುತ ಶಕ್ತಿಯು ಅವರ ಅರಿವಿನಲ್ಲಿ ಉಂಟಾಗುತ್ತದೆಂದು ವಚನಕಾರರು ಭಾವಿಸಿದ್ದಾರೆ. ಆಗ ನಾದ, ಬಿಂದು ಕಳೆಗಳು ಮೂಲಚಿತ್ತಿನಲ್ಲಿ ಬೆರೆದುಹೋಗುತ್ತವೆ. ಮತ್ತು ಶಕ್ತಿರೂಪವಾದ ಅವನ ಕಳೆಯು ಬಾಹ್ಯದಲ್ಲಿ ಅದ್ಭುತ ಸಾಮರ್ಥ್ಯವನ್ನು ಪ್ರಕಾಶಪಡಿಸುತ್ತ ಅವನಲ್ಲಿ ಪ್ರಕಟವಾಗುತ್ತದೆ. ಆದರೆ ವೈಜ್ಞಾನಿಕರು ಅಣುವನ್ನು ಭೇದಿಸಲು ಬಹು ಶ್ರಮಪಡಬೇಕಾದಂತೆ ಅಧ್ಯಾತ್ಮಶಕ್ತಿಯುಳ್ಳ ಶಿವಶರಣರು ಹೀಗೆ ಶ್ರಮಪಡುವದು ಅವಶ್ಯವಿಲ್ಲ. ಅವರು ಲಿಂಗ ಧ್ಯಾನದಿಂದ ಮಹತ್ತರವಾದ ಶಕ್ತಿಯನ್ನು ಹೊಂದಿ ನಾದ ಬಿಂದು ಕಲೆಗಳನ್ನು ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಳ್ಳುತ್ತಾರೆ. ಇಷ್ಟೇ ಅಲ್ಲ, ಅವುಗಳಾಚೆ ಇರುವ ಬಾಂ, ಸಾಂ, ವಾಂ ಎಂಬ ಮಹಾಶಕ್ತಿಗಳನ್ನು ಸಹ ಸಾಧಿಸಿ ವಿಶ್ವದಾಚೆಗೆ ಹೋಗುತ್ತಾರೆ.

### ಷಡ್ ಸಾದಾಖ್ಯಗಳು.

ಮಹಾಲಿಂಗದ ವರೆಗೆ ಪ್ರಕಟವಾದ ವಿಶ್ವವು ಮುಂದೆ ಪೂರ್ಣ ದೃಶ್ಯ ಸ್ಥಿತಿಯುಳ್ಳ ಜಗತ್ತಿನ ವರೆಗೆ ಬರಬೇಕಾದರೆ ಅದರ ಬಾಹ್ಯ ಸ್ವರೂಪು ಮತ್ತು ಅದರ ಒಳಗಿನ ಶಕ್ತಿಗಳು ಇವುಗಳ ಉತ್ಪಾದನೆಗೋಸ್ಕರ ಅನೇಕ ದ್ರವ್ಯಗಳು ಬೇಕಾಗುತ್ತವೆ. ಇವು ಬೇರೆ ಬೇರೆ ಸಾದಾಖ್ಯಗಳಲ್ಲಿ ಉದ್ಭವಿಸುತ್ತವೆ. ಸಾದಾಖ್ಯಗಳು ವಿಶ್ವದ ಸ್ಥಿತ್ಯಂತರಗಳೇ ಇರುತ್ತವೆ. ಇವು ಆರು ಇದ್ದು ಅವುಗಳ ಹೆಸರುಗಳು ಕರ್ಮಸಾದಾಖ್ಯ, ಕರ್ತೃಸಾದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ, ಶಿವಸಾದಾಖ್ಯ, ಮತ್ತು ಮಹಾಸಾದಾಖ್ಯ ಎಂದು ಇವೆ. ಸೃಷ್ಟಪದಾರ್ಥಗಳಿಗೆಲ್ಲ ಸ್ಥೂಲ, ಸೂಕ್ಷ್ಮ, ಕಾರಣಶರೀರಗಳೆಂದಿದ್ದು ಬಹಿರಂಗವಾದದ್ದು ಸ್ಥೂಲವೆಂತಲೂ ಅಂತರಂಗದಲ್ಲಿರುವ ಮನ, ಬುದ್ಧಿ, ಚಿತ್ತಾದಿಗಳೂ, ರೂಪ, ರಸ, ಗಂಧಾದಿಗಳನ್ನು ಗ್ರಹಿಸುವ ಜ್ಞಾನೇಂದ್ರಿಯಗಳೂ ಇವೇ ಮೊದಲಾದವುಗಳು ಸೂಕ್ಷ್ಮವೆಂತಲೂ ಕ್ರಿಯೆಗಳಿಗೆ ಕಾರಣವಾಗಿರುವಂಥ ಅಥವಾ ಪ್ರೇರಕವಾಗಿರು

ವಂಥ ಅಪ್ರಕಟಿತವಾಗಿರುವ ಶಕ್ತಿಗಳೆಲ್ಲ ಕಾರಣವೆಂತಲೂ ಹೇಳಲ್ಪಡು ತ್ತಿವೆ. ಈ ಮೂರೂ ಶರೀರಗಳಲ್ಲಿತೋರುವ ಗುಣಗಳುಂಟಾಗಲು ಸಾದಾಖ್ಯ ಗಳಲ್ಲಿ ಉಂಟಾಗುವ ಆಯಾ ದ್ರವ್ಯಗಳೇ ಕಾರಣವಾದವುಗಳು. ಕರ್ಮ ಮತ್ತು ಕರ್ತೃ ಸಾದಾಖ್ಯಗಳು ಸ್ಥೂಲಶರೀರಕ್ಕೂ, ಅಮೂರ್ತ ಮೂರ್ತ ಸಾದಾಖ್ಯಗಳು ಸೂಕ್ಷ್ಮ ಶರೀರಕ್ಕೂ, ಶಿವ ಮತ್ತು ಮಹಾಸಾದಾಖ್ಯ ಗಳು ಕಾರಣಶರೀರಕ್ಕೂ ಸಂಬಂಧಿಸಿರುತ್ತವೆ. ಅಂದರೆ ಆಯಾ ಸಾದಾ ಖ್ಯಗಳಲ್ಲುಂಟಾಗುವ ದ್ರವ್ಯಗಳು ಅವುಗಳಿಗೆ ಸಂಬಂಧಿಸಿದ ಆಯಾ ಶರೀ ರಗಳಿಗೆ ಪೋಷಕವಾಗಿ ಪರಿಣಮಿಸುತ್ತವೆ. ಹೀಗೆ ಸಾದಾಖ್ಯಗಳು ವಿಶ್ವದ ಎಲ್ಲ ತರದ ಸ್ವರೂಪಗಳಿಗೆ ಕಾರಣವಾಗಿರುತ್ತವೆ.

### ಪಂಚಲಿಂಗಗಳು.

ಸಾದಾಖ್ಯಗಳು ಮಹಾಲಿಂಗದೊಳಗಿಂದ ಉಂಟಾದರೂ ಅವುಗಳಿಗೆ ಸ್ವತಂತ್ರ ಅಸ್ತಿತ್ವವು ಇರುವದಿಲ್ಲ. ಅವುಗಳಿಗೆ ಮಹಾಲಿಂಗವೇ ಆಧಾರ ವಾಗಿರುವದು. ಆದರೆ ಈ ಮಹಾಲಿಂಗವು ಅತ್ಯಂತ ಸೂಕ್ಷ್ಮವಾದುದು. ಆದ್ದರಿಂದ ಸಾದಾಖ್ಯಗಳ ಬೇರೆ ಬೇರೆ ಸ್ಥಿತ್ಯಂತರಗಳಲ್ಲಿ ಅವುಗಳಿಗೆ ಅನು ರೂಪವಾದ ಬೇರೆ ಬೇರೆ ಲಿಂಗಗಳ ರೂಪವನ್ನು ಈ ಮಹಾಲಿಂಗವು ತಾಳುತ್ತ ಈ ಸಾದಾಖ್ಯಗಳಿಗೆ ಆಧಾರವಾಗಿರುತ್ತದೆ. ಹೀಗೆ ಆಧಾರವಾಗು ವಲ್ಲಿ ಮಹಾಸಾದಾಖ್ಯಕ್ಕೋಸ್ಕರ ಪ್ರಸಾದಲಿಂಗವಾಗಿಯೂ, ಅಮೂರ್ತ ಸಾದಾಖ್ಯಕ್ಕೋಸ್ಕರ ಶಿವಲಿಂಗವಾಗಿಯೂ ಕರ್ತೃಸಾದಾಖ್ಯಕ್ಕೋಸ್ಕರ ಗುರು ಲಿಂಗವಾಗಿಯೂ ಕರ್ಮಸಾದಾಖ್ಯಕ್ಕೋಸ್ಕರ ಆಚಾರಲಿಂಗವಾಗಿಯೂ ಮಹಾಲಿಂಗವು ವ್ಯವಹರಿಸುತ್ತದೆ. ಹೀಗೆ ಮಹಾಲಿಂಗವು ವಿವಿಧರೂಪವನ್ನು ತಾಳುತ್ತ ಆಯಾ ಸಾದಾಖ್ಯಗಳಲ್ಲಿದ್ದುಕೊಂಡು ಆವವುಗಳ ಕಾರ್ಯಗಳಿಗೆ ಅದು ಪ್ರೇರಣೆ ಮಾಡುತ್ತಿರುತ್ತದೆ.

### ಶಿವನ ಪಂಚಮುಖಗಳು.

ಹೀಗೆ ಮಹಾಲಿಂಗದ ಮೂಲಕ ಉಂಟಾಗಿರುವ ಆಯಾ ಸಾದಾ ಖ್ಯಗಳು ಮತ್ತು ಆಯಾ ಲಿಂಗಗಳು ಅಸ್ವತಂತ್ರವಾಗಿದ್ದು ಅವುಗಳ ಕ್ರಿಯೆ ಗಳನ್ನು ವ್ಯವಸ್ಥಿತವಾಗಿ ನಡಿಸಿಕೊಂಡು ಹೋಗುವದಕ್ಕೋಸ್ಕರ ಒಬ್ಬ ಅಧಿ ದೇವತೆಯು ಪರಶಿವನ ಪ್ರತಿನಿಧಿಯಾಗಿ ಕಾರ್ಯ ಮಾಡುತ್ತಾನೆ. ಮಹಾ ಲಿಂಗಕ್ಕೆ ಶಿವನೇ ಅಧಿದೇವತೆಯು. ಈ ಶಿವನಿಗೆ ಈಶಾನ್ಯಮುಖ, ತತ್ಪು ರುಷ ಮುಖ, ಅಘೋರಮುಖ, ವಾಮದೇವಮುಖ, ಸದ್ಯೋಜಾತಮುಖ

ಎಂಬ ಐದು ಮುಖಗಳಿದ್ದು ಅವುಗಳ ಮೂಲಕವಾಗಿಯೇ ಅವನು ವಿಶ್ವದ ಲ್ಲಿಯ ಕಾರ್ಯಗಳಿಗೆ ಯೋಗ್ಯ ಚಾಲನೆಯನ್ನು ಕೊಡುತ್ತಾನೆ. ಆದ್ದರಿಂದ ಶಿವಶರಣರು ಸೃಷ್ಟಿಯ ಕಾರ್ಯಗಳಲ್ಲಿ ಶಿವನಿಗೆ ಉನ್ನತ ಸ್ಥಾನವನ್ನು ಕೊಟ್ಟಿರುತ್ತಾರೆ. ಶಿವನ ಮುಖ್ಯ ಕಾರ್ಯವು ಸೃಷ್ಟಿಯಲ್ಲಿಯ ಕಾರ್ಯಗಳು ಅವ್ಯವಸ್ಥಿತವಾದಲ್ಲಿ ಅವುಗಳನ್ನು ಸರಿಪಡಿಸುವದೇ ಇರುತ್ತದೆ. ಪ್ರಸಂಗಬಂದರೆ ಅವನು ಜಗತ್ತಿನಲ್ಲಿ ಕೆಲವೊಂದು ಅವತಾರತಾಳಿ ಅವ್ಯವಸ್ಥೆಯಾದುವನ್ನು ಸರಿಪಡಿಸುತ್ತಾನೆ. ಆದ್ದರಿಂದ ಶಿವಶರಣರು ಈ ಶಿವನನ್ನು ಅನೇಕವಿಧ ಶಬ್ದಗಳಿಂದ ಸ್ತುತಿಸುತ್ತಾರೆ. ಅವನ ಕಾರುಣ್ಯವನ್ನು ಮತ್ತು ರಕ್ಷಣೆಯನ್ನು ಅವರು ಬಯಸುತ್ತಾರೆ. ಶಿವನು ಇಂಥ ಮಹತ್ವದ ಕಾರ್ಯಮಾಡುತ್ತಿರುವದರಿಂದ ಅವನ ವಿಷಯವಾಗಿ ಅನೇಕತೆರದ ದಂತಕಥೆಗಳು ಉಂಟಾಗಿ ಪುರಾಣಿಕರು ಅವುಗಳನ್ನು ಕಾವ್ಯಮಯವಾಗಿ ಅನೇಕ ರೀತಿಯಿಂದ ಹೇಳಿದ್ದಾರೆ. ಅವನು ಪಂಚಮುಖನು, ಪಾರ್ವತೀ ವಲ್ಲಭನು, ನಂದಿವಾಹನನು ಎಂದು ಮೊದಲಾಗಿ ಸ್ತೋತ್ರ ಮಾಡಿದ್ದಾರೆ.

ಮೇಲಿನ ವಿವರಣೆಗಳಲ್ಲಿ ಶಿವಸಾದಾಖ್ಯಕ್ಕೆ ಈಶಾನ್ಯಮುಖವು, ಅಮೂರ್ತಿ ಸಾದಾಖ್ಯಕ್ಕೆ ತತ್ಪುರುಷ ಮುಖವು, ಮೂರ್ತಿಸಾದಾಖ್ಯಕ್ಕೆ ಅಘೋರಮುಖವು, ಕರ್ತುಸಾದಾಖ್ಯಕ್ಕೆ ವಾಮದೇವ ಮುಖವು, ಕರ್ಮ ಸಾದಾಖ್ಯಕ್ಕೆ ತತ್ಪುರುಷ ಮುಖವು ಸಂಬಂಧಪಡುತ್ತವೆಂದು ಹೇಳಲ್ಪಟ್ಟಿರುತ್ತದೆ.

## ಪಂಚಾಕ್ಷರಗಳು.

ಈ ಪ್ರಕಾರ ಶಿವನ ಕಾರ್ಯಗಳಿದ್ದು ಅವನು ಸಾದಾಖ್ಯಗಳು, ಲಿಂಗಗಳು, ಇವುಗಳನ್ನು ಅವಲಂಬನವಾಗಿಟ್ಟುಕೊಂಡು ವಿಶ್ವವನ್ನು ನಡಿಸುತ್ತಾನೆಂದು ತಿಳಿದಲ್ಲಿ ಈ ಸಾದಾಖ್ಯಗಳು ಮತ್ತು ಈ ಲಿಂಗಗಳು ಕೇವಲ ಚೈತನ್ಯಾತ್ಮಕವಾದವುಗಳು. ಆದ್ದರಿಂದ ಇಂಥವುಗಳಿಗೆ ಕೆಲವೊಂದು ಆಧಾರವು ಅವಶ್ಯವಾದುದು. ಆದ್ದರಿಂದ ಶಿವನು ಸೃಷ್ಟವಸ್ತುಗಳಿಗೆ ಸಂಬಂಧಿಸುವಲ್ಲಿ ಅವನಿಗೆ ಕೆಲವೊಂದು ಸ್ಥೂಲತರವಾದ ಚೈತನ್ಯವು ಅವಶ್ಯವಿದ್ದು, ಇದು ಪಂಚಾಕ್ಷರಗಳ ಮೂಲಕವೇ ಉಂಟಾಗುತ್ತದೆ. ಈ ಪಂಚಾಕ್ಷರಗಳು ಮಹಾಲಿಂಗದಲ್ಲಿರುವ ಓಂಕಾರದಿಂದ ಅನುಕ್ರಮವಾಗಿ ಪ್ರಕಟವಾಗುತ್ತಿದ್ದು ಅವು ಯಕಾರ, ವಕಾರ, ಶಿಕಾರ, ಮಕಾರ, ನಕಾರ ಅಥವಾ ಯ, ವ, ಶಿ, ಮ, ನ ಈ ಅಕ್ಷರಗಳು ಇರುತ್ತವೆ. ಇವುಗಳಿಗೆ ಪ್ರಣಮ

ಗಳೆಂತಲೂ ಹೆಸರು ಇದೆ. ಇವು ಶಿವನ ಪಂಚಮುಖಗಳಿಂದ ಅಂದರೆ ಈಶಾನ್ಯಮುಖ, ತತ್ಪುರುಷಮುಖ, ಅಘೋರಮುಖ, ವಾಮದೇವಮುಖ, ಸದ್ಯೋಜಾತಮುಖ ಇವುಗಳಿಂದಲೇ ಉಂಟಾಗುತ್ತವೆ. ಆದ್ದರಿಂದ ಶಿವ ಶರಣರು ಶಿವನನ್ನು 'ಓಂನಮಶ್ಶಿವಾಯ' ಎಂಬ ಮಂತ್ರದಿಂದ ಧ್ಯಾನಿಸುವದುಂಟು.

## ಪಂಚಕಲೆಗಳು

ಹೀಗೆ ಪಂಚಾಕ್ಷರಗಳು ಉತ್ಪನ್ನವಾದ ಬಳಿಕ ಅವುಗಳ ತೇಜಸ್ಸು ಅಥವಾ ಪ್ರಭಾವದಿಂದ ವಿಶ್ವದಲ್ಲಿ ಪಂಚಕಲೆಗಳು ಉಂಟಾಗುತ್ತವೆ. ಓಂಕಾರ ಪ್ರಣವದಿಂದ ಶಾಂತ್ಯಾತೀತೋತ್ತರ ಕಲೆಯು, ಯಕಾರದಿಂದ ಶಾಂತ್ಯಾತೀತಕಲೆಯು, ವಕಾರದಿಂದ ಶಾಂತಿಕಲೆಯು ಶಿಕಾರದಿಂದ ವಿದ್ಯಾಕಲೆಯು, ನಕಾರದಿಂದ ನಿವೃತ್ತಿಕಲೆಯು ಹೀಗೆ ಕಲೆಗಳು ಉತ್ಪನ್ನವಾಗುತ್ತವೆ. ಈ ಕಲೆಗಳು ಪಂಚಾಕ್ಷರಗಳಿಂದುಂಟಾಗುವ ಚೈತನ್ಯದ ಪರಿಣಾಮಗಳೇ ಎಂದು ಭಾವಿಸಬೇಕು. ಇವೆಲ್ಲ ಕಲೆಗಳು ಮನುಷ್ಯನ ಉದ್ಧಾರಕ್ಕೆ ಅವಶ್ಯವಾದವುಗಳು. ಅವೆಲ್ಲವುಗಳಿಗೂ ಕೆಲವೊಂದು ಅರ್ಥವಿದೆ. ದುಷ್ಟ ಮತ್ತು ಸಹಜವಲ್ಲದ ರೀತಿಗಳಿಂದ ದೂರಿರುವಂತೆ ಮಾಡುವಂತಹದೇ ನಿವೃತ್ತಿಕಲೆಯು. ಈ ನಿವೃತ್ತಿಕಲೆಯ ಮೂಲಕ ಉಂಟಾದ ಪರಿಣಾಮಗಳನ್ನು ಸ್ಥಿರಪಡಿಸುವಂತಹದೇ ಪ್ರತಿಷ್ಠಾಕಲೆಯು. ಸುಖದುಃಖಗಳ ಕಾರಣಗಳನ್ನು ತಿಳಿಸಿ ಯೋಗ್ಯವಾದುದನ್ನು ಹೇಳುವಂತಹದೇ ವಿದ್ಯಾಕಲೆಯು. ಈ ವಿದ್ಯಾಕಲೆಯಿಂದ ಶಾಂತಿಕಲೆಯು, ಈ ಶಾಂತಿಯ ಸ್ಥಿತಿಯನ್ನು ಸಹ ನಿವೃತ್ತಿಗೊಳಿಸಿ ಅದರ ಆಚೆಗೆ ಹೋಗುವಂತೆ ಮಾಡುವಂತಹದೇ ಶಾಂತ್ಯತೀತಕಲೆಯು, ಅದರಿಂದಲೂ ಆಚೆಗೆ ಗಮಿಸುವಂತೆ ಮಾಡುವಂತಹದು ಶಾಂತ್ಯತೀತೋತ್ತರಕಲೆ ಈ ಪ್ರಕಾರ ಕ್ರಮವಿರುತ್ತದೆ. ಹೀಗೆ ಈ ಕಲೆಗಳು ಪಂಚಾಕ್ಷರಗಳನ್ನು ಸಾಧಿಸಿದ್ದರಿಂದ ಉಂಟಾದ ತೇಜಸ್ಸನ್ನು ತನ್ನಲ್ಲಿ ನೆಲೆಗೊಳಿಸಿದ್ದರ ಪರಿಣಾಮಗಳಾಗಿರುತ್ತವೆ. ಈ ಕಲೆಗಳು ವಿಶ್ವದ ಪೂರ್ಣ ಉತ್ಪತ್ತಿ ಮತ್ತು ಅದರ ಪ್ರಗತಿಗೆ ಕಾರಣಗಳಾಗಿವೆ.

## ಪಂಚಶಕ್ತಿಗಳು.

ಹೀಗೆ ಪಂಚಾಕ್ಷರಗಳಿಂದ ಪಂಚಕಲೆಗಳು, ಪಂಚಕಲೆಗಳಿಂದ ಪಂಚಶಕ್ತಿಗಳು ಉಂಟಾಗುತ್ತವೆ. ಶಾಂತ್ಯತೀತೋತ್ತರ ಕಲೆಯಿಂದ ಚಿತ್‌ಶಕ್ತಿಯು

ಶಾಂತ್ಯತೀತಕಲೆಯಿಂದ ಪರಾಶಕ್ತಿಯು, ಶಾಂತಿಕಲೆಯಿಂದ ಆದಿಶಕ್ತಿಯು, ವಿದ್ಯಾಕಲೆಯಿಂದ ಇಚ್ಛಾಶಕ್ತಿಯು, ಪ್ರತಿಷ್ಠಾಕಲೆಯಿಂದ ಜ್ಞಾನಶಕ್ತಿಯು ನಿವೃತ್ತಿಕಲೆಯಿಂದ ಕ್ರಿಯಾಶಕ್ತಿಯು ಉಂಟಾಗುತ್ತವೆ. ಆದಂಥವಲ್ಲಿ ಕೆಲವೊಂದು ಭಾವನೆಯಿಂದ ಚೈತನ್ಯಯುಕ್ತವಾದ ಮಂತ್ರವು ಉಂಟಾಗುತ್ತದೆ. ಇಂಥ ಮಂತ್ರದಪರಿಣಾಮವಾಗಿ ಕೆಲವೊಂದು ಪ್ರಭಾವವು, ಮುಂದೆ ಆ ಪ್ರಭಾವದ ಬೆಳಗಿನೊಳಗೆ ಕೆಲವೊಂದು ಶಕ್ತಿಯು ಉಂಟಾಗುತ್ತವೆ. ಹೀಗೆ ಸೃಷ್ಟಿಯಲ್ಲಿ ಕ್ರಮವಿರುತ್ತದೆ, ಈ ನಿಯಮಕ್ಕನುಸರಿಸಿ ಓಂ, ನ, ಮ, ಶಿ, ವಾ, ಯ ಈ ಪಂಚಾಕ್ಷರಗಳ ಪರಿಣಾಮವಾಗಿ ಮೊದಲು ಪಂಚಕಲೆಗಳು ಅಥವಾ ಹೊಳಹುಗಳು, ಈ ಕಲೆಗಳ ಹೊಳಹಿನಲ್ಲಿ ಬೇರೆ ಬೇರೆ ಶಕ್ತಿಗಳು ಉಂಟಾಗುತ್ತವೆ. ಇವು ಮೇಲೆ ಹೇಳಿದಂತೆ ಚಿತ್‌ಶಕ್ತಿ, ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ. ಜ್ಞಾನಶಕ್ತಿ, ಕ್ರಿಯಾಶಕ್ತಿ ಎಂಬವುಗಳು ಇರುತ್ತವೆ. ಇವು ಚೇತನ ಮತ್ತು ಅಚೇತನ ಪದಾರ್ಥಗಳಲ್ಲೆಲ್ಲಿಯೂ ನಾನಾವಿಧವಾಗಿ ದೃಗ್ಗೋಚರವಾಗುತ್ತವೆ. ಈ ಶಕ್ತಿಗಳ ಮೂಲಕವೇ ಜಗತ್ತಿನ ವ್ಯವಹಾರಗಳು ಪ್ರತ್ಯಕ್ಷವಾಗಿ ನಡಿಯುತ್ತಲಿವೆ.

## ಪಂಚಕರಣಗಳ ಉತ್ಪತ್ತಿ.

ವಿಶ್ವದ ಆವಿರ್ಭಾವಕ್ಕೆ ಜ್ಞಾನ, ಮನ, ಅಹಂಕಾರ, ಬುದ್ಧಿ, ಚಿತ್ತು ಇವುಗಳು ಅವಶ್ಯವಾದವುಗಳು. ಇವುಗಳಿಲ್ಲದೆ ಕಾರ್ಯಗಳಾಗವು. ಇವು ಮೇಲೆ ಹೇಳಿದ ಪಂಚಶಕ್ತಿಗಳಿಂದಲೇ ಉಂಟಾಗುತ್ತವೆ. ಈ ಕರಣಗಳ ಮೂಲಕವೇ ಜಗತ್ತಿನ ಮತ್ತು ಮನುಷ್ಯನ ಪ್ರಗತಿಯು ಆಗುತ್ತದೆ. ಇವು ಚೇತನ ಮತ್ತು ಅಚೇತನ ವಸ್ತುಗಳಲ್ಲೆಲ್ಲ ತೋರಿಬರುತ್ತವೆ. ಕೆಲವುಗಳಲ್ಲಿ ಇವು ಹೆಚ್ಚು ಪ್ರಮಾಣದಿಂದ ಕೆಲವುಗಳಲ್ಲಿ ಕಡಿಮೆ ಪ್ರಮಾಣದಿಂದ ಇರುತ್ತಿರಬಹುದು. ಒಂದುವೇಳೆ ಅವು ಹೆಚ್ಚು ಪ್ರಮಾಣದಿಂದ ಇದ್ದಲ್ಲಿ ಅಂಥ ವಸ್ತುಗಳು ಹೆಚ್ಚಿಗೆ ಪ್ರಗತಿಹೊಂದಿದವುಗಳೆಂತಲೂ ಕಡಿಮೆ ಪ್ರಮಾಣದಿಂದ ಇದ್ದಲ್ಲಿ ಅವು ಕಡಿಮೆತರಗತಿಯ ವಸ್ತುಗಳೆಂತಲೂ ಭಾವಿಸಲ್ಪಡುತ್ತವೆ. ಪರಾಶಕ್ತಿಯಿಂದ ಜ್ಞಾನವು, ಆದಿಶಕ್ತಿಯಿಂದ ಮನವು, ಇಚ್ಛಾಶಕ್ತಿಯಿಂದ ಅಹಂಕಾರವು, ಜ್ಞಾನಶಕ್ತಿಯಿಂದ ಬುದ್ಧಿಯು, ಮತ್ತು ಕ್ರಿಯಾಶಕ್ತಿಯಿಂದ ಚಿತ್ತು ಈ ಪ್ರಕಾರ ಈ ಕರಣಗಳು ಉತ್ಪನ್ನವಾಗುತ್ತವೆ. ವಿಶ್ವಕ್ಕೆ ಸಂಬಂಧಿಸಿಯೂ ಈ ಕರಣಗಳ ವಿಚಾರವನ್ನು ಮಹಾದೇವಿಯಕ್ಕನು ಮಾಡಿದ್ದಾಳೆ.

## ಪಂಚತನ್ಮಾತ್ರಗಳು.

ಪಂಚಕರಣಗಳ ಮೂಲಕ ಪಂಚ ತನ್ಮಾತ್ರಗಳು ಉಂಟಾಗುತ್ತವೆ. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ತನ್ಮಾತ್ರಗಳಿದ್ದು ಇವೂ ಕೂಡ ವಿಶ್ವದಲ್ಲಿಯೂ ಪ್ರಾಣಿಗಳಲ್ಲಿಯೂ ತೋರುತ್ತವೆ. ವಿಶ್ವದಲ್ಲಿಯ ಜ್ಞಾನದಿಂದ ಶಬ್ದವು ಉಂಟಾಗುತ್ತದೆ. ಆದರಲ್ಲಿಯ ಮನಸ್ಸಿನಿಂದ ಸ್ಪರ್ಶವು, ಅಹಂಕಾರದಿಂದ ರೂಪು, ಬುದ್ಧಿಯಿಂದ ರಸವು, ಚಿತ್ತವಿನಿಂದ ಗಂಧವು ಇವುಗಳು ಉಂಟಾಗುತ್ತವೆ. ಶಬ್ದ, ಸ್ಪರ್ಶ, ರೂಪು, ರಸ, ಗಂಧಗಳು ವಿಶ್ವದಲ್ಲಿ ಎಲ್ಲ ಕಡೆಗೂ ತೋರುತ್ತಿವೆ. ಇವುಗಳ ಸಹಾಯದಿಂದಲೇ ಜಗತ್ತಿನ ದೃಶ್ಯ ವ್ಯವಹಾರಗಳು ನಡಿಯುತ್ತವೆ. ಇವು ಇಲ್ಲದಿದ್ದರೆ ಮನುಷ್ಯನ ಪ್ರಗತಿಯೂ ನಿಲ್ಲುತ್ತದೆ. ಆದ್ದರಿಂದ ಇವು ವಿಶ್ವದಲ್ಲಿ ಆವಶ್ಯಕವಾದ ದ್ರವ್ಯಗಳಾಗಿರುತ್ತವೆ.

## ಪಂಚಭೂತಗಳು.

ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ಇವುಗಳು ಪಂಚಭೂತಗಳು. ಇವು ಪಂಚಕರಣಗಳಿಂದಲೇ ಉತ್ಪನ್ನವಾಗುತ್ತವೆ. ಶಬ್ದ ವಿಷಯದಿಂದ ಆಕಾಶವು, ಸ್ಪರ್ಶನ ವಿಷಯದಿಂದ ವಾಯುವು, ರೂಪು ವಿಷಯದಿಂದ ತೇಜಸ್ಸು, ರಸ ವಿಷಯದಿಂದ ಅಪ್ಪು, ಗಂಧ ವಿಷಯದಿಂದ ಪೃಥ್ವಿ ಇವುಗಳು ಉಂಟಾಗುತ್ತವೆ. ಈ ಪಂಚಭೂತಗಳ ತತ್ವಗಳು ಮನುಷ್ಯನಲ್ಲಿ ಮಾತ್ರವಲ್ಲ, ಜಗತ್ತಿನಲ್ಲೆಲ್ಲ ತೋರಿಬರುತ್ತವೆ. ಅವುಗಳಲ್ಲಿರುವ ಎಲ್ಲ ಗುಣಧರ್ಮಗಳು ಪಂಚಭೂತಗಳ ಮೇಲೆಯೇ ಅವಲಂಬಿಸಿರುತ್ತವೆ. ಉದಾ:— ಕೆಲವು ಪದಾರ್ಥಗಳು ಹೆಚ್ಚು ತೇಜಸ್ಸುಳ್ಳವು ಇರುತ್ತವೆ. ಕೆಲವು ಹೆಚ್ಚಿಗೆ ಪ್ರವಾಹಿಯಾಗಿಯೂ, ಬೇರೆ ಕೆಲವು ಕಡಿಮೆ ಪ್ರವಾಹಿಯಾಗಿಯೂ, ಇದರಂತೆಯೇ ಗಂಧ, ಸ್ಪರ್ಶ, ಶಬ್ದ ವಿಷಯಗಳಲ್ಲಿಯೂ ಭಿನ್ನತೆಗಳು ಕಂಡುಬರುತ್ತವೆ. ಈ ಭಿನ್ನತೆಗಳು ಪಂಚಭೂತಗಳ ತತ್ವಗಳು ಅವುಗಳಲ್ಲಿ ಹೆಚ್ಚು ಕಡಿಮೆ ಪ್ರಮಾಣದಿಂದ ಇರುವದರಿಂದ ಉಂಟಾಗುತ್ತವೆ. ಈ ಪಂಚಭೂತಗಳ ಮೇಲೆಯೇ ವಿಶ್ವದ ರಚನೆಯು ಅವಲಂಬಿಸಿರುತ್ತದೆ.

## ಪಂಚಭೂತಗಳ ಪಂಚೀಕೃತಿಯು.

ಮನುಷ್ಯನಿಗೆ ಐದು ಕರ್ಮೇಂದ್ರಿಯಗಳು, ಐದು ತನ್ಮಾತ್ರಗಳು, ಐದು ಜ್ಞಾನೇಂದ್ರಿಯಗಳು, ಐದು ವಾಯುಗಳು, ಐದು ಕರಣಗಳು

ಹೀಗೆ ಒಟ್ಟು ೨೫ ತತ್ವಗಳಿರುವದು ಕಂಡುಬರುತ್ತದೆ. ಹಾಗೆಯೇ ಅವು ವಿಶ್ವದಲ್ಲಿಯೂ ಇರುತ್ತವೆ. ಆದರೆ ಅವು ಹೆಚ್ಚುಕಡಿಮೆ ಪ್ರಮಾಣದಿಂದ ಇರುತ್ತಿರಬಹುದು. ಇವೆಲ್ಲವೂ ವಿಶ್ವದ ಮತ್ತು ಮನುಷ್ಯನ ಪ್ರಗತಿಗೆ ಕಾರಣವಾದವುಗಳು. ಪಂಚಭೂತಗಳಲ್ಲಿಯ ಒಂದೊಂದು ತತ್ವವು ಅವು ಗಳಲ್ಲಿರುವ ಬೇರೆ ಐದು ತತ್ವಗಳಲ್ಲಿ ತಮ್ಮತಮ್ಮೊಳಗೆ ಅನೇಕ ಪ್ರಮಾಣ ಗಳಿಂದ ಕೂಡಿಕೊಳ್ಳುವದರಿಂದ ಈ ೨೫ ತತ್ವಗಳು ಉಂಟಾಗುತ್ತವೆ. ವಿಸ್ತಾರ ಭಯಕ್ಕಾಗಿ ಇದರ ರೀತಿಯನ್ನು ನಾವು ಇಲ್ಲಿ ವಿವರಿಸಿರುವದಿಲ್ಲ.

ಈ ಇಪ್ಪತ್ತೈದು ತತ್ವಯುಕ್ತವಾದ ಶರೀರವು ಶಿವಾಂಶಿಕನಾದ ಜೀವಾ ತ್ಮನಿಗೆ ಅಂಗವಾಗಿ ಜಗತ್ತಿನಲ್ಲಿ ವ್ಯವಹರಿಸುತ್ತದೆ. ಅದರಂತೆಯೇ ವಿಶ್ವವೂ ಕೂಡ ವ್ಯವಹರಿಸುತ್ತದೆ.

ಹೀಗೆ ನಾದ ಬಿಂದು ಕಲೆಗಳು, ಅನೇಕವಿಧ ಪ್ರಣವಸ್ವರೂಪಗಳು, ಬೀಜಾಕ್ಷರಗಳು, ಸಾವಾಖ್ಯಗಳು, ವಿವಿಧ ಲಿಂಗಗಳು, ಶಿವನು, ಅವನ ಅಧಿದೇವತೆಗಳು, ಪಂಚಾಕ್ಷರಗಳು, ಪಂಚಕಲೆಗಳು, ಪಂಚಶಕ್ತಿಗಳು, ಪಂಚಕರಣಗಳು, ಪಂಚತನ್ಮಾತ್ರೆಗಳು, ಪಂಚಭೂತಗಳು ವಿಶ್ವದ ಮತ್ತು ಅದರಲ್ಲಿರುವ ವಸ್ತುಗಳ ಮತ್ತು ವಿವಿಧ ಪ್ರಾಣಿಗಳ ಉತ್ಪತ್ತಿಗೆ, ಅವು ಗಳ ಅಸ್ತಿತ್ವಕ್ಕೆ ಮತ್ತು ಪ್ರಗತಿಗೆ ಕಾರಣವಾಗಿರುತ್ತವೆ.

ಶಿವಶರಣೆಯಾದ ಮಹಾದೇವಿಯಕ್ಕನು 'ಸೃಷ್ಟಿಯ ವಚನಗಳೆಂ'ಬ ವಚನಗಳನ್ನು ರಚಿಸಿದ್ದಾಳೆ. ವಿಶ್ವಸೃಷ್ಟಿಗೆ ಸಂಬಂಧಿಸಿದ ಅವುಗಳಲ್ಲಿರುವ ಭಾಗಗಳನ್ನು ನಾವು ಆಧಾರವಾಗಿಟ್ಟುಕೊಂಡು ಈ ಲೇಖವನ್ನು ಬರೆದಿ ದ್ದೇವೆ. ವಚನಶಾಸ್ತ್ರಸಾರ ಭಾಗ ೨ ಪುಟ ೧೬ ರಲ್ಲಿ ೨ನೇ ವಚನ ಮತ್ತು ಅದೇ ಗ್ರಂಥದ ೫೦ನೇ ಪುಟದಲ್ಲಿ ೨ನೆಯ ವಚನವೆಂದು ಪ್ರಾರಂಭಿಸಿದ ಮಹಾದೇವಿಯಕ್ಕನ ವಚನ ಇವುಗಳನ್ನು ವಾಚಕರು ನೋಡಬೇಕೆಂದು ನಾವು ಸೂಚಿಸುತ್ತೇವೆ.

---

# ಬಸವಣ್ಣನವರ ದರ್ಶನವೋ?
# ಸ್ವಾತ್ಮ ದೃಷ್ಟಿಯ ಪ್ರದರ್ಶನವೋ?

«ಶರಣರಿರವನು-ನರರ ಭಾವದಿ ತಿಳಿಯಲೆಂತಹದೋ?

—ಶ್ರೀ ಶಿವಯೋಗಿ ಮುಪ್ಪಿನ ಷಡಕ್ಷರಿಸ್ವಾಮಿಗಳು.

(ಲೇಖಕರು:— ಶ್ರೀಯುತ ಗುರುಸಿದ್ದಪ್ಪ ಬಸಪ್ಪ ಬಳ್ಳಾರಿ, ಗದಗ.)

ಪ್ರಜಾಮತದ ದೀಪಾವಳಿ ಸಂಚಿಕೆಯಲ್ಲಿ ಶ್ರೀಮಾನ ತ್ರಿ. ನ. ಕೃಷ್ಣರಾಯರ "ಬಸವಣ್ಣನವರ ದರ್ಶನ" ವೆಂಬ ಲೇಖವೊಂದು ಪ್ರಕಟವಾಗಿದೆ. ಆ ಲೇಖದಲ್ಲಿ ಬಸವಣ್ಣನವರ ದರ್ಶನ ಜತೆಗೆ ರಾಯರ ಸ್ವಾತ್ಮದೃಷ್ಟಿಯ ಪ್ರದರ್ಶನವೂ ಆಗಿದೆ. ರಾಯರಿಗೆ ಬಸವಣ್ಣನವರ ದರ್ಶನವಾದುದನ್ನು ಅವರು ಬಣ್ಣಿಸಿದ ಬಗೆ ಇದು—

ಗುರು ಶಿಷ್ಯರು ಪರಸ್ಪರ ಪರೀಕ್ಷೆಗೊಳಗಾಗದೆ ಕೂಡಬಾರದು—ಎಂದು ಉಪನಿಷತ್ತು ಸೂಚಿಸುತ್ತಿದೆ. ಬಸವಣ್ಣನವರು ಆ ಸ್ವಾತಂತ್ರ್ಯವನ್ನು ಶಿಷ್ಯನಿಗೆ ಕೊಡಲು ಸಿದ್ಧರಾಗಿಲ್ಲ. ಗುರು ಹೇಗೆ ಇರಲಿ—ಎಂಥವನೇ ಇರಲಿ—ಅವನ ಕುಲಗೋತ್ರ, ಗುಣ, ಶೀಲಗಳನ್ನು ಪರೀಕ್ಷಿಸುವ ಗೋಜಿಗೆ ಶಿಷ್ಯ ಹೋಗಬಾರದೆಂದು ಅವರ ಮತ. (ಇವುಗಳ ಪುಷ್ಟಿಗಾಗಿ ಅವರುದಹರಿಸಿದ ವಚನಗಳಿವು.)

"ಉತ್ತಮ, ಮಧ್ಯಮ, ಕನಿಷ್ಟವೆಂದು ಬಂದ ಜಂಗಮವನೆಂದೆನಾದರೆ ನೊಂದೆನಯ್ಯ ನಾನು ಬೆಂದೆನಯ್ಯ" ಎಂಬ ವಚನವನ್ನು,

ಲಿಂಗಾಂಗಿಯಾದರೆ ಸಾಕು, ಅವನನ್ನು ಪ್ರತ್ಯಕ್ಷ ಪರಮೇಶ್ವರನೆಂದು ಭಾವಿಸಬೇಕು. ಎಂಬುದಕ್ಕೆ,

"ಎಡದ ಕೈಯಲಿ ಕತ್ತಿ, ಬಲದ ಕೈಯಲಿ ಮಾಂಸ, ಬಾಯಲ್ಲಿ ಸುರೆಯ ಗಡಿಗೆ, ಕೊರಳಲ್ಲಿ ದೇವರಿರಲು, ಅವರ ಲಿಂಗವೆಂಬೆ ಸಂಗವೆಂಬೆ". ಎಂಬ ವಚನವನ್ನು,

ಶರಣರಗುಣ ಪರೀಕ್ಷೆ ಮಾಡುವದು ಅನುಚಿತ, ಎಂಬುದಕ್ಕೆ

"ಶೊತ್ತಿಂಗೆ ಲಕ್ಷಣವೇಕಯ್ಯ?.... ..." ಎಂಬ ವಚನವನ್ನು,

ಲಿಂಗ ಲಾಂಛನವ ಕಳೆದು ಬಂದರೆ ಸಾಕು, ಅವರು ಬಸವಣ್ಣನವರಿಗೆ ಪೂಜಾರ್ಹರು, ಎಂಬುದಕ್ಕೆ,

"ಲಿಂಗ ಲಾಂಛನವ ಕಂಡು, ನಂಬುವೆ, ಅವರಂತರಂಗವ ನೀನೆ ಬಲ್ಲೆ" ಎಂಬ ವಚನವನ್ನುದಾಹರಿಸಿರುವರು.

ಈ ದೃಷ್ಟಿಯನ್ನು ಸಮಕಾಲೀನರೂ, ಬಸವಣ್ಣನವರ ಗುರುಸ್ಥಾನ ದಲ್ಲಿದ್ದವರೂ ಆದ ಪ್ರಭುದೇವರು ಒಪ್ಪಿದಂತೆ ಕಂಡುಬರುವದಿಲ್ಲ, ಎಂದು ಹೇಳಿ, ಅದಕ್ಕಾಧಾರವಾಗಿ "ಜಂಗಮ ಘನವೆಂಬೆನೆ, ಬೇಡಿ ಕಿರಿದಾಯಿತ್ತು" "ತನು ಬತ್ತಲೆಯಿದ್ದರೇನು ಮನಸು ಬಯಲಾಗದನ್ನಕ್ಕ" "ನಿಜವನರಿದ ನಿಶ್ಚಿಂತನೆ" ಎಂಬ ಮೂರು ವಚನಗಳನ್ನು ಕೊಟ್ಟಿರುವರು.

ಅದರ ಮುಂದೆ, "ಭಕ್ತಿಯ ಪರಮಾಧಿಕ್ಯದಲ್ಲಿ ಬಸವಣ್ಣನವರು ವಿವೇಚನೆಯನ್ನು ಗೌಣವಾಗಿ ಎಣಿಸುತ್ತಾರೆ.— ನಾನು ನನ್ನದು ಎನ್ನುವ ಮಮಕಾರ ಸಾಧಕನಿಂದ ಪೂರ್ಣವಾಗಿ ತೊಲಗಬೇಕು, ಶಿವಚಿಂತನೆಯಲ್ಲಿ ಅವನ ಅಂತಃಕರಣ ಲೀನವಾಗಬೇಕು. ಹಾಗೆ ಶಿವಚಿಂತನೆ ಮಾಡುವವ ರನ್ನು ಅವನು ಸರ್ವವಿಧದಲ್ಲಿ ಗೌರವಿಸಿ ತೃಪ್ತಿಪಡಿಸಬೇಕು. ಅವರ ವೇಷ, ಭೂಷಣ, ಹಾವ, ಭಾವ, ಆಚಾರ, ವಿಚಾರಗಳನ್ನು ಸಾಧಕ ಲಕ್ಷಿಸಬಾರದು. ಇದರಿಂದ ಶ್ರದ್ಧೆ ಬೆಳೆಯುವದಕ್ಕೆ— ಮಾರ್ಗವಾಯಿತು. ಸಾಧಕ ಶಿವಚಿಂತನೆಗೆ ಮನವಿಡುವಂತಾಯಿತು. ಆದರೆ ಶ್ರದ್ಧೆಯ ಜತೆ ಅಂಧ ಶ್ರದ್ಧೆಯೂ ಬಂತು. ಶಿವಚಿಂತನೆಯ ಜತೆ, ಕಟು ಧರ್ಮವೂ ಬಲಿಯಿತು. "ಶಿವಭಕ್ತರಂತೆಯೇ ಸಾಧಕರೂ, ಪವಿತ್ರಾತ್ಮರೂ, ಆತ್ಮ ವಿಚಾರಿಗಳೂ ಆದ ಇತರ ಮತದವರ ಮಹತ್ವ ಅನಿವಾರ್ಯವಾಗಿ ಗಣ ನೆಗೆ ಬಾರದೆ ಹೋಗುತ್ತಿವೆ. ಬಸವಣ್ಣನವರಷ್ಟು ಭಾವಶುದ್ಧಿ ಪಡೆಯದ ಸಾಮಾನ್ಯಜನ ಅವರ ಮಾತಿಗೆ ಅಪಾರ್ಥ ಕಲ್ಪಿಸಿ ಶಿವಚಿಂತನೆಗಿಂತ ಪರ ಮತ ತಿರಸ್ಕಾರದಲ್ಲಿ ಮನವಡುವದಕ್ಕೆ ಅವಕಾಶವಾಯಿತು." ಎಂದು ಲೇಖದ ಪೂರ್ವಾರ್ಧದಲ್ಲಿ ತಪ್ಪು ಮತ ಪ್ರದರ್ಶನ ಮಾಡಿ, ಉತ್ತರಾರ್ಧ ದಲ್ಲಿ ಬಸವಣ್ಣನವರ ದರ್ಶನವನ್ನು ಎಷ್ಟು ಬಣ್ಣಿಸಿದರೆ ಏನು ಪ್ರಯೋ ಜನ? "ಗಣಪತಿ ಮಾಡಹೋಗಿ ಮಂಗನ ಮಾಡಿದರು" ಎಂಬ ಗಾದಿ ಯಂತಾಗಿದೆ ಇವರ ಲೇಖ.

ಬಸವಣ್ಣನವರ ಬಗ್ಗೆ ಈಗ ಶ್ರೀಮಾನ್ ಅ. ನ. ಕೃಷ್ಣರಾಯರು ಎತ್ತಿದ ಆಕ್ಷೇಪಗಳನ್ನೇ—ಹಿಂದಕ್ಕೆ ಶ್ರೀಮಾನ್ ಕಪಟರಾಳ ಕೃಷ್ಣರಾಯರು ಎತ್ತಿ[illegible] ಅವು (೧೯೪೪) 'ಶರಣಸಾಹಿತ್ಯ' ಮಾಸಪತ್ರಿಕೆಯ ಸಂಪುಟ ೭ ಸ[illegible] ೪, ೫, ೬ ರಲ್ಲಿ ಪ್ರಕಟವಾಗಿವೆ. ಅವುಗಳಿಗೆ ಈ ಲೇಖಕ ನ[illegible]ಟ್ಟ ಉತ್ತರವು ಅದೇ ಮಾಸಪತ್ರಿಕೆಯ (೧೯೪೫) ಸಂಪುಟ ೮

ಟಿಪ್ಪಣಿಕೆಗಳು ೨-೩ ಮತ್ತು ೪ ರಲ್ಲಿ ಪ್ರಕಟವಾಗಿವೆ. ಅವುಗಳನ್ನು ರಾಯರು ದಯವಿಟ್ಟು ನೋಡುವರೆಂದು ನಂಬಿದ್ದೇನೆ.

ಈಗ ಕೃಷ್ಣರಾಯರು ಎತ್ತಿದ ಆಕ್ಷೇಪಗಳು ಅವರು ಬಸವಣ್ಣನವರ ವಚನಗಳ ಶಬ್ದಗಳ ಬರೇ ಬಾಹ್ಯಾರ್ಥದ ಮೇಲಿಂದ ಅವುಗಳಲ್ಲಿಯ ಗುರು-ಜಂಗಮ-ಶರಣರು, ಸಾಮಾನ್ಯರು-ದುರಾಚಾರಿಗಳು ಎಂದು ಅರ್ಥಮಾಡಿಕೊಂಡಿದ್ದೇ ಈ ಅನರ್ಥಗಳೆಲ್ಲ ಕಾರಣವಾಗಿದೆ. ಬಸವಣ್ಣನವರೇ ಗುರು-ಜಂಗಮ-ಶರಣರುಗಳ ಲಕ್ಷಣಗಳನ್ನು ತಮ್ಮ ವಚನಗಳಲ್ಲಿ ಈ ರೀತಿ ಹೇಳಿದ್ದಾರೆ.

ಗುರು:— "ಶಿವಪಥವನರಿವಡೆ ಗುರುಪಥವೆ ಮೊದಲು"
"ಗುರು ವಚನದಿಂದಲ್ಲದೆ ಲಿಂಗವೆಂದೆನಿಸದು.
ಗುರು ವಚನದಿಂದಲ್ಲದೆ ನಿತ್ಯವೆಂದೆನಿಸದು.
ಗುರು ವಚನದಿಂದಲ್ಲದೆ ನೇಮವೆಂದೆನಿಸದು."

ಜಂಗಮ:— 'ಆಚಾರವೇ ಜಂಗಮ. ವಿಚಾರವೇ ಭಕ್ತ.'
'ಅಗ್ನಿಯಾಧಾರದಲ್ಲಿ ಕಬ್ಬುನ ನೀರುಂಬುದಯ್ಯಾ-
ಭೂಮಿಯಾಧಾರದಲ್ಲಿ ವೃಕ್ಷ ನೀರುಂಬುದಯ್ಯಾ.
ಜಂಗಮ ವ್ಯಾಪಾಯನವಾದರೆ-ಲಿಂಗಸಂತುಷ್ಟಿಯ
ಹುದಯ್ಯಾ.'

ಶರಣ:— 'ಸಕಲಜೀವಾತ್ಮರಿಗೆ ಲೇಸನೇ ಬಯಸುವವರು ಕೂ. ಸಂ.
ಶರಣರು'
'ಅರಿದರೆ ಶರಣ. ಮರೆದರೆ ಮಾನವ'
'ನ್ಯಾಯ ನಿಷ್ಠುರ ದಾಕ್ಷಿಣ್ಯಪರನಲ್ಲ. ಲೋಕ ವಿರೋಧಿ,
ಶರಣ ನಾರಿಗಂಜುವವನಲ್ಲ. ಕೂ. ಸಂ. ದೇವರ ರಾಜ
ತೇಜದಲ್ಲಿಪ್ಪನಾಗಿ'

ಇಂತಹ ಉಪಮಿಸಬಾರದ—ಉಪಮಾತೀತ—ಕಾಲಕರ್ಮರಹಿತ—ಭವವಿರಹಿತ ಗುರು-ಜಂಗಮ-ಶರಣರ ಕುಲ-ಶೀಲ-ಗುಣಗಳನ್ನು ಪರೀಕ್ಷಿಸುವ ಗೋಜಿಗೆ ಶಿಷ್ಯ ಹೋಗಬಾರದೆಂಬುದು ಬಸವಣ್ಣನವರ ಮತವಲ್ಲದೆ-ರಾಯರು ತಿಳಕೊಂಡಂತೆ ನಾಮ ಮಾತ್ರ, ಗುರು-ಜಂಗಮ-ಶರಣರನ್ನಲ್ಲ.

ಇದೇ ಪ್ರಕಾರ, "ನಿಸ್ತ್ರೈಗುಣ್ಯೇ ಪಥಿ ವಿಚರತಾಂ ಕೋ। ವಿಧಿಃ ಕೋ। ನಿಷೇಧಃ" ತ್ರಿಗುಣಾತೀತರಾದವರಿಗೆ ವಿಧಿ ನಿಷೇಧರೂಪವಾದ ನಿಯಮ ಗಳು ಬಂಧಿಸಲಾರವು ಎಂದು ಶಂಕರಾಚಾರ್ಯರೂ "ಹೇಗೆ ಉತ್ತಮ ರತ್ನವನ್ನು ಗಾಡಕ್ಕೆ ಹಚ್ಚುವ ಕಾರಣವಿಲ್ಲವೋ ಹಾಗೆಯೇ ನಿರ್ವಾಣ ಪದಕ್ಕೆ ಅಧಿಕಾರಿಯಾದವನ ಕರ್ಮಗಳನ್ನು ವಿಧಿನಿಷೇಧ ನಿಯಮಗಳಿಂದ ನಿರ್ಬಂಧಿಸುವ ಕಾರಣವಿಲ್ಲ." ಎಂದು ಬೌದ್ಧ ಗ್ರಂಥಕಾರರೂ ಬರೆದಿದ್ದಾರೆ. (ಮಿಲಿಂದ ಪ್ರಶ್ನ ೪-೫-೭) ಕೌಷೀತಕ್ಯುಪನಿಷತ್ತಿನಲ್ಲಿ ಬ್ರಹ್ಮಜ್ಞಾನಿಯಾದವನಿಗೆ 'ಮಾತೃಹತ್ಯ, ಪಿತೃಹತ್ಯ, ಭ್ರೂಣಹತ್ಯ ಇತ್ಯಾದಿ ಪಾಪಗಳು ತಗಲುವದಿಲ್ಲವೆಂದು ಇಂದ್ರನು ಪ್ರತರ್ದನನಿಗೆ ಹೇಳಿದ್ದಾನೆ. ಯಾರು ದೇವರ ಪುತ್ರ (ಪೂರ್ಣಭಕ್ತ)ರಾದರೋ ಅವರಿಂದ ಪಾಪ ಸಂಭವಿಸುವದು ಎಂದೂ ಶಕ್ಯವಿಲ್ಲ, ಎಂದು ಜಾನನು ಹೇಳಿದ್ದರ ಆಶಯವೂ ಹೀಗೆಯೇ ಇರುತ್ತದೆ. (ಜಾ. ೧-೩-೯) "ಯಸ್ಯ ನಾಹಂ ಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ । ಹತ್ವಾಪಿ ಇಮಾಲ್ಲೋಕಾನ್ ಹಂತಿ ನ ನಿಬಧ್ಯತೇ॥ 'ನಾನೇ ಮಾಡುವೆನೆಂಬ ಭಾವನೆಯನ್ನು ತಳೆಯದವನೂ— ಅಲಿಪ್ತವಾದ ಬುದ್ಧಿಯುಳ್ಳವನೂ ಈ ಲೋಕವನ್ನೆಲ್ಲ ಕೊಂದರೂ ಕೊಂದನೆಂದು ಹೇಳಲಾಗದು. ಹಾಗು ಆ ಕರ್ಮವು ಅವನಿಗೆ ಬಂಧಕವಾಗಲರಿಯದು, ಎಂದು ಗೀತೆಯಲ್ಲಿ ಹೇಳಿದ್ದರ ತಾತ್ಪರ್ಯವೂ ಇದೆ. (ಗೀ, ೪-೧೪, ೯-೨೮, ೧೮-೧೭) ಇದೇ ತತ್ವವನ್ನು ಅರ್ಜುನನಿಗೆ 'ಭೀಷ್ಮ ದ್ರೋಣರನ್ನು ಕೊಂದರೂ, ಪಿತಾಮಹವಧೆಯು, ಅಥವಾ ಗುರುವಧೆಯು ಪಾತಕವು ನಿನಗೆ ತಟ್ಟುವದಿಲ್ಲ; ಯಾಕಂದರೆ ಇಂಥ ಕಾಲದಲ್ಲಿ ಈಶ್ವರ ಸಂಕೇತವನ್ನು ಪೂರ್ಣಗೊಳಿಸಲಿಕ್ಕೆ ನೀನು ಕೇವಲ ನಿಮಿತ್ತ ಮಾತ್ರನು.' (ಗೀ. ೧೧-೩೩) ಎಂದು ಶ್ರೀಕೃಷ್ಣ ಪರಮಾತ್ಮನು ಉಪದೇಶಿಸಿ ಅವನ ಕಡೆಯಿಂದ ಪಿತಾಮಹರಾದ ಭೀಷ್ಮನನ್ನೂ—ಗುರುಗಳಾದ ದ್ರೋಣರನ್ನೂ ಕೊಲ್ಲಿಸಲಿಲ್ಲವೇ? ಇದರಮೇಲಿಂದ ಸ್ಥಿತಪ್ರಜ್ಞನು. "ವಿಧಿ-ನಿಷೇಧಗಳನ್ನು ಮೀರಿದವನು." "ಸುಳ್ಳುಸಾಟಿಗಳನ್ನು ಆಡುವವನು" "ಸರ್ವದುಷ್ಕೃತ್ಯಗಳನ್ನು ಮಾಡಲಿಕ್ಕೆ ಸ್ವತಂತ್ರನು" ಎಂದು ಹೇಳಿದಂತಾಗುವದೇ?

ಹಾಗಾದರೆ ಧರ್ಮಾಧರ್ಮವನ್ನು ಹೇಗೆ ಕಂಡುಕೊಳ್ಳಬೇಕು ಎಂದು ಯಕ್ಷನು ಯುಧಿಷ್ಠಿರನಿಗೆ ಪ್ರಶ್ನೆ ಮಾಡಲು ಅವನು ಕೊಟ್ಟ ಉತ್ತರವಿದು.

ತರ್ಕೋಽಪ್ರತಿಷ್ಠಃ ಶ್ರುತಯೋ ವಿಭಿನ್ನಾಃ ನೈಕೋ ಋಷಿರ್ಯಸ್ಯ ವಚಂ ಪ್ರಮಾಣಮ್ । ಧರ್ಮಸ್ಯ ತತ್ವಂ ನಿಹಿತಂ ಗುಹಾಯಾಂ ಮಹಾಜನೋ ಯೇನ ಗತಃ ಸ ಪಂಥಾಃ ॥

ತರ್ಕವನ್ನು ನೋಡಲು ಅದು ಚಂಚಲವಾಗಿದೆ; ಅಂದರೆ ಬುದ್ಧಿಯು ತೀಕ್ಷ್ಣವಾಗಿದ್ದಷ್ಟು ಅನುಮಾನಗಳು ಹೆಚ್ಚು, ಶ್ರುತಿ ಎಂದರೆ ವೇದಾಜ್ಞೆಗಳಾದರೂ ಭಿನ್ನ ಭಿನ್ನವಾಗಿವೆ; ಸ್ಮೃತಿಶಾಸ್ತ್ರಗಳಲ್ಲಿಯೂ ಇಂಥ ಋಷಿಯ ವಚನವೇ ಹೆಚ್ಚಿಗೆ ಪ್ರಮಾಣಭೂತವಾಗಿದೆಂದೂ ಹೇಳಲಾಗುವದಿಲ್ಲ, ಒಳ್ಳೆಯದು ಆದು ಕತ್ತಲೆಯಲ್ಲಿ ಅವಿತುಕೊಂಡಿರುವದು. ಅಂದರೆ ಸಾಮಾನ್ಯ ಜನರ ಬುದ್ಧಿಗೆ ನಿಲುಕದಂಥದು. ಆದ್ದರಿಂದ ಮಹಾಜನರು ಅನುಸರಿಸುವ ಮಾರ್ಗವೇ ಧರ್ಮಮಾರ್ಗವೆಂದು ತಿಳಿಯಬೇಕು.

ಹಾಗಾದರೆ ಮಹಾಜನರು ಯಾರು? ಅವರ ಆಚರಣೆಯಲ್ಲಾದರೂ ಮೇಳವಿದೆಯೋ? ಶ್ರೀರಾಮಚಂದ್ರನು ಅಗ್ನಿಯಿಂದ ಶುದ್ಧಳಾಗಿ ಬಂದ ತನ್ನ ಹೆಂಡತಿ ಸೀತಾದೇವಿಯನ್ನು ಒಬ್ಬ ಅಗಸನ ಮಾತಿನ ಮೇಲಿಂದ ಬಿಡಲಿಲ್ಲವೇ? ತನಗೆ ಯಾವ ಅಪರಾಧವನ್ನು ಮಾಡದಿರುವ ವಾಲಿಯನ್ನು ಕೊಲ್ಲಲಿಲ್ಲವೇ? ತಂದೆಯ ಆಜ್ಞೆಯಿಂದ ಪರಶುರಾಮನು ಪ್ರತ್ಯಕ್ಷ ತನ್ನ ತಾಯಿಯನ್ನೇ ಸಂಹರಿಸಲಿಲ್ಲವೇ? ಪಾಂಡವರ ಆಚರಣೆಯಾದರೂ ಐದು ಮಂದಿಗೆ ಒಬ್ಬ ಹೆಂಡತಿ. ಸ್ವರ್ಗದ ದೇವತೆಗಳನ್ನು ನೋಡೋಣವೇ? ಒಬ್ಬನು (ಇಂದ್ರನು) ಅಹಲ್ಯೆಯ ಜಾರನಾದರೆ, ಮತ್ತೊಬ್ಬನು (ಬ್ರಹ್ಮದೇವ) ಮೃಗರೂಪದಿಂದ ತನ್ನ ಕನ್ಯೆಯ ಮೇಲೆ ಮನಸ್ಸಿಟ್ಟವನು. ಇದನ್ನು ಮನದಲ್ಲಿ ತಂದು ಉತ್ತರರಾಮಚರಿತನಾಟಕದಲ್ಲಿ ಅವನ ಬಾಯಿಂದ "ವೃದ್ಧಾಸ್ತೇ ನ ವಿಚಾರಣೀಯ ಚರಿತಾಃ" ವೃದ್ಧರ ಕೃತ್ಯಗಳನ್ನು ಕುರಿತು ವಿಚಾರವನ್ನೇ ಮಾಡಬಾರದು, ಎಂದು ಭವಭೂತಿಯು ಉದ್ಗಾರತೆಗೆದಿದ್ದಾನೆ. "ನ ದೇವ ಚರಿತಂ ಚರೇತ್" ದೇವತೆಗಳ ಕೇವಲ ಬಾಹ್ಯ ಚರಿತವನ್ನೇ ಅನುಕರಿಸಬಾರದು ಎಂದು ಹೇಳುವದಕ್ಕೂ ಇದೇ ಕಾರಣ. (ಈ ವಿಷಯವನ್ನು ಲೋಕಮಾನ್ಯ ಟಿಳಕರ ಗೀತಾರಹಸ್ಯದಿಂದ ತೆಗೆದುಕೊಂಡಿದೆ.) ಇವುಗಳ ಬಾಹ್ಯ ಕರ್ಮಾಚರಣೆಗಳ ಮೇಲಿಂದಲೇ— ಇವುಗಳ ಗುಣಾವಗುಣಗಳನ್ನು ನಿರ್ಣಯಿಸುವದಾದರೆ ಮೇಲುದಾಹರಿಸಿದವರ ಗತಿಯೇನು? ಸಮಾಜದಲ್ಲಿ ಇವರ ಸ್ಥಾನವಾವುದು?

ಇದಲ್ಲದೆ ದತ್ತ ಜನ್ಮ ಹೇಗಾಯಿತು? ಅದಕ್ಕೆ ಕಾರಣರಾರು? ಇದ ರಲ್ಲಿ ಅತ್ರಿ ಋಷಿಗಳ ಹೆಂಡತಿ ಅನುಸೂಯೆಯ ಮತ್ತು ದೇವತೆಗಳ ಆಚ ರಣೆಗಳು ಲೋಕರೂಢಿಗೆ ಅಷ್ಟು ವಿಪರೀತ ಮತ್ತು ವಿರೋಧವಾಗಿವೆ! ಆದರೂ ಅವು ತಪ್ಪೆನ್ನಬಹುದೇ? "ನೀನೀಗ ನನ್ನನ್ನು ಕಂಡಿರುವ ರೀತಿ ಯಾಗಿ ಕಾಣುವದು ವೇದ ಪಠಣದಿಂದಾಗಲಿ, ತಪಸ್ಸಿನಿಂದಾಗಲಿ, ದಾನ ದಿಂದಾಗಲಿ, ಯಜ್ಞದಿಂದಾಗಲಿ ಶಕ್ಯವಾಗಿರುವದಿಲ್ಲ. ಪರಂತಪನಾದ ಅರ್ಜು ನನೇ ನನ್ನನ್ನು ಈ ರೀತಿ ಅರಿತುಕೊಳ್ಳುವದೂ—ನನ್ನನ್ನು ನೋಡುವದೂ- ತತ್ವಪೂರ್ವಕವಾಗಿ, ನನ್ನಲ್ಲಿ ಸೇರಿಕೊಳ್ಳುವದೂ—ಅನನ್ಯವಾದ ಭಕ್ತಿಯಿಂ ದಲೇ ಸಾಧ್ಯವಾದ ಮಾತು." (ಗೀ. ೧೧—೫೩, ೫೪) "ಸರ್ವ ಧರ್ಮಾ ನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ | ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ" (ಗೀ ೧೮-೬೬) ಸರ್ವಧರ್ಮಗಳನ್ನೂ ಬಿಟ್ಟುಕೊಟ್ಟು ನೀನು ನನ್ನಬ್ಬೊನಿಗೇ ಶರಣು ಬಾ. ಸಕಲ ಪಾಪಗಳಿಂದ ನಾನು ನಿನ್ನ ಬಿಡುಗಡೆ ಮಾಡುವೆನು ಚಿಂತೆ ಮಾಡಬೇಡ. 'ಎಂತಹ ದುರಾಚಾರಿಯಾದವನೇ ಇರಲಿ. ಅವನು ಅಂತ ಕಾಲಕ್ಕಾದರೂ ನನಗೆ ಶರಣು ಬಂದರೆ, ನಾನು ಅವನ ಕೈ ಬಿಡುವದಿಲ್ಲ. ಅವನು 'ಸಾಧು'ವೆಂ ತಲೇ ತಿಳಿಯಬೇಕು. ಅವನು ಆಗಲೇ 'ಧರ್ಮಾತ್ಮ'ನಾಗುವನು. ಪಾರ್ಥನೇ! ನನ್ನನ್ನು ಆಶ್ರಯಿಸಿ ಪಾಪಯೋನಿಜರೂ ಸ್ತ್ರೀ—ವೈಶ್ಯರೂ, ಶೂದ್ರರೂ ಪರತರಗತಿಯನ್ನು ಹೊಂದುವರು. ಇನ್ನು ಪುಣ್ಯವಂತರಾದ ಬ್ರಾಹ್ಮಣರೂ ರಾಜರ್ಷಿಗಳಾದ ಕ್ಷತ್ರಿಯರೂ ಆದ ನನ್ನ ಭಕ್ತರು ಮಾತನ್ನು ಹೇಳ ಲೇಕೆ? (ಗೀ. ೯—೩೦, ೩೧, ೩೨, ೩೩) 'ನನ್ನ ಭಕ್ತರೇ ನನಗೆ ಅತ್ಯಂತ ಪ್ರಿಯರು' (ಗೀ. ೧೨—೨೦) ಇವುಗಳ ಬಾಹ್ಯಾರ್ಥದ ಮೇಲಿಂದ ರಾಯರು ಬಸವಣ್ಣನವರಿಗೆ ಹೆಸರಿಟ್ಟಂತೆ, ಶ್ರೀಕೃಷ್ಣ ಪರಮಾತ್ಮನಿಗೆ, ನನ್ನ ಭಕ್ತರಾದರೆ ಸಾಕು, ಅವನು ಎಂತಹ ದುರ್ಗುಣಿ—ದುರಾಚಾರಿಯೇ ಇರಲಿ, ಅವನನ್ನು 'ಸಾಧು'ವೆಂದು, 'ಧರ್ಮಾತ್ಮ'ನೆಂದು ಹೇಳುವನು. ಭಕ್ತಿಯ ಪರಮಾಧಿಕ್ಯದಲ್ಲಿ ವಿಚಾರವನ್ನು ಗೌಣವಾಗಿ ಎಣಿಸುವನು. ಇದರಿಂದ ಶ್ರದ್ಧೆಯ ಜತೆ, ಅಂಧ ಶ್ರದ್ಧೆಯೂ ಬಂತು. ಹರಿ ಚಿಂತನೆಯ ಜತೆ, ಕಟು ಧರ್ಮವೂ ಬಲಿಯಿತು. ಸಾಮಾನ್ಯಜನ ಶ್ರೀಕೃಷ್ಣನ ಮಾತಿಗೆ ಅಪಾರ್ಥ ಕಲ್ಪಿಸಿ, ಹರಿಚಿಂತನೆಗಿಂತ ಪರದೈವ ಮತ್ತು ಪರಮತ ತಿರಸ್ಕಾ ರದಲ್ಲಿ ಮನ ನಡುವದಕ್ಕೆ ಅವಕಾಶವಾಯಿತು" ಎಂದು ಹೆಸರಿಡಲು ಸಿದ್ಧ ರಿರುವರೇ?

ಬಸವ ಸಮಾಜದಲ್ಲಿ ಅಂಧಶ್ರದ್ಧೆಗೆ ಎಡೆಯಿಲ್ಲ. 'ಗುರುವಿನಲ್ಲಿ ಗುಣವನರಸಬೇಕು, ಲಿಂಗದಲ್ಲಿ ಲಕ್ಷಣವನರಸಬೇಕು. ಜಂಗಮದಲ್ಲಿ ಪವಿತ್ರಯನರಸಬೇಕು.' ಹೀಗಲ್ಲದೆ 'ಅರುಹು ಆಚಾರ ಹೀನರಾದ ಗುರು—ಲಿಂಗ—ಜಂಗಮವ ದೇವರೆಂದು ಪೂಜಿಸುವ ಭಕ್ತಂಗೆ ಭವರಾಟಣದಲ್ಲಿ ಸತ್ತು ಸತ್ತು, ಹುಟ್ಟಿ ಹುಟ್ಟಿ, ಸುತ್ತಿಸುತ್ತಿ ಇರ್ಪುದು ತಪ್ಪದು' 'ತನ್ನ ತಾನರಿದರೆ ತನ್ನರಿವೇ ಗುರು' ಎಂಬುದು ಶರಣರ ಮತ. ಇಂಥ ಶಿವ ಶರಣರ ಮತ್ತು ಶಿವಾನುಭವ ಮಂಟಪದ ಚಾಲನಕರ್ತರು ಬಸವಣ್ಣನವರು. ಬಸವಣ್ಣನವರ ದರ್ಶನವು ಬರೀ ತರ್ಕಬದ್ಧವಾದುದಲ್ಲ. ಅನುಭವಪೂರ್ಣವಾದುದು. 'ಅರುವಿನ ತೃಪ್ತಿಗೆ ಅನುಭಾವವೇ ಆಶ್ರಯ' 'ಲಿಂಗಾನುಭವದಿಂದ ನಿಮ್ಮ ಕಂಡೆನ್ನ ಮರೆದೆ' 'ಅನುಭಾವವಿಲ್ಲದ ಭಕ್ತಿ ಅರಿವಿಂಗೆ ನಿಲುಕದು............ ...ಕೂ. ಸಂ ದೇವಯ್ಯ ನಿಮ್ಮ ಅನುಭಾವ ಮಾತಿನ ಮಥನವೆಂದು ನುಡಿಯಬಹುದೇ?' ಎಂಬುದು ಅವರ ಬೋಧೆಯ ಸಾರ. ಇಂಥ ಬಸವಣ್ಣನವರನ್ನು ಅಂಧಶ್ರದ್ಧೆಯು ಸೋಂಕುವದೊತ್ತಟ್ಟಿಗಿರಲಿ, ಅದು ಅವರ ಸಮೀಪದಲ್ಲಿ ಸಹ ಸುಳಿದಾಡುವಂತಿಲ್ಲ. ಇಲ್ಲಿ ನೋಡಿರಿ. ಉಪನಿಷತ್ತು ಶಿಷ್ಯನಿಗೆ ಕೊಟ್ಟ ಸ್ವಾತಂತ್ರ್ಯವನ್ನೇ ಬಸವಣ್ಣನವರೂ ಕೊಟ್ಟಿದ್ದಾರೆ. ಅದೇ ಲೇಖದಲ್ಲಿ ಬಂದ 'ಗುರುವಚನದಿಂದಲ್ಲದೆ ಲಿಂಗವೆಂದೆನಿಸದು' ಎಂಬ ವಚನದ ಕಡೆಗೆ ಬಂದ 'ತಲೆಯಿಲ್ಲದಟ್ಟಿಗೆ ಪಟ್ಟವ ಕಟ್ಟುವ ಉಭಯ ಭ್ರಷ್ಟರ ಮೆಚ್ಚುವನೇ ನಮ್ಮ ಕೂ. ಸಂ. ದೇವ' ಎಂಬೀ ವಾಕ್ಯದಲ್ಲಿ—ಜ್ಞಾನೋದಯವಿಲ್ಲದ ಜಡಜೀವಿಗಳಿಗೆ ಲಿಂಗಸಂಬಂಧವನ್ನು ಕರುಣಿಸಿಕೊಡುವ ಗುರುವೂ—ಪಡೆಯುವ ಶಿಷ್ಯನೂ ಈ ಉಭಯ ಭ್ರಷ್ಟರಿಗೆ ಕೂ. ಸಂ. ದೇವನು ಮೆಚ್ಚುವದಿಲ್ಲವೆಂದೂ, 'ಆಚಾರವೇ ಜಂಗಮ. ವಿಚಾರವೇ ಭಕ್ತ.' 'ಆಚಾರವೇ ಸ್ವರ್ಗ. ಅನಾಚಾರವೇ ನರಕ'ವೆಂದೂ, ಅವರೇ ಹೇಳಿದ್ದಾರೆ. ಬಸವಣ್ಣನವರ ಸಮಕಾಲೀನರೂ—ಅವರ ಗುರುಸ್ಥಾನದಲ್ಲಿದ್ದವರೂ ಆದ ಪ್ರಭುದೇವರು 'ಬಸವಣ್ಣ ಸದ್ಗುರು ಸಾಧಕನಾಗಿ ಸ್ವಯಲಿಂಗವಾದ ಕಾಣಾ ಗುಹೇಶ್ವರಾ' ಎಂದು ಹೊಗಳಿರುವದರ ಮೇಲಿಂದ ಬಸವಣ್ಣನವರು ಸಿಕ್ಕಸಿಕ್ಕ ಲಾಂಛನಧಾರಿಗಳನ್ನು ಗುರು—ಜಂಗಮರೆಂದು ಗೌರವಿಸುತ್ತಿದ್ದರೆಂಬ ಮಾತು ಮಿಥ್ಯಾರೋಪವಲ್ಲದ ಮತ್ತೇನು?

ಯಾರಿಗೆ ಬಸವಣ್ಣನವರು ಗುರು—ಜಂಗಮ—ಶರಣರೆಂದು ತಿಳಿದಿದ್ದರು? ಅವರ ಲಕ್ಷಣಗಳೇನು? ಇದನ್ನು ಮೇಲೆಯೇ ಹೇಳಿದ್ದಾ

ಗಿವೆ. ಅಂತಹ ಪೂಜ್ಯ ಜಂಗಮರಲ್ಲಿ ಉತ್ತಮ—ಮಧ್ಯಮ—ಕನಿಷ್ಠ ವೆಂದು ಎಣಿಸಬಾರದೆಂಬ ಅವರ ಮತ. ಅದನ್ನೇ ಈ ವಚನದಲ್ಲಿ ಹೇಳಿದ್ದಾರೆ.

'ಉಟ್ಟು ತೊಟ್ಟು ಪೂಜ್ಯನಾಗಿ ಬಂದ ಜಂಗಮವ ವಿಶೇಷವೆಂದು ಕಂಡು, ಕಂಥೆ ಬೊಂತೆಯ ಜಂಗಮ ಬಂದರೆ ಹೀನವೆಂದು ಕಂಡೆನಾದರೆ ಪಂಚಮಹಾಪಾತಕ. ಇದು ಕಾರಣ ಅನ್ನ ವಸ್ತ್ರ ಧನ ಮಾಟದಲು ಎರಡಾಗಿ ಕಂಡೆನಾದರೆ ನರಕದಲ್ಲಿಕ್ಕುವ ಕಡಲಸಂಗಮದೇವ.'

ಉಟ್ಟು—ತೊಟ್ಟು ಬಂದ ಜಂಗಮವ ಪೂಜ್ಯನಾಗಿ ಕಂಡು ಅವರಿಗೇ ಆಡಂಬರದ ಆದರಾತಿಥ್ಯವನ್ನು ಮಾಡುವದು, ಪೂಜ್ಯರಾದ ಕಂಥೆ ಬೊಂತೆಯ ಜಂಗಮರನ್ನು ಹೀನವಾಗಿ ಕಂಡು ಉದಾಸೀನವ ತೋರಿಸುವದು, ಅನ್ನ ವಸ್ತ್ರ ಧನಗಳಲ್ಲಿ ಭೇದಭಾವ ಮಾಡುವದು ಮಾನವರ ಸ್ವಭಾವ. ಅದು ತಪ್ಪೆಂದು ಬಸವಣ್ಣನವರ ಅಭಿಪ್ರಾಯ.

'ಎಡದ ಕೈಯಲಿ ಕತ್ತಿ, ಬಲದ ಕೈಯಲಿ ಮಾಂಸ ಬಾಯಲ್ಲಿ ಸುರೆಯ ಗಡಿಗೆ, ಕೊರಳಲ್ಲಿ ದೇವರಿರಲು, ಅವರ ಲಿಂಗದೆಂಬೆ, ಸಂಗವೆಂಬೆ.'

ಈ ವಚನವು ಕೂ. ಸಂ. ದೇವರನ್ನುದ್ದೇಶಿಸಿ ಹೇಳಿದ್ದಾಗಿದೆ. ರಾಯರು ತಿಳಕೊಂಡಂತೆ, ಮಾಂಸಭಕ್ಷಕರು, ಮದ್ಯಸೇವಕರು, ಲಿಂಗಧಾರಿಗಳಾದರೆ ಸಾಕು, ಅವರು ದೇವರೆಂದು ತಿಳಿಯಬೇಕು, ಎಂದು ಹೇಳಿದ್ದಲ್ಲ. ಲಿಂಗಾಯತ ಧರ್ಮವು ಇಂತಹ ಹಿಂಸಾಚಾರಗಳನ್ನು ಬಲವಾಗಿ ವಿರೋಧಿಸುವದಾಗಿದೆ. ಇವುಗಳ ಸೇವನೆಯಂತಿರಲಿ—ಇವುಗಳ ನೋಟವು ಕೂಡಾ ನಿಷಿದ್ಧವಾಗಿದೆ. ಲಿಂಗವಿದ್ದಲ್ಲಿ ಇಂಥ ಹೀನಾಚಾರಗಳಿರುವಂತಿಲ್ಲ. ಇಂಥ ಹಿಂಸಾಚಾರಗಳಿದ್ದಲ್ಲಿ ಲಿಂಗವಿರುವಂತಿಲ್ಲ. ಅದಕ್ಕಂತಲೇ ಬಸವಣ್ಣನವರು ಅಲ್ಲಿ 'ಕೊರಳಲ್ಲಿ ದೇವರಿರಲು', ಎಂಬ ವಿಶೇಷ ಪದವನ್ನಿಟ್ಟದ್ದು. ಇಷ್ಟಾಗಿಯೂ ನೀನು (ದೇವರಾ) ನನ್ನ ಪರೀಕ್ಷೆಗಾಗಿ ಒಂದುವೇಳೆ ನಿನ್ನ ನಿಜವೇಷವ ಮರೆಸಿ, ವಿಕೃತವೇಷವ ಧರಿಸಿಬಂದರೂ—ಕೊರಳಲ್ಲಿರುವ ನಿನ್ನ ಲಿಂಗದ ಮೇಲಿಂದ ನಿನ್ನ ನಿಜರೂಪವನ್ನು ಕಂಡುಹಿಡಿಯುವನು, ಎಂಬುದು ಆ ವಚನದ ತಾತ್ಪರ್ಯ.

ಇದನ್ನೇ ಶ್ರೀಶಿವಯೋಗಿ ಮುಪ್ಪಿನ ಷಡಕ್ಷರ ಸ್ವಾಮಿಗಳು,

'ಅವಪರಿಯಲಿ ತಿಳಿಯಬಾರದು

ದೇವ ನಿಮ್ಮಯ ಶರಣರಿರವನು
ಭಾವದಲಿ ನಾ ತಿಳಿವೆ ಲಿಂಗವು ಇರಲು ಶಿವನೆಂದು'
'ಶರಣರಿರವನು—ನರರ ಭಾವದಿ ತಿಳಿಯಲೆಂತಹದೋ?'

ಎಂಬ ತಮ್ಮ ಒಂದು ಪದ್ಯದಲ್ಲಿ ಹಾಡಿದ್ದಾರೆ. ಇದಲ್ಲದೆ ಇಂಥ ಹಿಂಸಾಚಾರಿಗಳು ಲಿಂಗಧಾರಣೆಗೆ ಅಯೋಗ್ಯರೆಂದು ಬಸವಣ್ಣನವರೇ 'ಅಂಗದಿಚ್ಛೆಗೆ ಮಧ್ಯಮಾಂಸವ ತಿಂಬರು, ಕಂಗಳಿಚ್ಛೆಗೆ ಪರವಧುವ ನೆರೆ ವರು. ಲಿಂಗಲಾಂಛನ ಧಾರಿಯಾದಲ್ಲಿ ಫಲವೇನು?', ಎಂದು ಹೇಳಿದ್ದಾರೆ. 'ಕುಂಬಳಕಾಯಿಗೆ ಕಬ್ಬುನದ ಕಟ್ಟು ಕೊಟ್ಟರೆ ಕೊಳೆವುದಲ್ಲದೆ ಬಲುಹಾಗ ಬಲ್ಲುದೆ? ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿಯಂತಹುದೋ?' 'ಸಗಣಿಯ ಬೆನಕಂಗೆ ಸಂಪಿಗೆಯರಳಿನಲ್ಲಿ ಪೂಜಿಸಿದರೆ, ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣ..........ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ. ಕೆಟ್ಟವನೆಲ್ಲ ಸದ್ಭಕ್ತನಹನು' ಎಂದು ತಾಮಸರಿಗೆ ಲಿಂಗಧಾರಣೆಯನ್ನು ಮಾಡಕೂಡದೆಂದು ವಿಧಿಸಿದ್ದಾರೆ.

ಪರಿಣಾಮವನ್ನು ಲೆಕ್ಕಿಸದೆ—ಬರೇ ಬಾಹ್ಯಾಚರಣೆಗಳ ಮೇಲಿಂದ ಶರಣರ ಗುಣ ಪರೀಕ್ಷೆ ಮಾಡುವದು ಅನುಚಿತವೆಂದು ಬಸವಣ್ಣನವರ ಮತ.

'ವೇಷ ಅವಿಚಾರದಲ್ಲಿ ನಡೆಯಿತ್ತೆಂದು ಅಸುರದಲ್ಲಿ ಬೊಗಳುವ ಕುನ್ನಿ ನೀ ಕೇಳಾ! ಹರಿಯನೇ ದಾಸನ ವಸ್ತ್ರವ? ಉಣ್ಣನೇ ಚೆನ್ನಯ್ಯನ ಸಂಗಾತ? ಪರ ವಧುವ ಕೊಳನೆ ಸಿಂಧು ಬಲ್ಲಾಳನ? ಬೇಡನೆ ಸಿರಿಯಾಳನ ಮಗನ? ನಡೆವುದು ನುಡಿವುದು ಅವಿಚಾರ ವೆಂದು ಕಂಡೆನಾದರೆ ತಪ್ಪೆನ್ನದು. ಮೂಗ ಕೊಯ್ಯಿ ಕೂಡಲ ಸಂಗಮದೇವ.'

"ಆವಾವ ಭಾವದಲ್ಲಿ ಶಿವನ ನಂಬಿದ ಶರಣರು ಎಂತಿದ್ದರೇನಯ್ಯ?
..................ಅವಲೋಹವ ಕಳೆವ ಪರುಷ ಎಂತಿದ್ದರೇನಯ್ಯ?"

ಈ ದಾರಿ ಅಘಟಿತ ಘಟಿತರು, ವಿಪರೀತ ಚರಿತರು, ಹೋದ ದಾರಿ ಇದು ಸಕಲರಿಗೂ ಸುಲಭಸಾಧ್ಯವಲ್ಲವೆಂದು ಅವರೇ ಎಚ್ಚರಿಸಿದ್ದಾರೆ.

"ಮುನ್ನಿನವರು ಹೋದದಾರಿ ಭಯ ಕಾಣಿರಣ್ಣ.
ಬಲ್ಲಾಳನ ವಧುವಿನೊಡನೆ ಸರಸವಾಡಿದಂದಿಂದ ಭಯ ಕಾಣಿರಣ್ಣ.
ಸಿರಿಯಾಳನ ಮಗನ ಬೇಡಿದಂದಿಂದ ಭಯ ಕಾಣಿರಣ್ಣ.

ದಾಸನ ವಸ್ತ್ರವ ಸೀಳಿದಂದಿಂದ ಭಯ ಕಾಣೆರಣ್ಣ.
ಅಘಟಿತ ಘಟಿತರು, ವಿಪರೀತ ಚರಿತ್ರರು
ಕೂ, ಸಂ. ಶರಣರು ಹೋದದಾರಿ ಭಯಕಾಣೆರಣ್ಣ.
"ಎಲ್ಲಿ ಹೊಕ್ಕಲ್ಲಿ ನಿನ್ನ ವಿಕಾರ ಮಾಣೆ.
ಇದೊಂದು ಗರುವ ತನವೇ ?" ಎಂದು ದೇವರನ್ನು ಪ್ರಶ್ನಿಸಿದ್ದಾರೆ.
"ದಾಸನ ವಸ್ತ್ರವ ಬೇಡದ ಮುನ್ನ, ತವನಿಧಿಯ ನಿತ್ತಡೆ
ನಿಮ್ಮ ದೇವರೆಂಬೆ.....................ದೇಹಿ ನೀನು.

ವ್ಯಾಪಾರಿಗಳು. ನಮ್ಮವರು" ಎಂದು ವ್ಯಾಪಾರಿ ಭಕ್ತಿಯನ್ನು ಅಲ್ಲಗಳೆದಿದ್ದಾರೆ.

"ಅಂಜದಿರು, ಅಂಜದಿರು, ಅವರಂದವ ನಾನಲ್ಲ
ಎನ್ನ ತಂದೆ! ಸದ್ಭಕ್ತಿಯನೆ ಕರುಣಿಸೆನಗೆ" ಎಂದು ಬೇಡಿಕೊಂಡಿದ್ದಾರೆ.

"ನಾನೊಬ್ಬನೇ ಭಕ್ತನು. ಮರ್ತ್ಯಲೋಕದೊಳಗಣ ಭಕ್ತರೆಲ್ಲರು ಜಂಗಮಲಿಂಗ ನೀನೆ ಅಯ್ಯ" ಎಂದು, ತಮ್ಮ ದಾಸೋಹಂಭಾವವನ್ನು ತೋರಿದ್ದಾರೆ.

"ಬ್ರಾಹ್ಮಣ ಮೊದಲು ಅಂತ್ಯಜಕಡೆಯಾಗಿ ಶಿವಭಕ್ತರಾದವರನ್ನೆಲ್ಲ ಒಂದೆ ಎಂಬೆ" ಎಂದು ಸಾರಿದ್ದಾರೆ. ಅದರಂತೆ ಸಮಾಜದ ಮಹಾದ್ವಾರವನ್ನು ತೆರೆದಿಟ್ಟು—ಸರ್ವರೂ ಅದರಲ್ಲಿ ಪ್ರವೇಶಿಸಿ ಪ್ರಯೋಜನವನ್ನು ಹೊಂದಿ ಆತ್ಮೋದ್ಧಾರ ಮಾಡಿಕೊಳ್ಳಲು ಅನುವು ಮಾಡಿಕೊಟ್ಟಿದ್ದಾರೆ. ಆಗಂತುಕರಿಗೆ – ಅನುವಂಶಿಕರಷ್ಟೇ ಸಮಾನತೆ ಸ್ವಾತಂತ್ರ್ಯತೆಯನ್ನು ನೀಡಿದ್ದಾರೆ. ಅವರನ್ನು ಸಹೋದರ ಭಾವದಿಂದ ಕಂಡಿದ್ದಾರೆ. ಇದರ ಮೇಲಿಂದ ಅವರ ವಿಶ್ವಪ್ರೇಮವೂ—ವಿಶಾಲದೃಷ್ಟಿಯೂ ಯಾರಿಗಾದರೂ ಕಾಣುವಂತಿವೆ. ಜನಸಾಮಾನ್ಯರಲ್ಲಿ ಬೇರುಬಿಟ್ಟಿದ್ದ ಮೂಢಭಕ್ತಿಯು, ಬಸವಣ್ಣನವರ ಪುಣ್ಯ ಪ್ರಭಾವದಿಂದ, ತೊಲಗಿ—ವಿಚಾರಕ್ರಾಂತಿಯುಂಟಾದದ್ದರ ಫಲವಾಗಿ ಸಾಮಾಜಿಕ, ಧಾರ್ಮಿಕ ಮತ್ತು ಸಾಹಿತ್ಯದಲ್ಲಿ ವಿಶೇಷ ಕ್ರಾಂತಿಯಾಗಲು ಮಾರ್ಗವಾಯಿತು. ಇಂತಹ ಕಾರಣಿಕ ಮತ್ತು ಕಾರಣಪುರುಷ ಜಗದಣ್ಣ ಬಸವಣ್ಣನವರಿಗೈ ಧರ್ಮಾಂಧತೆಯ—ಅಂಧಶ್ರದ್ಧೆಯ ಬಣ್ಣ ಬಳಿಯಲು, ವಿಚಾರಪರರಿಂದ ಆಯರು ಅದು ಹೇಗೆ ಮುಂದಾದರೋ ಇದೇ ತಿಳಿಯದಾಗಿದೆ.

'ಲಿಂಗಾಂಗಿಯಾದರೆ ಸಾಕು. ಲಿಂಗಲಾಂಛನ ತಳೆದು ಬಂದರೆ ಸಾಕು, ಅವರು ಬಸವಣ್ಣನವರಿಗೆ ದೇವರು, ಪೂಜಾರ್ಹರು' ಎಂಬ ರಾಯರ ಈ 'ಸಾಕು ಸಾಕು' ಕಟೋಕ್ತಿಯನ್ನು ಓದಿ ನೋಡಿ, ನೋಡಿ ನಮಗೂ ಸಾಕಾಗಿದೆ. "ಕಟ್ಟಿದರೇನು, ಮುಟ್ಟಿದರೇನು, ಹೂಸಿದರೇನು ಮನಮುಟ್ಟದನ್ನಕ್ಕ? ಭಾವ ಶುದ್ಧವಿಲ್ಲದವರಿಗೆ ಭಕ್ತಿ ನೆಲೆಗೊಳ್ಳದು." "ಲಾಂಛನಕ್ಕೆ ಶರಣೆಂಬೆ. ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ ನೀ ಸಾಕ್ಷಿಯಾಗಿ ಛೀ ಎಂಬೆನು" ಎಂಬ ಬಸವಣ್ಣನವರ ಈ ದಿವ್ಯ ವಚನಗಳನ್ನು ನೋಡಿ ಯಾದರೂ ರಾಯರು ಈ ತಮ್ಮ 'ಸಾಕು' ಇನ್ನು ಸಾಕು ಮಾಡುವರೆಂದು ನಂಬಿದ್ದೇವೆ.

ಕೊನೆಯದಾಗಿ 'ಪರಮತದವರ ಮಹತ್ವ ಗಣನೆಗೆ ಬಾರದೆ ಹೋಗುತ್ತಿದೆ, ಪರಮತ ತಿರಸ್ಕಾರದಲ್ಲಿ ಮನನಡುವದಕ್ಕೆ ಅವಕಾಶವಾಯಿತು.' ಎಂದು ಇವರು ಹೂಡಿದ ವಾದದಲ್ಲಿ ಹುರುಳಿಲ್ಲ. ಅವರಿಗೆ ತನ್ನವರು-ಪರರು ಎಂಬ ಭೇದಭಾವವಿಲ್ಲ. ಎಲ್ಲಿ ತಪ್ಪಿದೆಯೋ ಅಲ್ಲಿ ಅದನ್ನು ಯಾರ ದಾಕ್ಷಿಣ್ಯಕ್ಕೊಳಗಾಗದೆ ಖಂಡಿಸಿದ್ದಾರೆ.

ಇಂಥ ಸರ್ವಸಾಮಾನ್ಯ-ಸಮದೃಷ್ಟಿಯ ಬಸವಣ್ಣನವರು ಬಹುಜನರಿಗೆ ಜಾತ್ಯಾತೀತರಾಗಿ ತೋರಿದರೆ—ಕೆಲವರಿಗಾದರೂ ಜಾತಿವಾದಿಗಳಾಗಿ ತೋರಲು ಕಾರಣವೇನು? ಎಂಬ ಪ್ರಶ್ನೆಗೆ, ಅವರವರ ಭಕ್ತಿಗೆ ಅವರವರ ಭಾವಕ್ಕೆ ಅವರವರ ತೆರನಾಗಿ ತೋರುವವನು ಬಸವಣ್ಣ. ರೂಪು ಕುರೂಪು ವಿಕಾರಂಗಳು ಮುಕುರವ ನೋಡುವವರ ಗುಣವಲ್ಲದೆ ಮುಕುರಕ್ಕೆ ವಿಕಾರಗುಣವುಂಟೇ? ಎಂಬುದೇ ಉತ್ತರವಾಗಿದೆ.

"In all things through out the world the men who look for the crooked, will see the crooked and the men who look for the straight, will see the straight."

"ಜಗತ್ತಿನಲ್ಲಿ ಎಲ್ಲ ವಸ್ತುಗಳಲ್ಲಿ ದೋಷೈಕ ದೃಷ್ಟಿಯಿಂದ ನೋಡುವವರಿಗೆ ದೋಷಗಳೂ, ಗುಣೈಕ ದೃಷ್ಟಿಯಿಂದ ನೋಡುವವರಿಗೆ ಗುಣಗಳೂ ಕಾಣಿಸುವವು."

ಎಂದು ರಸ್ಕಿನ್ ಕವಿಯು ಹೇಳಿದ್ದರ ಆಶಯವೂ ಇದೇ ಆಗಿದೆ. ಬಸವಣ್ಣನವರಾಗಲಿ— ಅವರ ಅನುಯಾಯಿಗಳಾಗಲಿ ಪರಮತದ್ವೇಷಕರಲ್ಲ. ತಮ್ಮ ನೆರೆಹೊರೆಯವರ ಕೂಡ ಯಾವಾಗಲೂ ಪ್ರೇಮದಿಂದ ನಡೆ

ಯುವವರು. ಅಹಿಂಸಾ ವಾದಿಗಳು. ಶಾಂತತಾ ಪ್ರಿಯರು. ಶಾಕಾಹಾರಿಗಳು. 'ಪರೋಪಕಾರವೇ ಪುಣ್ಯ ಪರಪೀಡನೆಯೇ ಪಾಪ' ವೆಂದು ತಿಳಿದವರು. ಗುಣೈಕ ಪಕ್ಷಪಾತಿಗಳು. ತಾವಾಗಿಯೇ ಅವರು ಎಲ್ಲಿಯೂ ಯಾರ ಮೇಲೂ ಆಕ್ರಮಣ ಮಾಡಿಲ್ಲ. ಹೀಗಿದ್ದು ಇವರ ಉತ್ಕರ್ಷವನ್ನು ನೋಡಿ ಸಹಿಸದ ಪರರು—ಕಾಲುಕೆದರಿ ತಮ್ಮ ಸಮಾಜವನ್ನು ತಮ್ಮ ಶಿವಶರಣರನ್ನು ಹಳಿದರೆ ನೋಡಿ ಸಹಿಸರು. ಅಂಥವರ ಸಮಾಚಾರವನ್ನು ಅವರು ತೆಗೆದುಕೊಳ್ಳದೆ ಬಿಟ್ಟಿಲ್ಲ. 'ಆಘಾತವಂತೆ ಪ್ರತ್ಯಾಘಾತ' 'ಹೇಗೆ ಧ್ವನಿಯೋ ಹಾಗೆ ಪ್ರತಿಧ್ವನಿಯು' 'ಹೊಯ್ದರೆ ಹೊಯ್ಗಳು ಕೈ ಮೇಲೆ. ಬಯ್ದರೆ ಬಯ್ಗಳು ಕೈ ಮೇಲೆ' ಎಂಬ ತತ್ವದಂತೆ, ಪರವಾದಿಗಳ ಖಂಡನೆ—ಸ್ವಪಕ್ಷ ಮಂಡನೆಗಾಗಿ ಅಂಥ ಪ್ರಸಂಗದಲ್ಲಿ ಅನಿವಾರ್ಯವಾಗಿ ಏನಾದರೂ ಬಿರುನುಡಿಗಳನ್ನಾಡಿದ್ದರೆ - ಅದು ಬಸವಣ್ಣನವರ ಅವರ ಅನುಯಾಯಿಗಳ ತಪ್ಪಲ್ಲ. ಅವರನ್ನು ಹೀಯಾಳಿಸಿ—ಕೆರಳಿಸಿ ವಾದ ರಂಗಕ್ಕೆಳೆದವರ ತಪ್ಪು.

ಇಂತಹ ಒಂದು ದೃಷ್ಟಾಂತವನ್ನು ಇಲ್ಲಿ ಕೊಡಲಾಗಿದೆ. ಅದೇನಂದರೆ—ಹಿಂದಕ್ಕೆ ಕಂಪ್ಲಿ ಬ್ರಾಹ್ಮಣರು ಬಸವ ಪುರಾಣದಲ್ಲಿ ತಮ್ಮ ಮತ ನಿಂದೆ ಬಂದಿದೆ ಎಂದು, ಅದರ ಮೆರವಣಿಗೆಗೆ ಆಕ್ಷೇಪ ತೆಗೆದುಕೊಂಡು ಅದನ್ನು ಅಡ್ಡಿಪಡಿಸಲು ೧೯೧೭ ರಲ್ಲಿ ಹೊಸಪೇಟೆಜಾಯಿಂಟ ಮ್ಯಾಜಿಸ್ಟ್ರೇಟ ಕೋರ್ಟದಲ್ಲಿ ಒಂದು ಅರ್ಜಿಕೊಟ್ಟಿದ್ದರು. ಅದರ ವಿಚಾರಣೆಯು ಅಲ್ಲಿಯ ಜಾಯಿಂಟ ಮ್ಯಾಜಿಸ್ಟ್ರೇಟರಾಗಿದ್ದ ಡಿ. ಜಿ. ಬ್ಲೆಸ್ ಇವರ ಮುಂದೆ ನಡೆದು ಅವರು ಕೊಟ್ಟ ನಿರ್ಣಯದಲ್ಲಿ ಈ ರೀತಿ ಕಾಣಿಸಿದ್ದಾರೆ.

"..............ಅಪ್ರಮೇಯಗಳು ನಿರಾಪೇಕ್ಷಣೀಯವಾಗಿ ಕೋಪೋದ್ರೇಕ ಉಂಟುಮಾಡುತ್ತವೆ. ಆದರೆ ಬಸವ ಪುರಾಣ ಕ್ರಿ. ಶ. ೧೪ನೇ ಶತಾಬ್ದದಲ್ಲಿ ಲಿಂಗಾಯತರು ಇತರ ಮತಗಳಂತೆ ಮರ್ಯಾದೆಗಾಗಿ ಹೊಡೆದಾಡುವ ಸಂದರ್ಭದಲ್ಲಿ ಬರೆದಿರುವದರಿಂದ ಅದರಲ್ಲಿರುವ ಬ್ರಾಹ್ಮಣ ದೂಷಣೆಗಳು, ಮಧ್ವ-ವಿಜಯ.ಮಣಿಮಂಜರಿ ಗ್ರಂಥಗಳಲ್ಲಿರುವ ಶಂಕರ ದೂಷಣೆಗಿಂತಲೂ ಹೆಚ್ಚಾಗಿ ಅಸಹ್ಯವಾಗಿಲ್ಲ" ಎಂದು ಹೇಳಿ ಆ ಅರ್ಜಿಯನ್ನು ತಳ್ಳಿಹಾಕಿರುವರು.

ಪ್ರತಿಯೊಂದು ಧರ್ಮದಲ್ಲಿ ಸಾಮಾನ್ಯ ಮತ್ತು ಸಾಂಪ್ರದಾಯವೆಂಬದಾಗಿ ಎರಡು ಪ್ರಕಾರ ಉಂಟು. ಸಾಮಾನ್ಯ ಉಪದೇಶವು ಸಾಧಾರಣ

ವಾಗಿ ಸರ್ವರನ್ನುದ್ದೇಶಿಸಿ ಮಾಡಲ್ಪಟ್ಟದ್ದರೆ—ಸಾಂಪ್ರದಾಯಿಕ ಬೋಧೆಯು ಆಯಾ ಮತಾನುಯಾಯಿಗಳಿಗಷ್ಟೇ ಸಂಬಂಧಿಸಿರುವದು. ಈಗ ವರಿಷ್ಠ ಸರಕಾರದಲ್ಲಿ ಮಂತ್ರಿಗಳಾಗಿರುವ ಮಾನ್ಯ ದಿವಾಕರರು ಬರೆದ ವಚನ ಶಾಸ್ತ್ರ ರಹಸ್ಯದಲ್ಲಿ ಸಾಂಪ್ರದಾಯಿಕ ತತ್ವಗಳನ್ನು ಯಾವ ದೃಷ್ಟಿಯಿಂದ ನೋಡಬೇಕು, ಎಂಬ ಬಗ್ಗೆ ಕೊಟ್ಟ ಎಚ್ಚರಿಕೆಯು ಲಕ್ಷದಲ್ಲಿಡುವಂತಿದೆ.

"ಧರ್ಮಗಳ ಮತ್ತು ಧರ್ಮ ಪಂಥಗಳ ತಾತ್ವಿಕ ವಿಚಾರ ಮಾಡುವವರು—ಯಾವಾಗಲೂ ಸಾಂಪ್ರದಾಯವೆಂಬ ಮೇಲಣ ಸ್ವರೂಪವನ್ನು ನೋಡಿ ತಮ್ಮ ಅನುಮಾನಗಳನ್ನು ಕಟ್ಟದೆ, ಆ ಹೊದಿಕೆಯ ಕೆಳಗೆ ಇರುವ ತತ್ವಗಳನ್ನು ಅರಿತುಕೊಂಡು ಅವುಗಳ ವಿಮರ್ಶೆ ಮಾಡತಕ್ಕದ್ದು. ಹೀಗೆ ಮಾಡುವದು ಅವಶ್ಯವೂ ಇರುವದು. ಯಾಕಂದರೆ ಹೀಗೆ ಮಾಡದೆ ಹೋದರೆ ಕೇವಲ ತೋರಿಕೆಯ ಭಿನ್ನತೆಯ ಮೂಲಕ ನಮ್ಮ ಕಲ್ಪನೆಗಳು ತಪ್ಪಿ ಇಲ್ಲದ ಸಲ್ಲದ ಪೂರ್ವಗ್ರಹಗಳುಂಟಾಗಿ ಅಸಹ್ಯತೆ ಮುಂತಾದವುಗಳು ನೆಲೆಗೊಂಡು ಅನರ್ಥಗಳಿಗೆ ಕಾರಣವಾಗುವವು............ವೀರಶೈವ ಸಾಂಪ್ರದಾಯಕ ಭಾಗದ ಕಡೆಗೆ ಸಹ ಇದೇ ವಿಶಾಲ ಮತ್ತು ಉದಾತ್ತ ದೃಷ್ಟಿಯಿಂದ ನೋಡುವದು ಅವಶ್ಯವು. ಹೀಗೆ ಮಾಡಿದರೆ ಮಾತ್ರ ನಮ್ಮ ಗುಣಗ್ರಾಹಕ ಶಕ್ತಿಯು ಹೆಚ್ಚಿ ನಮಗೆ ಈ ಶಾಸ್ತ್ರದ ಅಭ್ಯಾಸದಿಂದ ಒಳ್ಳೇ ಲಾಭವಾಗುವದು."

—ವಚನಶಾಸ್ತ್ರರಹಸ್ಯ ಪುಟ ೪೮.

ಹಿಂದಿನ ಕಾಲದ ಮಾತು ಅದೇನೇ ಇರಲಿ. ಈಗ ನಮಗೆ ಬೇಕಾದುದು ಪರಸ್ಪರ ಸಮಾಜಗಳಲ್ಲಿ ಪ್ರೇಮ - ಐಕ್ಯತೆ—ಸಹಕಾರ ಮೊದಲಾದವುಗಳು. ಸಾಂಪ್ರದಾಯಿಕ ತತ್ವಗಳನ್ನು ತಿಳಿಯಬೇಕೆನ್ನುವವರು ಮೇಲೆ ಹೇಳಿದಂತೆ ನಿರ್ವಿಕಾರ ಮನಸ್ಸಿನಿಂದ ಅಭ್ಯಾಸ ಮಾಡಬೇಕು. ಇಲ್ಲವಾದರೆ ಅವುಗಳ ಗೋಜಿಗೆ ಹೋಗಬಾರದು. ಹೀಗೆ ಮಾಡದೆ ಸಾಮಾನ್ಯ ಮತ್ತು ಸಾಂಪ್ರದಾಯಿಕ ತತ್ವಗಳನ್ನು ಕಲಬೆರಿಕೆ ಮಾಡಿ-ಬಸವಣ್ಣನವರಂಥ ಜಗದ್ವಿಭೂತಿಗಳಿಗೆ ಹೆಸರಿಡುತ್ತ ಹೋದಲ್ಲಿ ಒಮ್ಮನವಾಗದೆ-ಇಮ್ಮನಕ್ಕೆಡೆ ಕೊಟ್ಟಂತಾಗುವದು. ಇದು ಈಗಿನ ಕಾಲದಲ್ಲಿ ಪರಸ್ಪರ ಸಮಾಜ ಮತ್ತು ದೇಶಹಿತದೃಷ್ಟಿಯಿಂದ ಸರಿಯೆನಿಸಲಾರದು.

"In every person who comes near you look for what is good and strong; honuor that, rejoice in it and as you can, try to mate it."

"ನೀನು ಕಾಣುವ ಪ್ರತಿ ಮನುಷ್ಯನಲ್ಲಿ ಅವನಲ್ಲಿಯ ಉತ್ತಮಗುಣಗಳನ್ನು ಕಂಡುಹಿಡಿ, ಅವನ್ನು ಮನ್ನಿಸು, ಅದರಲ್ಲಿ ಆನಂದಪಡು, ಮತ್ತು ನೀನೂ ಆ ಮಟ್ಟಕ್ಕೇರಲು ಪ್ರಯತ್ನಿಸು" ಎಂದು ರಸ್ಕಿನ್ ಕವಿಯು ಹೇಳಿದ ಹಿತೋಕ್ತಿಯು ಯೋಗ್ಯವಾಗಿದೆ.

ಶ್ರೀಮಾನ್ ಅ. ನ. ಕೃಷ್ಣರಾಯರು ಬಸವಣ್ಣನವರ ಬಗ್ಗೆ ಮತ್ತು ಶಿವಶರಣರ ಬಗ್ಗೆ ಅನೇಕ ಉತ್ತಮ ಲೇಖಗಳನ್ನು ಬರೆದಿದ್ದಾರೆ. ಅದಕ್ಕಾಗಿ ಅವರು ಗುಣಜ್ಞರ ಅಭಿನಂದನೆಗೆ ಪಾತ್ರರಿದ್ದಾರೆ. ಆದರೆ ಅವರು ಬಸವಣ್ಣನವರ ಮತ್ತು ಅವರ ಅನುಯಾಯಿಗಳ ಬಗ್ಗೆ— ಇಲ್ಲಿ ತಳೆದ ಈ ಸಂಶಯಗಳು ನಿರಾಧಾರವಾದವುಗಳೆಂದು ಅವರಷ್ಟೇ ಸದಿಚ್ಛೆಯಿಂದ, ಅವರ ದೃಷ್ಟಿಗೆ ತಂದುಕೊಡುವದೇ ಈ ಲೇಖದ ಉದ್ದೇಶವಾಗಿದೆ. ರಾಯರಾದರೂ ಅದೇ ಬಂಧು ಭಾವನೆಯಿಂದ ಈ ಲೇಖವನ್ನು ಪರಾಮರ್ಶಿಸಬೇಕೆಂದು ಅವರಲ್ಲಿ ನಮ್ಮ ಸವಿನಯ ಸೂಚನೆಯು.

---

# ಬಸವಣ್ಣನವರ ಕ್ರಾಂತಿಕಾರಕ ಕಾರ್ಯಗಳು.

(ಬರೆದವರು:— ಶ್ರೀಯುತ ಅನ್ನದಾನೀಶ್ವರ ವಿರಕ್ತಮಠ-ರಾಣೇಬಿನ್ನೂರು.)

## ನಂ.— ೧.

## ಬಸವಣ್ಣನವರ ಆರ್ಥಿಕ ಧೋರಣೆ.

೧. ಬಸವಣ್ಣನವರ ಅಹಿಂಸಾಧರ್ಮ:— ಬಸವಣ್ಣನವರು ಶ್ರೇಷ್ಠ ಅಹಿಂಸಾಧರ್ಮಿಗಳಾಗಿದ್ದರು. ಅಹಿಂಸಾಧರ್ಮವು ಅವರ ಜೀವನದಲ್ಲಿ ಶಾಂತಿ-ಕ್ರಾಂತಿಯನ್ನು ಮಾಡಿತ್ತು. ಈ ಶಾಂತಿ-ಕ್ರಾಂತಿಯ ಕಿರಣಗಳೇ ಅವರ ವಚನಗಳು. ಈ ಕೆಳಗಿನ ಅಮರ ವಚನಗಳನ್ನು ನೋಡಿರಿ:—

"ದಯವಿಲ್ಲದ ಧರ್ಮವದಾವುದಯ್ಯ ? ದಯವೇ ಧರ್ಮದ ಮೂಲವಯ್ಯ. ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ." ದಯವಿಲ್ಲದ ಧರ್ಮವು ಇರುವದೇ ? ಎಂದು ಜಗತ್ತಿಗೆ ಆಹ್ವಾನ ಮಾಡಿರುತ್ತಾರೆ. ದಯವಿಲ್ಲದ ಧರ್ಮವು ಅಥವಾ ಹಿಂಸಾಚಾರದ ಧರ್ಮವು ಇದ್ದರೆ ಅದು ಧರ್ಮವೇ ಅಲ್ಲ ಎಂಬುದೇ ಅವರ ಸ್ಪಷ್ಟ ಅಭಿಪ್ರಾಯವು. ಧರ್ಮವೆಂಬುದು ಜಗ

ಕಲ್ಯಾಣಕರವಾದ ವೃಕ್ಷವಿದ್ದಂತೆ. ದಯವು ಧರ್ಮವೃಕ್ಷದ ತಾಯಿಬೇರು. ಅಹಿಂಸಾಧರ್ಮಿಗಳಲ್ಲದವರು ಧರ್ಮವಂತರಲ್ಲ. ಅವರು ಪರಮಾತ್ಮನಿಗೆ ಸಲ್ಲುವದಿಲ್ಲ ಎಂಬುದೇ ಅವರ ವಚನದ ತಿರುಳು.

ಬಸವಣ್ಣನವರ ಅಹಿಂಸಾ ಧರ್ಮದ ಪ್ರಭಾವವು ಅವರ ಆರ್ಥಿಕ ಧೋರಣೆಯಲ್ಲಿಯೂ ಹೊರಸೂಸಿರುವದು. ಎಲ್ಲ ಉದ್ಯೋಗಗಳ ಜನರಿಗೂ ಕಲ್ಯಾಣವಾಗಬೇಕೆಂಬುದೇ ಅವರ ಆರ್ಥಿಕ ಧೋರಣೆಯ ತಿರುಳು. ಪ್ರಗತಿಪರವಾದ ವಿಶಾಲತತ್ವಗಳಿಂದ ಅವರು ಸಮಾಜವನ್ನು ಕಟ್ಟಿದ್ದರಿಂದ ಉದ್ಯೋಗಗಳ ಸಂಬಂಧವಾದ ಉಚ್ಚನೀಚವೆಂಬ ದೊಡ್ಡ ತೊಡಕಿನ ಸಮಸ್ಯೆಯನ್ನೇ ಸುಲಭವಾಗಿ ಬಿಡಿಸಲಿಕ್ಕೆ ಅವರಿಗೆ ಬಂದಿತು. ಎಲ್ಲ ಉದ್ಯೋಗಗಳಿಗೆ ಬೆಲೆ ಕೊಟ್ಟದ್ದರಿಂದ ಸಮಾಜದ ವಿಧಾಯಕ ಶಕ್ತಿಯು ಬೆಳೆಯಿತು. ಸಮಾಜದಲ್ಲಿ ದುಡ್ಡಿಗೆ ಮಿತಿಮೀರಿದ ಮಹತ್ವವನ್ನು ಕೊಡದೇ ಇದ್ದುದರಿಂದ ಸಾಹುಕಾರರ ಗರ್ವವನ್ನು ಮುರಿಯಲಿಕ್ಕೆ ಅವರಿಗೆ ಬಂದಿತು. ಅಹಿಂಸಾತ್ಮಕ ಕಾಯಕ ತತ್ವವು ಬಸವಂಣನವರ ಆರ್ಥಿಕ ಧೋರಣೆಯ ತಿರುಳು. ಈ ಧೋರಣೆಗನುಸರಿಸಿ ಭಯಂಕರ ಜಾತೀಯತೆಯ ಘೋರ ದೈತ್ಯನನ್ನು ಸಂಹರಿಸಲಿಕ್ಕೆ ಅವರಿಗೆ ಶಕ್ಯವಾಯಿತು. ವಿಶ್ವಶಾಂತಿಸ್ಥಾಪನೆಗೂ, ರಾಷ್ಟ್ರದ ಉದ್ಧಾರಕ್ಕೂ ಅಗತ್ಯವಾದ ಧೋರಣವೇ ಬಸವಂಣನವರದು.

(೨) ಮನುಸ್ಮೃತಿಯ ಭಯಂಕರ ಹಾವಳಿ:— ಬಸವಂಣನವರಿಗಿಂತ ಪೂರ್ವದಲ್ಲಿ ಮತ್ತು ಅವರ ಕಾಲದಲ್ಲಿ ಮನುಸ್ಮೃತಿಯು ಜನಾಂಗದಲ್ಲಿ ಭಯಂಕರ ಹಾವಳಿಯನ್ನು ಮಾಡಿತ್ತು. ಮನುಸ್ಮೃತಿಯ ಆರ್ಥಿಕ ಧೋರಣೆಯು ಅತ್ಯಂತ ವಿಷಮವಾದದ್ದಿತ್ತು. ಈ ಮಾತು ಮನುಸ್ಮೃತಿಯ ೧೦ನೇ ಅಧ್ಯಾಯವನ್ನು ನೋಡಿದರೆ ಸ್ಪಷ್ಟ ಗೊತ್ತಾಗುವದು. ಅಸ್ಪೃಶ್ಯರು ಅತ್ಯಂತ ಕೀಳರೆಂದೂ ಅವರು ದುಡ್ಡು ಕೂಡಿಸದಂತೆ ನೋಡಿಕೊಳ್ಳಬೇಕೆಂದೂ ಮನುಸ್ಮೃತಿಯು ಹೇಳುತ್ತದೆ. ಮನುಸ್ಮೃತಿಯು ಅದನ್ನವಲಂಬಿಸಿದ ಒಂದು ವರ್ಗವೂ ಜನಸಾಮಾನ್ಯವನ್ನು ತುಳಿದು ಸುಲಿಗೆಯನ್ನು ನಡಿಸಿದ್ದವು. ಚರ್ಮದ ಉದ್ಯೋಗ, ಅಗಸರ ಉದ್ಯೋಗ, ಕ್ಷೌರಿಕರ ಉದ್ಯೋಗ, ಹೊಲಸು ತೆಗೆಯುವ ಉದ್ಯೋಗ, ಗಾಣಿಗರ ಉದ್ಯೋಗ, ಬಣಗಾರರ ಉದ್ಯೋಗ ಇವೇ ಮೊದಲಾದ ಉದ್ಯೋಗಗಳು ಹೀನವೆಂದು ಆಗ ಸಮಾಜವು ತಿಳಿಯುವಂತೆ ಮೇಲಿನ ವರ್ಗವು

ಅನಿಷ್ಟರೂಢಿಗಳನ್ನು ಹಾಕಿತ್ತು. ಕಾರಣ ಆ ಉದ್ಯೋಗಗಳ ಬೆಳವಣಿಗೆ ಆಗಲಿಲ್ಲ. ಇಷ್ಟೇ ಅಲ್ಲ, ಅವು ಹೀನಸ್ಥಿತಿಗೆ ಇಳಿಯುತ್ತ ಹೋದವು. ಅಧೋಗತಿಯು ಇಷ್ಟಕ್ಕೇ ನಿಲ್ಲಲಿಲ್ಲ, ಮೇಲಿನ ಹಲವು ಉದ್ಯೋಗಗಳನ್ನು ಮಾಡುವ ಜನರು ಕೀಳು ಕುಲದವರೆಂದು ತಿಳಿಯಲ್ಪಡುತ್ತಿದ್ದರು. ಅವರೊಡನೆ ಊಟಉಪಚಾರ, ಹೆಂಣುಗಂಡು ವ್ಯವಹಾರವು ಸಹ ನಡೆಯದಂತಾಯಿತು. ಇಷ್ಟೇ ಅಲ್ಲ, ಸಮಾಜದಲ್ಲಿ ಬಂಧುಪ್ರೀತಿ, ಒಕ್ಕಟ್ಟು, ಸಮಾನತೆಗಳು ನಾಶವಾಗಿ ನೈತಿಕ ಅಧಃಪತನವೂ ಆಗಿತ್ತು. ಬಸವಂಣನವರು ತಮ್ಮ ಆರ್ಥಿಕ ಧೋರಣೆಯಿಂದ ಈ ನೈತಿಕ, ಔದ್ಯೋಗಿಕ ಅವನತಿಗಳನ್ನು ದೂರಮಾಡಿದರು. ಈಪ್ರಕಾರ ಉದ್ಯೋಗಗಳನ್ನು ಅವಲಂಬಿಸಿದ್ದ ಉಚ್ಚನೀಚ ಭಾವ ಮತ್ತು ಜಾತೀಯತೆಯನ್ನು ನಿರ್ಮೂಲ ಮಾಡಿ ನೈತಿಕ ತಳಹದಿಯ ಮೇಲೆ ಆರ್ಥಿಕ ಧೋರಣೆಯನ್ನು ರಚಿಸಿದ ಸ್ವಾವಲಂಬಿ ಸಮಾಜವನ್ನು ಉಪನಿಷತ್ಕಾರರಾಗಲೀ, ವರ್ಣವಾದಿಗಳಾಗಲೀ, ರಚಿಸಿದ್ದುಂಟೇ?

ಉದ್ಯೋಗಗಳನ್ನವಲಂಬಿಸಿದ್ದ ಜನರೇ ದೊಡ್ಡವರು. ಸೋಮಾರಿಗಳೂ, ಪರಾವಲಂಬಿಗಳೂ ದೊಡ್ಡವರಲ್ಲ. ಭಿಕ್ಷುಕರೂ, ಸನ್ಯಾಸಿಗಳೂ ಶ್ರೇಷ್ಠರಲ್ಲ, ಸ್ವಾವಲಂಬಿಗಳೇ ಶ್ರೇಷ್ಠರು. ದುಡ್ಡಿಗಿಂತ ಸಮಾಜದಲ್ಲಿ ಪ್ರಾಮಾಣಿಕತೆ, ದುಡಿತ, ಸ್ವಾವಲಂಬನ, ಸಮಾನತೆ, ಬಂಧು ಪ್ರೀತಿ ಮುಂತಾದ ಗುಣಗಳು ಶ್ರೇಷ್ಠ. ಇದೇ ಬಸವಂಣನವರ ತತ್ವ, ಮಹಾತ್ಮ ಗಾಂಧಿಯವರ ತತ್ವ.

(೩) ಪೂರ್ಣ ಸಮಾಜರಚನೆಃ-ಬಸವಂಣನವರು ಅನೇಕ ಉದ್ಯೋಗಗಳ, ಅನೇಕ ಜಾತಿಗಳ, ಅನೇಕ ವಿಚಾರಗಳ ಜನರನ್ನು ಕೂಡಿಸಿ ಸ್ವಾವಲಂಬಿ ಸಮಾಜವನ್ನು ರಚಿಸಿದರು. ಜಾತ್ಯಾತೀತ ಸರ್ವೋದಯ ಸಮಾಜದ ಉಗಮ ಇಲ್ಲಿದೆ "ವರ್ಣಾನಾಂ ಕಿಂ ಪ್ರಯೋಜನಂ?" ವರ್ಣಗಳಿಂದ ಉಪಯೋಗವೇನು? "ಕುಲವೇನೋ ಆವಂದಿರ ಕುಲವೇನೋ?" ಯಾರ ಕುಲಜಾತಿಗಳನ್ನು ಅರಿಸಿ ಏನು ಪ್ರಯೋಜನ! "ಸಕಲ ಜೀವಾತ್ಮರಿಗೆ ಲೇಸನೇ ಬಯಸುವರು ಶರಣರು" ಎಲ್ಲರಿಗೂ ಕಲ್ಯಾಣ ಮಾಡುವವರೇ ಶರಣರು. ಸಂಕುಚಿತ ಜಾತೀಯ ಭಾವನೆಯುಳ್ಳವರು ಶರಣರಲ್ಲ.

"ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ ನಿಮ್ಮಾಣೆ." ಭಗವದ್ಭಕ್ತನು ಮನೆಗೆ ಬಂದರೆ ಅವನ ಉದ್ಯೋಗವನ್ನು

ಕೇಳಿ ಆಮೇಲೆ ಮನ್ನಣೆ ಮಾಡುವದಿಲ್ಲ. ಉದ್ಯೋಗವನ್ನು ಕೇಳಿ ಮಣೆ ಹಾಕಬೇಕಾಗಿಲ್ಲ. ಎಲ್ಲ ಕಾಯಕಗಳು ಪವಿತ್ರವಾಗಿವೆ. "ಕೃಷಿಕೃತ್ಯ ಕಾಯಕದಿಂದಾದೊಡೇನು? ತನು, ಮನ ಬಳಲಿಸಿ-ತಂದು ದಾಸೋಹ ಮಾಡುವ ಪರಮ ಸದ್ಭಕ್ತರ ತೋರಯ್ಯ." ಒಕ್ಕಲತನ ಮೊದಲಾದ ಯಾವ ಕೆಲಸವಾದರೇನು? ದೇಹಮನಗಳಿಂದ ದುಡಿದಿದ್ದರೆ ಸಾಕು. ಅವರೇ ಸದ್ಭಕ್ತರು. ಅವರ ದರ್ಶನ ಮಾಡಿಸಬೇಕು ದೇವಾ ಎಂದು ಬಸವಂಣ ನವರು ಬೇಡಿರುವರು.

"ಗುರುವಾದಡೂ ಕಾಯಕದಿಂದವೇ ಮುಕ್ತಿ." ಕಾಯಕವಿಲ್ಲದೇ ಗುರುವಿಗೂ ಮುಕ್ತಿ ಇಲ್ಲ. "ಕಾಯಕವೇ ಕೈಲಾಸ." ಕೈಲಾಸ ಬೇರೆ ಇಲ್ಲ. ಉದ್ಯೋಗದಲ್ಲಿಯೇ ಕೈಲಾಸವಿದೆ. ಅರ್ಥಾತ್ ಪಾರಮಾರ್ಥಿಕ ಶಾಂತಿ ಇದೆ.

"ಕುಲವನರಸುವರೇ ಜಾತಿಸಂಕರವಾದ ಬಳಿಕ?" ಅನೇಕ ಜಾತಿ ಗಳ ಜನರು ಸೌಹಾರ್ದ ಭಾವದಿಂದ ಕೂಡಿದಾಗ ಅಂಥ ಸಮಾಜದಲ್ಲಿ ಪುನ: ಜಾತೀಯ ಉಚ್ಚನೀಚ ಕಲ್ಪನೆಗಳನ್ನು ಎಣಿಸತಕ್ಕದ್ದು ಯೋಗ್ಯವೇ? "ಹೊಲೆಯರ ಮನೆಯ ಹೊಕ್ಕಾದರೆಯೂ ಸಲೆ ಕೈಕೂಲಿಯ ಮಾಡಿಯಾ ದರೆಯೂ ನಿಮ್ಮ ನಿಲವಿಂಗೆ ಕುದಿವೆನು." ಹೊಲೆಯರ ಮನೆಯಲ್ಲಿದ್ದು ಅವರ ಕೆಲಸ ಮಾಡಿ ಅಥವಾ ರಟ್ಟೆ ಮುರಿದು ದುಡಿದು ಕೂಲಿಯ ಕೆಲಸ ಮಾಡಿ ದೇವನ ನಿಲವನ್ನು ಅರಿಯಲಿಕ್ಕೆ ಹಾತೊರೆಯಬೇಕು. ಹಾಗೇ ನಾನು ಮಾಡಲಿಕ್ಕೆ ತಯಾರಿದ್ದೇನೆಯೇ ವಿನಃ ಬಿಜ್ಜಳರಾಜನ ಅಧಿಕಾರ ಧನಗಳಿಗಾಗಿ ಜೋತು ಬೀಳುವದಿಲ್ಲ, ಎಂದು ಬಸವಂಣನವರು ಸಾರಿ ಹೇಳಿದ್ದಾರೆ. "ಉಂಬಲ್ಲಿ ಉಡುವಲ್ಲಿ ಕುಲವಳಿಯಿತೆಂಬರು. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು. ಎಂತಯ್ಯ ಅವರ ಯುಕ್ತರೆಂತೆಂಬೆ?" ಸಹಭೋಜನ. ಶರೀರ ಸಂಬಂಧಗಳಿಗೆ ವಿರುದ್ಧವಿದ್ದವರು ಜ್ಞಾನಿಗಳೇ ಅಲ್ಲ.

ಬಸವಂಣನವರ ಪೂರ್ಣ ಸಮಾಜದಲ್ಲಿ ಆರ್ಥಿಕ ಧೋರಣೆಗೆ ಸಂಬಂ ಧಿಸಿದ್ದನ್ನು ಮಾತ್ರ ನಾವು ಮೇಲೆ ಉದಾಹರಿಸಿದ್ದೇವೆಂಬುದನ್ನು ಓದು ಗರು ಲಕ್ಷದಲ್ಲಿಡಬೇಕು. ಬಸವಂಣನವರು ಉದ್ಯೋಗ ಸ್ವಾತಂತ್ರ್ಯವನ್ನು ಎಂದೋ ಕೊಟ್ಟಿರುವರು. ಮೋಳಿಗೆಯ ಮಾರಯ್ಯನವರು ಕಟ್ಟಿಗೆಯ ಕಾಯಕ ಮಾಡುತ್ತಿದ್ದರು. ನುಲಿಯಚಂದಯ್ಯನವರು ಹಗ್ಗಗಳನ್ನು ಮಾಡು ತ್ತಿದ್ದರು. ಹಡಪದ ಅಪ್ಪಂಣನವರು ಕ್ಷೌರ ಮಾಡುತ್ತಿದ್ದರು. ಮಡಿವಾಳ

ಮಾಚಯ್ಯನವರು ಬಟ್ಟೆಗಳನ್ನು ತೊಳೆಯುತ್ತಿದ್ದರು. ಹರಳಯ್ಯನವರು ಪಾದರಕ್ಷಗಳನ್ನು ಮಾಡುತ್ತಿದ್ದರು. ಕಕ್ಕಯ್ಯನವರು ಡೋಹರ ಕೆಲಸ ಮಾಡುತ್ತಿದ್ದರು. ರಾಮಣ್ಣನವರು ದನ ಕಾಯುತ್ತಿದ್ದರು. ಕೇತಯ್ಯನವರು ಬುಟ್ಟಿ ಹೊಲೆಯುತ್ತಿದ್ದರು. ಸಂಗಣ್ಣನೆಂಬ ಶರಣನು ವೈದ್ಯನ ಕೆಲಸ ಮಾಡುತ್ತಿದ್ದನು ರಾವುತಂದೆಯೆಂಬವನು. ಹೊಲಿಯುತ್ತಿದ್ದನು. ಮುದ್ದಯ್ಯನು ಒಕ್ಕಲತನ ಮಾಡುತ್ತಿದ್ದನು. ಇನ್ನು ಅನೇಕ ಶರಣರು ಅನೇಕ ಉದ್ಯೋಗಗಳನ್ನು ಮಾಡುತ್ತಿದ್ದರೂ ಇವರೆಲ್ಲರು ಬಸವಣ್ಣನವರಿಗೆ ಸಮಾನ ಪೂಜ್ಯರಾಗಿದ್ದರು.

ಮಧುವಯ್ಯನವರೆಂಬ ಬ್ರಾಹ್ಮಣರ ಮಗಳನ್ನು ಹರಳಯ್ಯನವರೆಂಬ ಸಮಗಾರರ ಮಗನಿಗೆ ಲಗ್ನ ಮಾಡಿ ಬಸವಣ್ಣನವರ ಅನುಭವಮಂಟಪದಲ್ಲಿ ಆಯಿತು. ಆದ್ದರಿಂದಲೇ ಬಸವಣ್ಣನವರ ಸಮಾಜ ರಚನೆಯು ಜಾತ್ಯಾತೀತ ಸರ್ವೋದಯ ಸಮಾಜದ ಉಗಮಸ್ಥಾನವೆಂದು ಮೇಲೆ ಹೇಳಿದ್ದೇವೆ. ಮಹಾತ್ಮ ಗಾಂಧಿಯವರ ಗ್ರಾಮೋದ್ಯೋಗ ಸಂಘದ ತಳಹದಿಯು ಬಸವಣ್ಣನವರ ಕಾಯಕ ತತ್ವದಲ್ಲಿದೆಯೆಂಬುದು ವಾಚಕರಿಗೆ ವೇದ್ಯವಾಗಿರಬಹುದು.

(೪) ಬಸವಣ್ಣನವರ ಆರ್ಥಿಕ ಧೋರಣೆಯ ಅದ್ಭುತ ಪರಿಣಾಮ:- ಬಸವಣ್ಣನವರ ಆರ್ಥಿಕ ಧೋರಣೆಯಿಂದ ಜನಾಂಗದಲ್ಲಿ ಶಾಂತಕ್ರಾಂತಿಯೇ ಆಯಿತು. ಜನಜೀವನವು ಕಲ್ಯಾಣಕರವಾಗಿ ಮಾರ್ಪಟ್ಟಿತು. ಉಚ್ಚನೀಚ ಮತ್ತು ಜಾತೀಯ ಭಾವಗಳನ್ನು ಬಿಟ್ಟು ಎಲ್ಲ ಕೆಲಸಗಳನ್ನು ಮಾಡಹತ್ತಿದ್ದರಿಂದ ಅವು ಆತ್ಮೋನ್ನತಿಯ ಸಾಧನಗಳಾದವು. ಪ್ರತಿಯೊಬ್ಬನು ತನ್ನ ಶಕ್ತಿಯ ಸದುಪಯೋಗ ಮಾಡಿ ನೀತಿಯಿಂದ ನಡೆಯಲಿಕ್ಕೆ ಆಸ್ಪದವಾಯಿತು. ಸಮಾನತೆ, ಬಂಧುಪ್ರೀತಿ ಬೆಳೆದವು. ಉದ್ಯೋಗಗಳ ಅಭಿವೃದ್ಧಿಯಾಗಿ ಸಂಪತ್ತು ಸಮಾಜದಲ್ಲಿ ಕೇಂದ್ರೀಕೃತವಾಗಲಿಲ್ಲ. ಸಮನಾಗಿ ಹಂಚಲ್ಪಟ್ಟಿತು. ವ್ಯಕ್ತಿಯ ಹಿತ ಮತ್ತು ಸಮಾಜದ ಕಲ್ಯಾಣ ಏಕಕಾಲಕ್ಕೆ ಸಾಧ್ಯವಾದವು. ಯುದ್ಧಗಳಿಗೆ ಕಾರಣವಾಗಿರುವ ಮಿತಿ ಮೀರಿದ ಸಂಗ್ರಹಪ್ರವೃತ್ತಿಯು ಇಲ್ಲದಾಯಿತು ಜನಜೀವನದ ಮಂದಿರವಾದ ನಾಗರಿಕತೆಯೂ, ಜನಜೀವನದ ಅಂತಃಪ್ರಭೆಯಾದ ಸಂಸ್ಕೃತಿಯೂ ಉತ್ತಮವಾಗಿ ಮಾರ್ಪಟ್ಟವು. ಆಧ್ಯಾತ್ಮಿಕ ಸಾಹಿತ್ಯದ ಉದಯಕ್ಕೆ ಕಾರಣವಾಯಿತು. ಸಾಮಾಜಿಕ ಕಲ್ಯಾಣದ ದೃಷ್ಟಿ ಬಲಿಯಿತು. ಕಾಯಕ ಮಾಡು

ರಿಗೆ ಮಾತ್ರ ಅನುಭವಮಂಟಪದಲ್ಲಿ ಪ್ರವೇಶವಿತ್ತು. ಆದ್ದರಿಂದ ಅವರ ಯೂ ಅಲ್ಲಿ ವೃದ್ಧಿಯಾಯಿತು. ಈ ಪ್ರಕಾರ ಪ್ರಜಾಪ್ರಭುತ್ವದ ವಿಜ ಅವಶ್ಯ ಹಿನ್ನೆಲೆಯು ತಯಾರಾಯಿತು. ಆಗ ನಿರಂಕುಶ ಪ್ರಭು ಲ್ಲದಿದ್ದರೆ, ಆಧುನಿಕ ಪ್ರಚಾರಸಾಧನಗಳು ಇದ್ದರೆ ಬಸವಣ್ಣನ ರ್ಥಿಕ ಧೋರಣೆಯು ಜಗಜ್ಜಾಹೀರವಾಗುತ್ತಿತ್ತು. ಸಾಧು ಟಿ. ಎಲ್. ಸ್ವಾಮಿಯವರು ಹೇಳುವಂತೆ ಪಾಶ್ಚಾತ್ಯ ಅರ್ಥಶಾಸ್ತ್ರವು ಅನೈತಿಕವಾ ದ್ದುದರಿಂದ ಬಕಾಸುರನಂತಿದೆಯೆಂದು ಹೇಳಿರುವದು ನಿಜವು. ಉತ್ಪತ್ತಿ ಮತ್ತು ಹಂಚಿಕೆಗಳು ಸಮಾನವಾಗಿ ನಡೆದರೆ ಅಶಾಂತಿ ಎಲ್ಲಿ ಇದೆ? ಆದಕಾರಣ ಇಂದಿನ ಸಂಯುಕ್ತ ರಾಷ್ಟ್ರಸಂಘದ ಆರ್ಥಿಕ ಮಿತಿಯು ಜಗ ತ್ತಿನ ಶಾಂತಿಗಾಗಿ ಬಸವಣ್ಣನ ಆಧುನಿಕ ಧೋರಣೆಗೂ ಬೆಲೆ ಕೊಡಬೇ ಕಾದದ್ದು ಅಪರಿಹಾರ್ಯವು.

## ನಂ. ೨.

## ಬಸವಣ್ಣನವರ ವಿಶ್ವಸಾಹಿತ್ಯ.

ವಿಶ್ವಶಾಂತಿಗೆ ಬೇಕಾದ ಆಧ್ಯಾತ್ಮಿಕ, ನೈತಿಕ, ಸಾಮಾಜಿಕ, ಆರ್ಥಿಕ, ಬೌದ್ಧಿಕ, ಮುಂತಾದ ಅನೇಕ ಮಹತ್ವದ ಸಂಗತಿಗಳು ಬಸವಣ್ಣನವರ ವಚನಗಳಲ್ಲಿರುವದರಿಂದ ಅವರ ವಚನಗಳಿಗೆ ವಿಶ್ವಸಾಹಿತ್ಯವೆನ್ನಲಿಕ್ಕೆ ಏನು ಪ್ರತ್ಯವಾಯವಿಲ್ಲ. ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಅಸ್ತೇಯ, ಅಪರಿ ಗ್ರಹ, ಅಸ್ವಾದ, ಅಭಯ, ಅಸ್ಪೃಶ್ಯತಾನಿವಾರಣೆ, ಸ್ವದೇಶ, ವಿನಯ ಈ ಹತ್ತು ತತ್ವಗಳ ತಳಹದಿಯ ಮೇಲೆ ಮಹಾತ್ಮಾ ಗಾಂಧಿಯವರ ಜೀವ ನವು ಸುಂದರವಾಗಿ ನಿಂತಿದೆ. ಇವು ವಿಶಾಲವಾದ ತತ್ವಗಳು. ಇವೇ ಹತ್ತು ತತ್ವಗಳು ಬಸವಣ್ಣನವರ ವಚನಗಳಲ್ಲಿ ಸುಂದರವಾಗಿ ಸುಗಂಧ ದಂತೆ ಘಮಘಮಿಸುತ್ತವೆ.

ಬಸವಣ್ಣನವರ ವಚನಗಳಲ್ಲಿ ದಿನೇ ದಿನೇ ಪ್ರಗತಿಯನ್ನು ಹೊಂದು ತ್ತಿರುವ ಮನುಷ್ಯನ ಹೃದಯದ ಲೀಲೆಗಳನ್ನು ಕಾಣಬಹುದು. ಬೇರೆ ಬೇರೆ ಸಂದರ್ಭಗಳಲ್ಲಿ ಆ ಪ್ರಯತ್ನಶೀಲ ಹೃದಯವು ಯೋಗ್ಯ ರೀತಿಯಲ್ಲಿ ಮಿಡಿವ ರೀತಿನೀತಿಗಳು ಅನುಕರಣೀಯವಾಗಿವೆ.

ಬಸವಣ್ಣನವರ ಸಾಂಸ್ಕೃತಿಕ ಜೀವನದ ಮಟ್ಟವು ಅತಿ ಉಚ್ಚತ ಮವಾದ ಮತ್ತು ಅವರು ಅವಿರತವಾದ ಸಾಧನೆಯಿಂದ, ಅವಿಶ್ರಾಂತ ಪರಿ

ಶ್ರಮದಿಂದ, ತಮ್ಮ ಅಂತರಂಗದ ಸೌಂದರ್ಯವನ್ನು ಬೆಳಸಿಕೊಂಡಿದ್ದರು. ಆದ್ದರಿಂದ ಸುಂದರವಾದ ಬೆಳಕಿನಂಥ ಮಾತುಗಳೇ ಹೃದಯಾಂತರಾಳ ದಿಂದ ಹೊರಸೂಸಿ ವಚನಸಾಹಿತ್ಯವಾಗಿದೆ. ಉದಾತ್ತ ಜೀವನಕ್ಕೆ ಅನು ರೂಪವಾದ ಉದಾತ್ತ ಸಾಹಿತ್ಯವು ಉದಯವಾಗುವದೆಂಬುದಕ್ಕೆ ಇದು ಉತ್ತಮ ದೃಷ್ಟಾಂತವು.

ಬಸವಂಣನವರ ವಚನಗಳಲ್ಲಿ ವಿಚಾರದ ಗಾಂಭೀರ್ಯವಿರುವಂತೆಯೇ ಭಾವನೆಯ ಮಾಧುರ್ಯವೂ ಇದೆ. ಭಾವಸಾರಸವೂ, ವಿಚಾರದ ತೇಜವೂ ಕ್ರಿಯೆಯ ವೀರರಸವೂ ಸಮರಸವಾಗಿರುವದರಿಂದ ಅವರ ವಚನಗಳೆಂದರೆ ವಿಚಾರ, ಭಾವನೆ, ಕ್ರಿಯೆಗಳ ಕೂಡಲಸಂಗಮವೆಂದು ಹೇಳಿದರೆ ಅತ್ಯು ಕ್ತಿಯಲ್ಲ.

ಸರಿಯಾದ ರೀತಿಯಲ್ಲಿ ಮಾತಾಡಲಿಕ್ಕೂ, ಸರಿಯಾದ ರೀತಿಯಲ್ಲಿ ಕಾರ್ಯಮಾಡಲಿಕ್ಕೂ, ಸರಿಯಾದ ರೀತಿಯಲ್ಲಿ ವಿಚಾರ ಮಾಡಲಿಕ್ಕೂ ಕಲಿಸುವದೇ ಶಿಕ್ಷಣವಾಗಿದ್ದರೆ ಅಂಥ ಶಿಕ್ಷಣವು ವಚನಸಾಹಿತ್ಯದಲ್ಲಿದೆ. ಈ ಶಿಕ್ಷಣವು ಈಗ ವಿಶ್ವಕ್ಕೆ ಬೇಕು.

"ಸಾಹಿತಿಯೆಂದೆನಿಸಿಕೊಳ್ಳಬೇಕು; ಕೀರ್ತಿ ಗಳಿಸಿಕೊಳ್ಳಬೇಕು. ದುಡ್ಡು ಗಳಿಸಬೇಕು; ಅಧಿಕಾರ ಪಡೆಯಬೇಕು" ಎಂಬೀ ತರದ ಆಶೆ-ಆಕಾಂ ಕ್ಷೆಗಳಿಂದ ಬಸವಂಣನವರು ವಚನಗಳನ್ನು ಬರೆಯಲಿಲ್ಲ. ನಿರೀಕ್ಷಣೆ ಮತ್ತು ಪ್ರಯೋಗ— ಈ ಎರಡು ಮುಖ್ಯ ವೈಜ್ಞಾನಿಕ ಲಕ್ಷಣಗಳು ಬಸ ವಂಣನವರಲ್ಲಿ ಇದ್ದುದರಿಂದ ಅವು ಅವನ ಸಾಹಿತ್ಯದಲ್ಲಿ ಸ್ಫುಟವಾಗಿ ಗೋಚರಿಸುತ್ತವೆ. ಅವರ ವಚನಸಾಹಿತ್ಯವು ಅನುಭವದ ಸಾರವಾಗಿರುವ ದರಿಂದ ಅನುಭವಪಡೆಯಬೇಕೆನ್ನುವವರು ಅವುಗಳನ್ನು ಸ್ವಾಗತಿಸಲೇಬೇಕು.

ಬೆಟ್ಟ (ಅಡಿಕೆ) ಯಷ್ಟು ವಚನದಲ್ಲಿ ಬೆಟ್ಟದಷ್ಟು ಅರ್ಥವನ್ನು, ಭಾವ ವನ್ನು, ಇಂಗಿತವನ್ನು, ಅನುಭವದ ಸಾರವನ್ನು ತುಂಬಬೇಕಾದರೆ ಆ ಸಾಹಿತ್ಯದ ಸತ್ವವು ಜಗತ್ತಿಗೇನೇ-ಎಲ್ಲ ಸಾಹಿತಿಗಳಿಗೇನೇ— ಮಾದರಿಯಾ ಗಿದೆಯೆನ್ನಲಡ್ಡಿಯಿಲ್ಲ. ಶರಣರ ವಿಶಾಲ, ಪ್ರಗತಿಪರ ತತ್ವಗಳ ಪಥದಲ್ಲಿ ಗಮಿಸಿದ ಸರ್ವಜ್ಞನೊಬ್ಬನಿಗೆ ಮಾತ್ರ ವಚನಗಳ ರಹಸ್ಯವು ಬಿಂಬಿಸಿ, ಅವನ ಹೃದಯದಿಂದ ಬೇರೊಂದು ತೆರದಲ್ಲಿ ವಚನಗಳು ಹೊರಹೊಮ್ಮಿ ದವು. ವಚನದಂಥ, ಸರ್ವಜ್ಞನಂಥ ಸಾಹಿತ್ಯವು ಜಗತ್ತಿನಲ್ಲಿ ಅಪರೂಪ ವೆಂದು ಬಲ್ಲವರು ಹೇಳುತ್ತಾರೆ.

ಇಂದಿನ ಸಾಹಿತಿಗಳಿಗೆ ಬಸವಂಣನ ವಚನಸಾಹಿತ್ಯದಂಥ ಸಾಹಿತ್ಯವನ್ನು ರಚಿಸಲಿಕ್ಕೆ ಏಕೆ ಸಾಧ್ಯವಾಗಲೊಲ್ಲದು? ಸುದ್ದಿ ಮತ್ತು ಆಕಾಶವಾಣಿಖಾತೆಯ ಮಂತ್ರಿಗಳಾಗಿರುವ ಶ್ರೀ. ರಂಗನಾಥ ದಿವಾಕರರು "ಅಂತರಾತ್ಮನಿಗೆ" ಎಂಬ ಚಿಕ್ಕ ಗ್ರಂಥವನ್ನು ಬರೆದಿರುವರು. ಅದು ವಚನಸಾಹಿತ್ಯದ ಪರಿಣಾಮವೆಂದು ಅದನ್ನು ಓದಿದವರಿಗೆ ಸ್ಪಷ್ಟ ಹೊಳೆಯುತ್ತದೆ. ಆದರೆ ಅವರು ಈ ಮಾತನ್ನು ತಮ್ಮ ಮುನ್ನುಡಿಯಲ್ಲಿ ಸ್ಪಷ್ಟೀಕರಿಸಿಲ್ಲ. "ಅಂತರಾತ್ಮನಿಗೆ" ಎಂಬ ಗ್ರಂಥವಲ್ಲಿ ಸುಬುದ್ಧಿಯ ತೇಜವು ಆತ್ಮನ ಪ್ರಸಾದಕ್ಕಿಂತ ಹೆಚ್ಚಾಗಿರುವದು ಕಂಡುಬರುತ್ತದೆ. ನಿಷ್ಪಕ್ಷಪಾತಿಗಳು ಇದನ್ನು ಒಪ್ಪಲೇಬೇಕು. ಆದರೂ ಬಸವಂಣನ ದಾರಿಯಲ್ಲಿ ಗಮಿಸುವ ಯತ್ನ ಮಾಡಿದ್ದಕ್ಕೆ ಮೇಲಣ ಸಾಹಿತಿಗಳನ್ನು ಅಭಿನಂದಿಸುತ್ತೇನೆ.

ಬಸವಂಣನವರ ವಚನಸಾಹಿತ್ಯವಲ್ಲಿ ಪದ್ಯದ ಲಕ್ಷಣಗಳೂ ಇವೆ. ಅವು ಗದ್ಯ-ಪದ್ಯಾತ್ಮಕವಾಗಿವೆ. ಬಾಯಿಬಲ್ಲಿನಂತೆ ಅವುಗಳನ್ನು ಹಾಡಲಿಕ್ಕೆ ಬರುತ್ತಿವೆ. ಅವು ಇಂಪಾಗಿಯೂ ಸೊಂಪಾಗಿಯೂ ಕಂಪಾಗಿಯೂ ಪೆಂಪಿನಿಂದ ಯುಕ್ತವಾಗಿಯೂ ಇವೆ. ಕರ್ಣರಸಾಯನ, ಮನೋಹರ, ಮಧುರ ರಸವು ಅಲ್ಲಿ ಸುರಿಯುತ್ತದೆ. ಹಾಡುವವರನ್ನು ಕೇಳುವವರನ್ನು ಏಕಕಾಲಕ್ಕೆ ಆನಂದದಲ್ಲಿ ಆವು ಮುಳುಗಿಸುತ್ತವೆ. ಆನಂದ ಬೇಕಾದವರು ಅವುಗಳನ್ನು ಕೇಳಬಹುದು. ಗಾಯಕರು ಹಾಡಬಹುದು.

ಬಸವಂಣನವರು ಪಂಡಿತರ ಸೊತ್ತಾಗಿದ್ದ ಸಾಹಿತ್ಯವನ್ನು ಸಾಮಾನ್ಯರ ಸೊತ್ತಾಗಿ ಹಂಚಿದರು. ಪಂಡಿತ-ಪಾಮರರೀರ್ವರಿಗೂ ಅನುಕರಣೀಯವಾಗಿವೆ ಅವರ ವಚನಗಳು. ಜನಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ವಚನಗಳು ಇರುವದರಿಂದ ಅಶಿಕ್ಷಿತ ಜನಾಂಗದ ಕೈದೀಪವೆನ್ನಲಿಕ್ಕೆ ಅಡ್ಡಿಯಿಲ್ಲ.

ವಾಚಾ ರಭಸವುಳ್ಳ ಶಾಸ್ತ್ರಪಂಡಿತರಂತೆ ಬಸವಂಣನು ಮಾತಾಡುವದಿಲ್ಲ. ಆತ್ಮಸಂಯಮನದಿಂದ, ಮಧುರವಾಗಿ ಸ್ವಲ್ಪದರಲ್ಲಿ ಹೇಳತಕ್ಕದ್ದನ್ನು ಹೇಳುತ್ತಾನೆ. "ಅಯ್ಯಾ, ಅಂಣಾ" ಎಂಬದಾಗಿ ಮಧುರವಾದ ಪದಗಳಿಂದಲೇ ಹೇಳುತ್ತಾನೆ. ಸ್ಪಷ್ಟವಾಗಿ, ಸುಲಭವಾಗಿ, ಹೃದಯಕ್ಕೆ ಬಿಂಬಿಸುವಂತೆ, ಮಧುರವಾದ ಶೈಲಿಯಲ್ಲಿ, ವ್ಯವಹಾರದಲ್ಲಿಯ ಉಪಮೆಗಳಿಂದ, ಆತ್ಮದ ಅನುಭವವನ್ನು ಸಹಜವಾಗಿ ಹೇಳುವ ಹಿರಿಯ ಸಾಹಿತಿಗಳು ಇಂದು ಕನ್ನಡದಲ್ಲಿ ಯಾರೂ ಇಲ್ಲ. ನಮ್ಮ ಇಂದಿನ ಸಾಹಿತಿಗಳು ಬಸವಂಣನ ಕಿತ್ತಿಯನ್ನು ತೀಡಬೇಕು. ಹಿತವಾದದ್ದನ್ನು—ಜಗತ್ತಿಗೆ

ಕಲ್ಯಾಣಕರವಾದವನ್ನು—ಮಿತವಾಗಿ ತಿಳಿಸಬೇಕೆನ್ನುವವರು ಬಸವಣ್ಣನ ಹೆಜ್ಜೆಯಲ್ಲಿ ನಡೆಯಲೇಬೇಕು.

ಸುಲಭಶೈಲಿ, ಪ್ರೌಢಶೈಲಿ, ಮಧುರಶೈಲಿ, ಮಹಾಶೈಲಿ—ಈ ಎಲ್ಲ ಶೈಲಿಗಳನ್ನು ಬಸವಣ್ಣನ ವಚನಗಳಲ್ಲಿ ಕಾಣುತ್ತೇವೆ. ಮಹಾಶೈಲಿಯು ಆಧ್ಯಾತ್ಮಿಕ ಅನುಭವದಿಂದ ಬರಬಲ್ಲುದಲ್ಲದೆ, ನೈತಿಕ ವೀರಂತನದಿಂದ ಸಾಧ್ಯವಾಗಬಹುವಲ್ಲದೆ, ಅನ್ಯ ಉಪಾಯಗಳಿಂದ ಬರತಕ್ಕುದಲ್ಲ. ಮಧುರ ಶೈಲಿಯು ಆತ್ಮನಿರೀಕ್ಷಣೆ ಮತ್ತು ಜಗತ್ಕಲ್ಯಾಣ ದೃಷ್ಟಿಗಳಿಂದ ಸಾಧ್ಯವಾಗುವದು. ಪ್ರೌಢಶೈಲಿಯು ಗಂಭೀರ ವಿಚಾರಗಳಿಂದ ಸಾಧ್ಯವಾಗಬಹುದು. ಸುಲಭಶೈಲಿಯು ಸರಳಹೃದಯದಿಂದ ಬರಬಹುದು. ಒಟ್ಟಾರೆ ಉದಾತ್ತ ಧ್ಯೇಯವುಳ್ಳ, ಪ್ರಯತ್ನವಾದೀ, ಪ್ರಗತಿಪರ, ವಿಶಾಲ ಭಾವನೆಯುಳ್ಳ ವಿಭೂತಿಗಳಿಂದ ಮಾತ್ರ ಮೇಲಿನ ಎಲ್ಲ ಶೈಲಿಗಳು ಏಕೀಕೃತವಾಗಬಲ್ಲವೆಂಬುದು ನಿರ್ವಿವಾದವು.

ಬಸವಣ್ಣನವರು ಜಗತ್ತಿಗೆ ಸಂಬಂಧಪಟ್ಟ ಮಹಾವಿಭೂತಿಗಳಾಗಿರುವಂತೆ ಅವರ ಸಾಹಿತ್ಯವೂ ಇಡೀ ವಿಶ್ವಕ್ಕೇ ಸಂಬಂಧಿಸಿದ ಸಂದೇಶವುಳ್ಳುದಾಗಿದೆ. ಬಸವಣ್ಣನವರ ಉದಾತ್ತ ಸಂಸ್ಕೃತಿಯ ಪರಿಣಾಮವು ಹಿಂದುಸ್ತಾನದ ತುಂಬ ಆಗಿತ್ತು. ಆದರೆ ಆಗ ನಿರಂಕುಶ ಪ್ರಭುತ್ವವಿತ್ತು. ಆಧುನಿಕ ಪ್ರಚಾರದ ಸಾಧನಗಳಿರಲಿಲ್ಲ. ಅದ್ದರಿಂದ ವಚನಗಳ ಪ್ರಚಾರವು ಜಗತ್ತಿನಲ್ಲಿ ಆಗಲಿಲ್ಲ. ಇಂದು ವಿಶ್ವಕ್ಕೆ ಆ ಸಾಹಿತ್ಯವನ್ನು ಕಾಣಿಕೆಯಾಗಿ ಕೊಡಬೇಕಾಗಿದೆ. ಜನಸೇವಾಭಾವನೆಯುಳ್ಳ, ತ್ಯಾಗಶಕ್ತಿಯುಳ್ಳ ಆಧುನಿಕ ದೃಷ್ಟಿಯಿರುವ, ಸತ್ಪುರುಷರು, ಧನವಂತರು, ವಿದ್ಯಾವಂತರು, ಸಾಹಿತಿಗಳು, ಕವಿಗಳು ಈ ಮಹಾಕಾರ್ಯವನ್ನು ಮಾಡಲಿಕ್ಕೆ ಮುಂದಾಗಬೇಕು. ಪ್ರತಿಷ್ಠಿತ ಉಚ್ಚ ದರ್ಜೆಯ ವರ್ಗವು ಒಣ ಪ್ರತಿಷ್ಠೆಯನ್ನು ಬದಿಗಿರಿಸಿ, ವಿಶ್ವ ಸಾಹಿತ್ಯ ಪ್ರಪಂಚದಲ್ಲಿ ಅತ್ಯಮೌಲ್ಯವಾದ ಹೃದಯಸ್ಪಂದನವಾಗಿರುವ, ಬಾಳಿನ ಕುಡಿಯನ್ನು ಚಿಗುರಿಸುವ ಹೃದಯದ ಸೆಲೆಯಂತಿರುವ ಬಸವಣ್ಣನವರ ಸಾಹಿತ್ಯದ ಮಾಧುರ್ಯ ಮತ್ತು ಪ್ರಕಾಶದ ಪ್ರೇಮಕಿರಣಗಳನ್ನು ಹರಡಲಿಕ್ಕೆ ಮನಸ್ಸು ಮಾಡಿದರೆ ಕನ್ನಡ ಸಾಹಿತ್ಯ-ಸಂಸ್ಕೃತಿ-ತತ್ವ-ಕಲೆಗಳು ಜಗತ್ತಿನಲ್ಲಿ ಬೆಳಕಿಗೆ ಬಂದು ವಿಶ್ವಬಾಂಧವ್ಯವು ಸ್ಥಾಪಿತವಾಗಬಲ್ಲುದು. ಏಳಿರಿ! ಎಚ್ಚರಾಗಿರಿ!! ಧ್ಯೇಯಸಿದ್ಧಿಯಾಗುವ ವರೆಗೂ ವಿರಮಿಸಬೇಡಿರಿ!!!

---

## ವಿವರಣೆ

ಪಾದೋದಕ ಪ್ರಸಾದದ ವಿಷಯವು ಅತ್ಯಂತ ತೊಡಕಿನದೂ ಗಹನವಾದದ್ದೂ ಎಂಬುದು ಹಿಂದಿನ ವಚನಗಳಿಂದ ವಾಚಕರಿಗೆ ಗೊತ್ತಾಗದೆ ಇರದು. ಅವುಗಳಲ್ಲಿ ಸೂಕ್ಷ್ಮ ಮತ್ತು ದೀರ್ಘವಾದ ವಿಚಾರಗಳಿರುತ್ತವೆ. ಅವುಗಳ ಸಂಕ್ಷಿಪ್ತ ವಿವರಣೆಯನ್ನು ನಾವು "ಶಿವಾನುಭವ ಶಬ್ದಕೋಶ" ಎಂಬ ಗ್ರಂಥದಲ್ಲಿ ಮಾಡಿದ್ದೇವೆ. ಅದರಲ್ಲಿ ಈ ವಿಷಯದ ಬಗ್ಗೆ ಸಾಮಾನ್ಯ ತತ್ವಗಳು ವಿವರಿಸಲ್ಪಟ್ಟಿವೆ. ಈ ವಿವರಣೆಯು ವಾಚಕರಿಗೆ ಉಪಯುಕ್ತವಾಗಬಹುದೆಂದು ಎಣಿಸಿ ಅದನ್ನೇ ನಾವು ಕೆಳಗೆ ಉದಹರಿಸಿದ್ದೇವೆ.

### ಗುರು, ಲಿಂಗ, ಜಂಗಮಗಳು.

ಈ ಮೂರು ತತ್ವಗಳು ತನಗೆ ಸಂಬಂಧಪಡುತ್ತವೆ. ಕಾಯವು ಗುರುವು, ಪ್ರಾಣವು ಲಿಂಗವು, ಜ್ಞಾನವು ಜಂಗಮವಾಗಿರುತ್ತದೆ. ಆದ್ದರಿಂದ ಕಾಯದಲ್ಲಿ ಗುರುತತ್ವವನ್ನೂ ಜೀವದಲ್ಲಿ ಲಿಂಗತತ್ವವನ್ನೂ ಭಾವದಲ್ಲಿ ಜಂಗಮತತ್ವವನ್ನೂ ಕಾಣಬೇಕು. ಹೀಗೆ ಕಾಣುವಲ್ಲಿ ಪೂಜಿಸಿ ಗುರುವನ್ನು ಕಾಣಬೇಕು. ಧ್ಯಾನಿಸಿ ಲಿಂಗವನ್ನು ಕಾಣಬೇಕು. ಈ ಉಭಯದಲ್ಲಿದ್ದುಕೊಂಡು ಸಾವ ರಸ್ಯ ಜ್ಞಾನದಿಂದ ಜಂಗಮವನ್ನು ಕಾಣಬೇಕು. ಹೀಗೆ ವರ್ತಿಸಿದಲ್ಲಿ ಗುರು ಲಿಂಗ ಜಂಗಮ ತತ್ವಗಳು ತನ್ನಲ್ಲಿ ಒಳಕೊಳ್ಳುತ್ತವೆ. ಗುರುವು ಭಕ್ತನ ಚಿತ್ತವನ್ನರಿಯಬೇಕು. ಲಿಂಗವು ಭಕ್ತನ ಚಿತ್ತಿನಲ್ಲಿ ಅಚ್ಚೊತ್ತಿದಂತಿರಬೇಕು ಜಂಗಮವು ವ್ಯವಹಾರದ ಜಂಜಡಕ್ಕೆ ಸಿಲುಕಬಾರದು. ಹೀಗೆ ಭಕ್ತನ ವರ್ತನೆ ಇರಬೇಕು. ಗುರುವು ಸಕಲವು, ಲಿಂಗವು ನಿಃಕಲವು, ಜಂಗಮವು ಸಕಲ ನಿಃಕಲವಾಗಿವೆ. ಗುರುವಿನಲ್ಲಿ ಸದಾಚಾರವಿರಬೇಕು. ಲಿಂಗದಲ್ಲಿ ಶಿವಾಚಾರ, ಜಂಗಮದಲ್ಲಿ ಸಮಯಾಚಾರವಿರಬೇಕು. ಜಂಗಮವು ಚೈತನ್ಯಾತ್ಮಕವಾದುದು. ಅಂದರೆ ಅದರ ಗುಣವು ಚರಿಸುವಂತಹದು ಆದರೆ ಒಂದೆಡೆಗೆ ನೆಲಿಸಿರುವದು ಲಿಂಗದ ಗುಣವು. ಇದರ ಇರವನ್ನು ಅರುಹಿದಲ್ಲಿ ಅದು ಗುರುವು. ಇಂಥ ಗುರುವಿಡಿದು ಲಿಂಗವನ್ನು ಕಾಣಬೇಕು. ಇಂಥ ಲಿಂಗವು ಸಾಕಾರವಾದುದು. ಈ ಸಾಕಾರವನ್ನು ನಿರಾಕಾರವಿಡಿದು ಕಾಣಬೇಕು. ಯಾಕಂದರೆ ನಿರಾಕಾರದ ದ್ಯೋತಕವು ಈ ಸಾಕಾರವಿರುತ್ತವೆ. ಆದರೆ ಈ ನಿರಾಕಾರವನ್ನು ಜಂಗಮವಿಡಿದು ಕಾಣಬೇಕು. ಈ ಜಂಗಮವಿಲ್ಲದೆ ಹೋದರೆ ಆ ನಿರಾಕಾರವು ತೋರದು. ಈ ಮೂರು ವಸ್ತುಗಳು ಪರಶಿವನ ಸ್ವರೂಪವೆಂದು ಭಾವಿಸಿ ಅವುಗಳೊ

ಡನೆ ವರ್ತಿಸಬೇಕು. ಹಾಗೂ ಅವುಗಳ ಮರ್ಮವನ್ನು ತಿಳಿದು ಭಕ್ತನು ಆಚರಿಸಬೇಕು. ಇದರಿಂದ ಗುರುಲಿಂಗಜಂಗಮಗಳು ತಿಳಿಯುವವು.

ಗುರುಲಿಂಗಜಂಗಮಗಳ ಸ್ವರೂಪಗಳು ಮೇಲೆ ಹೇಳಿದಂತಿದ್ದುದ ರಿಂದ ಅವುಗಳನ್ನು ತನ್ನಲ್ಲಿಯೇ ಕಾಣಬೇಕು. ತನುವಿಗೆ ಗುರುವಿನ ಸಂಬಂಧವಿದೆ. ಮನಸ್ಸಿಗೆ ಲಿಂಗದ ಸಂಬಂಧವಿದೆ. ಮತ್ತು ಜ್ಞಾನಕ್ಕೆ ಜಂಗಮ ಸಂಬಂಧವಿದೆ. ಆದ್ದರಿಂದ ಕಾಯದಿಂದ ಗುರುವನ್ನು, ಮನ ಅಥವಾ ಜೀವದಿಂದ ಲಿಂಗವನ್ನು, ಭಾವ ಅಥವಾ ಜ್ಞಾನದಿಂದ ಜಂಗ ಮವನ್ನು ಒಳಕೊಳ್ಳಬೇಕು. ಗುರುವು ನಾದವು, ಲಿಂಗವು ಬಿಂದುವು, ಜಂಗಮವು ಕಳೆಯು, ಹೀಗೆ ಅವು ಹೇಳಲ್ಪಡುತ್ತವೆ. ಆದರೆ ಈ ಮೂರರಲ್ಲಿ ಸಾಮರಸ್ಯವಿರುತ್ತದೆ. ಆದ್ದರಿಂದ ಆಚಾರವೇ ಲಿಂಗವೆಂದು ತಿಳಿಯಬೇಕು. ಪ್ರಾಣದಲ್ಲಿ ಅರಿವನ್ನು ನೆಲೆಗೊಳಿಸಬೇಕು. ಮತ್ತು ಅರಿವೇ ಜಂಗಮವೆಂದು ಭಾವಿಸಬೇಕು. ಈ ವಿಷಯವನ್ನು ಸ್ಥೂಲ ವಾಗಿ ಹೇಳಬೇಕಾದರೆ, ಗುರುವು ದೀಕ್ಷೆಯನ್ನು ಮಾಡುವನು. ಲಿಂಗವು ಮನಸ್ಸಿನ ಮಾಲಿನ್ಯವನ್ನು ಕಳೆಯುವದು. ಜಂಗಮವು ಪ್ರಪಂಚಕ ತನವನ್ನು ದೂರ ಮಾಡುವದು. ವಚನಕಾರರು ಗುರು ಲಿಂಗ ಜಂಗಮ ಭಕ್ತ ಇವುಗಳಲ್ಲಿ ಭೇದ ಮಾಡುವದಿಲ್ಲ. ಅವುಗಳಲ್ಲಿ ಸಾಮರಸ್ಯವಿ ರುತ್ತದೆಂದು ಅವರು ಭಾವಿಸುತ್ತಾರೆ. ಇಂಥ ಸಾಮರಸ್ಯವರ್ತನೆ ಯಿಂದ ಈ ನಾಲ್ವರಲ್ಲಿ ಲಿಂಗದ ಕಳೆಯು ತೋರಿ ಕಡೆಗೆ ಐಕ್ಯವು ಉಂಟಾಗುತ್ತದೆ ಈ ಸ್ಥಿತಿಯೇ ಬಯಲು ಎಂದು ವಚನಕಾರರು ಹೇಳುತ್ತಾರೆ. ಗುರು ಲಿಂಗ ಜಂಗಮದ ಈ ಅರಿವೇ ಶಿವಯೋಗ ವೆಂತಲೂ ಹೇಳಲ್ಪಡುತ್ತದೆ.

## ಪಾದೋದಕ.

ಗುರುಲಿಂಗಜಂಗಮಗಳು ತನ್ನಲ್ಲಿ ಒಳಕೊಳ್ಳುವ ರೀತಿಯನ್ನು ಅರುಹಿಸಕೊಡುವ ಕ್ರಿಯೆಯು ಇದಾಗಿದೆ. ಇದು ಸಂಪೂರ್ಣ ಭಾವ ನಾಮಯವಾದ ವಿಧಿಯು. ಇಂಥ ಈ ಪಾದೋದಕವು ಕೇವಲ ನೀರು ಅಲ್ಲ. ಅದು ಚಿತ್‌ಸ್ವರೂಪವಾಗಿರುತ್ತದೆಂದು ತಿಳಿಯಬೇಕು. ಇದನ್ನು ಭಾವನಾಪ್ರಧಾನವಾಗಿ ಮತ್ತು/ ಅದರ ಮರ್ಮವನ್ನು ತಿಳಿದು ಆಚರಿಸಿ ದ್ದಾದರೆ ಅದು ಭಕ್ತ ಜಂಗಮರ ಸರ್ವಾಂಗವನ್ನು ವೇಧಿಸುತ್ತದೆ. ಈ ಪಾದೋದಕದ ಮೂಲಕ ಭಕ್ತನು ಗುರುಲಿಂಗಜಂಗಮಗಳನ್ನು ಹೊಂದಿ

ಸರ್ವಾಂಗಲಿಂಗಿಯಾಗುತ್ತಾನೆ. ಹೀಗೆ ಇದರ ಆಚರಣೆ ಇರುತ್ತದೆ. ಇದಕ್ಕೆ ಗುರುಲಿಂಗಜಂಗಮಾಗಳೆಲ್ಲವೂ ಬೇಕು. ಒಂದು ವೇಳೆ ಅವು ಪ್ರತ್ಯಕ್ಷ ದೊರೆಯದಿದ್ದರೆ ಭಕ್ತನೂ ಅವನಂತೆ ಜಂಗಮನೂ ಕೂಡ ಅವುಗಳನ್ನು ಸೂಕ್ಷ್ಮರೀತಿಯಿಂದ ತಮ್ಮ ಆಚರಣೆಯಲ್ಲಿಟ್ಟುಕೊಂಡು ಪಾದೋದಕ ಪ್ರಸಾದ ಸೇವನೆಯನ್ನು ಪಡೆಯುವ ಏರ್ಪಾಡನ್ನು ವಚನ ಕಾರರು ಮಾಡಿದ್ದಾರೆ. ಇಂಥ ಕಾಲದಲ್ಲಿ ಅವು ಕೇವಲ ಭಾವನಾ ಮಯವಾಗಿರುತ್ತವೆ. ಹೀಗೆ ವೀರಶೈವರಲ್ಲಿ ಪಾದಪೂಜೆ ಎಂದರೆ; ಪಾದವ ತೊಳೆದ ನೀರು ಎಂಬ ಅರ್ಥವಿಲ್ಲ.. ಅದು ಗುರು ಲಿಂಗ ಜಂಗ ಮನ್ನು ಹೊಂದುವ ರೀತಿಯನ್ನು ತಿಳಿಸುವ ಒಂದು ಬಗೆಯ ವಿಧಾನ ವಾಗಿದೆ. ಹಾಗೆ ಭಕ್ತ ಜಂಗಮರು ಆಚರಿಸಿದಲ್ಲಿ ಅವರ ತನು ಮನ ಭಾವ ಗಳೆಲ್ಲ ಲಿಂಗಮಯವಾಗುವವು. ಇದು ಸನ್ಮಾರ್ಗಿಗಳಾದ ಷಟ್‌ಸ್ಥಲ ವನ್ನು ಬಲ್ಲ ಸ್ತ್ರೀಪುರುಷ ಭಕ್ತ ಜಂಗಮರಿಗೆ ಮಾತ್ರ ಅಳವಡುವದಲ್ಲದೆ ಇತರರಿಗೆ ಅಳವಡಲಾರದು. ಇಷ್ಟೇ ಅಲ್ಲ, ಈ ಉಭಯತರ ಮನ ಪ್ರಾಣ ಭಾವಗಳು ಸಹ ಪರಸ್ಪರತೆಯನ್ನು ಹೊಂದುವಂತಹ ಸ್ಥಿತಿಯ ಲ್ಲಿರಬೇಕು. ಅಂದರೆ ಅವರ ರೀತಿ ನಡೆಗಳಲ್ಲಿ ಸಹಕಾರವಿರಬೇಕು. ಹೀಗೆ ಲಿಂಗಾಂಗಿಗಳು ಸದಾ ಪರಸ್ಪರ ಆಚರಿಸುತ್ತಿರಬೇಕು. ಕೇವಲ ಯಾಂತ್ರಿಕ ರೀತಿಯಿಂದ ಆಚರಿಸತಕ್ಕ ಆಚರಣೆಯು ಇದು ಅಲ್ಲ. ಪಾದೋದಕ ವಿಧಿಯನ್ನು ವಚನಕಾರರು ತಮ್ಮ ವಚನಗಳಲ್ಲಿ ವಿಸ್ತಾರ ವಾಗಿ ವಿವರಿಸಿದ್ದಾರೆ. ಇಂಥ ಮೂಲ ವಚನಗಳನ್ನೇ ವಾಚಕರು ನೋಡಬೇಕು.

**ಗುರುಪಾದೋದಕ, ಕ್ರಿಯಾಪಾದೋದಕ, ಜ್ಞಾನಪಾದೋದಕ.**

ಇವು ಮೂರು ಪಾದೋದಕದ ವಿಭಾಗಗಳು. ಪಾದೋದಕವು ದೇಹದಲ್ಲಿ ಶುದ್ಧಿಯನ್ನುಂಟುಮಾಡಿ ಲಿಂಗಚೈತನ್ಯವನ್ನು ಹುಟ್ಟಿಸುತ್ತದೆ. ಗುರುಪಾದೋದಕದಿಂದ ಸ್ಥೂಲದೇಹದ ಶುದ್ಧಿಯು. ಕ್ರಿಯಾ ಪಾದೋ ದಕದಿಂದ ಸೂಕ್ಷ್ಮದೇಹದ ಶುದ್ಧಿಯು. ಜ್ಞಾನಪಾದೋದಕದಿಂದ ಕಾರಣ ದೇಹದ ಶುದ್ಧಿಯು. ಗುರುಪಾದೋದಕದಿಂದ ಇಷ್ಟಲಿಂಗ ಸಂಬಂಧವು. ಕ್ರಿಯಾ ಪಾದೋದಕದಿಂದ ಪ್ರಾಣಲಿಂಗಸಂಬಂಧವು. ಜ್ಞಾನಪಾದೋದ ಕದಿಂದ ಭಾವಲಿಂಗ ಸಂಬಂಧವು ಉಂಟಾಗುತ್ತವೆ. ಆದ್ದರಿಂದ ಪಾದೋದಕವು ಆಚಾರದಲ್ಲಿ ಪ್ರತ್ಯಕ್ಷ ಪರಬ್ರಹ್ಮವೆಂದು ವಚನಕಾರರಿಂದ

ಹೇಳಲ್ಪಡುತ್ತಿದೆ. ಮೊದಲು ಉದಕವು ಹೋಗಿ ಆಮೇಲೆ ಗುರುಪಾದೋದಕವೆನಿಸುತ್ತದೆ. ಈ ಗುರುಪಾದೋದಕವೇ ಕ್ರಿಯಾಪಾದೋದಕವಾಗುತ್ತದೆ. ಈ ಕ್ರಿಯಾಪಾದೋದಕವೇ ಜ್ಞಾನಪಾದೋದಕವಾಗುತ್ತದೆ. ಗುರುಪಾದೋದಕದಿಂದ ಸಂಚಿತ ಕರ್ಮವು, ಲಿಂಗಪಾದೋದಕದಿಂದ ಪ್ರಾರಬ್ಧ ಕರ್ಮವು, ಜಂಗಮಪಾದೋದಕದಿಂದ ಆಗಾಮಿಕರ್ಮವು, ನಷ್ಟವಾಗುತ್ತವೆ. ಗುರುಪಾದೋದಕ, ಕ್ರಿಯಾಪಾದೋದಕ, ಜ್ಞಾನಪಾದೋದಕ ಇವುಗಳಿಗೆ ಅನುಕ್ರಮವಾಗಿ ಗುರುಪಾದೋದಕ, ಲಿಂಗಪಾದೋದಕ, ಜಂಗಮಪಾದೋದಕವೆಂತಲೂ, ದೀಕ್ಷಾಪಾದೋದಕ, ಶಿಕ್ಷಾಪಾದೋದಕ, ಜ್ಞಾನಪಾದೋದಕವೆಂತಲೂ ಬೇರೆ ಹೆಸರುಗಳಿವೆ. ದೀಕ್ಷಾಪಾದೋದಕಕ್ಕೆ ಧೂಳಪಾದೋದಕವೆಂತಲೂ ಬೇರೆ ಹೆಸರು ಉಂಟು. ಅಲ್ಲದೆ ಇವುಗಳಿಗೆ ಕರುಣ ಜಲ, ವಿನಯ ಜಲ, ಸಮತೆ ಜಲ ಎಂಬ ಹೆಸರುಗಳೂ ಅನುಕ್ರಮವಾಗಿ ಇರುತ್ತವೆ.

ಲಿಂಗೋದಕ, ಪಾದೋದಕ, ಪ್ರಸಾದೋದಕ.

ಗುರುವು ಮೊದಲು ಪಂಚಕಲಶದ ಜಲವನ್ನು ತನ್ನ ಕರುಣ ಜಲವನ್ನಾಗಿ ಮಾಡಿ ಭಕ್ತನ ಮೈಲಿಗೆಯನ್ನು ಕಳೆಯಲು ಆಮೇಲೆ ಭಕ್ತನು ತನ್ನ ಲಿಂಗಕ್ಕೆ ಇದರಿಂದ ಮಜ್ಜನಕ್ಕೆರೆಯಲು ಅದು ಲಿಂಗೋದಕವು. ಆ ಲಿಂಗೋದಕವನ್ನು ಗ್ರಹಿಸಲು ಅದು ಪಾದೋದಕವೆನಿಸುತ್ತದೆ. ಹೀಗೆ ಪಾದೋದಕವನ್ನು ಗ್ರಹಿಸಿ ಲಿಂಗಾರ್ಪಿತ ಭೋಗೋಪಭೋಗಿಯಾದಲ್ಲಿ ಅದು ಅರ್ಪಿತ ಪ್ರಸಾದೋದಕವು. ಹೀಗೆ ಲಿಂಗಾರ್ಚನೆಯಿಂದ ಲಿಂಗೋದಕವು, ಪಂಚೇಂದ್ರಿಯಾರ್ಚನೆಯಿಂದ ಪಾದೋದಕವು, ಪ್ರಾಣಾರ್ಚನೆಯಿಂದ ಪ್ರಸಾದೋದಕವು ಆಗುವವು. ಲಿಂಗೋದಕದಿಂದ ಅಂಗವು ಶುದ್ಧವು. ಪಾದೋದಕದಿಂದ ಪರವು ನಾಸ್ತಿಯಾಗುವದು. ಪ್ರಸಾದೋದಕದಿಂದ ಭವಬೀಜವು ಅಡಗುವದು. ಆದ್ದರಿಂದ ಕೇವಲ ಅಂಗದೇಹಿಯಾದವನಿಗೆ ಲಿಂಗೋದಕವಿಲ್ಲ. ಪ್ರಕೃತಿ ಜೀವಿಗೆ ಪಾದೋದಕವಿಲ್ಲ. ಭವಜೀವಿಗೆ ಪ್ರಸಾದೋದಕವಿಲ್ಲ. ಇವು ಅನುಕ್ರಮವಾಗಿ ಸಂಚಿತ, ಪ್ರಾರಬ್ಧ, ಆಗಾಮಿ ಈ ಕರ್ಮಗಳನ್ನು ದೂರ ಮಾಡುತ್ತವೆ. ಲಿಂಗೋದಕದಿಂದ ಅಂಗರಕ್ಷಣೆಯಾಗುತ್ತದೆ. ಪಾದೋದಕದಿಂದ ತನ್ನನ್ನು ಸೋಂಕಿದ ಸರ್ವವೆಲ್ಲವೂ ಪವಿತ್ರವು. ಮತ್ತು ಪ್ರಸಾದೋದಕದಿಂದ ಪ್ರಾಣದ ನೆಲೆಯ ಅರಿವು ಉಂಟಾಗು

ತ್ತದೆ. ಲಿಂಗೋದಕವು ಶಿವಸಂಸ್ಕಾರವುಳ್ಳದು. ಪಾದೋದಕದಿಂದ ಲಿಂಗಮಜ್ಜನಕ್ಕೆರೆವುದು. ಪ್ರಸಾದೋದಕದಿಂದ ಆರೋಗಣೆ ಮಾಡುವುದು ಅಂದರೆ ಭುಂಜಿಸುವುದು. ಹೀಗೆ ಆಚಾರದಲ್ಲಿ ಈ ತ್ರಿವರ್ಗಗಳ ಉಪಯೋಗವಿರುತ್ತದೆ.

## ದಶವಿಧ ಪಾದೋದಕಗಳು.

ಇವು ಗುರು ಪಾದೋದಕ, ಲಿಂಗಪಾದೋದಕ, ಜಂಗಮಪಾದೋದಕ, ಸ್ಪರ್ಶನೋದಕ, ಅವಧಾನೋದಕ, ಆಪ್ಯಾಯನೋದಕ, ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕ, ಸತ್ಯೋದಕ, ಎಂದು ಹತ್ತು ಇರುತ್ತವೆ. ಪಾದೋದಕವನ್ನು ಸಿದ್ಧಪಡಿಸುವಲ್ಲಿ ಅದನ್ನು ಸ್ವೀಕರಿಸುವಲ್ಲಿ ಈ ಹತ್ತು ವಿಧಗಳುಂಟಾಗುತ್ತವೆ. ಇವು ಆಚರಣೆಗೆ ಸಂಬಂಧಪಟ್ಟರೂ ಭಾವನಾಪ್ರಧಾನವಾದವುಗಳು. ಇವುಗಳನ್ನು ತಾತ್ವಿಕ ದೃಷ್ಟಿಯಿಂದಲೂ ಆಚಾರದೃಷ್ಟಿಯಿಂದಲೂ ವಿವೇಚಿಸಬಹುದು. (೧) ತಾತ್ವಿಕ ದೃಷ್ಟಿಯಿಂದ ಕೆಳಗೆ ಹೇಳಿದಂತೆ ಇವುಗಳನ್ನು ವಿವರಿಸಬಹುದಾಗಿದೆ. ಹೇಗೆಂದರೆ ಸ್ಪರ್ಶನ ಗುಣದಿಂದ ಬಂದುದು ಗುರುಪಾದೋದಕವು. ಅಂಗದ ಗುಣವಳಿಯಲು ಲಿಂಗಪಾದೋದಕವು. ಮಹಾಗಣಂಗಳ ಅರಿವನ್ನರಿತುದಾಗಿ ಜಂಗಮ ಪಾದೋದಕವು, ಅಥವಾ ಮಜ್ಜನೋದಕವು. ಚತುರ್ದಳಪದ ವಿಕಸಿತವಾಗಲು ಸ್ಪರ್ಶನೋದಕವು. ಲಿಂಗಕ್ಕೆ ಪರಮಪರಿಣಾಮವನ್ನು ಸಮರ್ಪಿಸಿದಲ್ಲಿ ಅವಧಾನೋದಕವು. ಲಿಂಗಾರೋಗಣೆ ಮಾಡಿದಲ್ಲಿ ಆಪ್ಯಾಯನೋದಕವು. ಲಿಂಗವನ್ನು ಹಸ್ತದಲ್ಲಿರಿಸಲು ಅದು ಹಸ್ತೋದಕವು. ಶಿವಯೋಗವಾದಲ್ಲಿ ಪರಿಣಾಮೋದಕವು. ನಾಮಸೀಮೆ ಇಲ್ಲವಾಗಿ ನಿರ್ನಾಮೋದಕವು. ಮುಂದೆ ಹೆಸರಿಲ್ಲದ ಬಯಲು ಬೆರಿಸಲು ಅದು ಸತ್ಯೋದಕವು. ಈ ಭಾವಗಳಿಂದ ದಶವಿಧ ಪಾದೋದಕಗಳನ್ನು ಗ್ರಹಿಸತಕ್ಕದ್ದು. ಹೀಗೆ ಪಾದೋದಕವನ್ನು ಸಿದ್ಧಪಡಿಸಿ ಗ್ರಹಿಸುವುದು. ಇದು ಭಾವನಾಮಯವಾದ ಆಚರಣೆಯು. ವಾಚಕರು ಮೂಲಗ್ರಂಥಗಳನ್ನು ನೋಡಿ ಅವುಗಳ ಮರ್ಮವನ್ನು ಕಂಡು ಹಿಡಿದು ಆಚರಿಸಬೇಕು. ಅಂದರೆ ಆಯಾ ತತ್ವಗಳು ಅವರಲ್ಲಿ ನೆಲೆಗೊಳ್ಳುವವು.

(೨) ಕೇವಲ ಕ್ರಿಯಾದೃಷ್ಟಿಯಿಂದಲೂ ಅವು ಹೇಳಲ್ಪಡುವವು. ಹೇಗೆಂದರೆ—ಪಾದದಲ್ಲಿ ಸಂಬಂಧಿಸಿದ್ದು ಗುರುಪಾದೋದಕವು. ಆ ಪಾದ

ತೀರ್ಥವನ್ನು ಲಿಂಗಕ್ಕೆ ಸಂಬಂಧಿಸಬೇಕೆಂಬ ಇಚ್ಛೆಯುತ್ಪನ್ನವಾದಲ್ಲಿ ಲಿಂಗೋದಕವು. ಹಾಗೆ ಮಜ್ಜನಕ್ಕೆರೆದಲ್ಲಿ ಮಜ್ಜನೋದಕವು. ಜಿಹ್ವೆಯಲ್ಲಿ ಸ್ವೀಕರಿಸಿದಲ್ಲಿ ಸ್ಪರ್ಶನೋದಕವು. ಅದನ್ನು ಎಚ್ಚರಿಕೆಯಿಂದ ಸೇವಿಸಿದಲ್ಲಿ ಅವಧಾನೋದಕವು. ಸೇವಿಸಿ ಸಂತೋಷ ಹೊಂದಿದಲ್ಲಿ ಆಪ್ಯಾಯನೋದಕವು. ಹಸ್ತದೊಳಗಿನ ತೀರ್ಥವನ್ನು ಸಲ್ಲಿಸಿದ್ದು ಹಸ್ತೋದಕವು. ಬಟ್ಟಲಲ್ಲಿಯ ತೀರ್ಥವನ್ನು ಮೂರು ಸಲ ಸೇವಿಸಲು ಪರಿಣಾಮೋದಕವು. ಅಂಥ ಪಾದೋದಕವು ಅಂತಿಂತೆಂದು ಹೆಸರನ್ನು ಇಡಲಿಕ್ಕೆ ಸಾಧ್ಯವಿಲ್ಲವಾಗಿ ನಿರ್ನಾಮೋದಕವು. ಬ್ರಹ್ಮರಂಧ್ರದಲ್ಲಿಯ ಚಿದಮೃತವೇ ಅದೆಂದು ಭಾವಿಸಿದಲ್ಲಿ ಸತ್ಯೋದಕವು. ಈ ವ್ಯಾಖ್ಯೆಗಳು ಕೇವಲ ಕ್ರಿಯೆಗೆ ಸಂಬಂಧಿಸಿ ಮಾಡಿದವುಗಳು. ಹೀಗೆ ಪಾದೋದಕವನ್ನು ಬಹಿರಂಗ ಅಂತರಂಗಗಳಲ್ಲಿ ಅರಿಯಬೇಕು.

## ಅರ್ಪಣ – ಪ್ರಸಾದ.

ಯಾವ ಫಲಪದವನ್ನಪೇಕ್ಷಿಸದೆ ಲಿಂಗಕಾರ್ಯಕ್ಕೋಸ್ಕರ ಕ್ರಿಯೆಗಳನ್ನು ಮಾಡುತ್ತ ತಾನು ಅನುಭವಿಸುವುದೆಲ್ಲವೂ ಪರಮಾತ್ಮನದೆಂದು ಭಾವಿಸಿ ಮಾಡುವದು ಅರ್ಪಣವು. ಹೀಗೆ ಅರ್ಪಿಸಿ ಅನುಭವಿಸಲ್ಪಟ್ಟದ್ದು ಪ್ರಸಾದವು.

## ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣ.

(೧) ಮನುಷ್ಯನಿಗೆ ಅಂಗ, ಪ್ರಾಣ, ಭಾವವೆಂಬವಿವೆ. ಇವುಗಳ ಮುಖಾಂತರವೇ ಮನುಷ್ಯನು ಕಾರ್ಯ ಮಾಡುತ್ತಾನೆ. ಇವು ಶುದ್ಧವಾದಲ್ಲಿ ಕ್ರಿಯೆಯು ಶುದ್ಧವು. ಅರ್ಪಣದಿಂದ ಅವುಗಳು ಶುದ್ಧವಾಗುತ್ತವೆ. ಇಷ್ಟಲಿಂಗಕ್ಕೆ ಅಂಗವನ್ನು, ಪ್ರಾಣಲಿಂಗಕ್ಕೆ ಮನವನ್ನು, ಭಾವಲಿಂಗಕ್ಕೆ ತೃಪ್ತಿಯನ್ನು ಅರ್ಪಿಸಬೇಕು. ಹೀಗೆ ಅರ್ಪಿಸಿದಲ್ಲಿ ಅವು ಅನುಕ್ರಮವಾಗಿ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣಗಳು. (೨) ಹಾಗೆಯೇ ಪದಾರ್ಥಸೇವನೆಯಲ್ಲಿ ರೂಪು, ರುಚಿ, ತೃಪ್ತಿಗಳೆಂಬುವುಗಳನ್ನು ಅನುಭವಿಸಬೇಕಾಗುತ್ತದೆ. ಆಗ ರೂಪನ್ನು ಕಾಯದ ಕೈಯಲ್ಲಿ ಇಷ್ಟಲಿಂಗಕ್ಕೆ ಅರ್ಪಿಸತಕ್ಕದ್ದು. ಅದು ಶುದ್ಧ ಪ್ರಸಾದವು. ರುಚಿಯಾಗಿಂದ ಪದಾರ್ಥವನ್ನು ಮನದ ಕೈಯಲ್ಲಿ ಜಿಹ್ವೆಯ ಮುಖಲ್ಲಿ ಪ್ರಾಣಲಿಂಗಕ್ಕೆ ಅರ್ಪಿಸಬೇಕು. ಅದು ಸಿದ್ಧ ಪ್ರಸಾದವು. ಪರಿಣಾಮವಾಗಿ ಬಂದ

ಪದಾರ್ಥವನ್ನು ಭಾವದ ಕೈಯಲ್ಲಿ ಹೃದಯ ಮುಖದಲ್ಲಿ ಭಾವಲಿಂಗಕ್ಕೆ ಅರ್ಪಿಸಬೇಕು. ಅದು ಪ್ರಸಿದ್ಧ ಪ್ರಸಾದವು. ಹೀಗೆ ಮಾಡುವಲ್ಲಿ ಅಂಗ ಮನ ಭಾವಗಳು ಪರಮಾತ್ಮನಲ್ಲಿ ಲಯವಾಗುವವು. ಇವುಗಳಿಗೆ ಅನುಕ್ರಮವಾಗಿ ಇಷ್ಟಲಿಂಗಾರ್ಪಣ, ಪ್ರಾಣಲಿಂಗಾರ್ಪಣ ಭಾವಲಿಂಗಾರ್ಪಣ ಎಂಬ ಹೆಸರುಗಳುಂಟಾಗುತ್ತವೆ. (೩) ಮನುಷ್ಯನ ಅಂಗ, ಪ್ರಾಣ, ಭಾವ ಅಥವಾ ತನು ಮನ ಭಾವ ಇವುಗಳನ್ನು ಅನುಕ್ರಮವಾಗಿ ಗುರು ಲಿಂಗ ಜಂಗಮಕ್ಕೂ ಅರ್ಪಿಸಬೇಕೆಂದು ಹೇಳಲ್ಪಡುತ್ತಿದೆ. ಗುರು ಲಿಂಗ ಜಂಗಮುಗಳು ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳಿಗೆ ಅನುಕ್ರಮವಾಗಿ ಸಂಬಂಧ ಪಡುತ್ತವೆ. ಅಷ್ಟಾವರಣಗಳು ಕ್ರಿಯಾಯುಕ್ತವಾಗಿವೆ. ಆದ್ದರಿಂದ ಅನುಭವಿಸುವ ಪದಾರ್ಥಗಳನ್ನು ಗುರು ಲಿಂಗ ಜಂಗಮುಗಳಿಗೆ ಅರ್ಪಿಸಿ ಅನುಭವಿಸಿದಲ್ಲಿ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣಗಳು ಒದಗುವವು. (೪) ಹಾಗೆಯೇ ಮನುಷ್ಯನಿಗೆ ತನು, ಮನ; ಧನಗಳಿರುತ್ತವೆ. ಅವುಗಳನ್ನು ಗುರು ಲಿಂಗ ಜಂಗಮಕ್ಕೆ ಅರ್ಪಿಸಿ ಅನುಭವಿಸತಕ್ಕದ್ದು. ಹಾಗೆ ಮಾಡಿದಲ್ಲಿ ಈ ತ್ರಿವಿಧಗಳು ಒಳಕೊಳ್ಳುವವು. ಹೀಗೆ ಇದರಲ್ಲಿ ೪ ವಿಧಗಳಾಗುತ್ತವೆ.

## ಕರಣಾರ್ಪಣ.

ಮನುಷ್ಯನಿಗೆ ನೇತ್ರ, ಶ್ರೋತ್ರ, ಜಿಹ್ವೆ, ಘ್ರಾಣ, ತ್ವಕ್ಕು ಎಂದು ಪಂಚಕರಣಗಳಿರುತ್ತವೆ. ನೇತ್ರವು ನೋಡುತ್ತದೆ. ಶ್ರೋತ್ರವು ಕೇಳುತ್ತದೆ. ಜಿಹ್ವೆಯು ರುಚಿಸುತ್ತದೆ. ಘ್ರಾಣವು ವಾಸಿಸುತ್ತದೆ. ತ್ವಕ್ಕು ಮುಟ್ಟುತ್ತದೆ. ಇವುಗಳೆಲ್ಲವನ್ನೂ ಲಿಂಗಾಂಗಿಯು ಲಿಂಗಾರ್ಪಿತ ಮಾಡಿ ಲಿಂಗ ಭೋಗೋಪಭೋಗಿಯಾಗಿರಬೇಕು. ಇವನೇ ಪ್ರಸಾದಿಯು. ಹೀಗೆ ಆಚರಿಸಿದಲ್ಲಿ ಅವನ ಸರ್ವಾಂಗವು ಶುದ್ಧವು. ಈ ಪಂಚಕರಣಗಳಲ್ಲಿ ನಾಸಿಕದಲ್ಲಿ ಆಚಾರಲಿಂಗವು ಜಿಹ್ವೆಯಲ್ಲಿ ಗುರುಲಿಂಗವು ನೇತ್ರದಲ್ಲಿ ಶಿವಲಿಂಗವು ತ್ವಕ್ಕಿನಲ್ಲಿ ಜಂಗಮಲಿಂಗವು ಶ್ರೋತ್ರದಲ್ಲಿ ಪ್ರಸಾದ ಲಿಂಗವು ಇರುತ್ತವೆ. ಈ ಪಂಚೇಂದ್ರಿಯಗಳನ್ನು ಅನುಕ್ರಮವಾಗಿ ಆಯಾಲಿಂಗಗಳಿಗೆ ಅರ್ಪಿಸಬೇಕು. ಹೀಗೆ ಮಾಡಿದಲ್ಲಿ ಆತ್ಮನಲ್ಲಿ ಕಡೆಯದಾದ ಮಹಾಲಿಂಗವು ಪ್ರಕಟವಾಗುತ್ತದೆ. ಆಗ ಸುಶಬ್ದ ಪ್ರಸಾದ, ಸ್ಪರ್ಶನ ಪ್ರಸಾದ, ರೂಪು ಪ್ರಸಾದ, ರುಚಿ ಪ್ರಸಾದ. ಗಂಧಪ್ರಸಾದಗಳು ಪ್ರಸಾದಿಗೆ ದೊರಕೊಳ್ಳುವವು. ಹೀಗೆ ಆಚರಿಸುವಲ್ಲಿ ಆಯಾ ಇಂದ್ರಿಯಗಳ

ದ್ವಾರಗಳಲ್ಲಿ ಆಯಾ ಲಿಂಗಗಳನ್ನು ನೆಲೆಗೊಳಿಸಬೇಕು. ಹೀಗೆ ನೆಲೆಗೊಳಿಸಿ ಲಿಂಗ ಮುಖವಾಗಿ ಇಂದ್ರಿಯಭೋಗವನ್ನು ಮಾಡಬೇಕು. ಅಗ ಮನುಷ್ಯನ ಶ್ರೋತ್ರ, ನೇತ್ರ, ಘ್ರಾಣ, ಜಿಹ್ವೆ, ತ್ವಕ್ಕುಗಳು ಶಿವನ ಇಂದ್ರಿಯಗಳು, ಅವನ ಶಿರ, ಮುಖ, ಹೃದಯ, ಪಾದ, ಬಾಹುಗಳು ಶಿವನ ಅವಯವಗಳು, ಅವನ ಮನ, ಬುದ್ಧಿ, ಚಿತ್ತ ಅಹಂಕಾರಗಳು ಶಿವನ ಕರಣಗಳು, ಅವನ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ವಾಯುಗಳು ಶಿವಚೈತನ್ಯವುಳ್ಳವುಗಳು ಆಗುತ್ತವೆ ಹೀಗೆ ಮನುಷ್ಯನ ಭೋಗವೆಲ್ಲವು ಪರಮಾತ್ಮನ ಭೋಗವೆನಿಸುವವು. ಇದೇ ಲಿಂಗ ಭೋಗೋಪಭೋಗವು, ಲಿಂಗಾಂಗಿಯ ಜೀವನದ ಕ್ರಮವು.

## ಭರಿತಾರ್ಪಣ.

ಅರ್ಪಣವಾದುದನ್ನು ಸೇವಿಸಲೇಬೇಕು. ಅದನ್ನು ತ್ಯಜಿಸಕೂಡದು. ಆದ್ದರಿಂದ ಮನುಷ್ಯನು ತನಗೆ ಸಲ್ಲುವಷ್ಟನ್ನೇ ಗ್ರಹಿಸಿ ಲಿಂಗಾರ್ಪಿತ ಮಾಡಬೇಕು. ಇದು ಭರಿತಾರ್ಪಣವು. ಆದ್ದರಿಂದ ಅವನು ಮಿತಾಹಾರಿಯಾಗಿರತಕ್ಕದ್ದು. ಹೀಗಿಲ್ಲದಿದ್ದರೆ ಲಿಂಗಭೋಗವು ತಪ್ಪುತ್ತದೆ. ಅದು ಕಿಲ್ಬಿಷವು. ಅಂದರೆ ಹೊಲಸಾದದ್ದು. ಆದ್ದರಿಂದ ಪ್ರಸಾದಿಯು ಆಹಾರವನ್ನು ಚೆಲ್ಲಕೂಡದು. ಅಂದರೆ ಊಟದಲ್ಲಿ ಮುಸುರಿಯನ್ನು ಮಾಡತಕ್ಕದ್ದಲ್ಲ.

## ಅರ್ಪಿತಾವಧಾನ.

ಅಷ್ಟವಿಧ ಸಕೀಲದ ಮೂಲಕ ಘ್ರಾಣದಲ್ಲಿಯ ಆಚಾರಲಿಂಗದಲ್ಲಿ ಸುಗಂಧ ಪ್ರಸಾದವನ್ನು, ಜಿಹ್ವೆಯಲ್ಲಿಯ ಗುರು ಲಿಂಗದಲ್ಲಿ ಸುರಸಪ್ರಸಾದವನ್ನು, ನೇತ್ರದಲ್ಲಿಯ ಶಿವಲಿಂಗದಲ್ಲಿ ಸುರೂಪು ಪ್ರಸಾದವನ್ನು, ತ್ವಕ್ಕಿನಲ್ಲಿಯ ಜಂಗಮಲಿಂಗದಲ್ಲಿ ಸುಸ್ಪರ್ಶನ ಪ್ರಸಾದವನ್ನು, ಕರ್ಣದಲ್ಲಿಯ ಪ್ರಸಾದಲಿಂಗದಲ್ಲಿ ಸುಶಬ್ದ ಪ್ರಸಾದವನ್ನು ಅರ್ಪಿಸಿದಲ್ಲಿ ಅರ್ಪಿತಾವಧಾನವು.

## ಇಷ್ಟ ಪ್ರಾಣ ಭಾವಲಿಂಗಾರ್ಪಿತವು.

ಇಷ್ಟ ಲಿಂಗಕ್ಕೆ ತನ್ನ ಶರೀರವನ್ನು, ಪ್ರಾಣಲಿಂಗಕ್ಕೆ ತನ್ನ ಮನಸ್ಸನ್ನು, ಭಾವಲಿಂಗಕ್ಕೆ ತನ್ನ ತೃಪ್ತಿಯನ್ನು ಅರ್ಪಿಸುವುದು ಅನುಕ್ರಮವಾಗಿ ಇಷ್ಟ, ಪ್ರಾಣ ಭಾವಲಿಂಗಾರ್ಪಿತವೆಂದು ಹೇಳಲ್ಪಡುತ್ತಿದೆ.

# ಶಿವಾನುಭವ

ವರ್ಷ ೨೩ | ಫೆಬ್ರುವರಿ-ಮಾರ್ಚ ೧೯೪೯ | ಸಂಚಿಕೆ ೫-೬

## ಸಾಧನ ಜೀವಿ ಬಸವ ತಂದೆ!

(ಬರೆದವರ :- ಕರಿಬಸವ [illegible])

---

ಬಸವಪ್ರಭುವು ಉಪನಯನಕ್ಕೆ ಮಣ್ಣೆರಗಿ, ಪವಿತ್ರಕ್ಷೇತ್ರವಾದ "ಕೂಡಲಸಂಗಮ" ಕ್ಕೆ ಧಾವಿಸುವನು. ಅಲ್ಲಿಯ ಗುರುಕುಲ ಪೀಠದಲ್ಲಿ ಸೇರಿ ಭಕ್ತಿಭಾವನೆಯ ಸಿದ್ಧಿಯನ್ನು ಪಡೆಯುವನು. ಹೃದಯಕ್ಕೆ ಹೃದಯ, ಮನಕ್ಕೆ ಮನ, ಭಾವಕ್ಕೆ ಭಾವ, ದೇಹಕ್ಕೆ ದೇಹ, ಕೂಡಿ ಬೆರೆತು ಪಾವನತೆಯಲ್ಲಿ ತೇಲುವಂತೆ ಸಂಗಮನಾಥನಲ್ಲಿ ಸ್ನೇಹವನ್ನು ಗಳಿಸುವನು. ಅದೇ ಬಾಳಿನಲ್ಲಿ ಹಿರಿದೆಂದು ನೆರೆನಂಬಿ ಆಚರಿಸುವನು. ಸಂಗಮನಾಥನಲ್ಲಿಟ್ಟ ಬಸವನ ಪ್ರೇಮಕ್ಕೆ ಎಣೆಯಿಲ್ಲ. ಭಕ್ತಿಗೆ ಪಾರವಿಲ್ಲ. ನೇಹಕ್ಕೆ ತುದಿ ಮೊದಲಿಲ್ಲ. ಕಡೆಗೆ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಹೋಗುವ ಸನ್ನಿವೇಶ ಬಂದಾಗ್ಗೆ ಬೆಚ್ಚಿ ಬೆರಗಾಗಿ ದೇವನೊಡನೆ ನಡೆಸಿದ ಪ್ರೇಮದ ಮುನಿಸು ಹೆಚ್ಚಿನದು. "ನೀನೇಕೆ ಈ ನುಡಿಯೇಕೆ? ಹೊಂದಿದರಂ ಹೋಗೆಂಬರೇ? ಸಾರ್ದರಂ ಸ್ಪೈರಿಸೆಂಬರೇ? ನಂಬಿದವರ ಗೋಣಂ ಕೊಯ್ವರೇ? ಶಿಶುವಂ ನಿರಿವರೇ? ಪಶುವಂ ಕೊಲುವರೇ? ಎನ್ನಂ ಬಿಡುವರೇ? ಕರುಣೆ ಕರುಣೆ; ಕರುಣಂ ಲೇಸಾಯ್ತು. ಅರ್ಚಿತಕ್ಕೆ ಫಲವಾಯ್ತು. ಇನ್ನೇನು ಇನ್ನೇನು? ಎಂದು ದುಃಖ ಪಡುವನು.

ಕಡೆಗೆ ಸಂಗಮದೇವನ ಅಪ್ಪಣೆಯ ಮೇರೆಗೆ ಇಚ್ಛೆಯಿಲ್ಲದ ಮನಸ್ಸಿನಂತೆ, ಬಲುಮೆಯ ಜೋರಿನಿಂದ ಕದಲುತ್ತಾ ಹಗೋವಿನ ಮೊಲೆಹಾಲು

# ವಿಷಯಗಳು.



---

## ಕಾಣಿಕೆ

ಬಳ್ಳಾರಿ ಜಿಲ್ಲಾ ಹರಪನಹಳ್ಳಿ ತಾಲೂಕು, ತೆಲಗಿ ಪೋಸ್ಟ, ಹಿರೇಮ್ಯಾಗಳಗೇರಿ ಗ್ರಾಮದಲ್ಲಿರುವ ಬೆಣ್ಣೀಹಳ್ಳಿ ಕೊಟ್ರಪ್ಪನವರ ಮನೆಯಲ್ಲಿ ಪುಣಬಗಟ್ಟೀಮಠದ ಶ್ರೀ. ಬಸವಯ್ಯನವರು ಶಿವಾನುಭವ ಕೀರ್ತನೆ ಮಾಡಿದ್ದಕ್ಕಾಗಿ ಎರಡು ರೂಪಾಯಿಗಳನ್ನು ಶ್ರೀಯುತ ಪಿ. ಎಮ್. ಸಿದ್ಧಲಿಂಗಯ್ಯ ಮುಖ್ಯೋಪಾಧ್ಯಾಯ ಕಮತ್ರಹಳ್ಳಿ ಇವರು ಕಳಿಸಿದ್ದು ಇದನ್ನು ನಾವು ಕೃತಜ್ಞತೆಯಿಂದ ಸ್ವೀಕರಿಸುತ್ತೇವೆ.

ಸಂಪಾದಕ

ಶಿವಾನುಭವ

# ಶಿವಾನುಭವ

| ವರ್ಷ ೨೩ | ಸಪ್ಟಂಬರ ೧೯೪೯ | ಸಂಚಿಕೆ ೧೨ |
|---|---|---|

## ಪ್ರಾರ್ಥನೆ.

(ಲೇಖಕರು:— ಉಪಾಧ್ಯಾಯ ಮ. ಮಲ್ಲಪ್ಪ ಅಧ್ಯಕ್ಷರು ವಿದ್ಯಾರ್ಥಿಸಂಘ ಹಲಗೂರು.)

ಪ್ರಾರ್ಥನೆಯು ಮಾನವನನ್ನು ಕತ್ತಲಿಂದ ಬೆಳಕಿಗೆ ತರುತ್ತದೆ. ಮನೆಗೆ ಒಬ್ಬ ಯಜಮಾನ, ಜಗತ್ತಿಗೆ ಒಬ್ಬ ಒಡೆಯನಿರುವುದು ಸಹಜವು. ಆಳು ಬಾಳು, ಸುಖ ದುಃಖ, ಲಾಭ ನಷ್ಟ, ಉನ್ನತ್ಯಾವನತಿ, ಮೇಲು ಕೀಳು, ದ್ವಯಗಳಿಂದ ಕೂಡಿದೆ. ಸುಖವು ದುಃಖದ ಮೂಲ, ದುಃಖವು ಸುಖದ ಮೂಲ. ದುಃಖ ಬಂದಾಗ ಹೇ ಜಗದೀಶ್ವರ, ಈ ತೆರನ ತೊಡರು ತೊಡಕನ್ನು ತೊಡರಿಸಿದೆ, ನಿಶ್ಚಿಂತನಾಗಿ ಬಾಳನೌಕೆಯನ್ನು ಸರಾಗವಾಗಿ ನಡೆಯಿಸು ಎಂದೂ ಸುಖಬಂದಾಗ ಹೇ ಜಗದ್ರಕ್ಷಕ, ಈ ಹಿಗ್ಗಿನಿಂದ ನಾನು ಮತ್ತನಾಗಿ ಅಪಮಾರ್ಗಕ್ಕೆ ನುಗ್ಗದೆ ನಿನ್ನನ್ನು ಬಿಡದೆ ಕ್ರಮವರಿತು ನೆನೆಯುವಂತೆ ಮಾಡು ಎಂದೂ ಆತನಲ್ಲಿ ಮೊರೆಯಿಡುವುದು ಮಾನವನ ಸಹಜ ಗುಣವಾಗಿರಬೇಕು. ಸೌಗುಣ್ಯದ ಪ್ರತಿಬಿಂಬವು ಹೊಗಳಿಕೆ ಅರ್ಥಾತ್ ಸ್ತೋತ್ರವು. ಒಂದು ವ್ಯಕ್ತಿಯಲ್ಲಿರುವ ಸಹಜಗುಣಗಳನ್ನು ಚಾಚೂ ತಪ್ಪದೆ ವರ್ಣಿಸುವುದು ಸ್ತೋತ್ರವು. ನಿಷ್ಕಳಂಕನ ಸೃಷ್ಟಿ ವೈಚಿತ್ರ್ಯಕ್ಕೆ ನಾವು ಯಾವಾಗಲೂ ಋಣಿಗಳಾಗಿರಬೇಕು. "ಚಿತ್ರವನು ನವಿಲೊಳು ವಿಚಿತ್ರವನು ಗಗನದೊಳು, ಪತ್ರಪುಷ್ಪಗಳ ವಿವಿಧ ವರ್ಣನೆಗಳಿಂದ ಚಿತ್ರಿಸಿದವರಾರು ಸರ್ವಜ್ಞ ॥" ಈ ವೈಚಿತ್ರ್ಯ ಸೃಷ್ಟಿಮಾಡಿರುವಂತೆಯೇ ಈ ಜಗಜ್ಜೀವಿಗಳಿಗೆ ಭಗವಂತನು

ಉಪಕಾರ ಮಾಡಿರುವನು. "ಬೊಗಸೆ ನೀರ ನೀಡಿದಾತನಿಗೆ ತಣಿವಾ ಗುವಂತೆ ಊಡಿಸು. ಒಳ್ಳಿದನು ತೋರಿದವನಿಗೆ ಭಕ್ತಿಯಿಂದ ಮಣಿ. ಪುಡಿಗಾಸನ್ನು ನೀಡಿದವನಿಗೆ ಚಿನ್ನವ ನೀಡು. ಪ್ರಾಣವಂ ಉಳಿಸಿದ ವಗೆ ಪ್ರಾಣದಾನವ ಮಾಡು" ಎಂದು ಗಾಂಧಿ ವಚನವಿದೆ. ತಾಯಿಯ ಗರ್ಭದಲ್ಲಿ ಒಂದು ಅಣುವಾಗಿದ್ದವನನ್ನು ಒಂದು ತನುವನ್ನಾಗಿ ಮಾಡಿದ ಮಹಾರೂಪಿಗೆ ಪ್ರತ್ಯುಪಕಾರವನ್ನು ಮಾಡುವುದು ಬೇಡವೇ? ಆ ಪ್ರತ್ಯು ಪಕಾರದಿಂದ ನಮಗೆ ಲೇಸು ಲಭಿಸುವುದೇ ಹೊರತು ಆತನಿಗೆ ಅಲ್ಲವು. ಆತನ ನಾಮಸ್ಮರಣೆಯೇ, ಹಾಗೂ ಆತನ ಕ್ರಿಯಾವರ್ಣನೆಯೇ ನಮ್ಮ ಪಾಲಿಗೆ ಬಿದ್ದಿರುವದು.

ದೇವರು ನಮ್ಮ ಕಣ್ಣಿಗೆ ಕಾಣಿಸದಿದ್ದರೂ ಆತನ ಅವರ್ಣನೀಯ ಹಾಗೂ ಅವ್ಯಕ್ತ ಚೇತನವಾದ ಬಲವೊಂದು ಚರಾಚರ ಜಗತ್ತಿನಲ್ಲಿ ರುವ ಸಕಲಪದಾರ್ಥಗಳಲ್ಲಿಯೂ ಹರಡಿರುವುದರಿಂದ, ಅದು ಇಂದ್ರಿ ಯಾತೀತವೆಂದು ಅರಿತು ಪ್ರಕೃತಿ ವರ್ಗವನ್ನು ತನ್ನ ಹತೋಟಿಗೆ ತೆಗೆ ದುಕೊಂಡಿರುವ ಒಂದು ಕಟ್ಟು ಕಟ್ಟಳೆಯೇ ಭಗವಂತನು ಎಂದು ಅರಿತುಕೊಳ್ಳಬೇಕು. ಪರಮಾತ್ಮನಲ್ಲಿಯೂ, ಆತನ ಕ್ರಿಯೆಯಲ್ಲಿಯೂ ನಂಬಿಕೆಯುಂಟಾಗಿ ಆತನಲ್ಲಿ ಮಮತೆ ಮೋಹವನ್ನು ತೋರಿಸಿದರೆ ಅದೇ ಭಕ್ತಿಯು. ಆ ಚಂಚಲ ಭಕ್ತಿಯುಂಟಾದರೆ ಸಾಕು, ಆತ್ಮಸಂದ ರ್ಶನವು ಲಭಿಸಿಯೇ ಲಭಿಸುವುದು. ಮಾನವನ ಸಂಪೂರ್ಣ ಪುರು ಷಾರ್ಥವು ದೊರತಿತೆಂದರೆ ಸಾಕು, ಅಂದೇ ಆತನು ಅಮರನಾಗುವನು, ಆತನಿದ್ದ ಜಾಗವೇ ನಾಕವಾಗುವುದು. ನಿಶ್ಚಲಭಕ್ತಿಯಿಂದ ಆತನಲ್ಲಿ ಮೊರೆಯಿಡುವುದೇ ಪ್ರಾರ್ಥನೆಯು. ಇದೇ ಸರ್ವಕ್ಕೂ ಮೂಲವು.

ಭಗವಂತನಲ್ಲಿ ತನ್ನ ಕೃತಜ್ಞತೆಯನ್ನು ಹೇಳಿಕೊಳ್ಳುವುದು, ಆತನ ಗುಣಗಳನ್ನು ಕೊಂಡಾಡುವುದು, ತನಗೆ ಬೇಕಾದ ಕೋರಿಕೆಗಳನ್ನು ಅರಿಕೆಮಾಡಿ ಫಲವನ್ನು ಬೇಡುವುದು ಪ್ರಾರ್ಥನೆಯು. ಅನಿತ್ಯವಾದ ಈ ಪ್ರಾಕೃತ ಶರೀರದಲ್ಲಿ ತೊಳಲಿಬಳಲುತ್ತಿರುವ ಚೇತನನು ಇಲ್ಲವೇ ಜೀವಾತ್ಮನು ಈ ಭವಬಂಧನದಿಂದ ಬಿಡುಗಡೆಯಾಗಿ ಭಗವಂತನ ಸಾಯುಜ್ಯವನ್ನು ಹೊಂದುವುದಕ್ಕಾಗಿ ಆತನನ್ನುದ್ದೇಶಿಸಿ ನಡೆಯಿಸುವ ಬೇಡಿಕೆಯಲ್ಲಿಯೇ ಪ್ರಾರ್ಥನೆಯಲ್ಲಿ ಪ್ರಧಾನವು. ಪರಮಾತ್ಮನ ಪ್ರಾರ್ಥ

ನೆಯಿಂದ ಪಡೆಯಬೇಕಾದ ಶ್ರೇಷ್ಠಪ್ರಯೋಜನವು. ಆತನ ತತ್ವವನ್ನು ಅರಿತುಕೊಳ್ಳುವುದು. ಪ್ರಾರ್ಥನೆಯಿಂದ ಮನೋನಿಗ್ರಹ, ಏಕಾಗ್ರಚಿತ್ತತೆ, ಪರಮಾತ್ಮನ ಜ್ಞಾನವು ಲಭಿಸಿ ಶಾರೀರಿಕ ಮಾನಸಿಕಾರೋಗ್ಯಗಳನ್ನು ಹೆಚ್ಚಿಸಿ ಕೊಡುವುದು. ಪ್ರಾರ್ಥನೆಯು ಒಂದು ಸತ್ಕರ್ಮವು, ಸದಾಭ್ಯಾಸವು. "ಲೂಟಿ ಮಾಡಲು ನಿನಗೆ ಶಕ್ತಿಯಿದ್ದರೆ ಪರಮಾತ್ಮನ ಸತ್ಯನಾಮವನ್ನು ಲೂಟಿಮಾಡು. ಹಾಗಿಲ್ಲದಿದ್ದರೆ ಮುಂದೆ ನೀನು ಮೃತನಾಗುವ ಸಮಯದಲ್ಲಿ ಪಶ್ಚಾತ್ತಾಪ ಪಡಬೇಕಾಗುವುದು." ಎಂದು ಕಬೀರದಾಸರು ಹೇಳಿರುವರು. ಈ ಕ್ರಿಯೆಗೆ ಅಳುಕುವವರು ಅಯೋಗ್ಯರು. "ನಾ ಯ ಮಾತ್ಮಾ ಬಲ ಹೀನೇ ನ ಲಭ್ಯ" ಎಂಬಂತೆ ಶಕ್ತಿವಂತನೇ ಇದಕ್ಕೆ ಯೋಗ್ಯನು. ಆಳವಾಗಿ ಮುಳುಗಿದವರಿಗೆ ಮಾತ್ರ ತಳದಲ್ಲಿರುವ ಮುತ್ತುಗಳು ಸಿಕ್ಕುವುವು. ಮೇಲೆ ಕುಳಿತಿದ್ದವರಿಗೆ ಬರೀ ಮಣ್ಣು. ಮುಂದೆಬರುವ ರೋಗದಲ್ಲಿ ಕಡುಬೇನೆಯು ದೂರವಾಗಬೇಕಾದರೆ ಈ ಕ್ರಿಯೆಯು ಅಗತ್ಯವು.

"ಪ್ರಾರ್ಥನೆಯು ದೈವೀ ಸಹಾಯ. ಧೈರ್ಯ, ಮಾನವೀಯತೆಯನ್ನು ಉತ್ಪತ್ತಿ ಮಾಡುತ್ತದೆ." ಎಂದು ದಯಾನಂದ ಸರಸ್ವತಿಯವರು ನುಡಿದಿರುವರು. ನಾವು ಧೈರ್ಯಗೆಟ್ಟಾಗ, ಪಶುತ್ವಕ್ಕೆ ಇಳಿದಾಗ ಸಹಾಯವು ದೊರಕುವುದು ಭಗವಂತನಿಂದಲ್ಲದೆ ಮತ್ತಿನ್ನಾರಿಂದಲೂ ಅಲ್ಲವು. "ಆರಿಗಾರಿಲ್ಲವಾಪತ್ಕಾಲದೊಳಗೆ ವಾರಿಜಾಕ್ಷನ ನಾಮವ ನೆನೆಕಂಡೆ ಮನವೆ" ಎಂದು ಹರಿದಾಸರೂ, "ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯಾ. ಚಂದ್ರಕುಂದೆ ಕುಂದುವುದಯ್ಯಾ. ಚಂದ್ರಂಗೆ ರಾಹು ಅಡ್ಡಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೇ? ಅಂಬುಧಿಯು ಮುನಿ ಅಪೋಷನವ ಕೊಂಬಲ್ಲಿ ಚಂದ್ರಮನಡ್ಡ ಬಂದನೇ? ಆರಿಗಾರೂ ಇಲ್ಲ. ಕೆಟ್ಟವಂಗೆ ಕೆಳೆ ಇಲ್ಲ. ಜಗದ ನೆಂಟ ನೀನೆ ಅಯ್ಯಾ ಕೂಡಲಸಂಗಮದೇವ" ಎಂದು ವಚನಕಾರರ ಮುಂದಾಳು ಬಸವಣ್ಣನವರೂ ಹೇಳಿರುವರು. ಇವರು ತಾವು ಅನುಭವದ ಕಡಲಿನಲ್ಲಿ ಈಸಾಡಿ ಅಲ್ಲಿನ ಆಳಲಿಕೆ ಬಳಲಿಕೆಗಳನ್ನೂ, ಕಾವುನೋವುಗಳನ್ನೂ ಪರರಿಗೂ ನೀಡಿ ತಮ್ಮ ನಾಡನ್ನು ಧನ್ಯವಾಗಿ ಮಾಡಿದ್ದಾರೆ. ಕಷ್ಟದಲ್ಲಿ ಅಪತ್ಕಾಲದಲ್ಲಿ ಭಗವಂತನು ಮಾತ್ರ ನಮ್ಮನ್ನು ಕೈಬಿಡದೆ ನಮಗೆ ಕಾಪುಗಾರನಾಗಿರಬೇಕಾದರೆ ನಮಗೆ ಪರಮ ಸಾಧನವು ಅಚಲಭಕ್ತಿಯಿಂದ ಕೂಡಿದ

ಪ್ರಾರ್ಥನೆಯು. ನಾವು ಕೃತಜ್ಞತೆಯಿಂದ, ವಿನಯದಿಂದ, ಭಕ್ತಿಯಿಂದ ಪ್ರಾರ್ಥನೆ ಮಾಡಿದರೆ ಅದು ನಮ್ಮ ಮನಸ್ಸನ್ನು ಪರಿಷ್ಕರಿಸುತ್ತದೆ ಮತ್ತು ಅಂತಶ್ಶುದ್ಧಿಯು ದೊರಕುತ್ತದೆ. ನಮ್ಮ ಬಗೆಬಗೆಯ ಸಂದೇಹ ಸಂಶಯಗಳನ್ನು ಪರಿಹರಿಸಿ, ನಮ್ಮ ಬಾಳಪಯಣವನ್ನು ನಿರಾತಂಕವಾಗಿ ಮಾಡಬೇಕಾದರೆ, "ನನ್ನ ಜನಕನಾದ ಓ ಸ್ವಾಮಿಯೇ ಆಲಿಸು, ಪಾಲಿಸು. ನನಗೆ ಸಹಾಯ ನೀಡು. ಹತ್ತಿರಕೆ ಬರುಬರುತ್ತ ನಿಶ್ಶಕ್ತನೂ, ಆಯಾಸಿಯೂ ಆಗುವೆನು. ನಿನ್ನ ಮಗುವನ್ನು ತೆಗೆದುಕೊ ಭಗವಂತನೇ. ಸನ್ಮಾರ್ಗವನ್ನು ನಾನು ಬಿಟ್ಟುಹೋಗದಂತೆ ಮಾಡಲು ನೀನೇ ಸರಿಯಾದ ಮಾರ್ಗದರ್ಶಕನು ಹಾಗು ಮುಂದಾಳು. ನಿನ್ನ ಪ್ರೀತಿಯು ನನ್ನನ್ನು ಅತ್ತಲಿತ್ತ ಸುತ್ತಿ ಸುಳಿದಾಡದಂತೆ ಮಾಡಿ ನಿನ್ನ ಕಡೆಗೆ ಒಯ್ಯಲಿ" ಎಂಬ ದೀನ ಕೋರಿಕೆಯೇ ಸುಗಮವಾಹನ. ಮರಣಭೀತಿ, ಐಹಿಕ ಸಂಪದಾದಿಗಳ ವ್ಯಯ ಭೀತಿಯು ಆತ್ಮಪರಿಶುಭ್ರತೆಗೆ ಕಳಂಕವು. ಈ ಕಳಂಕವನ್ನು ಅಳಿಸಿದರೆ ತಾನೇ ಪ್ರಾರ್ಥನೆಯು ಚೆನ್ನಾಗಿ ಮನದಲ್ಲಿ ಬೇರೂರುತ್ತದೆ.

ಗ್ರಂಥವನ್ನು ಬರೆಯಬೇಕಾದರೆ, ಯುದ್ಧಕ್ಕೆ ಹೊರಡಬೇಕಾದರೆ, ಸಾಹಸ ಕಾರ್ಯವನ್ನು ಕೈಗೊಳ್ಳಬೇಕಾದರೆ ತೀರ್ಥಯಾತ್ರೆ ಮಾಡಬೇಕಾದರೆ ಮತ್ತೆ ಯಾವ ಕಾರ್ಯಕ್ಕೆ ಆಗಲೀ ಮೊದಲು ದೇವರ ಪ್ರಾರ್ಥನೆ. ಅನಂತರ ತಮ್ಮ ಕ್ರಿಯಾ ಪ್ರದರ್ಶನ. ಇದು ನಮ್ಮ ಆಸ್ತಿಕರ ನಾಡಿನಲ್ಲಿ ಬಹು ಪ್ರಾಚೀನದಿಂದ ಬಂದಿದೆ. ಹಿಂದೆ ಆರ್ಯರು ನಿಂತರೆ, ಕುಂತರೆ, ತಿಂದರೆ, ಎದ್ದರೆ ಪ್ರಾರ್ಥನೆಯನ್ನು ಆರಂಭಿಸುತ್ತಿದ್ದರು. ಮತಾಚಾರ್ಯರು ತಮ್ಮ ತಮ್ಮ ಹಾದಿಯಲ್ಲಿ ದೇವರ ಪ್ರಾರ್ಥನೆಯನ್ನು ಮಾಡುತ್ತಿದ್ದರು. ರಜಪೂತವೀರರು ತಮ್ಮ ಜಯದ ವೇಳೆಯಲ್ಲಾಗಲೀ ಸೋತಾಗ ಅಗ್ನಿ ಪ್ರವೇಶದ ಸಂದರ್ಭದಲ್ಲಾಗಲೀ ದೇವರ ಸ್ತೋತ್ರ. ಕಾವ್ಯದ ಆದಿಯಲಿ ಸಾಹಿತ್ಯ ಸೇವಕರು 'ಶುಭಮತಿಯ ನೀಡು ಎಮ್ಮಯ ಕಾವ್ಯ ರಚನೆಗೆ' ಎಂಬ ಮಂಗಳನುಡಿ. ಅಕಬರ ಔರಂಗಜೇಬರ ದೈವಭಕ್ತಿಯು ಮಿಗಿಲಾದುದು. ಸಂಜೆಯಾದ ತಕ್ಷಣವೇ ಕುದುರೆಯನ್ನಿಳಿದು ಭಗವಂತನ ಸ್ತೋತ್ರವನ್ನು ಅವನು ಎಲ್ಲಿಯೇ ಇರಲಿ, ಒಬ್ಬಂಟಿಗನಾಗಿರಲಿ, ಪರಿವಾರ ಸಮೇತವಾಗಿರಲಿ, ತಪ್ಪದೆ ಮಾಡುತ್ತಿದ್ದ ಔರಂಜೇಗಬನ ಹೆಸರನ್ನು ಯಾರು ತಾನೇ ಕೇಳಿಲ್ಲ? ಸಿರಿಸಂಪತ್ತಿನ

ರುವ ಆರ್ಯರ ಆದರಣೆಗಿಂತ ಪರಮೇಶ್ವರನಲ್ಲಿ ಹೆಚ್ಚಿ... ಬಾಂಧ್ವ ಮೋಹವನ್ನು ಇಟ್ಟ ಮಾನವನೇ ಪೂಜಾತ್ಮನು. "ಭಗವಂತನನ್ನು ಯ... ಗಲೂ ಏಕಾಗ್ರತೆಯಿಂದ ಧ್ಯಾನಿಸಿದವನಿಗೆ ಮೋಕ್ಷವು ಸಿಕ್ಕುವುದು. ದೈವಸ್ಮರಣರಹಿತನಾದ, ಮೇಲ್ತರದ ಮಾನವನೆಂದು ಹೇಳಿಕೊಳ್ಳುವನ ಗತಿಯೇನು? ಅತ್ಯಂತ ಎತ್ತರವಾದ ಪರ್ವತದ ಮೇಲ್ಭಾಗವು ಹಾವು, ಚೇಳುಗಳಿಗೆ ಆವಾಸಸ್ಥಾನ. ಆದರೆ ಅದರ ಬುಡವು ಕಬ್ಬು ತೆಂಗು ಇತ್ಯಾದಿ ಒಳ್ಳೆಯ ಬೆಳೆಗಳಿಗೆ ನೆಲೆ. ಏಕಚಿತ್ತದಿಂದ ಭಗವಂತನ ಧ್ಯಾನ ದಲ್ಲಿರುವವನ ಆತ್ಮವು ಪವಿತ್ರವಾದುದು." ಎಂದು ತುಲಸಿದಾಸರು ನುಡಿದಿರುವರು.

ಈ ಸಂದಿಗ್ಧ ಸಮಯದಲ್ಲಿ ವಿಶ್ವವೇ ಉತ್ಕಟಪರಿಸ್ಥಿತಿಗೊಳಗಾಗಿ ಅಶಾಂತಿ ಕರಾಳ ದೇವತೆಯ ಕಾಟಕ್ಕೆ ಸಿಲುಕಿದೆ. ಈ ವೇಳೆಯಲ್ಲಿ ಜಗತ್ತಿನ ಪ್ರತಿಯೊಂದು ಜೀವಿಯೂ ತಲ್ಲಣಗೊಳ್ಳುತ್ತಿದೆ. ಇದರ ಅವಶ್ಯ ಮುದ್ದು ವಿಶ್ವಶಾಂತಿಗಾಗಿ ಜಗದೀಶ್ವರನಲ್ಲಿ ವಿನಮ್ರ ಪ್ರಾರ್ಥನೆಯು. ಪ್ರಾರ್ಥನೆಯೆಂದರೆ ನಮ್ಮಲ್ಲಿರುವ ತಪ್ಪುನೆಪ್ಪುಗಳನ್ನೂ, ನಿರ್ಬಲತೆಯನ್ನೂ ಮಹಾಮಹಿಮನ ಮುಂದೆ ಹೇಳಿ ಅವುಗಳನ್ನು ಒಪ್ಪಿಕೊಳ್ಳುವುದು. ಪ್ರತಿಯೊಬ್ಬರೂ ತಮ್ಮ ಹೃದಯವನ್ನು ನಿರ್ಮಲಮಾಡಿಕೊಂಡು ಆತನನ್ನು ಪ್ರಾರ್ಥಿಸಬೇಕು, ಎಂಬ ಮಹಾತ್ಮಾಗಾಂಧಿ ವಚನಾಮೃತ ವಂತೆ ನಾವು ತ್ರಿಕರಣ ಪೂರ್ವಕವಾಗಿ ಆಚಾರವಂತರಾಗಬೇಕು. ನಮ್ಮ ನಮ್ಮ ಕರಾಳಕಾರ್ಯಗಳಿಂದಲೇ ಜಗತ್ತು ಈ ತೆರಕ್ಕೆ ಪರಿವರ್ತನೆಯಾಗಿದೆ. ನಮ್ಮ ಕುಂದು ಕೊರತೆಗಳನ್ನು ಹೋಗಲಾಡಿಸಿ, ನಮ್ಮನ್ನು ಸಮನ್ವಯ ವ್ಯಕ್ತಿಗಳಾಗುವಂತೆ ಮಾಡುವ ಶಕ್ತಿಯು ಭಗವಂತನಲ್ಲಿದೆ. ನಮ್ಮ ಪ್ರಾರ್ಥನೆಗಳನ್ನು ಆಲಿಸಿಲಾಲಿಸಿ, ನಮ್ಮ ಮನೋರಥಗಳನ್ನು ಸಂಪೂರ್ಣವಾಗಿ ಈಡೇರಿಸುವನು. ಆದರೆ ನಮ್ಮ ಸತ್ವ ಪರೀಕ್ಷೆಗಾಗಿ ನಮಗೆ ನಿರಾಶೆಯನ್ನುಂಟು ಮಾಡುವ ಪ್ರದರ್ಶನವನ್ನು ತೋರಿಸಿದರೂ, ನಾವು ಎದೆಗೆಡದೆ ಮುನ್ನುಗ್ಗಿದರೆ ಆತನು ನಮ್ಮ ಅಭಿಲಾಷೆಯನ್ನು ತಿಳಿದುಕೊಳ್ಳದೆ ಬಿಡನು. ಜಗದೊಡೆಯನಲ್ಲಿ ನಂಬಿಕೆ ವಿಶ್ವಾಸವನ್ನು ನಾವಿಂದಿಟ್ಟರೆ, ಬಂದಿರುವ ಅಪಾಯವು ಕ್ರಮಕ್ರಮೇಣ ಚೆದರಿ ಹೋಗುವದು. ಆತನ ರಕ್ಷಣೆಯ ರೆಕ್ಕೆಗಳು ಪ್ರತಿಯೊಬ್ಬನ ತಲೆಯ ಮೇಲೆ ಹರಡಿಕೊಂಡು ಕಾಪಾಡುತ್ತವೆ. ಆತನಲ್ಲಿಟ್ಟ

ರುವ ನಂಬಿಕೆ ಮತ್ತು ಪ್ರೀತಿಯಿಂದ ನಾವು ನಿದ್ರೆಮಾಡುತ್ತಿರಲಿ, ಎಚ್ಚರವಾಗಿರಲಿ, ಆತನು ಮಾತ್ರ ನಮ್ಮನ್ನು ಜೋಪಾನದಿಂದ ನೋಡಿ ಯೇನೋಡುವನು. ಯಾವಾಗಲೂ ದೈವ ಭಕ್ತಿಯನ್ನು ತಮ್ಮ ತಮ್ಮ ಹೃದಯದಲ್ಲಿ ಇಡಿರಿ. ಆಗ ನಿಮಗೆ ಯಾವ ಬಗೆಯ ಕಷ್ಟವೂ ಬರುವದಿಲ್ಲ. ಇದು ಮಾತ್ರ ಸತ್ಯವು, ಎಂಬು ಹೇಳಿರುವ ರಮಣಮಹರ್ಷಿಯ ಅಮೃತವಾಣಿಯು ಸಕಲರ ಮನೋಮಂದಿರದಲ್ಲಿ ನೆಲಸಲಿ.

ನಮ್ಮ ನಾಡು ಸಕಲಮತಗಳ ಬೀಡು; ಸರ್ವ ಧರ್ಮಗಳ ನೆಲೆವೀಡು. ಪರಿಸ್ಥಿತಿಯು ಹೀಗಿರುವಲ್ಲಿ "ಓಂ ಕೃಷ್ಣಾರ್ಪಣ' ಎನ್ನೋಣವೇ?" 'ಓಂಶಂಕರಾರ್ಪಣ' ಎನ್ನೋಣವೇ? 'ಓಂ ಜಿನೇಶ್ವರಾರ್ಪಣ' ಎನ್ನೋಣವೇ? 'ಓಂ ಬುದ್ಧಾರ್ಪಣ' ಎನ್ನೋಣವೇ? ಎಂಬ ಶಂಕೆಯು ಬರಬಹುದು. 'ಆ ದೇವ ಈ ದೇವ ಮಾದೇವನೆನಬೇಡ। ಆ ದೇವರ ದೇವ ಭುವನ ಪ್ರಾಣಿಗಳ। ಗಾದಪನೇ ಸರ್ವಜ್ಞ॥ ಎಂಬಂತೆ ಈ ಸೃಷ್ಟಿಗೆಲ್ಲಕ್ಕೂ ಆದಿಯಾದ ಚೈತನ್ಯ ಸ್ವರೂಪಿಯನ್ನು ಸ್ಮರಿಸುವುದು ಪ್ರತಿಯೊಬ್ಬನ ಕರ್ತವ್ಯವು. ಶ್ರದ್ಧಾ ಭಕ್ತಿಯಿಂದೊಡಗೂಡಿದ ಪ್ರಾರ್ಥನೆಯು ಅಗತ್ಯವು. ಭಾರತದಲ್ಲಿನ ಪ್ರತಿಯೊಬ್ಬ ವ್ಯಕ್ತಿಯೂ ನಮ್ಮ ನಮ್ಮ ಸೋದರರು. ಯಾರಿಗೂ ಕೂಡ ನೋವನ್ನು ನೀಡದೆ ಇರುವುದು ನಮ್ಮ ಧರ್ಮದ ಶ್ರೇಯೋಭಿವೃದ್ಧಿಗೆ ರಾಜಮಾರ್ಗವು. ಕ್ಲೇಶಪಡುವರಲ್ಲಿ ಅನುತಾಪವನ್ನು ತೋರಿ ಭಗವತ್ಸಹಾಯವನ್ನು ಬಯಸಬೇಕು. ಬರೀ ಪ್ರಾರ್ಥನೆಯಿಂದ ಪರಾರ್ಥವು ಸಿಗುವುದಿಲ್ಲವು. ಪ್ರಾರ್ಥನೆಯು ಭಕ್ತಿಯ ಮೇಲೂ, ಭಕ್ತಿಯು ನಡತೆಯ ಮೇಲೂ ಅವಲಂಬನವಾಗುತ್ತವೆ.

"ತ್ರಿಕರಣ ಪೂರ್ವಕವಾಗಿ ನಮ್ಮ ನಡೆನುಡಿಗಳು ಶುದ್ಧಿಯಾಗಿದ್ದರೆ ತಾನೇ ತಾನಾಗಿ ಭಕ್ತಿಯೆಂಬುದು ಪರಿಪೂರ್ಣವಾಗುವುದು. ಭಕ್ತಿಯ ಪರಿಪೂರ್ಣತೆಯಿಂದ ಪ್ರಾರ್ಥನೆಯು ಸುಲಲಿತವಾಗಿ ನೆರವೇರುತ್ತದೆ. ಭಗವತ್‌ಪ್ರೇಮವೆಂಬ ಸಮುದ್ರ ದೊಳಕ್ಕೆ ಧುಮುಕಿ ಪಾವನನಾಗು. ಹೆದರಿಕೆ ಬೇಡ. ಹುಟ್ಟು ಸಾವುಗಳನ್ನು ಅಳಿಸುವ ಅವಿನಾಶಿಯಾದ ಸವಿಗಡಲೇ ಭಗವತ್‌ಪ್ರೇಮವು. ಮೂಢರ ಮಾತಿಗೆ ಕಿವಿಗೊಡದೆ ಭಗವಂತನ ಧ್ಯಾನ ಮಾಡು." ಎಂಬ ರಾಮಕೃಷ್ಣ ವಚನಾಮೃತದ ನೆನಪಿನಿಂದ ಭಗವಂತನಲ್ಲಿ ಪ್ರೇಮ ವಿಡಲಿ. ಸಾಮೂಹಿಕ

"ಯಂಶೈವಾಸ್ಸ ಮುಪಾಸತೇ ಶಿವಇತಿ ಬ್ರಹ್ಮೇತಿವೇದಾಂತಿನಃ ಬೌದ್ಧ ಬುದ್ಧಾ ಇತಿಪ್ರಮಾಣ ಪಟವಃ ಕರ್ತೇತಿ ನೈಯಾಯಿಕಾಃ। ಅರ್ಹನ್ನಿತ್ಯತಿ ಜೈನ ಶಾಸನರತಾಃ ಕರ್ಮೇತಿ ಮೀಮಾಂಸಕಾಃ । ಸೋಯಂ ವೋವಿಧವಾತು ವಾಂಛಿತಫಲಂ ತ್ರೈಲೋಕ್ಯ ನಾಥೋ ಹರಿಃ ॥" ಪ್ರಾರ್ಥನೆಯನ್ನಾಗಲೀ, ಇಲ್ಲವೇ, ವಚನದಲ್ಲಿ ನಿಮ್ಮ ನಾಮಾಮೃತ ತುಂಬಿ। ನಯನದಲ್ಲಿ ನಿಮ್ಮ ಮೂರ್ತಿ ತುಂಬಿ। ಮನದಲ್ಲಿ ನಿಮ್ಮ ನೆನಹು ತುಂಬಿ। ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ। ಕೂಡಲಸಂಗಮ ದೇವಾ ನಿಮ್ಮಪಾದ ದೊಳಗಾನು ತುಂಬಿ॥ ಎಂಬುದನ್ನಾಗಲೀ ಅಥವಾ ಯಂಬ್ರಹ್ಮಾ ವರುಣೇಂದ್ರರುದ್ರ ಮರುತಃ । ಸ್ತುನ್ವಂತಿದಿವ್ಯೈಃ ಸ್ತವೈಃ । ವೇದೈಸಾಂಗಪದ ಕ್ರಮೋಪನಿಷದೈ । ಗಾಯಂತಿ ಯಂಸಾಮಗಾಃ। ಧ್ಯಾನಾ ವಸ್ಥಿತ ತದ್ಗತೇನ ಮನಸಾ। ಪಶ್ಯಂತಿ ಯಂ ಯೋಗಿನೋ। ಯಸ್ಯಾಂತಂ ನ ವಿದುಃ ಸುರಾಸುರಗಣಾ । ದೇವಾತಸ್ಮೈನಮಃ ॥ ಎಂಬ ಗೀತಾನುಡಿಯನ್ನಾಗಲೀ ಪಠಿಸಬೇಕು.

ಪ್ರಾರ್ಥನೆಯ ಹಂಬಲಿಕೆಯು ವೇಗವಾಗಿದ್ದಷ್ಟೂ ಫಲವು ಸುಲಭವಾಗಿ ಲಭಿಸುವದು. "ಉದಯದಲೆದ್ದು ನಿಮ್ಮ ನೆನೆವೆನಯ್ಯ. ನಿಮ್ಮ ಬರವ ಹಾರುತ್ತಿರ್ಪೆನಯ್ಯ. ಹಸೆ ಹಂದರವನಿಕ್ಕಿ ನಿಮ್ಮಡಿಗಳಿಗೆಡೆಮಾಡಿಕೊಂಡಿಪ್ಪೆನಯ್ಯ, ಚೆನ್ನಮಲ್ಲಿಕಾರ್ಜುನಾ ನಿನಾವಾಗಬಂದಿಹೆ" ಎಂದು ನುಡಿದು ತತ್ವವನ್ನು ಕ್ರಿಯಾ ಜಗತ್ತಿನಲ್ಲಿ ಪ್ರದರ್ಶಿಸಿ ಬೆಳ್ಳಂ ಜ್ಯೋತಿಯಾದ ಅಕ್ಕಮಹಾದೇವಿಗೆ ತಕ್ಕ ಫಲವು ಸಿಕ್ಕಿತು. ಪರಮೇಶ್ವರನು ಆಪ್ತಕಾಮನು. ಈತನಿಗೆ ಸಮ್ಮುಖರಾಗಿ ನಡೆದು ಭಕ್ತಿಯಿಂದ ಈತನನ್ನು ನಾವು ಭಜಿಸಿದರೆ ಅಜ್ಞಾನ ತಿಮಿರವು ತೊಲಗಿ, ಜ್ಞಾನಜ್ಯೋತಿಯೂ, ಸಹಜಾನುಭವವೂ ಸುಲಭವಾಗಿ ಸಿಗುವುದು. ಈತನಿಗೆ ವಿಮುಖರಾಗಿ ನಡೆದರೆ ಅಜ್ಞಾನ ತಿಮಿರವು ನಮ್ಮನ್ನು ಆವರಿಸಿಕೊಂಡು ನಮ್ಮನ್ನು ದುಃಖಿಗಳನ್ನಾಗಿ ಮಾಡುವುದು. ಭಗವಂತನ ಪ್ರೇಮವನ್ನು ಕದರುಗುಟ್ಟುತ್ತಿರುವ ಎಲೆಗಳಲ್ಲಿಯೂ ಚಿಲಿಪಿಲಿಗುಟ್ಟುತ್ತಿರುವ ಹಕ್ಕಿಗಳಲ್ಲಿಯೂ ನೋಡಿದರೆ ಆತನ ಮಹಿಮೆಯು ಅರಿವಾಗುವುದು.

ನೀಲಾಕಾಶವು ಭಗವಂತನ ಕ್ರಿಯಾ ವೈಚಿತ್ರ್ಯಕ್ಕೆ ಮತ್ತು ಹಕ್ಕಿಗಳ ಗೂಡು ಭಗವಂತನ ಕೃಪಾ ಮಹಿಮೆಗೆ ಕುರುಹು. ಈತನು ವೀರರನ್ನು ಮೇಲಕ್ಕೆತ್ತುವನು. ಇಡೀ ಜಗತ್ತಿನಲ್ಲಿ ಯಶವೆತ್ತ ಪೂಜ್ಯ ಗಾಂಧೀಜಿಯು ಪ್ರಾರ್ಥನೆಯಿಂದ ಜಗದಾಚಾರ್ಯ ಪೀಠವನ್ನೇರಿರು

ಮರು. ಪ್ರಾರ್ಥನೆಯ ಆಧಾರಗಂಬದ ಮೇಲೆಯೇ ಗಾಂಧಿಯು ತನ್ನ ದಿನಚರಿಯ ಬಾಳಿನ ಕ್ರಿಯೆಗಳನ್ನು ಇರಿಸಿದ್ದರು. ಸಾಮಾನ್ಯರಿಗೆ ಕಷ್ಟವು ಬಂದಾಗ ಆದರ ಪರಿಹಾರಕ್ಕೆ ಪ್ರಾರ್ಥನೆಯು; ಆದರೆ ಗಾಂಧಿಯವರಿಗೆ ಆತ್ಮಜ್ಞಾನವನ್ನು ನೀಡಿ ದೇಹಕ್ಕೆ ಶಕ್ತಿಯನ್ನು ಕೊಡುವ ಅಕ್ಷಯ ಪಾತ್ರೆಯು ಪ್ರಾರ್ಥನೆಯು. "ಅಕ್ಕರವು ಲೇಖಕ್ಕೆ ತರ್ಕವಾದಕ್ಕೆ । ಮಿಕ್ಕ ಓದುಗಳು ತಿರುಪೆಗೆ, ಮೋಕ್ಷಕ್ಕೆರ । ಡಕ್ಕರವೆ ಸಾಕು ಸರ್ವಜ್ಞ ॥" ಎಂಬುದರ ಸತ್ಯಸಾರಾರ್ಥವೇ ಮಹಾತ್ಮರ ಪ್ರಾರ್ಥನೆಯ ಪ್ರಾಪ್ತಿಯು. ಪ್ರಾರ್ಥನೆಯು ದಿನಚರಿಯ ಊಟ ಉಪಚಾರವು. ಒಂದು ಹೊತ್ತು ಊಟ ಉಪಚಾರವನ್ನು ತಪ್ಪಿಸಿಯಾರು, ಆದರೆ ಪ್ರಾರ್ಥನೆಯನ್ನು ಬಿಟ್ಟು ಜೀವಿಸಲಾರರು. ಭಗವಂತನು ಅವರ ಜೀವದ ಜೀವಾಳ, ಅವರ ಸಕಲ ಸರ್ವಸ್ವವು. ದಿನಚರಿಯ ಆತ್ಮ ನಿವೇದನವಾದ ಪ್ರಾರ್ಥನೆಗೆ ಜಾಗವನ್ನು, ಲಿಂಗವನ್ನು, ವಯಸ್ಸನ್ನು ನೋಡರು. ಸಗುಣ ಮೂರ್ತಿಯಾದ ಭಗವಂತನ ಕಲ್ಯಾಣಗುಣಗಳಲ್ಲಿ ಆರ್ತತ್ರಾಣ ಪರಾಯಣತೆಯೇ ಪ್ರಧಾನವು. ಅಂತು ಭಗವಂತನ ಧ್ಯಾನವು ಗಾಂಧಿಜಿಯವರಿಗೆ ಜೀವವು. ಈ ಸದಾಭ್ಯಾಸದಿಂದಲೇ ಇವರು ಇಂದು ವಿಶ್ವ ವಿರಾಡ್ರೂಪವ್ಯಕ್ತಿಯಾಗಿದ್ದಾರೆ. ನಮಗೆಲ್ಲರಿಗೂ ಸಕಲ ಸೌಭಾಗ್ಯವನ್ನು ನೀಡುವ ಅಮೃತ ಕಲಶವು ಪ್ರಾರ್ಥನೆಯು.

"ಕರುಣಾಳು ಬಾ ಬೆಳಕೆ । ಮುಸುಕಿದೀ ಮಬ್ಬಿನಲಿ । ಕೈ ಹಿಡಿದು ನಡೆಸೆನ್ನನು । ಇರುಳು ಕತ್ತಲೆಯ ಗವಿ ಮನೆದೂರ ಕನಿಕರಿಸಿ । ಕೈ ಹಿಡಿದು ನಡೆಸೆನ್ನನು । ಹೇಳಿ ನನ್ನಡಿಯಿಡಿಸು ಬಲುದೂರ ನೋಟವನು । ಕೇಳೆನೊಡನೆಯೆ ಸಾಕು ನನಗೊಂದು ಹೆಜ್ಜೆ । ಮುನ್ನ ಇಂತಿರದಾದೆ ನಿನ್ನ ಬೇಡದೆ । ಕೈ ಹಿಡಿದು ನಡೆಸು ಎನುತ । ನನ್ನ ದಾರಿಯ ನಾನೆ ನೋಡಿ ಹಿಡಿದೆನು ಇನ್ನು । ಕೈ ಹಿಡಿದು ನಡೆಸು ನೀನು । ಮಿರುಗು ಬಣ್ಣಕೆ ಬೆರೆತು ಭಯ ಮರೆತು ಕೊಬ್ಬಿದೆನು । ಮೆರೆದಾಯ್ತು ನೆನೆಯದಿರು ಹಿಂದಿನದೆಲ್ಲ । ಇಷ್ಟು ದಿನ ಸಲಹಿರುವೆ ಮೂರ್ಖನನು ಮುಂದೆಯೂ । ಕೈ ಹಿಡಿದು ನಡೆಸಲಿಹೆಯಾ? । ಕಷ್ಟದಡವಿಯ ಕಳೆದು, ಬೆಟ್ಟ ಹೊಳೆಗಳ ಹಾದು । ಇರುಳನ್ನು ನೂಕದಿಹೆಯಾ? । ಬೆಳಗಾಗಿ ಹೊಳೆಯದೇ ಹಿಂದೊಮ್ಮೆ ನಾನೊಲಿದು । ಈ ನಡುವೆ ಕಳೆಕೊಂಡ ದಿವ್ಯ ಮುಖ ನಗುತ ।" ಎಂಬ ಪ್ರಾರ್ಥನೆಯಿಂದ ಮುಂಬರಿಯೋಣ.

---

# ಶ್ರೀಮೌನೇಶ್ವರವರ ವಚನ ಹಾಗು ಕಾಲ ವಿಚಾರ.

(ಲೇಖಃ—ಶ್ರೀಯುತ ಮುಸಳಿ ಜೀವಣ್ಣ-ಚಿಮ್ಮಲಗಿ)

ನಿಜಾಮು ಇಲಾಖೆಯಲ್ಲಿ ಸುರಪುರ ತಾಲೂಕಿನಲ್ಲಿ ಗೋನಹಾಲ (ಗೋನಾಲಪುರ) ಪುರವೆಂಬ ಹಳ್ಳಿ ಇರುವದು. ಅಲ್ಲಿಯೇ ಶ್ರೀ ಮೌನ ಪ್ರಭುಗಳವರು ಹುಟ್ಟಿದರು. ಇವರ ತಂದೆ ತಾಯಿಗಳ ಹೆಸರು ಹಾವಪ್ಪ ಹಾವಕ್ಕ ಎಂಬವರು. ಹಾವಪ್ಪನು ಜಾತಿಯಿಂದ ಪಂಚಾಳನಿದ್ದು, ಕರ್ಮಹರ (ಕಮ್ಮಾರ) ಕೆಲಸಮಾಡುತ್ತಿದ್ದನು. ಹಾವಕ್ಕ ಆದಿಲಿಂಗೇಶನ ವರದಿಂದ ಪಡೆದ ಆ ಮೌನ ಶಿಶುವು ದಿನ ದಿನಕ್ಕೆ ಬೆಳೆದು ಬಾಲ್ಯದಲ್ಲಿ ಕಾಲಿಟ್ಟು ಅನೇಕ ಬಾಲಲೀಲೆಗಳನ್ನು ಮಾಡಿದನು. ಮುಂದೆ ಹಾಗೇ ಪವಾಡಗಳನ್ನು ಮಾಡುತ್ತಾ ಮಾಡುತ್ತಾ ಮರವಿ, ಲಿಂಗನಬಂಡಿ, ಛಬ್ಬಿ, ಮುಂತಾದವುಗಳಲ್ಲಿ ತನ್ನ ಹಿರಿಗುರುತುಗಳನ್ನಿಟ್ಟು, ಕಲ್ಯಾಣ ನಗರದಲ್ಲಿಯೂ ಕೆಲವು ವಚನಾಮೃತಗಳನ್ನು ಹೇಳಿ ಕೊನೆಗೆ ಕೈಲಾಸ ಕಡೆಯ ದ್ವಾರ ತಿಂಥಿಣಿಯ ಗವಿಯಲ್ಲಿ ಹೊಕ್ಕರು.

ಶ್ರೀ ಮೌನೇಶ್ವರವರ ವಚನಗಳು ಅತಿ ಮಹತ್ವವಾದವುಗಳಾಗಿವೆ. ಇದನ್ನೇ ಒಬ್ಬ ಕವಿಯು ಒಳ್ಳೆ ಸರಸವಾಗಿ * ಭಾಮಿನಿ ಷಟ್ಪದಿಯಲ್ಲಿ ಹೀಗೆ ಹೇಳಿದ್ದಾನೆ.

ಬೋಧಿಸಿಯೆ ಪೇಳಿದನು ವಚನವ।
ವೇದಕಿಮ್ಮಡಿ ಬೋಧವಾಕ್ಯವು ಗಾದೆಮಾತಲ್ಲ॥

ಎಂದ ಬಳಿಕ ಅವರ ವಚನಗಳ ಮಹತ್ವವು ಎಷ್ಟಿದೆ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

॥ ವಚನ ॥ ಹೆಣ್ಣಿನ ಮೇಲಣ ಆಶೆ। ಸುಣ್ಣದ ಕಲ್ಲಿನ ರಾಶಿ। ಕಣ್ಣಿಲೆ ನೋಡಿ ಬಳಲುವ ಪಾಪಿಗೆ। ತಣ್ಣೀರೊಳಗೆ ಬಿದ್ದ ತೆರನಂತೆ। ಇವರಿಗೆ ಸನ್ಯಾಸಿಗಳೆಂಬ ಬಿರುದೇಕೊ। ಇವರಿಗೆ ಸನ್ನಿಹತ್ತಿದೇನೋ ಬಸವಣ್ಣಾ ॥ ೧ ॥

---

೨ * "ಶ್ರೀಮೌನೇಶ್ವರ ಬಾಲಲೀಲೆ" ಎಂಬ ಗ್ರಂಥದಲ್ಲಿ ಪುಟ೩೪೪

ಉಂಬಂತೆ ಉಣಬೇಕು। ಕೊಂಬಂತೆ ಕೊಳಬೇಕು। ಬಂದವ ನುಂಡು ಬ್ರಹ್ಮಚಾರಿ ಆಗುವದು । ಸಂಗನ ಶರಣರ ಯಾತ್ರೆಯು, ಲೋಕದ ಯಂಗ್ಯಾಟವ ನೋಡೋ ಬಸವಣ್ಣ ॥ ೨ ॥

ಹೀಗೆ ಅವರು ಹೆಣ್ಣಿನ ಬಗ್ಗೆ ಸರಸವಾದ ನುಡಿಗಳಲ್ಲಿ ಹೇಳಿ, ಮುಂದೆ ನಡೆನುಡಿಗಳ ಬಗ್ಗೆ ಆಚಾರ ಪ್ರಧಾನವಾದ ತತ್ವಗಳನ್ನು ಬೋಧಿಸಿದ್ದಾರೆ. "ಬಂದುದ ನುಂಡು ಬ್ರಹ್ಮಚಾರಿಯಾಗಿರುವದು ಸಂಗನ ಶರಣರ ಯಾತ್ರೆಯೇ?" ಎಂದರೆ ಸುಖ ದುಃಖ, ಹೊಗಳಿಕೆ, ತೆಗಳಿಕೆ, ಮಾನ, ಅಪಮಾನ, ಏನೇ ಬಂದರೂ ಅವುಗಳನ್ನು ಸಹಿಸಿಕೊಂಡು ಆಚಾರಬಾಹಿರನಾಗದೆ ಇರುವದು ಸಂಗನ ಶರಣರ ಯಾತ್ರೆಯೇ ಸರಿ, ಅಂದರೆ ಅಷ್ಟು ಪವಿತ್ರವಾದುದು.

ಆರು ದರುಶನದವರಿಗೆ। ಅಹಂಕಾರವೇಕೋ । ಹೋರು ರೋಹಿತ। ಹೊಲಸಿನೊಳಗೆ ಬಂದವರಿಗೆ। ಬೇರೊಂದು ಕುಲವುಂಟೇ ಲೋಕದಾ। ಏರಾಟವ ನೋಡೋ ಬಸವಣ್ಣ ॥

ಕುಂಭಸೂರಾಕಾಶದ ಮೇಲೆ ಕುಂಭ ಸೂತ್ರವ ಹಾಡಿ ।
ಎಂಭತ್ತುನಾಲ್ಕು ಲಕ್ಷ ಜೀವನ ಗೊಂಬೆಯು ಮಾಡಿ ಕುಣಿಸಿದಾ. ಶಂಭು ಶಂಕರನ ಹೆಸರೇನಂದರೆ। ಕಮ್ಮಾರನೆಂದು ಕುರುಹು ಹಿಡಿಯದಿದ್ದರೆ। ಕಾಡೆಮ್ಮೆಯಾ ಮಾಡಿ ಕಡಿಸ್ಯಾರೋ ಬಸವಣ್ಣ ॥ ೪ ॥

ಕಾಯಕವೇ ಕಮ್ಮಾರ। ಕಾಯವೇ ಹೊಲ ಮಾದಿಗ ವಾಯು ಅಗ್ನಿ ಪರಬ್ರಹ್ಮ ಇದರೊಳು ದಾರ ಕುಲವೆಂದು ಬೆದಕಲೋ ಬಸವಣ್ಣ ॥ ೫ ॥

ಎಂದು ಹೇಳಿದುದಲ್ಲದೆ ಮತ್ತೆ

ಎಲುವು ಇಲ್ಲದ ನಾಲಿಗೆಯು। ಹಲವು ಶಾಸ್ತ್ರವನೋದಿ। ಫಲವಿಲ್ಲದಂತೆ ಕೆಲದಾಡಿ ಸತ್ತಂಥಾ ಹೊಲೆಯರ ಗೊಡವೆ ನಮಗೇಕೋ ಬಸವಣ್ಣ ॥೬॥ ಎಂದಿದ್ದಾರೆ.

ಇದರಲ್ಲಿ ಮಹಾತ್ಮಾಜಿಯವರ ಜಾತಿಯ ನಿರ್ಮೂಲನವು ಬಂದು ಹೋಯಿತು. ಅಂದ ಬಳಿಕ ಅನೇಕ ಪಂಥ ಪಂಗಡಗಳ ಒಂದುತನವು ಶ್ರೀ ಮೌನೇಶ್ವರವರ ಕಾಲದಲ್ಲಿ ಅತಿ ಭರದಿಂದ ಸಾಗಿತ್ತು ಎಂಬುದು ಗೊತ್ತಾಗುವದು. ಇಂಥ ಅನೇಕ ಅವರ ವಚನಾಮೃತಗಳು "ಮೌನಪ್ಪಯ್ಯನವರ ವಚನಗಳು" ಎಂಬ ಗ್ರಂಥದಲ್ಲಿ ಹೇರಳವಾಗಿರುವವು.

ಇನ್ನು ಅವರ ಕಾಲ ವಿಚಾರದ ಕಡೆಗೆ ಹೊರಳುವಾ. ಮೌನೇಶ್ವರವರು ತಮ್ಮ ವಚನಗಳ ಕಡೆಯ ಚರಣದಲ್ಲಿ ಕೊನೆಗೆ ಬಸವಣ್ಣ, ಬಸವಣ್ಣ, ಎಂದು ಅಂದಿರುವರು. ಆದ್ದರಿಂದ ಅವರು ತಮ್ಮ ವಚನಗಳನ್ನು ಶ್ರೀ ಬಸವಣ್ಣನವರ ಮುಂದೆ ಹೇಳಿರಬಹುದು. ಬಸವಣ್ಣನವರು ಬಿಜ್ಜಳರಾಜನ ರಾಜ್ಯದಲ್ಲಿ ಮಂತ್ರಿಯಾಗಿದ್ದುದು ಎಲ್ಲ ಜನರಿಗೆ ಗೊತ್ತಿರಬಹುದು. ಕಲ್ಯಾಣದಲ್ಲಿ ಕಲಚೂರಿ ಮನೆತನದ ಬಿಜ್ಜಳನು (ಕ್ರಿ. ಶ. ೧೧೫೬–೧೧೬೭) ಕ್ರಿ. ಶ. ೧೨ ನೆಯ ಶತಮಾನದಲ್ಲಿ ರಾಜನಾಗಿದ್ದನು. ಆದುದರಿಂದ ಶ್ರೀ ಬಸವಣ್ಣನವರೂ ಶ್ರೀ ಮೌನೇಶ್ವರವರೂ ಒಂದೇ ಕಾಲಕ್ಕೆ ಅಂದರೆ ೧೨ ನೆಯ ಶತಮಾನದಲ್ಲಿದ್ದರು.

* ಕಲ್ಯಾಣ ಪಟ್ಟಣದ ಸೀಮೆಯು ।
ನಾಲ್ವತ್ತೆಂಟು ಯೋಜನದಲಿ ।
ಅಲ್ಲಿಗಲ್ಲಿಗೆ ವೀರಶೈವಾಚಾರ ಮಠಮಾನ್ಯ ॥
ಕಲ್ಲ ಕುಟುಗರ ಗುರುವು ಮೌನನು ।
ಕಲ್ಲದೇವರ ನುಡಿಸಿ ಆಡುತ ।
ಕಲ್ಯಾಣ ಪಟ್ಟಣಕೆ ಬಂದನು ರಾಜಸಮ್ಮುಖಕ್ಕೆ ||೧||

ಈ ಮೇಲಿನ ಪದ್ಯದಾಧಾರದ ಮೇಲಿಂದ ಅವರು ಕಲ್ಯಾಣ ಪಟ್ಟಣಕ್ಕೆ ಹೋಗಿ ಅರಸನಿಗೂ ಅಲ್ಲಿದ್ದ ಒಂದು ಲಕ್ಷ ತೊಂಬತ್ತಾರು ಸಾವಿರ ಜಂಗಮರಿಗೂ ಶ್ರೀ ಬಸವಣ್ಣನವರಿಗೂ ಭೆಟ್ಟಿಯಾಗಿರಲು ಸಾಕು.

* ಶಿವಗಣ ಸ್ತೋಮವೊಂದು ಕಡೆಯುಲಿ ।
ಸೇವಕತನದವರೊಂದು ಕಡೆಯುಲಿ ।
ಶಿವನ ಭಕ್ತರಿ ಅಧಿಕ ವೆಂಬಾಕಲದ ಗತಭಾಷೆ ॥
ಶ್ರವಣ ಮತ ಸಿದ್ಧಾಂತಾಚಾರವು ।
ಭುವನ ಪತಿ ಬಿಜ್ಜಳನು ಕರ್ತನು ।
ಶಿವನ ಪಾರಣೆ ಮಾಡಲದವನೂ ಅನೇಕ ಚಂಡಿವಾ ॥೨॥

---

* "ಶ್ರೀ ಮೌನೇಶ್ವರ ಬಾಲಲೀಲೆ" ಯ ೯ ನೇ ಸಂಧಿಯ ೨ ನೇ ಪದ್ಯ.

* "ಶ್ರೀ ಮೌನೇಶ್ವರ ಬಾಲಲೀಲೆ" ಎಂಬ ಗ್ರಂಥದಲ್ಲಿ ೯ ನೇ ಸಂಧಿಯ ೫ ನೇ ಪದ್ಯ

ಶ್ರೀ ಮೌನೇಶ್ವರವರು ಕಲ್ಯಾಣ ನಗರಕ್ಕೆ ಹೋದ್ದಾಗ್ಗೆ ಈ ಪ್ರಕಾರ ಪ್ರಜೆಗಳಲ್ಲಿಯೂ ರಾಜನಲ್ಲಿಯೂ ಮತಭೇದಗಳುಂಟಾಗಿದ್ದವು ಎಂಬುದನ್ನು ಇನ್ನೂ ಸ್ಪಷ್ಟವಾಗಿ ಕವಿ ಹೇಳಿದ್ದಾನೆ. ಆದ್ದರಿಂದ ಶ್ರೀ ಮೌನೇಶ್ವರವರು ಶ್ರೀ ಬಸವಣ್ಣನವರ ಕಾಲಕ್ಕೆ ಅಂದರೆ ಕ್ರಿ. ಶ. ೧೨ ನೆಯ ಶತಮಾನದಲ್ಲಿ ಇದ್ದರೆಂಬುದು ಮೇಲಿನ ಎಲ್ಲ ಆಧಾರಗಳಿಂದ ತಿಳಿದು ಬರುತ್ತದೆ.

ವಾಚಕ ಬಂಧುಗಳೇ !! ಮೌನೇಶ್ವರವರ ವಚನ, ಚರಿತ್ರೆ ಮೊದಲಾದವುಗಳಿದ್ದರೆ ಅವುಗಳನ್ನು ಹಾಗೇ ಕೊಳೆತು ಹೋಗುವಂತೆ ಇಡದೆ, ತಂದುಕೊಟ್ಟಲ್ಲಿ ನಾನು ಅವರಿಗೆ ಕೃತಜ್ಞನಾಗುವೆನು.

.....................

## ಪ್ರಾಣಲಿಂಗ ಸಾಧನೆ

(ಬರೆದವರುಃ—ಶ್ರೀ ಅನ್ನದಾನೀಶ್ವರ ವಿರಕ್ತಮಠ)

---

(೧)

ಪ್ರಾಣಲಿಂಗವು ಒಳಗೆ ತೊಳಗಿ ಬೆಳಗುವ ಜ್ಞಾನಸ್ವರೂಪವಾದ ಪರಬ್ರಹ್ಮವು. ಮನಸ್ಸು ಮಹಾನುಭಾವದಿಂದ ವಿಕಾಸವಾದಾಗ ಪ್ರಾಣ ಲಿಂಗ ಸ್ವರೂಪವನ್ನು ಧರಿಸುತ್ತದೆ. ಆತ್ಮದ ಅರುಹಿನಿಂದ ದೇಹದ ಸದಾಚಾರದಿಂದ ಮನಸ್ಸು ವಿಕಾಸಗೊಳ್ಳುವದು. ಮನಸ್ಸು ಅರಳಿದಾಗ ಭಾವದಲ್ಲಿ ಆನಂದವು ಸ್ಫುರಿಸುವದು. ಮನಸ್ಸು ಬೆಳವಣಿಗೆ ಹೊಂದಿದರೆ ದೇಹಕ್ಕೆ ಸದಾಚಾರವು ಅಳವಡುತ್ತದೆ. ಇಷ್ಟಲಿಂಗದಿಂದ ದೇಹದ ಸದಾಚಾರವು ಅಳವಡುತ್ತದೆ. ಭಾವಲಿಂಗದಿಂದ ಆತ್ಮದ ಅರುಹು ಸ್ಥಿರ ಪಡುತ್ತದೆ. ಸದಾನಂದಮಯವಾಗಿ ಎಲ್ಲವೂ ಶಿವಲೀಲೆಯೆಂದು ತಿಳಿದು ಬಾಳುವದೇ ಭಾವಲಿಂಗ ಸಾಕ್ಷಾತ್ಕಾರವು. ಆತ್ಮದ ಅರುಹು ಎಂದರೂ ಇದೇ. ನಿರೋಗಿಯಾದ, ಸದೃಢವಾದ ಶರೀರದಿಂದ ಕಲ್ಯಾಣಕರವಾದ ಕಾರ್ಯಗಳನ್ನು ಮಾಡುವದೇ ಇಷ್ಟಲಿಂಗದ ಸಾಕ್ಷಾತ್ಕಾರವು. ಅಂಗದ ಆಚಾರವೆಂದರೂ ಇದೇ. ಪ್ರಾಣಲಿಂಗದ ಧ್ಯಾನದಿಂದ ಇಷ್ಟಲಿಂಗ ಮತ್ತು ಭಾವಲಿಂಗ ಇವೆರಡರ ಸಾಕ್ಷಾತ್ಕಾರ ತಾನೇ ಉಂಟಾಗುತ್ತದೆ.

ಪ್ರಾಣಲಿಂಗದ ಚಿತ್ಕಳೆಯನ್ನು ಇಷ್ಟಲಿಂಗದಲ್ಲಿ ಸಂಯೋಜನೆ ಮಾಡಿದಾಗಲೇ ಇಷ್ಟಲಿಂಗಕ್ಕೆ ಮಹತ್ವವು ಬರುತ್ತದೆ. ಇಲ್ಲದಿದ್ದರೆ ಇಲ್ಲ. ಚಿತ್ಕಳೆಯಿಲ್ಲದ ಲಿಂಗವು ಪ್ರೇತ ಲಿಂಗವು. ಅದು ಧರಿಸಲಿಕ್ಕೆ ಅಯೋಗ್ಯವು. ಪ್ರೇತಲಿಂಗವನ್ನು ಧರಿಸಿದ ಮನುಷ್ಯರು ಹೆಣದಂತೆ ಜಡಭರಿತರಾಗಿರುವರು. ಅವರಿಂದ ಯಾವ ಮಹತ್ಕಾರ್ಯಗಳೂ ಆಗುವದಿಲ್ಲ.

ನೇತ್ರದ ಸೂತ್ರದಲ್ಲಿ ಮನವು ಚಲಿಸುವದು. ನೇತ್ರಸ್ಥಿರವಾದರೆ ಮನವು ಸ್ಥಿರಪಡುವದು. ಅವೆರಡಕ್ಕೂ ಅನ್ಯೋನ್ಯ ಸಂಬಂಧವಿದೆ. ನೇತ್ರಗಳು ನಿರ್ವಿಕಾರವುಳ್ಳವಾದರೆ ಶಿವಲಿಂಗ ಎಂಬ ಹೆಸರನ್ನು ಧರಿಸುತ್ತವೆ. ದೇಹದ ಎಲ್ಲ ಇಂದ್ರಿಯುಗಳಲ್ಲಿಯೂ ವ್ಯಾಪಿಸಿದ ಚರ್ಮವೂ ಸಪ್ತಧಾತುಗಳೂ ನಿರ್ವಿಕಾರವುಳ್ಳವಾದರೆ ಜಂಗಮಲಿಂಗ ಎಂಬ ಹೆಸರನ್ನು ಧರಿಸುತ್ತವೆ. ಈ ಪ್ರಕಾರ ನೇತ್ರಗಳೂ ಸಪ್ತಧಾತುಗಳೂ ದೇಹವೂ ಶುದ್ಧವಾದರೆ ಪ್ರಾಣಲಿಂಗವು ಸುಲಭಸಾಧ್ಯವಾಗುತ್ತದೆ. ಇಲ್ಲದಿದ್ದರೆ ಇಲ್ಲ. ಶಿವಲಿಂಗ ಮತ್ತು ಜಂಗಮಲಿಂಗ ಇವೆರಡರ ತತ್ವಗಳನ್ನು ಒಳಗೊಂಡದ್ದೇ ಪ್ರಾಣಲಿಂಗವು. ಹೇಯದೃಷ್ಟಿ ಹೋಗಿ ಮಂಗಲ ದೃಷ್ಟಿ ಅಥವಾ ದೇವ ದೃಷ್ಟಿ ಬಂದದ್ದೇ ಶಿವಲಿಂಗ ಸಾಕ್ಷಾತ್ಕಾರವು. ಸಂಕುಚಿತತ್ವ ಹೋಗಿ ವ್ಯಾಪಕತ್ವ ಬಂದದ್ದೇ ಜಂಗಮಲಿಂಗ ಸಾಕ್ಷಾತ್ಕಾರವು. ತತ್ವದಂತೆ ನಡೆದರೆ ದೇಹವೇ ಜಂಗಮಲಿಂಗವಾಗುತ್ತದೆ. ಕಣ್ಣೇ ಶಿವಲಿಂಗವಾಗುತ್ತದೆ. ದೇಹವನ್ನು ಕಂಣುಗಳನ್ನೂ ಸ್ವಾಧೀನಕ್ಕೆ ತಕ್ಕೊಂಡು ಸಾಧಿಸಿದರೆ ಅಂತರಂಗದ ಪ್ರಾಣಲಿಂಗವು ಸಾಧ್ಯವಾಗುತ್ತದೆ. ವಿಕಾರಿಗಳಿಗೆ ಪ್ರಾಣಲಿಂಗವು ಎಂದೂ ಸಾಧ್ಯವಾಗುವದಿಲ್ಲ. ವಿಚಾರಿಗಳಿಗೇನೇ ಸಾಧ್ಯವಾಗುವದು.

ಪ್ರಾಣಲಿಂಗವು ಪ್ರಾಣಲಿಂಗಿಗೆ ಸಾಧ್ಯವಾಗುವದು. ಪ್ರಾಣಲಿಂಗಿಯೆಂದರೆ ಶುದ್ಧವಾದ ದೈವಿಕವಾದ ಅಂಗಾಂಗಗಳುಳ್ಳವನು. ಆಧ್ಯಾತ್ಮಿಕ ಭಾವನೆಯಿಂದ ಕಾರ್ಯಗೈಯ್ಯುತ್ತಿರುವವನೇ ಶಿವಯೋಗಿಯು ಪ್ರಾಣವು ತುಚ್ಛವೆಂದು ತಿಳಿಯದೆ ಅದನ್ನು ಲಿಂಗವಾಗಿ ರೂಪಿಸಿಕೊಂಡವನೇ ಪ್ರಾಣಲಿಂಗಿಯು. ಪ್ರಾಣಲಿಂಗಿಗೆ ಲಿಂಗದಲ್ಲಿ ಅರ್ಥಾತ್ ಪರಮಾತ್ಮನಲ್ಲಿ ಅಚಲವಾದ ಶ್ರದ್ಧೆಯಿರುತ್ತದೆ. ಆ ದಿವ್ಯ ಶ್ರದ್ಧೆಯು ಗಟ್ಟಿಯಾಗಿ ನಿಷ್ಠೆಯೆನಿಸುವದು. ಶ್ರದ್ಧಾ ನಿಷ್ಠೆಗಳು ಬಲಿತರೆ ಆತ್ಮ ಜಾಗ್ರತಿ ಬರು

ವದು. ಅಂಥ ಎಡೆಬಿಡದ ಎಚ್ಚರಿಕೆಯಿಂದ ಲಕ್ಷ್ಯವು ಪೂರ್ಣಗೊಳ್ಳು ವದು. ಪೂರ್ಣ ಲಕ್ಷ್ಯವೇ ಯೋಗಕ್ಕೆ ಮುಖ್ಯವಾಗಿರಬೇಕು. ಪೂರ್ಣ ಲಕ್ಷ್ಯದಿಂದ ಯೋಗ ಸಾಧನ ಮಾಡಿದರೆ ಪ್ರಾಣಲಿಂಗವು ಸಾಧ್ಯವಾ ವಾಗುತ್ತದೆ. ಪ್ರಾಣಲಿಂಗದ ಅನುಭವವು ಹೊಳೆಯುತ್ತ ಹೋಗುತ್ತದೆ. ಪ್ರಾಣಲಿಂಗದ ಸಾಧಕನಿಗೆ ಅನುಭಾವಿಗಳ ಒಡನಾಟವೇ ಬೇಕು. ಪ್ರಾಣಲಿಂಗಿ ಸ್ಥಳವು ಅನುಭಾವದ ಮೆಟ್ಟಲು. ಪ್ರಾಣಲಿಂಗಿಯೇ ಶಿವಾ ನುಭವವನ್ನು ಹೇಳಲಿಕ್ಕೂ ಪಸರಿಸಲಿಕ್ಕೂ ಅಧಿಕಾರಿಯು. ಶಿವಾನು ಭವವು ಶಾಸ್ತ್ರಜಾಲದ ಪಸಾರವಲ್ಲ.

ಪ್ರಾಣಲಿಂಗ ಸಾಧನವು ಕ್ರಮಬದ್ಧವಾದ ಯೋಗಸಾಧನವಾಗಿದೆ. ಧ್ಯಾನವೇ ಸಾಧನದ ಜೀವಾಳವಾದರೂ ದೇಹದ ದೃಢತೆ, ಭಕ್ತಿಯು ನಂಬುಗೆ, ಆತ್ಮನ ಜ್ಞಾನ, ಕಾಯಕದಲ್ಲಿ ನಿರತನಾಗಿರುವಿಕೆ, ಇವೆ ಲ್ಲವೂ ಬೇಕು. ರೋಗಿಗಳೂ, ಚಾರ್ವಾಕರೂ, ಅಜ್ಞಾನಿಗಳೂ, ಆಲ ಸಿಗಳೂ ಧ್ಯಾನ ಮಾಡಬಲ್ಲರೇ? ಅವರು ವಿಷಯ ಧ್ಯಾನಮಾಡಿ ವಿಕಾರ ಸಾಕ್ಷಾತ್ಕಾರ ಮಾಡಿಕೊಳ್ಳಬಲ್ಲರು. ವಿಷಯಗಳನ್ನು ಪ್ರಸಾದ ರೂಪ ಮಾಡಿ ಜಗತ್ಕಲ್ಯಾಣಮಾಡಲಾರರು.

ಪ್ರಾಣಲಿಂಗ ಸಾಧನೆಯಿಂದ ಚಿತ್ತದ ಐದು ಶಕ್ತಿಗಳು ಕೇಂದ್ರೀ ಕೃತವಾಗುತ್ತವೆ. ಆ ಶಕ್ತಿ ಸಂಯೋಗದಿಂದ ಮಹತ್ಕಾರ್ಯಗಳನ್ನು ಮಾಡಲಿಕ್ಕೆ ಬರುತ್ತದೆ. ನೇತ್ರಸ್ಥೈರ್ಯ, ಪ್ರಾಣಸ್ಥೈರ್ಯ, ಶುಕ್ಲ ಸ್ಥೈರ್ಯ ಮತ್ತು ಬ್ರಹ್ಮರೂಪಾವಸ್ಥೆ-ಈ ಪರಿವಿಡಿಯು ಪ್ರಾಪ್ತವಾಗು ತ್ತದೆ. ಕಂಣಿನ ಆಲಿಗಳು ನಿಲ್ಲುವದರಿಂದ ಸುಳಿದು ಸೂಸುವ ಗಾಳಿ ನಿಲ್ಲುವದೆಂದೂ ಗಾಳಿ ನಿಲ್ಲುವದರಿಂದ ಮನವು ನಿಲ್ಲುವದೆಂದೂ, ಮನವುನಿಂತರೆ ಲಿಂಗರೂಪಾಗುವದೆಂದೂ ಅಂಥವನೇ ಯೋಗಿಯೆಂದೂ, ಸಾಕ್ಷಾತ್ ಪ್ರಭುದೇವರೇ ಅಪ್ಪಣೆ ಕೊಡಿಸಿದ ಮಾತು ಅನುಭವ ಸಿದ್ಧವಾಗುವದು.

---

# ಪ್ರಾಣಲಿಂಗದ ಧ್ಯಾನವೇ ಮಹತ್ವದ್ದು!

## ವ್ಯಕ್ತಿ-ಸಮಾಜಗಳ ಉದ್ಧಾರವು ಧ್ಯಾನದಿಂದಲೆ!

(೨)

ಅನುಭಾವವು ಮನುಷ್ಯನಿಗೆ ಮನುಷ್ಯತ್ವವನ್ನು ಕೊಡುವದು. ಅನುಭಾವವಿಲ್ಲದೆ ಭಕ್ತಿ-ಜ್ಞಾನಗಳು ಹುಟ್ಟುವದಿಲ್ಲ. ಅನುಭಾವ ವಿದ್ಯೆಯು ಎಲ್ಲ ವಿದ್ಯೆಗಳಲ್ಲಿ ಹಿರಿಯದು. ಅನುಭಾವವಿಲ್ಲದೆ ತಾನಾರೆಂಬುದು ತಿಳಿಯುವದಿಲ್ಲ. ತಾನಾರೆಂಬುದು ತಿಳಿಯದೆ ಆತ್ಮಕ್ಕೆ ಸ್ವಾತಂತ್ರ್ಯ ಸುಖವೂ ಇಲ್ಲ. ಸಮಾಜಕ್ಕೆ ಕಲ್ಯಾಣವೂ ಇಲ್ಲ. ಇಂಥ ಅನುಭಾವವು ಶರಣರಲ್ಲಿ ಸಿಗುವದು. ಅವರ ಸಹವಾಸದಲ್ಲಿದ್ದರೆ ಹೃದಯವೇದ್ಯವಾಗಬಲ್ಲದು. ಶಾಸ್ತ್ರಜಾಲದ ಪ್ರಸಾರದಿಂದ ಅನುಭಾವ ಬರಲಾರದು. ಅನುಭಾವದ ವಿದ್ಯೆಗೆ ಆತ್ಮ ವಿದ್ಯೆಯೆಂದೂ ಶರಣರು ಅನ್ನುವರು. ಈ ಅನುಭಾವವಿಲ್ಲದೆ ಶ್ರೇಷ್ಠ ಸಂಸ್ಕೃತಿಯು ಹುಟ್ಟಲಾರದು. ಅನುಭಾವ ಸಂಸ್ಕೃತಿಯು ಶರಣರ ವೈಶಿಷ್ಟ್ಯವು. ಶರಣರು ಅನುಭಾವವಿಲ್ಲದೆ ಏನೂ ನುಡಿಯುವದಿಲ್ಲ ಅನುಭಾವವಿಲ್ಲದೆ ಏನೂ ಮಾಡುವದಿಲ್ಲ. ನುಡಿಯಿಂದ ಅನುಭಾವ ಬರುವದಿಲ್ಲ. ಸಾಧನದಿಂದ ಬರುವದು. ಶರಣರ ಸಹವಾಸದಲ್ಲಿದ್ದು ಸಾಧನ ಮಾಡಿದರೆ ಸುಲಭ ಸಾಧ್ಯ. ಶರಣರ ಸಹವಾಸದಲ್ಲಿದ್ದು ಸಾಧನ ಮಾಡುತ್ತಿದ್ದಾಗ ಅನುಭಾವದ ಶಾಸ್ತ್ರವು ನಮಗೆ ಉಪಯೋಗ ಬೀಳಬಹುದು. ಶಿವಾನುಭವ ಗ್ರಂಥಗಳು ಆಗ ಸಹಾಯ ಮಾಡಬಹುದು. ಆದರೆ ನಿರ್ಜೀವ ಗ್ರಂಥಗಳಿಂದ ಸಜೀವ ಆತ್ಮನ ನಿಲುಮೆ ಹಿರಿಮೆಗಳು ಹೃದಯಕ್ಕೆ ನಿಲುಕಲಾರವು. ಹಾಗಾದರೆ ಶಿವಾನುಭಾವ ಶಾಸ್ತ್ರ ಗ್ರಂಥಗಳನ್ನು ಓದಬಾರದೆ? ಶಿವಾನುಭವವನ್ನು ಪ್ರಸಾರ ಮಾಡಬಾರದೆ? ಛೇ! ಶಿವಾನುಭವ ಗ್ರಂಥಗಳನ್ನು ತಪ್ಪದೇ ಓದಬೇಕು. ತಿಳಿದಷ್ಟನ್ನು ಪ್ರಸಾರ ಮಾಡಲಿಕ್ಕೂ ಅಡ್ಡಿಯಿಲ್ಲ. ಆದರೆ ಅನುಭಾವ ವಿದ್ಯೆಯಲ್ಲಿ ಗಟ್ಟಿಗರಾಗಿರುವ ಶರಣರನ್ನು ಹುಡುಕಿ ಅವರ ಸಂಸ್ಕೃತಿಯನ್ನು ಅಳವಡಿಸಿಕೊಳ್ಳುವದನ್ನು ಮಾತ್ರ ಎಂದೂ ಮರೆಯ ಬಾರದು. ನಮಗೆ ತಿಳಿಯದಿದ್ದರೆ ಪ್ರಾಮಾಣಿಕವಾಗಿ ಹಾಗೆ ಹೇಳುವದು ಆತ್ಮೋನ್ನತಿಯ ದೃಷ್ಟಿಯಿಂದ ಅತ್ಯಂತ ಮಹತ್ವವಾದದ್ದು ಇದೆ. ನಮ್ಮ ತಿಳಿವಳಿಕೆಯೇ ಘನವೆಂದು ಹೆಮ್ಮೆ ಪಡಬಾರದು.

## ಅನುಭಾವಿಗಳ ಲಕ್ಷಣ.

ಅನುಭಾವ ಸಂಸ್ಕೃತಿಯು ಅಳವಟ್ಟ ಮನುಷ್ಯರನ್ನು ಹೇಗೆ ಗುರುತಿಸುವದು ? ಇದು ಅತ್ಯಂತ ಮಹತ್ವದ್ದು. ಅನುಭಾವಿಗಳು ಎಲ್ಲ ಕಡೆಗೆ ಸಿಗಲಾರರು. ಅನುಭಾವಿಗಳು ಡಾಂಭಿಕ ವೃತ್ತಿಯುವರಿರುವದಿಲ್ಲ. ಅವರು ಪ್ರಾಮಾಣಿಕರಿರುತ್ತಾರೆ. ಒಳಹೊರಗೆ ಏಕರೂಪರಾಗಿರುವರು. ಅನುಭಾವಿಗಳು ವಾಚಾಳಿಗಳಿರುವದಿಲ್ಲ. ಬರೀ ಶಾಸ್ತ್ರ ಹೇಳುವದಿಲ್ಲ. ತಮಗೆ ತಿಳಿದಷ್ಟನ್ನು ಹೇಳುತ್ತಾರೆ. ಶಿಷ್ಯರನ್ನು ಹೆಚ್ಚಿಸುವ ಹಂಬಲ ಅವರಿಗಿಲ್ಲ. ಶರಣರ ಅನುಭಾವ ಸಂಸ್ಕೃತಿಯನ್ನು ಹರಡಿ ಜಗದಲ್ಲಿ ಶಾಂತಿ ಸ್ಥಾಪಿಸುವ ಸಂಕಲ್ಪ ಮಾತ್ರ ಅವರಿಗೆ ಇರುವದು. ಅವರ ನೇತ್ರಗಳಲ್ಲಿ ತೇಜಸ್ಸು ಇರುವದು. ನುಡಿಯಲ್ಲಿ ಶಕ್ತಿ ತುಂಬಿರುವದು. ಅವರ ಕಾರ್ಯಗಳಲ್ಲಿ ಶಿಸ್ತು ಇರುವದು. ಅವರು ಸದಾ ಅರುಹುಮಯರು. ಸದಾಚಾರ, ಅರುಹುಗಳು ಓತ ಪ್ರೋತವಾಗಿರುತ್ತವೆ. ಅವರ ಕರಣಗಳು ಲಿಂಗನ ಕಿರಣಗಳಾಗಿರುತ್ತವೆ. ಅಹಂಕಾರವು ನಿರಹಂಕಾರ ಶಕ್ತಿಯಾಗಿ ನಮ್ರತೆಯು ಸಮಾಜಸೇವೆ ನಡೆದಿರುವದರಿಂದ ಅವರು ಪ್ರಾಣಲಿಂಗದ ನೆಲೆಯನರಿದು ಸಮ್ಯಜ್ಞಾನಿಗಳಾಗಿರುವರು. ಅವರು ಶರಣರಾಗಿರುವರು. ಅವರು ಜ್ಯೋತಿರ್ಮಯರಾಗಿರುವರು. ಅವರಲ್ಲಿ ಜಾತಿಸೂತಕ ವರ್ಣಾಶ್ರಮದ ಅಭಿಮಾನವಿರುವದಿಲ್ಲ. ಆಧ್ಯಾತ್ಮಿಕ ವಿಶ್ವ ವಿಶಾಲ ಭಾವನೆ ಅಥವಾ ಸರ್ವಾತ್ಮ ಭಾವನೆಯು ಅವರ ಮುಖ್ಯ ಲಕ್ಷಣವು.

## ಅನುಭಾವಿಗಳಿಗೆ ಅನುಭಾವ ಹೇಗೆ ಬಂದಿತು ?

ಅನುಭಾವಿಗಳು ಪರಮ ಪುರುಷರೆಂದು ಹೇಳಿದಂತಾಯಿತು. ಅವರೇ ಅತಿ ಮಾನವರು. ಶ್ರೇಷ್ಠಪುರುಷರು. ಆದರ್ಶ ಜೀವಿಗಳು. ಅವರಿಗೆ ಅನುಭಾವ ಹೇಗೆ ಬಂದಿತು ? ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅವರಿಗೆ ಪ್ರಾಣಲಿಂಗದ ಧ್ಯಾನವು ಸಾಧ್ಯವಾಗಿರುವದು. ಅವರು ಬಹಳ ದುಡಿದು ಪ್ರಾಣಲಿಂಗದ ಧ್ಯಾನವನ್ನು ಸಿದ್ಧಿಸಿಕೊಂಡಿರುವರು. ಶರಣರ ಸಹವಾಸದಿಂದಲೂ, ಅನುಭಾವದ ವಚನಗಳಿಂದಲೂ, ನಿರಹಂಕಾರದ ಸಾಧನದಿಂದಲೂ, ಅವರು ಮೇಲ್ಮಟ್ಟಕ್ಕೆ ಹೋಗಿರುವರು. ಆಧ್ಯಾತ್ಮಿಕ ವಿಚಾರಗಳಿಗೆ ಅವರು ಬಹು ಮಹತ್ವಕೊಟ್ಟಿರುವರು.

ಹೃದಯ ನಿರೀಕ್ಷಣೆ ಮತ್ತು ಶುದ್ಧೀಕರಣಗಳಿಗೆ ಬಹು ಬೆಲೆ ಕೊಟ್ಟಿರುವರು. ಪ್ರಪಂಚದಲ್ಲಿದ್ದು ಅವರು ಪಾರಮಾರ್ಥಿಕತೆಯನ್ನು ಸಾಧಿಸಿದರು. ಜಾತೀಯತಾ ನಿರ್ಮೂಲನ ಮಾಡಿ ಸರ್ವಮಾನವರೂ ಸಮಾನರೆಂದು ಅವರು ತಿಳಿದಿದ್ದರು. ಪ್ರಾಣಲಿಂಗದ ಧ್ಯಾನದಿಂದ ಅವರ ಸಹಜ ಪ್ರವೃತ್ತಿಗಳು ಉದಾತ್ತವಾದವು. ವಿನಾಶಕ್ಕೆ ಕಾರಣಗಳಾದ ಪಂಚ ವಿಷಯಗಳೂ ಮೋಹವೂ ಉನ್ನತಿಗೆ ಸಾಧನಗಳಾಗಿ ಶಕ್ತಿಗಳಾಗಿ ಪರಿಣಮಿಸಿದವು. ವಿಷಯಗಳು ಪ್ರಸಾದವಾದವು. ಮೋಹವು ಪ್ರೇಮಶಕ್ತಿಯಾಗಿ ಕಾರ್ಯಗೈಯಲಿಕ್ಕೆ ಹತ್ತಿತು. ಈ ಪ್ರಪಂಚದ ಸಕಲ ವಸ್ತುಗಳೂ ಪರಮಾತ್ಮನವೇ ಎಂದು ತಿಳಿದು ಸರ್ವ ಪದಾರ್ಥಗಳನ್ನು ಪ್ರಸಾದ ಭಾವನೆಯಿಂದ ಕಂಡು ಅಂತಃಕರಣ ಇಂದ್ರಿಯ ಮುಂತಾದ ಸರ್ವಾರ್ಪಣ ಭಾವದಿಂದ ಪರಮಾತ್ಮನಿಗೆ ಶರಣುಹೋಗಿ ಶರಣರಾಗಿ ಪ್ರಾಣಲಿಂಗ ಸಿದ್ಧಿಯನ್ನು ಪಡೆದರು. ಅವರ ದೇಹವು ಪರಮಾತ್ಮನ ವಾಹನವಾಯಿತು.

## ಪ್ರಾಣಲಿಂಗವೆಂದರೇನು ?

ಪ್ರಾಣಲಿಂಗವು ಅಂತರಂಗದ ನಿರ್ಮಲ ಪರಂಜ್ಯೋತಿಯು. ಮಹಾನುಭಾವದಿಂದ ಮನಸ್ಸು ವಿಕಾಸವಾದಾಗ ತೋರುವದು. ಅಂಗಕ್ಕೆ ಆಚಾರವು ಅಳವಟ್ಟು ಆತ್ಮಸಂಯಮನವು ಬಂದಾಗ ಅದರ ನೆಲೆ ಕಲೆಗಳು ಜ್ಞಾನ ದೃಷ್ಟಿಗೆ ಗೋಚರವಾಗುತ್ತವೆ. ಬಲವಾದ ಶ್ರದ್ಧೆ-ನಿಷ್ಠೆಗಳಿಲ್ಲದೆ ಪ್ರಾಣಲಿಂಗದ ಅನುಭವವಾಗಲಾರದು. ನಮ್ರತೆ, ದಾಸೋಹಂಭಾವಗಳು ನೆಲಿಸದೆ ಜ್ಞಾನದೃಷ್ಟಿಯು ತೆರೆಯಲಾರದು. ಕಣ್ಣುಗಳು ಸ್ಥಿರವಾಗಲಿಕ್ಕೆ ಹತ್ತಿದರೆ ಮನಸ್ಸು ಸ್ಥಿರವಾಗುವದು. ಇಷ್ಟಲಿಂಗದಲ್ಲಿ ಕಂಣುಗಳನ್ನು ನೆಡಬೇಕು. ಹೃದಯದಲ್ಲಿ ಪ್ರಾಣಲಿಂಗಿಯನ್ನು ಜ್ಞಾನದ ಕಣ್ಣಿನಿಂದ, ಮನಸ್ಸಿನ ಕಣ್ಣಿನಿಂದ, ನಿರೀಕ್ಷಿಸಬೇಕು. ಸಾಧು ಫ್ರಾನ್ಸಿಸ್ಸನು ಏಸುಕ್ರಿಸ್ತನನ್ನು ಧ್ಯಾನಿಸಿ ಕ್ರಿಸ್ತಸ್ವರೂಪನಾದಂತೆ ಪ್ರಾಣಲಿಂಗಿಯಾದ ಶರಣನನ್ನು ಧ್ಯಾನಿಸಿದರೆ ಭಕ್ತನು ಪ್ರಾಣಲಿಂಗ ಸ್ವರೂಪನಾಗುತ್ತಾನೆ. ಜ್ಯೋತಿಸ್ವರೂಪನಾಗುತ್ತಾನೆ. ಕಂಣು, ಇಂದ್ರಿಯ, ಮನ ಜೀವಾತ್ಮ ಎಲ್ಲವೂ ಜ್ಯೋತಿ ಸ್ವರೂಪವಾಗುತ್ತವೆ. ಅವನನ್ನು ನೋಡಿದರೆ ಸಾಮಾನ್ಯರಿಗೆ ವಿಲಕ್ಷಣವಾಗಿ ತೋರುತ್ತಾನೆ. ಆತ್ಮಜಾಗ್ರತಿ

ಅಥವಾ ಆಧ್ಯಾತ್ಮಿಕ ಕಣ್ಣುತೆರೆಯಬೇಕಾದರೆ ಇಂಥ ಪ್ರಾಣಲಿಂಗಿಗಳಿಗೇ ಸಾಧ್ಯ.

## ಸಾಧನಮಾರ್ಗ.

ಧ್ಯಾನವಿಲ್ಲದೆ ಮನಸ್ಸಿನ ಶಕ್ತಿಯು ಬೆಳೆಯಲಾರದು. ಶರೀರವು ವಶದಲ್ಲಿ ಬರಲಾರದು. ಬುದ್ಧಿಯು ತೀಕ್ಷ್ಣವಾಗಲಾರದು. ತೇಜಸ್ಸು ಒಳಹೊರಗೆ ತುಂಬಲಾರದು. ಸಾರಾಂಶ, ಧ್ಯಾನದಿಂದ ಮನುಷ್ಯನು ದೊಡ್ಡವನಾಗುತ್ತಾನೆ. ದೊಡ್ಡ ಮನುಷ್ಯರಿಂದಲೇ ಸಮಾಜ ಕಲ್ಯಾಣವಾಗಬಲ್ಲುದು. ಕಣ್ಣುಗಳಲ್ಲಿರುವ ಕಳೆಯು ಪ್ರಾಣಲಿಂಗದ ತೇಜಸ್ಸು. ಕಣ್ಣುಗಳನ್ನು ಚಲಿಸದಂತೆ ಕರಿಗೊಳಿಸಬೇಕು. ಬಾಹ್ಯಾಡಂಬರವನ್ನು ಬಿಟ್ಟು ಇಷ್ಟಲಿಂಗದಲ್ಲಿ ನೇತ್ರಗಳನ್ನು ಇಟ್ಟು ಸಾಧನಮಾಡಿದರೆ ಪ್ರಾಣ ಸ್ಥಿರವಾಗುತ್ತ ಬರುತ್ತದೆ. ಇಷ್ಟರಿಂದ ಸಿದ್ಧಿಯಾಗದು. ಕೆಳಗಿನ ವಚನದಿಂದ ಸಾಧನದ ದಾರಿಯನ್ನು ಕಂಡುಕೊಳ್ಳಬೇಕು.

### ವಚನ

"ಶಿರದೊಳಗೆ ಶಿರ, ಕರದೊಳಗೆ ಕರ, ಕರಣದೊಳಗೆ ಕರಣ, ಕಂಗಳೊಳಗೆ ಕಂಗಳು, ಕರ್ಣದೊಳಗೆ ಕರ್ಣ, ಘ್ರಾಣದೊಳಗೆ ಘ್ರಾಣ, ಜಿಂಹ್ವೆಯೊಳಗೆ ಜಿಂಹ್ವೆ, ಪಾದದೊಳಗೆ ಪಾದವ ಕೂಡಿ, ಶರಣರೊಡನಾಡುವ, ನಿಮ್ಮ ಬೆಡಗಿನ ಲೀಲೆಯನಾರು, ಬಲ್ಲರು, ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ, ನಿಮ್ಮ ಶರಣರಲ್ಲದೆ."

ಪ್ರಾಣಲಿಂಗಿಯಾದ ಶರಣನನ್ನು ಹುಡುಕಿ ಹೊಂದುವದೇ ಮುಖ್ಯ. ಆಗ ಸಾಧನವು ತಾನೇ ಸಿದ್ಧಿಸುವದು. ಲಿಂಗವಂತ ಸಮಾಜವು ಕೇವಲ ಬಾಹ್ಯಾಡಂಬರದ ವ್ಯರ್ಥ ಪೂಜೆಯನ್ನು ನಿಲ್ಲಿಸಿ ಪ್ರಾಣಲಿಂಗದ ಧ್ಯಾನ ಸಾಧಿಸಿ ಸಮಾಜದ ಉದ್ಧಾರಮಾಡಲಿ!

---

# ಪ್ರಾಣಲಿಂಗದ ಧ್ಯಾನವಿಲ್ಲದೆ ಇಷ್ಟಲಿಂಗದ ಪೂಜೆ ವ್ಯರ್ಥ.

(೩)

ಪ್ರಾಣಲಿಂಗದ ಧ್ಯಾನವಿಲ್ಲದೆ ಇಷ್ಟಲಿಂಗದ ಪೂಜೆಯು ವ್ಯರ್ಥವಾಗಿರುವದು. ಇಷ್ಟಲಿಂಗದ ಪೂಜೆಯಿಂದ ಮನಸ್ಸು ಹರಿದಾಡುವದು ನಿಂತು ಶಕ್ತಿ ಬಂದು ಹೃದಯದಲ್ಲಿ ಆನಂದವಾಗದಿದ್ದರೆ, ಬಾಹ್ಯದಲ್ಲಿ ಕಲ್ಯಾಣಕರವಾದ ಕ್ರಿಯೆಗಳು ನಡೆಯದಿದ್ದರೆ, ಅದು ಇಷ್ಟಲಿಂಗ ಪೂಜೆಯಲ್ಲ. ಇಷ್ಟಲಿಂಗ ಪೂಜೆಗೆ ಬೇಕಾದ ಪದಾರ್ಥಗಳು ಹೊರಗೆ ಸಿಗುತ್ತವೆ. ನೀರು ಬಾವಿಯದು, ವಿಭೂತಿ ಒಲೆಯದು, ಪತ್ರಿ ಗಿಡದ್ದು ಇತ್ಯಾದಿ. ಬಾವಿ ಒಲೆ, ಗಿಡಗಳಿಗೆ ಪುಣ್ಯವು ಹೋಗುವದೆಂದು ಸುಲಭವಾಗಿ ತಿಳಿಯಬಹುದು. ಕಾರಣ ಮನಸ್ಸನ್ನು ಕೊಟ್ಟರೆ ಮಾತ್ರ ಇಷ್ಟಲಿಂಗ ಪೂಜೆ ಸಾರ್ಥಕವಾಗುವದು. ಮನಸ್ಸು ಹೊರಗಿಲ್ಲ ಒಳಗಿರುವದು. ಮನಸ್ಸಿಗೆ ಎರಡು ಕಣ್ಣುಗಳಿರುತ್ತವೆ. ಒಂದು ಒಳಗಿನ ಜ್ಞಾನದ ಕಣ್ಣು. ಮತ್ತೊಂದು ಹೊರಗಿನ ದೇಹದ ಕಣ್ಣುಗಳು. ಹೊರಗಿನ ಎರಡು ಕಣ್ಣುಗಳನ್ನು ಲಿಂಗದಲ್ಲಿ ನಿಲ್ಲಿಸುವದನ್ನು ದಿನಾಲು ಸಾಧನ ಮಾಡಿದರೆ ಅವು ಬಲಗೊಳ್ಳುತ್ತವೆ. ಜ್ಞಾನದ ಕಣ್ಣನ್ನು ಪ್ರಾಣಲಿಂಗದ ಧ್ಯಾನಕ್ಕೆ ತೊಡಗಿಸಬೇಕು. ಅಂದರೆ ಮನಸ್ಸು ಬಲಗೊಳ್ಳುತ್ತದೆ. ಮಾನಸಿಕ ಶಕ್ತಿಯು ವಿಕಾಸವಾದರೆ ಆನಂದವು ಭಾವದಲ್ಲಿ ಸಹಜವಾಗಿ ತೋರುವದು. ಇದು ಅನುಭವದ ಮಾತು.

ಲಿಂಗಪೂಜೆಯು ಯೋಗಸಾಧನವಾಗಿರುವದು. ಅದು ದ್ವೈತದ ಭೇದ. ಭಾವನೆಯ ಪೂಜೆಯಲ್ಲ. ಲಿಂಗಪೂಜೆಗೇನೇ ಲಿಂಗಯೋಗವೆಂದು ಶರಣರು ಕರೆಯುವರು. ಲಿಂಗಪೂಜೆಯು ಕೇವಲ ಭೇದಭಾವದ ಪೂಜೆಯಾಗಿದ್ದರೆ ದೇಹದ ಮೇಲೆ ಅದನ್ನು ಯಾವಾಗಲೂ ಧರಿಸುವ ಅವಶ್ಯಕತೆಯೇ ಇರುತ್ತಿದ್ದಿಲ್ಲ. ಲಿಂಗಪೂಜೆಯೆಂದರೆ ಶಿವಲೀಲೆಯು. ಲೀಲೆಯಿಂದ, ಸುಲಭವಾಗಿ, ಚಂದವಾಗಿ, ಬಾಹ್ಯಕ್ರಿಯೆಗಳನ್ನು ಅರ್ಥಾತ್ ಪ್ರಪಂಚವನ್ನು ಮಾಡಬೇಕೆಂಬುದೇ ಪೂಜೆಯ ಉದ್ದೇಶವಿರುವದು. ಯೋಗ ಸಾಧನೆಯನ್ನು ಸುಲಭವಾಗಿ ಮಾಡಲಿಕ್ಕೆ ಅನುಕೂಲವಾಗಲೆಂದೇ ಇಷ್ಟಲಿಂಗವಿರುವದು.

## ಸಮಾಜದ ಸದ್ಯದ ಪರಿಸ್ಥಿತಿ.

ಈಗ ಲಿಂಗವಂತ ಸಮಾಜವನ್ನು ನೋಡಿದರೆ ಮೇಲೆ ಹೇಳಿದ ತತ್ವವು ಲೋಪವಾಗಿರುವದೋ ಏನೋ ಎಂಬಂತೆ ತೋರುತ್ತದೆ. ಆಡಂಬರದ, ಭೇದಬುದ್ಧಿಯು, ಉಪಚಾರದ ಪೂಜೆಯೇ ಎಲ್ಲ ಕಡೆಗೂ ನಡೆದಿರುತ್ತದೆ. "ಸುಮ್ಮನೇ ಉಪಚಾರಕ್ಕೆ ಮಾಡುವರಲ್ಲದೆ ನಿಮ್ಮನೆತ್ತ ಬಲ್ಲರು, ಕೂಡಲಸಂಗಮದೇವಾ" ಎಂದು ಬಸವಣ್ಣನು ನುಡಿದಿರುವದು ಯಥಾರ್ಥವಾಗಿರುವದು. ನೀರ ಕಂಡಲ್ಲಿ ಮುಳಗುವದು, ಬಂಡಿತುಂಬ ಪತ್ರಿಯು ತರುವದು, ಅನ್ನವ ಕಂಡು ಪೂಜೆಮಾಡುವದು, ರುದ್ರಾಕ್ಷಿಗಳನ್ನು ಧರಿಸಿ ಗಣಾಡಂಬರದ ನಡುವೆ ನಲಿದಾಡುವದು, ಉಂಡು ತಾಂಬೂಲಗೊಂಡು ಹೋಗುವದು, ಇದೇ ಆಡಂಬರವು ಕಾಣಿಸುತ್ತದೆ. ಇದನ್ನು ಕಂಡು ಇಷ್ಟಲಿಂಗದಲ್ಲಿ ಹುರುಳಿಲ್ಲವೆಂದು ಎಷ್ಟೋ ತರುಣ ಜನರು ಅನ್ನುತ್ತಿರುವರು. ಇಷ್ಟಲಿಂಗದ ಸಾಧನೆಯೇ ಇಲ್ಲದಮೇಲೆ ಪ್ರಾಣಲಿಂಗದ ನೆಲೆಯು ಹೇಗೆ ತಿಳಿಯಬೇಕು? ಪ್ರಾಣಲಿಂಗದ ಧ್ಯಾನವಿಲ್ಲದೆ ಸದ್ಗುಣಗಳು ಹೇಗೆ ಹುಟ್ಟಬೇಕು?

## ಪ್ರಾಣಲಿಂಗದ ಧ್ಯಾನ.

ಪ್ರಾಣಲಿಂಗದ ಧ್ಯಾನದಿಂದ ಸದ್ಗುಣಗಳುಂಟಾಗುತ್ತವೆ. ಯೋಗಿಯು ನೈತಿಕ ವೀರನಾಗುತ್ತಾನೆ. ಆತನ ನಡೆನುಡಿಗಳಲ್ಲಿ ಸತ್ವಗುಣವು ಪ್ರಧಾನವಾಗಿರುತ್ತದೆ. ಮನವು ಅಂತರ್ಮುಖವಾದರೆ ಅವಿರಳ ಜ್ಞಾನ ಪ್ರಾಪ್ತಿ. ಪ್ರಾಣಲಿಂಗದ ಧ್ಯಾನದಿಂದ ಮನವು ಒಳಮುಖವಾಗುತ್ತದೆ. ಪ್ರಾಣಲಿಂಗದ ಧ್ಯಾನದಿಂದ ಕ್ಷಮೆ, ಇಂದ್ರಿಯ ನಿಗ್ರಹ, ನಿರಹಂಕಾರ, ತ್ಯಾಗ, ಸತ್ಯಾಭಿಮಾನ, ವಿವೇಕ, ಶ್ರದ್ಧೆ, ಸರ್ವಾರ್ಪಣ ಬುದ್ಧಿ, ಮಹಾಜ್ಞಾನ—ಇಂಥೀ ದಿವ್ಯ ತೇಜೋಮಯವಾದ ವಿಭೂತಿಯೇ ತಯಾರಾಗಿ ಆತನ ದರ್ಶನ ಮಾತ್ರದಿಂದ ಮಾನವರು ಮೇಲ್ಮಟ್ಟಕ್ಕೇರುವರು. ಈ ಮಾತಿಗೆ ಶ್ರೀ. ಗುರುಸಿದ್ಧಪ್ರಭು, ಶ್ರೀ. ಚನ್ನಾದ ಪಶುಪತಿ, ನಾವದಗಿ ಶ್ರೀ. ರೇವಪ್ಪಶರಣ, ಬಾಲಲೀಲಾ ಮಹಾಂತ ಶಿವಯೋಗಿ, ಅಥಣಿ ಶಿವಯೋಗಿ- ಇವರೇ ಸಾಕ್ಷಿಗಳಾಗಿರುವರು.

ಪ್ರಾಣಲಿಂಗದ ಧ್ಯಾನಕ್ಕೆ ದೇಹವು ಆರೋಗ್ಯವುಳ್ಳದ್ದಿರಬೇಕು. ಆಸನ, ಪ್ರಾಣಾಯಾಮ ಮುಂತಾದ ವ್ಯಾಯಾಮದಿಂದಾಗಲೀ ಅಥವಾ

ಇತರ ಸಾಧನಗಳಿಂದಾಗಲೀ ದೇಹವನ್ನು ನಿರೋಗಿಯಾಗಿಯೂ ಭದ್ರವಾಗಿಯೂ ಇಟ್ಟಿರಲಿಕ್ಕೆ ಬೇಕು. ಅಂತರಂಗದ ಪರಂಜ್ಯೋತಿಯನ್ನು ಎವೆಹಳಚದೇ ಒಳಗೆ ನಿಂದು ನೋಡುತ್ತಹೋಗಬೇಕು. ಮನವು ಅಲ್ಲಿಯೇ ನಿಂದು ಬಾಹ್ಯ ವ್ಯಾಪಾರಮಾಡುತ್ತಿರಬೇಕು. ಅಂದರೆ ಅಪೂರ್ವ ಆನಂದವು ತಲೆದೋರುವದು. ನಿರ್ವಿಕಾರ ಶಿವನಂತಿರುವ ಪ್ರಾಣಲಿಂಗಿಯನ್ನು ಧ್ಯಾನಿಸಿದರೂ ಪ್ರಾಣಲಿಂಗದ ಧ್ಯಾನ ಮಾಡಿದಂತೆಯೇ ಸುಖವು ಸಮನಿಸುವದು. ಈ ಪ್ರಕಾರ ಶರಣರ ಅನುಭಾವವಿರುವದು. ಅತ್ತ ನಮ್ಮ ಸಮಾಜವು ಹೊರಳಲಿ !!

---

## ಅಕ್ಕಮಹಾದೇವಿಯ ಜೋಗುಳ

ಜೋ ಜೋ ಶ್ರೀ ಅಕ್ಕಮಹದೇವಿ ಜೋ ಜೋ ॥ಅ. ಪ॥
ಜೋ ಜೋ ಸಾತ್ವಿಕ ಶಕ್ತಿಯ ಕಲೆಯೇ ।
ಜೋ ಜೋ ಭಕ್ತಿಯ ವಿರತಿ ಜ್ಞಾನ ನಿಲಯೇ ।
ಜೋ ಜೋ ಮುಕ್ತಿಮಾರ್ಗ ಕನ್ನಡಿಯೇ ।
ಜೋ ಜೋ ಚನ್ನಮಲ್ಲಯ್ಯನಿಗೆ ಒಲಿದ ಮಹದೇವಿ ಜೋ ಜೋ
॥ ಪಲ್ಲ ॥

ಉಡುತಡಿಯಲ್ಲಿರ.ವ ಸುಮತಿ ನಿರ್ಮಲರ ।
ಒಡಲಾಬ್ಧಿ ಚಂದ್ರನಂತೆ ಉದಯಳಾಗಿ ।
ಪಡೆದ ದಿನವೆ ಲಿಂಗಧಾರಕಳಾಗಿ ।
ಪ್ರೌಢವಿಯೊಳತಿ ಸುಂದರಿಯೆನಿಸಿ ಮೆರೆದ ಮಹದೇವಿಗೇ ॥೧॥

ಕೌಶಿಕರಸ ನಿನ್ನ ಕಂಡು ಮೋಹಿಸಿ ।
ಕಾಮಾಂಧನಾಗಿ ಸತಿಯಾಗಲು ಬಯಸಿ ।
ಕರಿಸಿ ಆಪ್ತರಿಗೆ ವಾರ್ತೆಯ ತಿಳಿಸಿ ।
ಕಳುಹಲು ಯುಕ್ತಿಯಿಂದವರನ್ನಟ್ಟಿದ ಮಹದೇವಿ ಜೋ ಜೋ
॥ ೨ ॥

ಮೊದಲು ನಿನ್ನಿಚ್ಛೆಯ ನಡಿಸುವೆನೆಂದು ।
ಚದುರತನದಿಂದ ಅರಸನೊಪ್ಪಿಗೆಗೊಂಡು ।

ಸದಮಲ ವಿಭೂತಿ ರುದ್ರಾಕ್ಷಿ ಅಂಗಗಳ ।
ಪೊದೆದು ಮದುವೆಯಾಗೆಂದು ಸುದತಿ ಮಹದೇವಿ ಜೋ ಜೋ
॥ ೩ ॥

ಕೊಟ್ಟವಚನವನು ನಡಿಸದೆ ಭೂಪ ।
ಮುಟ್ಟಲು ಬರಲು ತಾ ತಾಳುತ ಕೋಪ ।
ಉಟ್ಟಬಟ್ಟೆಗಳೆಲ್ಲ ಬಿಟ್ಟು ಸಂತಾಪ ।
ಪಟ್ಟು ದಿಟ್ಟೆ ಶಿವಗೆ ಮೊರೆಯಿಟ್ಟ ಮಹದೇವಿ ಜೋ ॥ ೪ ॥

ಬೆದರಿ ಭೂಪ ಪದಕೆರಗಿ ಮನ್ನಿಸುತ ।
ಸದಯಳೆನ್ನಪರಾಧ ಕ್ಷಮಿಸೆನುತ ।
ವದನೆಗೆ ಕರುಣದಿ ಬೇಡಿಕೊಳ್ಳಲು ।
ಮದನಾರಿ ತತ್ವಬೋಧಿಸಿ ಮನೆಬಿಟ್ಟ ಮಹದೇವಿ ಜೋ ಜೋ ॥೫॥

ಕಲ್ಯಾಣ ಪಥವನು ಜನಕೆ ತೋರುತ್ತ ।
ಕಲ್ಯಾಣಮಾರ್ಗವ ಪಿಡಿದು ನಡೆಯುತ್ತ ।
ಕಲ್ಯಾಣ ಪಟ್ಟಣವನು ಸೇರುತ್ತ ।
ಅಲ್ಲಿಯನುಭವ ಮಂಟಪವ ಹೊಕ್ಕ ಮಹದೇವಿ ಜೋ ಜೋ ॥೬॥

ಅಲ್ಲಮಪ್ರಭುವಿಗೆ ವಂದನೆ ಮಾಡಿ ।
ಎಲ್ಲ ಪ್ರಶ್ನೆಗಳಿಗೆ ಉತ್ತರವ ನೀಡಿ ।
ಮಲ್ಲಿಕಾರ್ಜುನನೆ ಪತಿಯೆಂದು ಪಾಡಿ ।
ಅಲ್ಲಿ ಶರಣರ ಮನ್ನಣೆ ಪಡೆದ ಮಹದೇವಿ ಜೋ ಜೋ ॥ ೭ ॥

ಹರಭಕ್ತ ಬಸವನ ಭಕ್ತಿಯನಾಂತು ।
ಗುರುಚನ್ನಬಸವನ ಜ್ಞಾನವ ಕಲಿತು ।
ಚರಪತಿ ಪ್ರಭುವಿನ ವಿರತಿಯನರಿತು ।
ತರುಣಿಯರಿಗೆ ಮೇಲೆನಿಸಿದ ಶರಣೆ ಮಹದೇವಿ ಜೋ ಜೋ ॥ ೮ ॥

ಪನ್ನಂಗಧರ ಶಾಸ್ತ್ರ ಪಂಡಿತಳೆನಿಸಿ ।
ಕನ್ನಡ ಭಾಷೆಯೊಳ್ ವಚನವ ರಚಿಸಿ ।

ಕನ್ನಡ ದೇಶದ ಧನ್ಯತೆ ಬೆಳಿಸಿ ।
ಕನ್ಯಾಕುಲಕೆ ಮೇಲೆನಿಸಿದ ಮಾನ್ಯ ಮಹದೇವಿ ಜೋ ಜೋ ॥೯॥

ಎಲ್ಲ ಪ್ರಮಥರಿಂದ ಅಪ್ಪಣೆ ಪಡೆದು ।
ಕಲ್ಯಾಣ ಪಟ್ಟಣ ಬಿಟ್ಟು ನೀ ನಡೆದು ।
ಮಲ್ಲಿಕಾರ್ಜುನನ ಶಿಖರವ ಕಂಡು ।
ಅಲ್ಲಿ ಪಾತಾಳಗಂಗೆಯೊಳ್ ಮಿಂದ ಮಹದೇವಿ ಜೋ ಜೋ
॥ ೧೦ ॥

ಚಿನ್ಮಯ ಕದಳಿವನವನ್ನು ಪ್ರವೇಶಿಸಿ ।
ನಿನ್ನ ಹೃದಯಗತ ಲಿಂಗವ ಪೂಜಿಸಿ ।
ಚನ್ನಾಗಿ ಶಿವಯೋಗನಿದ್ರೆಯ ಬಲಿಸಿ ।
ಚನ್ನಮಲ್ಲಾಲಯದೊಳಗೈಕ್ಯವಾದ ಮಹದೇವಿ ಜೋ ಜೋ ॥೧೧॥

ಪಂಚಾಕ್ಷರೀಶನ ಶಿಸು ಬಸವ ನೀ ಹಾಡು ।
ಹಂಚಿಕೆಯಿಂದ ವಿರಚಿಸಿದ ನೋಡು ।
ಸಂಚಿತಾದಿಕರ್ಮ ನಾಶವ ಮಾಡು ।
ವಾಂಛಿತ ವರವ ನೀಡು ಕಾಪಾಡು ಮಹದೇವಿ ಜೋ ಜೋ ॥೧೨॥

ನಿನ್ನಯ ಚರಿತವ ಬರೆದೋದಿ ನಿತ್ಯ ।
ಚನ್ನಾಗಿ ಪಾರಾಯಣ ಮಾಡಿದವರಿಗೆ ।
ಸನ್ನುತ ಮೋಕ್ಷದ್ವಿ ಪ್ಪೊರೆವ ಶ್ರೀ ಶೈಲ ।
ಚನ್ನಮಲ್ಲಿಕಾರ್ಜುನನಿದು ಸತ್ಯ ಮಹದೇವಿ ಜೋ ಜೋ ॥೧೩॥

—ಬಸಪ್ಪ ಮಲ್ಲಪ್ಪ ಮಾರೀಹಾಳ (ಗವಾಯಿ)
ಧಾರವಾಡ

# ಬಸವಣ್ಣನವರ ಸಂಸಾರ.

(ಲೇಖಕಃ— ಶ್ರೀಯುತ ಸಿಂಪಿ ಲಿಂಗಣ್ಣ ಹಲಸಂಗಿ.)

[ಮುಂದೆ ಸಾಗಿದ್ದು.]

"ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ? ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬ ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ? ತನುವಿನಲ್ಲಿ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ ಮನೆಯೊಳಗೆ ಮನೆಯೊಡೆಯನಿಲ್ಲ ಕೂಡಲ ಸಂಗಮದೇವಾ."

ಹೊಸ್ತಿಲಲ್ಲಿ ಹುಟ್ಟಿದ ಹುಲ್ಲು ತೆಗೆದು ಹಸನಾಗಿ ಮನೆಯೊಳಗಿನ ರಜವನೆಲ್ಲ ತೊಳೆಯಿಸಿದರೆ ಮನೆಯೊಳಗೆ ಮನೆಯೊಡೆಯನು ಬಂದು ವಾಸಿಸಬಹುದಾಗಿದೆ. ತನುವಿನ ಹುಸಿ ಕಳೆದು, ಮನದೊಳಗಿನ ವಿಷಯ ವಳಿದರೆ ಮನದೊಡೆಯನು ಮನದಲ್ಲಿ ಪ್ರವೇಶಿಸಬಹುದಾಗಿದೆ. ಹುಸಿಯಿಲ್ಲದ ತನು, ವಿಷಯವಳಿದ ಮನ ಇವನ್ನು ಹೊದ್ದಿದ ವ್ಯಕ್ತಿ ಜಗನ್ನಾಥನ ರಥವಾಗುತ್ತದೆ. ಜಗನ್ನಾಥನು ಆ ರಥವನ್ನೇರಿ ನಡೆಸಿಕೊಂಡು ಹೋಗುವಂಥವನು. ಆ ರಥವನ್ನು ಬಿಡುವುದಕ್ಕೆ ಒಂದು ಸ್ಥಳ ಬೇಡವೇ? ಗ್ಯಾರೇಜು! ಮನೆಯೇ ಆ ರಥ ಬಿಡುವುದಕ್ಕೆ ತಕ್ಕ ಸ್ಥಳವಾಗಬೇಕು. ದೇವದೇವನ ದಿವ್ಯರಥವನ್ನು ಬಿಡುವುದಕ್ಕೆ ಮನೆಯು ಒಪ್ಪುವ ಸ್ಥಳವಾಗಬೇಕಾದರೆ, ಅಲ್ಲಿ ಹೊರಗೆ ತೋರುವ ಹುಲ್ಲು-ರಜಗಳೂ, ಕಸ-ಕಡ್ಡಿಗಳೂ ಮೊದಲು ಇಲ್ಲದಾಗಬೇಕು. ಆಮೇಲೆ ರವಿಕರಗಳಿಂದ ತಿಳಿಗೊಂಡ ವಾತಾವರಣವೂ ವಾಯುದೇವನು ಆಡಿಯಾಡುವ ಅಡುಂಬೊಲವೂ ಆಗಬೇಕು. ಅಲ್ಲಿ ಅಳುನುಂಗಿ ನಗುವ ನಲ್ಲೆಯೂ, ವಿಶ್ರಾಂತಿಗೆ ಬರುವ ಸಂಸಾರಯೋಧನಾದ ನಲ್ಲನೂ ನಲಿಯುವರು. ಇಂಥ ನಲುಮೆಯಲ್ಲಿ ಮಕ್ಕಳ ಮುದ್ದು ಮುಗುಳುವದು; ಅಕ್ಕರೆಯು ಸಕ್ಕರೆ ಚೆಲುವರಿಯುವದು; ನಗೆಯು ಮಲ್ಲಿಗೆ ಅರಳುವದು; ಜೀವನವು ಸಂಸಾರವಾಗುವದು; ದಿವ್ಯತೆಯು ದಿಂಡುರುಳಿಕೆ ಹಾಕುವದು. ಇದೇ ಕೇಡಿಲ್ಲದ ಪದವಿ, ಅದು ಕೂಡಲಸಂಗನ ರಾಜತೇಜದಲ್ಲಿಪ್ಪವರಿಗೆ

ಮಾತ್ರ ಲಭಿಸತಕ್ಕುದು. ಕೂಡಲಸಂಗನ ರಾಜತೇಜದಲ್ಲಿಪ್ಪರನ್ನು ಲೌಕಿಕವೂ ಅಲೌಕಿಕವೂ ಕಾವಾಗಿಯೇ ನೆರೆದು ಓಲೈಸುವವು.

ಈ ಬಾಳತೋಟದಲ್ಲಿ ಸೊಗಸಾದ ಗಿಡವಾಗಿ ಬಾಳಬೇಕಾದರೆ, ಕುಟುಂಬದ ಪಾತಿಯಲ್ಲಿ ಆ ಅಗಿಯು ಚೆನ್ನಾಗಿ ಮೊಳೆದು ಬಂದಿರಬೇಕಾಗುತ್ತದೆ. ಲೋಕದ ಡೊಂಕು ತಿದ್ದುವ ಕಾರಭಾರವನ್ನು ಬಿಟ್ಟು ನಮ್ಮ ನಮ್ಮ ತನುವ ಸಂತಯಿಸಿಕೊಳ್ಳಬೇಕಾದುದು, ಮನವ ಸಂತಯಿಸಿಕೊಳ್ಳುವುದು ಮೊದಲ ಕರ್ತವ್ಯವಾಗುತ್ತದೆ. ಅದನ್ನು ಬಿಟ್ಟು ಮೊದಲು ನೆರೆಮನೆಯವರ ದುಃಖಕ್ಕೆ ಅಳುವುದೇ ಪರೋಪಕಾರದ ಕೆಲಸವೆನ್ನುವವರನ್ನು ಕೂಡಲಸಂಗಮದೇವನು ಮೆಚ್ಚುವನೇ? ತನುಮನಗಳು ಸಂತಸಗೊಂಡರೆ ಮನೆಯೂ ಮನೆಯವಳೂ ಸಂತಸಗೊಳ್ಳುವುದು ಸಹಜ. ಮನೆಯ ಪರಿಪೂರ್ಣವಿಕಾಸವೆಂದರೆ ಮನೆಯವಳ ಹೃದಯದಿಂದ ಗಂಡನ ಧ್ಯೇಯವು ಪ್ರತಿಬಿಂಬಿತವಾಗಿ ಪ್ರತಿಧ್ವನಿಗೊಡುವುದು. ಆ ಧೈರ್ಯವು ಈಸುವದಕ್ಕೆ ಸಂಗಡಿಯೂ ಇದ್ದು ಜೈಸುವುದಕ್ಕೆ ಬೆಂಗಾವಲೂ ಆಗುತ್ತದೆ. ಬಸವಣ್ಣನವರು ತಮ್ಮ ಜೀವನದ ಕೊನೆಯಂಕದಲ್ಲಿ, ಕಲ್ಯಾಣವನ್ನು ತ್ಯಜಿಸಿ ಕಪ್ಪಡಿಗೆ ಮರಳಿದರಷ್ಟೇ? ಅರ್ಧದಾರಿಗೆ ಬಂದಮೇಲೆ ಹಿಂದೆ ಬಿಟ್ಟುಬಂದ ಮುದ್ದು ಮಡದಿ ನೀಲಾಂಬಿಕೆಯ ನೆನಪು ಬಂದಿತು; ಅವಳ ಯೋಚನೆ ನೆನಹು ತುಂಬಿನಿಂತಿತು. ತಾವು ಸಂಗಮನಾಥನಲ್ಲಿ ಐಕ್ಯವಾಗುವೆನೆಂದೂ, ನೀನು ಸಹ ಅಲ್ಲಿಗೆ ಬಂದು ಐಕ್ಯವಾಗಬೇಕೆಂದೂ ಬಸವಣ್ಣನವರು ಹಡಪದ ಅಪ್ಪಣ್ಣನೊಂದಿಗೆ ಹೇಳಿಕಳಿಸಿದರು. ಅಪ್ಪಣ್ಣನು ನೀಲಾಂಬಿಕೆಗೆ ಅದೇ ಪ್ರಕಾರ ಬಿನ್ನಯಿಸಿಕೊಳ್ಳಲು, ಆಕೆಯು ಆ ಪ್ರಸಂಗದಲ್ಲಿ ಉತ್ತರವಿತ್ತ ಮಾತುಗಳಲ್ಲಿ ಕಂಗೊಳಿಸುವ ವಿಚಾರದ ಮಿಂಚು, ಆಕೆಯ ತೇಜಸ್ಸನ್ನು ಸೂಚಿಸುತ್ತದೆ; ಆಕೆಯ ಮೇಲುಮಟ್ಟದ ನಿಲುವನ್ನು ತೆಗೆದು ತೋರಿಸುತ್ತದೆ. ಆ ಉತ್ತರ ಏನಂದರೆ—

"ನಾನಾರ ಸಾರುವೆನೆಂದು ಚಿಂತಿಸಲೇಕಯ್ಯ? ನಾನಾರ ಹೊಂದುವೆನೆಂದು ಭ್ರಮೆ ಪಡಲೇಕಯ್ಯ? ನಾನಾರ ಇರವನರಿಯೆನೆಂದು ಪ್ರಳಾಪಿಸಲೇಕಯ್ಯ? ಪರಿಣಾಮಮೂರ್ತಿ ಬಸವಣ್ಣನ ರೂಪು ಕರಸ್ಥಲದಲ್ಲಿ ಬೆಳಗಿದ ಬಳಿಕ ಸಂಗಯ್ಯನ ಹಂಗು ನಮಗೇತಕ್ಕೆ ಅಪ್ಪಣ್ಣಾ?"

"ಅಲ್ಲಿಗೆ ಎನ್ನನು ಬರಹೇಳಿದರಂತೆ ಇಲ್ಲಿ ತಾವಿಲ್ಲವೇ ಸಂಗಯ್ಯನು?".

"ಸಂಗನ ಬಸವಣ್ಣನೆಂದ ನಿರೂಪಕ್ಕೆ ಹಿಂಗದೆ ಕರವೆತ್ತಿ ಮುಗಿವುತಲಿ ಸಂಗಮನಾಥನೇ ಈತನೆಂದೆನುತಲಿ ಎನ್ನಂಗೈಯ್ಯ ಲಿಂಗದೊಳಡಗುವೆ."

ಬಸವಣ್ಣನವರು ಸಂಗನಬಸವಣ್ಣನೆಂದರೆ ಸಂಗನಿಂದ ಹೊರಟ ಕಿರಣವಾದುದರಿಂದ ಕಿರಣವು ಪ್ರಕಾಶದಲ್ಲಿ ವಿಲೀನಹೊಂದಿತು. ಅಂಗಯ್ಯೊಳಗಿನ ಲಿಂಗವೇ ತನಗೆ ಬಸವದೇವರೆಂದು- ಸಾವಿಲ್ಲದ ಕೇಡಿಲ್ಲದ ಚೆಲುವನಲ್ಲಿ ಅಡಗುವೆನೆಂದು ಸ್ಪಷ್ಟವಾಗಿ ಹೇಳಿದರು. ಇದಲ್ಲವೇ ಸಾರ್ಥಕ ಸಂಸಾರ! ಇದಲ್ಲವೇ ಅರ್ಥಪತ್ತಾದ ಜೀವನ! ಇದಲ್ಲವೇ ವಾಸ್ತವಿಕ ದಾಂಪತ್ಯ? ಕೈಹಿಡಿದ ಸತಿಯು ಆತ್ಮೋನ್ನತಿಯು ಮಟ್ಟವನ್ನಳೆದರೆ ಬಸವಣ್ಣನವರ ಮನೆ, ಮನೆಯುವಳು, ದಾಂಪತ್ಯ ಜೀವನ ಇವುಗಳ ಔನ್ನತ್ಯದ ಅಳತೆಯಾಗಬಹುದು.

## ದಿವ್ಯಸಂಸಾರ.

ಬಸವಣ್ಣನವರು ಸಂಸಾರಿಗಳು. ಇಬ್ಬರು ಕೆಂಡಿರುಳ್ಳ ಸಂಸಾರ. ಸಂಸಾರವೆಂದರೆ ಸ್ವಾಭಾವಿಕವಾಗಿ ಕಾಮದೊಲುಮೆಯು ಗುರುತು. ವೈರಾಗ್ಯವು ಕಾಮದ ಗೆಲುವೆಯು ಕುರುಹು. ಅಕ್ಕಮಹಾದೇವಿ ವೈರಾಗ್ಯದ ಕಳಸ. ಕಾಮದ ಜಂಜಡವನ್ನು ತಪ್ಪಿಸಿಕೊಂಡು ಶರಣಸತಿ-ಲಿಂಗಪತಿಯುನ್ನು ಅಪ್ಪಿಕೊಂಡವಳು; ಅವಳಿಗೆ ಕಾಮದ ಗೆಲುವೆಯಾಗಲಿ, ಕಾಮದಹನನ ಒಲುಮೆಯಾಗಲಿ ಉಂಟಾದುದು ಸಂಸಾರ ಜಂಜಡದ ಬಸವಣ್ಣನವರ ಪುಣ್ಯದಿಂದಲೇ ಅಂತೆ! "ಕಾಮನ ಗೆಲಿದೆನು ಬಸವಾ ನಿಮ್ಮ ದಯದಿಂದ. ಸೋಮಧರನ ಹಿಡಿತಪ್ಪೆನು ಬಸವಾ ನಿಮ್ಮ ಕೃಪೆಯಿಂದ" ಎಂದು ಬಾಯಿತುಂಬ ಎದೆತುಂಬ ಹಾಡಿದ್ದಾಳೆ ಅಕ್ಕಮಹಾದೇವಿ. ಈ ಮಾತು ಬಸವಣ್ಣನವರು ಸಂಸಾರ ಪರೀಕ್ಷೆಯಲ್ಲಿ ತೇರ್ಗಡೆಹೊಂದಿದ ಯೋಗ್ಯತಾಪತ್ರ; ಜಯಪತ್ರವೆಂದರೂ ಸರಿಯೇ. "ಐವತ್ತೆರಡು ವಿಧದಲ್ಲಿ ನಿಪುಣನಾಗಿ ಮೆರೆವ ನಮ್ಮ ಬಸವಣ್ಣನು. ಆ ಬಸವಣ್ಣನ ಶ್ರೀಪಾದಕ್ಕೆ ನಾನು ಅಹೋರಾತ್ರಿಯಲ್ಲಿ ನಮೋ ನಮೋ ಎಂದು ಬದುಕಿದೆನು ಕಾಣಾ ಚೆನ್ನಮಲ್ಲಿಕಾರ್ಜುನಾ" ಎಂದು ಅಕ್ಕನು ಅಣ್ಣನಿಗೆ ಮೆಚ್ಚುಗೆ ತೋರಿಸಿದ್ದಾಳೆ.

ಶರಣಬಸವಣ್ಣನಿದ್ದ ಕ್ಷೇತ್ರವೇ ಅವಿಮುಕ್ತಕ್ಷೇತ್ರ." ವಂತೆ. ಹೌದು-ಬಸವಣ್ಣನವರಿದ್ದ ಸ್ಥಳವು ಅರಣ್ಯವಲ್ಲ, ನಗರ. ಅವರ ವಾಸಸ್ಥಳವು ದೇವಾಲಯುವಲ್ಲ, ಮಠವಲ್ಲ, ತಪೋವನವಲ್ಲ. ಸಂಸಾರಕ್ಕಿಂಬಾದ ಮನೆ. ಏಕಾಂತಸ್ಥಾನದಲ್ಲಿ ಅವರ ಆಯುಷ್ಯ ಸವೆಯಲಿಲ್ಲ. ಹೆಂಡಿರು ಮಕ್ಕಳು-ಆಪ್ತ-ಸೇವಕ ಜನರಿಂದ ಕಿಕ್ಕಿರಿದ ಮನೆ ಅವರ ನಿವಾಸ ಸ್ಥಾನ. ಯಜ್ಞಯಾಗಾದಿಗಳು ಅವರ ನಿತ್ಯಕರ್ಮವಲ್ಲ ; ರಾಜಕಾರಣವೇ ಅವರ ನಿರಂತರದ ಕಾಯಕ. ಇಷ್ಟಿದ್ದರೂ —

"ಕುಂಡಲಿಗನ ಕೀಟಕದಂತೆ ವೈಮಣ್ಣಾಗದಂತೆ ಇರ್ದೆಯಲ್ಲ ಬಸವಣ್ಣ. ಜಲದೊಳಗಣ ತಾವರೆಯಂತೆ ಹೊದ್ದಿಹೊದ್ದದಂತೆ ಇರ್ದೆಯಲ್ಲ ಬಸವಣ್ಣ. ಜಲದಿಂದಾದ ಮೌಕ್ತಿಕದಂತೆ ಜಲವು ತಾನಾಗದಂತೆ ಇರ್ದೆಯಲ್ಲ ಬಸವಣ್ಣ. ಗುಹೇಶ್ವರ ಲಿಂಗದಾಣತಿವಿಡಿದು ತನುಗುಣ ಮತ್ತರಾಗಿರ್ಪ ಐಶ್ವರ್ಯಾಂಧಕರ ಮತವನೇನ ಮಾತಬಂದೆಯಯ್ಯಾ ಸಂಗನಬಸವಣ್ಣ?" ಈ ಮಾತನ್ನು ಅದ್ವೈತಶಿಖಾಮಣಿಯೆನಿಸಿದ ಪ್ರಭುದೇವರು ಭಕ್ತಬಾಕುಳಿಯಾದ ಬಸವಣ್ಣನವರನ್ನು ಗೌರವಿಸಿದ ವಾಸ್ತವಿಕ ನುಡಿಗಳು. ಬಸವಣ್ಣನವರ ಸಂಸಾರ, ಅವರ ಸತಿ, ಅವರ ಸಂಯಮ, ಅವರ ಧ್ಯೇಯಸಾಧನೆ ಇವೆಲ್ಲವುಗಳಿಗೆ ಅವರ ಭಕ್ತಿಪೀಯೂಷದಿಂದುಂಟಾದ ಅಮರತೆಯನ್ನು ಪ್ರಭುದೇವರ ಮಾತುಗಳಲ್ಲಿಯೇ ತಿಳಿಯಬೇಕು—

"ಸತಿಯ ಕಂಡು ಬ್ರತಿಯಾದ ಬಸವಣ್ಣ. ಬ್ರತಿಯಾಗಿ ಬ್ರಹ್ಮಚಾರಿಯಾದ ಬಸವಣ್ಣ. ಬ್ರಹ್ಮಚಾರಿಯಾಗಿ ಭವಗೆಟ್ಟನಯ್ಯ ಬಸವಣ್ಣ. ಗುಹೇಶ್ವರಾ, ನಿಮ್ಮಲ್ಲಿ ಬಾಲಬ್ರಹ್ಮಚಾರಿಯಾದಾತ ಬಸವಣ್ಣನೊಬ್ಬನೇ."

ಸಂಸಾರದ ಹಿಡುವಳಿಯಲ್ಲಿಯೇ ಕವಲುಗೊಂಡ ಪುರುಷಾರ್ಥಗಳನ್ನು ಸಾಧಿಸುವುದೆಂದರೆ ಸಂಸಾರ ವಿಜಯ. ಖಂಡಿತವಾದಿಯೂ ಉಪಚಾರ ಲೇಶವನ್ನರಿಯದವನೂ ಎಂದು ಹೆಸರಾದ ಅಂಬಿಗರ ಚವಡಯ್ಯನು ಬಸವಣ್ಣನವರಿಗಿತ್ತ ಜಯಪತ್ರದಲ್ಲಿ ಬರಕೊಟ್ಟದೇನಂದರೆ-

"ಪರಮ ಪುರುಷಾರ್ಥಿಯಾದರೆ ಬಸವ ಕುಮಾರನಂತಿರಬೇಕು." ಸಂಸಾರದಲ್ಲಿದ್ದರೂ, ಗಮನವನ್ನೆಲ್ಲ ಪರಮಾರ್ಥದಲ್ಲಿರಿಸಿದ್ದರೆಂಬುವ ಮಾತನ್ನು ಮುಚ್ಚುಮರೆಯಿಲ್ಲದೆ ಒಪ್ಪಿಕೊಳ್ಳುತ್ತಿದ್ದ ಶರಣರ ಮನಸ್ಸಿನ ಔದಾರ್ಯವು ಅಗಾಧಪಡುವಂಥದಾದರೂ, ಅವರ ಔದಾರ್ಯಕ್ಕೆ ಕಾರಣ

ನಾದ ಬಸವಣ್ಣನ ಅಂತರಂಗದ ಗಭೀರತೆಗೆ ಅದೆಷ್ಟು ಆಗಾಧಪಡಬೇಕೋ ತಿಳಿಯಲಾರದು-

“ಕಾಯವಹೊದ್ದದೆ ಮಾಯವ ಸೋಂಕದೆ, ನಿರಾಳದಲ್ಲಿ ನಿಂದೆಯಲ್ಲ ಬಸವಣ್ಣ. ನೀನೆನ್ನನವಗ್ರಹಿಸಿ, ನಾ ನಿನ್ನನವಗ್ರಹಿಸಿ, ಸಂದುಭೇದವಿಲ್ಲದಿಪ್ಪಲ್ಲಿ ಹೊಗಳಿಂಬುಂಟೇ ಬಸವಣ್ಣ? ಕಲಿದೇವರ ದೇವನು ಕಾಯಗೊಂಡಿಪ್ಪುದ ನಿನ್ನಿಂದ ಕಂಡೆನು ಕಾಣಾ ಬಸವಣ್ಣ.”

ಜಗದಗಲ ಮಿಗೆಯಗಲನಾದ ಸರ್ವಾಂತರ್ಯಾಮಿ ಸಂಗಮನಾಥನು ಚುಳುಕಾಗಿ ಅಂಗೈಯಲ್ಲಿ ಕುಳಿತುದನ್ನು ಕಾಣುವ ಬಸವಣ್ಣನ ಬಲುಹನ್ನು ಸಮಕಾಲೀನರಾದ ಇತರ ಶರಣರು ಕಲಿತುಕೊಂಡಂತೆ ಮಡಿವಾಳ ಮಾಚಿದೇವನು ಕಲಿತುಕೊಂಡು ತನ್ನ ಸಂಸಾರಿ-ಗುರುವಿಗೆ ಕೃತಜ್ಞತೆಯನ್ನು ತೋರಿಸಿದ್ದಾನೆ.

## ಬಸವಣ್ಣನವರ ದಿನಚರಿ

ಮಹಾಪುರುಷರ ಜೀವನವೆಲ್ಲವೂ ಕವಿತೆಯ ಹೊನಲಾಗಿಯೇ ಹರಿಯುತ್ತಿರುತ್ತದೆ. ಇಡಿಯ ಬಾಳಿನ ಚಲನವಲನಗಳೆಲ್ಲ ದೇವದೇವನ ಅಡಿಯನ್ನು ಅರ್ಚಿಸುತ್ತಿರುವ ಪೂಜಾವಿಧಿಯಂತೆ ಸಾಗುತ್ತಿರುತ್ತವೆ. ವ್ಯಕ್ತವಾಗಿ ಪರಮಾತ್ಮನನ್ನು ಪೂಜಿಸುವುದು; ಆ ಪೂಜೆಗೆ ಹಿನ್ನೆಲೆಯಾದ ಸ್ನಾನಾದಿ ಸಿದ್ಧತೆ; ಪ್ರತಿಫಲಾಪೇಕ್ಷೆಯಿಲ್ಲದ ಕಾಯಕ, ಅತಿಥಿಸತ್ಕಾರ ಸತ್ಪುರುಷರೊಡನೆ ಮಾತುಕತೆ-ಬಹುತರವಾಗಿ ಪ್ರತಿ ಒಬ್ಬನಿಗೂ ಬೆಂಬಳಿಸಿರುವ ಕರ್ತವ್ಯಗಳೆಂದರೆ ಇವಿಷ್ಟೇ ಅಲ್ಲವೇ? ಅವನ್ನು ನಿದ್ರಾಕಾಲದ ಎಂಟು ತಾಸುಗಳನ್ನುಳಿದು ಹದಿನಾರು ತಾಸುಗಳಲ್ಲಿ ಹಂಚಿ ಹಾಕುವುದು. ಆ ಹದಿನಾರು ತಾಸುಗಳಲ್ಲಿ ಅರ್ಧದಷ್ಟು ಕಾಲ ಕಾಯಕದಲ್ಲಿ ಕಳೆಯುತ್ತದೆ. ಕಾಯಕವೇ ಇಲ್ಲದವರ ಹೊತ್ತುಹೋಗುವುದೇ ದುಸ್ತರ; ಆದ್ದರಿಂದ ಅಲ್ಲದ ಸಲ್ಲದ ಉಪದ್ವ್ಯಾಪಗಳನ್ನು ಹುಡುಕಿ ಮೈಮೇಲೆ ಹಾಕಿಕೊಳ್ಳಬೇಕಾಗುತ್ತದೆ. ಸಾರ್ಥಕಜೀವನ ನಡೆಯಿಸಿದವನ ಆಯುಷ್ಯವೆಲ್ಲವೂ ಅವ್ಯರ್ಥವಾಗಬೇಕಾದರೆ, ಪ್ರತಿ ಒಂದು ದಿನವು ಸಹ ಅವ್ಯರ್ಥವಾಗುವಂತೆ ನೋಡಿಕೊಳ್ಳಬೇಕಾಗುತ್ತದೆ. ಬಸವಣ್ಣನವರ ದಿನಚರಿಯನ್ನು ಅರಿಯಬೇಕಾದರೆ ಅವರದೇ ಒಂದು ವಚನವನ್ನು ನೋಡಿಬಿಟ್ಟರೆ ಸಾಕು —

"ಸುಪ್ರಭಾತ ಸಮಯದಲ್ಲಿ ಅರ್ಥಿಯಲ್ಲಿ ಲಿಂಗವ ನೆನೆದರೆ ತಪ್ಪುವುದು ಅಪಮೃತ್ಯು, ಕಾಲಕರ್ಮಂಗಳಯ್ಯಾ! ದೇವಪೂಜೆಯ ಮಾಟ, ದುರಿತ ಬಂಧನದೋಟ, ಶಂಭು ನಿಮ್ಮಯ ನೋಟ ಹರೆಹಿಂಗದ ಕಣ್ಬೇಟ. ಸದಾಸನ್ನಿಹಿತನಾಗಿ ಶರಣೆಂಬುವುದು ನಂಬುವುದು. ಜಂಗಮಾರ್ಚನೆಯ ಮಾಟ ಕೂಡಲ ಸಂಗನ ಕೂಟ."

ಏಳುವುದು ಯಾವಾಗವೆನ್ನುವುದನ್ನು ಹೇಳಿಬಿಡದೆ, ಆಗ ಎದ್ದ ಬಳಿಕ ಮಾಡಬೇಕಾದ ಕೆಲಸವೇನೆಂಬುದನ್ನು ಮಾತ್ರ ಸೂಚಿಸಿ ಪಾರಾಗದೆ, ಆ ಕೆಲಸ ಹೇಗೆ ಮಾಡಬೇಕೆಂಬುದನ್ನೂ, ಅದರಿಂದಾಗುವ ಫಲಪರಿಣಾಮವೇನೆಂಬುದನ್ನೂ ಸ್ಪಷ್ಟಗೊಳಿಸಿದ್ದಾರೆ. ಹೊತ್ತಾರೆ ಏಳುವುದಾಯ್ತು. ಎದ್ದಮೇಲೆ ಲಿಂಗವನ್ನು ನೆನೆಯುವುದು. ಲಿಂಗವನ್ನು ನೆನೆಯುವುದು ಹೇಗೆ? ಅರ್ಥಿಯಿಂದ. ಹೀಗೆ ಮಾಡುವುದರಿಂದ ಅಪಮೃತ್ಯುವೂ ಕಾಲಕರ್ಮಂಗಳೂ ತಪ್ಪುವವು. ಆ ಬಳಿಕ ದೇವಪೂಜೆಯು ಸಿದ್ಧತೆ. ಅಗ್ಗವಣಿ ಪತ್ತರೆಯ ತರುವುದು. ಆ ಕೆಲಸವನ್ನು ಇಳಿಹೊತ್ತಿನವರೆಗೂ ಮಾಡಿ- ಪೂಜೆ ಸಂಜೆಗೆ ಮಾಡಿಮುಗಿಸಿ ದಿವಸ ಕಳೆದರಾಗಲಿಲ್ಲ. "ಹೊತ್ತು ಹೋಗುವ ಮುನ್ನ ಪೂಜಿಸು ಲಿಂಗವ." ಯಾಕೆಂದರೆ ಇನ್ನು ಮುಂದೆ ದಾಸೋಹಕ್ಕಾಗಿ ಕಾಯಕವನ್ನೂ, ಅತಿಥಿ ಸತ್ಕಾರವನ್ನೂ ಮಾಡುವದಿರುತ್ತದೆ. ಆದುದರಿಂದ ನಿತ್ಯಕರ್ಮಗಳನ್ನು ಕಾಲಕಾಲಕ್ಕೆ ಮಾಡಿಮುಗಿಸದೆ ಗತ್ಯಂತರವೇ ಇಲ್ಲ. ಆ ಮೇಲೆಯೂ ತುಸು ವೇಳೆ ಉಳಿದರೆ- "ನಗುವುದು ನುಡಿವುದು ಶಿವಭಕ್ತರೊಡನೆ. ಸುಮ್ಮಾನ ಹಮ್ಮುಬಿಮ್ಮಾಗಿರಲೇಕಯ್ಯ? ...... ಕೂಡಲ ಸಂಗನಶರಣರೊಡನೆ ಮನದೆರೆದು ಮಾತನಾಡುವುದಯ್ಯ." ನಗುವುದು ಹುಡುಗತನದ ಲಕ್ಷಣವೆಂದೂ, ನಕ್ಕರೆ ದೊಡ್ಡತನಕ್ಕೆ ಕೇಡೆಂದೂ ಹೇಳುವವರುಂಟು. ಆದರೆ ಸತ್ಪುರುಷರು ನಗೆಯಿಂದಲೇ ತಾವು ಬದುಕಿ ಉಳಿದಿರುವೆವೆಂದೂ, ಲೋಕದ ಅಜ್ಞಾನ ತಿಳಿದಷ್ಟು ತಿಳಿನಗೆ ಸೂಸುತ್ತದೆಂದೂ ಮಹಾಮಹಿಮರೇ ಹೇಳಿ, ಆನಂದದ ಮಕ್ಕಳಾದವರು ನಗದೆ ಅಜ್ಞಾನದ ಕುನ್ನಿಗಳೇಕೆ ನಕ್ಕಾವೆಂದು ಪ್ರಶ್ನೆಮಾಡುತ್ತಾರೆ.

## ಮಾತುಕತೆ

ನಾಲಗೆ ಕುಲವನ್ನು ಹೇಳಿಕೊಡುತ್ತದಂತೆ. ನಾಲಗೆ ಸವಿಯನು ಪರೀಕ್ಷಿಸುವ ಒಂದು ಇಂದ್ರಿಯವಾಗಿರುವಂತೆ, ಮಾತನಾಡುವ ಯಂತ್ರದ

ಒಂದು ಮಹತ್ವದ ಭಾಗವೂ ಆಗಿರುತ್ತದೆ. ಮಾತು ಬಂದಾಗ ಸೋತು ಹೋದವನು ಜಾಣನೆಂದೂ, ಮಾತು ಅರಿಯದವನು ಜಗಳ ತಂದರೆ ಮಾತುಬಲ್ಲವನು ಮಾಣಿಕತರುವನೆಂದೂ ಹೇಳುತ್ತಾರೆ. ಮಾತುವು ನೆಯು ಕೊಂಡಿತೆಂದೂ, ಮಾತಿನಲ್ಲಿಯೇ ಇಹಪರಗಳೆಂದೂ ಹೇಳುವು ದನ್ನು ಕೇಳುತ್ತೇವೆ. ಹಳ್ಳಕೆರಿಗಳು ವ್ಯೈತೆಗೆದರೆ ಹುಳುಕಪ್ಪೆಗಳು ಕಾಣಿ ಸಿಕೊಂಡರೆ ಸಮುದ್ರ ಸರೋವರಗಳು ವ್ಯೈತೆಗೆದರೆ ಮುತ್ತು-ರತ್ನಗಳು ಹೊರಬರುವವೆಂದು ಹೇಳುವಲ್ಲಿ ಅಳಿಮನದವರ ಸಂಭಾಷಣೆಯನ್ನೂ ತಾರತಮ್ಯಕ್ಕಾಗಿ ಹೊಂದಿಸಿಟ್ಟ ಹಾಗಿದೆ. “ಸತ್ಯವ ನುಡಿವುದೇ ಸ್ವರ್ಗ ಲೋಕ; ಮಿಥ್ಯವ ನುಡಿವುದೇ ಮರ್ತ್ಯಲೋಕ.” ಎಂದು ಉಸುರಿದ ಬಸವಣ್ಣನವರ ನುಡಿಯು ಬರಿಯ ಗಾಳಿಯ ಸದ್ದಲ್ಲ. ಅದರಲ್ಲಿ ಅನು ಭವದ ಮನವರಿಕೆ ಇದೆ; ಸತ್ಯದ ಸಂಸ್ಕಾರವಿದೆ. ತತ್ವವನ್ನು ಅನುಭ ವಿಸಿ ಅದನ್ನು ತಮ್ಮದಾದ ನುಡಿಗಳಲ್ಲಿ ಕೋದು ಹೃದಯದೊಳಗಿಂದ ಹಾಯಿಸಿಕೊಂಡು ಬಂದುದರಿಂದ ಅದರಲ್ಲೊಂದು ಮಂತ್ರಶಕ್ತಿಯುಂಟಾ ಗಿದೆ. “ಸುಳ್ಳನಾಡಲು ಬೇಡ, ಕಳ್ಳನೆನಿಸಲು ಬೇಡ” ಎಂದ ಮಾತು ಬಲ್ಲವರೆಲ್ಲ ಬಳಸಿಮಾಡುತ್ತಾರೆ. ಆದರೆ ಅದರಲ್ಲಿ ಮಂತ್ರದ ಶಕ್ತಿಯೂ ಅನುಭವದ ಕೆಚ್ಚೂ ಮಾರ್ಪೊಳೆಯಬೇಕಲ್ಲವೇ ?

ಹಿರಿಯರ ಪುಣ್ಯ ಸಹ ಖರ್ಚುಮಾಡಿ, ಏಸೋ ದಿವಸಗಳ ರೂಢಿ ಯಿಂದಲೂ ವ್ಯಾವಹಾರಿಕ ಲಾಭಕಂಡು ಬಂದುದರಿಂದಲೂ ಸತ್ಯವನ್ನು ನುಡಿಯಬಹುದು. ಸತ್ಯವನ್ನು ನುಡಿದ ಮಾತ್ರಕ್ಕೆ ಸ್ವರ್ಗವು ಕನ್ನಡಿ ಯೊಳಗಿನ ಗಂಟಿಗಿಂತ ಹೆಚ್ಚು ಬೆಲೆಯದೇನೂ ಆಗಲಾರದು; ಅಥವಾ ನಿಲುಕಲಾರದ ದ್ರಾಕ್ಷಿಯನ್ನು ತಿನ್ನಲರಿಯದೆ ಕಣ್ಣಿಂದ ಮಾತ್ರ ಕಂಡು ಅದರ ಸವಿಯನ್ನುಸುರುವ ಸಾಹಸ ಮಾಡಿದಂತಾಗುವದು. ಆದಕಾರಣ “ದಿಟವು ನುಡಿವುದು, ನುಡಿದಂತೆ ನಡೆವುದು” ನುಡಿ-ನಡೆಗಳ ಒಗೆತನವು ಗಿಟ್ಟಿ ಬಂದಾಗ ಅಲ್ಲಿ ದೇವನೊಲುಮೆ ಕಂಗೊಳಿಸುತ್ತದೆ. ಆಗ ಮಾತ್ರ ಸ್ವರ್ಗಸೃಷ್ಟಿಯು ಸಾರ್ಥಕವಾಗುತ್ತದೆ. “ನುಡಿದು ಹುಸಿವ ನಡೆದು ತಪ್ಪುವ ಪ್ರಪಂಚಿಯನೊಲ್ಲ ಕೂಡಲಸಂಗಮದೇವ.” ನಡೆ ನುಡಿಗಳಲ್ಲಿ ಒಗೆತನವಿಲ್ಲದವರದೇ ಒಂದು ರಾಜ್ಯವಿದ್ದು ಅದಕ್ಕೆ ಪ್ರಪಂ ಚವೆನ್ನುತ್ತಾರೆ. ಅವರಿಗಾಗಿ ಹುಸಿ ನುಡಿಯೂ, ನುಡಿದು ಹುಸಿಯು ವಿಕೆಯೂ ಮೀಸಲಾಗಿರುತ್ತವೆ. ಆದಕ್ಕೆಂತಲೇ ಶರಣವರೇಣ್ಯರು ಆ

ಹುಸಿಗೆ ಹೊಲೆಯೆಂದು ಹೆಸರಿಟ್ಟು ಅದನ್ನು ಬಳಸುವ ಹೊಲೆಯರನ್ನು ಹೊಲಗೇರಿಯೆಂಬ ಬೇರೊಂದು ಕೇರಿಯಲ್ಲಿಯೇ ಇರಿಸಿದ್ದಾರೆ. ಮಾತಿನ ಹೊಲೆಯೆಂದರೆ ಹುಸಿಯೊಂದೇ ಅಲ್ಲ; ಬಿರುಸೂ ಬೊಲಿನುಡಿಯು ಒಂದು ಲಕ್ಷಣವಾಗಿದೆ. " ಅಯ್ಯ ಎಂದರೆ ಸ್ವರ್ಗ, ಎಲವೋ ಎಂದರೆ ನರಕ" ಇವೆರಡರಲ್ಲಿಯೇ ನಾಲಗೆಯ ತಾರತಮ್ಯ ತೋರಿ ಕುಲವು ಕಣ್ಣಿಗೆ ಕಟ್ಟುತ್ತದೆ. "ಮೃದುವಚನವೇ ಸಕಲ ತಪಂಗಳಯ್ಯ; ಮೃದುವಚನವೇ ಸಕಲ ಜಪಂಗಳಯ್ಯ" ಎಂದು ಡಂಗುರಿಸಿದ ಬಸವಣ್ಣನವರು ಆ ಜಪತಪಗಳನ್ನು ಆಚರಿಸಿಯೇ ಕೂಡಲಸಂಗಮ ದೇವರ ತೋಳ ತೋಳ ಬಂದಿಯಾಗಿದ್ದಾನೆ; ಅಂಗೈ ಮಾಣಿಕವಾಗಿದ್ದಾನೆ.

" ಇತ್ತ ಬಾರಯ್ಯ ಇತ್ತ ಬಾರಯ್ಯ ಎಂದು ಭಕ್ತರೆಲ್ಲರು ಕೂರ್ತು ಹತ್ತೆ ಕರೆವುತ್ತಿರಲು ಮತ್ತೆಕೆಲಕೆ ಹೋಗಿ ಶರಣೆಂದು ಹಸ್ತಬಾಯನೆ ಮುಚ್ಚಿ, ಕಿರಿದಾಗಿ ಭೃತ್ಯಾಚಾರವ ನುಡಿವ ವಿನಯಧ್ಯಾನವುಳ್ಳಡೆ ಎತ್ತಿಕೊಂಬನಯ್ಯ ಕೂಡಲಸಂಗಮದೇವ ಪ್ರಮಥರ ಮುಂದೆ ' ಎಂದು ತಾನು ಮನಗಂಡ ಉಪಾಯವನ್ನು ಸಹಪಾಠಿಗಳ ಮುಂದೆ ಬಿಚ್ಚಿಟ್ಟಿದ್ದಾರೆ. ಒಳಿತಾದ ಉಪಾಯವನ್ನು ಕಕ್ಕುಲತೆಯ ವೈದ್ಯನು ತುಸು ಬಲುಮೆಪಡಿಸಿಯಾದರೂ ತನ್ನವರಿಗೆ ಉಸುರುವಂತೆ, ಬಸವಣ್ಣನವರು ತನ್ನವರಿಗೆ ತಮ್ಮ ಈ ಅನುಭವವನ್ನು ತುಸು ಒತ್ತಿಯಾಗಿಯಾದರೂ ಹೇಳದೆ ಬಿಟ್ಟಿಲ್ಲ. " ಏನು ಬಂದಿರಿ, ಹದುಳವಿದ್ದಿರಿ ಎಂದರೆ ನಿಮ್ಮ ಮೈಸಿರಿ ಹಾರಿಹೋಹುದೇ ? ಕುಳ್ಳಿರಿ ಎಂದರೆ ನೆಲ ಕುಳಿ ಹೋಹುದೇ ? ಒಡನೆ ನುಡಿದರೆ ಶಿರಹೊಟ್ಟೆ ಒಡೆವುದೇ ? " ತನ್ನೆಡೆಗೆ ಬಂದವರಿಗೆ ಕೊಡಲಿಕ್ಕಿಲ್ಲದ ಬಡವನಾದರೇನು, ಕೊಡುವ ಬುದ್ಧಿಯಿಲ್ಲದ ಆಳಿಮನದವನಾದರೇನು ?–"ಬನ್ನಿರಿ ಕ್ಷೇಮವೇ–" ಎಂದು ಕೇಳಿದರೇನಾದರೂ ಕೇಡೊದಗುವುದೇ ? ಬಂದವರು ಬಂದು ನಿಂತುಕೊಂಡೇ ಇರುವಾಗ 'ಬನ್ನಿರಿ ಕ್ಷೇಮವೇ ' ಎಂದರೂ ಸಾಕಾಗದು. ' ಕುಳ್ಳಿರಿ ' ಎಂದು ನುಡಿದಮೇಲೆ ಮುಂದಿನ ಮಾತು. ಅನ್ನಿಗರು ಬಂದು ನಿನ್ನಬಳಿ ಕುಳಿತುಹೋದರೆ ನೆಲ ತಗ್ಗುವುದೇ ಎಂದು ಬಸವಣ್ಣನವರು ಕೇಳುತ್ತಾರೆ. ಮನೆಗೆ ಬಂದವರನ್ನು ಕಣ್ಣೆತ್ತಿ ನೋಡದೆ, ಕುಳಿತುಕೊಳ್ಳಲಿಕ್ಕೆ ಹೇಳದೆ, ಕ್ಷೇಮಸಮಾಚಾರವನ್ನು ಕೇಳದೆ, ಬಿಮ್ಮನೆ ಬಿಗಿದುಕೊಂಡು ಕುಳ್ಳಿರುವ ಸ್ವಭಾ

ವದ ಡೊಳ್ಳು ಹೊಟ್ಟೆಯುವರಿಗೆ - ಪೊಳ್ಳು ತಲೆಯುವರಿಗೆ ಬಸವಣ್ಣನವರು "ಒಡನೆ ನುಡಿದರೆ ಶಿರಹೊಟ್ಟೆ ಒಡೆವುದೇ?' ಎಂದು ಕೇಳುತ್ತಾರೆ. ಬಿಮ್ಮ ಬೀಗಿ ಕುಳಿತುಕೊಳ್ಳುವ ಅನಿಷ್ಟ ಗುಣದಂತೆ ಸಿಕ್ಕಾಬಟ್ಟೆಗಳಹುವ ಪದ್ಧತಿಯೂ ಅನಿಷ್ಟವಾಗಿರುತ್ತದೆ. ಮಾತನ್ನು ಸೂರೆ ಮಾಡುವವನು ತಾನಾಗಿಯೇ ತನ್ನ ಮಾತಿನ ಸಂಕೋಲೆಯಲ್ಲಿ ಸಿಕ್ಕು ಬೀಳುತ್ತಾನೆ. ಆದ ಕಾರಣ ಒಂದು ಮಾತಿನಲ್ಲಿಯೇ ಮಾತಿನ ಸಲ್ಲಕ್ಷಣಗಳನ್ನೂ ತಮ್ಮ ಅನುಭವದ ತತ್ವಗಳನ್ನೂ ತುಂಬಿ ನಮ್ಮ ಮುಂದೆ ಇಟ್ಟಿದ್ದಾರೆ. ಅದು-

"ನುಡಿದರೆ ಮುತ್ತಿನ ಹಾರದಂತಿರಬೇಕು. ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು. ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು. ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು. ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿವನಯ್ಯ?"

(ಮುಂದುವರಿಯುವದು)

---

## ಪಂಚಾಕ್ಷರಿಯ ಉತ್ಪತ್ತಿ.

(೧) ನಾಮ ರೂಪು ಕ್ರಿಯೆಗಳೇನೂ ಇಲ್ಲದ ನಿತ್ಯನಿರಂಜನ ಪರವಸ್ತು ತಾನೇ ನಿರಂಜನ ಪ್ರಾಣ ನೋಡಾ. ಆ ನಿರಂಜನ ಪರವಸ್ತುವಿನಲ್ಲಿ ಪರಮಚಿತ್ಕಳೆಯು ಲಯವಾಗಿ, ಆ ಚಿದ್ರೂಪಕಳೆಯೇ ಶುದ್ಧ ಪ್ರಣವುವೆನಿಸಿತ್ತು ನೋಡಾ. ಆ ಶುದ್ಧ ಪ್ರಣವುದಲ್ಲಿ ಚಿತ್ತು, ಆ ಚಿತ್ತೇ ಸಚ್ಚಿದಾನಂದ ಸ್ವರೂಪುಳ್ಳದಾಗಿ, ಚಿತ್‌ಪ್ರಣವುವೆನಿಸಿತ್ತು ನೋಡಾ. ಆ ಚಿತ್‌ಪ್ರಣವುಸ್ವರೂಪವಪ್ಪ ಪರತತ್ವದಲ್ಲಿ ಪರಾಶಕ್ತಿ ಉದಯುವಾಯಿತ್ತು. ಆ ಪರಾಶಕ್ತಿಯಿಂದ ನಾದಬಿಂದುಕಳೆಗಳು ಆದವಯ್ಯಾ. ಅಕಾರವೇ ನಾದ, ಉಕಾರವೇ ಬಿಂದು, ಮಕಾರವೇ ಕಳೆ ಇಂತೀಮೂರಕ್ಕೆ ಪರಾಶಕ್ತಿಯೇ ತಾಯಿ. ಇಂತೀ ನಾಲ್ಕು ಒಂದಾದಲ್ಲಿ ಪ್ರಣವುವಾಯಿತ್ತಯ್ಯಾ. ಆ ಪ್ರಣವುವೇ ಪಂಚಲಕ್ಷಣವಾಯಿತ್ತು. ಅದೆಂತೆಂದೊಡೆ. ತಾರಕಾಕೃತಿ ದಂಡಕಾಕೃತಿ ಕುಂಡಲಾಕೃತಿ ಅರ್ಧಚಂದ್ರಾಕೃತಿ ಬಿಂದ್ವಾಕೃತಿ ಇಂತೀ ಪಂಚ ಆಕೃತಿಯಾಯಿತ್ತಯ್ಯಾ. ತಾರಕಾಕೃತಿಯಲ್ಲಿ ನಕಾರ ಜನನ, ದಂಡಕಾಕೃತಿಯಲ್ಲಿ ಮಕಾರ ಜನನ, ಕುಂಡಲಾಕೃತಿಯಲ್ಲಿ ಶಿಕಾರ ಜನನ, ಅರ್ಧ ಚಂದ್ರಾಕೃತಿಯಲ್ಲಿ ವಕಾರ ಜನನ, ಬಿಂದ್ವಾಕೃತಿಯಲ್ಲಿ ಯಕಾರ ಜನನ, ಇಂತೀ ಪಂಚಪ್ರಣವದಿಂದ ಪಂಚಾಕ್ಷರಂಗಳು ಉತ್ಪತ್ಯವಾದವಯ್ಯಾ. ಪ್ರಣವುವೇ ಕೂಡಿ ಪಂಚಾಕ್ಷರವೆಂದು ಹೇಳಲ್ಪಟ್ಟಿತ್ತಯ್ಯ ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೇ.

---

## ಷಡಕ್ಷರಿಯ ವಿವರಣೆ.

### ಅಧಿದೇವತೆಗಳು.

(೧) ಓಂಕಾರವೇ ಶಿವ, ಯಕಾರವೇ ಸದಾಶಿವ, ವಕಾರವೇ ಈಶ, ಶಿಕಾರವೇ ಮಹೇಶ್ವರ, ಮಕಾರವೇ ಈಶ್ವರ, ನಕಾರವೇ ಈಶಾನ, ಈ ಷಡಕ್ಷರವೇ ಷಡ್ವಿಧಮಂತ್ರ ಮೂರ್ತಿಯಾಗಿ ಒಪ್ಪುತಿಪ್ಪದಯ್ಯಾ.

### ಬ್ರಹ್ಮಗಳು.

ಮತ್ತೆ ನಕಾರವೇ ಮೂರ್ತಿ ಬ್ರಹ್ಮ, ಮಕಾರವೇ ಪಿಂಡಬ್ರಹ್ಮ, ಶಿಕಾರವೇ ಕಲಾಬ್ರಹ್ಮ, ವಕಾರವೇ ಆನಂದಬ್ರಹ್ಮ, ಯಕಾರವೇ

ವಿಜ್ಞಾನಬ್ರಹ್ಮ, ಓಂಕಾರವೇ ಪರಬ್ರಹ್ಮ ಈ ಷಡಕ್ಷರವೇ ಷಡ್ವಿಧ ಬ್ರಹ್ಮ ವೆಂದು ಹೇಳಲ್ಪಟ್ಟಿತ್ತು ನೋಡಾ.

### ಶಕ್ತಿಗಳು.

ಮತ್ತೆ ನಕಾರವೇ ಕ್ರಿಯಾಶಕ್ತಿ, ಮಕಾರವೇ ಜ್ಞಾನಶಕ್ತಿ, ಶಿಕಾರವೇ ಇಚ್ಛಾಶಕ್ತಿ, ವಕಾರವೇ ಆದಿಶಕ್ತಿ, ಯಕಾರವೇ ಪರಾಶಕ್ತಿ, ಓಂಕಾರವೇ ಚಿತ್‌ಶಕ್ತಿ ಇವು ಮಂತ್ರಶಕ್ತಿ ಸ್ವರೂಪೆಂದರಿವುದು ನೋಡಾ.

### ಸಾದಾಖ್ಯಗಳು.

ಮತ್ತೆ ನಕಾರವೇ ಕರ್ಮಸಾದಾಖ್ಯ, ಮಕಾರ ಕರ್ತೃಸಾದಾಖ್ಯ, ಶಿಕಾರವೇ ಮೂರ್ತಿಸಾದಾಖ್ಯ, ವಕಾರವೇ ಅಮೂರ್ತಸಾದಾಖ್ಯ, ಯಕಾರವೇ ಶಿವಸಾದಾಖ್ಯ, ಓಂಕಾರವೇ ಮಹಾಸಾದಾಖ್ಯ, ನೋಡಾ.

### ವರ್ಣಗಳು.

ಮತ್ತೆ ನಕಾರವೇ ಪೀತವರ್ಣ, ಮಕಾರವೇ ನೀಲವರ್ಣ, ಶಿಕಾರವೇ ಕುಂಕುಮವರ್ಣ, ವಕಾರವೇ ಶ್ವೇತವರ್ಣ, ಯಕಾರವೇ ಸ್ಫಟಿಕ ವರ್ಣ, ಓಂಕಾರವೇ ಜ್ಯೋತಿರ್ಮಯ ಸ್ವರೂಪ, ಇಂತೀ ಮಂತ್ರ ಮೂರ್ತಿಯ ಭೇದವೆಂದರಿವುದಯ್ಯ.

### ಪಂಚಮುಖಗಳು.

ಮತ್ತೆ ನಕಾರವೇ ಸದ್ಯೋಜಾತ ಮಂತ್ರಮೂರ್ತಿ, ಮಕಾರವೇ ವಾಮದೇವಮಂತ್ರಮೂರ್ತಿ, ಶಿಕಾರವೇ ಅಘೋರಮಂತ್ರಮೂರ್ತಿ, ವಕಾರವೇ ತತ್ಪುರುಷಮಂತ್ರಮೂರ್ತಿ, ಯಕಾರವೇ ಈಶಾನಮಂತ್ರ ಮೂರ್ತಿ, ಓಂಕಾರವೇ ಮಹಾಮಂತ್ರಮೂರ್ತಿ, ಇವು ಮಂತ್ರ ಮೂರ್ತಿಯ ವರ್ಣಭೇದವೆಂದರಿವುದು ನೋಡಾ.

### ಗುಣಗಳು.

ಮತ್ತೆ ನಕಾರವೇ ಸತ್ತು, ಮಕಾರವೇ ಚಿತ್ತು, ಶಿಕಾರವೇ ಆನಂದ, ವಕಾರವೇ ನಿತ್ಯ, ಯಕಾರವೇ ಪರಿಪೂರ್ಣ, ಓಂಕಾರವೇ ನಿರಂಜನ, ಸ್ವರೂಪವೆಂದರಿವುದಯ್ಯ.

## ಲಿಂಗಗಳು.

ಮತ್ತೆ ನಕಾರವೇ ಆಚಾರಲಿಂಗ, ಮಕಾರವೇ ಗುರುಲಿಂಗ, ಶಿಕಾರವೇ ಶಿವಲಿಂಗ, ವಕಾರವೇ ಜಂಗಮಲಿಂಗ, ಯಕಾರವೇ ಪ್ರಸಾದ ಲಿಂಗ, ಓಂಕಾರವೇ ಮಹಾಲಿಂಗ. ಇವು ಷಡಕ್ಷರಿಯ ಮಂತ್ರಲಿಂಗವೆಂದ ರಿವುದಯ್ಯ. ಇಂತು ಲಿಂಗವಕ್ಷರವೆಂದು ಹೇಳಲ್ಪಟ್ಟಿತ್ತು ಕಾಣಾ ಮಹಾ ಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ.

## ತತ್ವಗಳು.

(೨) ನಕಾರವೇ ಪೃಥ್ವಿ, ಮಕಾರವೇ ಅಪ್ಪು, ಶಿಕಾರವೇ ಅಗ್ನಿ, ವಕಾರವೇ ವಾಯು, ಯಕಾರವೇ ಆಕಾಶ, ಓಂಕಾರವೇ ಆತ್ಮಸ್ವರೂಪು, ನೋಡಾ.

## ಅಧಿದೇವತೆಗಳು.

ನಕಾರವೇ ಬ್ರಹ್ಮ, ಮಕಾರವೇ ವಿಷ್ಣು, ಶಿಕಾರವೇ ರುದ್ರ, ವಕಾರವೇ ಈಶ್ವರ, ಯಕಾರವೇ ಸದಾಶಿವ, ಓಂಕಾರವೇ ಮಹಾತ್ಮನು ನೋಡಾ.

ಮತ್ತೆ ಅಂತರ್ಯಾಮಿಯೇ ನಕಾರ, ಚೈತನ್ಯವೇ ಮಕಾರ, ಭಾವವೇ ಶಿಕಾರ, ಕರ್ತಾರನೇ ವಕಾರ, ಕ್ಷೇತ್ರಜ್ಞನೇ ಯಕಾರ, ಶಿವನೇ ಓಂಕಾರ ನೋಡಾ.

## ಅಂಗಗಳು.

ಮತ್ತೆ ಸರ್ವಾಂಗ ಸ್ವರೂಪನಪ್ಪ ಭಕ್ತನೇ ನಕಾರ, ವಿದ್ಯಾಂಗ ಸ್ವರೂಪನಪ್ಪ ಮಹೇಶ್ವರನೇ ಮಕಾರ, ಕಾಮಾಂಗ ಸ್ವರೂಪನಪ್ಪ ಪ್ರಸಾ ದಿಯೇ ಶಿಕಾರ, ಯೋಗಾಂಗ ಸ್ವರೂಪನಪ್ಪ ಪ್ರಾಣಲಿಂಗಿಯೇ ವಕಾರ, ಭೂತಾಂಗ ಸ್ವರೂಪನಪ್ಪ ಶರಣನೇ ಯಕಾರ, ಶಿವಲಿಂಗ ಸ್ವರೂಪನಪ್ಪ ಐಕ್ಯವೇ ಓಂಕಾರ.

## ಭಕ್ತಿಗಳು:

ಮತ್ತೆ ನಕಾರ ಸದ್ಭಕ್ತಿ, ಮಕಾರ ನೈಷ್ಠಿಕಾಭಕ್ತಿ, ಶಿಕಾರ ಅವ ಧಾನಭಕ್ತಿ, ವಕಾರವೇ ಅನುಭಾವಭಕ್ತಿ, ಯಕಾರವೇ ಆನಂದಭಕ್ತಿ, ಓಂಕಾರವೇ ಸಮರಸಭಕ್ತಿ ನೋಡಾ.

## ತತ್ವಗಳು.

ಮತ್ತೆ ಆತ್ಮ ತತ್ವವೇ ನಕಾರ, ವಿದ್ಯಾತತ್ವವೇ ಮಕಾರ, ಶಿಕಾರವೇ ಶಿವತತ್ವ, ವಕಾರವೇ ಈಶ್ವರತತ್ವ, ಯಕಾರವೇ ಸದಾಶಿವತತ್ವ, ಓಂಕಾರವೇ ಪರತತ್ವ ನೋಡಾ.

## ಹಸ್ತಗಳು.

ಮತ್ತೆ ನಕಾರವೇ ಸುಚಿತ್ತಹಸ್ತ, ಮಕಾರವೇ ಸುಬುದ್ಧಿಹಸ್ತ, ಶಿಕಾರವೇ ನಿರಹಂಕಾರಹಸ್ತ, ವಕಾರವೇ ಸುಮನಹಸ್ತ, ಯಕಾರವೇ ಸುಜ್ಞಾನಹಸ್ತ, ಓಂಕಾರವೇ ಸದ್ಭಾವಹಸ್ತ, ಇಂತು ಇವು ಅಂಗಷಡಕ್ಷರ ಕಾಣಾ ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ.

## ಚಕ್ರಗಳು.

(೩) ಆಧಾರಚಕ್ರದಲ್ಲಿ ನಕಾರ ಸ್ವಾಯುತ, ಸ್ವಾಧಿಷ್ಠಾನ ಚಕ್ರದಲ್ಲಿ ಮಕಾರ ಸ್ವಾಯುತ, ಮಣಿಪೂರಕ ಚಕ್ರದಲ್ಲಿ ಶಿಕಾರಸ್ವಾಯುತ, ಅನಾಹತಚಕ್ರದಲ್ಲಿ ವಕಾರಸ್ವಾಯುತ, ವಿಶುದ್ಧಿ ಚಕ್ರದಲ್ಲಿ ಯಕಾರ ಸ್ವಾಯುತ, ಆಜ್ಞೇಯ ಚಕ್ರದಲ್ಲಿ ಓಂಕಾರ ಸ್ವಾಯುತ, ಇದು ಕಾರಣ ಶರಣನಕಾಯ ಷಡಕ್ಷರಿಮಂತ್ರ ಶರೀರವಾಗಿ ಸರ್ವಾಂಗವೆಲ್ಲವು ಜ್ಞಾನಕಾಯ ಕಾಣಾ ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ.

## ವರ್ಣಗಳು.

(೪) ಓಂಕಾರವೇ ಪಂಚಭೂತಾತ್ಮಮಯ ನೋಡಾ. ನಕಾರವೇ ದಶೇಂದ್ರಿಯವು, ಮಕಾರವೇ ಮನಪಂಚಕಗಳು ನೋಡಾ. ಶಿಕಾರವೇ ಪ್ರಾಣಸ್ವರೂಪು, ವಕಾರವೇ ದಶವಾಯುಗಳ ಸ್ವರೂಪು. ಯಕಾರವೇ ತ್ರಿಗುಣಸ್ವರೂಪು ನೋಡಾ.

## ಧಾತುಗಳು.

ಓಂಕಾರ ಪ್ರಣಮವೇ ತ್ವಕ್ಕುಮಯವಾಗಿಪ್ಪುದು, ನಕಾರವೇ ರುಧಿರಮಯವಾಗಿಪ್ಪುದು, ಮಕಾರವೇ ಮಾಂಸಮಯವಾಗಿಪ್ಪುದು. ಶಿಕಾರವೇ ಮೇದಸ್ಸುಮಯವಾಗಿಪ್ಪುದು. ವಕಾರವೇ ಅಸ್ತಿಮಯವಾಗಿಪ್ಪುದು. ಯಕಾರವೇ ಮಜ್ಜೆಮಯವಾಗಿಪ್ಪುದು. ಷಡಕ್ಷರಮಂತ್ರವೆಲ್ಲ ಕೂಡಿ ಶುಕ್ಲಮಯವಾಗಿಪ್ಪುದು ನೋಡಾ. ಇದು ಕಾರಣ ಶರಣನ

ಸಪ್ತಧಾತು ಸರ್ವ ವಿಷಯೇಂದ್ರಿಯ ಕರಣಂಗಳೆಲ್ಲವು ಷಡಕ್ಷರಮಂತ್ರ ಮಯವಾಗಿಪ್ಪವು. ಇದು ಕಾರಣ ಶರಣನ ಶರೀರವೆಲ್ಲ ಶಿವನ ಶರೀರ ನೋಡಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ.

೫) ಪಂಚಾಕ್ಷರವೇ ಪಂಚಮುಖವಾಗಿ ಎನ್ನ ಪಂಚೇಂದ್ರಿಯ ಗಳಾಗಿರ್ದವು ನೋಡಾ. ಪ್ರಣವವೇ ಪ್ರಾಣಮೂರ್ತಿಯಾಗಿರ್ಪುದಯ್ಯ. ಇದು ಕಾರಣ ಪರತತ್ವ ಜ್ಞಾನಮಯವಾಗಿ ಓಂ ನಮಶ್ಶಿವಾಯ ಎಂಬ ಶಿವಷಡಕ್ಷರ ಮಂತ್ರವನೇ ಸ್ಮರಿಸಿ ಭವಸಾಗರವನೇ ದಾಟಿ ಮುಕ್ತನಾ ದೆನು ಕಾಣಾ ಮಹಾಲಿಂಗ ಗುರು ಶಿವ ಸಿದ್ದೇಶ್ವರ ಪ್ರಭುವೇ.

(೬) ಎನ್ನ ರೇಚಕ ಪೂರಕ ಕುಂಭಕವೆಲ್ಲವು ಶಿವಮಂತ್ರಮ ಯವಾಗಿ ಸಂಚರಿಸುತ್ತಿರ್ದವು. ಎನ್ನ ಪೂರಕವೇ ಓಂ ಎಂಬ ಪ್ರಣವ ಸ್ವರೂಪವಾಗಿಪ್ಪುದು. ಎನ್ನ ರೇಚಕವೇ ನಮಶ್ಶಿವಾಯ, ನಮಶ್ಶಿವಾಯ, ಎನುತಿಪ್ಪುದು ನೋಡಾ. ಎನ್ನ ಕುಂಭಕವೇ ಪರಮಶಕ್ತಿಮಯವಾಗಿ, ಪರಂ ಜ್ಯೋತಿ ಸ್ವರೂಪವಾಗಿ, ಪರಮ ಚಿದ್ಬ್ರಾಂಡ ಸ್ಥಾನವಾಗಿಪ್ಪುದು ನೋಡಾ. ಮಂತ್ರಮಧ್ಯೇ ಭವೇಲ್ಲಿಂಗಂ । ಲಿಂಗಮಧ್ಯೆ ಭವೇನ್ಮಂತ್ರಂ॥ ಮಂತ್ರಲಿಂಗದ್ವಯೋರೈಕ್ಯಂ। ಇಷ್ಟಲಿಂಗಂ ತು ಶಾಂಕರೀ ॥ ಎಂದುದಾಗಿ ಎನ್ನ ರೇಚಕ ಪೂರಕ ಕುಂಭಕ ಸ್ವರೂಪವಪ್ಪ ಶಿವಮಂತ್ರವೇ ಶಿವ ಲಿಂಗಸ್ವರೂಪವಾಗಿ ಎನ್ನ ಕರಸ್ಥಲದಲ್ಲಿ ಕರತಳಾಮಳಕವಾಗಿ ಕಾಣ ಲ್ಪಟ್ಟಿತ್ತು ನೋಡಾ. ಆ ಕರಸ್ಥಲದಲ್ಲಿಯ ಲಿಂಗವ ಕಂಗಳು ತುಂಬಿ ನೋಡಿ, ಮನಮುಟ್ಟಿ ನೆನಹು ಸಂದಿಲ್ಲದೆ ಇಷ್ಟಲಿಂಗದಲ್ಲಿ ಭಾವ ಬಲಿದು ಲಿಂಗವನಪ್ಪಿ ಅಗಲದೆ ಲಿಂಗದಲ್ಲಿ ಸದಾ ಸನ್ನಿಹಿತವಾಗಿರ್ದು, ಶಿವ ಶಿವಾ ಹರ ಹರ ಎನುತಿರ್ದೆನಯ್ಯಾ. ನಿಮ್ಮ ನೆನಹಿನಿಂದ ನಾನು ನೆನೆ ವುತ್ತಿರ್ದೆನು ಕಾಣಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ

(೭) ನಿನ್ನ ನೀ ತಿಳಿದು ನೋಡಿದರೆ, ಶಿವಮಯ ಜಗತ್ತು ನೋಡಾ. ಓಂ ಕಾರ ಪ್ರಣವವೇ ಪ್ರಕೃತಿಯಾಗಿ ನಿಂದಿತ್ತು. ನಕಾರ ಪ್ರಣವವೇ ಪೃಥ್ವಿಯಾಗಿ ನಿಂದಿತ್ತು. ಮ ಕಾರ ಪ್ರಣವ ವೇ ಉದಕವಾಗಿ ನಿಂದಿತ್ತು. ಶಿ ಕಾರ ಪ್ರಣವವೇ ಅಗ್ನಿಯಾಗಿ ನಿಂದಿತ್ತು. ವ ಕಾರ ಪ್ರಣವವೇ ವಾಯುವಾಗಿ ನಿಂದಿತ್ತು. ಯ ಕಾರ ಪ್ರಣವವೇ ಸರ್ವ ವಸ್ತು ಅಚ ರಿಸುವದಕ್ಕೆ ಆಕಾಶವಾಗಿ ನಿಂದಿತ್ತು. ನೆನೆ ನೆನೆದು ಸುಖಿಯಾದೆನು ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವೇ.

(೮) ಆ ಚಿನ್ನಾದ ಚಿದ್ಬಿಂದು ಚಿತ್ಕಳೆಗಳೇ ನಾದ ಬಿಂದು ಕಳೆಗಳಾದ ಅಕಾರ ಉಕಾರ ಮಕಾರಂಗಳಾಗಿ ಆ ಅಕಾರ ಉಕಾರ ಮಕಾರಂಗಳಲ್ಲಿ ಶಿವ ಶಕ್ತಿಕೂಡಲು ಓಂ ಕಾರವೆಂಬ ಪ್ರಣವವಾಯಿತ್ತು. ಆ ಓಂ ಕಾರದಲ್ಲಿ ಷಡಾಕೃತಿಗಳಾದವು. ಆ ಷಡಾಕೃತಿಗಳಿಂ ನಕಾರ ಮಕಾರ ಶಿಕಾರ ವಕಾರ ಯಕಾರಂಗಳುತ್ಪತ್ತಿ. ಇಂತೀ ಪ್ರಣವಗೂಡಿ ಷಡಕ್ಷರವಾಗಿ ಸದ್ಯೋಜಾತಾದಿ ಮುಖಗಳಲ್ಲಿ ಪೃಥ್ವಿವ್ಯಾದಿ ಭೂತಂಗಳಲ್ಲಿ, ಆಧಾರಾದಿ ಚಕ್ರಂಗಳಲ್ಲಿ, ವಾಗಾದಿ ಕರ್ಮೇಂದ್ರಿಯಂಗಳಲ್ಲಿ ಘ್ರಾಣಾದಿಜ್ಞಾನೇಂದ್ರಿಯಂಗಳಲ್ಲಿ ಗುದಾದಿ ವಿಷಯೇಂದ್ರಿಯಂಗಳಲ್ಲಿ ಮನಸಾದಿ ಕರಣೇಂದ್ರಿಯಂಗಳಲ್ಲಿ, ಪ್ರಾಣಾದಿ ದಶೇಂದ್ರಿಯಂಗಳಲ್ಲಿ, ರುಧಿರಾದಿ ಸಪ್ತಧಾತುಗಳಲ್ಲಿ, ಆಧಾರಾದಿ ನವನಾಳಂಗಳಲ್ಲಿ, ಇಂತೀ ಉಂಗುಷ್ಠಾದಿ ಮಸ್ತಕಾಂತ ಪರ್ಯಂತರವು ಆಚಾರಾದಿ ಮಹಾಲಿಂಗಾಂತ್ಯದಲ್ಲಿ ಷಡಕ್ಷರವೇ ಅಂಗವಾಗಿ ಷಡಕ್ಷರವೇ ಲಿಂಗವಾಗಿ ಷಡಕ್ಷರವೇ ಮುಖಗಳಾಗಿ, ಷಡಕ್ಷರವೇ ಹಸ್ತಂಗಳಾಗಿ, ಷಡಕ್ಷರವೇ ದ್ರವ್ಯಂಗಳಾಗಿ, ಷಡಕ್ಷರವೇ ಪ್ರಾಣವಾಗಿ, ಷಡಕ್ಷರವೇ ಮಂತ್ರಗಳಾಗಿ, ಶರಣನ ಒಳಹೊರಗೆ ಏಕಮುಖವಾಗಿ ಮಂತ್ರಾಂಗವಾಗಿ ನಿಂದ ಘನವೇದ್ಯಶರಣನ ಚರಣಕ್ಕೆ ನಮೋ ನಮೋ ಎಂಬೆ ಕಾಣಾ ಮದ್ಗುರು ಬಸವಲಿಂಗ ಪ್ರಭುವೇ.

---

## ಪಂಚಾಕ್ಷರೀ ಷಡಕ್ಷರೀ ಸಂಬಂಧ.

(೧) "ಯಥಾ ಷಡಕ್ಷರೇ ದೇವಿ ದೇವಯೋರ್ಮಂತ್ರ ಮೀರಿತಂ" ಎಂದ ಬಳಿಕ ಷಡಕ್ಷರವೆಂಬುದು ಶಿವಮಂತ್ರ, ಪಂಚಾಕ್ಷರವೆಂಬುದು ಶಕ್ತಿಮಂತ್ರ. ಇವರಂತವನರಿಯಬಲ್ಲಡೆ ಗುರುವಿನಿಂದಲ್ಲದೆ ಪೆರನರಿಂದಾಗದು. ಕಪಿಲಸಿದ್ಧಮಲ್ಲಿಕಾರ್ಜುನಾ.

(೨) "ಶಿವಾ ಭವಾನಿ ರುದ್ರಾಣಿ ಶಿವೋ ಮಹೇಶ್ವರಃ ಶಂಭು" ಎಂಬಲ್ಲಿ ಶಿವನ ನಮ್ಮವ್ವನ ನಾಮ ಒಂದೇ ನೋಡಾ. ವಿವೇಕ ದೃಷ್ಟಿಯಿಂದ ನೋಡಿದರೆ, ಅದು ಶಿವಶಕ್ತಿ ಮಂತ್ರವಾಗಿ ಅರಿಯಬಂದಿತ್ತು ನೋಡಾ. ಓಂನಮಶ್ಶಿವಾಯ, ನಮಶ್ಶಿವಾಯ ಎಂಬುಭಯಮಂತ್ರ ಒಂದೇ ಮಂತ್ರ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

---

## ಇಂದ್ರಿಯಂಗಳಿಗೆ ಮತ್ತು ಲಿಂಗಗಳಿಗೆ ಮಂತ್ರ ಸಂಬಂಧ.

(೧) ಕರ್ಮಸಾದಾಖ್ಯ ಸ್ವರೂಪವಾದ ಆಚಾರಲಿಂಗದಲ್ಲಿ ನಕಾರ ಮಂತ್ರಸ್ವರೂಪವಾದ ಘ್ರಾಣೇಂದ್ರಿಯುವ ಸಂಯೋಗಿಸಬಲ್ಲಡೆ ತಾನೇ ಪ್ರಾಣಲಿಂಗಿ. ಕರ್ತೃಸಾದಾಖ್ಯ ಸ್ವರೂಪವಾದ ಗುರುಲಿಂಗದಲ್ಲಿ ಮಕಾರ ಮಂತ್ರ ಸ್ವರೂಪವಾದ ಜಿಹ್ವೇಂದ್ರಿಯುವ ಸಂಯೋಗವ ಮಾಡಬಲ್ಲಾ ತನೇ ಪ್ರಾಣಲಿಂಗಿ. ಮೂರ್ತಿಸಾದಾಖ್ಯ ಮೂರ್ತಿಸ್ವರೂಪವಾದ ಶಿವ ಲಿಂಗದಲ್ಲಿ ಶಿಕಾರಮಂತ್ರ ಸ್ವರೂಪವಾದ ನೇತ್ರೇಂದ್ರಿಯುವ ಸಂಯೋಗವ ಮಾಡಬಲ್ಲಾತನೇ ಪ್ರಾಣಲಿಂಗಿ. ಶಿವಸಾದಾಖ್ಯ ಸ್ವರೂಪವಾದ ಪ್ರಸಾದಲಿಂಗದಲ್ಲಿ ವಾಕಾರಮಂತ್ರ ಸ್ವರೂಪವಾದ ಶ್ರವಣೇಂದ್ರಿಯುವ ಸಂಯೋಗವ ಮಾಡಬಲ್ಲಾತನೇ ಪ್ರಾಣಲಿಂಗಿ. ಮಹಾಸಾದಾಖ್ಯ ಸ್ವರೂಪ ವಾದ ಮಹಾಲಿಂಗದಲ್ಲಿ ಓಂಕಾರ ಮಂತ್ರಸ್ವರೂಪವಾದ ಹೃದಯೇಂದ್ರಿಯುವ ಸಂಯೋಗವ ಮಾಡಬಲ್ಲಾತನೇ ಪ್ರಾಣಲಿಂಗಿ. ಇಂತೀ ಷಡ್ವಿಧ ಲಿಂಗ ಷಡ್ವಿಧೇಂದ್ರಿಯಂಗಳ ಸಂಯೋಗವ ಮಾಡಿ ಆ ಷಡ್ವಿಧಲಿಂಗಂಗಳೊಂದಾದ ಮಹಾಘನವೇ ತಾನಾಗಿರಬಲ್ಲಾತನೇ ಪ್ರಾಣಲಿಂಗಸಂಬಂಧಿಯಯ್ಯಾ ಅಖಂಡೇಶ್ವರಾ.

---

## ಮಾನಸ ವಾಚಕ ಉಪಾಂಸಿಕ ಜಪಗಳು.

(೧) ಮಾನಸ ವಾಚಕ ಉಪಾಂಸಿಕವೆಂದು ಪ್ರಣವುಪಂಚಾಕ್ಷರಿಯು ಜಪ ಮೂರು ತೆರನಾಗಿಪ್ಪುದು. ಮನಸ್ಸಿನಲ್ಲಿಯೇ ಪ್ರಣವುಮಂತ್ರವ ಸ್ಮರಿಸುವದು ಮಾನಸ. ವಾಕ್ಯದಿಂದ ಶಿವಾಯ, ಹರಾಯ, ಭವಾಯ, ಮೃಡಾಯ, ಶರಣುಶರಣೆಂಬುದು ವಾಚಕ. ಕ್ರಿಯಾಕಾಲದಲ್ಲಿ ಈ ತೆರನಾಗಿ ಒಬ್ಬರೂ ಕೇಳದ ಹಾಗೆ ತನ್ನ ಕಿವಿ ಕೇಳುವ ಹಾಗೆ ಶಿವಮಂತ್ರವಲ್ಲಿ ಸುಯಿಧಾನಿಯಾಗಿ ಪುನಶ್ಚರಣೆಯಾಗಿ ತ್ರಿಸಂಧ್ಯೆಯಲ್ಲಿ ಬಿಡದೆ ಉಚ್ಚರಿಸುವದೀಗ ಉಪಾಂಸಿಕ. ಈ ಮೂರು ಪ್ರಕಾರವಾಗಿ ಶಿವಮಂತ್ರವ ಜಪಿಸಬೇಕು ಕಾಣಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ.

---

# ಮಂತ್ರಭೇದಗಳು.

## ೧೦೦ ಪ್ರಣವಂಗಳು.

ಮೂಲ ಪಂಚಾಕ್ಷರವಾರು, ಸ್ಥೂಲಪಂಚಾಕ್ಷರ ಒಂಬತ್ತು, ಸೂಕ್ಷ್ಮ ಪಂಚಾಕ್ಷರವೈದು, ಮಾಯಾಖ್ಯ ಪಂಚಾಕ್ಷರವೆಂಟು, ಪ್ರಸಾದ ಪಂಚಾಕ್ಷರ ಹತ್ತು, ನಿರಂಜನ ಶೂನ್ಯ ನಿಷ್ಕಲ ಮೂಲ ಪ್ರಣವವೆಂಬಿವು ನಾಲ್ಕು, ಷಡಕ್ಷರ ಮಂತ್ರವಾರು, ಷಡಕ್ಷರ ಮಂತ್ರರೂಪವಾದ ಅಕಾರಾದಿ ಬೀಜಾಕ್ಷರಮಂತ್ರ ಐವತ್ತೆರಡು ಇತಿ ಶತಮಂತ್ರಾಕ್ಷರಂಗಳು.

## ೧೦೮ ಪ್ರಣವಂಗಳು

ನಿಷ್ಕಲ ಪ್ರಣವದಿಂ ಬಸವಾಕ್ಷರತ್ರಯ, ಷಡ್ವಿಧಮೂಲ ಪಂಚಾಕ್ಷರ, ಸ್ಥೂಲಪಂಚಾಕ್ಷರ, ಮಾಯಾಖ್ಯ ಪಂಚಾಕ್ಷರ, ಪ್ರಸಾದ ಪಂಚಾಕ್ಷರ, ನಾದಬಿಂದುವೆಂಬ ಹಕಾರ ಸಕಾರ, ಅವಾಗ್ಮವೆಂಬ ನಿರಂಜನ ಹಕಾರ, ಇಂತೀ ಐವತ್ತೆಂಟು ಪ್ರಣವಂಗಳುದಿಸಿದವು. ಓಂಕಾರದಿಂ ಕ್ಷಕಾರ ಳಕಾರ ಹಕಾರಂಗಳು. ಯಕಾರದಿಂ ಅಕಾರಾದಿ ಷೋಡಶ ವರ್ಣಗಳು, ವಕಾರದಿಂ ಕಕಾರಾದಿ ದ್ವಾದಶ ವರ್ಣಂಗಳು, ಶಿಕಾರದಿಂ ಡಾಕಾರಾದಿ ದಶವರ್ಣಗಳು, ಮಕಾರದಿಂ ಬಕಾರಾದಿ ಷಡ್ವರ್ಣಗಳು, ನಕಾರದಿಂ ವಕಾರಾದಿ ಚತುರ್ವರ್ಣಗಳು ಉದಿಸಿದವು. ಇಂತೀ ನೂರೊಂಬತ್ತು ಪ್ರಣವಂಗಳೊಳಗೆ ಅಕಾರವು ಹಕಾರಾಂತರ್ಗತವಾದುದರಿಂ ನೂರೆಂಟು ಪ್ರಣವಂಗಳು ಗಣನೆಗೆ ಸಂದವು. ಅದುಕಾರಣ ಜಂಗಮದ ಮಕುಟವು ಸರ್ವಮಂತ್ರ ತತ್ವಾಲಯವೆಂದರಿವುದು.

## ೧೩೬ ವರ್ಣಂಗಳು.

· ದಿವ್ಯನಾದ ನಿರಾವರಣ ಒಂದು ನಿರುಪಮಕಲೆ ಈ ತ್ರಿವಿಧರೂಪವು ಕಲಿಸಿ ಅವಾಗ್ಮಪ್ರಣವುವಾಯಿತ್ತು. ಆ ಪ್ರಣವನಾದ ಚೈತನ್ಯವೇ ಬಕಾರವಾಯಿತ್ತು. ಆ ಬಕಾರ ಚಿನ್ನಾದವೇ ಅಕಾರ, ಚಿದ್ಬಿಂದುವೇ ಉಕಾರ, ಚಿತ್ಕಳೆಯೇ ಮಕಾರ. ಈ ತ್ರಿವಿಧವೇಕವಾಗಿ ಓಂಕಾರವಾಯಿತ್ತು. ಆ ಓಂಕಾರದ ಪಂಚಾಕೃತಿಗಳಿಂದ ಉದಯವಾದ ಪಂಚಾಕ್ಷರವೇ ಲೋಮ ವಿಲೋಮದಿಂ ಸಕೀಲ ಸಂಬಂಧದಿಂ ಅವಾಗ್ಮಂಗೂಡಿ ನೂರಾಮೂವತ್ತಾರು ವರ್ಣಂಗಳಾದವು.

ಅವನು ಮಲ್ಲಿಕಾರ್ಜುನ ಪಂಡಿತಾರಾಧ್ಯನ ಸೇವೆಯನ್ನು ಮಾಡಬೇಕೆಂದು ಅಪೇಕ್ಷಿಸಿ ಅವನಿಗೆ ಪೂಜೋಪಕರಣಗಳನ್ನು ಒದಗಿಸಿಕೊಡುವ ಸೇವೆಯನ್ನು ಕೈಕೊಂಡನು. ಆಗ ಅವನು ಪುಷ್ಪಗಳನ್ನು ತರುವಲ್ಲಿ ಒಂದು ಪುಷ್ಪಕ್ಕೆ ತನ್ನ ಕಾಲು ಹತ್ತಲು ತನ್ನ ಕಾಲನ್ನೇ ಕಡಿದುಕೊಂಡನು. ಆಗ ಪಂಡಿತಾರಾಧ್ಯನು ಅವನನ್ನು ಕಂಡು ಪಂಚಾಕ್ಷರೀ ಮಂತ್ರ ಸ್ಮರಣೆಯಿಂದ ಆ ಕಾಲನ್ನು ಮೊದಲಿನಂತೆ ಹತ್ತುವಂತೆ ಮಾಡಿದನು. (ಹಿಂದೆ ವೆಲ್ಲಗೊಂಡ ಮಹಾದೇವಯ್ಯನ ಚರಿತ್ರೆ ನೋಡಿರಿ)

ಪಾನುಗಲ್ಲು ಗ್ರಾಮದಲ್ಲಿ ಧವಳೇಶ್ವರನೆಂಬವನು ಅರಸನಿಗೆ ತಾಂಬೂಲಕೊಡುವ ಸೇವೆಯನ್ನು ಮಾಡುತ್ತಿದ್ದನು. ಅವನೂ ಪಂಡಿತಾರಾಧ್ಯನಿಗೆ ಸನ್ಮಾನಮಾಡುವಲ್ಲಿ ತೊಡಗಿದವನಾದನು. ಅದರಿಂದ ಅವನಿಗೆ ಒಂದು ದಿವಸ ಅರಸನಿಗೆ ತಾಂಬೂಲವನ್ನು ಕೊಡುವದು ವಿಸ್ಮರಣೆಯಾಯಿತು. ಅರಸನಾದರೂ ತನ್ನ ಊಳಿಗದವರು ಒಬ್ಬ ಶೈವನಿಗೆ ತನ್ನನ್ನು ಅಲಕ್ಷಿಸಿ ವೈಭವದಿಂದ ಸತ್ಕರಿಸುವದನ್ನು ನೋಡಿ ಮನದಲ್ಲಿ ತಳಮಳಿಸುತ್ತಿದ್ದನು.

ಹೀಗಿರಲು ಪಂಡಿತಾರಾಧ್ಯನ ವಿರೋಧಿಗಳು ಆ ಗ್ರಾಮದಲ್ಲಿ ಅನೇಕರಿದ್ದು ಅವನಿಗಾಗುತ್ತಿದ್ದ ಈ ಸಂಭ್ರಮವನ್ನು ನೋಡಲಾರದೆ ಅರಸನ ಕಡೆಗೆ ಹೋಗಿ ಅನೇಕ ರೀತಿಯಿಂದ ಪಂಡಿತಾರಾಧ್ಯನನ್ನು ದೂರಹತ್ತಿದರು. ಆಗ ಅರಸನು ಧವಳೇಶ್ವರನನ್ನು ಕರಿಸಿ ನೀನು ನನ್ನ ಸಂಬಳವನ್ನುಂಡು ಹೀಗೆ ಬೇರೊಬ್ಬರನ್ನು ಸೇವಿಸತಕ್ಕದ್ದಲ್ಲ. ನೀನು ನನ್ನಿಂದ ಪೋಷಿತನಾಗಿರುವಿ. ಆದ್ದರಿಂದ ನೀನು ನನ್ನ ಪಾದರಕ್ಷೆಯನ್ನು ಹಿಡಿ ಎಂದರೆ ಹಿಡಿಯಬೇಕು, ಶಿರಸ್ಸನ್ನು ಕೊಡು ಎಂದರೆ ನೀನು ಕೊಡಬೇಕು ಎಂದು ನುಡಿದನು. ಅದಕ್ಕೆ ಧವಳೇಶ್ವರನು ನಿನ್ನಿಂದ ಈ ದೇಹವು ಪೋಷಿತವಾದದ್ದರಿಂದ ಇದನ್ನು ನೀನು ತೆಗೆದುಕೋ ಎಂದೆಂದು ತನ್ನ ಖಡ್ಗದಿಂದ ತನ್ನ ಶಿರಸ್ಸನ್ನು ಕತ್ತರಿಸಿ ಅರಸನಿಗೊಪ್ಪಿಸಿದನು. ಆದರೆ ಅಷ್ಟಕ್ಕೆ ಅದು ಮುಗಿಯಲಿಲ್ಲ. ಅವನಲ್ಲಿದ್ದ ಗಣಾಚಾರವು ರೂಪುಗೊಂಡು ಅವನ ಕೈಯಲ್ಲಿದ್ದ ಖಡ್ಗದಿಂದಲೇ ಅರಸನನ್ನೂ ಅವನ ಸೈನ್ಯವನ್ನೂ ಸಂಹರಿಸಿತು. ಆಗ ಗಣಾಧೀಶ್ವರರು ಆಕಾಶದಿಂದ ಬಂದು ಪುಷ್ಪಕ ವಿಮಾನದಲ್ಲಿ ಬಂದು ಧವಳೇಶ್ವರನನ್ನು ಅದರಮೇಲೆ ಹತ್ತಿಸಿ ಅವ

ನನ್ನು ಕೈಲಾಸಕ್ಕೊಯ್ದರು. ಈ ಪ್ರಕಾರ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಪಾನುಗಲ್ಲಿನಲ್ಲಿರುವಾಗ ಅಲ್ಲಿ ಒಂದು ಮಹತ್ವದ ಧಾರ್ಮಿಕ ಕ್ರಾಂತಿಯುಂಟಾದಂತೆ ತೋರುತ್ತದೆ.

ಆ ಮೇಲೆ ಅವನು ಕಲ್ಯಾಣಕ್ಕೆ ಹೋಗಲು ಸಿದ್ಧನಾದನು. ಅವನು ಪಾನುಗಲ್ಲಿನಿಂದ ಉತ್ತರಕ್ಕೆ ಕಲ್ಯಾಣಕ್ಕೆ ಹೊರಟು 'ವನಿಪುರ' ಎಂಬ ಗ್ರಾಮಕ್ಕೆ ಬಂದು ಅಲ್ಲಿ ತನ್ನ ಶಿಷ್ಯನಾದ ಶಂಕರಯ್ಯನೆಂಬುವನಲ್ಲಿ ತಳುವಿದನು. ಅವನು ಅಲ್ಲಿಗೆ ಬಂದ ಕೂಡಲೆ ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಕೂಡಲಸಂಗಮಕ್ಕೆ ಹೋಗಿ ಎಂಟು ದಿವಸಗಳಾದವು ಮತ್ತು ಅವನು ಅಲ್ಲಿ ಐಕ್ಯ ಹೊಂದಿದನೆಂಬ ವಾರ್ತೆಯು ಅವನಿಗೆ ಬಂದಿತು. ಇದನ್ನು ಕೇಳಿ ಪಂಡಿತಾರಾಧ್ಯನಿಗೆ ಅತ್ಯಂತ ದುಃಖವಾಗಿ ಬಸವೇಶ್ವರನಿಗೋಸ್ಕರ ಬಹಳ ಪ್ರಳಾಪಿಸಿದನು. ಬಸವೇಶ್ವರನು ಕಲ್ಯಾಣವನ್ನು ಬಿಟ್ಟ ಬಳಿಕ ಅಲ್ಲಿ ಅತ್ಯಂತ ಅವ್ಯವಸ್ಥೆಯಾದುದನ್ನು ಅವನಿಗೆ ತಿಳಿದಿರಬೇಕು. ಆದ್ದರಿಂದ ಅವನು ಅತ್ತ ಕಡೆಗೆ ಹೋಗುವದನ್ನು ಬಿಟ್ಟು ಹಿಂದಿರುಗಿದನು. ಈ ವನಿಪುರವು ಆವುದೆಂಬುದು ನಮಗೆ ತಿಳಿದು ಬಂದಿಲ್ಲ. ಹಾನುಗಲ್ಲು ಮತ್ತು ಕಲ್ಯಾಣದ ಮಧ್ಯದಲ್ಲಿ 'ವನಪರ್ತಿ' ಎಂಬ ಗ್ರಾಮವಿದೆ. ಇದೇ ವನಿಪುರವೋ ಹೇಗೆಂಬುದರ ವಿಷಯವಾಗಿ ನಮಗೆ ಅನುಮಾನವು ಉಂಟಾಗುತ್ತದೆ.

ಮಲ್ಲಿಕಾರ್ಜುನ ಪಂಡಿತಾರಾಧ್ಯನು ವನಿಪುರದಿಂದ ತಿರುಗಿ ಬರುವ ಕಾಲದಲ್ಲಿ ಶ್ರೀಶೈಲ ಪರ್ವತ ಮಾರ್ಗವಾಗಿ ಬಂದನು. ಆಗ ಆ ಪರ್ವತವೆಲ್ಲವೂ ಲಿಂಗರೂಪವಾಗಿ ಅಗಾಧವಾಗಿ ಅವನಿಗೆ ಕಂಗೊಳಿಸಹತ್ತಿತು. ಆ ಪರ್ವತದಲ್ಲೆಲ್ಲ ಅಸಂಖ್ಯ ಲಿಂಗಗಳಿವೆ. ಅಲ್ಲಿ ಅವನ ಶಿಷ್ಯ ಶ್ರೇಷ್ಠನಾದ ದೊನಮಾರ್ಯನೂ ಇದ್ದನು. ಈ ದೊನಮಾರ್ಯನು ತನ್ನ ಗುರುವಾದ ಪಂಡಿತಾರಾಧ್ಯನು ಅಲ್ಲಿಗೆ ಬಂದುದನ್ನು ತಿಳಿದು ಅವನನ್ನು ದೇವಾಲಯಕ್ಕೆ ಕರೆದುಕೊಂಡು ಹೋಗಿ ಶ್ರೀ ಪರ್ವತದಲ್ಲಿದ್ದ ಅಸಂಖ್ಯ ತೀರ್ಥಗಳಲ್ಲಿರುವ ಲಿಂಗಗಳನ್ನುತೋರಿಸಿ ಅವುಗಳ ಅತಿಶಯಗಳನ್ನು ತಿಳಿಸಿ ಹೇಳಿದನು.

ಈ ಪ್ರಕಾರ ಪಂಡಿತಾರಾಧ್ಯನು ಶ್ರೀಶೈಲದಲ್ಲಿರುವಾಗ್ಗೆ ಅವನಿಗೆ ಒಂದು ದಿವಸ ಅರುಣೋದಯ ಸಮಯದಲ್ಲಿ ಸ್ವಪ್ನವಾಗಿ ಅದರಲ್ಲಿ ಮಲ್ಲಿಕಾರ್ಜುನ ಸ್ವಾಮಿಯು ಅವನಿಗೆ-ಎಲೇ ಮಗನೇ ನಾವಿಲ್ಲಿರುವೆವು. ನಮ್ಮ ಹೆಸರು ಸರ್ವಜ್ಞಮಲ್ಲಿಕಾರ್ಜುನ. ನನ್ನ ಸಖನು ಚಿದ್ಘನರೂಪು ಪಂಡಿತಾರಾಧ್ಯನಾದ ನೀನು. ನೀನು ಸುಖವಾಗಿರು, ಎಂದು ಅವನ ಶಿರಸ್ಸಿನಲ್ಲಿ ಕೈಯಿಟ್ಟಂತಾಯಿತು. ಹೀಗೆ ಪಂಡಿತಾರಾಧ್ಯನು ಶ್ರೀಶೈಲದ ಮಹಿಮೆಯನ್ನು ತಿಳಿದುಕೊಂಡವನಾಗಿ ಸ್ವ ಗ್ರಾಮದ ಕಡೆಗೆ ತೆರಳಿದನು.

ಅವನು ಪ್ರವಾಸ ಮಾಡುತ್ತ 'ವೆಲ್ಲಟೂರು' ಎಂಬ ಗ್ರಾಮಕ್ಕೆ ಬಂದನು. ಇದು ಈಗಲೂ ಕೃಷ್ಣಾ ಜಿಲ್ಲೆಯಲ್ಲಿರುತ್ತದೆ. ಪಂಡಿತಾರಾಧ್ಯನ ಗುರುವಾದರೂ ಈ ಗ್ರಾಮದಲ್ಲಿಯೇ ಆಗ ವಾಸಮಾಡಿಕೊಂಡಿದ್ದನು. ಅವನಿಗೆ ಪಂಡಿತಾರಾಧ್ಯನು ಆ ವರೆಗೆ ನಡೆದ ಎಲ್ಲ ಸಂಗತಿಗಳನ್ನು ಅರುಹಿ ಇನ್ನು ಮೇಲೆ ನಾನು ಭೂಲೋಕದಲ್ಲಿರಲಾರೆನು ಎಂದು ತಿಳಿಸಿ ಪರಮಾತ್ಮನನ್ನು ಉದ್ದೇಶಿಸಿ-ಎಲೇ ಪರಮಾತ್ಮನೇ, ನಿನ್ನ ಗರ್ಭದಲ್ಲಿ ನನ್ನನ್ನು ತೆಗೆದುಕೊ, ಎಂದು ಕೇಳಿಕೊಂಡನು. ಆಗ ಅವನು ಪರಮಾತ್ಮನಲ್ಲಿ ಸಾಮರಸ್ಯವನ್ನು ಹೊಂದಿದನು.

## ಕೇದಾರ ಗುರು

ಹೀಗೆ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಶಿವೈಕ್ಯನಾಗಲು ಅವನ ಹಿರಿಯ ಮಗನಾದ ಕೇದಾರ ದೇಶಿಕನಿಗೆ ಭಕ್ತರೆಲ್ಲರೂ ಕೂಡಿ ಗುರುಪಟ್ಟವನ್ನು ಕಟ್ಟಿದರು. ಈ ಕೇದಾರ ದೇಶಿಕನಿಗೆ ನಾಲ್ಕು ಜನ ಮಕ್ಕಳಾದರು. ಅವರು ಚನ್ನವಿಭು, ಮಹಾದೇವ, ಮನುಪಂಡಿತ, ಮತ್ತು ಭೀಮನಪಂಡಿತ, ಎಂಬವರು. ಅವರ ಸಂತಾನದಲ್ಲಿ ಯಮ್ಮಟೂರು ಸೋಮಾರಾಧ್ಯರೆಂಬವರು ಉದಯವಾದರು. ಆ ಗುರುವರನಿಗೆ ಮೂರು ಜನ ಮಕ್ಕಳಿದ್ದರು. ಅವರು ಹೆಸರುಗಳು ಸೂರೇಶ್ವರ, ಸಿಂಗಣ್ಣ ಮತ್ತು ಮಂಚಣ್ಣ. ಅವರ ಪೀಳಿಗೆಯಲ್ಲಿ ಅನೇಕರು ಉದ್ಭವಿಸಿ ವೀರಶೈವೋಪದೇಶವನ್ನು ಕೊಡುವ ಆರಾಧ್ಯರು ಅವರಾದರು. ಈ ಸೂರೇಶ್ವರನಿಗೆ ಪಂಡಿತಾರಾಧ್ಯ ಚರಿತ್ರೆಯನ್ನು ಪಾಲ್ಕುರಿಕೆ ಸೋಮನಾಥನೆ ವಿಸ್ತರಿಸಿ ಹೇಳಿದನೆಂದು ತಿಳಿದುಬರುತ್ತದೆ.

## ಕಥಾಂತರಗಳು

ಮಲ್ಲಿಕಾರ್ಜುನ ಪಂಡಿತಾರಾಧ್ಯನ ಉಲ್ಲೇಖಗಳಿದ್ದ ಗ್ರಂಥಗಳು ಅನೇಕವಿದ್ದು ಅವುಗಳಲ್ಲಿ ಕೆಲವು ಕಥಾಂತರಗಳಿರುವದು ಕಂಡುಬರುತ್ತದೆ. ಅವುಗಳಲ್ಲಿ ಮುಖ್ಯವಾದವುಗಳನ್ನು ನಾವು ಇಲ್ಲಿ ಉಲ್ಲೇಖಿಸುತ್ತೇವೆ.

## ಜನ್ಮಸ್ಥಳದ ಹೆಸರು

ಮಲ್ಲಿಕಾರ್ಜುನನ ಜನ್ಮಸ್ಥಳವು 'ಮರಾಳಪುರ' ಅಥವಾ 'ಮರಳಾಪುರ ಎಂದು ಕೆಲವು ಗ್ರಂಥಗಳಲ್ಲಿ ಹೇಳಿದೆ. ಆದರೆ ಪಾಲ್ಕುರಿಕೆ ಸೋಮಾರಾಧ್ಯನು ತನ್ನ ಪಂಡಿತಾರಾಧ್ಯ ಚರಿತ್ರೆಯಲ್ಲಿ ಆತನ ಗ್ರಾಮವು ದ್ರಾಕ್ಷಾರಾಮವೆಂದು ಹೇಳಿದ್ದಾನೆ. ಸೋಮಾರಾಧ್ಯನು ಮಲ್ಲಿಕಾರ್ಜುನ ಪಂಡಿತಾರಾಧ್ಯನ ಕಾಲಕ್ಕೆ ಬಹಳ ಸಮೀಪವಾಗಿ ಪ್ರಸಿದ್ಧಿಗೆ ಬಂದಿದ್ದಾನೆ ಮತ್ತು ಅವನು ಪಂಡಿತಾರಾಧ್ಯನ ಚರಿತ್ರೆಯನ್ನು ಬರೆದಿದ್ದಾನೆ. ಆದ್ದರಿಂದ ಅವನ ವೃತ್ತಾಂತಕ್ಕೆ ನಾವು ಮಹತ್ವಕೊಡುವದು ಯುಕ್ತವಾಗಿದೆ.

## ಬೌದ್ಧಾಚಾರ್ಯ

ವೆಲ್ನಾಡ ಚೋಳನ ಗುರುವಿನ ಹೆಸರು ಬೌದ್ಧಾಚಾರ್ಯನೆಂದು ಎಲ್ಲ ಗ್ರಂಥಗಳಲ್ಲಿ ಹೇಳಿದೆ. ಆದರೆ ಕೆಲವು ಗ್ರಂಥಗಳಲ್ಲಿ ಅವನು ಜೈನನೆಂದು ಹೇಳಿದೆ. ಆದರೆ ಸೋಮಾರಾಧ್ಯನು ಆತನು ಬೌದ್ಧಮತಸ್ಥನೆಂದು ಹೇಳಿರುವದರಿಂದಲೂ ಅವನ ಹೆಸರಿನ ಮೇಲಿಂದಲೂ ಅವನು ಬೌದ್ಧ ಧರ್ಮೀಯನಿರಬೇಕೆಂದು ತೋರುತ್ತದೆ. ಆಗ ಈ ಭಾಗದಲ್ಲಿ ಅನೇಕ ಬೌದ್ಧಾಲಯಗಳಿದ್ದು ಮಲ್ಲಿಕಾರ್ಜುನ ಪಂಡಿತಾರಾಧ್ಯನ ಕಾಲದಲ್ಲಿ ಇಲ್ಲಿ ಬೌದ್ಧರು ಹೆಚ್ಚಾಗಿ ಪ್ರಬಲರಾಗಿರಬಹುದೆಂದು ತೋರುತ್ತದೆ. ಆದರೆ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಅವರನ್ನು ವಾದದಲ್ಲಿ ಸೋಲಿಸಿ ವೀರಶೈವ ಮತವನ್ನು ಈ ಭಾಗದಲ್ಲಿ ವಿಸ್ತರಿಸಿರಬೇಕೆಂದು ಅವನ ಚರಿತ್ರೆಯಿಂದ ತಿಳಿದುಬರುತ್ತದೆ.

## ಊರ್ಧ್ವ ನೇತ್ರ ಪಂಡಿತಾರಾಧ್ಯ

ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿಷ್ಯನಾದ ರೇವಯ್ಯ ದೇವನು ಬೌದ್ಧಾಚಾರ್ಯನನ್ನು ಕೊಂದನೆಂದು ಬಹುತರ ಎಲ್ಲ ಗ್ರಂಥಗಳಲ್ಲಿ

ಹೇಳಿದೆ. ಹೀಗೆ ಅವನನ್ನು ಕೊಂದವ್ವಕ್ಕೋಸ್ವರ ವೆಲ್ನಾಡ ಚೋಳನು ಅವನನ್ನು ಬಿಟ್ಟು ಮಲ್ಲಿಕಾರ್ಜುನ ಪಂಡಿತಾರಾಧ್ಯನ ಕಣ್ಣುಗಳನ್ನು ಕೀಳಿಸಿದನೆಂತಲೂ, ಕೀಳಿಸಿದರೂ ಅವು ಮತ್ತೆ ಮತ್ತೆ ಬರಹತ್ತಿದ ವೆಂತಲೂ, ಆಗ ಪಂಡಿತಾರಾಧ್ಯನು ಅವು ಪುನಃ ಬಂದುದಾದರೆ ಶಿವಗಣಂಗಳ ಆಣೆ ಎಂದು ಆಣೆ ಇಡಲು ಅವು ಬರುವದು ನಿಂತು ಹೋದವೆಂತಲೂ, ಆದರೂ ಅವು ಅವನ ಮುಖದ ಮೇಲ್ಭಾಗದಲ್ಲಿ ತೋರಿದ್ದರಿಂದ ಪಂಡಿತಾರಾಧ್ಯನಿಗೆ ಉರ್ಧ್ವನೇತ್ರ ಪಂಡಿತಾರಾಧ್ಯನೆಂಬ ಹೆಸರು ಉಂಟಾಯಿತೆಂತಲೂ, ಕೆಲವೆಡೆಗಳಲ್ಲಿ ಉಲ್ಲೇಖಗಳಿವೆ. ಆದರೆ ಬೌದ್ಧಾಚಾರ್ಯನನ್ನು ಕೊಂದ ರೇವಯ್ಯನನ್ನು ಬಿಟ್ಟು ಅರಸನು ಹೀಗೆ ಬೇರೊಬ್ಬನನ್ನು ಶಿಕ್ಷಿಸುವದು ಸಂಭವನೀಯವೆಂದು ತೋರು ವದಿಲ್ಲ. ಆದ್ದರಿಂದ ಈ ಕಥೆಯನ್ನು ನಾವು ಇಲ್ಲಿ ಅನುಸರಿಸದೆ ರೇವ ಯ್ಯನಿಗೆ ಚೋಳನು ಹಿಂಸೆಮಾಡಿದನೆಂಬ ಕಥೆಯನ್ನು ಸ್ವೀಕರಿಸಿದ್ದೇವೆ. ಹೀಗೆ ಕೆಲವು ಗ್ರಂಥಗಳಲ್ಲಿಯೂ ಉಲ್ಲೇಖಗಳಿವೆ.

ನಾವು ಈ ಚರಿತ್ರೆಯಲ್ಲಿ ಚಂದವ್ರೋಲು ಅಥವಾ ಧನದಪುರ ಇವು ಕೃಷ್ಣಾ ಜಿಲ್ಲೆಯಲ್ಲಿವೆ ಎಂದು ಹೇಳಿದ್ದೇವೆ. ಆದರೆ ಅವು ಈಗ ಗುಂಟೂರು ಜಿಲ್ಲೆಯಲ್ಲಿರುತ್ತವೆಂದು ತಿಳಿಯುತ್ತದೆ.

## ಸಮಾಧಿಸ್ಥಳ.

ಮಲ್ಲಿಕಾರ್ಜುನನ ಅಂತ್ಯವು ವೆಲ್ಲಟೂರು, ಅಮರಗುಂಡ, ದ್ರಾಕ್ಷಾ ರಾಮ, ಅಥವಾ ಕೋಟಿಪಲ್ಲಿ ಈ ಸ್ಥಳಗಳಲ್ಲಿ ಆವುದೋ ಒಂದು ಸ್ಥಳ ದಲ್ಲಿ ಆಗಿರಬೇಕೆಂದು ನಮಗೆ ತೋರುತ್ತದೆ. ಅವುಗಳಲ್ಲಿ ನಿಶ್ಚಿತವಾಗಿ ಆವ ಸ್ಥಳದಲ್ಲಿ ಎಂಬುದು ಅಲ್ಲಿಗೆ ಹೋಗಿ ಸಂಶೋಧನ ಮಾಡದ ಹೊರತು ತಿಳಿಯಲಾರದು. ನಮಗೆ ದೊರೆತ ಪಂಡಿತಾರಾಧ್ಯ ಚರಿತ್ರೆ ಯಲ್ಲಿ ಅವನ ಗುರುವಾದ ಕೋಟಿಪಲ್ಲನು ವೆಲ್ಲಟೂರಲ್ಲಿ ಇದ್ದಾಗ ಅಲ್ಲಿಯೇ ಅವನು ಸಮಾಧಿಸ್ಥನಾದನೆಂಬ ಭಾವವು ಉಂಟಾಗುತ್ತದೆ. ಆದರೆ ಅವನು ಶ್ರೀಶೈಲದಲ್ಲಿ ಸಮಾಧಿಸ್ಥನಾದನೆಂದು ಯಾವ ಗ್ರಂಥ ದಲ್ಲಿಯೂ ಹೇಳಿಲ್ಲೆಂಬುದನ್ನು ಲಕ್ಷಿಸತಕ್ಕದ್ದಾಗಿದೆ.

## ರಚಿಸಿದ ಗ್ರಂಥಗಳು.

ನಾವು ಮೇಲೆ ಈ ಚರಿತ್ರೆಯಲ್ಲಿ ಶಿವಸ್ತೋತ್ರ, ಶಿವಾಧಿಕ್ಯ, ಬಸವ ಸ್ತೋತ್ರ, ಭೀಮೇಶ್ವರ ಗದ್ಯ ಮತ್ತು ಶಿವತತ್ವಸಾರ ಈ ಗ್ರಂಥಗಳನ್ನು

## ಕಥಾಂತರಗಳು

ಮಲ್ಲಿಕಾರ್ಜುನ ಪಂಡಿತಾರಾಧ್ಯನ ಉಲ್ಲೇಖಗಳಿದ್ದ ಗ್ರಂಥಗಳು ಅನೇಕವಿದ್ದು ಅವುಗಳಲ್ಲಿ ಕೆಲವು ಕಥಾಂತರಗಳಿರುವದು ಕಂಡುಬರುತ್ತದೆ. ಅವುಗಳಲ್ಲಿ ಮುಖ್ಯವಾದವುಗಳನ್ನು ನಾವು ಇಲ್ಲಿ ಉಲ್ಲೇಖಿಸುತ್ತೇವೆ.

## ಜನ್ಮಸ್ಥಳದ ಹೆಸರು

ಮಲ್ಲಿಕಾರ್ಜುನನ ಜನ್ಮಸ್ಥಳವು 'ವರಾಳಪುರ' ಅಥವಾ 'ವರಳಾಪುರ ಎಂದು ಕೆಲವು ಗ್ರಂಥಗಳಲ್ಲಿ ಹೇಳಿದೆ. ಆದರೆ ಪಾಲ್ಕುರಿಕಿ ಸೋಮರಾಧ್ಯನು ತನ್ನ ಪಂಡಿತಾರಾಧ್ಯ ಚರಿತ್ರೆಯಲ್ಲಿ ಆತನ ಗ್ರಾಮವು ದಾಕ್ಷಾರಾಮವೆಂದು ಹೇಳಿದ್ದಾನೆ. ಸೋಮರಾಧ್ಯನು ಮಲ್ಲಿಕಾರ್ಜುನ ಪಂಡಿತಾರಾಧ್ಯನ ಕಾಲಕ್ಕೆ ಬಹಳ ಸಮೀಪವಾಗಿ ಪ್ರಸಿದ್ಧಿಗೆ ಬಂದಿದ್ದಾನೆ ಮತ್ತು ಅವನು ಪಂಡಿತಾರಾಧ್ಯನ ಚರಿತ್ರೆಯನ್ನು ಬರೆದಿದ್ದಾನೆ. ಆದ್ದರಿಂದ ಅವನ ವೃತ್ತಾಂತಕ್ಕೆ ನಾವು ಮಹತ್ವಕೊಡುವದು ಯುಕ್ತವಾಗಿದೆ.

## ಬೌದ್ಧಾಚಾರ್ಯ

ವೆಲನಾಡ ಚೋಳನ ಗುರುವಿನ ಹೆಸರು ಬೌದ್ಧಾಚಾರ್ಯನೆಂದು ಎಲ್ಲ ಗ್ರಂಥಗಳಲ್ಲಿ ಹೇಳಿದೆ. ಆದರೆ ಕೆಲವು ಗ್ರಂಥಗಳಲ್ಲಿ ಅವನು ಜೈನನೆಂದು ಹೇಳಿದೆ. ಆದರೆ ಸೋಮಾರಾಧ್ಯನು ಆತನು ಬೌದ್ಧಮತಸ್ತನೆಂದು ಹೇಳಿರುವದರಿಂದಲೂ ಅವನ ಹೆಸರಿನ ಮೇಲಿಂದಲೂ ಅವನು ಬೌದ್ಧ ಧರ್ಮೀಯನಿರಬೇಕೆಂದು ತೋರುತ್ತದೆ. ಆಗ ಈ ಭಾಗದಲ್ಲಿ ಅನೇಕ ಬೌದ್ಧಾಲಯುಗಳಿದ್ದು ಮಲ್ಲಿಕಾರ್ಜುನ ಪಂಡಿತಾರಾಧ್ಯನ ಕಾಲದಲ್ಲಿ ಇಲ್ಲಿ ಬೌದ್ಧರು ಹೆಚ್ಚಾಗಿ ಪ್ರಬಲರಾಗಿರಬಹುದೆಂದು ತೋರುತ್ತದೆ. ಆದರೆ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಅವರನ್ನು ವಾದದಲ್ಲಿ ಸೋಲಿಸಿ ವೀರಶೈವ ಮತವನ್ನು ಈ ಭಾಗದಲ್ಲಿ ವಿಸ್ತರಿಸಿರಬೇಕೆಂದು ಅವನ ಚರಿತ್ರೆಯಿಂದ ತಿಳಿದುಬರುತ್ತದೆ.

## ಊರ್ಧ್ವ ನೇತ್ರ ಪಂಡಿತಾರಾಧ್ಯ

ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿಷ್ಯನಾದ ರೇವಯ್ಯ ದೇವನು ಬೌದ್ಧಾಚಾರ್ಯನನ್ನು ಕೊಂದನೆಂದು ಬಹುತರ ಎಲ್ಲ ಗ್ರಂಥಗಳಲ್ಲಿ

ಹೇಳಿದೆ. ಹೀಗೆ ಅವನನ್ನು ಕೊಂದದ್ದಕ್ಕೋಸ್ಕರ ವೆಲ್ನಾಡ ಚೋಳನು ಅವನನ್ನು ಬಿಟ್ಟು ಮಲ್ಲಿಕಾರ್ಜುನ ಪಂಡಿತಾರಾಧ್ಯನ ಕಣ್ಣುಗಳನ್ನು ಕೀಳಿಸಿದನೆಂತಲೂ, ಕೀಳಿಸಿದರೂ ಅವು ಮತ್ತೆ ಮತ್ತೆ ಬರಹತ್ತಿದ ವೆಂತಲೂ, ಆಗ ಪಂಡಿತಾರಾಧ್ಯನು ಅವು ಪುನಃ ಬಂದುದಾದರೆ ಶಿವಗಣಂಗಳ ಆಣೆ ಎಂದು ಆಣೆ ಇಡಲು ಅವು ಬರುವದು ನಿಂತು ಹೋದವೆಂತಲೂ, ಆದರೂ ಅವು ಅವನ ಮುಖದ ಮೇಲ್ಭಾಗದಲ್ಲಿ ತೋರಿದ್ದರಿಂದ ಪಂಡಿತಾರಾಧ್ಯನಿಗೆ ಊರ್ಧ್ವನೇತ್ರ ಪಂಡಿತಾರಾಧ್ಯನೆಂಬ ಹೆಸರು ಉಂಟಾಯಿತೆಂತಲೂ, ಕೆಲವೆಡೆಗಳಲ್ಲಿ ಉಲ್ಲೇಖಗಳಿವೆ. ಆದರೆ ಬೌದ್ಧಾಚಾರ್ಯನನ್ನು ಕೊಂದ ರೇವಯ್ಯನನ್ನು ಬಿಟ್ಟು ಅರಸನು ಹೀಗೆ ಬೇರೊಬ್ಬನನ್ನು ಶಿಕ್ಷಿಸುವದು ಸಂಭವನೀಯವೆಂದು ತೋರು ವದಿಲ್ಲ. ಆದ್ದರಿಂದ ಈ ಕಥೆಯನ್ನು ನಾವು ಇಲ್ಲಿ ಅನುಸರಿಸದೆ ರೇವ ಯ್ಯನಿಗೆ ಚೋಳನು ಹಿಂಸೆಮಾಡಿದನೆಂಬ ಕಥೆಯನ್ನು ಸ್ವೀಕರಿಸಿದ್ದೇವೆ. ಹೀಗೆ ಕೆಲವು ಗ್ರಂಥಗಳಲ್ಲಿಯೂ ಉಲ್ಲೇಖಗಳಿವೆ.

ನಾವು ಈ ಚರಿತ್ರೆಯಲ್ಲಿ ಚಂದವ್ರೋಲು ಅಥವಾ ಧನದಪುರ ಇವು ಕೃಷ್ಣಾ ಜಿಲ್ಲೆಯಲ್ಲಿವೆ ಎಂದು ಹೇಳಿದ್ದೇವೆ. ಆದರೆ ಅವು ಈಗ ಗುಂಟೂರು ಜಿಲ್ಲೆಯಲ್ಲಿರುತ್ತವೆಂದು ತಿಳಿಯುತ್ತದೆ.

## ಸಮಾಧಿಸ್ಥಳ.

ಮಲ್ಲಿಕಾರ್ಜುನನ ಅಂತ್ಯವು ವೆಲ್ಲಟೂರು, ಅಮರಗುಂಡ, ದ್ರಾಕ್ಷಾ ರಾಮ, ಅಥವಾ ಕೋಟಿಪಲ್ಯ ಈ ಸ್ಥಳಗಳಲ್ಲಿ ಆವುದೋ ಒಂದು ಸ್ಥಳ ದಲ್ಲಿ ಆಗಿರಬೇಕೆಂದು ನಮಗೆ ತೋರುತ್ತದೆ. ಅವುಗಳಲ್ಲಿ ನಿಶ್ಚಿತವಾಗಿ ಆವ ಸ್ಥಳದಲ್ಲಿ ಎಂಬುದು ಅಲ್ಲಿಗೆ ಹೋಗಿ ಸಂಶೋಧನ ಮಾಡದ ಹೊರ್ತು ತಿಳಿಯಲಾರದು. ನಮಗೆ ದೊರೆತ ಪಂಡಿತಾರಾಧ್ಯ ಚರಿತ್ರೆ ಯಲ್ಲಿ ಅವನ ಗುರುವಾದ ಕೋಟಿಪಲ್ಯನು ವೆಲ್ಲಟೂರಲ್ಲಿ ಇದ್ದಾಗ ಅಲ್ಲಿಯೇ ಅವನು ಸಮಾಧಿಸ್ಥನಾದನೆಂಬ ಭಾವವು ಉಂಟಾಗುತ್ತದೆ. ಆದರೆ ಅವನು ಶ್ರೀಶೈಲದಲ್ಲಿ ಸಮಾಧಿಸ್ಥನಾದನೆಂದು ಯಾವ ಗ್ರಂಥ ದಲ್ಲಿಯೂ ಹೇಳಿಲ್ಲೆಂಬುದನ್ನು ಲಕ್ಷಿಸತಕ್ಕದ್ದಾಗಿದೆ.

## ರಚಿಸಿದ ಗ್ರಂಥಗಳು.

ನಾವು ಮೇಲೆ ಈ ಚರಿತ್ರೆಯಲ್ಲಿ ಶಿವಸ್ತೋತ್ರ, ಶಿವಾಧಿಕ್ಯ, ಬಸವ ಸ್ತೋತ್ರ, ಭೀಮೇಶ್ವರ ಗದ್ಯ ಮತ್ತು ಶಿವತತ್ವಸಾರ ಈ ಗ್ರಂಥಗಳನ್ನು

ಮಲ್ಲಿಕಾರ್ಜುನ ಪಂಡಿತಾರಾಧ್ಯನು ರಚಿಸಿದನೆಂದು ಬರೆದಿದ್ದೇವೆ. ಅವನು ಈ ಗ್ರಂಥಗಳನ್ನಷ್ಟೇ ಅಲ್ಲ, ಶ್ರೀಮುಖ ದರ್ಶನ ಗದ್ಯವೆಂಬ ಗ್ರಂಥವನ್ನು ಸಂಸ್ಕೃತದಲ್ಲಿ, ಹಾಗೆಯೇ ಅವನು ರುದ್ರಮಹಿಮಾ, ಲಿಂಗೋದ್ಭವ ಗದ್ಯ, ಸ್ತುತಿಶ್ಲೋಕ ಪಂಚಕ, ಅಮರೇಶ್ವರಾಷ್ಟಕ, ಪರ್ವತ ವರ್ಣನೆ, ಸಂಸಾರ ಮಾಯಾಸ್ತವ, ಶಂಕರಗೀತ, ಆನಂದಗೀತ ಎಂಬ ಗ್ರಂಥಗಳನ್ನು ಕೂಡ ಬರೆದದ್ದು ತಿಳಿದುಬರುತ್ತವೆ

'ನಡುಗುಡೆಂ' ಈ ಗ್ರಾಮವು ಈಗ ಮುನಗಾಲ ಜಮೀನು ದಾರರ ಗ್ರಾಮಗಳಲ್ಲಿ ಒಂದಾಗಿದೆಂದು ತಿಳಿದುಬರುತ್ತದೆ.

ಮಲ್ಲಿಕಾರ್ಜುನ ಪಂಡಿತಾರಾಧ್ಯನು ಬಸವೇಶ್ವರನನ್ನು ಕಾಣಲು ಅಮರಾವತಿ, ನಡುಗುಡು, ಅಲ್ಲಿಂದ ಪಾನುಗಲ್ಲು ಮಾರ್ಗವಾಗಿ ಕಲ್ಯಾಣಕ್ಕೆ ಹೋರಟು ಮಾರ್ಗದಲ್ಲಿ ಅವನಿಗೆ ಮನಿಪುರವೆಂಬ ಗ್ರಾಮವು ಹತ್ತಿತು. ಅಲ್ಲಿ ಅವನು ಇರುವಾಗ ಬಸವೇಶ್ವರನು ಕೂಡಲಸಂಗಮನಲ್ಲಿ ಐಕ್ಯಹೊಂದಿದನೆಂಬುದು ಅವನಿಗೆ ತಿಳಿಯಿತು. ಆಮೇಲೆ ಪಂಡಿತಾರಾಧ್ಯನು ಶ್ರೀಶೈಲಕ್ಕೆ ಹೋಗಿ ಅಲ್ಲಿಂದ ವೆಲ್ಲಟೂರಿಗೆ ಬಂದನು. ಬಸವೇಶ್ವರನು ಐಕ್ಯವನ್ನು ಹೊಂದಿದಬಳಿಕ ಅಲ್ಲಮಪ್ರಭು, ಮಹಾದೇವಿಯಕ್ಕ, ರುದ್ರಮುನಿ, ಮುಕ್ತಿಮುನಿ ಮೊದಲಾದವರು ಶ್ರೀಶೈಲದಲ್ಲಿಯೇ ಬಂದು ವಾಸ ಮಾಡಲಿಕ್ಕೆ ಹತ್ತಿದರೆಂದು ತಿಳಿದುಬರುತ್ತದೆ. ಮಲ್ಲಿಕಾರ್ಜುನ ಪಂಡಿತಾರಾಧ್ಯನು ಹಿಂದಿರುಗಿದ ಕಾಲದಲ್ಲಿ ಒಂದು ವೇಳೆ ಈ ಶಿವಶರಣ ಶರಣೆಯರು ಅಲ್ಲಿಯೇ ಇದ್ದಿದ್ದಾದರೆ ಅವನು ಅವರೊಡನೆಯೇ ಶ್ರೀಶೈಲದಲ್ಲಿ ನಿಃಸಂಶಯವಾಗಿ ಉಳಿದುಬಿಡುತ್ತಿದ್ದನು. ಆದ್ದರಿಂದ ಬಸವೇಶ್ವರನು ಲಿಂಗೈಕ್ಯನಾದ ಬಳಿಕ ಕೆಲವು ಕಾಲಗತಿಸಿರಬೇಕು. ಆಮೇಲೆ ಶಿವಶರಣರು ಶ್ರೀಶೈಲ ಮತ್ತು ಉಳಿವೆಗೆ ಹೋಗಿರಬೇಕೆಂದು ತೋರುತ್ತದೆ ಈ ಮಧ್ಯಕಾಲದಲ್ಲಿ ಚನ್ನಬಸವೇಶ್ವರ, ಮಡಿವಾಳ ಮಾಚಿದೇವ ಇವರು ಶರಣರಿಗೆ ಮುಖ್ಯಸ್ತರಾಗಿ ಕಲ್ಯಾಣದಲ್ಲಿಯೇ ಕೆಲಕಾಲ ಉಳಿದಿರಬೇಕು. ಆದರೆ ಈ ಕಾಲದಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಮಧ್ಯದಲ್ಲಿ ಎಲ್ಲಿಯೂ ನಿಲ್ಲದೆ ತನ್ನ ಗ್ರಾಮದ ಕಡೆಗೆಯೇ ತಿರುಗಿಬಂದಿರಬಹುದೆಂದು ತೋರುತ್ತದೆ ಇವನು

ತಿರುಗಿಬಂದಬಳಿಕ ಅಲ್ಲಮಪ್ರಭು, ಮಹಾದೇವಿಯಕ್ಕ, ಮರುಳಸಿದ್ಧ ಮುನಿ ಮೊದಲಾದವರು ಶ್ರೀಶೈಲಕ್ಕೆ ಬಂದು ಅಲ್ಲಿ ಆಶ್ರಯಹೊಂದಿರಬೇಕೆಂದು ತೋರುತ್ತದೆ.

## ಆಂಧ್ರರಲ್ಲಿ ಶಿವಶರಣರಿಗೋಸ್ಕರ ಇದ್ದ ಆದರ

ಈ ಪ್ರಕಾರ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಮದ್ರಾಸ ಇಲಾಖೆಯ ಉತ್ತರ ಭಾಗ ಅಂದರೆ ಆಂಧ್ರದೇಶದಲ್ಲಿ ವೀರಶೈವ ಮತವನ್ನು ಪ್ರಸ್ಥಾಪಿಸಿದ್ದಾನೆ. ಈ ಮತದ ನಿಶ್ಚಿತ ಸ್ವರೂಪು ಅಲ್ಲಿ ಹೇಗಿತ್ತೆಂಬುದು ಆಂಧ್ರ ವೀರಶೈವ ಧಾರ್ಮಿಕ ಗ್ರಂಥಗಳು ಪ್ರಕಟವಾದ ಬಳಿಕಗೊತ್ತಾಗುವದು. ಆದರೆ ಈ ಕಾಲದಲ್ಲಿ ಇಲ್ಲಿ ಪ್ರಸಿದ್ಧಿಗೆ ಬಂದ ಧಾರ್ಮಿಕ ಪುರುಷರ ಚರಿತ್ರಗಳ ಮೇಲಿಂದ ಅವರೆಲ್ಲರೂ ಬಸವಾದಿ ಪ್ರಮಥರ ಮಾರ್ಗಕ್ಕೆಯೇ ಮಹತ್ವ ಕೊಟ್ಟಿದ್ದು ನಿಃಸ್ಸಂದೇಹವು. ಆದ್ದರಿಂದ ಅವರು ಶಿವಶರಣರ ತತ್ವಗಳನ್ನು ಅನುಸರಿಸಲು ಅಪೇಕ್ಷೆ ಪಟ್ಟು ಅವರಿದ್ದ ಸ್ಥಾನವಾದ ಕಲ್ಯಾಣಕ್ಕೆ ಹೋಗಲಕ್ಷೇಪಿಸುತ್ತಿದ್ದರು. ಅದೇ ಪ್ರಕಾರ ಮಲ್ಲಿಕಾರ್ಜುನಪಂಡಿತಾರಾಧ್ಯನೂ ಬಸವೇಶ್ವರನನ್ನು ಕಾಣಲಿಕ್ಕೆ ಕಲ್ಯಾಣಕ್ಕೆ ಹೊರಟಿದ್ದನು. ಆದರೆ ಅಷ್ಟರಲ್ಲಿಯೇ ಅಲ್ಲಿ ಧಾರ್ಮಿಕ ಕ್ರಾಂತಿಯುಂಟಾದ್ದರಿಂದ ಮತ್ತು ಶಿವಶರಣರೆಲ್ಲ ಆ ಸ್ಥಾನವನ್ನು ಬಿಟ್ಟು ಬೇರೆ ಕಡೆಗೆ ಹೋಗಿಬಿಟ್ಟದ್ದರಿಂದ ಪಂಡಿತಾರಾಧ್ಯನು ಹಿಂದಿರುಗಬೇಕಾಯಿತು.

## ಪಂಡಿತಾರಾಧ್ಯನಿಗೆ ರಾಜರಿಂದ ಉಂಟಾದ ವಿರೋಧಗಳು.

ಮಲ್ಲಿಕಾರ್ಜುನ ಪಂಡಿತಾರಾಧ್ಯನು ವೀರಶೈವ ಧರ್ಮ ಪ್ರಸಾರ ಮಾಡುವ ಕಾಲದಲ್ಲಿ ಆತನಿಗೆ ಅನೇಕ ವಿರೋಧಿಗಳು ಉಂಟಾದದ್ದು ಕಂಡು ಬರುತ್ತದೆ. ಈ ಭಾಗದಲ್ಲಿದ್ದ ಬೌದ್ಧರೂ ಪರಮತಸ್ಥರೂ ಆತನನ್ನೂ ಅವನ ಅನುಯಾಯಿಗಳನ್ನೂ ಕೊಂದುಹಾಕಲು ಪ್ರಯತ್ನಿಸಿದರು. ಚಂದವ್ರೋಲು ಮತ್ತು ಪಾನುಗಲ್ಲಿನ ರಾಜರು ಇಂಥವರಿಗೆ ಸಹಾಯಕರಾದರು. ಆದರೆ ಇಷ್ಟರಲ್ಲಿ ಮಲ್ಲಿಕಾರ್ಜುನಪಂಡಿತಾರಾಧ್ಯನು ಪ್ರಚಾರ ಮಾಡಿದ ತತ್ವಗಳು ಜನರಲ್ಲಿ ನಿಬಿಡವಾಗಿ ಹಬ್ಬಿದ್ದವು. ಆದ್ದರಿಂದ ಜನರು ಮಲ್ಲಿಕಾರ್ಜುನ ಪಂಡಿತಾರಾಧ್ಯನಿಗೆ ಸಹಾಯಕರಾಗಿ ನಿಂತರು. ಆಗ ಉಭಯ ಪಕ್ಷಗಳಲ್ಲಿ ಕಾಳಗಗಳಾದವು. ರಕ್ತ-

ಪಾತವಾಯಿತು. ಇದರ ಪರಿಣಾಮವಾಗಿ ಅಕ್ಷಿದ್ದ ಆ ಎರಡೂ ರಾಜ್ಯಗಳು ಮಣ್ಣು ಮುಕ್ಕಿದವು. ಈ ಪ್ರಕಾರ ಆಂಧ್ರ ನಾಡಿನಲ್ಲಿ ಶಿವಶರಣರು ಕಡೆಗೆ ಜಯಶೀಲರಾಗಿ ವೀರಶೈವ ಧರ್ಮವನ್ನು ಪ್ರಸ್ಥಾಪಿಸಿದ್ದಾರೆ.

## ವೀರಶೈವರಿಗೆ ವಿಪತ್ಕಾಲ

ಒಟ್ಟಿಗೆ ಈ ಕಾಲದಲ್ಲಿ ವೀರಶೈವ ಸಮಾಜಕ್ಕೆ ಕರ್ನಾಟಕ ಮತ್ತು ಆಂಧ್ರ ದೇಶಗಳನ್ನು ಒಂದು ವಿಪತ್ಕಾಲವು ಪ್ರಾಪ್ತವಾಗಿತ್ತೆಂಬುದು ನಿಃಸಂಶಯವು. ಪರವಾದಿಗಳು ವೀರಶೈವ ಧರ್ಮವನ್ನು ಸಂಪೂರ್ಣ ನಾಶಮಾಡುವ ಪ್ರಯತ್ನದಲ್ಲಿ ತೊಡಗಿದ್ದರು. ಇದರಲ್ಲಿ ಅವರಿಗೆ ಆಗಿನ ರಾಜರೂ ಬೆಂಬಲ ಕೊಟ್ಟರು. ಆದರೆ ಅಷ್ಟರಲ್ಲಿ ಶಿವಶರಣರ ವಿಶಾಲ ತತ್ವಗಳು ಜನಸಮುದಾಯದಲ್ಲಿ ಪ್ರಚಾರವಾಗಿದ್ದವು. ಇದರಿಂದ ಬಹುಜನಸಮಾಜವು ಶಿವಶರಣರನ್ನು ಪುರಸ್ಕರಿಸಿತು. ಈ ಸ್ಥಿತಿಯುಂಟಾದ್ದರಿಂದಲೇ ವೀರಶೈವ ಧರ್ಮವು ಕರ್ನಾಟಕ ಆಂಧ್ರ ದೇಶಗಳಲ್ಲಿ ಚಿರಸ್ಥಾಯಿಯಾಗಿ ಉಳಿಯಿತು. ಇಲ್ಲದಿದ್ದರೆ ಬಸವೇಶ್ವರನ ಕಾಲದಲ್ಲಿಯೇ ಅದು ನಾಶವಾಗಿ ಹೋಗುವ ಪರಿಸ್ಥಿತಿಯು ಅದಕ್ಕೆ ಉಂಟಾಗಿತ್ತು.

## ಪಂಡಿತಾರಾಧ್ಯನು ಸಿಂಹಾಸನಾಧಿಪತಿಯೋ ಹೇಗೆ?

ವೀರಶೈವ ಸಮಾಜದಲ್ಲಿ ಶ್ರೀಶೈಲ, ಉಜ್ಜಿನಿ, ಬಾಳೇಹಳ್ಳಿ, ಕಾಶೀ ಮತ್ತು ಕೇದಾರ ಈ ಸ್ಥಳಗಳಲ್ಲಿ ಪಂಚಾಚಾರ್ಯರು ಉದ್ಭವಿಸಿ ಅಲ್ಲಿ ಸಿಂಹಾಸನಗಳನ್ನು ಸ್ಥಾಪಿಸಿ ವೀರಶೈವ ಮತಸ್ಥಾಪಕರಾದರೆಂಬ ತಿಳಿವಳಿಕೆಯು ಈಗಲೂ ಇರುತ್ತದೆ. ಇವುಗಳಲ್ಲಿ ಅನುಕ್ರಮವಾಗಿ ಪಂಡಿತಾರಾಧ್ಯ, ಮರುಳಾರಾಧ್ಯ, ರೇವಣಾರಾಧ್ಯ, ವಿಶ್ವಾರಾಧ್ಯ ಮತ್ತು ಏಕೋರಾಮಾರಾಧ್ಯ ಇವರು ಉದಯವಾಗಿ ತಮ್ಮ ತಮ್ಮ ಸಂಸ್ಥಾನಗಳನ್ನು ಸ್ಥಾಪಿಸಿ ಯುಗ ಯುಗಾಂತರಗಳಲ್ಲಿ ವೀರಶೈವ ಸಮಾಜಕ್ಕೆಲ್ಲ ಜಗದ್ಗುರುಗಳಾದರೆಂತಲೂ ಅವರ ಮೂಲಕ ನಾಡಿನಲ್ಲೆಲ್ಲ ಅನಂತ ಮಠಗಳು ಉತ್ಪನ್ನವಾದವೆಂತಲೂ ನಂಬುಗೆಯು ಇರುತ್ತದೆ. ಈ ತಿಳವಳಿಕೆಯ ಪ್ರಕಾರ ಪಂಡಿತಾರಾಧ್ಯನು ಶ್ರೀಶೈಲದಲ್ಲಿ ಜಗದ್ಗುರು ಮಠವನ್ನು ಸ್ಥಾಪಿಸಿ ಸಮಾಜದಲ್ಲಿ ವೀರಶೈವ ಮತವನ್ನು ನೆಲೆಗೊಳಿಸಿದನೆಂದು ನಾವು ನಂಬಬೇಕಾಗುತ್ತದೆ. ಆದರೆ ಪಂಡಿತಾರಾಧ್ಯನ ಚರಿತ್ರೆಯನ್ನು ನಾವು ನೋಡೀದಲ್ಲಿ ಈ ವಿಧಾನಗಳನ್ನು ಸಮರ್ಥಿಸುವ

ವಿಷಯುಗಳು ಆದರಲ್ಲಿ ಕಂಡು ಬರುವದಿಲ್ಲ. ಅವನು ತನ್ನ ಜೀವಿತ ದಲ್ಲಿ ತಾನು ಕೇವಲ ಬಸವೇಶ್ವರನ ಒಬ್ಬ ಅನುಯಾಯಿ ಎಂತಲೇ ಭಾವಿಸಿ ವರ್ತಿಸಿದ್ದು ಕಂಡುಬರುತ್ತದೆ. ಅವನು ತನ್ನ ಯೋಗ್ಯತೆಯು ಬಸವೇಶ್ವರನಕಿಂತಲೂ ಹೆಚ್ಚಿನದೆಂದು ಭಾವಿಸಿ ಎಂದೂ ವರ್ತಿಸಿಲ್ಲ. ಅವನು ಅವನಿಗೋಸ್ಕರ ಅತ್ಯಂತ ಭಕ್ತಿಭಾವವನ್ನು ತಾಳಿ ಅವನನ್ನು ಕಾಣಬೇಕೆಂದು ಕಲ್ಯಾಣಕ್ಕೆ ಹೊರಡುತ್ತಾನೆ. ಅವನು ಪದೇ ಪದೇ ಬಸವೇಶ್ವರನನ್ನು ಸ್ತೋತ್ರಮಾಡುತ್ತಾನೆ. ಅಲ್ಲದೆ ಅವನ ವಿಷಯುವಾಗಿ ಸ್ತೋತ್ರಪದಗಳನ್ನೂ ರಚಿಸಿದ್ದಾನೆ. ಇವನು ಇಡೀ ವೀರಶೈವ ಸಮಾಜಕ್ಕೆಲ್ಲ ತಾನು ಒಬ್ಬ ಜಗದ್ಗುರು ಎಂದು ಭಾವಿಸಿ ವರ್ತಿಸಿಲ್ಲ. ತಾನು ಬಸವೇಶ್ವರನ ಒಬ್ಬ ಕಿಂಕರನೆಂದು ಭಾವಿಸಿಕೊಂಡು ವರ್ತಿಸಿದ್ದಾನೆ. ಆದ್ದರಿಂದ ಈಗ ಜನರು ತಿಳಿದಂತೆ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಜಗದ್ಗುರುತ್ವದ ಸ್ಥಾನವನ್ನು ಹೊಂದಿ ವೀರಶೈವ ಮತವನು ಪ್ರಸ್ಥಾಪಿಸಿದನೆಂದು ತಿಳಿಯುಲು ಬರಲಾರದು.

ಮಲ್ಲಿಕಾರ್ಜುನ ಪಂಡಿತಾರಾಧ್ಯನ ಚರಿತ್ರೆಯುನ್ನು ನಾವು ನಿರೀಕ್ಷಿಸಿದಲ್ಲಿ ಅವನು ಶ್ರೀಶೈಲದಲ್ಲಿ ಹುಟ್ಟಿದ್ದು ಕಂಡುಬರುವದಿಲ್ಲ. ಅವನು ಅಲ್ಲಿಗೆ ಕೆಲವು ಬಾರಿ ಹೋಗಿದ್ದರೂ ಆ ಸ್ಥಾನವನ್ನು ಅವನು ತನ್ನ ಸ್ಥಾಯಿಕ ಪೀಠವನ್ನಾಗಿ ಮಾಡಿಕೊಂಡಿಲ್ಲ. ಅವನು ಅಲ್ಲಿ ಬಹಳ ದಿವಸ ಸಹ ವಾಸ ಮಾಡಿದಂತೆ ತೋರುವದಿಲ್ಲ. ಆದರ ಬದಲು ಅವನು ದ್ರಾಕ್ಷಾರಾಮ ಅಥವಾ ಅಮರಗುಂಡ ಈ ಸ್ಥಳಗಳಲ್ಲಿ ವಾಸಿಸಿದ್ದು ಕಂಡುಬರುತ್ತದೆ. ಅವನು ಈ ಗ್ರಾಮಗಳಲ್ಲಿಯೇ ಇದ್ದುಕೊಂಡು ಧರ್ಮ ಬೋಧೆಯುನ್ನು ಮಾಡುತ್ತ ಬಂದಿದ್ದಾನೆ. ಈ ಅಂಶಗಳು ಅವನ ಚರಿತ್ರೆಯುಲ್ಲಿ ಹೊರಪಡುತ್ತವೆ ಆದ್ದರಿಂದ ಅವನು ಶ್ರೀಶೈಲ ಸಿಂಹಾಸನವನ್ನು ಸ್ಥಾಪಿಸಿದನೆಂಬ ಸಂಗತಿಯು ದೃಢಪಡುವದಿಲ್ಲ.

ಅವನಕಿಂತಲೂ ಮೊದಲು ಆಂಧ್ರದೇಶದಲ್ಲಿ ಶ್ರೀಪತಿ ಪಂಡಿತಾರಾಧ್ಯ ಮೊದಲಾದವರು ಉದ್ಭವಿಸಿ ವೀರಶೈವ ಮತವನ್ನು ಪ್ರಚಾರಗೊಳಿಸಿದ್ದರು. ಇದು ಇವರ ಚರಿತ್ರೆಗಳಿಂದ ತಿಳಿದುಬರುತ್ತದೆ. ಆದ್ದರಿಂದ ಪಂಡಿತಾರಾಧ್ಯನಕಿಂತಲೂ ಮೊದಲು ವೀರಶೈವ ಸಮಾಜವು ಈ ಭಾಗದಲ್ಲಿ ಸ್ಥಾಪಿತವಾಗಿದ್ದರಿಂದ ಅವನು ಮೂಲ ಸಿಂಹಾಸನ ಕರ್ತನೆಂದು ತಿಳಿಯುಲು ಬರಲಾರದು. ಅವನು ಜನಿಸಿದ ಬಳಿಕ ಬೇರೆ

ವೀರಶೈವರಂತೆ ಅವನು ಕೋಟಿಪಲ್ಯಾರಾಧ್ಯ ಎಂಬ ಗುರುವಿನ ಕಡೆಯಿಂದ ವೀರಶೈವ ದೀಕ್ಷೆಯನ್ನು ಹೊಂದಿದ್ದಾನೆ. ಆದರೆ ಜಗದ್ಗುರುತ್ವವನ್ನು ಹೊಂದಿದವನಲ್ಲಿ ಈ ರೀತಿಯು ಉಂಟಾಗುವದು ಸಂಭವನೀಯವಲ್ಲ.

ಮಲ್ಲಿಕಾರ್ಜುನ ಪಂಡಿತಾರಾಧ್ಯನು ಅವಿವಾಹಿತನಾಗಿರಲಿಲ್ಲ. ಅವನಿಗೆ ಹೆಂಡಿರು ಮಕ್ಕಳಿದ್ದರು. ಅವನು ಸಮಾಧಿಸ್ಥನಾದ ಬಳಿಕ ಅವನ ಹಿರಿಯ ಮಗನಾದ ಕೇದಾರ ದೇಶಿಕನಿಗೆ ಭಕ್ತರೆಲ್ಲರೂ ಕೂಡಿ ಗುರುಪಟ್ಟವನ್ನು ಕಟ್ಟಿದರು ಈ ಕೇದಾರ ದೇಶಿಕನಾದರೂ ವಿವಾಹಿತನಾಗಿದ್ದನು. ಆದ್ದರಿಂದ ಅವನ ಸಂತತಿತಿಯವರು ಮಲ್ಲಿಕಾರ್ಜುನ ಪಂಡಿತಾರಾಧ್ಯನ ಮೂಲಕ ಉಂಟಾದ ಪೀಠಕ್ಕೆ ಅಧಿಕಾರಿಗಳಾಗುತ್ತ ಬಂದರು ಆದರೂ ಅವರಲ್ಲಿ ಯಾರಿಗೂ ಶ್ರೀಶೈಲ ಸಿಂಹಾಸನ ಸ್ಥಾಪಕರೂ ಜಗದ್ಗುರುಗಳೂ ಎಂಬ ಹೆಸರು ಉಂಟಾದದ್ದು ಬರುವದಿಲ್ಲ. ಈ ವಿಚಾರಗಳು ಹಿಂದುಗಡೆ ಸಮಾಜದಲ್ಲಿ ಉಂಟಾದಂತೆ ನಮಗೆ ತೋರುತ್ತದೆ

ಅನೇಕರು ಶ್ರೀಶೈಲದಲ್ಲಿ ಸಿಂಹಾಸನ ಮಠವನ್ನು ಸ್ಥಾಪಿಸಿದ ಪಂಡಿತಾರಾಧ್ಯನು ಈ ಚರಿತ್ರೆಯಲ್ಲಿ ಹೇಳಿದ ಪಂಡಿತಾರಾಧ್ಯನಲ್ಲ ಆತನು ಬೇರೊಬ್ಬ ಪುರಾತನ ಕಾಲದ ಪಂಡಿತಾರಾಧ್ಯನೆಂದು ಪ್ರತಿಪಾದಿಸುವದುಂಟು. ಆದರೆ ಈ ಪುರಾತನ ಪಂಡಿತಾರಾಧ್ಯನ ವಿವರಗಳು ವೀರಶೈವ ವಾಙ್ಮಯದಲ್ಲಿ ನಮಗೆಲ್ಲಿಯೂ ದೊರೆತಿರುವದಿಲ್ಲ. ಅವು ಬೇರೆ ಯಾರಿಗಾದರೂ ತಿಳಿದಿದ್ದರೆ ಅವರು ಅವುಗಳನ್ನು ಅವಶ್ಯವಾಗಿ ಪ್ರಕಟಿಸಬೇಕು. ಇದರಿಂದ ವೀರಶೈವ ಧರ್ಮದ ಉಗಮದ ಮೇಲೆ ಮಹತ್ವದ ಪ್ರಕಾಶವು ಬೀಳದೆ ಇರುವದು.

ಆದರೆ ವೀರಶೈವವಾಙ್ಮಯದಲ್ಲಿ ಪ್ರಸಿದ್ಧಿಗೆ ಬಂದ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಯೋಗ್ಯತೆಯು ಅತ್ಯಂತ ದೊಡ್ಡದೆಂಬುದು ನಿಃಸಂಶಯವು. ಅವನು ವೀರಶೈವ ಮತವನ್ನು ಆಂಧ್ರ ದೇಶದಲ್ಲಿ ಪ್ರಸಾರಗೊಳಿಸಿದನು. ಅವನು ನಿಜವಾಗಿ ಪಂಡಿತನೂ ಅನುಭಾವಿಯೂ ಆಗಿದ್ದನು. ಅವನು ಇಲ್ಲಿಯ ವೀರಶೈವ ಸಮಾಜದಲ್ಲಿ ಅನೇಕ ಕ್ರಾಂತಿಕಾರಕ ಕಾರ್ಯಗಳನ್ನು ಮಾಡಿದನು. ಅವನು ತನ್ನ ಪ್ರಚಾರ ಕಾರ್ಯ

# BOOK-POST.

R. N. B. 2554

From,
Shivanubhava
Office
Bijapur.

ಶ್ರೀ. ರಾ॥ ರಾ॥

ಬಸೆಟ್ಟೆಪ್ಪ ಮಹಾದೇವಪ್ಪ ಹುಂಬಿ
ಪೋ  ಹಾವೇರಿ
ಜಿ.  ಧಾರವಾಡ

ಸಂ. 16 - 11 [illegible] 1942
ಸಂ. 31 - 11 - ನವಂಬರ 1958
ಸಂ. 31 - 12 - ಡಿಸೆಂಬರ 1958
ಸಂ. 33 - 11 - ನವಂಬರ 1959
ಸಂ. 33 - 12 - ಡಿಸೆಂಬರ 1959



15 AUG 49
1 30 P M
HAVERI DHARWAR

ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ಬಾ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರದ ವಾರ್ಡ [illegible] ಮನೆ ನಂ. ೧೩೬೮ ರಲ್ಲಿರುವ ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.



# ಶಿವಾನುಭವ

ಸಂಪುಟ ೨೩ | [ ಸಂಚಿಕೆ ೧೨



ಸಪ್ಟಂಬರ ೧೯೪೯

ವಿಜಾಪುರ.